# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೧

ಅವಂತೀಕ್ಷೇತ್ರಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೧

## ಅವಂತೀಕ್ಷೇತ್ರಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿ

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ೨೬

೧೯೪೮

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯ ಖಂಡದ ಮೊದಲನೆಯ 'ಅವಂತೀಕ್ಷೇತ್ರಮಾಹಾತ್ಮ್ಯ'ವು ಮುಗಿದಿರುತ್ತದೆ. ಈ ಆವಂತ್ಯಖಂಡದಲ್ಲಿ ಅವಂತೀದೇಶದಲ್ಲಿರುವ ಸುಪ್ರಸಿದ್ಧಗಳಾದ ಶಿವ ವಿಷ್ಣ್ವಾದಿ ದೇವತಾಕ್ಷೇತ್ರಗಳನ್ನೂ, ಪುಣ್ಯತೀರ್ಥಗಳನ್ನೂ ವರ್ಣಿಸಿರುತ್ತಾರೆ.

ಅವಂತೀಕ್ಷೇತ್ರಕ್ಕೆ 'ಮಹಾಕಾಲವನ'ವೆಂಬ ಮತ್ತೊಂದು ಹೆಸರೂ ಉಂಟು. ಮಹಾಕಾಲವನದಲ್ಲಿಯೇ 'ಮಹಾಕಾಲೇಶ್ವರಲಿಂಗ'ವು ವಿರಾಜಿಸುತ್ತಿರುವುದು. ಕಾಲಿದಾಸಾದಿ ಮಹಾಕವಿಗಳೆಲ್ಲರೂ ಈ ಕ್ಷೇತ್ರವನ್ನು ತಮ್ಮ ಕಾವ್ಯಗಳಲ್ಲಿ ಬಹುವಾಗಿ ವರ್ಣಿಸಿರುತ್ತಾರೆ. ಮಹಾಕಾಲೇಶ್ವರ ದೇವಾಲಯವನ್ನೊಳಕೊಂಡು ಶೋಭಿಸುತ್ತಿರುವ ಅವಂತಿಯು ಉಜ್ಜಯಿನೀನಗರವು ಚಾರಿತ್ರಕವಾಗಿಯೂ ಪ್ರಸಿದ್ಧವಾದುದೇ ಆಗಿರುವುದು. ಪೂರ್ವದಲ್ಲಿ ಇಲ್ಲಿ ಅನೇಕ ವಿಶ್ವವಿದ್ಯಾನಿಲಯಗಳಿದ್ದುವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಭಾರತ ಸಂಸ್ಕೃತಿಯ ಸಂರಕ್ಷಣೆಯಸಲುವಾಗಿ ಮಹಾಮಹಾ ಮೇಧಾವಿಗಳು ಹಗಲಿರುಳೂ ಶ್ರಮವಹಿಸಿ ದುಡಿದ ದುಡಿಮೆಯ ಸತ್ಫಲಸಂಕೇತಗಳು ಇಂದಿಗೂ ಈ ದೇಶದಲ್ಲಿ ಚಿರಸ್ಥಾಯಿಯಾಗಿ ಕಂಗೊಳಿಸುತ್ತಿವೆ. ಇಂಥ ಸುಂದರ ಪ್ರಾಂತ್ಯವಾದ ಅವಂತಿಯನ್ನು ಕುರಿತ ಈ ಖಂಡವು ತನ್ನೊಂದು ಐತಿಹಾಸಿಕ, ಸಾಮಾಜಿಕ ಮತ್ತು ನೈತಿಕ ಕಥಾನುಕಥನಗುಣದಿಂದಲೂ, ದೇವ ದೇವಿಯರ ಭಕ್ತಿಪಾರಮ್ಯಸಂಕಥನ ವೈಭವದಿಂದಲೂ, ಹರಿಹರಕ್ಷೇತ್ರಗಳ ಮಾಹಾತ್ಮ್ಯ ನಿರೂಪಣ ವೈಖರಿಯಿಂದಲೂ ಓದುಗರಿಗೆ ಹೃದಯಹಾರಿಯಾಗಿ ಪರಿಣಮಿಸದಿರದು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಿಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ


| | ಪುಟ ಸಂಖ್ಯೆ |
|---|---|
| ಒಂದನೆಯ ಅಧ್ಯಾಯ — | |
| ಮಹಾಕಾಲವನ ಪ್ರಶಂಸಾವರ್ಣನ .. .. .. | ೧– ೮ |
| ಎರಡನೆಯ ಅಧ್ಯಾಯ — | |
| ಬ್ರಹ್ಮಶಿರಶ್ಛೇದನವರ್ಣನ .. .. .. | ೯– ೨೨ |
| ಮೂರನೆಯ ಅಧ್ಯಾಯ — | |
| ಬ್ರಹ್ಮಕೃತ ಪ್ರಾಯಶ್ಚಿತ್ತವರ್ಣನ .. .. .. | ೨೩– ೩೨ |
| ನಾಲ್ಕನೆಯ ಅಧ್ಯಾಯ — | |
| ವೈಶ್ವಾನರೋತ್ಪತ್ತಿವರ್ಣನ .. .. .. | ೩೩– ೪೯ |
| ಐದನೆಯ ಅಧ್ಯಾಯ — | |
| ದೇವಾಗಮನವರ್ಣನ .. .. .. | ೫೦– ೬೨ |
| ಆರನೆಯ ಅಧ್ಯಾಯ — | |
| ಕಪಾಲಮೋಕ್ಷವರ್ಣನ .. .. .. | ೬೩– ೮೪ |
| ಏಳನೆಯ ಅಧ್ಯಾಯ — | |
| ಮಹಾಕಾಲವನವಾಸವಿಧಿವರ್ಣನ .. .. .. | ೮೫– ೯೮ |
| ಎಂಟನೆಯ ಅಧ್ಯಾಯ — | |
| ಅಪ್ಸರಃಕುಂಡಮಾಹಾತ್ಮ್ಯವರ್ಣನ.. .. .. | ೯೯–೧೦೨ |
| ಒಂಬತ್ತನೆಯ ಅಧ್ಯಾಯ — | |
| ಮಹಿಷಕುಂಡ–ರುದ್ರಸರೋಮಾಹಾತ್ಮ್ಯವರ್ಣನ .. .. | ೧೦೩–೧೦೭ |
| ಹತ್ತನೆಯ ಅಧ್ಯಾಯ — | |
| ಕುಟುಂಬಿಕೇಶ್ವರಮಾಹಾತ್ಮ್ಯವರ್ಣನ .. .. | ೧೦೮–೧೧೯ |
| ಹನ್ನೊಂದನೆಯ ಅಧ್ಯಾಯ — | |
| ವಿದ್ಯಾಧರತೀರ್ಥಮಾಹಾತ್ಮ್ಯವರ್ಣನ .. .. | ೧೨೦–೧೨೨ |
| ಹನ್ನೆರಡನೆಯ ಅಧ್ಯಾಯ — | |
| ಶೀತಲಾಮಾಹಾತ್ಮ್ಯವರ್ಣನ .. .. .. | ೧೨೩–೧೨೪ |
| ಹದಿಮೂರನೆಯ ಅಧ್ಯಾಯ — | |
| ಸ್ವರ್ಗದ್ವಾರಮಾಹಾತ್ಮ್ಯವರ್ಣನ .. .. .. | ೧೨೫–೧೨೬ |
| ಹದಿನಾಲ್ಕನೆಯ ಅಧ್ಯಾಯ — | |
| ಚತುಸ್ಸಮುದ್ರಮಾಹಾತ್ಮ್ಯವರ್ಣನ .. .. | ೧೨೭–೧೩೨ |

ಪುಟ ಸಂಖ್ಯೆ

ಹದಿನೈದನೆಯ ಅಧ್ಯಾಯ —
ಶಂಕರಾದಿತ್ಯಮಾಹಾತ್ಮ್ಯವರ್ಣನ .. .. .. ೧೩೩–೧೩೬
ಹದಿನಾರನೆಯ ಅಧ್ಯಾಯ —
ನೀಲಗಂಧವತೀಪ್ರಭಾವವರ್ಣನ .. .. .. ೧೩೭–೧೪೦
ಹದಿನೇಳನೆಯ ಅಧ್ಯಾಯ —
ದಶಾಶ್ವಮೇಧಮಾಹಾತ್ಮ್ಯವರ್ಣನ .. .. .. ೧೪೧–೧೪೨
ಹದಿನೆಂಟನೆಯ ಅಧ್ಯಾಯ —
ಏಕಾನಂಶಾಮಾಹಾತ್ಮ್ಯವರ್ಣನ .. .. .. ೧೪೩–೧೪೮
ಹತ್ತೊಂಬತ್ತನೆಯ ಅಧ್ಯಾಯ —
ಹರಸಿದ್ಧಿಮಾಹಾತ್ಮ್ಯವರ್ಣನ .. .. .. ೧೪೯–೧೫೨
ಇಪ್ಪತ್ತನೆಯ ಅಧ್ಯಾಯ —
ಚತುರ್ದಶತೀರ್ಥಯಾತ್ರಾವರ್ಣನ .. .. .. ೧೫೩–೧೫೬
ಇಪ್ಪತ್ತೊಂದನೆಯ ಅಧ್ಯಾಯ —
ಹನುಮತ್ಕೇಶ್ವರಮಾಹಾತ್ಮ್ಯವರ್ಣನ .. .. ೧೫೭–೧೬೧
ಇಪ್ಪತ್ತೆರಡನೆಯ ಅಧ್ಯಾಯ —
ರುದ್ರಸರೋಮಾಹಾತ್ಮ್ಯವರ್ಣನ .. .. .. ೧೬೨–೧೬೪
ಇಪ್ಪತ್ತಮೂರನೆಯ ಅಧ್ಯಾಯ —
ಮಹಾಕಾಲೇಶ್ವರಯಾತ್ರಾಮಾಹಾತ್ಮ್ಯವರ್ಣನ .. .. ೧೬೫–೧೭೧
ಇಪ್ಪತ್ತನಾಲ್ಕನೆಯ ಅಧ್ಯಾಯ —
ವಾಲ್ಮೀಕೇಶ್ವರಮಾಹಾತ್ಮ್ಯವರ್ಣನ . .. .. ೧೭೨–೧೭೮
ಇಪ್ಪತ್ತೈದನೆಯ ಅಧ್ಯಾಯ —
ಶುಕ್ರೇಶ್ವರಾದಿಲಿಂಗಷಟ್ಕಮಾಹಾತ್ಮ್ಯವರ್ಣನ .. .. ೧೭೯–೧೮೦
ಇಪ್ಪತ್ತಾರನೆಯ ಅಧ್ಯಾಯ —
ಮಂದಾಕಿನೀಕ್ಷೇತ್ರಮಾಹಾತ್ಮ್ಯವರ್ಣನ .. .. ೧೮೧–೨೦೦
ಇಪ್ಪತ್ತೇಳನೆಯ ಅಧ್ಯಾಯ —
ಅಂಕಪಾದಮಾಹಾತ್ಮ್ಯವರ್ಣನ .. .. .. ೨೦೧–೨೨೧
ಇಪ್ಪತ್ತೆಂಟನೆಯ ಅಧ್ಯಾಯ —
ಸೋಮವತೀತೀರ್ಥಮಾಹಾತ್ಮ್ಯವರ್ಣನ .. .. ೨೨೨–೨೩೮
ಇಪ್ಪತ್ತೊಂಬತ್ತನೆಯ ಅಧ್ಯಾಯ —
ನರಕಕಥನ .. .. .. ೨೩೯–೨೪೫

ಪುಟ ಸಂಖ್ಯೆ

ಮೂವತ್ತನೆಯ ಅಧ್ಯಾಯ —

ಅನರಕೇಶ್ವರದೀಪದಾನಮಾಹಾತ್ಮ್ಯವರ್ಣನ .. .. ೨೪೬–೨೬೪

ಮೂವತ್ತೊಂದನೆಯ ಅಧ್ಯಾಯ —

ಸೌಭಾಗ್ಯೇಶ್ವರಾದಿ ನಾನಾತೀರ್ಥಮಾಹಾತ್ಮ್ಯವರ್ಣನ .. ೨೬೫–೨೮೦

ಮೂವತ್ತೆರಡನೆಯ ಅಧ್ಯಾಯ —

ನರಾದಿತ್ಯಮಾಹಾತ್ಮ್ಯ–ಅರ್ಜುನಸ್ತುತಿವರ್ಣನ .. .. ೨೮೧–೩೦೦

ಮೂವತ್ತಮೂರನೆಯ ಅಧ್ಯಾಯ —

ಕೇಶವಾದಿತ್ಯಮಾಹಾತ್ಮ್ಯವರ್ಣನ .. .. .. ೩೦೧–೩೦೩

ಮೂವತ್ತನಾಲ್ಕನೆಯ ಅಧ್ಯಾಯ —

ಶಕ್ತಿಭೇದತೀರ್ಥಮಾಹಾತ್ಮ್ಯವರ್ಣನ .. .. ೩೦೪–೩೨೦

ಮೂವತ್ತೈದನೆಯ ಅಧ್ಯಾಯ —

ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನ .. .. .. ೩೨೧–೩೨೩

ಮೂವತ್ತಾರನೆಯ ಅಧ್ಯಾಯ —

ನರದೀಪಮಾಹಾತ್ಮ್ಯವರ್ಣನ .. . .. ೩೨೪–೩೩೭

ಮೂವತ್ತೇಳನೆಯ ಅಧ್ಯಾಯ —

ಅಂಗಾರಕಚತುರ್ಥೀವ್ರತಮಾಹಾತ್ಮ್ಯವರ್ಣನ .. .. ೩೩೮–೩೪೭

ಮೂವತ್ತೆಂಟನೆಯ ಅಧ್ಯಾಯ —

ಅಂಧಕವೃತ್ತಾಂತವರ್ಣನ .. .. .. ೩೪೮–೩೫೬

ಮೂವತ್ತೊಂಬತ್ತನೆಯ ಅಧ್ಯಾಯ —

ಮಹಾಕಾಲವನಮಾಹಾತ್ಮ್ಯವರ್ಣನ .. .. ೩೫೭–೩೫೮

ನಲವತ್ತನೆಯ ಅಧ್ಯಾಯ —

ಕನಕಶೃಂಗವೃತ್ತಾಂತವರ್ಣನ .. .. .. ೩೫೯–೩೬೪

ನಲವತ್ತೊಂದನೆಯ ಅಧ್ಯಾಯ —

ಕುಶಸ್ಥಲೀನಾಮವೃತ್ತಾಂತವರ್ಣನ .. .. ೩೬೫–೩೭೧

ನಲವತ್ತೆರಡನೆಯ ಅಧ್ಯಾಯ —

ಅವಂತೀನಾಮಕಥಾನುವರ್ಣನ .. .. .. ೩೭೨–೩೭೯

ನಲವತ್ತಮೂರನೆಯ ಅಧ್ಯಾಯ —

ಉಜ್ಜಯಿನ್ಯಭಿಧಾನಕಥನ .. .. .. ೩೮೦–೩೯೦

ನಲವತ್ತನಾಲ್ಕನೆಯ ಅಧ್ಯಾಯ —

ಪದ್ಮಾವತೀನಾಮಕಥನವರ್ಣನ .. .. .. ೩೯೧–೩೯೭

ಪುಟ ಸಂಖ್ಯೆ

ನಲವತ್ತೈದನೆಯ ಅಧ್ಯಾಯ —

ಕುಮುದ್ವತೀಪ್ರಭಾವಕಥನ .. .. .. ೩೯೮–೪೦೩

ನಲವತ್ತಾರನೆಯ ಅಧ್ಯಾಯ —

ಅಮರಾವತೀನಾಮಕಥನ .. .. .. ೪೦೪–೪೦೮

ನಲವತ್ತೇಳನೆಯ ಅಧ್ಯಾಯ —

ವಿಶಾಲಾಭಿಧಾನಕಥನ .. .. .. ೪೦೯–೪೧೬

ನಲವತ್ತೆಂಟನೆಯ ಅಧ್ಯಾಯ —

ಪ್ರತಿಕಲ್ಪಾಭಿಧಾನಕಥನ .. .. .. ೪೧೭–೪೨೬

ನಲವತ್ತೊಂಬತ್ತನೆಯ ಅಧ್ಯಾಯ —

ಶಿಪ್ರಾಮಾಹಾತ್ಮ್ಯ–ಜ್ವರಾನುಗ್ರಹವರ್ಣನ .. .. ೪೨೭–೪೩೪

ಐವತ್ತನೆಯ ಅಧ್ಯಾಯ —

ಪಾಪನಾಶಿನೀನಾಮವರ್ಣನ .. .. .. ೪೩೫–೪೪೩

ಐವತ್ತೊಂದನೆಯ ಅಧ್ಯಾಯ —

ಅಮೃತೋದ್ಭವಾನಾಮಕಥಾವರ್ಣನ .. .. ೪೪೪–೪೫೩

ಐವತ್ತೆರಡನೆಯ ಅಧ್ಯಾಯ —

ಶಿಪ್ರಾಮಾಹಾತ್ಮ್ಯವರ್ಣನ .. .. .. ೪೫೪–೪೬೬

ಐವತ್ತಮೂರನೆಯ ಅಧ್ಯಾಯ —

ಸುಂದರಕುಂಡ–ಪಿಶಾಚಮೋಚನತೀರ್ಥಮಾಹಾತ್ಮ್ಯವರ್ಣನ .. ೪೬೭–೪೭೬

ಐವತ್ತನಾಲ್ಕನೆಯ ಅಧ್ಯಾಯ —

ನೀಲಗಂಗಾಮಾಹಾತ್ಮ್ಯವರ್ಣನ .. .. .. ೪೭೭–೪೮೨

ಐವತ್ತೈದನೆಯ ಅಧ್ಯಾಯ —

ವಿಂಧ್ಯವಾಸಿನೀ–ವಿಮಲೋದತೀರ್ಥಮಾಹಾತ್ಮ್ಯವರ್ಣನ .. ೪೮೩–೪೮೮

ಐವತ್ತಾರನೆಯ ಅಧ್ಯಾಯ —

ಕ್ಷಾತಾಸಂಗಮಮಾಹಾತ್ಮ್ಯವರ್ಣನ .. .. ೪೮೯–೫೦೦

ಐವತ್ತೇಳನೆಯ ಅಧ್ಯಾಯ —

ಗಯಾತೀರ್ಥಪ್ರಶಂಸಾವರ್ಣನ .. .. .. ೫೦೧–೫೦೭

ಐವತ್ತೆಂಟನೆಯ ಅಧ್ಯಾಯ —

ಶ್ರಾದ್ಧವಿಧಿವರ್ಣನ .. .. .. ೫೦೮–೫೧೭

ಐವತ್ತೊಂಬತ್ತನೆಯ ಅಧ್ಯಾಯ —

ಗಯಾತೀರ್ಥಮಾಹಾತ್ಮ್ಯವರ್ಣನ .. .. .. ೫೧೮–೫೨೪

ಪುಟ ಸಂಖ್ಯೆ

ಅರುವತ್ತನೆಯ ಅಧ್ಯಾಯ—
ಪುರುಷೋತ್ತಮ ಮಾಹಾತ್ಮ್ಯ–ದಾನಾದಿಮಾಹಾತ್ಮ್ಯವರ್ಣನ .. ೫೨೫–೫೩೫

ಅರುವತ್ತೊಂದನೆಯ ಅಧ್ಯಾಯ—
ಅಧಿಮಾಸಸ್ನಾನದಾನಾದಿಮಾಹಾತ್ಮ್ಯವರ್ಣನ .. .. ೫೩೬–೫೩೮

ಅರುವತ್ತೆರಡನೆಯ ಅಧ್ಯಾಯ—
ಗೋಮತೀತೀರ್ಥಕುಂಡಮಾಹಾತ್ಮ್ಯವರ್ಣನ .. .. ೫೩೯–೫೪೫

ಅರುವತ್ತಮೂರನೆಯ ಅಧ್ಯಾಯ—
ವಿಷ್ಣುಸಹಸ್ರನಾಮಕಥನ .. .. .. ೫೪೬–೫೯೫

ಅರುವತ್ತನಾಲ್ಕನೆಯ ಅಧ್ಯಾಯ—
ಕಾಲಭೈರವತೀರ್ಥಯಾತ್ರಾನುವರ್ಣನ .. .. ೫೯೬–೬೦೧

ಅರುವತ್ತೈದನೆಯ ಅಧ್ಯಾಯ—
ನಾಗತೀರ್ಥಮಹಿಮಾನುವರ್ಣನ .. .. .. ೬೦೨–೬೦೭

ಅರುವತ್ತಾರನೆಯ ಅಧ್ಯಾಯ—
ನೃಸಿಂಹತೀರ್ಥಮಹಿಮಾನುವರ್ಣನ .. .. ೬೦೮–೬೧೪

ಅರುವತ್ತೇಳನೆಯ ಅಧ್ಯಾಯ—
ಕುಟುಂಬೇಶ್ವರಮಾಹಾತ್ಮ್ಯವರ್ಣನ .. .. ೬೧೫–೬೧೯

ಅರುವತ್ತೆಂಟನೆಯ ಅಧ್ಯಾಯ—
ಅಖಂಡೇಶ್ವರಮಹಿಮಾನುವರ್ಣನ .. .. .. ೬೨೦–೬೨೬

ಅರುವತ್ತೊಂಬತ್ತನೆಯ ಅಧ್ಯಾಯ—
ಕರ್ಕರಾಜತೀರ್ಥಮಹಿಮಾನುವರ್ಣನ .. .. ೬೨೭–೬೩೬

ಎಪ್ಪತ್ತನೆಯ ಅಧ್ಯಾಯ—
ದೇವಯಾತ್ರಾದಿಕಥಾನುಕಥನ .. .. .. ೬೩೭–೬೫೦

ಎಪ್ಪತ್ತೊಂದನೆಯ ಅಧ್ಯಾಯ—
ಕ್ಷೇತ್ರಮಾಹಾತ್ಮ್ಯವರ್ಣನ .. .. .. ೬೫೧–೬೫೪

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥಾಽವಂತ್ಯಖಂಡಂ ಪ್ರಾರಭ್ಯತೇ

## ಅವಂತೀಕ್ಷೇತ್ರಮಾಹಾತ್ಮ್ಯಂ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಮಹಾಕಾಲವನ ಪ್ರಶಂಸಾವರ್ಣನಂ

**ವ್ಯಾಸ ಉವಾಚ :—**

**ಸ್ರಷ್ಟಾರೋಽಪಿ ಪ್ರಜಾನಾಂ ಪ್ರಬಲಭವಭಯಾದ್ಯಂ ನಮಸ್ಯಂತಿ ದೇವಾ**
**ಯೋಽಹ್ಯವ್ಯಕ್ತೇ ಪ್ರವಿಷ್ಟಃ ಪ್ರವಿಹಿತಮನಸಾಂ ಧ್ಯಾನಯುಕ್ತಾತ್ಮನಾಂ ಚ ।**
**ಲೋಕಾನಾಮಾದಿದೇವಃ ಸ ಜಯತು ಭಗವಾಂಛ್ರೀ ಮಹಾಕಾಲನಾಮಾ**
**ಬಿಭ್ರಾಣಃ ಸೋಮಲೇಖಾಮಹಿವಲಯಯುತಂ ವ್ಯಕ್ತಲಿಂಗಂ ಕಪಾಲಂ ॥**

---

## ಕನ್ನಡದ ಅನುವಾದ

### ಮಹಾಕಾಲವನ ಪ್ರಶಂಸಾವರ್ಣನ

೧. ವ್ಯಾಸನು ಹೇಳುತ್ತಾನೆ:—ಹದಿನಾಲ್ಕು ಲೋಕಗಳ ಜೀವರನ್ನು ಸೃಷ್ಟಿ ಮಾಡುವ ದೇವತೆಗಳೂ ಅಗಾಧವಾದ ಸಂಸಾರಭಯದಿಂದ ಯಾವನನ್ನು ನಮಸ್ಕರಿಸುವರೊ, ಯಾವನು ಬ್ರಹ್ಮಾಂಡದ ಮೂಲಕಾರಣವಾದ ಅವ್ಯಕ್ತ ದಲ್ಲಿಯೂ ನೆಲೆಗೊಂಡು, ಮನೋನಿಗ್ರಹದಿಂದ ಧ್ಯಾನಾಸಕ್ತವಾದ ಚಿತ್ತವೃತ್ತಿ ಯುಳ್ಳವರಿಗೆ ಲಭ್ಯನಾಗಿ, ಲೋಕಗಳಿಗೆಲ್ಲ ಆದಿದೇವನಾಗಿ, ಚಂದ್ರಖಂಡವನ್ನೂ ಸರ್ಪವಲಯಗಳನ್ನೂ ಭಿಕ್ಷಾಚಿಹ್ನೆಯಾದ ಕಪಾಲವನ್ನೂ ತಳೆದಿರುವನೊ ಆ ಷಡ್ಗು ಣೈಶ್ವರ್ಯಭರಿತನಾದ ಮಹಾಕಾಲನಾಮಕನಾದ ಪರಶಿವನಿಗೆ ಜಯವಾಗಲಿ.

ಉವೋವಾಚ :—

ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾಶ್ಚ ಸರಿತಸ್ತಥಾ ।
ಕಥ್ಯಂತಾಂ ತಾನಿ ಯತ್ನೇನ ಶ್ರದ್ಧಾ ಯೇಷು ಪ್ರಜಾಯತೇ ॥ ೨ ॥

ಈಶ್ವರ ಉವಾಚ :—

ಅಸ್ತಿ ಲೋಕೇಷು ವಿಖ್ಯಾತಾ ಗಂಗಾ ತ್ರಿಪಥಗಾ ನದೀ ।
ಸೇವಿತಾ ದೇವಗಂಧರ್ವೈರ್ಮುನಿಭಿಶ್ಚ ನಿಷೇವಿತಾ ॥ ೩ ॥
ತಪನಸ್ಯ ಸುತಾ ದೇವಿ ಯಮುನಾ ಲೋಕಪಾವನೀ ।
ಪಿತೄಣಾಂ ವಲ್ಲಭಾ ದೇವಿ ಮಹಾಪಾತಕನಾಶಿನೀ ॥ ೪ ॥
ಚಂದ್ರಭಾಗಾ ವಿತಸ್ತಾ ಚ ನರ್ಮದಾಽಮರಕಂಟಕೇ ।
ಗುರುಕ್ಷೇತ್ರಂ ಗಯಾ ದೇವಿ ಪ್ರಭಾಸಂ ನೈಮಿಷಂ ತಥಾ ॥ ೫ ॥
ಕೇದಾರಂ ಪುಷ್ಕರಂ ಚೈವ ತಥಾ ಕಾಯಾಽವರೋಹಣಂ ।
ತಥಾ ಪುಣ್ಯತಮಂ ದೇವಿ ಮಹಾಕಾಲವನಂ ಶುಭಂ ॥ ೬ ॥
ಯತ್ರಾಸ್ತೇ ಶ್ರೀ ಮಹಾಕಾಲಃ ಪಾಪೇಂಧನಹುತಾಽಶನಃ ।
ಕ್ಷೇತ್ರಂ ಯೋಜನಪರ್ಯಂತಂ ಬ್ರಹ್ಮಹತ್ಯಾದಿ ನಾಶನಂ ॥ ೭ ॥

---

೨. ಪಾರ್ವತಿಯು ಪ್ರಶ್ನೆಮಾಡುತ್ತಾಳೆ:— ನಾಥ! ಭೂಮಂಡಲದಲ್ಲಿ ಎಷ್ಟು ತೀರ್ಥಗಳಿರುವುವು? ಎಷ್ಟು ಪುಣ್ಯನದಿಗಳಿರುವುವು? ಯಾವವುಗಳಲ್ಲಿ ಜನರಿಗೆ ಶ್ರದ್ಧೆಯುಂಟಾಗುವುದು? ಅವುಗಳನ್ನು ಆಮೂಲಾಗ್ರವಾಗಿ ನನಗೆ ತಿಳಿಸು.

೩. ಈಶ್ವರನು ಹೇಳುತ್ತಾನೆ:— ಮೂರು ಲೋಕಗಳಲ್ಲಿ ಪ್ರಖ್ಯಾತವಾದುದೂ, ತ್ರಿಪಥಗಾಮಿನಿಯೂ, ದೇವತೆಗಳಿಂದಲೂ ಗಂಧರ್ವರಿಂದಲೂ ಸೇವಿತವಾದುದೂ, ಮಹಾಮುನಿಗಳಿಂದ ಸಂಸೇವ್ಯವಾದುದೂ ಆದ ಗಂಗಾ ನದಿಯು ಕಂಗೊಳಿಸುತ್ತಿರುವುದು.

೪. ಸೂರ್ಯಪುತ್ರಿಯೂ, ಲೋಕಪಾವನೆಯೂ, ಪಿತೃದೇವತೆಗಳಿಗೆ ಬಹು ಪ್ರೀತಿಪಾತ್ರಳೂ, ಸಕಲ ಮಹಾಪಾತಕಗಳನ್ನು ನಾಶಗೊಳಿಸುವವಳೂ ಆದ ಯಮುನೆಯೂ ನದಿಯಾಗಿ ಪ್ರವಹಿಸುತ್ತಿರುವಳು.

೫-೬. ಅಲ್ಲದೆ ಚಂದ್ರಭಾಗಾ, ವಿತಸ್ತಾ, ಅಮರಕಂಟಕಕ್ಷೇತ್ರದಲ್ಲಿ ಪ್ರವಹಿಸುತ್ತಿರುವ ನರ್ಮದೆ ಮುಂತಾದ ನದಿಗಳಿರುವುವು. ಕುರುಕ್ಷೇತ್ರ, ಗಯಾ, ಪ್ರಭಾಸ, ನೈಮಿಷಾರಣ್ಯ, ಕೇದಾರ, ಪುಷ್ಕರ, ಕಾಯಾವರೋಹಣಗಳೆಂಬ ಕ್ಷೇತ್ರಗಳಿರುವುವು. ಅಲ್ಲದೆ ಪರಮಪುಣ್ಯತಮವೂ, ಪವಿತ್ರವೂ ಆದ ಮಹಾಕಾಲವನವೂ ಇರುವುದು.

೭. ಪಾತಕಗಳೆಂಬ ಸಮಿತ್ತುಗಳಿಗೆ ದಾವಾಗ್ನಿಯೆನಿಸಿದ ಆ ಕ್ಷೇತ್ರದಲ್ಲಿ ಶ್ರೀಮಹಾಕಾಲನಿರುವನು. ಒಂದು ಯೋಜನವಿಸ್ತಾರವಾದ ಆ ಕ್ಷೇತ್ರವು ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕಗಳನ್ನೂ ನಿರ್ಮೂಲಗೊಳಿಸುವುದು.

ಭುಕ್ತಿದಂ ಮುಕ್ತಿದಂ ಕ್ಷೇತ್ರಂ ಕಲಿಕಲ್ಮಷನಾಶನಂ ।
ಪ್ರಲಯೇಽಪ್ಯಕ್ಷಯಂ ದೇವಿ ದುಷ್ಪ್ರಾಪಂ ತ್ರಿದಶೈರಪಿ ॥ ೮ ॥

ಉಮೋವಾಚ :—

ಪ್ರಭಾವಃ ಕಥ್ಯತಾಂ ದೇವ ಕ್ಷೇತ್ರಸ್ಯಾಽಸ್ಯ ಮಹೇಶ್ವರ ।
ಯಾನಿ ತೀರ್ಥಾನಿ ವಿದ್ಯಂತೇ ಯಾನಿ ಲಿಂಗಾನಿ ಸಂತಿ ವೈ ॥ ೯ ॥
ತಾನ್ಯಹಂ ಶ್ರೋತುಮಿಚ್ಛಾಮಿ ಪರಂ ಕೌತೂಹಲಂ ಹಿ ಮೇ ॥ ೧೦ ॥

ಮಹಾದೇವ ಉವಾಚ :—

ಶೃಣು ದೇವಿ ಪ್ರಯತ್ನೇನ ಪ್ರಭಾವಂ ಪಾಪನಾಶನಂ ।
ಕ್ಷೇತ್ರಮಾದ್ಯಂ ಮಹಾದೇವಿ ಸರ್ವಪಾಪಪ್ರಣಾಶನಂ ॥ ೧೧ ॥
ಶ್ರೀಮೇರೋಃ ಸನ್ನಿಧಾನೇ ಚ ಶಿಖರಂ ರತ್ನಚಿಹ್ನಿತಂ ।
ಅನೇಕಾಶ್ಚರ್ಯನಿಲಯಂ ಬಹುಪಾದಪಸಂಕುಲಂ ॥ ೧೨ ॥
ವಿಚಿತ್ರಧಾತುಭಿಶ್ಚಿತ್ರಂ ಸ್ವಚ್ಛಸ್ಫಟಿಕವೇದಿಕಂ ।
ವಿಚಿತ್ರವರ್ಣಶೋಭಾಢ್ಯಮೃಷಿಸಂಘನಿನಾದಿತಂ ॥ ೧೩ ॥

---

೮. ಎಲೌ ದೇವಿಯೆ! ಈ ಕ್ಷೇತ್ರವು ಭುಕ್ತಿಯನ್ನೂ ಮುಕ್ತಿಯನ್ನೂ ದೊರಕಿಸಿಕೊಡುವುದು; ಕಲಿದೋಷಗಳನ್ನು ನಾಶಮಾಡುವುದು; ಪ್ರಳಯಕಾಲದಲ್ಲಿಯೂ ನಾಶವನ್ನು ಹೊಂದುವುದಿಲ್ಲ; ದೇವತೆಗಳಿಗೂ ಅತ್ಯಂತ ದುಷ್ಪ್ರಾಪ್ಯವಾಗಿರುವುದು.

೯. ಪಾರ್ವತಿಯು ಹೇಳುತ್ತಾಳೆ:—ದೇವದೇವನಾದ ಮಹೇಶ್ವರನೆ! ಈ ಕ್ಷೇತ್ರದ ಮಾಹಾತ್ಮ್ಯವನ್ನು ನನಗೆ ತಿಳಿಸುವವನಾಗು. ಅಲ್ಲಿ ಯಾವ ಯಾವ ತೀರ್ಥಗಳಿರುವುವು? ಯಾವ ಲಿಂಗಗಳು ನೆಲಸಿರುವುವು?

೧೦. ಅವುಗಳನ್ನೆಲ್ಲ ಕೇಳಲಿಚ್ಛಿಸುತ್ತಿರುವೆನು. ಈ ವಿಷಯದಲ್ಲಿ ನನಗೆ ಅತ್ಯಂತ ಕುತೂಹಲವುಂಟಾಗಿರುವುದು.

೧೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಶ್ರದ್ಧೆಯಿಂದ ಕೇಳು. ಈ ಕ್ಷೇತ್ರಪ್ರಭಾವವು ಸಕಲ ಕಲ್ಮಷನಾಶಕವಾದುದು. ಅಲ್ಲದೆ ಸಕಲ ಕ್ಷೇತ್ರಗಳಿಗೆ ಆದಿಯೂ ಸಮಸ್ತ ಪಾಪಾಪನೋದಕವೂ ಆಗಿರುವುದು.

೧೨. ಶ್ರೀಮೇರುಪರ್ವತದ ಸಮೀಪದಲ್ಲಿ ನವರತ್ನಗಳಿಂದೊಡಗೂಡಿದ ಶಿಖರಪ್ರದೇಶವಿರುವುದು. ಅದು ಅನೇಕ ಆಶ್ಚರ್ಯಗಳಿಗೆ ನೆಲೆವೀಡಾಗಿಯೂ ಅನೇಕ ವೃಕ್ಷಗಳಿಂದ ನಿಬಿಡವಾಗಿಯೂ ಇರುವುದು.

೧೩. ಗೈರಿಕಾದಿ ವಿಚಿತ್ರಧಾತುಗಳಿಂದ ಮನೋಹರವಾಗಿಯೂ, ಶುಭ್ರವಾದ ಸ್ಫಟಿಕದ ವೇದಿಕೆಗಳುಳ್ಳದುದೂ, ವಿಚಿತ್ರವರ್ಣಗಳುಳ್ಳ ಪುಷ್ಪಾದಿಗಳಿಂದ ಕೂಡಿದುದೂ, ಮಹರ್ಷಿಗಣಗಳ ವೇದಘೋಷಗಳಿಂದ ಪ್ರತಿಧ್ವನಿಸುತ್ತಿರುವುದೂ ಆಗಿರುವುದು.

ಮೃಗನಾಗೇಂದ್ರಸಂಯುಕ್ತಂ ಗಜಯೂಥಸಮಾಕುಲಂ ।
ನಿರ್ಝರಾಂಬುಪ್ರಪಾತೋತ್ಥಶ್ರೀಕರಾಕರಸಂಕುಲಂ ॥ ೧೪ ॥
ವಾತಾಹತತರುವ್ರಾತ ಪ್ರಸೂನಾಸ್ಥಾನಚಿತ್ರಿತಂ ।
ಮೃಗನಾಭಿವರಾಮೋದ ವಾಸಿತಾಽಶೇಷಕಾನನಂ ॥ ೧೫ ॥
ಲತಾಗೃಹರತಿಸ್ಥಾನಂ ಸಿದ್ಧವಿದ್ಯಾಧರಾಶ್ರಯಂ ।
ಪ್ರವೀಣಕಿನ್ನರವ್ರಾತ ಮಧುರಧ್ವನಿನಾದಿತಂ ॥ ೧೬ ॥
ತಸ್ಮಿನ್ವನೇ ಮಹಾರಮ್ಯೇ ಶೋಭಿತಾಽಶೇಷಭೂಮಿಕಂ ।
ವೈರಾಜಂ ನಾಮ ಭವನಂ ಬ್ರಹ್ಮಣಃ ಪರಮೇಷ್ಠಿನಃ ॥ ೧೭ ॥
ತತ್ರ ದಿವ್ಯಾಂಗನಾಗೀತ ಮಧುರಧ್ವನಿನಾದಿತಾ ।
ಪಾರಿಜಾತತರುಚ್ಛನ್ನ ಮಂಜರೀದಾಮಶೋಭಿತಾ ॥ ೧೮ ॥
ಬಹುವಾದ್ಯಸಮುನ್ನದ್ಧ ಮಹಾಸ್ವನನಿನಾದಿತಾ ।
ಲಯತಾಲಯುತಾಽನೇಕ ಗೀತವಾದಿತ್ರನಾದಿತಾ ॥ ೧೯ ॥

---

೧೪. ಜಿಂಕೆಗಳು, ಮದದಾನೆಗಳು, ಮಹಾಸರ್ಪಗಳು ಮುಂತಾದ ಮೃಗಗಳಿಂದ ತುಂಬಿ ಬೆಟ್ಟದೊರೆಗಳ ಜಲಪಾತಗಳಿಂದೆದ್ದ ತುಂತುರುವನಿಗಳಿಂದ ಶೋಭಿಸುತ್ತಿರುವುದು.

೧೫. ಗಾಳಿಯ ಹೊಡೆತಕ್ಕೆ ಸಿಕ್ಕಿದ ಮರಗಳಿಂದುದುರಿದ ಪುಷ್ಪಗಳಿಂದ ಅಲ್ಲಿಯ ಭೂಮಿಯು ರಂಗವಲ್ಲಿಯಿಂದಲಂಕೃತವಾದಂತೆ ತೋರುತ್ತಿರುವುದು. ಕಸ್ತೂರಿ ಮೃಗಗಳ ಸುವಾಸನೆಯಿಂದ ಅರಣ್ಯವೆಲ್ಲವೂ ಸುಗಂಧಿತವಾಗಿರುವುದು.

೧೬. ಅಲ್ಲಿನ ಲತಾಗೃಹಗಳು ಸಿದ್ಧವಿದ್ಯಾಧರರಿಗೆ ಸುರತಕ್ರೀಡಾಸ್ಥಾನಗಳಾಗಿರುವುವು. ಆ ವನವು ಸಂಗೀತಶಾಸ್ತ್ರಪ್ರವೀಣರಾದ ಕಿನ್ನರ ಸಮೂಹಗಳ ಮಧುರಾಲಾಪಗಳಿಂದ ತುಂಬಿರುವುದು.

೧೭. ಇಂತು ಮಹಾಮನೋಹರವಾದ ವನದಲ್ಲಿ, ಎಲ್ಲೆಡೆಗಳಲ್ಲಿಯೂ ಶೋಭಿಸುತ್ತಿರುವುದೂ, ಲೋಕಪಿತಾಮಹನಾದ ಬ್ರಹ್ಮದೇವನ ಭವನವೂ ಆದ ವೈರಾಜವೆಂಬ ಪ್ರದೇಶವಿರುವುದು.

೧೮. ಅಲ್ಲಿ ದಿವ್ಯಸ್ತ್ರೀಯರ ಸಂಗೀತಧ್ವನಿಗಳಿಂದ ಪ್ರತಿಧ್ವನಿಗೊಡುವುದೂ, ಪಾರಿಜಾತವೃಕ್ಷಗಳ ಪುಷ್ಪಹಾರಗಳಿಂದಲಂಕೃತವೂ ಆದ ಸಭಾಮಂಟಪವಿರುವುದು.

೧೯. ಅಲ್ಲಿ ಏಕಕಾಲದ ವಾದನದಿಂದೆದ್ದ ಅನೇಕ ಮಂಗಳವಾದ್ಯಗಳ ಮಹಾಧ್ವನಿಯು ದಿಗಂತವನ್ನು ವ್ಯಾಪಿಸಿರುವುದು. ಲಯ, ತಾಳಗಳಿಂದ ಕೂಡಿದ ಅನೇಕ ಸಂಗೀತಗಳಿಂದಲೂ ವಾದ್ಯಘೋಷಗಳಿಂದಲೂ ಆ ಮಂಟಪವು ತುಂಬಿರುವುದು.

ವಿನ್ಯಸ್ತಾ ಕೋಟಿಭಿಃ ಸ್ತಂಭೈರ್ನಿರ್ಮಲಾದರ್ಶಶೋಭಿತಾ ।
ಲಯತಾಲಯುತಾಽನೇಕ ಮಹಾಕೌತುಕ ಸಂಯುತಾ ॥ ೨೦ ॥
ಅಪ್ಸರೋನೃತ್ಯವಿನ್ಯಾಸ ವಿಲಾಸೋಲ್ಲಾಸಶೋಭಿತಾ ।
ಸಭಾ ಕಾಂತಿಮತೀ ನಾಮ ದೇವಾನಾಂ ಹರ್ಷದಾಯಿಕಾ ॥ ೨೧ ॥
ಋಷಿಸಂಘಸಮಾಕೀರ್ಣಾ ಮುನಿವೃಂದನಿಷೇವಿತಾ ।
ದ್ವಿಜಾತಿವೇದಶಬ್ದೇನ ನಾದಿತಾಽಽನಂದದಾಯಿಕಾ ॥ ೨೨ ॥
ತಸ್ಯಾಂ ನಿವಿಷ್ಟಂ ವಾಗೀಶಂ ಶಂಕರಾರಾಧನೇ ರತಂ ।
ಸನತ್ಕುಮಾರಂ ಬ್ರಹ್ಮರ್ಷಿಂ ಬ್ರಹ್ಮಣೋ ಮಾನಸಂ ಸುತಂ ॥ ೨೩ ॥
ಮುನಿಮಧ್ಯಾತ್ಸಮುತ್ಥಾಯ ಕೃಷ್ಣದ್ವೈಪಾಯನೋ ಮುನಿಃ ।
ಪರಾಶರಸುತೋ ವ್ಯಾಸಃ ಪ್ರಣಮ್ಯ ಯಥಾವಿಧಿ ॥ ೨೪ ॥
ಕೃತಾಂಜಲಿಪುಟೋ ಭೂತ್ವಾ ಭವಭಕ್ತ್ಯಾನುಭಾವಿತಃ ।
ಪಪ್ರಚ್ಛ ಪರಯಾ ತುಷ್ಟ್ಯಾ ಹರ್ಷಿತಾಽಂಗರುಹಾನನಃ ॥ ೨೫ ॥

ವ್ಯಾಸ ಉವಾಚ :—

ಮಹಾಕಾಲಸ್ಯ ಮಾಹಾತ್ಮ್ಯಂ ಪ್ರಾಣಿನಾಂ ಮೋಹನಾಶನಂ ।
ಮಹಾಕಾಲವನಂ ಕಸ್ಮಾತ್ಪ್ರೋಚ್ಯತೇ ಸರ್ವತೋ ವರಂ ॥ ೨೬ ॥

---

೨೦. ಅನೇಕ ಕೋಟಿ ಸ್ತಂಭಗಳ ಮೇಲೆ ಚಾವಣಿಯು ವಿಸ್ತರಿಸಿರುವುದು. ಗೋಡೆಗಳಲ್ಲಿ ಸ್ವಚ್ಛಗಳಾದ ಕನ್ನಡಿಗಳು ಹೊಳೆಯುತ್ತಿರುವುವಲ್ಲದೆ, ಲಯತಾಳಗಳಿಂದ ಕೂಡಿದ ಅನೇಕ ಕೌತುಕಗಳೂ ತುಂಬಿರುವುವು.

೨೧. ಅಪ್ಸರಸ್ತ್ರೀಯರ ನೃತ್ಯಗಳು, ಅಂಗವಿನ್ಯಾಸಗಳು, ವಿಲಾಸಗಳು, ಆನಂದಗಳು—ಇವುಗಳಿಂದ ಕೂಡಿದುದಾಗಿ ದೇವತೆಗಳಿಗೆ ಆನಂದದಾಯಕವಾದ ಕಾಂತಿಮತಿಯೆಂಬ ಆ ಸಭಾಮಂಟಪವು ಹೆಸರಿನಿಂದೊಪ್ಪುತ್ತಿರುವುದು.

೨೨. ಮಹರ್ಷಿಸಂಘಗಳಿಂದಲೂ, ಮುನಿವೃಂದಗಳಿಂದಲೂ ನಿಬಿಡಿತವಾದ ಆ ಸಭೆಯು ಬ್ರಾಹ್ಮಣರ ವೇದಘೋಷಗಳ ನಿನಾದದಿಂದ ಆನಂದವನ್ನುಂಟುಮಾಡುತ್ತಿರುವುದು.

೨೩—೨೫. ಆ ಸಭಾಮಧ್ಯದಲ್ಲಿ ಬ್ರಹ್ಮದೇವನು ಮಹಾದೇವನ ಪೂಜೆಯಲ್ಲಿ ನಿರತನಾಗಿದ್ದನು, ಆ ಸಮಯದಲ್ಲಿ ಕೃಷ್ಣದ್ವೈಪಾಯನನೂ, ಪರಾಶರಪುತ್ರನೂ ಆದ ವ್ಯಾಸಮಹರ್ಷಿಯು ಮುನಿಮಂಡಲದ ಮಧ್ಯದಿಂದೆದ್ದು ನಿಂತು ಬ್ರಹ್ಮರ್ಷಿಯೂ ಬ್ರಹ್ಮಮಾನಸಪುತ್ರನೂ ಆದ ಸನತ್ಕುಮಾರನಿಗೆ ಯಥಾವಿಧಿಯಾಗಿ ನಮಸ್ಕರಿಸಿ, ಪರಮೇಶ್ವರನಲ್ಲಿರುವ ಭಕ್ತ್ಯಾಧಿಕ್ಯದಿಂದ ಕೂಡಿದವನಾಗಿ ಅಂಜಲಿಬಂಧವನ್ನು ಮಾಡಿಕೊಂಡು ಅತ್ಯಂತ ಸಂತೋಷದಿಂದ ಪುಳಕಾಂಕಿತಶರೀರನೂ ಪ್ರಸನ್ನಮುಖಾಂಬುಜನೂ ಆಗಿ ಇಂತು ಪ್ರಶ್ನೆಮಾಡಿದನು.

೨೬. ವ್ಯಾಸನು ಪ್ರಶ್ನಿಸುತ್ತಾನೆ:—ಮಹಾಕಾಲಕ್ಷೇತ್ರದ ಮಾಹಾತ್ಮ್ಯವು

ಭಗವನ್ಕ್ಷೇತ್ರಮಾಹಾತ್ಮ್ಯಂ ಮಹಾಕಾಲಸ್ಯ ಕಥ್ಯತಾಂ ।
ಕಥಂ ಗುಹ್ಯವನಂ ಪ್ರೋಕ್ತಂ ಪೀಠತ್ವಮೂಷರಂ ತಥಾ ॥ ೨೭ ॥
ಫಲಂ ಯಥಾಽತ್ರ ವಸತಾಂ ಮೃತಾನಾಂ ಚ ಗತಿರ್ಯಥಾ ।
ಸ್ನಾನೇನ ಯದ್ಭವೇತ್ಪುಣ್ಯಂ ದಾನೇನಾಽಪಿ ಚ ಯತ್ಫಲಂ ॥ ೨೮ ॥
ಕಥಮೇತತ್ ಸ್ಮಶಾನಂ ಚ ಕ್ಷೇತ್ರಂ ಪ್ರೋಕ್ತಂ ಯಥಾ ತಥಾ ।
ಪೃಷ್ಟಂ ಮೇ ಶಂಕರೇ ಭಕ್ತ್ಯಾ ಬ್ರೂಹಿ ತ್ವಂ ಶಾಸ್ತ್ರಕೋವಿದ ॥ ೨೯ ॥

ಸನತ್ಕುಮಾರ ಉವಾಚ :—

ಕ್ಷೀಯತೇ ಪಾತಕಂ ಯತ್ರ ತೇನೇದಂ ಕ್ಷೇತ್ರಮುಚ್ಯತೇ ।
ಯಸ್ಮಾತ್ ಸ್ಥಾನಂ ಚ ಮಾತೄಣಾಂ ಪೀಠಂ ತೇನೈವ ಕಥ್ಯತೇ ॥ ೩೦ ॥
ಮೃತಾಃ ಪುನರ್ನಜಾಯಂತೇ ತೇನೇದಮೂಷರಂ ಸ್ಮೃತಂ ।
ಗುಹ್ಯಮೇತತ್ಪ್ರಿಯಂ ನಿತ್ಯಂ ಕ್ಷೇತ್ರಂ ಶಂಭೋರ್ಮಹಾತ್ಮನಃ ॥ ೩೧ ॥

---

ಸಕಲ ಪ್ರಾಣಿಗಳ ಸಂಸಾರಮೋಹವನ್ನು ನಾಶಗೊಳಿಸುವುದು. ಈ ಮಹಾಕಾಲವನವನ್ನು ಸರ್ವಕ್ಷೇತ್ರಗಳಿಗಿಂತಲೂ ಶ್ರೇಷ್ಠವಾದುದೆಂದು ಯಾವ ಕಾರಣದಿಂದ ಹೇಳುವರು?

೨೭. ಮಹರ್ಷಿಯೆ! ಈ ಕ್ಷೇತ್ರದ ಮಾಹಾತ್ಮ್ಯವನ್ನು ನಿರೂಪಿಸು. ಇದನ್ನು ಗುಹ್ಯವನವೆಂದೇಕೆ ಕರೆಯುವರು? ಊಷರಪೀಠವೆಂದು ಇದಕ್ಕೆ ಹೆಸರು ಬಂದುದು ಹೇಗೆ?

೨೮. ಇಲ್ಲಿ ವಾಸಮಾಡುವವರಿಗೆ ಯಾವ ಫಲವು ಲಭಿಸುವುದು? ಇಲ್ಲಿ ದೇಹವನ್ನು ತ್ಯಜಿಸಿದವರಿಗೆ ಯಾವ ಗತಿಯುಂಟಾಗುವುದು? ಇಲ್ಲಿ ಸ್ನಾನವನ್ನು ಮಾಡುವುದರಿಂದ ಯಾವ ಪುಣ್ಯವುಂಟು? ದಾನಗಳನ್ನು ಮಾಡುವುದರಿಂದ ಫಲವೇನು?

೨೯. ಈ ಕ್ಷೇತ್ರವನ್ನು ಸ್ಮಶಾನವೆಂದೇಕೆ ಕರೆಯುವರು? ಮಹೇಶ್ವರನಲ್ಲಿ ಭಕ್ತಿಭರಿತನಾಗಿ ನಾನು ಕೇಳಿದ ಈ ಪ್ರಶ್ನೆಗಳಿಗೆಲ್ಲ ಸಕಲಶಾಸ್ತ್ರಪಾರಂಗತನಾದ ನೀನು ಸರಿಯಾದ ಉತ್ತರವನ್ನು ಹೇಳು.

೩೦. ಸನತ್ಕುಮಾರನು ಹೇಳುತ್ತಾನೆ:—ಈ ಸ್ಥಳದಲ್ಲಿ ಜನರ ಪಾತಕವು ನಶಿಸುವುದರಿಂದ ಇದನ್ನು ಕ್ಷೇತ್ರವೆನ್ನುವರು. ಇಲ್ಲಿ ಮಾತೃಕೆಯರು ನೆಲೆಗೊಂಡಿರುವರಾದುದರಿಂದ ಇದು ಮಾತೃಪೀಠವೆಂದೂ ಕರೆಯಲ್ಪಡುವುದು.

೩೧. ಇಲ್ಲಿ ದೇಹವನ್ನು ತ್ಯಜಿಸಿದವರು ಮತ್ತೆ ಹುಟ್ಟುವುದಿಲ್ಲ. ಆದುದರಿಂದಲೇ ಈ ಪ್ರದೇಶವನ್ನು ಊಷರವೆನ್ನುವರು. ಈ ಕ್ಷೇತ್ರವು ಮಹಾತ್ಮನಾದ ಮಹೇಶ್ವರನಿಗೆ ಏಕಾಂತವೂ, ಪ್ರಿಯವೂ, ಶಾಶ್ವತಾವಾಸವೂ ಆಗಿರುವುದರಿಂದ ಗುಹ್ಯಕ್ಷೇತ್ರವೆನ್ನುವರು.

ಯಸ್ಮಾದಿಷ್ಟಂ ಹಿ ಭೂತಾನಾಂ ಸ್ಮಶಾನಮತಿವಲ್ಲಭಂ ।
ಮಹಾಕಾಲವನಂ ಯಚ್ಚ ತಥಾ ಚೈವಾಽವಿಮುಕ್ತಕಂ ॥ ೩೨ ॥
ಏಕಾಮ್ರಕಂ ಭದ್ರಕಾಲಂ ಕರವೀರವನಮೇವ ಚ ।
ಕೋಲಾಗಿರಿಸ್ತಥಾ ಕಾಶೀ ಪ್ರಯಾಗಮಮರೇಶ್ವರಂ ॥ ೩೩ ॥
ಭರಥಂ ಚೈವ ಕೇದಾರಂ ದಿವ್ಯಂ ರುದ್ರಮಹಾಲಯಂ ।
ದಿವ್ಯಸ್ಮಶಾನಾನ್ಯೇತಾನಿ ರುದ್ರಸ್ಯೇಷ್ಟಾನಿ ನಿತ್ಯಶಃ ॥ ೩೪ ॥
ರಮತೇ ಭಗವಾನೇಷು ಸಿದ್ಧಕ್ಷೇತ್ರೇಷು ಸರ್ವದಾ ।
ಪೃಥಿವ್ಯಾಂ ನೈಮಿಷಂ ತೀರ್ಥಮುತ್ತಮಂ ತೀರ್ಥಪುಷ್ಕರಂ ॥ ೩೫ ॥
ತ್ರಯಾಣಾಮಪಿ ಲೋಕಾನಾಂ ಕುರುಕ್ಷೇತ್ರಂ ಪ್ರಶಸ್ಯತೇ ।
ಕುರುಕ್ಷೇತ್ರಾದ್ದಶಗುಣಾ ಪುಣ್ಯಾ ವಾರಾಣಸೀ ಮತಾ ॥ ೩೬ ॥
ತಸ್ಯಾ ದಶಗುಣಂ ವ್ಯಾಸ ಮಹಾಕಾಲವನೋತ್ತಮಂ ॥ ೩೭ ॥
ಪ್ರಭಾಸಾದ್ಯಾನಿ ತೀರ್ಥಾನಿ ಪೃಥಿವ್ಯಾಮಿಹ ಯಾನಿ ತು ।
ಪ್ರಭಾಸಮುತ್ತಮಂ ತೀರ್ಥಂ ಕ್ಷೇತ್ರಮಾದ್ಯಂ ಪಿನಾಕಿನಃ ॥ ೩೮ ॥

---

೩೨–೩೪. ಈ ಪ್ರದೇಶವು ಸಮಸ್ತಭೂತಗಣಗಳಿಗೂ ಅತ್ಯಂತಪ್ರಿಯವಾಗಿರುವುದರಿಂದ ಸ್ಮಶಾನವೆಂದೂ ಮಹಾಕಾಲವನವೆಂದೂ ಕರೆಯಲ್ಪಡುವುದು. ಇದಲ್ಲದೆ ಅವಿಮುಕ್ತಕ್ಷೇತ್ರ, ಏಕಾಮ್ರವನ, ಭದ್ರಕಾಲ, ಕರವೀರವನ, ಕೋಲಾಗಿರಿ, ಕಾಶಿ, ಪ್ರಯಾಗ, ಅಮರೇಶ್ವರ, ಭರಥ, ಕೇದಾರ, ರುದ್ರಮಹಾಲಯ—ಇವುಗಳೆಲ್ಲವೂ ಮಹಾರುದ್ರನಿಗೆ ನಿತ್ಯವೂ ಪರಮಪ್ರಿಯಗಳಾದ ದಿವ್ಯಸ್ಮಶಾನಗಳೆಂದು ಹೇಳಲ್ಪಡುವುವು.

೩೫. ಭಗವಂತನು ಈ ಸಿದ್ಧಕ್ಷೇತ್ರಗಳಲ್ಲಿ ನಿತ್ಯವೂ ವಿಹರಿಸುತ್ತಿರುವನು. ಭೂಲೋಕದಲ್ಲಿ ನೈಮಿಷಕ್ಷೇತ್ರವೂ ಪುಷ್ಕರತೀರ್ಥವೂ ಸರ್ವೋತ್ತಮಗಳೆಂದು ಪ್ರಸಿದ್ಧಗಳಾಗಿರುವುವು.

೩೬. ಮೂರು ಲೋಕಗಳಲ್ಲಿಯೂ ಕುರುಕ್ಷೇತ್ರವು ಪ್ರಶಂಸಿಸಲ್ಪಟ್ಟಿರುವುದು. ಪುಣ್ಯತಮವಾದ ವಾರಾಣಸೀಕ್ಷೇತ್ರವು ಕುರುಕ್ಷೇತ್ರಕ್ಕಿಂತಲೂ ಹತ್ತರಷ್ಟು ಫಲದಾಯಕವು.

೩೭. ಅಯ್ಯಾ ವ್ಯಾಸನೆ! ಉತ್ತಮವಾದ ಮಹಾಕಾಲವನವು ಅದಕ್ಕೂ ಹತ್ತುಪಾಲು ಮಿಗಿಲೆನಿಸಿರುವುದು.

೩೮. ಈ ಭೂಲೋಕದಲ್ಲಿ ಪ್ರಭಾಸವೇ ಮೊದಲಾದ ಅನೇಕ ತೀರ್ಥಗಳಿರುವುವಷ್ಟೆ. ಅವುಗಳಲ್ಲಿ ಪ್ರಭಾಸಕ್ಷೇತ್ರವು ಉತ್ತಮತೀರ್ಥವೂ ಮಹೇಶ್ವರನ ಆದಿನಿವಾಸವೂ ಎನಿಸಿರುವುದು.

ಶ್ರೀಶೈಲಮುತ್ತಮಂ ತೀರ್ಥಂ ದೇವದಾರುವನಂ ತಥಾ ।
ತಸ್ಮಾದಪ್ಯುತ್ತಮಂ ವ್ಯಾಸ ಪುಣ್ಯಾ ವಾರಾಣಸೀ ಮತಾ ॥ ೩೯ ॥
ತಸ್ಮಾದ್ದಶಗುಣಂ ಪ್ರೋಕ್ತಂ ಸರ್ವತೀರ್ಥೋತ್ತಮಂ ಯತಃ ।
ಮಹಾಕಾಲವನಂ ಗುಹ್ಯಂ ಸಿದ್ಧಕ್ಷೇತ್ರಂ ತಥೋಷರಂ ॥ ೪೦ ॥
ಕಿಂಚಿದ್ಗುಹ್ಯಾನ್ಯಥಾಽನ್ಯಾನಿ ಸ್ಮಶಾನಾನ್ಯೂಷರಾಣಿ ಚ ।
ಸರ್ವತಸ್ತು ಸಮಾಖ್ಯಾತಂ ಮಹಾಕಾಲವನಂ ಮುನೇ ॥ ೪೧ ॥
ಸ್ಮಶಾನಮೂಷರಂ ಕ್ಷೇತ್ರಂ ಪೀಠಂ ತು ವನಮೇವ ಚ ।
ಪಂಚೈಕತ್ರ ನ ಲಭ್ಯಂತೇ ಮಹಾಕಾಲಪುರಾದೃತೇ ॥ ೪೨ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಮಹಾಕಾಲವನ ಪ್ರಶಂಸಾವರ್ಣನಂ" ನಾಮ ಪ್ರಥಮೋಽಧ್ಯಾಯಃ**

---

೩೯. ಹಾಗೆಯೇ ಶ್ರೀಶೈಲವೂ ದೇವದಾರುವನವೂ ಪೂರ್ಣಕ್ಷೇತ್ರಗಳಾಗಿರುವುವು. ವ್ಯಾಸನೆ! ಪುಣ್ಯಪ್ರದವಾದ ವಾರಾಣಸೀಕ್ಷೇತ್ರವು ಅವುಗಳಿಗಿಂತಲೂ ಉತ್ತಮವಾಗಿರುವುದು.

೪೦. ಆದರೆ ಈ ಮಹಾಕಾಲವನವು ಸಕಲತೀರ್ಥಗಳಲ್ಲಿಯೂ ಉತ್ತಮವಾದುದರಿಂದ ಕಾಶಿಗೂ ಹತ್ತರಷ್ಟು ಪುಣ್ಯಪ್ರದವಾಗಿರುವುದು. ಈ ಪ್ರದೇಶವು ಗುಹ್ಯಕ್ಷೇತ್ರ, ಸಿದ್ಧಕ್ಷೇತ್ರ, ಊಷರಕ್ಷೇತ್ರ ಎಂದೆನಿಸಿರುವುದು.

೪೧. ಭೂಮಿಯಲ್ಲಿ ಕೆಲವು ಗುಹ್ಯಸ್ಥಾನಗಳಿರುವುವು. ಕೆಲವು ಸ್ಮಶಾನಗಳೂ ಇರುವುವು. ಹಲವು ಊಷರಗಳೂ ಇರುವುವು. ಎಲೈ ವ್ಯಾಸನೆ! ಆದರೆ ಈ ಮಹಾಕಾಲವನವು ಸಕಲ ಗುಣಗಳಿಂದಲೂ ಕೂಡಿರುವುದೆಂದು ಹೇಳುವರು.

೪೨. ಮಹಾಕಾಲವನವೊಂದನ್ನುಳಿದು ಮತ್ತೆಲ್ಲಿಯೂ ಸ್ಮಶಾನ, ಊಷರ, ಕ್ಷೇತ್ರ, ಪೀಠ ಮತ್ತು ವನಗಳೆಂಬ ಐದು ಗುಣಗಳುಳ್ಳ ಪ್ರದೇಶವು ದೊರಕುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಮಹಾಕಾಲವನ ಪ್ರಶಂಸಾವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

### ಬ್ರಹ್ಮಶಿರಶ್ಛೇದನವರ್ಣನಂ

**ಸನತ್ಕುಮಾರ ಉವಾಚ:—**

**ಪುರಾ ತ್ವೇಕಾರ್ಣವೇ ಪ್ರಾಪ್ತೇ ನಷ್ಟೇ ಸ್ಥಾವರಜಂಗಮೇ ।**
**ನಾಽಗ್ನಿರ್ನವಾಯುರಾದಿತ್ಯೋ ನ ಭೂಮಿರ್ನ ದಿಶೋ ನಭಃ ॥ ೧ ॥**
**ನ ನಕ್ಷತ್ರಾಣಿ ನ ಜ್ಯೋತಿರ್ನ ದ್ಯೌರ್ನೇಂದುರ್ಗ್ರಹಾಸ್ತಥಾ ।**
**ನ ದೇವಾಽಸುರಗಂಧರ್ವಾಃ ಪಿಶಾಚೋರಗರಾಕ್ಷಸಾಃ ॥ ೨ ॥**
**ಸರಾಂಸಿ ನೈವ ಗಿರಯೋ ನಾಽಽಪಗಾ ನಾಽಬ್ಧಯಸ್ತಥಾ ।**
**ಸರ್ವಮೇವ ತಮೋಭೂತಂ ನ ಪ್ರಾಜ್ಞಾಯತ ಕಿಂಚನ ॥ ೩ ॥**
**ತದೈಕೋ ಹಿ ಮಹಾಕಾಲೋ ಲೋಕಾಽನುಗ್ರಹಕಾರಣಾತ್ ।**
**ತಸ್ಥೌ ಸ್ಥಾನಾನ್ಯಶೇಷಾಣಿ ಕಾಷ್ಠಾಸ್ತ್ವಾಲೋಕಯನ್ಪ್ರಭುಃ ॥ ೪ ॥**
**ಸೃಷ್ಟ್ಯರ್ಥಂ ಸ ಮಹಾಕಾಲಃ ಕರೇ ಕಾಮಂ ಪ್ರತಿಷ್ಠಿತಂ ।**
**ದಕ್ಷಿಣಸ್ಯ ತು ತರ್ಜನ್ಯಾಂ ಸಮಮಂಥಾವಿಶೋಷಿತಂ ॥ ೫ ॥**

---

### ಕನ್ನಡದ ಅನುವಾದ

#### ಬ್ರಹ್ಮಶಿರಶ್ಛೇದನವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡವೆಲ್ಲವೂ ಜಲಮಯವಾಗಿದ್ದಿತು. ಆಗ ಸ್ಥಾವರ ಜಂಗಮಗಳೆಂಬ ಪ್ರಾಣಿಭೇದಗಳೇ ಇರಲಿಲ್ಲ. ಅಗ್ನಿಯಾಗಲಿ, ವಾಯು, ಸೂರ್ಯ, ಭೂಮಿ, ದಿಕ್ಕು, ಆಕಾಶಗಳಾಗಲಿ ರೂಪುಗೊಂಡಿರಲಿಲ್ಲ.

೨. ನಕ್ಷತ್ರಗಳಿರಲಿಲ್ಲ. ಪ್ರಕಾಶವಿರಲಿಲ್ಲ. ಆಕಾಶವಾಗಲಿ, ಚಂದ್ರನಾಗಲಿ, ಗ್ರಹಗಳಾಗಲಿ, ದೇವತೆಗಳಾಗಲಿ, ರಾಕ್ಷಸರಾಗಲಿ, ಗಂಧರ್ವರಾಗಲಿ, ಪಿಶಾಚರಾಗಲಿ, ನಾಗರಾಗಲಿ, ರಾಕ್ಷಸರಾಗಲಿ ಇರಲಿಲ್ಲ.

೩–೪. ಸರೋವರಗಳು, ಪರ್ವತಗಳು, ನದಿಗಳು, ಸಮುದ್ರಗಳೂ ಇರಲಿಲ್ಲ. ಎಲ್ಲವೂ ಅಂಧಕಾರದಿಂದಾವೃತವಾಗಿ ಯಾವುದನ್ನು ತಿಳಿಯುವುದಕ್ಕೂ ಸಾಧ್ಯವಿರಲಿಲ್ಲ. ಆಗ ಸರ್ವೇಶ್ವರನಾದ ಮಹಾದೇವನೊಬ್ಬನೇ ಲೋಕವನ್ನು ಉಜ್ಜೀವನಗೊಳಿಸುವ ಮನಸ್ಸುಳ್ಳವನಾಗಿ ಸಕಲ ದಿಕ್ಕುಗಳನ್ನೂ ಕ್ಷೇತ್ರಗಳನ್ನೂ ಮನಸ್ಸಿನಲ್ಲಿಯೇ ನಿಶ್ಚಯಿಸಿಕೊಳ್ಳುತ್ತ ಇದ್ದನು.

೫. ಆಗಲಾಪ್ರಭುವು ಸೃಷ್ಟಿಮಾಡಲೆಳಸಿ ತನ್ನ ಕೈಯಲ್ಲಿ ನೆಲಸಿದ್ದ ಕಾಮವನ್ನು ಬಲಗೈಯ ತರ್ಜನಿಯಿಂದ ಕ್ಷೋಭಗೊಳಿಸಿದನು.

ಕಲಲಂ ಬುದ್ಬುದಂ ಭೂತ್ವಾ ತೀವ್ರವೇಗವಿವರ್ಧಿತಂ ।
ಜಜ್ಞೇ ತದಂಡಂ ಸುದೃಢಂ ಸುಷ್ಠುವೃತ್ತಂ ಹಿರಣ್ಮಯಂ ॥ ೬ ॥
ಕರೇಣ ತಾಡಿತಂ ತದ್ಧಿ ಬಭೂವ ದ್ವಿದಲಂ ಮಹತ್ ।
ಅಧಃ ಖಂಡಂ ಸ್ಮೃತಾ ಭೂಮಿರೂರ್ಧ್ವಂ ದ್ಯೌಸ್ತಾರಕಾನ್ವಿತಂ ॥ ೭ ॥
ಮಧ್ಯೇಽಭವತ್ತದಾ ಬ್ರಹ್ಮಾ ಪಂಚವಕ್ತ್ರಶ್ಚತುರ್ಭುಜಃ ।
ಮಹೇಶ್ವರೋಽನುಮಾನ್ಯೈವ ತಮುಯೋಜದನಂತರಂ ॥ ೮ ॥
ಕುರು ಸೃಷ್ಟಿಂ ಮಹಾಬಾಹೋ ವಿಚಿತ್ರಾಂ ಮದನುಗ್ರಹಾತ್ ।
ಇತ್ಯುಕ್ತ್ವಾಽಂತರ್ಹಿತಃ ಕ್ವಾಽಪಿ ದೇವೋ ಬ್ರಹ್ಮಾ ನ ಜಗ್ಮಿವಾನ್ ॥ ೯ ॥
ಪ್ರೇರ್ಯಮಾಣೋಽಪಿ ವೈ ಸ್ರಷ್ಟುಂ ಬ್ರಹ್ಮಾ ದೇವಮಚಿಂತಯತ್ ।
ಬ್ರಹ್ಮಣಾ ಧ್ಯಾಯಮಾನಶ್ಚ ಜ್ಞಾನಾರ್ಥಂ ಭಗವಾನ್ಭವಃ ॥ ೧೦ ॥
ಬ್ರಹ್ಮಣಸ್ತಪಸಾ ಹೃಷ್ಟಃ ಪ್ರಾದಾದ್ವೇದಂ ಷಡಂಗಕಂ ।
ಲಬ್ಧೇ ವೇದೇಽಪಿ ನ ಚಿರಾತ್ಸೃಷ್ಟಿಂ ಕರ್ತುಂ ಶಶಾಕ ಸಃ ॥ ೧೧ ॥

---

೬. ಆ ಕಾಮವು ತರ್ಜನಿಯ ತೀವ್ರವೇಗದಿಂದ ಅಭಿವರ್ಧಿಸಿ ಕ್ರಮವಾಗಿ ಕಲಲ ಮತ್ತು ಬುದ್ಬುದಗಳಾಗಿ ಬಳಿಕ ದೃಢವೂ, ಸುಂದರವೂ, ಗುಂಡಗೂ ಹಿರಣ್ಮಯವೂ ಆದ ಅಂಡವಾಗಿ ಪರಿಣಮಿಸಿತು.

೭. ಅದನ್ನು ಮಹಾದೇವನು ತನ್ನ ಕೈಯಿಂದ ಹೊಡೆಯಲು ಇಬ್ಭಾಗವಾಗಿ ಒಡೆಯಿತು. ಕೆಳಗಿನ ಭಾಗವೇ ಭೂಮಿಯೆಂದು ಕರೆಯಲ್ಪಡುವುದು. ಮೇಲಿನ ಅರ್ಧವೇ ನಕ್ಷತ್ರಗಳಿಂದೊಡಗೂಡಿದ ಆಕಾಶವು.

೮. ಅವುಗಳ ಮಧ್ಯದಲ್ಲಿ ಬ್ರಹ್ಮನು ಐದು ಮುಖಗಳಿಂದಲೂ, ನಾಲ್ಕು ತೋಳುಗಳಿಂದಲೂ ಕೂಡಿದವನಾಗಿ ಅವತರಿಸಿದನು. ಮಹೇಶ್ವರನು ಆತನನ್ನಾದರಿಸಿ ಇಂತೆಂದು ಆಜ್ಞಾಪಿಸಿದನು.

೯. "ಎಲೈ ಮಹಾಬಾಹುವೆ! ನನ್ನ ಅನುಗ್ರಹದ ಬಲದಿಂದ ನೀನು ವಿಚಿತ್ರಪದಾರ್ಥಗಳಿಂದೊಡಗೂಡಿದ ಸೃಷ್ಟಿಯನ್ನು ಮಾಡು." ಇಂತೆಂದು ಆ ದೇವದೇವನು ಅಂತರ್ಧಾನವನ್ನು ಹೊಂದಲು ಬ್ರಹ್ಮನು ಆತನನ್ನು ಎಲ್ಲಿಯೂ ಕಾಣಲಾರದಾದನು.

೧೦–೧೧. ಇಂತು ಪ್ರೇರೇಪಿಸಲ್ಪಟ್ಟರೂ ಆ ಬ್ರಹ್ಮನು ಸೃಷ್ಟಿಯ ಕ್ರಮವನ್ನರಿಯದೆ ಮಹಾದೇವನನ್ನೇ ಕುರಿತು ಚಿಂತಿಸುತ್ತಿದ್ದನು. ಇಂತು ಜ್ಞಾನಸಿದ್ಧಿಗಾಗಿ ಬ್ರಹ್ಮನಿಂದ ಧ್ಯಾನಿಸಲ್ಪಟ್ಟು ಸಂತೋಷಗೊಂಡ ಮಹಾಮಹಿಮನಾದ ಪಾರ್ವತೀಪತಿಯು ಆತನಿಗೆ ಷಡಂಗಸಹಿತವಾದ ವೇದವನ್ನುಪದೇಶಿಸಿದನು. ವೇದವು ಲಭಿಸಿದರೂ, ಬ್ರಹ್ಮನಿಗೆ ಬಹಳಕಾಲದವರೆಗೂ ಸೃಷ್ಟಿಯನ್ನು ಮಾಡಲು ಶಕ್ತಿಯುಂಟಾಗಲಿಲ್ಲ.

ತಪಸಾಽತಿಷ್ಠದಾಭೂಯಃ ಸಮಾರಾಧಯಿತುಂ ಭವಂ ।
ನಾಽಪಶ್ಯತ್ಸ ಯದಾ ದೇವಂ ತದಾ ತುಷ್ಟಾವ ಭಾವಿತಃ ॥ ೧೨ ॥

ಬ್ರಹ್ಮೋವಾಚ :—

ನಮಃ ಶಿವಾಯಾಽಮಲಸತ್ತ್ವಚೇತಸೇ
ಗುಣತ್ರಯಾಽತೀತ ವಿಸಾರಿತೇಜಸೇ ।
ಷಡಂಗವೇದಸ್ಯ ಮಮಾಽಪಿ ವೇಧಸೇ
ಪರಸ್ವರೂಪಾಽನುಭವಾಯ ಚಕ್ಷುಷೇ ॥ ೧೩ ॥
ನಮೋಽಸ್ತು ತೇ ಸೃಷ್ಟಿವಿಧೌ ರಜೋಜುಷೇ
ಜಗತ್ಸ್ಥಿತೌ ಸತ್ತ್ವಮಧಿಷ್ಠಿತಾಯ ತೇ ।
ವಿನಾಶಹೇತೌ ತಮಸಾ ಮಹೀಯಸೇ
ಶಿವಾಯ ನಿರ್ವಾಣಸುಖಪ್ರದಾಯಿನೇ ॥ ೧೪ ॥
ಅಶೇಷಭೂತಪ್ರಕೃತೇಃ ಪರಾಯ ವೈ
ಪರಾತ್ಮರೂಪಾಯ ನಮಃ ಶಿವಾಯ ವೈ ।
ನೃಬುದ್ಧ್ಯಹಂಕಾರ ಮನೋವಿಧಾಯಿನೇ
ಭರ್ತ್ರೇ ಚ ಷಡ್ವಿಂಶಕರೂಪಕಾಯ ವೈ ॥ ೧೫ ॥

---

೧೨. ಅವನು ಪುನಃ ಮಹಾದೇವನನ್ನು ಪ್ರಸನ್ನಗೊಳಿಸಲು ಉಗ್ರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು. ಆದರೂ ದೇವದೇವನನ್ನು ಕಾಣದಿರಲು ಭಕ್ತಿಭಾವದಿಂದ ಸ್ತೋತ್ರಮಾಡತೊಡಗಿದನು.

೧೩. ಬ್ರಹ್ಮನು ಸ್ತುತಿಸುತ್ತಾನೆ:—ಮಂಗಳಪ್ರದನೂ, ಶುದ್ಧಸತ್ತ್ವಗುಣಾನ್ವಿತವಾದ ಮನಸ್ಸುಳ್ಳವನೂ, ತ್ರಿಗುಣಗಳನ್ನು ಮೀರಿ ಬೆಳಗುತ್ತಿರುವ ಜ್ಯೋತಿಸ್ಸ್ವರೂಪನೂ, ಷಡಂಗಸಹಿತವಾದ ವೇದಗಳಿಗೂ ನನಗೂ ಕಾರಣಭೂತನೂ, ಪರತರಸ್ವರೂಪದಲ್ಲಿ ನೆಲಸಿರುವವನೂ, ದ್ರಷ್ಟೃವೂ ಆದ ನಿನಗೆ ನಮಸ್ಕಾರವು.

೧೪. ಸೃಷ್ಟಿಮಾಡುವುದಕ್ಕಾಗಿ ರಜೋಗುಣದಿಂದ ಕೂಡುವವನೂ, ಲೋಕಪರಿಪಾಲನಕ್ಕಾಗಿ ಸತ್ತ್ವಗುಣಾಧಿಷ್ಠಿತನೂ, ನಾಶಮಾಡುವುದಕ್ಕೆ ಕಾರಣವಾದ ತಮೋಗುಣದಿಂದ ಪ್ರಚುರನಾದವನೂ, ಮೋಕ್ಷಸುಖವನ್ನು ಭಕ್ತರಿಗೆ ಕೊಡುವವನೂ ಆದ ಶಿವನಿಗೆ ನಮಸ್ಕಾರವು.

೧೫. ಸಕಲ ಭೂತಗಳನ್ನೊಳಕೊಂಡ ಪ್ರಕೃತಿಗಿಂತಲೂ ಪರನೂ, ಪರಮಾತ್ಮಸ್ವರೂಪನೂ, ಮನುಷ್ಯರ ಬುದ್ಧಿ, ಅಹಂಕಾರ, ಮನಸ್ಸುಗಳನ್ನು ಪ್ರೇರೇಪಿಸುವ ದೇವದೇವನೂ, ಲೋಕನಾಥನೂ, ಇಪ್ಪತ್ತಾರು ತತ್ತ್ವರೂಪಗಳನ್ನು ಹೊಂದಿರುವವನೂ ಆದ ಪರಶಿವನಿಗೆ ನಮಸ್ಕಾರವು.

ಭೂ ತೋಯ ವಹ್ನ್ಯಂಬರ ವಾಯು ಚಂದ್ರ
ಸೂರ್ಯಾತ್ಮರೂಪಾಭಿರಿದಂ ತನೂಭಿಃ ।
ವ್ಯಾಪ್ತಂ ಜಗದ್ಯಸ್ಯ ನಮೋಽಸ್ತು ತಸ್ಮೈ
ಭೂತಂ ಭವಿಷ್ಯಮಥ ವರ್ತಮಾನಂ ॥ ೧೬ ॥
ಯಾನೀಹ ತೇಜಾಂಸಿ ಜಗಂತಿ ಯಾನಿ
ಭೂತಾನಿ ಭವ್ಯಾನ್ಯಥ ಕಾರಣಾನಿ ।
ಭವಂತಿ ಸೃಷ್ಟೌ ವಿಲಯಂ ವಿನಾಶೇ
ವ್ರಜಂತಿ ಯಸ್ಯಾತ್ಮನಿ ತಂ ನಮಾಮಿ ॥ ೧೭ ॥

ಸನತ್ಕುಮಾರ ಉವಾಚ :—

ಏವಂ ಸಂಸ್ತುವತೋ ವ್ಯಾಸ ಬ್ರಹ್ಮಣೋ ಭಗವಾನ್ಹರಃ ।
ಅಂತರ್ಹಿತ ಉವಾಚೇದಂ ಬ್ರಹ್ಮನ್ಸಂಯಾಚ್ಯತಾಂ ವರಃ ॥ ೧೮ ॥
ಸ ವವ್ರೇ ಮನಸಾ ಪುತ್ರಂ ಭವಂ ಗೌರವ ಕಾರಣಾತ್ ।
ವಿಜ್ಞಾಯಾಂತರ್ಗತಂ ತಸ್ಯ ಪರಮೇಶ ಉವಾಚ ತಂ ॥ ೧೯ ॥
ಯಸ್ಮಾನ್ಮಾಂ ಮನಸಾ ಪುತ್ರಂ ಚತುರ್ಮುಖ ಸಮೀಹಸೇ ।
ಕಸ್ಮಿಂಶ್ಚಿತ್ಕಾರಣೇ ತಸ್ಮಾದಹಂ ಛೇತ್ಸ್ಯಾಮಿ ತೇ ಶಿರಃ ॥ ೨೦ ॥

---

೧೬. ಭೂಮಿ, ಜಲ, ಅಗ್ನಿ, ಆಕಾಶ, ವಾಯು, ಚಂದ್ರ, ಸೂರ್ಯ, ಆತ್ಮಗಳೆಂಬ ಎಂಟು ಸ್ವರೂಪಗಳಿಂದ ಜಗತ್ತೆಲ್ಲವನ್ನೂ ವ್ಯಾಪಿಸಿರುವವನೂ, ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿಯೂ ಏಕಪ್ರಕಾರವಾಗಿರುವವನೂ ಆದ ಮಹೇಶ್ವರನಿಗೆ ನಮಸ್ಕಾರವು.

೧೭. ಬ್ರಹ್ಮಾಂಡದಲ್ಲಿ ಕಾರಣಗಳೆನಿಸಿದ ಜ್ಯೋತಿಗಳೂ, ಲೋಕಗಳೂ, ಭೂತಗಳೂ, ಭವಿಷ್ಯತ್ಪದಾರ್ಥಗಳೂ ಸೃಷ್ಟಿಯಲ್ಲಿ ಉಂಟಾಗಿ, ಪ್ರಳಯದಲ್ಲಿ ನಾಶವನ್ನು ಪಡೆದು, ಸ್ಥಿತಿಕಾಲದಲ್ಲಿ ಯಾವನನ್ನಾಶ್ರಯಿಸಿ ತಮ್ಮ ತಮ್ಮ ವ್ಯಾಪಾರ ಗಳನ್ನು ನಡೆಸುತ್ತಿರುವುವೊ, ಅಂತಹ ಸರ್ವೇಶ್ವರನಿಗೆ ನಮಸ್ಕಾರವು.

೧೮. ಸನತ್ಕುಮಾರನು ಹೇಳುತ್ತಾನೆ:—ಅಯ್ಯಾ ವ್ಯಾಸನೆ! ಇಂತು ಚತುರ್ಮುಖನು ಸ್ತೋತ್ರಗೈಯುತ್ತಿರಲು ಪರಾತ್ಪರನಾದ ಈಶ್ವರನು ಅದೃಶ್ಯನಾಗಿಯೇ "ಎಲೈ ಬ್ರಹ್ಮನೆ! ನಿನಗೆ ಬೇಕಾದ ವರವನ್ನು ಕೇಳು" ಎಂದು ಹೇಳಿದನು.

೧೯. ಆಗ ಬ್ರಹ್ಮದೇವನು ತನಗೆ ಗೌರವವು ದೊರೆಯಬೇಕೆಂಬ ಬಯಕೆಯಿಂದ ಮಹೇಶ್ವರನೇ ಪುತ್ರನಾಗಬೇಕೆಂದು ಮನಸ್ಸಿನಲ್ಲಿಯೇ ಬೇಡಿಕೊಂಡನು. ಆತನ ಅಂತರಂಗವನ್ನರಿತ ಪರಮೇಶ್ವರನು ಆತನನ್ನು ಕುರಿತು ಹೇಳಿದನು.

೨೦. "ಎಲೈ ಬ್ರಹ್ಮನೆ! ಜಗತ್ಕಾರಣನಾದ ನನ್ನನ್ನೇ ನೀನು ಪುತ್ರನಾಗಿ ಬಯಸಿರುವ ಅಪರಾಧಕ್ಕೆ ಪ್ರಾಯಶ್ಚಿತ್ತವಾಗಿಯೂ, ಒಂದಾನೊಂದು ಕಾರಣದ ಸಲುವಾಗಿಯೂ ನಿನ್ನ ತಲೆಯೊಂದನ್ನು ಕತ್ತರಿಸುತ್ತೇನೆ.

ಅಯಾಚ್ಯಂ ಯಾಚಿತಂ ಯಸ್ಮಾನ್ಮಮಾಂಶೋ ನೀಲಲೋಹಿತಃ ।
ರುದ್ರೋ ಭವಿಷ್ಯತಿ ಸುತಃ ಸ ಚ ತೇ ಹಿಂಸ್ಯತಿ ಪ್ರಭಾಂ ॥ ೨೧ ॥
ಅನ್ಯದ್ಯಸ್ಮಾತ್ಸ್ಮೃತೋ ಭಕ್ತ್ಯಾ ತ್ವಯಾಽಹಂ ಪಿತೃಭಾವತಃ ।
ಪರಬ್ರಹ್ಮಸ್ವರೂಪೇಣ ಜಿಜ್ಞಾಸಾ ಮಮ ಯಾ ಕೃತಾ ॥ ೨೨ ॥
ತಸ್ಮಾದ್ಬ್ರಹ್ಮೇತಿ ಲೋಕೇಽತ್ರ ನಾಮ ಖ್ಯಾತಂ ಭವಿಷ್ಯತಿ ।
ಪಿತಾಮಹತ್ವಂ ತೇನಾಽಪಿ ಪಿತಾಮಹಸ್ತತೋಽಹ್ಯಸಿ ॥ ೨೩ ॥
ಲಬ್ಧ್ವಾ ಶಾಪವರಾವೇವಂ ಪುತ್ರಸೃಷ್ಟಿಂ ಚಕಾರ ಸಃ ।
ಸ್ವತೇಜೋಜನಿತಂ ವಹ್ನಿಂ ಜುಹ್ವತಃ ಸ್ವೇದಮಾವಹತ್ ॥ ೨೪ ॥
ಸಮಿದ್ಯುಕ್ತೇನ ಹಸ್ತೇನ ಲಲಾಟಂ ಮಾರ್ಜತೋಽಭವತ್ ।
ಸ್ವಿನ್ನಭ್ರಷ್ಟಸ್ತತೋರಕ್ತಬಿಂದುರೇಕೋ ವಿಭಾವಸೌ ॥ ೨೫ ॥
ಸ ನೀಲಲೋಹಿತೋಽಭೂದ್ವೈ ಸ ಚ ರುದ್ರೋ ಭವಾಜ್ಞಯಾ ।
ತದನಂತರಮಾಸಾದ್ಯ ಉತ್ತತಾರ ಸುತೋಽಂತಿಕಾತ್ ॥ ೨೬ ॥

---

೨೧. ಕೇಳಬಾರದ ವರವನ್ನು ನೀನು ಕೇಳಿರುವೆ. ಆದುದರಿಂದ ನನ್ನ ಅಂಶದಿಂದೊಡಗೂಡಿದ ರುದ್ರನು ನೀಲಲೋಹಿತನೆಂಬ ಹೆಸರಿನಿಂದ ನಿನ್ನ ಮಗನಾಗಿ ಹುಟ್ಟಿ ನಿನ್ನ ತೇಜಸ್ಸೆಲ್ಲವನ್ನೂ ಅಪಹರಿಸುವನು.

೨೨. ಆದರೆ ನೀನು ನನ್ನಲ್ಲಿ ಪಿತೃಭಕ್ತಿಯನ್ನಿಟ್ಟು ನನ್ನನ್ನು ಏಕಾಗ್ರಚಿತ್ತದಿಂದ ಸ್ಮರಿಸಿರುವೆ. ನನ್ನನ್ನು ಪರಬ್ರಹ್ಮನೆಂದು ತಿಳಿಯಲು ಇಚ್ಛೆಯನ್ನು ಪಡೆದಿರುವೆ.

೨೩. ಆದುದರಿಂದ ಲೋಕಗಳಲ್ಲಿ ನಿನಗೆ ಬ್ರಹ್ಮನೆಂಬ ಹೆಸರು ಪ್ರಖ್ಯಾತಿಯನ್ನು ಪಡೆಯುವುದು. ಮತ್ತು ನೀನು ಲೋಕಪಿತಾಮಹನೆನಿಸುವೆ. ಅದರಿಂದ ಲೋಕಸೃಷ್ಟಿಗೂ ಕಾರಣನಾಗುವೆ.''

೨೪. ಇಂತು ಶಾಪವರಗಳೆರಡನ್ನೂ ಪಡೆದು ಆ ಚತುರ್ಮುಖನು ಪುತ್ರರನ್ನು ಸೃಷ್ಟಿಮಾಡಲೆಳಸಿದನು. ಆಗ ಅವನು ತನ್ನ ತೇಜಸ್ಸಿನಿಂದುಂಟಾದ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಿರಲು ಮುಖದಲ್ಲಿ ಬೆವರು ಕಾಣಿಸಿಕೊಂಡಿತು.

೨೫. ಸಮಿತ್ತುಗಳನ್ನು ಹಿಡಿದ ಕೈಯಿಂದ ಆತನು ಹಣೆಯನ್ನೊರಸಿಕೊಂಡನು. ಆ ಬೆವರಿನೊಡನೆ ಒಂದು ರಕ್ತಬಿಂದುವು ಹೊರಟು ಅಗ್ನಿಯಲ್ಲಿ ಬಿದ್ದಿತು.

೨೬. ಮಹೇಶ್ವರನ ಶಾಪವನ್ನನುಸರಿಸಿ ರುದ್ರನೇ ಆ ಬಿಂದುವಿನ ಮಾರ್ಗವಾಗಿ ನೀಲಲೋಹಿತನೆನಿಸಿ ಅಗ್ನಿಯಿಂದೆದ್ದು ಬಂದು ತಂದೆಯ ಸಮೀಪವನ್ನು ಸೇರಿದನು.

ಪಂಚವಕ್ತ್ರೋ ದಶಭುಜಃ ಶೂಲಚಾಪಾಽಸಿ ಶಕ್ತಿಮಾನ್ ।
ತ್ರಿಪಂಚನಯನೋ ರೌದ್ರೋ ವ್ಯಾಲಯಜ್ಞೋಪವೀತಕಃ ॥ ೨೭ ॥
ಸೇಂದುಃ ಕಪರ್ದಂ ಬಿಭ್ರಾಣಃ ಸಿಂಹಚರ್ಮಾಽಂಬರಂ ಧರಃ ।
ಜಾತಮೇವಂ ಸ ದೃಷ್ಟ್ವಾ ತು ಬ್ರಹ್ಮಾ ನಾಮಾಽಕರೋತ್ತದಾ ॥ ೨೮ ॥
ನೀಲಲೋಹಿತನಾಮೇತಿ ಭವ ರುದ್ರ ಪಿನಾಕಧೃಕ್ ।
ತತಃ ಪ್ರವವೃತೇ ಸೃಷ್ಟಿಃ ಸ್ರಷ್ಟುರ್ಲೋಕಪಿತಾಮಹಾತ್ ॥ ೨೯ ॥
ಸಪ್ತಾಽಽದೌ ಮಾನಸಾಂ ಜಜ್ಞೇ ಸನಕಾದೀಂಸ್ತತೋಽಪರಾನ್ ।
ಮರೀಚಿ ದಕ್ಷ ಪ್ರಭೃತೀನ್ಮನ್ವಾದೀಂಶ್ಚ ಪ್ರಜಾಸೃಜಃ ॥ ೩೦ ॥
ಅಷ್ಟಭೇದಾನ್ಸುರಾನ್ಕೃತ್ವಾ ತಿರ್ಯಗ್ಯೋನಿಂ ಚ ಪಂಚಧಾ ।
ಮನುಷ್ಯಾನೇಕಭೇದಾಂಶ್ಚ ಸೃಷ್ಟಿಮೇವಂ ಸಸರ್ಜ ಹ ॥ ೩೧ ॥
ಸೃಷ್ಟಿಃ ಸುರಾದಿಕಾ ಜಾತಾ ಕೃತ್ವಾ ಬ್ರಹ್ಮಾಣಮಗ್ರಧಃ ।
ಪ್ರಣಮ್ಯಾಽಥ ಸಿಷೇವುಸ್ತೇ ಕೇವಲಂ ನೀಲಲೋಹಿತಂ ॥ ೩೨ ॥

---

೨೭. ಆತನು ಐದು ಮುಖಗಳಿಂದಲೂ, ಹತ್ತು ತೋಳುಗಳಿಂದಲೂ ಕೂಡಿದವನಾಗಿ, ಶೂಲ, ಖಡ್ಗ, ಧನುಸ್ಸು, ಶಕ್ತ್ಯಾಯುಧಗಳನ್ನು ಹಿಡಿದವನೂ, ಹದಿನೈದು ಕಣ್ಣಿನವನೂ, ಭಯಂಕರ ಸ್ವರೂಪನೂ, ಹಾವುಗಳ ಯಜ್ಞೋಪವೀತ ವನ್ನು ಧರಿಸಿದವನೂ ಆಗಿದ್ದನು.

೨೮. ಚಂದ್ರನನ್ನು ತಳೆದ ಜಟಾಜೂಟದಿಂದೊಪ್ಪುತ್ತ ಸಿಂಹದ ಚರ್ಮ ವನ್ನೇ ಉಟ್ಟುಕೊಂಡು ಹುಟ್ಟಿದ ಆತನನ್ನು ಕಂಡ ತತ್‌ಕ್ಷಣದಲ್ಲಿಯೇ ಬ್ರಹ್ಮನು ಆತನಿಗೆ ನಾಮಕರಣವನ್ನು ಮಾಡಿದನು.

೨೯. "ಎಲೈ ರುದ್ರನೆ! ನೀನು ನೀಲಲೋಹಿತನೆಂಬ ಹೆಸರಿನಿಂದ ಪ್ರಖ್ಯಾತಿ ಯನ್ನು ಪಡೆದು ಪಿನಾಕಪಾಣಿಯಾಗು" ಎಂದನು. ಬಳಿಕ ಸೃಷ್ಟಿಯಲ್ಲಿ ಉದ್ಯುಕ್ತನಾದ ಲೋಕಪಿತಾಮಹನ ಸೃಷ್ಟಿಕಾರ್ಯವು ಪ್ರಾರಂಭವಾಯಿತು.

೩೦. ಮೊದಲು ಸನಕನೇ ಮೊದಲಾದ ಏಳು ಮಂದಿ ಮಾನಸಪುತ್ರರನ್ನು ಸೃಷ್ಟಿಮಾಡಿ ಬಳಿಕ ಮರೀಚಿ, ದಕ್ಷ ಮುಂತಾದವರನ್ನೂ, ಚತುರ್ದಶ ಮನು ಗಳನ್ನೂ, ಪ್ರಜಾಪತಿಗಳನ್ನಾಗಿ ಸೃಜಿಸಿದನು.

೩೧. ದೇವತೆಗಳಲ್ಲಿ ಎಂಟು ಪ್ರಕಾರಗಳನ್ನು ವಿಭಜನೆಮಾಡಿ, ತಿರ್ಯ ಗ್ಯೋನಿಗಳಲ್ಲಿ ಐದು ವಿಭಾಗಗಳನ್ನು ಮಾಡಿ, ಮನುಷ್ಯರೆಂಬ ಒಂದು ಭೇದವನ್ನೂ ಉಂಟುಮಾಡಿ ಚತುರ್ದಶಲೋಕಗಳನ್ನು ಸೃಷ್ಟಿಮಾಡಿದನು.

೩೨. ಇಂತು ಸೃಷ್ಟವಾದ ದೇವತೆಗಳೇ ಮೊದಲಾದವುಗಳನ್ನೊಳಕೊಂಡ ಸಕಲ ಬ್ರಹ್ಮಾಂಡವೂ ಬ್ರಹ್ಮನನ್ನು ಸಹ ಕಡೆಗೆ ಮಾಡು ನೀಲಲೋಹಿತನೊಬ್ಬನನ್ನೇ ನಮಸ್ಕರಿಸಿ ಆತನನ್ನೇ ಸೇವಿಸುತ್ತಿದ್ದಿತು.

ತತೋ ಬ್ರಹ್ಮಾಽವದದ್ರುದ್ರಮಪೂಜ್ಯೋಽಹಿ ತ್ವಯಾ ಕೃತಃ ।
ಸ್ವತೇಜಸಾ ಭವಾನ್ಪೂಜ್ಯೋ ಯತೋ ಯಾಹಿ ಹಿಮಾಲಯಮ್ ॥ ೩೩ ॥
ತಂ ನೀಲಲೋಹಿತಃ ಪ್ರೋಚೇ ಭವತಾ ನಾಽರ್ಚಿತೋಽಹ್ಯಹಂ ।
ತತೋ ಜಗಾಮ ರುದ್ರೋಽಸೌ ಸ ಯತ್ರ ಭಗವಾನ್ಭವಃ ॥ ೩೪ ॥
ತತೋ ಬ್ರಹ್ಮಾಽಭವನ್ಮೂಢೋ ರಜಸಾಚೋಪಬೃಂಹಿತಃ ।
ತತಾಪ ತೇಜಸಾ ಸೃಷ್ಟಿಂ ಮನ್ಯಮಾನೋ ಮಯಾ ಕೃತಾಂ ॥ ೩೫ ॥
ಮತ್ತುಲ್ಯೋ ನಾಽಸ್ತಿ ವೈ ದೇವೋ ಯೇನ ಸೃಷ್ಟಿಃ ಪ್ರವರ್ಧಿತಾ ।
ಸ ದೇವಾಽಸುರಗಂಧರ್ವಾ ಪಶುಪಕ್ಷಿ ಮೃಗಾಕುಲಾ ॥ ೩೬ ॥
ಏವಂ ಮೂಢಃ ಸ ಪಂಚಾಸ್ಯೋ ವಿರಂಚ್ಯೋಽಭವದ್ದರ್ಪಿತಃ ।
ಪ್ರಾಗ್ವಕ್ತ್ರಂ ಸುಸ್ವರಂ ತಸ್ಯ ಸಾಮವೇದಪ್ರವರ್ತಕಂ ॥ ೩೭ ॥
ದ್ವಿತೀಯಂ ವದನಂ ತಸ್ಯ ಋಗ್ವೇದಸ್ಯ ಪ್ರವರ್ತಕಂ ।
ಯಜುರ್ವೇದಧರಂ ಚಾಽನ್ಯದಥರ್ವಾಖ್ಯಂ ಚತುರ್ಥಕಂ ॥ ೩೮ ॥

---

೩೩. ಆಗ ಬ್ರಹ್ಮನು ರುದ್ರನನ್ನು ಕುರಿತು ಇಂತೆಂದನು. "ನಿನ್ನಿಂದ ನಾನು ಮಹತ್ತ್ವವಿಲ್ಲದವನಾದೆನು. ನನ್ನ ತೇಜಸ್ಸಿನಿಂದಲೇ ನೀನು ಪೂಜ್ಯನಾಗಿರುವೆ. ನೀನು ಹಿಮಾಲಯಪರ್ವತಕ್ಕೆ ಹೊರಟುಹೋಗು."

೩೪. ಆಗ ನೀಲಲೋಹಿತನು "ನೀನು ನನ್ನನ್ನು ಪೂಜಿಸಲಿಲ್ಲವಷ್ಟೆ" ಎಂದು ಹೇಳಿ ಸರ್ವೇಶ್ವರನಾದ ಮಹಾದೇವನಿದ್ದಲ್ಲಿಗೆ ಹೊರಟುಹೋದನು.

೩೫. ಆದರಿಂದ ಬ್ರಹ್ಮನು ಮೋಹಗೊಂಡವನೂ, ರಜೋಗುಣವಿಶಿಷ್ಟನೂ ಆಗಿ ಇಂತೆಂದು ಚಿಂತಿಸಿದನು. "ನನ್ನ ತೇಜಸ್ಸಿನಿಂದಲೇ ಈ ಸೃಷ್ಟಿಯೆಲ್ಲವೂ ಉಂಟಾಗಿರುವುದು.

೩೬. ದೇವತೆಗಳು, ರಾಕ್ಷಸರು, ಗಂಧರ್ವರು, ಪಶುಗಳು, ಪಕ್ಷಿಗಳು, ಮೃಗಗಳು ಮುಂತಾದುವುಗಳಿಂದ ನಿಬಿಡಿತವಾದ ಈ ಸೃಷ್ಟಿಯೆಲ್ಲವನ್ನೂ ನಿರ್ವಹಿಸಿದ ನನಗೆ ಸಮನಾದ ದೇವನು ಮತ್ತೊಬ್ಬನಿಲ್ಲವಷ್ಟೆ."

೩೭. ಇಂತು ಪಂಚಮುಖನಾದ ಬ್ರಹ್ಮನು ಮೋಹಗೊಂಡು ಗರ್ವದಿಂದ ಬೀಗುತ್ತಿದ್ದನು. ಆತನ ಪೂರ್ವಮುಖವು ಮಧುರಧ್ವನಿಯಿಂದ ಸಾಮವೇದವನ್ನುಚ್ಚರಿಸುತ್ತಿದ್ದಿತು.

೩೮. ಎರಡನೆಯ ಮುಖವು ಋಗ್ವೇದದ ಪ್ರಚಾರಕ್ಕೆ ಕಾರಣವಾಯಿತು. ಮೂರನೆಯದು ಯಜುರ್ವೇದವನ್ನೂ, ನಾಲ್ಕನೆಯದು ಅಥರ್ವಣವೇದವನ್ನೂ ಧರಿಸಿದ್ದುವು.

ಸಾಂಗೋಪಾಂಗೇತಿಹಾಸಾಂಶ್ಚ ಸರಹಸ್ಯಾನ್ಸಸಂಗ್ರಹಾನ್ ।
ವೇದಾನಧೀತೇ ವಕ್ತ್ರೇಣ ಪಂಚಮೇನೋಪಚಕ್ಷುಷಾ ॥ ೩೯ ॥
ತಸ್ಯಾಸ್ಸುರಾಃ ಸುರಾಃ ಸರ್ವೇ ವಕ್ತ್ರಸ್ಯಾದ್ಭುತ ತೇಜಸಃ ।
ತೇಜಸಾ ನ ಪ್ರಕಾಶಂತೇ ದೀಪಃ ಸೂರ್ಯೋದಯೇ ಯಥಾ ॥ ೪೦ ॥
ಸಪುತ್ರಾ ಅಪಿ ಸೋದ್ವೇಗಾ ಬಭೂವುರ್ನಷ್ಟಚೇತಸಃ ।
ನಾಽಭಿಗಂತುಂ ನ ಚ ದ್ರಷ್ಟುಂ ಚಿರಂ ತೇಜೋಪಸರ್ಪಿತುಂ ॥ ೪೧ ॥
ಅಭಿಭೂತಮಿವಾತ್ಮಾನಂ ಮನ್ಯಮಾನಾ ಅವಿದ್ವಿಷಃ ।
ಸರ್ವೇ ತೇ ಮಂತ್ರಯಾಮಾಸುರ್ದೇವಾ ವೈ ಹಿತಮಾತ್ಮನಃ ॥ ೪೨ ॥
ಗಚ್ಛಾಮ ಶರಣಂ ದೇವಂ ನಿಸ್ತೇಜಾ ಬ್ರಹ್ಮತೇಜಸಾ ।
ಕಿಂ ತು ತಸ್ಯ ನ ಜಾನೀಮಃ ಸ್ಥಾನಂ ಯತ್ರ ವ್ಯವಸ್ಥಿತಃ ॥ ೪೩ ॥
ತಂ ಭೀಮಮತ್ರ ದ್ರಕ್ಷ್ಯಾಮೋ ಭಕ್ತ್ಯಾ ನಾಽನ್ಯೇನ ಕೇನಚಿತ್ ।
ಏವಂ ಸಂಮಂತ್ರ್ಯ ತೇ ದೇವಾಃ ಕೃತಾಂಜಲಿಪುಟಾಸ್ತದಾ ।
ಚಕ್ರುಃ ಸ್ತೋತ್ರಂ ಮಹೇಶಸ್ಯ ಪರಯಾ ಸ್ವರಸಂಪದಾ ॥ ೪೪ ॥

---

೩೯. ಬ್ರಹ್ಮನು ತನ್ನ ಉಪನೇತ್ರವೆನಿಸಿದ ಐದನೆಯ ಮುಖದಿಂದ ಅಂಗಗಳು, ಉಪಾಂಗಗಳು, ರಹಸ್ಯಗಳು, ಸಂಗ್ರಹಗಳಿಂದೊಡಗೂಡಿದ ಇತಿಹಾಸ ಜಾಲವನ್ನು ಹೊರಗೆಡಹುತ್ತಿದ್ದನು.

೪೦. ಈ ಮುಖದ ಅದ್ಭುತವಾದ ತೇಜಸ್ಸಿನಿಂದ ಅಭಿಭೂತರಾಗಿ ಸಕಲ ರಾಕ್ಷಸರೂ ದೇವತೆಗಳೂ ಸೂರ್ಯೋದಯದ ಮುಂದಿನ ದೀಪಗಳಂತೆ ಕಾಂತಿ ಹೀನರಾಗಿದ್ದರು.

೪೧. ಪುತ್ರಸಹಿತರಾಗಿ ಅವರು ಉದ್ವೇಗಗೊಂಡು ತೇಜೋಹೀನರಾಗಿದ್ದರು. ಆ ತೇಜಸ್ಸನ್ನು ಸಮೀಪಿಸುವುದಕ್ಕಾಗಲಿ, ಬಹುಕಾಲ ನೋಡುವುದಕ್ಕಾಗಲಿ, ಅದನ್ನು ಕಳೆಗುಂದಿಸುವುದಕ್ಕಾಗಲಿ ಅವರಾರೂ ಶಕ್ತರಾಗಲಿಲ್ಲ.

೪೨. ಇಂತು ತಮ್ಮ ತೇಜಸ್ಸುಗಳು ಕಳೆಗುಂದಿರುವುದನ್ನು ತಿಳಿದರೂ ದೇವತೆಗಳು ಬ್ರಹ್ಮನಲ್ಲಿ ದ್ವೇಷವನ್ನು ತೋರದೆ ಎಲ್ಲರೂ ಸೇರಿ ತಮಗೆ ಹಿತವಾಗುವ ಬಗೆಯನ್ನು ಕುರಿತು ಚಿಂತಿಸಿದರು.

೪೩. "ಬ್ರಹ್ಮತೇಜಸ್ಸಿನ ಆಧಿಕ್ಯದಿಂದ ನಿಸ್ತೇಜಸ್ಕರಾದ ನಾವೆಲ್ಲರೂ ಆ ಮಹಾದೇವನನ್ನೇ ಶರಣುಹೊಂದಬೇಕು. ಆದರೆ ಆತನ ಸ್ಥಾನವನ್ನಾಗಲಿ, ಈಗ ಆತನು ಎಲ್ಲಿರುವನೆಂಬುದನ್ನಾಗಲಿ ಅರಿಯೆವು.

೪೪. ಅಂತಹ ಭೀಮನನ್ನು ಭಕ್ತಿಯಿಂದ ನೋಡಬಹುದೇ ಹೊರತು ಬೇರೆ ಉಪಾಯವನ್ನು ಕಾಣೆವು." ಇಂತೆಂದು ಮಂತ್ರಾಲೋಚನೆಯನ್ನು ಮಾಡಿ ಆ ದೇವತೆಗಳೆಲ್ಲರೂ ಅಂಜಲಿಬಂಧಗಳನ್ನು ಮಾಡಿಕೊಂಡು ಉತ್ತಮವಾದ ಸ್ವರಸಂಪತ್ತಿಯಿಂದ ಕೂಡಿ ಆ ಮಹೇಶ್ವರನನ್ನು ಸ್ತುತಿಸಿದರು.

ದೇವಾ ಊಚುಃ:—

ನಮಸ್ತೇ ದೇವದೇವೇಶ ಮಹೇಶ್ವರ ನಮೋನಮಃ ॥ ೪೫ ॥
ನ ವಿದ್ಮಃ ಪರಮಂ ಮೂಢಾ ಮಹಿಮಾನಂ ತವಾಽತುಲಂ ।
ಯದ್ಯೋಗೇನ ಪರಂ ಬ್ರಹ್ಮ ಭೂತಾನಾಂ ತ್ವಂ ಸನಾತನಃ ॥ ೪೬ ॥
ಪ್ರತಿಷ್ಠಾ ಸರ್ವಭೂತಾನಾಂ ಹೇತುಃ ಸರ್ವಸ್ಯ ಸರ್ಜನೇ ।
ಬಿಭರ್ಷಿ ಚೈವ ನೇತ್ರಸ್ಥಾನ್ಸೋಮಸೂರ್ಯವಿಭಾವಸೂನ್ ॥ ೪೭ ॥
ನಾಮಸಂಕೀರ್ತನಾದೇವ ಮುಚ್ಯಂತೇ ಜಂತವೋಽಶುಭಾತ್ ।
ಪೃಥಿವ್ಯಬಗ್ನಿಚಂದ್ರಾರ್ಕವ್ಯೋಮ ವಾಯೂಪಲಕ್ಷಣಾಃ ।
ಮೂರ್ತಯಸ್ತೇ ಮಹಾದೇವ ವ್ಯಾಪ್ತಮಾಭಿರಶೇಷತಃ ॥ ೪೮ ॥
ರಜಃ ಸತ್ತ್ವತಮೋಭಾವೈರ್ಭ್ರಾಮ್ಯಮಾಣಂ ತ್ವಯಾ ಜಗತ್ ।
ನಾಽವಬುಧ್ಯತಿ ಸರ್ವೇಶ ಸರ್ವಮೂರ್ತಿಧರೋ ಯತಃ ॥ ೪೯ ॥
ಬ್ರಹ್ಮಾದೀನಾಂ ಸುರೇಶಾನಾಂ ಸಂಮೋಹನವಿಮೋಹನಂ ।
ತ್ವಂ ಕರೋಷಿ ಯುಗಾವರ್ತಕಾಲೇ ಕಾಲೇ ಚ ದುಃಸಹಂ ॥ ೫೦ ॥

---

೪೫. ದೇವತೆಗಳು ಹೇಳುತ್ತಾರೆ:—ದೇವಾಧಿದೇವನೂ ಮಹೇಶ್ವರನೂ ಆದ ನಿನಗೆ ನಮಸ್ಕಾರವನ್ನು ಮಾಡುವೆವು.

೪೬. ಯಾವುದರ ಯೋಗದಿಂದ ಪರಬ್ರಹ್ಮನಾದ ನೀನು ಸಕಲಭೂತಗಳಲ್ಲಿಯೂ ಸನಾತನನಾಗಿ ನೆಲಸಿರುವೆಯೊ, ಅಂತಹ ನಿನ್ನ ಮಹಾಮಹಿಮೆಯನ್ನು ಮೂಢರಾದ ನಾವು ತಿಳಿಯಲಾರೆವು.

೪೭. ಸಕಲಭೂತಗಳಿಗೂ ನೀನು ಆಧಾರವಾಗಿರುವೆ. ಸಕಲಪ್ರಪಂಚದ ಸೃಷ್ಟಿಗೂ ಕಾರಣನಾಗಿರುವೆ. ನಿನ್ನ ಮೂರು ಕಣ್ಣುಗಳಲ್ಲಿ ಚಂದ್ರ, ಸೂರ್ಯ, ಅಗ್ನಿಗಳನ್ನು ತಳೆದಿರುವೆ.

೪೮. ನಿನ್ನ ನಾಮಸಂಕೀರ್ತನದಿಂದಲೇ ಸಕಲ ಪ್ರಾಣಿಗಳಿಗೂ ಪಾಪರಾಶಿಗಳು ತೊಲಗುವುವು. ಭೂಮಿ, ಜಲ, ಅಗ್ನಿ. ಚಂದ್ರ, ಸೂರ್ಯ, ಆಕಾಶ ಮತ್ತು ವಾಯುಗಳೆಲ್ಲವೂ ನಿನ್ನ ಮೂರ್ತಿಗಳೇ ಆಗಿರುವುವು. ಮಹಾದೇವ! ಇವುಗಳಿಂದಲೇ ಸಮಸ್ತವಾದ ಬ್ರಹ್ಮಾಂಡವೂ ವ್ಯಾಪ್ತವಾಗಿರುವುದು.

೪೯. ನಿನ್ನ ಸಂಕಲ್ಪದಿಂದಲೇ ಸತ್ತ್ವರಜಸ್ತಮೋಗುಣಗಳಿಂದ ಮೋಹಗೊಂಡ ಲೋಕವು ಸರ್ವೇಶ್ವರನೂ ಸರ್ವಸ್ವರೂಪಧಾರಿಯೂ ಆದ ನಿನ್ನನ್ನೇ ತಿಳಿಯದೆ ಭ್ರಮಿಸುತ್ತಿರುವುದು.

೫೦. ನೀನೇ ಸಮಯವನ್ನು ತಿಳಿದು ಬ್ರಹ್ಮಾದಿ ದೇವತೆಗಳಿಗೂ ಸೃಷ್ಟಿಕಾಲದಲ್ಲಿ ಮೋಹವನ್ನುಂಟುಮಾಡಿ ಪ್ರಳಯಕಾಲದಲ್ಲಿ ಅವರಿಗೆ ಜ್ಞಾನವನ್ನಿತ್ತು ನಿಜಸ್ವರೂಪವನ್ನು ತೋರಿಸುವೆ.

ಸನತ್ಕುಮಾರ ಉವಾಚ :—

ಪ್ರತ್ಯಕ್ಷಂ ದರ್ಶನಂ ದತ್ವಾ ದೇವಾನಾಮನುಕಂಪಯಾ ।
ಪ್ರಸನ್ನವದನೋ ಭೂತ್ವಾ ದೇವೈಶ್ಚಾಽಪಿ ನಮಸ್ಕೃತಃ ॥ ೫೧ ॥
ನಾಶಯನ್ಮೋಹನಾಮ್ನಾ ತು ಸಹ ದೇವೈರ್ಮಹೇಶ್ವರಃ ॥ ೫೨ ॥
ಏವಂ ಸಂಸ್ತೂಯಮಾನೋಽಸೌ ದೇವರ್ಷಿ ಪಿತೃಮಾನವೈಃ ।
ಅಂತರ್ಹಿತ ಉವಾಚೇದಂ ದೇವಾ ಬ್ರೂತ ಯಥೇಪ್ಸಿತಂ ॥ ೫೩ ॥

ದೇವಾ ಊಚುಃ :–

ಪ್ರತ್ಯಕ್ಷಂ ದರ್ಶನಂ ಸ್ಥಾಣೋ ಪ್ರಾರ್ಥಯಾಮ ಸದಾ ತವ ।
ತ್ವಯಾ ಕಾರುಣ್ಯತೋಽಸ್ಮಾಕಂ ವರಶ್ಚಾಽಪಿ ಪ್ರದೀಯತಾಂ ॥ ೫೪ ॥
ಯದಸ್ಮಾಕಂ ಮಹದ್ವೀರ್ಯಂ ತೇಜಶ್ಚೈವ ಪರಾಕ್ರಮಂ ।
ತತ್ಸರ್ವಂ ಬ್ರಹ್ಮಣಾ ಗ್ರಸ್ತಂ ಪಂಚಮಾಸ್ಯಸ್ಯ ತೇಜಸಾ ॥ ೫೫ ॥
ವಿನೇಶುಃ ಸರ್ವತೇಜಾಂಸಿ ತ್ವತ್ಪ್ರಸಾದಾತ್ಪ್ರನಃ ಪ್ರಭೋ ।
ಜಾಯತೇ ತದ್ಯಥಾಪೂರ್ವಂ ತಥಾ ಕುರು ಮಹೇಶ್ವರ ॥ ೫೬ ॥

---

೫೧. ಸನತ್ಕುಮಾರನು ಹೇಳುತ್ತಾನೆ:—ಆಗ ಮಹೇಶ್ವರನು ದೇವತೆಗಳಲ್ಲಿ ಅನುಕಂಪವುಳ್ಳವನಾಗಿ ಪ್ರಸನ್ನಮುಖದಿಂದ ಅವರಿಗೆ ಪ್ರತ್ಯಕ್ಷನಾದನು. ದೇವತೆಗಳೆಲ್ಲರೂ ಆತನಿಗೆ ನಮಸ್ಕರಿಸಿದರು.

೫೨. ಮಹೇಶ್ವರನು ಮೋಹವೆಂಬ ಹೆಸರಿನ ತನ್ನ ಮಾಯೆಯಿಂದ ದೇವತಾಸಹಿತವಾದ ಸಕಲವನ್ನೂ ಆವರಿಸಿದ್ದನು.

೫೩. ಇಂತು ದೇವತೆಗಳಿಂದಲೂ, ಮಹರ್ಷಿಗಳಿಂದಲೂ, ಪಿತೃಗಳಿಂದಲೂ, ಮನುಷ್ಯರಿಂದಲೂ ಸ್ತುತಿಸಲ್ಪಟ್ಟವನಾಗಿ ಅಂತರ್ಧಾನವನ್ನು ಹೊಂದಿ "ದೇವತೆಗಳಿರಾ! ನಿಮ್ಮ ಅಭೀಷ್ಟವನ್ನು ಕೇಳಿಕೊಳ್ಳಿರಿ" ಎಂದು ಅಪ್ಪಣೆಮಾಡಿದನು.

೫೪. ದೇವತೆಗಳು ಹೇಳುತ್ತಾರೆ:—ಶಂಭುವೆ! ನಮಗೆ ಸರ್ವಕಾಲದಲ್ಲಿಯೂ ನಿನ್ನ ಪ್ರತ್ಯಕ್ಷದರ್ಶನವಾಗುತ್ತಿರುವಂತೆ ಪ್ರಾರ್ಥಿಸುವೆವು. ಅಲ್ಲದೆ ಕರುಣಾರ್ದ್ರಹೃದಯನಾಗಿ ನೀನು ನಮಗೆ ಮತ್ತೊಂದು ವರವನ್ನೂ ಕೊಡಬೇಕು.

೫೫. ನಮ್ಮಲ್ಲಿದ್ದ ಮಹತ್ತರಗಳಾದ ವೀರ್ಯ, ತೇಜಸ್ಸು, ಪರಾಕ್ರಮಗಳೆಲ್ಲವೂ ಬ್ರಹ್ಮದೇವನ ಐದನೆಯ ಮುಖದ ತೇಜಸ್ಸಿನಿಂದ ಪರಾಭವವನ್ನು ಹೊಂದಿರುವುವು.

೫೬. ಸಕಲ ಜ್ಯೋತಿಗಳೂ ನಾಶವನ್ನು ಹೊಂದಿದುವು. ಲೋಕನಾಥನಾದ ಮಹೇಶ್ವರನೆ! ನಿನ್ನ ಪ್ರಸಾದದಿಂದ ಅವುಗಳೆಲ್ಲವೂ ಮೊದಲಿನಂತೆಯೇ ನಮ್ಮಲ್ಲಿರುವಂತೆ ಉಪಾಯವನ್ನು ಮಾಡು.

ಸನತ್ಕುಮಾರ ಉವಾಚ :—
ಪ್ರತ್ಯಕ್ಷಮೇತ್ಯ ವೈ ಪಶ್ಚಾಚ್ಚಲಿತಃ ಶರ್ವ ಏವ ಹಿ ।
ಜಗಾಮ ತತ್ರ ಯತ್ರಾಽಸೌ ರಜೋಽಹಂಕಾರಮೂರ್ತಿಮಾನ್ ।
ದೇವಾಃ ಸ್ತುವಂತೋ ದೇವೇಶಂ ಪರಿವಾರ್ಯ ಉಪಾವಿಶನ್ ॥ ೫೭ ॥
ಬ್ರಹ್ಮಾ ತಮಾಗತಂ ದೇವಂ ನಾಽಜಾನಾತ್ತಮಸಾ ವೃತಃ ।
ಸೂರ್ಯಕೋಟಿಸಹಸ್ರಾಣಾಂ ತೇಜಸಾ ರಂಜಯನ್ಜಗತ್ ॥ ೫೮ ॥
ತದಾಽದೃಶ್ಯತ ವಿಶ್ವಾತ್ಮಾ ವಿಶ್ವಸೃಗ್ವಿಶ್ವಭಾವನಃ ।
ಸ ಪಿತಾಮಹಮಾಸೀನಂ ಸಕಲೇ ದೇವಮಂಡಲೇ ॥ ೫೯ ॥
ತೇಜಸಾಽಭಿಭವನ್ರುದ್ರಸ್ತೇನ ಮತ್ತೋಽಗ್ರತಃ ಸ್ಥಿತಃ ।
ರುದ್ರ ತೇಜೋಽಭಿಭೂತಂ ಚ ಬ್ರಹ್ಮವಕ್ತ್ರಂ ನ ರಾಜತೇ ॥ ೬೦ ॥
ರಾತ್ರೌ ಪ್ರಕಾಶಕಿರಣಶ್ಚಂದ್ರಃ ಸೂರ್ಯೋದಯೇ ಯಥಾ ।
ಸಗರ್ವೋಽಥಾತ್ಮಜಂ ದೃಷ್ಟ್ವಾ ರುದ್ರದೇವಂ ಸನಾತನಂ ॥ ೬೧ ॥
ಅವಂದತ ಕರೇಣೈವ ಪ್ರಾಹ ವೈ ಸಸ್ಮಿತಂ ವಚಃ ।
ಪ್ರತ್ಯುವಾಚ ವಿರೂಪಾಕ್ಷೋ ಬ್ರಹ್ಮಾಣಂ ತಂ ಹಸನ್ನಿವ ॥ ೬೨ ॥

---

೫೭. ಸನತ್ಕುಮಾರನು ಹೇಳುತ್ತಾನೆ:—ಮಹಾದೇವನು ಆಗ ದೇವತೆಗಳಿಗೆ ದರ್ಶನವನ್ನು ಕೊಟ್ಟು ಬಳಿಕ ರಜೋಗುಣ ಮತ್ತು ಅಹಂಕಾರಗಳೇ ಮೂರ್ತಿಗೊಂಡಂತಿದ್ದ ಬ್ರಹ್ಮದೇವನಿರುವ ಸ್ಥಳಕ್ಕೆ ಬಿಜಯಂಗೈದನು.

೫೮. ದೇವತೆಗಳೆಲ್ಲರೂ ಆತನನ್ನು ಸ್ತೋತ್ರಮಾಡುತ್ತ ಆತನನ್ನು ಸುತ್ತುವರೆದು ಕುಳಿತುಕೊಂಡರು. ಬ್ರಹ್ಮನಾದರೊ ತಮೋಭಿಭೂತನಾಗಿ ದೇವದೇವನು ಬಂದಿದ್ದುದನ್ನು ತಿಳಿಯಲೇ ಇಲ್ಲ.

೫೯. ವಿಶ್ವಾತ್ಮನೂ, ಲೋಕಸೃಷ್ಟಿಕರ್ತನೂ, ಭೂತಭಾವನನೂ ಆದ ಪರಮೇಶ್ವರನು ಸಾವಿರಕೋಟಿಸೂರ್ಯರ ತೇಜಸ್ಸಿನಿಂದ ಸಕಲಬ್ರಹ್ಮಾಂಡವನ್ನೂ ಬೆಳಗುತ್ತಿದ್ದನು.

೬೦. ಸಮಸ್ತದೇವತಾಮಂಡಲದ ಮಧ್ಯದಲ್ಲಿ ಕುಳಿತಿದ್ದ ಬ್ರಹ್ಮದೇವನನ್ನು ರುದ್ರನು ತನ್ನ ತೇಜಸ್ಸಿನಿಂದ ಕಾಂತಿಹೀನನನ್ನಾಗಿಮಾಡಿ ಗರ್ವದಿಂದ ಆತನೆದುರಿನಲ್ಲಿ ನಿಂತಿದ್ದನು.

೬೧. ರುದ್ರತೇಜಸ್ಸಿನಿಂದ ಪರಾಭವವನ್ನು ಹೊಂದಿದ ಬ್ರಹ್ಮನ ಮುಖವು ರಾತ್ರಿಯಲ್ಲಿ ಪ್ರಕಾಶಮಾನವಾಗಿ ಕಾಣುವ ಚಂದ್ರನು ಸೂರ್ಯನು ಹುಟ್ಟುತ್ತಲೇ ಕಳೆಗುಂದುವಂತೆ ಕಾಂತಿಹೀನವಾಯಿತು.

೬೨. ಆಗ ಬ್ರಹ್ಮನು ಎಚ್ಚತ್ತು ಗರ್ವದಿಂದ ಸನಾತನನಾದ ರುದ್ರದೇವನನ್ನು ನೋಡಿ ಕೈಸನ್ನೆಯಿಂದಲೇ ವಂದಿಸಿ ಸ್ಮಿತಪೂರ್ವಕವಾಗಿ ಮಾತನಾಡಿಸಿದನು. ವಿರೂಪಾಕ್ಷನೂ ಬ್ರಹ್ಮನೊಡನೆ ನಗುತ್ತಲೇ ಪ್ರತ್ಯುತ್ತರವನ್ನು ಕೊಟ್ಟನು.

ಯತೋ ನ ವೇದ ಪರಮಂ ದೇವಂ ತತ್ತೇಜಸಾವೃತಃ ।
ತತೋಽಟ್ಟಹಾಸಂ ಭಗವಾನ್ಮುಮೋಚ ಶಶಿಶೇಖರಃ ॥ ೬೩ ॥
ಪಶ್ಯತಾಂ ಸರ್ವದೇವಾನಾಂ ಶೃಣ್ವತಾಂ ವಾಚಮುಕ್ತವಾನ್ ।
ತೇನಾಽಟ್ಟಹಾಸಶಬ್ದೇನ ಮೋಹಯಿತ್ವಾ ಪಿತಾಮಹಂ ॥ ೬೪ ॥
ತೇಜೋರಾಶಿಃ ಶಶಾಂಕಾಭಃ ಶಶಾಂಕಾರ್ಕಾಗ್ನಿಲೋಚನಃ ।
ವಾಮಾಂಗುಷ್ಠನಖಾಗ್ರೇಣ ಬ್ರಹ್ಮಣಃ ಪಂಚಮಂ ಶಿರಃ ।
ಚಕರ್ತ ಕದಲೀಗರ್ಭಂ ನರಃ ಕರರುಹೈರಿವ ॥ ೬೫ ॥
ಛಿದ್ಯಮಾನಂ ಚ ತದ್ವಕ್ತ್ರಂ ಬುಬುಧೇ ನ ಪಿತಾಮಹಃ ।
ರುದ್ರಸ್ಯ ತೇಜಸಾ ತಸ್ಮಾನ್ಮೋಹಿತೋ ನ ನತಿಂ ಗತಃ ॥ ೬೬ ॥
ಛಿನ್ನಂ ತಸ್ಯ ಶಿರಃ ಪಶ್ಚಾದ್ರುದ್ರಹಸ್ತೇ ಸ್ಥಿತಂ ತದಾ ।
ಅಪಶ್ಯದ್ದೈವತೈಃ ಸಾರ್ಧಂ ರೌದ್ರಮತಿಭಯಾಜ್ಜ್ವಲತ್ ॥ ೬೭ ॥
ಮಹೇಶ್ವರ ಕರಾಂತಸ್ಥನಖೈರ್ವಕ್ತ್ರಂ ವಿರಾಜತೇ ।
ಗ್ರಹಮಂಡಲಮಧ್ಯಸ್ಥೋ ದ್ವಿತೀಯ ಇವ ಚಂದ್ರಮಾಃ ॥ ೬೮ ॥

---

೬೩. ಆ ಪರಮಾತ್ಮನ ತೇಜಸ್ಸಿನಿಂದಾವೃತನಾಗಿ ಬ್ರಹ್ಮನು ಆ ಪರಮ ಪುರುಷನನ್ನು ತಿಳಿಯಲಿಲ್ಲ. ಚಂದ್ರಶೇಖರನು ಆಗ ಮಹತ್ತರವಾದ ಅಟ್ಟಹಾಸ ದಿಂದ ಶಬ್ದವನ್ನು ಮಾಡಿ, ಸಮಸ್ತದೇವತೆಗಳೂ ನೋಡುತ್ತ ಕೇಳುತ್ತಿರು ವಂತೆಯೇ ಇಂತೆಂದು ಹೇಳಲುಪಕ್ರಮಿಸಿದನು.

೬೪–೬೫. ತೇಜೋರಾಶಿಯೂ ಚಂದ್ರನಂತಿರುವವನೂ ಚಂದ್ರಸೂರ್ಯ ವಹ್ನಿಗಳನ್ನು ತ್ರಿನೇತ್ರಗಳಲ್ಲಿ ತಳೆದವನೂ ಆದ ಆ ದೇವೋತ್ತಮನು ತನ್ನ ಅಟ್ಟ ಹಾಸಶಬ್ದದಿಂದ ಪಿತಾಮಹನನ್ನು ಮೋಹಗೊಳಿಸಿ ಬಲಿಷ್ಠನಾದವನು ಬಾಳೆಯ ಗಿಡದ ಎಳದಳಿರನ್ನು ಉಗುರುಗಳಿಂದ ಕತ್ತರಿಸುವಂತೆ ಆತನ ಐದನೆಯ ತಲೆ ಯನ್ನು ತನ್ನ ಎಡಗೈಯ ಕಿರುಬೆರಳಿನ ಉಗುರಿನಿಂದ ಕತ್ತರಿಸಿದನು.

೬೬. ಪಿತಾಮಹನು ತನ್ನ ತಲೆಯು ನಷ್ಟವಾದುದನ್ನೂ ತಿಳಿಯಲೇ ಇಲ್ಲ. ಆ ರುದ್ರನ ತೇಜಸ್ಸಿನಿಂದ ಮೋಹಿತನಾಗಿ ಆತನಿಗೆ ನಮಸ್ಕಾರವನ್ನೂ ಮಾಡಲಿಲ್ಲ.

೬೭. ಬಹಳ ಕಾಲವಾದಮೇಲೆ ಕ್ರೂರವೂ, ಭಯಂಕರವೂ, ಜ್ವಲಿಸುತ್ತಿರು ವುದೂ ಆದ ತನ್ನ ತಲೆಯು ಛಿನ್ನವಾಗಿ ರುದ್ರನ ಕೈಯಲ್ಲಿರುವುದನ್ನು ಬ್ರಹ್ಮನೂ ಕಂಡನು. ದೇವತೆಗಳೂ ನೋಡಿದರು.

೬೮. ಮಹೇಶ್ವರನ ಕೈಬೆರಳುಗಳ ಉಗುರುಗಳ ಮಧ್ಯದಲ್ಲಿ ಬ್ರಹ್ಮನ ಆ ತಲೆಯು ಗ್ರಹಮಂಡಲಮಧ್ಯಗತನಾದ ಎರಡನೆಯ ಚಂದ್ರನೊ ಎಂಬಂತೆ ಪ್ರಕಾಶಿಸುತ್ತಿದ್ದಿತು.

ಉತ್ಕ್ಷಿಪ್ಯ ತತ್ಕಪಾಲೇನ ನನರ್ತ ಶಶಿಶೇಖರಃ ।
ಶಿಖರಸ್ಥೇನ ಸೂರ್ಯೇಣ ಕೈಲಾಸ ಇವ ಪರ್ವತಃ ॥ ೬೯ ॥
ಛಿನ್ನೇ ವಕ್ತ್ರೇ ತತೋ ದೇವಾ ಹೃಷ್ಟಪುಷ್ಟಾ ವೃಷಧ್ವಜಂ ।
ತುಷ್ಟುವುರ್ವಿವಿಧೈಃ ಸ್ತೋತ್ರೈರ್ದೇವದೇವಂ ಕಪಾಲಿನಂ ॥ ೭೦ ॥
ದೇವಾ ಊಚುಃ:—
ನಮಃ ಕಪಾಲಿನೇ ನಿತ್ಯಂ ಮಹಾಕಾಲಾಯ ಶಂಖಿನೇ ।
ಐಶ್ವರ್ಯಜ್ಞಾನಯುಕ್ತಾಯ ಸರ್ವಭೋಗಪ್ರದಾಯಿನೇ ॥ ೭೧ ॥
ನಮೋ ದರ್ಪವಿನಾಶಾಯ ಸರ್ವದೇವಮಯಾಯ ಚ ।
ಕಾಲಸಂಹಾರಕರ್ತಾ ತ್ವಂ ಮಹಾಕಾಲಸ್ತತೋಹ್ಯಸಿ ॥ ೭೨ ॥
ಭಕ್ತಾನಾಂ ದುಃಖಶಮನೋ ದುಃಖಾಂತಸ್ತೇನ ರೋಚಸೇ ।
ಶಂಕರೋಽಸ್ಯಾಶು ಭಕ್ತಾನಾಂ ತೇನ ತ್ವಂ ಶಂಕರಃ ಸ್ಮೃತಃ ॥ ೭೩ ॥
ಛಿತ್ವಾ ಬ್ರಹ್ಮಶಿರೋ ಯಸ್ಮಾತ್ಕಪಾಲಂ ಚ ಬಿಭರ್ಷಿ ಚ ।
ತೇನ ದೇವ ಕಪಾಲೀ ತ್ವಂ ಸ್ತುತೋಹ್ಯಸಿ ಪ್ರಸೀದ ನಃ ॥ ೭೪ ॥

---

೬೯. ಆ ರುಂಡವನ್ನು ಹಾರಿಸುತ್ತ ನರ್ತನ ಮಾಡುತ್ತಿದ್ದ ಚಂದ್ರಶೇಖರನು, ಶಿಖರದಲ್ಲಿ ಸೂರ್ಯನನ್ನು ತಳೆದಿರುವ ಕೈಲಾಸ ಪರ್ವತದಂತೆ ಕಾಣುತ್ತಿದ್ದನು.

೭೦. ಇಂತು ಬ್ರಹ್ಮನ ತಲೆಯು ಕತ್ತರಿಸಲ್ಪಡಲು ಆನಂದದಿಂದ ಮೈಯುಬ್ಬಿದ ದೇವತೆಗಳೆಲ್ಲರೂ ದೇವದೇವನೂ ಬ್ರಹ್ಮಕಪಾಲಧಾರಿಯೂ ಆದ ಆ ದೇವೋತ್ತಮನನ್ನು ಅನೇಕ ವಿಧಗಳಾದ ಸ್ತೋತ್ರಗಳಿಂದ ಸ್ತುತಿಸಿದರು.

೭೧. ದೇವತೆಗಳು ಸ್ತುತಿಸುತ್ತಾರೆ:— ಕಪಾಲಧಾರಿಯೂ, ಮಹಾಕಾಲನೂ, ಶಂಖಮಾಲಾಧರನೂ, ಜ್ಞಾನೈಶ್ವರ್ಯಸಂಪನ್ನನೂ, ಭಕ್ತರಿಗೆ ಸಕಲ ಭೋಗಭಾಗ್ಯಗಳನ್ನು ಕೊಡುವವನೂ ಆದ ನಿನ್ನನ್ನು ನಮಸ್ಕರಿಸುವೆವು.

೭೨. ಜೀವರ ದಂಭವನ್ನು ನಾಶಮಾಡುವವನೂ ಸರ್ವದೇವತಾಮಯನೂ ಆದ ನಿನಗೆ ನಮಸ್ಕಾರವು. ಕಾಲನನ್ನೂ ಸಂಹಾರವನ್ನು ಮಾಡುವವನಾದುದರಿಂದ ನೀನು ಮಹಾಕಾಲನೆಂಬ ಹೆಸರನ್ನು ಪಡೆದಿರುವೆ.

೭೩. ಭಕ್ತರ ದುಃಖಗಳನ್ನು ನಾಶಮಾಡುವೆಯಾದುದರಿಂದ ದುಃಖಾಂತಕನೆಂದು ಕರೆಯಲ್ಪಡುವೆ. ಅವರಿಗೆ ಅನೇಕ ಸುಖಗಳನ್ನು ಒದಗಿಸುವುದರಿಂದ ಶಂಕರನೆಂಬ ಹೆಸರನ್ನು ತಳೆದಿರುವೆ.

೭೪. ಬ್ರಹ್ಮದೇವನ ತಲೆಯನ್ನು ಕತ್ತರಿಸಿ ಕಪಾಲವನ್ನು ಧರಿಸಿರುವೆಯಾದುದರಿಂದ ನೀನು ಕಪಾಲಿಯೆಂಬ ಹೆಸರಿನಿಂದಲೇ ಸ್ತುತಿಸಲ್ಪಡುತ್ತಿರುವೆ. ಓ ಸ್ವಾಮಿಯೆ! ಭಕ್ತರಾದ ನಮ್ಮಲ್ಲಿ ಪ್ರಸನ್ನನಾಗು.

ಏವಂ ಸ್ತುತಃ ಪ್ರಸನ್ನಾತ್ಮಾ ದೇವಾನುತ್ಥಾಪ್ಯ ಶಂಕರಃ ।
ಕೃಪಾನಿಧಿಃ ಸ ಭಗವಾಂಸ್ತತ್ರೈವಾಽಂತರಧೀಯತ ॥ ೭೫ ॥

ಶಶಿಶಕಲಮಯೂಖೈರ್ಭಾಸಿತಂ ಯತ್ಕಪರ್ದಂ
ದ್ರವತಿ ಗಗನ ಗಂಗಾತೋಯವೀಚೀ ವಿಚೇಯಂ ।
ಸಿತವಿಧೃತಕಪಾಲೋ ಮಾಲಯಾ ರುದ್ರಪಾರ್ಶ್ವೇ
ಸ ಜಯತಿ ಜಿತವೇಧಾ ಊರ್ಜಿತಃ ಪ್ರಾಜ್ಯತೇಜಾಃ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಬ್ರಹ್ಮಶಿರಶ್ಛೇದನ
ವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

೭೫. ಇಂತು ಸ್ತುತಿಸಿದ ಆ ದೇವತೆಗಳ ಸ್ತೋತ್ರವನ್ನು ಕೇಳಿ ಪ್ರಸನ್ನಾಂತಃಕರಣನೂ, ಕೃಪಾಸಮುದ್ರನೂ, ಷಡ್ಗುಣೈಶ್ವರ್ಯಭರಿತನೂ ಆದ ಶಂಕರನು ನಮಸ್ಕರಿಸುತ್ತಿದ್ದ ದೇವತೆಗಳನ್ನು ಮೇಲಕ್ಕೆಬ್ಬಿಸಿ ಅಲ್ಲಿಯೇ ಅಂತರ್ಹಿತನಾದನು.

೭೬. ಯಾವನ ಕಪರ್ದವೆಂಬ ಜಟಾಮಂಡಲದಲ್ಲಿ ಚಂದ್ರಮಂಡಲದ ಕಿರಣಗಳಿಂದ ಮಿನುಗುತ್ತಿರುವ ಆಕಾಶಗಂಗೆಯ ಜಲತರಂಗಗಳು ಮೆಲ್ಲಮೆಲ್ಲನೆ ಪ್ರವಹಿಸುತ್ತಿರುವುವೊ, ಯಾವನು ಶುಭ್ರವಾದ ಕಪಾಲವನ್ನು ತಳೆದಿರುವನೊ, ಮಾಲಾಲಂಕೃತನೊ, ಬ್ರಹ್ಮನನ್ನು ಜಯಿಸಿದ ಪರಾಕ್ರಮಿಯೊ, ದುಸ್ಸಹವಾದ ತೇಜಸ್ಸಂಪನ್ನನಾಗಿರುವನೊ, ಆ ನೀಲಲೋಹಿತನು ಮಹೇಶ್ವರನ ಪಾರ್ಶ್ವದಲ್ಲಿ ವಿರಾಜಿಸುತ್ತಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ
ಮಹಾತ್ಮ್ಯದಲ್ಲಿ "ಬ್ರಹ್ಮಶಿರಶ್ಛೇದನವರ್ಣನ"ವೆಂಬ
ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಬ್ರಹ್ಮಣಃ ಪ್ರಾಯಶ್ಚಿತ್ತವರ್ಣನಂ

ಸನತ್ಕುಮಾರ ಉವಾಚ :—

ಛಿನ್ನೇ ವಕ್ತ್ರೇ ತತೋ ಬ್ರಹ್ಮಾ ಕ್ರೋಧೇನ ತಮಸಾ ವೃತಃ ।
ಲಲಾಟೇ ಸ್ವೇದಮುತ್ಪನ್ನಂ ಗೃಹೀತ್ವಾಽತಾಡಯದ್ಭುವಿ ॥ ೧ ॥
ತತ್ಸ್ವೇದಾತ್ಕುಂಡಲೀ ಜಜ್ಞೇ ಸಧನುಃ ಸಮಹೇಷುಧಿಃ ।
ಸಹಸ್ರಕವಚೋ ವೀರಃ ಕಿಂ ಕರೋಮೀತ್ಯುವಾಚ ಹ ॥ ೨ ॥
ತಮುವಾಚ ವಿರಿಂಚಿಸ್ತು ದರ್ಶಯನ್ರುದ್ರಮೋಜಸಾ ।
ವಧ್ಯತಾಮೇಷ ದುರ್ಬುದ್ಧಿರ್ಜಾಯತೇ ನ ಯಥಾ ಪುನಃ ॥ ೩ ॥
ಬ್ರಹ್ಮಣೋ ವಚನಂ ಶ್ರುತ್ವಾ ಧನುರುದ್ಯಮ್ಯ ಪೃಷ್ಠತಃ ।
ಸ ಪ್ರತಸ್ಥೇ ಮಹೇಶಸ್ಯ ಬಾಣಹಸ್ತೋಽತಿರೋಷಭೃತ್ ॥ ೪ ॥
ಸ ದೃಷ್ಟ್ವಾ ಪುರುಷಂ ಚೋಗ್ರಮುಗಮುದ್ವಿಸ್ಮಿತೋ ಭವಃ ।
ದಿವ್ಯಬಾಣಧನುರ್ಹಸ್ತಂ ವೇಗವಿಕ್ರಾಂತಗಾಮಿನಂ ॥ ೫ ॥

---

## ಕನ್ನಡದ ಅನುವಾದ

### ಬ್ರಹ್ಮಕೃತ ಪ್ರಾಯಶ್ಚಿತ್ತವರ್ಣನ

೧. ಸನತ್ಕುಮಾರನು ಹೇಳುತ್ತಾನೆ:— ಇಂತು ತನ್ನ ತಲೆಯೊಂದು ಕತ್ತರಿಸಿಲ್ಪಡಲು ಬ್ರಹ್ಮನು ಕ್ರೋಧದಿಂದಲೂ ಪ್ರೌಢಿಯಿಂದಲೂ ಕೂಡಿದವನಾಗಿ ತನ್ನ ಹಣೆಯಲ್ಲಿ ಕಾಣಿಸಿದ ಬೆವರನ್ನು ಕೈಯಿಂದೊರಸಿ ನೆಲಕ್ಕೆ ಚಲ್ಲಿದನು.

೨. ಆ ಬೆವರಿನಿಂದ ಕುಂಡಲಧಾರಿಯೂ, ಬಾಣಬಿಲ್ಲುಗಳನ್ನು ಹಿಡಿದವನೂ, ಸಾವಿರಕವಚಗಳುಳ್ಳವನೂ ಆದ ವೀರನೊಬ್ಬನು ಹುಟ್ಟಿ "ನಿನಗಾಗಿ ಏನುಮಾಡಲಿ?" ಎಂದು ಕೇಳಿದನು.

೩. ಬ್ರಹ್ಮನು ಕೋಪದಿಂದ ಮಹೇಶ್ವರನನ್ನು ಅವನಿಗೆ ತೋರಿಸಿ "ಈ ದುರ್ಬುದ್ಧಿಯು ಮತ್ತೆ ಜನ್ಮವನ್ನು ತಾಳದಂತೆ ಇವನನ್ನು ಸಂಹರಿಸು" ಎಂಬುದಾಗಿ ಅಪ್ಪಣೆಮಾಡಿದನು.

೪. ಬ್ರಹ್ಮನ ಮಾತನ್ನು ಕೇಳಿ ಅವನು ಬಿಲ್ಲಿಗೆ ಹೆದೆಯೇರಿಸಿ ಬಾಣವನ್ನು ಕೈಯಲ್ಲಿ ಹಿಡಿದು ಅತಿರೋಷದಿಂದ ಮಹೇಶ್ವರನನ್ನು ಹಿಂಬಾಲಿಸಿ ಹೊರಡಲನುವಾದನು.

೫. ಭಯಂಕರನೂ, ದಿವ್ಯಧನುರ್ಬಾಣಗಳನ್ನು ಧರಿಸಿದವನೂ, ವೇಗವಾಗಿ ಭೂಮಿಯನ್ನಾಕ್ರಮಿಸಿ ನಡೆಯುತ್ತಿರುವವನೂ ಆದ ಅವನನ್ನು ಕಂಡು ಮಹಾದೇವನು ವಿಸ್ಮಯಾವಿಷ್ಟನಾದನು.

ಮಯಾ ನ ವಧ್ಯೋಽತಿಬಲಃ ಸಖಾ ವಿಷ್ಣೋರ್ಭವಿಷ್ಯತಿ ।
ಅನುಗ್ರಾಹ್ಯೋಽಹ್ಯಹಂ ತೇನ ಸಖ್ಯಾರ್ಥಂ ತಪಸಿ ಸ್ಥಿತಃ ॥ ೬ ॥
ಚಿಂತಯನ್ನಿತ್ಥಮೀಶೋಽಪಿ ವಿಷ್ಣೋರಾಶ್ರಮಮಭ್ಯಗಾತ್ ।
ಹುಂಕಾರಧ್ವನಿನಾ ಬ್ರಹ್ಮನ್ಮೋಹಯಿತ್ವಾ ತತೋ ನರಂ ॥ ೭ ॥
ಪ್ರಸಾತ್ಯ ಚ ತದಾ ಹೃಷ್ಟಃ ಕ್ರೀಡಾಂ ಕುರ್ವನ್ ಜಗತ್ಸ್ಥಿತೌ ।
ಯತ್ರ ನಾರಾಯಣಃ ಶ್ರೀಮಾಂಸ್ತಪಸ್ತೇಪೇ ಪ್ರತಾಪವಾನ್ ॥ ೮ ॥
ಅದೃಶ್ಯಃ ಸರ್ವಭೂತಾನಾಂ ವಿಶ್ವಾತ್ಮಾ ವಿಶ್ವಸೃಗ್ವಿಭುಃ ।
ತತ್ರ ಪ್ರಾಪ್ತೋ ವಿರೂಪಾಕ್ಷೋ ದದರ್ಶ ಮಧುಸೂದನಂ ॥ ೯ ॥
ಏಕಾಂಗುಷ್ಠಸ್ಥಿತಂ ಭೂಮೌ ತಪ್ಯೋಽತ್ಯಂತಮನಾತುರಂ ।
ಯುಗಾಂತಾರ್ಕಸಹಸ್ರಸ್ಯ ತೇಜಸಾವೃತಮದ್ಭುತಂ ॥ ೧೦ ॥
ಪುಣ್ಯಾಧಾರಸಮಾಯುಕ್ತಂ ಪುರಾಣಪುರುಷೋತ್ತಮಂ ।
ದೃಷ್ಟ್ವಾ ನಾರಾಯಣಂ ದೇವಂ ಭಿಕ್ಷಾಂ ದೇಹೀತ್ಯುವಾಚ ಹ ॥ ೧೧ ॥

---

೬. "ಅತ್ಯಂತಬಲಶಾಲಿಯಾದ ಇವನು ನನಗೆ ವಧ್ಯನಾಗಲಾರನು. ಇವನಿಗಾಗಿ ಮಹಾವಿಷ್ಣುವಿನ ಸ್ನೇಹಿತನೊಬ್ಬನವತರಿಸುವನು. ನಾನೂ ಆತನ ಅನುಗ್ರಹವನ್ನು ಪಡೆಯಬೇಕು. ಈ ಸಖ್ಯವನ್ನಪೇಕ್ಷಿಸಿಯೇ ಆತನು ಉಗ್ರವಾದ ತಪಸ್ಸನ್ನು ಮಾಡುತ್ತಿರುವನು."

೭. ಇಂತೆಂದು ಚಿಂತಿಸಿ ಮಹೇಶ್ವರನು ಹುಂಕಾರಮಾತ್ರದಿಂದಲೇ ಆ ನರನನ್ನು ಮೂರ್ಛೆಗೊಳಿಸಿ ಮಹಾವಿಷ್ಣುವು ತಪಸ್ಸನ್ನಾಚರಿಸುತ್ತಿದ್ದ ಆಶ್ರಮವನ್ನು ಸೇರಿದನು.

೮. ಬ್ರಹ್ಮಾಂಡವನ್ನು ಸ್ಥಿತಿಯ ಪ್ರವಾಹದಲ್ಲಿ ತಳ್ಳಿ ಆಟವಾಡುವವನಂತೆ ಪ್ರತಾಪಶಾಲಿಯಾದ ಆ ಮಹಾವಿಷ್ಣುವಾದರೊ, ಸಮಸ್ತತಪಃಸಾಮಗ್ರಿಗಳಿಂದೊಡಗೂಡಿ ತಪಸ್ಸನ್ನಾಚರಿಸುತ್ತಿದ್ದನು.

೯. ವಿಶ್ವಸ್ವರೂಪನೂ, ವಿಶ್ವಸೃಷ್ಟಿಕಾರಕನೂ, ಸರ್ವವ್ಯಾಪಿಯೂ ಆದ ನಾರಾಯಣನು ಸಕಲಪ್ರಾಣಿಗಳಿಗೂ ಅದೃಶ್ಯನಾಗಿದ್ದನು. ಅಲ್ಲಿಗೆ ಆ ತ್ರಿನೇತ್ರನು ಬಂದು ಆ ಮಧುಸೂದನನನ್ನು ನೋಡಿದನು.

೧೦. ಆಗಲಾತನು ಭೂಮಿಯಲ್ಲಿ ಒಂದು ಕಾಲಿನ ಹೆಬ್ಬೆರಳನ್ನು ಮಾತ್ರ ಆಧಾರವಾಗಿಟ್ಟು ನಿಂತು ಸಾವಧಾನಮನಸ್ಸಿನಿಂದ ತಪವಂಗೈಯುತ್ತ ಪ್ರಳಯಕಾಲದ ಸಹಸ್ರ ಸೂರ್ಯರ ತೇಜಸ್ಸಿನಿಂದ ಆವೃತನಾಗಿ ಅದ್ಭುತವಾಗಿ ಕಾಣುತ್ತಿದ್ದನು.

೧೧. ಸಕಲ ಪುಣ್ಯಗಳಿಗೂ ಆಧಾರಭೂತನಾಗಿ ಅನಾದಿಯೂ ಪುರುಷೋತ್ತಮನೂ ಆದ ಆ ಶ್ರೀಮನ್ನಾರಾಯಣನನ್ನು ಕಂಡು "ನನಗೆ ಭಿಕ್ಷೆಯನ್ನು ಕೊಡು" ಎಂದು ಕೇಳಿದನು.

ಕಪಾಲಂ ದರ್ಶಯಿತ್ವಾಗ್ರೇ ಜ್ವಲಜ್ಜ್ವಲನಸೋತ್ಕಟಂ ।
ಕಪಾಲಪಾಣಿಂ ಸಂಪ್ರೇಕ್ಷ್ಯ ರುದ್ರಂ ವಿಷ್ಣುರಚಿಂತಯತ್ ॥ ೧೨ ॥
ಕೋಽನ್ಯೋ ಯೋಗ್ಯೋ ಭವೇದ್ಭಿಕ್ಷುರ್ಭಿಕ್ಷಾದಾನಸ್ಯ ಸಾಂಪ್ರತಂ ।
ಯೋಗ್ಯೋಽಯಮಿತಿ ಸಂಕಲ್ಪ್ಯ ದಕ್ಷಿಣಂ ಭುಜಮರ್ಪಯತ್ ॥ ೧೩ ॥
ತಂ ಬಿಭೇದಾಂತರ್ಗತಜ್ಞಃ ಶೂಲೇನ ಶಶಿಶೇಖರಃ ।
ತತಃ ಪ್ರವಾಹ ಉತ್ಪನ್ನಃ ಶೋಣಿತಸ್ಯ ವಿಭೋರ್ಭುಜಾತ್ ॥ ೧೪ ॥
ಜಾಂಬೂನದರಸಾಕಾರಾ ವಹ್ನಿಜ್ವಾಲೇವ ನಿರ್ಮಲಾ ।
ನಿಷ್ಪಪಾತ ಕಪಾಲಾಂತೇ ಶಂಭುನಾ ಸಂಪ್ರತೀಚ್ಛಿತಾ ॥ ೧೫ ॥
ಋಜ್ವೀ ವೇಗವತೀ ಕ್ಷಿಪ್ರಾ ದೀಧಿತೀವಾಂಬರೇ ರವೇಃ ।
ಪಂಚಾಶದ್ಯೋಜನಾ ದೀರ್ಘಾ ವಿಸ್ತಾರೇ ದಶಯೋಜನಾ ॥ ೧೬ ॥
ದಿವ್ಯಂ ವರ್ಷಸಹಸ್ರಂ ಸಾ ಸಮುವಾಹ ಹರೇರ್ಭುಜಾತ್ ।
ಕಿಯಂತಂ ಕಾಲಮೀಶೋ ಹಿ ಭಿಕ್ಷಾಂ ಜಗ್ರಾಹ ಭಾವಿತಃ ॥ ೧೭ ॥

---

೧೨. ಆ ರುದ್ರನು ಉರಿಯುತ್ತಿರುವ ಬೆಂಕಿಯಂತೆ ಉಜ್ಜ್ವಲವಾಗಿದ್ದ ತನ್ನ ಕೈಯೊಳಗಿನ ಕಪಾಲವನ್ನು ತೋರಿಸಿದನು. ಇಂತು ರುದ್ರನು ಕಪಾಲಹಸ್ತನಾಗಿ ಬಂದುದನ್ನು ಕಂಡು ನಾರಾಯಣನು ಯೋಚಿಸತೊಡಗಿದನು.

೧೩. "ಈಗ ಭಿಕ್ಷೆಯನ್ನು ನೀಡುವೆನಾದರೆ ಈತನಿಗಿಂತ ಸತ್ಪಾತ್ರನು ಬೇರೊಬ್ಬನೆಲ್ಲಿ ದೊರಕುವನು? ಈತನೇ ದಾನವನ್ನು ಒಡಿಯಲು ಪರಮ ಯೋಗ್ಯನು." ಹೀಗೆಂದು ಚಿಂತಿಸಿ ವಿಷ್ಣುವು ಆತನಿಗೆ ತನ್ನ ಬಲಗೈಯನ್ನೇ ಭಿಕ್ಷೆಯಾಗಿ ಅರ್ಪಿಸಿದನು.

೧೪. ಆತನ ಅಂತರಂಗವನ್ನು ತಿಳಿದ ಚಂದ್ರಶೇಖರನು ಅದನ್ನು ತನ್ನ ತ್ರಿಶೂಲದಿಂದ ಕತ್ತರಿಸಿದನು. ಆಗ ಮಹಾವಿಷ್ಣುವಿನ ಭುಜದಿಂದ ರಕ್ತದ ಪ್ರವಾಹವು ಹೊರಚಿಮ್ಮಿತು.

೧೫. ಕರಗಿದ ಚಿನ್ನದಪ್ರವಾಹವನ್ನು ಹೋಲುವುದೂ, ಅಗ್ನಿಜ್ವಾಲೆಯಂತೆ ನಿರ್ಮಲವೂ ಆದ ಆ ರಕ್ತಧಾರೆಯನ್ನು ಅದಕ್ಕಾಗಿಯೇ ನಿರೀಕ್ಷಿಸುತ್ತಿದ್ದ ಮಹಾದೇವನು ತನ್ನ ಕೈಯೊಳಗಿನ ಕಪಾಲದಲ್ಲಿ ಹಿಡಿದನು.

೧೬. ಋಜವೂ, ವೇಗವುಳ್ಳದೂ, ಕಪಾಲದಲ್ಲಿ ಬೀಳುತ್ತಿರುವುದೂ ಆದ ಆ ಪ್ರವಾಹವು ಆಕಾಶದಲ್ಲಿ ಪಸರಿಸುವ ಸೂರ್ಯರಶ್ಮಿಯನ್ನು ಹೋಲುತ್ತ ಐವತ್ತು ಯೋಜನ ಉದ್ದವೂ ಹತ್ತುಯೋಜನ ಅಗಲವೂ ಉಳ್ಳದ್ದಾಗಿದ್ದಿತು.

೧೭. ಇಂತು ಪ್ರವಾಹವು ದೇವಮಾನದಲ್ಲಿ ಒಂದು ಸಾವಿರವರ್ಷಗಳ ಕಾಲದ ವರೆಗೂ ಶ್ರೀಹರಿಯ ಭುಜದಿಂದ ಹರಿಯಿತು. ಅಷ್ಟುಕಾಲವೂ ಪರಮೇಶ್ವರನು ಏಕಾಗ್ರಚಿತ್ತದಿಂದ ಆ ಭಿಕ್ಷೆಯನ್ನು ತನ್ನ ಕಪಾಲದಲ್ಲಿ ಸ್ವೀಕರಿಸಿದನು.

**ದತ್ತಾಂ ನಾರಾಯಣೇನಾಽಥ ಸತ್ಪಾತ್ರೇ ಪಾತ್ರ ಉತ್ತಮೇ ।**
**ತತೋ ನಾರಾಯಣಃ ಪ್ರಾಹ ಹರಂ ಪರಮಿದಂ ವಚಃ ॥ ೧೮ ॥**
**ಸಂಪೂರ್ಣಂ ತವ ಪಾತ್ರಂ ಹಿ ತತೋ ವೈ ಪರಮೇಶ್ವರಃ ।**
**ಸತೋಯಾಂಬುದನಿರ್ಘೋಷಂ ಶ್ರುತ್ವಾ ವಾಕ್ಯಂ ಹರೇರ್ಹರಃ ॥ ೧೯ ॥**
**ಶಶಿಸೂರ್ಯಾಽಗ್ನಿನಯನಃ ಶಶಿಶೇಖರಶೋಭಿತಃ ।**
**ಕಪಾಲೇ ದೃಷ್ಟಿಮಾವೇಶ್ಯ ತ್ರಿನೇತ್ರೈಶ್ಚ ಜನಾರ್ದನಂ ॥ ೨೦ ॥**
**ಅಂಗುಲ್ಯಾ ಘಟಯನ್ಪ್ರಾಹ ಕಪಾಲಂ ಚಾಽತಿಪೂರಿತಂ ।**
**ಶ್ರುತ್ವಾ ಹರಿರಿದಂ ವಾಕ್ಯಂ ರಕ್ತಧಾರಾಂ ಸಮಾಹರತ್ ॥ ೨೧ ॥**
**ಪಾರ್ಶ್ವತೋಽಥ ಹರೇರೀಶಃ ಸ್ವಾಂಗುಲ್ಯಾ ರುಧಿರಂ ತದಾ ।**
**ದಿವ್ಯಂ ವರ್ಷಸಹಸ್ರಂ ಚ ದೃಷ್ಟಿಪಾತಂ ಮಮಂಥ ವೈ ॥ ೨೨ ॥**
**ಮಥ್ಯಮಾನೇ ತತೋ ರಕ್ತೇ ಕಲಲಂ ಬುದ್ಬುದಂ ಕ್ರಮಾತ್ ।**
**ಬಭೂವ ಚ ತತಃ ಪಶ್ಚಾತ್ಕಿರೀಟೀ ಸ ಶರಾಸನಃ ॥ ೨೩ ॥**
**ಸಹಸ್ರಬಾಹೂ ರಕ್ತಾಕ್ಷೋ ಧನುರ್ಜ್ಯಾಂ ಸಂಸ್ಪೃಶನ್ಮುಹುಃ ।**
**ಬಭೂವ ತೂಣೀರಗಲೋ ವೃಷಸ್ಕಂಧೋಽಂಗುಲಿತ್ರವಾನ್ ॥ ೨೪ ॥**

---

೧೮. ನಾರಾಯಣನು ಸತ್ಪಾತ್ರನಾದ ಮಹಾದೇವನ ಕರಗತವಾದ ಉತ್ತಮಪಾತ್ರೆಯಲ್ಲಿ ದಾನಮಾಡಿದನು. ಬಳಿಕ ಮಹಾವಿಷ್ಣುವು ಪರಮೇಶ್ವರನನ್ನು ಕುರಿತು ಉತ್ತಮ ವಾಕ್ಯಗಳನ್ನಾಡಿದನು.

೧೯–೨೧. "ನಿನ್ನ ಕರಪಾತ್ರೆಯು ಸಂಪೂರ್ಣವಾಯಿತೆ?" ಎಂದು ಕೇಳಲು ಮಹಾದೇವನು ಕಾರ್ಗಾಲದ ಮೇಘ ಗರ್ಜನೆಯನ್ನು ಹೋಲುವ ಶ್ರೀಹರಿಯ ಆ ಮಾತುಗಳನ್ನು ಕೇಳಿದನು. ಬಳಿಕ ಸೂರ್ಯಚಂದ್ರಾಗ್ನಿನೇತ್ರನೂ, ಚಂದ್ರಶೇಖರನೂ ಆದ ಆತನು ತನ್ನ ತ್ರಿನೇತ್ರಗಳಿಂದ ಒಂದು ಸಲ ಕಪಾಲವನ್ನೂ ಒಂದು ಸಲ ಜನಾರ್ದನನ್ನೂ ನೋಡುತ್ತ ಕೈಬೆರಳನ್ನು ಕಪಾಲದಲ್ಲಿ ಆಡಿಸಿ "ಕಪಾಲವು ತುಂಬಿರುವುದು" ಎಂದು ಹೇಳಿದನು. ಈ ಮಾತನ್ನು ಕೇಳಿ ಶ್ರೀಹರಿಯು ರಕ್ತಧಾರೆಯನ್ನು ನಿಲ್ಲಿಸಿದನು.

೨೨. ಬಳಿಕ ಈಶ್ವರನು ನಾರಾಯಣನ ಪಾರ್ಶ್ವದಲ್ಲಿಯೇ ನಿಂತು ಕಪಾಲವನ್ನೇ ತೀಕ್ಷ್ಣದೃಷ್ಟಿಯಿಂದ ನೋಡುತ್ತ ತನ್ನ ಕೈಬೆರಳಿನಿಂದ ಒಂದುಸಾವಿರ ದಿವ್ಯ ವರ್ಷಗಳಕಾಲ ಆಲೋಡಿಸಿದನು.

೨೩–೨೪. ಇಂತು ಮಥಿಸಲ್ಪಟ್ಟ ಆ ರಕ್ತವು ಮೊದಲು ಕಲಲವೂ ಬಳಿಕ ಬುದ್ಬುದವೂ ಆಗಿ ಕ್ರಮವಾಗಿ ಅದರಿಂದ ಕಿರೀಟಧಾರಿಯೂ, ಬತ್ತಳಿಕೆಯನ್ನು ತಾಳಿದವನೂ, ಸಹಸ್ರಬಾಹುವೂ, ರಕ್ತನೇತ್ರನೂ, ಗಂಟಲಿನಲ್ಲಿ ತೂಣೀರವನ್ನು ಕಟ್ಟಿದವನೂ, ಗೂಳಿಯ ಹೆಗಲುಬ್ಬೆಗಳುಳ್ಳವನೂ, ಬೆರಳುಕವಚಗಳನ್ನು ತೊಟ್ಟ

ಪುರುಷೋಽರ್ಜುನಸಂಕಾಶಃ ಕಪಾಲೇ ಸಂಪ್ರಕಾಶಯನ್ ।
ತಂ ದೃಷ್ಟ್ವಾ ಭಗವಾನ್ವಿಷ್ಣುಃ ಪ್ರಾಹ ರುದ್ರಮಿದಂ ವಚಃ ॥ ೨೫ ॥
ಕಪಾಲೇ ಭಗವನ್ಕೋಽಯಂ ಪ್ರಾದುರ್ಭೂತೋಽಭವನ್ನರಃ ।
ಉಕ್ತಂ ಶ್ರುತ್ವಾ ಹರೇರೀಶಸ್ತಮುವಾಚ ಹರೇ ಶೃಣು ॥ ೨೬ ॥
ನರೋ ನಾಮೇತಿ ಪುರುಷಃ ಪರಮಾಸ್ತ್ರವಿದಾಂ ವರಃ ।
ಯಸ್ತ್ವಯೋಕ್ತೋ ನರ ಇತಿ ನರಸ್ತಸ್ಮಾದ್ಭವಿಷ್ಯತಿ ॥ ೨೭ ॥
ನರನಾರಾಯಣೌ ಚೋಭೌ ಯುಗೇ ಖ್ಯಾತೌ ಭವಿಷ್ಯತಃ ।
ಸಂಗ್ರಾಮೇ ದೇವಕಾರ್ಯೇಷು ಲೋಕಾನಾಂ ಪರಿಪಾಲನೇ ॥ ೨೮ ॥
ಏಷ ನಾರಾಯಣಸಖಾ ನರಸ್ತವ ಭವಿಷ್ಯತಿ ।
ತವ ಏಕಾಕಿನಃ ಸಂಖ್ಯೇ ತಪಸಶ್ಚ ಮಹಾಮುನಿಃ ॥ ೨೯ ॥
ವಿಜ್ಞಾನಸ್ಯ ಪರೀಕ್ಷಾಯೈ ತೇಜೋ ಲೋಕೇ ಭವಿಷ್ಯತಿ ।
ತೇಜೋಽಧಿಕಮಿದಂ ದಿವ್ಯಂ ಬ್ರಹ್ಮಣಃ ಪಂಚಮಂ ಶಿರಃ ॥ ೩೦ ॥

---

ವನೂ ಆದ ಪುರುಷನೊಬ್ಬನು ಹುಟ್ಟಿ ಅಡಿಗಡಿಗೂ ತನ್ನ ಬಿಲ್ಲಿನ ಹೆದೆಯನ್ನು ಸೆಳೆಯುತ್ತ ಎದ್ದು ಬಂದನು.

೨೫. ಆ ಪುರುಷನು ಶ್ವೇತವರ್ಣದಿಂದೊಪ್ಪುತ್ತ ಕಪಾಲವನ್ನು ಬೆಳಗುತ್ತಿದ್ದನು. ಅವನನ್ನು ಕಂಡು ಮಹಾವಿಷ್ಣುವು ರುದ್ರನಿಗೆ ಹೇಳಲುಪಕ್ರಮಿಸಿದನು.

೨೬. "ಓ ಮಹೇಶ! ನಿನ್ನ ಕಪಾಲದಲ್ಲಿ ಹುಟ್ಟಿಬಂದ ಈ ನರನಾರು?" ಇಂತೆಂದ ಹರಿಯ ಮಾತನ್ನು ಕೇಳಿ ಈಶ್ವರನು ಹೇಳಿದನು. "ಶ್ರೀಮನ್ನಾರಾಯಣನೆ! ಕೇಳು.

೨೭. ಈ ಪುರುಷನು ನರನೆಂಬ ಹೆಸರಿನಿಂದ ಪ್ರಖ್ಯಾತನಾಗಲಿ. ಇವನು ಸಕಲಾಸ್ತ್ರಗಳನ್ನು ತಿಳಿದಿರುವವರಲ್ಲಿ ಅಗ್ರೇಸರನು. ನೀನು ಇವನನ್ನು ನರನೆಂದು ಕರೆದಿರುವುದರಿಂದ ಇವನು ಆ ಹೆಸರಿನಿಂದಲೇ ಕರೆಯಲ್ಪಡುವನು.

೨೮. ಪ್ರತಿಯೊಂದು ಯುಗದಲ್ಲಿಯೂ ಯುದ್ಧಗಳಲ್ಲಾಗಲಿ, ದೇವತೆಗಳ ಕಾರ್ಯಗಳಲ್ಲಾಗಲಿ, ಲೋಕಗಳ ಪರಿಪಾಲನೆಯಲ್ಲಾಗಲಿ ನರನಾರಾಯಣರಾದ ನೀವಿಬ್ಬರೂ ಪ್ರಖ್ಯಾತಿಯನ್ನು ಪಡೆಯುವಿರಿ.

೨೯. ಎಲೈ ನಾರಾಯಣನೆ! ಈ ನರನು ನಿನಗೆ ಪರಮಮಿತ್ರನಾಗಿರುವನು. ಯುದ್ಧದಲ್ಲಿ ಏಕಾಕಿಯಾದ ನಿನಗೆ ಸಹಾಯನೂ ತಪಸ್ಸಿನಲ್ಲಿ ನಿನ್ನೊಡನಿರುವ ಮಹಾಮುನಿಯೂ ಆಗಿರುವನು.

೩೦. ಈತನ ತೇಜಸ್ಸು ಲೋಗರ ಜ್ಞಾನಪರೀಕ್ಷೆಯನ್ನು ಮಾಡಲನುವಾಗುವುದು. ಬ್ರಹ್ಮನ ಈ ಐದನೆಯ ತಲೆಯು ದಿವ್ಯವೂ ಅತ್ಯಂತ ತೇಜಸ್ಸಂಪನ್ನವೂ ಆಗಿರುವುದು.

ತೇಜಸಾ ಬ್ರಹ್ಮಣೋ ದೀಪ್ತೋ ಭುಜಸ್ಯ ತವ ಶೋಣಿತಾತ್ ।
ಮಮ ದೃಷ್ಟಿನಿಪಾತಾಚ್ಚ ತ್ರೀಣಿ ತೇಜಾಂಸಿ ಯಾನ್ಯತಃ ॥ ೩೧ ॥
ತತ್ಸಂಯೋಗಾತ್ಸಮುತ್ಪನ್ನಃ ಶತ್ರೂನುದ್ವೇಜಯಿಷ್ಯತಿ ।
ಅವಧ್ಯಾಯೇ ಭವಿಷ್ಯಂತಿ ದುರ್ಜಯಾಸ್ತವ ಚಾಽಪರೇ ॥ ೩೨ ॥
ಶಕ್ರಸ್ಯ ಚಾಮರಾರೀಣಾಂ ತೇಷಾಮೇವ ಭಯಂಕರಃ ।
ಏವಮುಕ್ತವತಃ ಶಂಭೋರ್ವಿಸ್ಮಿತಸ್ತಸ್ಯ ತೇಜಸಾ ॥ ೩೩ ॥
ನರೋಽಪಿ ಚ ಸ ತತ್ರೈವ ತುಷ್ಟಾವ ಹರಿಕೇಶವೌ ।
ನಮೋ ಹರ ಹರೇತುಭ್ಯಂ ನಮಃ ಶಂಕರ ವಿಷ್ಣವೇ ॥ ೩೪ ॥
ನಮಸ್ತೇ ಶೂಲಹಸ್ತಾಯ ನಮಸ್ತೇ ಖಡ್ಗಪಾಣಯೇ ।
ನಮೋ ನಮಸ್ತೇ ಮೇಧ್ಯಾಯ ಹೃಷೀಕೇಶ ನಮೋಽಸ್ತುತೇ ॥ ೩೫ ॥
ನಮೋಽಸ್ತು ವಾಚಾಂ ಪತಯೇ ಶ್ರೀಧರಾಯ ನಮೋನಮಃ ।
ಏವಂ ಸ್ತುವಂತಂ ತಂ ಭಕ್ತ್ಯಾ ಕೃತಾಂಜಲಿಪುಟಂ ನರಂ ॥ ೩೬ ॥
ತಥೈವಾಂಜಲಿಸಂಬದ್ಧಂ ಗೃಹೀತ್ವಾಶು ಕರದ್ವಯಂ ।
ಉದ್ಧೃತ್ಯಾಥ ಕಪಾಲಾತ್ತು ಪುನರ್ವಚನಮಬ್ರವೀತ್ ॥ ೩೭ ॥

---

೩೧. ಈ ಪುರುಷನು ಬ್ರಹ್ಮನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವನು. ನಿನ್ನ ಭುಜದ ರಕ್ತದಿಂದ ಹುಟ್ಟಿರುವನು. ನನ್ನ ತ್ರಿನೇತ್ರಗಳ ದೃಷ್ಟಿಯಿಂದಕೂಡಿ ಬೆಳೆದಿರುವನು. ಆದುದರಿಂದ ಇವನಲ್ಲಿ ನಮ್ಮ ಮೂವರ ತೇಜಸ್ಸುಗಳೂ ಅಡಗಿವೆ.

೩೨–೩೩. ಅವುಗಳ ಸಂಯೋಗದಿಂದ ಉತ್ಪನ್ನನಾದ ಇವನು ಸಮಸ್ತ ಶತ್ರುಗಳನ್ನೂ ನಾಶಮಾಡುವನು. ನಿನಗೆ ಯಾರು ಅವಧ್ಯರೂ ಅಜೇಯರೂ ಆಗಿರುವರೊ, ಇಂದ್ರನಿಗೂ ದೇವತೆಗಳಿಗೂ ಯಾರು ಶತ್ರುಗಳಾಗಿರುವರೊ, ಅವರಿಗೆಲ್ಲ ಇವನು ಭಯಂಕರನಾಗುವನು.'' ಇಂತೆಂದ ಮಹೇಶ್ವರನ ಮಾತುಗಳನ್ನು ಕೇಳಿ ವಿಷ್ಣುವು ಅವನ ತೇಜಸ್ಸಿಗೆ ಬೆರಗಾಗಿದ್ದನು.

೩೪. ಆಗ ಆ ನರನು ಹರಿಹರನನ್ನು ಬಹುವಿಧವಾಗಿ ಸ್ತೋತ್ರಗೈದನು. ''ಹರನೆ! ಶ್ರೀಹರಿಯೆ! ನಿಮಗೆ ನಮಸ್ಕಾರವು. ಶಂಕರನೆ! ಮಹಾವಿಷ್ಣುವೆ! ನಿಮ್ಮನ್ನು ವಂದಿಸುವೆನು.

೩೫. ಶೂಲಹಸ್ತನಾದ ಮಹೇಶ್ವರನೇ, ಖಡ್ಗಪಾಣಿಯಾದ ಎಲೈ ಮಹಾವಿಷ್ಣುವೇ! ನಿಮಗೀರ್ವರಿಗೂ ನಮೋನಮಃ. ಯಜ್ಞಸ್ವರೂಪನಾದ ನಿನಗೆ ಮಣಿಯುವೆನು. ಇಂದ್ರಿಯನಿಯಾಮಕನಾದ ನಾರಾಯಣನಿಗೆ ನಮಸ್ಕಾರವು.

೩೬–೩೭. ವಾಕ್ಪ್ರವೃತ್ತಿಗೊಡೆಯನಾದ ಹರನಿಗೂ ಲಕ್ಷ್ಮೀಪತಿಯಾದ ನಾರಾಯಣನಿಗೂ ನಮಸ್ಕಾರವು.'' ಇಂತು ಭಕ್ತಿಭರಿತನಾಗಿ ಕೈಗಳನ್ನು ಮುಗಿದುಕೊಂಡು ನಮ್ರನಾಗಿ ನಿಂತಿದ್ದ ನರನ ಎರಡು ಕೈಗಳನ್ನೂ ಪ್ರೀತಿಯಿಂದ ಹಿಡಿದು ತಲೆಯನ್ನು ಹಿಡಿದೆತ್ತಿ ಮಹೇಶ್ವರನು ಮತ್ತೆ ಹೇಳತೊಡಗಿದನು.

ಯ ಏಷ ಪುರುಷೋ ರೌದ್ರೋ ಬ್ರಹ್ಮಣಃ ಸ್ವೇದಸಂಭವಃ ।
ಮಮ ಹುಂಕಾರಶಬ್ದೇನ ಮೋಹನಿದ್ರಾಮುಪಾಗತಃ ॥ ೩೮ ॥
ನಿಬೋಧ ತಂ ಚ ತ್ವರಿತಮಿತ್ಯುಕ್ತ್ವಾಽಂತರ್ಹಿತೋ ನರಃ ।
ನಾರಾಯಣಸ್ಯ ಪ್ರತ್ಯಕ್ಷಂ ಬೋಧಯಿತ್ವಾ ದ್ರುತಂ ಹಿ ತಂ ॥ ೩೯ ॥
ವಾಮಪಾದೇನ ಹತ್ವಾ ಚ ಸಮುತ್ತಸ್ಥೌ ನರೋ ರುಷಾ ।
ತಯೋರ್ಯುದ್ಧಂ ಸಮಭವತ್ಸ್ವೇದರಕ್ತಜಯೋರ್ಮಹತ್ ॥ ೪೦ ॥
ವಿಸ್ಫಾರಿತಧನುಃ ಶಬ್ದೈರ್ನಾದಿತಾಽಶೇಷಭೂತಲಂ ।
ಕವಚಂ ಸ್ವೇದಜಸ್ಯೈಕಂ ರಕ್ತಜಸ್ಯ ತಥಾ ಭುಜೌ ॥ ೪೧ ॥
ಏವಂ ಸಮೇನ ವೈ ಯುದ್ಧಂ ದಿವ್ಯಂ ಜಾತಂ ತು ಭೂತಲೇ ।
ತ್ರಿವರ್ಷೋನಾನಿ ವರ್ಷಾಣಾಂ ಶತಾನಿ ದಶಸು ದ್ವಿಜ ॥ ೪೨ ॥
ಯುದ್ಧ್ಯತೋಃ ಸಮತೀತಾನಿ ಸ್ವೇದರಕ್ತಜಯೋರ್ಮನೇ ।
ರಕ್ತಜೋ ದ್ವಿಭುಜೋ ದೃಷ್ಟ್ವಾ ಕವಚ್ಯೈಕೇನ ಸ್ವೇದಜಂ ॥ ೪೩ ॥
ಬಿಭೇದ ಬಾಣವೇಗೇನ ಬ್ರಹ್ಮಣಸ್ತಂ ನರಂ ಪರಂ ।
ಸ ಸಂಭ್ರಮಮುವಾಚೇದಂ ಬ್ರಹ್ಮಾಣಂ ಮಧುಸೂದನಃ ॥ ೪೪ ॥

---

೩೮. ಬ್ರಹ್ಮನ ಬೆವರಿನಿಂದ ಉದ್ಭವಿಸಿದ ಭಯಂಕರನಾದ ಈ ಪುರುಷನು ನನ್ನ ಹುಂಕಾರದಿಂದ ಮೂರ್ಛೆಗೊಂಡು ಬಿದ್ದಿರುವನು.

೩೯–೪೦. ಅವನನ್ನು ಬೇಗ ಎಚ್ಚರಗೊಳಿಸು" ಎಂಬುದಾಗಿ ಹೇಳಿ ಪರಮೇಶ್ವರನು ಅಂತರ್ಹಿತನಾದನು. ಬಳಿಕ ನರನು, ನಾರಾಯಣನು ನೋಡುತ್ತಿದ್ದಂತೆಯೇ ಆ ಪುರುಷನನ್ನು ಎಬ್ಬಿಸುತ್ತ ತನ್ನ ಎಡಗಾಲಿನಿಂದೊದೆದನು. ಆ ಪುರುಷನೂ ಅತ್ಯಂತವಾಗಿ ಕೋಪಗೊಂಡು ಮೇಲಕ್ಕೆದ್ದನು. ಬಳಿಕ ಬ್ರಹ್ಮನ ಬೆವರಿನಿಂದುದಿಸಿದ ಪುರುಷನಿಗೂ ವಿಷ್ಣುವಿನ ರಕ್ತದಿಂದ ಹುಟ್ಟಿದ ನರನಿಗೂ ಭಯಂಕರವಾದ ಯುದ್ಧವುಪಕ್ರಮಿಸಿತು.

೪೧. ಅವರು ಮಾಡಿದ ಧನುಷ್ಟಂಕಾರದ ಧ್ವನಿಯಿಂದ ಸಕಲ ಭೂಮಂಡಲವೂ ನಾದಿತವಾಯಿತು. ಬ್ರಹ್ಮಸುತನಿಗೆ ಒಂದೇ ಕವಚವೂ, ವಿಷ್ಣುಪುತ್ರನಿಗೆ ಎರಡು ಭುಜಗಳೂ ಇದ್ದುವು.

೪೨–೪೪. ಇಂತು ಇಬ್ಬರಿಗೂ ಸಮಾನವಾದ ಯುದ್ಧವು ಅದ್ಭುತವಾಗಿ ನಡೆಯಿತು. ಎಲೈ ಬ್ರಾಹ್ಮಣೋತ್ತಮನೆ! ಇಂತು ಮೂರು ವರ್ಷಗಳು ಕಡಿಮೆಯಾಗಿ ಒಂದು ಸಾವಿರ ವರ್ಷಗಳು ಆ ಇಬ್ಬರ ಮಹಾಯುದ್ಧದಲ್ಲಿ ಕಳೆದುಹೋದುವು. ದ್ವಿಬಾಹುವಾದ ನರನು ಏಕಕವಚಧಾರಿಯಾಗಿದ್ದ ಬ್ರಹ್ಮಪುತ್ರನನ್ನು ಕಂಡನು. ಆ ಪುರುಷನಾದರೊ ಆ ನರನನ್ನು ತನ್ನ ಬಾಣವೇಗದಿಂದ ಬಹುವಾಗಿ ವ್ಯಥೆಗೊಳಿಸಿದನು. ಆಗ ನಾರಾಯಣನು ಬ್ರಹ್ಮನನ್ನು ಕುರಿತು ಸಂಭ್ರಮದಿಂದ ಇಂತೆಂದನು.

ಮನ್ನರೇಣೋಚ್ಛ್ರಿತೋ ಬ್ರಹ್ಮಂಸ್ತ್ವದೀಯೋ ವಿನಿಪಾತಿತಃ ।
ಶ್ರುತ್ವಾ ತದಾಕುಲೋ ಬ್ರಹ್ಮಾ ಬಭಾಷೇ ಮಧುಸೂದನಂ ॥ ೪೫ ॥
ಹರೇಽನ್ಯಜನ್ಮನಿ ನರೋ ಮದೀಯೋ ಯದಿ ಹೀಯತೇ ।
ತೇನ ತುಷ್ಟೇನ ಸಂಪ್ರೋಕ್ತಂ ಹರಿಣೈವಂ ಭವಿಷ್ಯತಿ ॥ ೪೬ ॥
ಕೃತ್ವಾ ತಯೋ ರಣಮಪಿ ನಿವಾರ್ಯ ತಾವುವಾಚಹ ।
ಅಥಾಽನ್ಯಜನ್ಮನಿ ನರೋ ಮದೀಯೋ ಭವಿತಾ ಕಲೌ ॥ ೪೭ ॥
ತತೋ ಮಹಾರಣೇ ಜಾತೇ ತತ್ರಾಽಹಂ ಯೋ ಜಯಾಮಿ ತಂ ।
ವಿಷ್ಣುನಾಥ ಸಮಾಹೂಯ ಮಹೇಶ್ವರಸುರೇಶ್ವರೌ ।
ಉಕ್ತಾವಿಮೌ ನರೌ ರುದ್ರೌ ಪಾಲನೀಯೌ ಸ್ವಶಕ್ತಿತಃ ॥ ೪೮ ॥
ಸ್ವೇದಜಾತಾಸೃಗ್ಜಾತೌ ತು ಸ್ವಕೀಯಾಂಶೌ ಧರಾತಲೇ ।
ಸ್ವಾಂಶಭೂತೌ ದ್ವಾಪರಾಂತೇ ನಿಯೋಜ್ಯೌ ಭೂತಲೇ ತ್ವಯಾ ॥ ೪೯ ॥
ತತೋಽಬ್ರವೀತ್ತದಾ ವಿಷ್ಣುಂ ಸುರೇಶೋ ದುಃಖಿತಂ ವಚಃ ॥ ೫೦ ॥

---

೪೫. "ಅಯ್ಯಾ ಬ್ರಹ್ಮನೆ! ನನ್ನ ನರನು ಮಹಾಬಲಿಷ್ಠನಾದ ನಿನ್ನ ದೂತ ನನ್ನು ಹೊಡೆದು ಕೆಡಹಿದನಲ್ಲವೆ." ಇದನ್ನು ಕೇಳಿ ಬ್ರಹ್ಮನು ವ್ಯಾಕುಲಿತ ಮಾನಸನಾಗಿ ವಿಷ್ಣುವಿಗೆ ಹೇಳಿದನು.

೪೬. "ಶ್ರೀಹರಿಯೆ! ಈಗ ನನ್ನ ಪುತ್ರನು ಮೃತನಾದರೆ ಮತ್ತೊಂದು ಜನ್ಮದಲ್ಲಿಯಾದರೂ ನಿನ್ನವನಾಗಲಿ." ಆಗ ಸಂತುಷ್ಟನಾದ ಹರಿಯು ಹಾಗೆಯೇ ಆಗಲೆಂದು ವಚನವನ್ನಿತ್ತನು.

೪೭. ಬಳಿಕ ಯುದ್ಧಮಾಡುತ್ತಿದ್ದ ಇಬ್ಬರನ್ನೂ ತಡೆದು ವಿಷ್ಣುವು ಅವರನ್ನು ಕುರಿತು, "ಕಲಿಯುಗವುಂಟಾಗುವ ಸಮಯದಲ್ಲಿ ಮತ್ತೊಂದು ಜನ್ಮವನ್ನು ತಳೆದು ನರನು ನನ್ನವನಾಗುವನು," ಎಂದು ಹೇಳಿದನು.

೪೮. "ಆಗ ಮಹಾಯುದ್ಧವು ಸಂಭವಿಸುವುದು. ಅದರಲ್ಲಿ ಅವನನ್ನು ಅಸಕ್ತನನ್ನಾಗಿ ಮಾಡುವೆನು" ಎಂದು ಮಹಾವಿಷ್ಣುವು ಈಶ್ವರನನ್ನೂ, ಮಹೇಂದ್ರನನ್ನೂ ಕರೆದು ಅವರಿಗೆ ಹೇಳಿದನು. "ಭಯಂಕರರಾದ ಈ ಇಬ್ಬರು ನರರನ್ನೂ ನಿಮ್ಮ ಸರ್ವಶಕ್ತಿಯಿಂದಲೂ ಪಾಲಿಸಿರಿ."

೪೯. "ನಮ್ಮಿಬ್ಬರ ಸ್ವೇದ ಮತ್ತು ರಕ್ತಗಳಿಂದ ಹುಟ್ಟಿರುವ ಇವರು ನಮ್ಮ ಅಂಶಗಳಿಂದೊಡಗೂಡಿರುವರು. ಎಲೈ ಇಂದ್ರನೆ! ಇವರು ನಿನ್ನ ಅಂಶ ದಿಂದಲೂ ಕೂಡಿದವರಾಗಿ ದ್ವಾಪರಯುಗದ ಅಂತ್ಯಭಾಗದಲ್ಲಿ ಭೂಲೋಕಕ್ಕೆ ತಮ್ಮ ಕಾರ್ಯಕ್ಕಾಗಿ ತೆರಳಲಿ."

೫೦. ಆಗ ಮಹೇಂದ್ರನು ವಿಷ್ಣುವನ್ನು ಕುರಿತು ಅತ್ಯಂತ ದುಃಖದಿಂದ ಈ ಮಾತುಗಳನ್ನಾಡಿದನು.

ಅಸ್ಮಿನ್ಮನ್ವಂತರೇ ದೇವ ತ್ರೇತಾಯುಗಂ ತದಾ ಯದಾ ।
ತ್ವದ್ರೂಪೇಣೇಹ ಮಹತಾ ಸೂರ್ಯಪುತ್ರಹಿತಾರ್ಥಿನಾ ।
ವಾಲೀ ನಾಮ ಮಹಾಬಾಹುಃ ಸುಗ್ರೀವಾರ್ಥೇ ನಿಪಾತಿತಃ ॥ ೫೧ ॥
ತೇನ ದುಃಖೇನ ತಪ್ತೋಽಹಂ ನಾಽಹಂ ಗೃಹ್ಣಾಮಿ ತೇ ನರಂ ।
ಅಗೃಹ್ಣಮಾನಂ ದೇವೇಶಂ ಕಾರಣಾಂತರವಾದಿನಂ ॥ ೫೨ ॥
ವಿಷ್ಣುಃ ಪ್ರೋವಾಚ ಮಘವನ್ಭವ್ಯೋ ಭಾರಾಽವತಾರಣೇ ।
ಅವತಾರಂ ಕರಿಷ್ಯಾಮಿ ಮರ್ತ್ಯಲೋಕೇಽಪ್ಯಹಂ ವಿಭೋ ॥ ೫೩ ॥
ತತೋ ಹೃಷ್ಟೋಽಭವಚ್ಛಕ್ರೋ ವಿಷ್ಣುವಾಕ್ಯೇನ ತೇನ ವೈ ।
ಪ್ರತಿಗೃಹ್ಯ ನರಂ ಹೃಷ್ಟಃ ಸತ್ಯಮಸ್ತು ವಚಸ್ತವ ॥ ೫೪ ॥
ಇತ್ಯುಕ್ತ್ವಾ ತು ರವೀಂದ್ರೌ ಸ ಪ್ರೇಷಯಿತ್ವಾ ಚ ತೌ ಪುನಃ ।
ಗತ್ವಾ ಚ ಪುಂಡರೀಕಾಕ್ಷೋ ಬ್ರಹ್ಮಾಣಂ ಬ್ರಹ್ಮವೇಶ್ಮನಿ ॥ ೫೫ ॥
ಕೃತಂ ಜುಗುಪ್ಸಿತಂ ಕರ್ಮ ಬ್ರಹ್ಮನ್ನೀಶಂ ಜಿಘಾಂಸತಾ ।
ಯತ್ತ್ವಯಾ ದೇವದೇವೇಶ ಪುಮಾನ್ಕೋಪೇನ ಭಾಷಿತಃ ॥ ೫೬ ॥
ಶುದ್ಧ್ಯರ್ಥಮಸ್ಯ ಪಾಪಸ್ಯ ಪ್ರಾಯಶ್ಚಿತ್ತಂ ಪರಂ ಕುರು ।
ಗೃಹ್ಣನ್ವಹ್ನಿತ್ರಯಂ ಬ್ರಹ್ಮನ್ನಗ್ನಿಹೋತ್ರಮುಪಾಸ್ವಹ ॥ ೫೭ ॥

---

೫೧. "ದೇವದೇವನೆ! ಇದೇ ಮನ್ವಂತರದಲ್ಲಿಯೇ ತ್ರೇತಾಯುಗದಲ್ಲಿ ನೀನು ಅವತಾರವನ್ನೆತ್ತಿ ಸೂರ್ಯಪುತ್ರನಾದ ಸುಗ್ರೀವನಿಗೆ ಹಿತವನ್ನು ಮಾಡುವುದಕ್ಕಾಗಿ ನನ್ನ ಪುತ್ರನಾದ ವಾಲಿಯೆಂಬ ಮಹಾಪರಾಕ್ರಮಿಯನ್ನು ನಿಗ್ರಹಿಸಿದೆಯಲ್ಲವೆ.

೫೨–೫೩. ಆ ದುಃಖವು ಇನ್ನೂ ನನ್ನನ್ನು ಸುಡುತ್ತಿರುವುದು. ಆದುದರಿಂದ ನಿನ್ನ ನರನನ್ನು ನಾನು ಸ್ವೀಕರಿಸುವುದಿಲ್ಲ." ಇಂತು ಕಾರಣಾಂತರವನ್ನು ಹೇಳಿ ನರನನ್ನು ಸ್ವೀಕರಿಸದಿರುವ ದೇವೇಶ್ವರನನ್ನು ಕಂಡು ವಿಷ್ಣುವು ಹೇಳಿದನು. "ಅಯ್ಯಾ ದೇವೇಂದ್ರನೆ! ನಾನು ಭೂಮಿಯ ಭಾರವನ್ನು ಇಳುಹುವುದಕ್ಕಾಗಿ ಪುನಃ ಮರ್ತ್ಯಲೋಕದಲ್ಲಿ ಅವತಾರವನ್ನು ಮಾಡುವೆನಷ್ಟೆ."

೫೪. ಆಗ ಈ ವಿಷ್ಣುವಾಕ್ಯವನ್ನು ಕೇಳಿ ಶಕ್ರನು ಸಂತುಷ್ಟನಾಗಿ "ನಿನ್ನ ಮಾತು ಸತ್ಯವಾಗಲಿ" ಎಂದು ಹೇಳಿ ಆ ನರನನ್ನು ಪ್ರತಿಗ್ರಹಿಸಿದನು.

೫೫–೫೬. ಇಂತೆಂದು ಸೂರ್ಯನನ್ನೂ ದೇವೇಂದ್ರನನ್ನೂ ಕಳುಹಿಸಿ ಕೊಟ್ಟು ಪುಂಡರೀಕಾಕ್ಷನು ಬ್ರಹ್ಮನ ಅರಮನೆಗೆ ಹೋಗಿ, ಆತನನ್ನು ಕುರಿತು ಹೇಳಿದನು. "ಬ್ರಹ್ಮದೇವ! ಈಶ್ವರನನ್ನು ಕೊಲ್ಲಲೆಳಸಿದ ನೀನು ಅತ್ಯಂತ ನೀಚವಾದ ಕೆಲಸವನ್ನು ಮಾಡಿರುವೆ. ಅಲ್ಲದೆ ದೇವಾಧಿಪತಿಯಾಗಿದ್ದರೂ ನೀನು ಪರಮಪುರುಷನಾದ ಆತನನ್ನು ಕೋಪದಿಂದ ಮಾತನಾಡಿಸಿರುವೆ.

೫೭. ಈ ಪಾಪದಿಂದ ಪರಿಶುದ್ಧನಾಗಲು ನೀನು ಉಗ್ರವಾದ ಪ್ರಾಯಶ್ಚಿತ್ತವನ್ನು ಮಾಡಬೇಕು. ಮೂರು ಅಗ್ನಿಗಳನ್ನೂ ಆಧಾನಮಾಡಿಕೊಂಡು ಅಗ್ನಿಹೋತ್ರವನ್ನು ಉಪಾಸನೆಮಾಡು.

ಏಕೋ ವೈ ಗಾರ್ಹಪತ್ಯೋಽಸ್ತು ದ್ವಿತೀಯಾಹವನೀಯಕಃ ।
ದಕ್ಷಿಣಾಗ್ನಿ ಸ್ತೃತೀಯಸ್ತು ತ್ರಿಕುಂಡೇಷು ಪ್ರಕಲ್ಪಯ ॥ ೫೮ ॥
ವರ್ತುಲೇ ತರ್ಪಯಾತ್ಮಾನಂ ಮಾಮಥೋ ಧನುಷಾಕೃತೌ ।
ಚತುಷ್ಕೋಣೇ ಹರಂ ದೇವಮೃಗ್ಯಜುಃಸಾಮನಾಮಭಿಃ ॥ ೫೯ ॥
ಹುತ್ವಾತ್ವಗ್ನಿಂ ಚ ತಪಸಾ ಹರಮೇವಾಽರ್ಚ್ಯ ತತ್ಕ್ಷಣಾತ್ ।
ದಿವ್ಯಂ ವರ್ಷಸಹಸ್ರಂ ತು ಹುತ್ವಾಽಗ್ನಿಂ ಸಿದ್ಧಿಮಾಪ್ಸ್ಯಸಿ ॥ ೬೦ ॥
ಪ್ರಾಯಶ್ಚಿತ್ತವಿಶುದ್ಧಾತ್ಮಾ ಪ್ರತಿಪದ್ಯ ಮಹೇಶ್ವರಂ ।
ತತೋ ನಿಷ್ಕಲ್ಮಷೋ ಭೂತ್ವಾ ವಿಷಾದಸ್ತೇ ಗಮಿಷ್ಯತಿ ॥ ೬೧ ॥

ಇತ್ಯೇವಮುಕ್ತ್ವಾ ಹರಿರುಗ್ರತೇಜಾ
ಗತಃ ಸ್ವಕೀಯಂ ನಿಲಯಂ ಮಹಾತ್ಮಾ ।
ಬ್ರಹ್ಮಾಽಪಿ ಚಿತ್ತಂ ತಪಸೇ ನಿಧಾಯ
ಸಮಾದಧೇ ಸರ್ವಮಥಾಽಚ್ಯುತೋಕ್ತಂ ॥ ೬೨ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಬ್ರಹ್ಮಣಃ ಪ್ರಾಯಶ್ಚಿತ್ತವರ್ಣನಂ" ನಾಮ ತೃತೀಯೋಽಧ್ಯಾಯಃ**

---

೫೮. ಮೊದಲನೆಯದು ಗಾರ್ಹಪತ್ಯವು. ಎರಡನೆಯದು ಆಹವನೀಯವು. ಮೂರನೆಯದೇ ದಕ್ಷಿಣಾಗ್ನಿಯು. ಇವು ಮೂರು ಅಗ್ನಿಗಳನ್ನೂ ಬೇರೆ ಬೇರೆ ಕುಂಡಗಳಲ್ಲಿ ಸಂಧಾನಮಾಡು.

೫೯–೬೦. ಋಗ್ವೇದ, ಯಜುರ್ವೇದ, ಸಾಮವೇದಗಳಿಂದ ಮಂತ್ರಗಳನ್ನು ಉಚ್ಚರಿಸುತ್ತ ವರ್ತುಲಾಕಾರವಾದ ಕುಂಡದಲ್ಲಿ ನಿನಗೂ, ಧನುರಾಕಾರದಲ್ಲಿ ನನಗೂ, ಚತುಷ್ಕೋಣಾಕಾರವಾದ ಕುಂಡದಲ್ಲಿ ಮಹೇಶ್ವರನಿಗೂ ಆಹುತಿಗಳನ್ನು ಕೊಡು. ಇಂತು ಈ ಕ್ಷಣದಲ್ಲಿಯೇ ಅಗ್ನಿಗಳನ್ನು ಬೆಳಗಿಸಿ ತಪಸ್ಸನ್ನು ಮಾಡುತ್ತ ಮಹೇಶ್ವರನನ್ನೇ ಪೂಜಿಸುತ್ತಿರು. ಇಂತು ಒಂದು ಸಾವಿರ ದಿವ್ಯ ವರ್ಷಗಳ ಕಾಲ ಅಗ್ನಿಹೋತ್ರವನ್ನು ಮಾಡಲು ತಪಸ್ಸಿದ್ಧಿಯನ್ನು ಪಡೆಯುವೆ.

೬೧. ಪ್ರಾಯಶ್ಚಿತ್ತದಿಂದ ಪರಿಶುದ್ಧಾಂತರಂಗನಾಗಿ ಮಹೇಶ್ವರನನ್ನು ಹೊಂದುವೆ. ಆಗ ನಿನ್ನ ಪಾತಕವು ನೀಗಿ ನಿನಗೆ ದುಃಖವಿಲ್ಲದಂತಾಗುವುದು."

೬೨. ಇಂತೆಂದು ಮಹಾತೇಜಸ್ವಿಯಾದ ಶ್ರೀಹರಿಯು ಹೇಳಿ ತನ್ನ ಸ್ಥಾನಕ್ಕೆ ಹೊರಟುಹೋದನು. ಬ್ರಹ್ಮನೂ ತಪಸ್ಸನ್ನು ಮಾಡುವುದರಲ್ಲಿ ಮನಸ್ಸನ್ನಿಟ್ಟವನಾಗಿ ನಾರಾಯಣನು ಹೇಳಿದಂತೆ ಎಲ್ಲವನ್ನೂ ಆಚರಿಸಿದನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಬ್ರಹ್ಮಕೃತಪ್ರಾಯಶ್ಚಿತ್ತವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಚತುರ್ಥೋಽಧ್ಯಾಯಃ

## ವೈಶ್ವಾನರೋತ್ಪತ್ತಿವರ್ಣನಂ

ವ್ಯಾಸ ಉವಾಚ :—

**ಯೋಽಸೌ ಕಪಾಲ ಉತ್ಪನ್ನೋ ನರೋ ನಾಮ ಧನುರ್ಧರಃ ।**
**ಕಿಮೇವಂ ಸೋಽಧುನಾ ಜಾತ ಉತ್ಪತ್ತೌ ವಿಶ್ವಕರ್ಮಣಃ ॥ ೧ ॥**
**ಕಥಂ ರುದ್ರೇಣ ಜನಿತಃ ಪ್ರಭುಣಾ ಬುದ್ಧಿಪೂರ್ವಕಂ ।**
**ವಿಷ್ಣುನಾ ವಾ ಭಗವತಾ ಬ್ರಹ್ಮಣಾ ಭಾವಭೇದತಃ ॥ ೨ ॥**
**ಕೇನ ಕಸ್ಮಾತ್ಸಮುತ್ಪನ್ನಃ ಶಂಕರಾಽಚ್ಯುತಬ್ರಹ್ಮಣಾಂ ।**
**ಬ್ರಹ್ಮಾ ಹಿರಣ್ಯಗರ್ಭೋ ಯೋ ಯೋ ಜಾತಶ್ಚ ಚತುರ್ಮುಖಃ ॥ ೩ ॥**
**ಅದ್ಭುತಂ ಪಂಚಮಂ ವಕ್ತ್ರಂ ಕಥಂ ತಸ್ಯಾಽಪ್ಯುಪಸ್ಥಿತಂ ।**
**ಸ ತಸ್ಮೌ ಭಗವಾನ್ಬ್ರಹ್ಮಾ ಕಥಂ ರುದ್ರೇ ಮನೋಽದಧತ್ ॥ ೪ ॥**
**ಮೂಢಾತ್ಮನಾ ನರೋ ಯೇನ ಹಂತುಂ ಸ ಪ್ರಹಿತೋ ಹರಂ ॥ ೫ ॥**

---

## ಕನ್ನಡದ ಅನುವಾದ

### ವೈಶ್ವಾನರೋತ್ಪತ್ತಿವರ್ಣನ

೧. ವ್ಯಾಸನು ಹೇಳುತ್ತಾನೆ:—ಧನುರ್ಧರನಾದ ನರನೆಂಬುವನು ಬ್ರಹ್ಮ ಕಪಾಲದಿಂದ ಉದ್ಭವಿಸಿದನೆಂದು ಹೇಳಿದೆಯಷ್ಟೆ. ಆತನು ಹೀಗೆ ಹುಟ್ಟಲು ಕಾರಣವೇನು? ವಿಶ್ವಕರ್ಮನ ಈ ಉತ್ಪತ್ತಿಯಲ್ಲಿ (ಬ್ರಹ್ಮಾಂಡದಲ್ಲಿ) ಆತನೂ ಹುಟ್ಟಿದನೆ?

೨. ಲೋಕೇಶ್ವರನಾದ ರುದ್ರನಿಂದಲೂ, ಭಗವಂತನಾದ ನಾರಾಯಣನಿಂದಲೂ, ಹಾಗೆಯೇ ಮತ್ತೊಂದು ದೃಷ್ಟಿಯಿಂದ ಬ್ರಹ್ಮನಿಂದಲೂ ಈ ನರನು ಹುಟ್ಟಿದುದು ಹೇಗೆ?

೩. ಇಂತು ಶಂಕರ, ಅಚ್ಯುತ, ಬ್ರಹ್ಮರಲ್ಲಿ ಆತನು ಯಾರಿಂದ ಯಾವ ಕಾರಣಕ್ಕಾಗಿ ಜನಿಸಿದನು? ಹಿರಣ್ಯಗರ್ಭನಾದ ಬ್ರಹ್ಮನು ತನ್ನ ತಲೆಯನ್ನು ಕಳೆದುಕೊಂಡು ಚತುರ್ಮುಖನಾದನಲ್ಲವೆ.

೪. ಅದ್ಭುತವಾದ ಈ ಐದನೆಯ ಮುಖವು ಬ್ರಹ್ಮನಿಗೆ ಹೇಗೆ ಉಂಟಾಯಿತು? ಇಂತಿದ್ದ ಭಗವಾನ್ ಬ್ರಹ್ಮನು ರುದ್ರನಲ್ಲಿ ಕೋಪಬುದ್ಧಿಯನ್ನು ಮಾಡಿದುದು ಹೇಗೆ?

೫. ಮೂಢಬುದ್ಧಿಯುಳ್ಳವನಾಗಿ ಅವನು ಮಹಾದೇವನನ್ನು ಕೊಲ್ಲಲು ನರನನ್ನು ಕಳುಹಿಸಿದುದು ಹೇಗೆ?

ಸನತ್ಕುಮಾರ ಉವಾಚ :—
ಮಹೇಶ್ವರಹರೀ ಏತೌ ದ್ವಾವೇವ ಸತಿ ತಿಷ್ಠತಃ ।
ತಯೋರವಿದಿತಂ ನಾಽಸ್ತಿ ಸಿದ್ಧಾಽಸಿದ್ಧಂ ಮಹಾತ್ಮನೋಃ ॥ ೬ ॥
ಬ್ರಹ್ಮಣಃ ಪಂಚಮಂ ವಕ್ತ್ರಂ ಯತ್ತದಾಸೀನ್ಮಹಾತ್ಮನಃ ।
ತಸ್ಯೈವ ಮಾನಸಃ ಸೋಽಗ್ನಿಃ ಶಿರಸಾ ತೇನ ವೈ ಧೃತಃ ॥ ೭ ॥
ಯೋ ನರೋ ಬ್ರಹ್ಮಣಃ ಪ್ರೋಕ್ತಃ ಯೋಽಪ್ಯಗ್ನಿಸ್ತಸ್ಯ ಮಾನಸಃ ।
ದಧಾರ ತಂ ಮಹಾದೇವಃ ಕೃತ್ವಾಂಗುಲ್ಯಂತರಾಂತರೇ ॥ ೮ ॥
ಪೂರ್ವಂ ದೃಷ್ಟ್ವಾ ಸಮುತ್ಪತ್ತಿಮೇವಂ ತಸ್ಯ ಮಹಾನ್ಮರಃ ।
ತಸ್ಮಾತ್ಕಪಾಲಮಂಗುಲ್ಯಾಂ ಘಟ್ಟಮಾನಮಜಾಯತ ॥ ೯ ॥
ಸ ತಂ ಹತ್ವಾ ಶರೇಣಾಽಽಜೌ ಬ್ರಹ್ಮಣೋ ನಿಹಿತಂ ರಜಃ ।
ಮುಮೋಹ ರಜಸಾ ಸತ್ವಂ ಯದೃಚ್ಛಾಕೃತ್ಪ್ರಭುರ್ಯತಃ ॥ ೧೦ ॥
ವ್ಯಾಸ ಉವಾಚ :—
ಕಥಮಗ್ನಿಃ ಸಮುತ್ಪನ್ನೋ ಯೋಽಗ್ನಿಃ ಸರ್ವೇಣ ಧಾರಿತಃ ।
ವಿಸ್ತರೇಣ ತದಾಚಕ್ಷ್ವ ಭಗವನ್ಮುನಿವಂದಿತ ॥ ೧೧ ॥

---

೬. ಸನತ್ಕುಮಾರನು ಹೇಳುತ್ತಾನೆ :—ಮಹೇಶ್ವರ ಮಹಾವಿಷ್ಣುಗಳಿಬ್ಬರೇ ಮೊದಲಿದ್ದವರು. ಈ ಮಹಾತ್ಮರಿಗೆ ತಿಳಿಯದ ವಿಷಯವು ಭೂತಭವಿಷ್ಯದ್ವಸ್ತುಗಳಲ್ಲಿ ಒಂದೂ ಇರುವುದಿಲ್ಲ.

೭. ಮಹಾತ್ಮನಾದ ಬ್ರಹ್ಮನ ಐದನೆಯ ಮುಖವೆಂದು ಯಾವುದು ಹೇಳಲ್ಪಟ್ಟಿತೊ, ಅದೂ ರುದ್ರನ ಮಾನಸಿಕವಾದ ಅಗ್ನಿಯೇ. ಅದನ್ನೇ ಬ್ರಹ್ಮನು ತನ್ನ ತಲೆಯಲ್ಲಿ ಧರಿಸಿದನು.

೮. ಆದುದರಿಂದ, ಬ್ರಹ್ಮನ ಬೆವರಿನಿಂದ ಉತ್ಪನ್ನವಾದ ನರನೂ ಆ ಮಾನಸಾಗ್ನಿಯೆ. ಅದನ್ನು ಮಹಾದೇವನು ತನ್ನ ಕೈಬೆರಳುಗಳ ಉಗುರುಗಳಲ್ಲಿ ಧರಿಸಿದನು.

೯. ಇಂತು ಅಗ್ನಿಯ ಉತ್ಪತ್ತಿಯನ್ನು ಮೊದಲೇ ತಿಳಿದವನಾದುದರಿಂದ ಮಹಾದೇವನು ತನ್ನ ಕಿರುಬೆರಳಿನಿಂದ ತಲೆಯನ್ನು ಕತ್ತರಿಸಲು ಅದು ಅಲ್ಲಿಯೇ ಅಂಟಿಕೊಂಡಿತು.

೧೦. ಆ ಮಹಾದೇವನು ಯುದ್ಧದಲ್ಲಿ ಬಾಣದಿಂದ ಆ ನರನನ್ನು ವಧಿಸಿ ಬ್ರಹ್ಮನಲ್ಲಿ ರಜೋಗುಣವನ್ನು ಇಟ್ಟನು. ಆತನು ಸ್ವೇಚ್ಛಾಪ್ರವೃತ್ತಿಯುಳ್ಳ ಪ್ರಭುವಾದುದರಿಂದ ಆತನ ಸತ್ತ್ವಗುಣವನ್ನು ರಜೋಗುಣದಿಂದ ಆವರಿಸಿದನು.

೧೧. ವ್ಯಾಸನು ಹೇಳುತ್ತಾನೆ :—ಮಹೇಶ್ವರನು ಧರಿಸಿದ ಈ ಅಗ್ನಿಯು ಮೊದಲು ಹೇಗೆ ಹುಟ್ಟಿದನು? ಅಯ್ಯಾ, ಮಹರ್ಷಿವಂದಿತನಾದ ಸನತ್ಕುಮಾರನೆ! ಇದನ್ನು ನನಗೆ ವಿಸ್ತಾರವಾಗಿ ಹೇಳು.

**ಸನತ್ಕುಮಾರ ಉವಾಚ :—**

**ಅವ್ಯಕ್ತಾದೀನ್ಸಸರ್ಜಾದಾವಂಡಂ ಹಿ ತದಜಾಯತ ।**
**ಜಜ್ಞೇ ಸೌವರ್ಣವರ್ಣಾಭೋ ಬ್ರಹ್ಮಾ ಲೋಕಪಿತಾಮಹಃ ॥ ೧೨ ॥**
**ಸ್ವಯಂಭೂಃ ಸ ತಪಸ್ತಪ್ತ್ವಾ ದಿವ್ಯಂ ವರ್ಷಶತಂ ಮಹತ್ ।**
**ಸ ತಪಃಸ್ಥೋ ವ್ಯಾಜಹಾರ ಭೂರ್ಭುವಃ ಸ್ವರಿತಿ ಶ್ರುತೀಃ ॥ ೧೩ ॥**
**ಶ್ರುತಿಯೋಗಾತ್ತು ಮನಸಃ ಪಶ್ಚಾದಗ್ನಿರಜಾಯತ ।**
**ಅಧೋಮುಖಃ ಪಪಾತಾಗ್ನಿಃ ಪೃಥಿವೀಂ ನಿರ್ದಹನ್ಯದಾ ॥ ೧೪ ॥**
**ಪಾಣಿಭ್ಯಾಂ ಬ್ರಹ್ಮಣಾ ಸೋಽಗ್ನಿರ್ಭೂಮೇರೂರ್ಧ್ವಂ ನಿವೇಶಿತಃ ।**
**ತತೋ ದಕ್ಷಿಣಹಸ್ತೇನ ವೇದ್ಯಾಮಗ್ನಿಃ ಪ್ರಣೀಯತೇ ॥ ೧೫ ॥**
**ಪುರಾಪತನ್ನಧೋಜ್ವಾಲ ಊರ್ಧ್ವಜ್ವಾಲೋ ಯದಾ ಧೃತಃ ।**
**ಉತ್ತಾನಶ್ಚ ಕೃತೋ ಯಸ್ಮಾದ್ಬ್ರಹ್ಮಣಾ ನಿರ್ಮಿತೋ ಮಿಥಃ ॥ ೧೬ ॥**
**ಜ್ವಾಲಾಭಿಃ ಪ್ರಜ್ವಲನ್ನೂರ್ಧ್ವಂ ಸರ್ವಶಬ್ದಸ್ಫುಲಿಂಗವಾನ್ ।**
**ಹಿರಣ್ಯವರ್ಣಂ ಬ್ರಹ್ಮಾಣಂ ತದೋವಾಚಾಽಗ್ನಿರುತ್ಕಟಃ ॥ ೧೭ ॥**

---

೧೨. ಸನತ್ಕುಮಾರನು ಹೇಳುತ್ತಾನೆ:— ಮೊದಲು ಪರಮೇಶ್ವರನು ಅವ್ಯಕ್ತವೇ ಮೊದಲಾದ ತತ್ತ್ವಗಳನ್ನು ಸೃಜಿಸಿದನು. ಅವುಗಳಿಂದ ಬ್ರಹ್ಮಾಂಡ ವುಂಟಾಯಿತು. ಅದರಿಂದ ಚಿನ್ನದ ಕಾಂತಿಯ ವೈಬಣ್ಣವುಳ್ಳ ಲೋಕಪಿತಾಮಹ ನಾದ ಬ್ರಹ್ಮನು ಹುಟ್ಟಿದನು.

೧೩. ಸ್ವಯಂಭುವಾದ ಆತನು ಒಂದು ನೂರು ದೇವಮಾನದ ವರ್ಷಗಳು ಉಗ್ರವಾದ ತಪಸ್ಸನ್ನು ಮಾಡಿದನು. ಮತ್ತು ಸಮಾಧಿಯಲ್ಲಿದ್ದಂತೆಯೇ "ಭೂಃ, ಭುವಃ, ಸುವಃ" ಎಂಬ ಮೂರು ವ್ಯಾಹೃತಿಗಳನ್ನುಚ್ಚರಿಸಿದನು.

೧೪. ಈ ವ್ಯಾಹೃತಿಗಳ ಮತ್ತು ಮನಸ್ಸಿನ ಸಂಯೋಗದಿಂದ ಅಗ್ನಿಯು ಸಂಭವಿಸಿತು. ಆ ಅಗ್ನಿಯು ಅಧೋಮುಖವಾಗಿ ಜ್ವಾಲೆಗಳನ್ನು ಕಾರುತ್ತ ಭೂಮಿಯನ್ನೇ ದಹಿಸುತ್ತ ಕೆಳಕ್ಕೆ ಬಿದ್ದಿತು.

೧೫. ಬ್ರಹ್ಮನು ಅದನ್ನು ತನ್ನ ಕೈಗಳಿಂದ ಎತ್ತಿ ಭೂಮಿಯ ಮೇಲಿಟ್ಟನು. ಆದುದರಿಂದಲೇ ಬಲಗೈಯಿಂದ ವೇದಿಕೆಯಲ್ಲಿ ಅಗ್ನಿಯನ್ನು ತಂದಿಡುವರು.

೧೬. ಮೊದಲು ಅಧೋಜ್ವಾಲೆಗಳಿಂದ ಕೂಡಿದ್ದ ಆ ಅಗ್ನಿಯು ಆ ಬಳಿಕ ಊರ್ಧ್ವಜ್ವಾಲೆಗಳುಳ್ಳವನಾದನು. ಇಂತು ಬ್ರಹ್ಮನಿಂದ ಮೇಲಕ್ಕೆತ್ತಲ್ಪಟ್ಟ ಅಗ್ನಿಗೆ ದ್ವಿಸ್ವಭಾವವುಂಟಾಯಿತು.

೧೭. ಆಗ ತನ್ನ ಜ್ವಾಲೆಗಳಿಂದ ಮೇಲಕ್ಕೆ ಉರಿಯುತ್ತ ಛಟಛಟಾ ಶಬ್ದ ದೊಡನೆ ಕಿಡಿಗಳನ್ನುಗುಳುತ್ತ ಆ ಅಗ್ನಿಯು ಕೋಪದಿಂದ ಹಿರಣ್ಯರೂಪನಾದ ಬ್ರಹ್ಮನನ್ನು ಕುರಿತು ಇಂತೆಂದನು.

ಕಿಮರ್ಥಂ ತು ತ್ವಯಾ ದೇವ ಭೂಮಿಭಕ್ಷ್ಯಂ ನಿವಾರಿತಂ ।
ಬುಭುಕ್ಷಯಾಽಹಮಾವಿಷ್ಟ ಆಹಾರೋ ಮೇ ಪ್ರದೀಯತಾಂ ॥ ೧೮ ॥
ಏವಮುಕ್ತೋಽಗ್ನಯೇ ಬ್ರಹ್ಮಾ ಸ್ವರೋಮಾಣಿ ಜುಹಾವ ಸಃ ।
ಕೃಶಶ್ಚಖಾದ ಅಗ್ನಿಸ್ತು ಸರ್ವರೋಮಾಣಿ ಬ್ರಹ್ಮಣಃ ॥ ೧೯ ॥
ಅಬ್ರವೀಚ್ಚ ನಮೇ ತೃಪ್ತಿರ್ನಚ ಮೇ ದೇಹನಿರ್ವೃತಿಃ ।
ತ್ವಚಂ ಜುಹಾವ ಬ್ರಹ್ಮಾ ಚ ಚಖಾದಾಗ್ನಿಸ್ತ್ವಚಂ ತದಾ ॥ ೨೦ ॥
ಅಬ್ರವೀತ್ತಂ ತದಾ ವಹ್ನಿಸ್ತೃಪ್ತಿರ್ನಾಽಸ್ತಿ ಮಮೇತಿ ಹಿ ।
ಜುಹಾವ ಸ್ವಾನಿ ಮಾಂಸಾನಿ ತ್ವಚೋತ್ಕೃತ್ಯ ಪ್ರಜಾಪತಿಃ ॥ ೨೧ ॥
ಅಬ್ರವೀಚ್ಚ ನಮೇ ತೃಪ್ತಿರ್ನಚ ಮೇ ದೇಹನಿರ್ವೃತಿಃ ।
ಜುಹಾವ ಬ್ರಹ್ಮಾ ಚಾಸ್ಥೀನಿ ತಾನ್ಯಶ್ನಾತ್ಸ ಬುಭುಕ್ಷಿತಃ ॥ ೨೨ ॥
ತತೋ ಧಾತ್ರಾ ಹುತಾಶಾಯ ಕೃತೋ ದೇಹೋ ವಿಧಾತುಕಃ ।
ತಮದೇಹಮಥೋ ದೃಷ್ಟ್ವಾ ಬ್ರಹ್ಮಾಣಮವದಚ್ಚ ಸಃ ॥ ೨೩ ॥
ಅಹೋ ಬ್ರಹ್ಮನ್ನಮೇ ತೃಪ್ತಿರ್ನಚ ಮೇ ದೇಹನಿರ್ವೃತಿಃ ।
ಕ್ರುದ್ಧೇನ ಬ್ರಹ್ಮಣಾ ಸೋಽಗ್ನಿರ್ಹುಂಕಾರೇಣ ದ್ವಿಧಾಕೃತಃ ॥ ೨೪ ॥

---

೧೮. "ದೇವ! ನನಗೆ ಆಹಾರವಾದ ಭೂಮಿಯನ್ನು ನೀನೇಕೆ ನಿವಾರಿಸಿದೆ? ಈಗ ನನಗೆ ಬಹಳ ಹಸಿವಾಗಿರುವುದು. ನನಗೆ ಸರಿಯಾದ ಆಹಾರವನ್ನು ಕೊಡು."

೧೯. ಇಂತೆಂದು ಹೇಳಲು ಬ್ರಹ್ಮನು ಅಗ್ನಿಗೆ ತನ್ನ ಕೂದಲುಗಳನ್ನು ಆಹುತಿಯಾಗಿ ಕೊಟ್ಟನು. ಹಸಿವಿನಿಂದ ಕೃಶನಾದ ಅಗ್ನಿಯು ಬ್ರಹ್ಮನ ಎಲ್ಲ ರೋಮಗಳನ್ನೂ ತಿಂದುಬಿಟ್ಟನು.

೨೦. ಪುನಃ, "ನನಗೆ ಮನಸ್ತೃಪ್ತಿಯಾಗಲಿ ದೇಹಸೌಖ್ಯವಾಗಲಿ ಆಗಲಿಲ್ಲ"ವೆಂದು ಹೇಳಿದನು. ಆಗ ಬ್ರಹ್ಮನು ತನ್ನ ಚರ್ಮವನ್ನು ಹೋಮ ಮಾಡಿದನು. ಅಗ್ನಿಯು ಅದನ್ನೂ ಭಕ್ಷಿಸಿದನು.

೨೧. ಆಗಲೂ, "ನನಗೆ ತೃಪ್ತಿಯೇ ಉಂಟಾಗಲಿಲ್ಲ" ಎಂದು ಹೇಳಲು ಬ್ರಹ್ಮದೇವನು ಚರ್ಮದಿಂದ ತನ್ನ ಮಾಂಸವನ್ನು ಕತ್ತರಿಸಿ ಹೋಮಮಾಡಿದನು.

೨೨. ಆದರೂ ಅಗ್ನಿಯು, "ನನಗೆ ತೃಪ್ತಿಯಾಗಲಿ ಸೌಖ್ಯವಾಗಲಿ ಆಗಲಿಲ್ಲ"ವೆಂದು ಪುನಃ ಹೇಳಿದನು. ಆಗ ಬ್ರಹ್ಮನು ತನ್ನ ಅಸ್ಥಿಗಳನ್ನೇ ಆಹುತಿಯನ್ನಾಗಿ ಕೊಡಲು ಹಸಿವುಗೊಂಡ ಅಗ್ನಿಯು ಅದನ್ನೂ ಮುಗಿಸಿದನು.

೨೩. ಬಳಿಕ ಪ್ರಜಾಪತಿಯು ಅಗ್ನಿಗಾಗಿ ತನ್ನ ದೇಹವನ್ನೇ ಧಾತುರಹಿತವನ್ನಾಗಿ ಮಾಡಿಕೊಂಡನು. ಇಂತು ಬ್ರಹ್ಮನು ಅಶರೀರನಾದುದನ್ನು ಕಂಡು ಅಗ್ನಿಯು ಆತನನ್ನು ಕುರಿತು ಇಂತೆಂದನು.

೨೪. "ಎಲೈ ಬ್ರಹ್ಮನೆ! ನನಗೆ ತೃಪ್ತಿಯಾಗಲಿ ದೇಹಸೌಖ್ಯವವಾಗಲಿ

ಆಹತೂ ರುದತಾವಗ್ನೀ ಆಹಾರಾರ್ಥಂ ಪ್ರಜಾಪತಿಂ ।
ಹುಂಕಾರೇಣ ಪುನರ್ಬ್ರಹ್ಮಾ ದ್ವಿಧೈಕೈಕಂ ಚಕಾರ ವೈ ॥ ೨೫ ॥
ತ್ರಯಸ್ತೇಷಾಂ ರುದಂತಿಸ್ಮ ರುದನ್ನ್ಯೇಕೋಹ್ಯಸಂವೃತಃ ।
ಕ್ರುದ್ಧೇನ ಬ್ರಹ್ಮಣಾ ವ್ಯಾಸ ಹುಂಕಾರೇಣೈವ ತಾಡಿತಃ ॥ ೨೬ ॥
ರೋರೂಯಮಾಣೇ ಚಾಽಗ್ನೌ ತು ಪುನರ್ಬ್ರಹ್ಮಾ ಕೃಪಾನ್ವಿತಃ ।
ಪ್ರಾಹ ಕಾಮಾಽಭಿಭೂತಾನಾಂ ಭುಂಕ್ಷ್ವ ತ್ವಂ ದೇಹಧಾತುಕಂ ॥ ೨೭ ॥
ಸ ಕಾಲಸ್ತಸ್ಯ ಕಾಮಸ್ಯ ಸಾ ವೃತ್ತಿಃ ಸಂಪ್ರಕಲ್ಪಿತಾ ।
ಅಕಾರಾಽಗ್ನಿಂ ಸನ್ನಿವಿಷ್ಟಂ ದೃಷ್ಟ್ವಾ ಮನಸಿ ಮಾನಸಃ ॥ ೨೮ ॥
ಹುಂಕಾರಾಽಗ್ನಿಃ ಪ್ರಜಜ್ವಾಲ ಕಿಮೇತದಿತಿ ಚಾಽಬ್ರವೀತ್ ।
ಬ್ರಹ್ಮಾ ತಮಾಹ ತ್ವಮಪಿ ಯಥೇಷ್ಟಾಂ ವೃತ್ತಿಮಾಶ್ರಯ ॥ ೨೯ ॥
ದೇವಮಧ್ಯೇ ಬಹಿರ್ವಾಽಪಿ ಮುನೀನಾಮಾಶ್ರಮೇಷು ಚ ।
ಇತ್ಯೇವಮುಕ್ತಸ್ತೇನಾಽಽಶು ವೃತ್ತಿಮೇತಾಮರೋಚಯತ್ ॥ ೩೦ ॥

---

ಇನ್ನೂ ಉಂಟಾಗಲಿಲ್ಲ.'' ಇದನ್ನು ಕೇಳಿ ಕುಪಿತನಾದ ಬ್ರಹ್ಮನು ಹುಂಕಾರ ಮಾತ್ರದಿಂದಲೇ ಅಗ್ನಿಯನ್ನು ಎರಡಾಗಿ ವಿಭಾಗಿಸಿದನು.

೨೫. ಆ ಎರಡು ಅಗ್ನಿಗಳೂ ರೋದನಮಾಡುತ್ತ ಆಹಾರಕ್ಕಾಗಿ ಬ್ರಹ್ಮನನ್ನು ಕೇಳಿಕೊಂಡುವು. ಬ್ರಹ್ಮನಾದರೊ ಮತ್ತೆ ಹುಂಕಾರವನ್ನು ಮಾಡಿ ಆ ಎರಡನ್ನೂ ಎರಡೆರಡಾಗಿ ಭಾಗಿಸಿದನು.

೨೬. ಆ ನಾಲ್ಕು ಅಗ್ನಿಗಳಲ್ಲಿ ಮೂವರು ರೋದನ ಮಾಡುತ್ತಿದ್ದರು. ನಾಲ್ಕನೆಯವನು ರೋದಿಸುತ್ತಿದ್ದರೂ ಅವರೊಡನೆ ಸೇರಲಿಲ್ಲ. ಎಲೈ ವ್ಯಾಸನೆ! ಕ್ರುದ್ಧನಾದ ಬ್ರಹ್ಮನು ಆತನನ್ನು ಹುಂಕಾರಮಾಡುತ್ತ ಹೊಡೆದನು.

೨೭–೨೮. ಆ ಅಗ್ನಿಯು ಮತ್ತೂ ಗಟ್ಟಿಯಾಗಿ ಅಳತೊಡಗಿದನು. ಆಗ ಬ್ರಹ್ಮನಿಗೆ ಕರುಣೆಯುಂಟಾಯಿತು. ಆತನನ್ನು ಕುರಿತು, "ಕಾಮದಿಂದ ಪರಿತಪ್ತರಾದವರ ದೇಹಗಳ ಧಾತುಗಳೇ ನಿನಗೆ ಆಹಾರವಾಗಲಿ" ಎಂದು ಅಪ್ಪಣೆ ಮಾಡಿದನು. ಅವನೇ ಕಾಲನು. ಅವನ ತೃಪ್ತಿಗಾಗಿ ಆ ವೃತ್ತಿಯು ಕಲ್ಪಿತವಾಯಿತು. ಬಳಿಕ ಬ್ರಹ್ಮನು ಅಕಾರರೂಪವಾದ ಅಗ್ನಿಯು ಮನಸಿನಲ್ಲಿ ನೆಲೆಗೊಂಡಿದ್ದುದನ್ನು ಕಂಡನು.

೨೯. ಪುನಃ ಹುಂಕಾರವನ್ನು ಮಾಡಲು ಅಗ್ನಿಯು ಬಹುವಾಗಿ ಜ್ವಲಿಸುತ್ತ "ಇದು ಏನು?" ಎಂದು ಪ್ರಶ್ನೆಮಾಡಲು ಬ್ರಹ್ಮನು ಅದಕ್ಕೂ, "ನಿನಗೆ ಇಷ್ಟವಾದ ವೃತ್ತಿಯನ್ನಾಶ್ರಯಿಸು" ಎಂದು ಹೇಳಿದನು.

೩೦. "ದೇವತೆಗಳಲ್ಲಾಗಲಿ, ಹೊರಗಿನ ಬ್ರಹ್ಮಾಂಡದಲ್ಲಾಗಲಿ, ಮುನಿಗಳ ಆಶ್ರಮಗಳಲ್ಲಾಗಲಿ ನೆಲಸಿರು" ಎಂದು ಬ್ರಹ್ಮನು ಹೇಳಲು ಅದನ್ನೇ ಅಗ್ನಿಯು ಅಂಗೀಕರಿಸಿದನು.

ಅಹಮೇವಂ ಪ್ರದಾಸ್ಯಾಮಿ ಪುನಃ ಪುನರುವಾಚ ಹ ।
ಯಸ್ಮಾದೇಷ ದ್ವಿತೀಯೋಽಗ್ನಿರ್ಹುಂಕಾರಾತ್ಸಮಜಾಯತ ॥ ೩೧ ॥
ಸಾಽಭಿಮಾನೋಽಪಮಾನೋ ವಾ ಹುಂಕಾರೋ ಯತ್ರ ಕಥ್ಯತೇ ।
ಸಾ ಚ ವೃತ್ತಿರ್ಮಮಾದೇಶಾದ್ಬುಭುಕ್ಷಾಶಾಂತಯೇ ತವ ॥ ೩೨ ॥
ಇಕಾರಾಗ್ನಿಂ ಸಮಾಹೂಯ ಬ್ರಹ್ಮಾ ವಚನಮಬ್ರವೀತ್ ।
ಭವತೋಽಗ್ನೇ ತ್ವಿಯಂ ವೃತ್ತಿರನ್ನಂ ಭುಕ್ತಂ ದಹೇರಿತಿ ॥ ೩೩ ॥
ಉಕಾರಾಽಗ್ನಿಂ ಸಮಾಹೂಯ ಬ್ರಹ್ಮಾ ವಚನಮಬ್ರವೀತ್ ।
ಯತ್ಪೃಥಿವ್ಯಾಂ ಗುರುಧ್ಯಾನಂ ಭಗವಂಸ್ತತ್ಸಮಾಶ್ರಯ ॥ ೩೪ ॥
ಅಹಂ ಚ ತೇ ವಿಧಾಸ್ಯಾಮಿ ಸ್ಥಾನಮಾಹಾರಮೇವ ಚ ।
ಇತ್ಯುಕ್ತಃ ಸ ತು ತೇನಾಽಗ್ನಿರ್ಯತ್ಪೃಥಿವ್ಯಾಂ ಶಿಲಾಚಯಃ ॥ ೩೫ ॥
ಯತೋಽಗ್ನಿರ್ವ್ಯಾಸ ತೇನೋಕ್ತೋ ಗಿರೌ ದುರ್ಗೇ ಮಹಾಮುನೇ ।
ಉಕಾರಾಽಗ್ನಿಃ ಸಚಾಽಪ್ಯೇಷ ಸಮುದ್ರೇ ವಡವಾಮುಖಃ ॥ ೩೬ ॥

---

೩೧–೩೨. "ಪುನಃ ನಿನಗೆ ಬೇರೆ ಸ್ಥಾನವನ್ನು ಕೊಡುವೆನು" ಎಂದು ಹೇಳಿದನು. "ನನ್ನ ಹುಂಕಾರದಿಂದ ಹುಟ್ಟಿದ ಅಗ್ನಿಗಳಲ್ಲಿ ಇದು ಎರಡನೆಯದಾದುದರಿಂದಲೂ, ಹುಂಕಾರವನ್ನು ಮಾಡುವಾಗಲೆಲ್ಲ ಅಭಿಮಾನದಿಂದಲೊ, ಅವಮಾನದಿಂದಲೊ ಜನರು ಮಾಡುವರೆಂದು ಹೇಳುವುದರಿಂದಲೂ, ಆ ಎರಡು ವೃತ್ತಿಗಳೇ ನಿನ್ನ ಕ್ಷುದ್ಬಾಧೆಯನ್ನು ಉಪಶಮನಗೊಳಿಸಲು ನನ್ನ ಆದೇಶದಿಂದ ಕಲ್ಪಿತಗಳಾಗಲಿ."

೩೩. ಇಕಾರಾಗ್ನಿಯನ್ನು ಕರೆದು ಬ್ರಹ್ಮನು, "ನಿನಗೂ ಒಂದು ವೃತ್ತಿಯನ್ನು ಕಲ್ಪಿಸಿರುವೆನು. ಪ್ರಾಣಿಗಳು ಭೋಜನಮಾಡಿದ ಅನ್ನವನ್ನು ಪಚನ ಮಾಡುವುದು ನಿನ್ನ ಕೆಲಸವಾಗಿರಲಿ" ಎಂದು ನುಡಿದನು.

೩೪. ಉಕಾರಾಗ್ನಿಯನ್ನು ಬಳಿಗೆ ಕರೆದು ಬ್ರಹ್ಮನು, "ಅಯ್ಯಾ, ಈ ಲೋಕದಲ್ಲಿ ಗುರುಧ್ಯಾನವೆಲ್ಲಿರುವುದೊ, ಅದನ್ನೇ ನೀನು ಆಶ್ರಯಿಸಿಕೊಂಡಿರು" ಎಂದು ಹೇಳಿದನು.

೩೫. "ನಿನಗೆ ನಾನು ಆಹಾರವನ್ನೂ ಸ್ಥಾನವನ್ನೂ ಕಲ್ಪಿಸಿಕೊಡುತ್ತೇನೆ" ಎಂದು ಹೇಳಲು ಆ ಅಗ್ನಿಯು ಭೂಮಿಯಲ್ಲಿರುವ ಕಲ್ಲುಗಳಲ್ಲಿ ಪ್ರವೇಶಿಸಿದನು.

೩೬. ಎಲೈ ವ್ಯಾಸಮಹಾಮುನಿಯೆ! ಆದುದರಿಂದಲೇ ಗಿರಿದುರ್ಗಾದಿಗಳು ಅಗ್ನಿಗೆ ನಿವಾಸಗಳೆಂದು ಹೇಳಲ್ಪಡುವುವು. ಸಮುದ್ರ ಮಧ್ಯದಲ್ಲಿದ್ದು ಅದರ ನೀರನ್ನು ಶೋಷಿಸುತ್ತಿರುವ ಬಡಬಾಗ್ನಿಯೂ ಸಹ ಈ ಉಕಾರಾಗ್ನಿಯೇ.

ಸೋಽಪಿ ಭಿನ್ನಃ ಸಮಾಹೂತೋ ಬ್ರಹ್ಮಣಾ ಸ್ಥಾನಲಿಪ್ಸಯಾ ।
ತ್ವಂ ಚಕ್ಷುಃ ಸರ್ವಲೋಕಸ್ಯ ಬ್ರಹ್ಮಾ ವಚನಮಬ್ರವೀತ್ ॥ ೩೭ ॥
ತಸ್ಮಾತ್ತ್ವಂ ಸಂಸ್ಕೃತಾಂ ವಾಣೀಂ ದ್ವಿಜಾತೀನಾಂ ಪ್ರಕಾಶಯ ।
ದೈವೀ ಪುಣ್ಯಾ ಹಿ ಪಾಪಾಂಶ್ಚ ಆಯುಷ್ಯಂ ಹಂತ್ಯಸಂಸ್ಕೃತಾ ॥ ೩೮ ॥
ತಸ್ಮಾದ್ದ್ವಿಜಾತೇರ್ವಿಜ್ಞೇಯಾ ವಾಣೀ ಪುಣ್ಯಾ ಪ್ರಕಾಶಿತಾ ।
ವಾಕ್ಚ ಮಾತಾ ದ್ವಿಜಾತೀನಾಂ ಮುಖೇ ಸಾ ಸಂಪ್ರತಿಷ್ಠಿತಾ ॥ ೩೯ ॥
ಅನೃತಾಽಕ್ಷರವಿನ್ಯಾಸಾದಮಂಗಲ್ಯಾಹ್ಯಸಂಸ್ಕೃತಾ ।
ವಕ್ತಾರಂ ಹಂತ್ಯತೋ ಹ್ಯಗ್ನಿಃ ಸದಾ ಸಂಸ್ಕೃತಕೃದ್ದ್ವಿಜಃ ॥ ೪೦ ॥
ಆಹೂಯ ಭೂಯೋಽಕಾರಾಽಗ್ನಿಂ ಪ್ರಜಾಪತಿರಚಕ್ಷುಷಂ ।
ವಾಗ್ವೇದವಾಣೀಮವದತ್ಸೋಽಪಿ ಸಂಮೀಲಿತೇಕ್ಷಣಃ ॥ ೪೧ ॥
ಬ್ರಹ್ಮಾಣಮಾಹ ವಹ್ನಿಸ್ತು ವಾಚೋಽಹಂ ಮುಖಮಸ್ಮಿ ತೇ ।
ಸ್ಥಾನಂ ಮಮ ಪ್ರಯಚ್ಛಸ್ವ ಸರ್ವತೇಜೋವರಂ ಪರಂ ॥ ೪೨ ॥

---

೩೭. ಬ್ರಹ್ಮನು ಅದಕ್ಕೂ ಒಂದು ಸ್ಥಾನವನ್ನುಂಟುಮಾಡಲು ಭಿನ್ನ ಗೊಳಿಸಿ ಅದನ್ನು ಕುರಿತು, "ನೀನೇ ಸಕಲ ಲೋಕಕ್ಕೂ ನೇತ್ರವಾಗಿರುವೆ" ಎಂದು ಹೇಳಿದನು.

೩೮. "ಆದುದರಿಂದ ನೀನು ಬ್ರಾಹ್ಮಣರಿಗೆ ಸಂಸ್ಕೃತಭಾಷೆಯನ್ನು ಪ್ರಕಾಶ ಗೊಳಿಸು. ಈ ಗೀರ್ವಾಣಭಾಷೆಯು ಪರಮಪುಣ್ಯಪ್ರದವಾದುದು. ಅಸಂಸ್ಕೃತ ವಾದ ನುಡಿಯು ಪಾಪಿಗಳನ್ನೂ ಅವರ ಆಯುಷ್ಯವನ್ನೂ ಕೊನೆಗಾಣಿಸುವುದು."

೩೯. ಆದುದರಿಂದ ಪುಣ್ಯತಮವಾದ ವಾಣಿಯು ಬ್ರಾಹ್ಮಣರಿಗೆ ಮಾತ್ರ ಪ್ರಕಾಶಿತವಾಗಿರುವುದೆಂದು ತಿಳಿಯಬೇಕು. ವಾಣಿಯೇ ಬ್ರಾಹ್ಮಣರಿಗೆ ಮಾತೃ ವಿನಂತಿರುವುದು. ಅದು ಅವರ ಮುಖದಲ್ಲಿಯೇ ಇರುವುದು.

೪೦. ಅನೃತವನ್ನಾಡುವುದರಲ್ಲಿ ಅಕ್ಷರವಿನ್ಯಾಸವನ್ನು ಮಾಡಲು ಆ ವಾಣಿಯು ಅಮಂಗಳವೂ ಅಸಂಸ್ಕೃತವೂ ಆಗುವುದು. ಆ ಮಾತುಗಳ ಅಗ್ನಿಯು ಮಾತನಾಡಿದವನನ್ನು ಕೊಲ್ಲುವುದು. ಆದುದರಿಂದ ಬ್ರಾಹ್ಮಣನಾದ ವನು ಸಂಸ್ಕೃತವಾಣಿಯನ್ನೇ ಆಡಬೇಕು.

೪೧. ಬಳಿಕ ಪ್ರಜಾಪತಿಯು ಪುನಃ ನೇತ್ರಹೀನನಾದ ಅಕಾರಾಗ್ನಿಯನ್ನು ಕರೆದನು. ಆತನು ಕಣ್ಣುಗಳನ್ನು ಮುಚ್ಚಿಕೊಂಡೇ ಬಾಯಿಯಲ್ಲಿ ವೇದವಾಣಿ ಯನ್ನು ಹೇಳುತ್ತಿದ್ದನು.

೪೨. ಆ ಅಗ್ನಿಯು ಬ್ರಹ್ಮನನ್ನು ಕುರಿತು "ವಾಕ್ಕಿಗೆ ನಾನು ಮುಖ ವಾಗಿರುವೆನಷ್ಟೆ. ನನಗೆ ಸಕಲ ತೇಜೋಮಯವೂ ಸರ್ವೋತ್ತಮವೂ ಆದ ಸ್ಥಾನವೊಂದನ್ನು ಕೊಡು" ಎಂದು ಕೇಳಿದನು.

ಬ್ರಹ್ಮಾ ತಮಾಹ ಯಸ್ಮಾತ್ತ್ವಂ ತೇಜಃಸ್ಥಾನಂ ಸಮೀಹಸೇ ।
ತಸ್ಮಾತ್ತೇಜೋಮಯಂ ಯತ್ತೇ ರವಿಸ್ಥಾನಂ ಭವಿಷ್ಯತಿ ॥ ೪೩ ॥
ಯಸ್ಮಾತ್ತೇಜಃ ಪ್ರಪಶ್ಯಂತಿ ಚಕ್ಷುರ್ಭವತಿ ದುರ್ಬಲಂ ।
ತಸ್ಮಾತ್ತತ್ತೇಜಸಾ ಯುಕ್ತಂ ಪಶ್ಯೇದನಿಮಿಷಂ ಕ್ವಚಿತ್ ॥ ೪೪ ॥
ಇಕಾರಮಥ ಸಂಭಿನ್ನಮಗ್ನಿಮಾಹ ಪಿತಾಮಹಃ ।
ಸೌಮ್ಯ ದೃಷ್ಟ್ಯಾ ತು ಬ್ರಹ್ಮಾಣಂ ಸಮುದೀಕ್ಷ್ಯಮುಪಾಗತಂ ॥ ೪೫ ॥
ಯಸ್ಮಾಚ್ಛೀಘ್ರಂ ಮಹಾಸತ್ವ ಸೌಮ್ಯದೃಷ್ಟಿರಿಹಾಗತಃ ।
ತಸ್ಮಾದ್ದಾಸ್ಯಾಮ್ಯಹಂ ಸ್ಥಾನಂ ಸರ್ವಭೂತಮನೋರಮಂ ॥ ೪೬ ॥
ಸಂಶೀತಾತ್ಮಾ ಶೀತರಶ್ಮಿಂಶ್ಚಂದ್ರಮಾಸ್ತ್ವಂ ಭವಿಷ್ಯಸಿ ।
ಸರ್ವತೇಜೋಽಧಿಕೋ ದಿವ್ಯಃ ಸೌಮ್ಯಃ ಪರಮಭಾಸುರಃ ॥ ೪೭ ॥
ತರುಸ್ಥಃ ಸರ್ವತೇಜಾಂಸಿ ತೇಜಸಾಽಭಿಭವಿಷ್ಯಸಿ ।
ಇತ್ಯುಕ್ತ್ವಾ ತಂ ವಿಸೃಜ್ಯಾಽಥ ಉಕಾರಾಽಗ್ನಿಮಥಾಹ್ವಯತ್ ॥ ೪೮ ॥

---

೪೩. ಅದಕ್ಕೆ ಬ್ರಹ್ಮನು ಉತ್ತರವನ್ನಿತ್ತನು. "ತೇಜೋಮಯವಾದ ಸ್ಥಾನವನ್ನು ನೀನು ಅಪೇಕ್ಷಿಸಿರುವೆ. ಆದುದರಿಂದ ತೇಜಸ್ಸಂಪನ್ನವಾದ ಸೂರ್ಯ ಮಂಡಲವೇ ನಿನ್ನ ಸ್ಥಾನವಾಗಿರಲಿ."

೪೪. "ಅಧಿಕ ತೇಜಸ್ಸನ್ನು ನೋಡುವವರ ನೇತ್ರವು ದುರ್ಬಲವಾಗುವುದಷ್ಟೆ. ಆದುದರಿಂದ ತೇಜೋಯುಕ್ತನಾದ ನಿನ್ನನ್ನು ಒಂದೊಂದು ವೇಳೆಯಲ್ಲಿ ಮಾತ್ರ ಮಾನವರು ನೆಟ್ಟದೃಷ್ಟಿಯಿಂದ ನೋಡುವವರಾಗುವರು."

೪೫. ಬಳಿಕ ಪಿತಾಮಹನು ಇಕಾರಾಗ್ನಿಯನ್ನು ತನ್ನ ಬಳಿಗೆ ಕರೆದನು. ಆತನು ಸೌಮ್ಯದೃಷ್ಟಿಯಿಂದಲೂ, ಉತ್ಕಂಠತೆಯಿಂದಲೂ ಬಳಿ ಸಾರಿದನು. ಆತನಿಗೆ ಬ್ರಹ್ಮನು ಹೇಳಿದನು.

೪೬. "ಎಲೈ ಮಹಾಬಲನೆ! ನೀನು ತಡೆಮಾಡದೆ ಸೌಮ್ಯರೂಪದಿಂದ ನನ್ನ ಬಳಿಗೆ ಬಂದಿರುವೆಯಾದುದರಿಂದ ನಿನಗೆ ಸಕಲ ಪ್ರಾಣಿಗಳಿಗೂ ಮನೋಹರ್ಷವನ್ನುಂಟುವ ಸ್ಥಾನವೊಂದನ್ನು ಕೊಡುವೆನು.

೪೭. ನೀನು ಶೀತಲಸ್ವಭಾವದವನೂ ಶೀತಕಿರಣನೂ ಆದ ಚಂದ್ರನಾಗಿ ಸಕಲ ತೇಜಸ್ಸುಗಳಲ್ಲಿ ಉತ್ತಮನೂ, ಆಕಾಶದಲ್ಲಿರುವವನೂ, ಸೌಮ್ಯನೂ, ಪರಮಪ್ರಕಾಶವಂತನೂ ಆಗಿರುವೆ.

೪೮. ಓಷಧಿಗಳಲ್ಲಿ ಸೇರಿಕೊಂಡು ಸಕಲ ತೇಜಸ್ಸುಗಳನ್ನೂ ನಿನ್ನ ತೇಜಸ್ಸಿನಿಂದ ಮರೆಮಾಚಿಸುವೆ." ಇಂತೆಂದು ಆ ಅಗ್ನಿಯನ್ನು ಬೀಳ್ಕೊಟ್ಟು ಉಕಾರಾಗ್ನಿಯನ್ನು ಕರೆದನು.

ಇಹ್ಯೈಹೀತೀತಿ ಶಿರಸಿ ಸಮಾದಾಯ ನ್ಯವೇಶಯತ್ ।
ತತ್ರಸ್ಥಂ ಪಂಚಮಂ ವಕ್ತ್ರಂ ಊರ್ಧ್ವಮೇತತ್ಪ್ರಜಾಯತೇ ॥ ೪೯ ॥
ಸ ಏವಂ ರೂಪವಾನಗ್ನಿರುಕಾರಾಗ್ನಿಃ ಪ್ರತಿಷ್ಠಿತಃ ।
ತಸ್ಮಾದಗ್ನಿಶ್ಚ ಸೂರ್ಯಶ್ಚ ಏಕಮೇತೌ ವಿನಿರ್ದಿಶೇತ್ ॥ ೫೦ ॥
ಭವಾಗ್ನಿರೂಪಂ ಪರಮಂ ಬ್ರಹ್ಮಾಣಮಿದಮಬ್ರವೀತ್ ।
ಮಮಾಪಿ ರುಚಿರಂ ಸ್ಥಾನಂ ಪ್ರಯಚ್ಛಸ್ವ ಯಥಾ ಸ್ವಯಂ ॥ ೫೧ ॥
ಬ್ರಹ್ಮಾ ತಮಾಹ ಕತಮಂ ಸ್ಥಾನಂ ತೇ ರೋಚತೇಽನಲ ।
ಅಗ್ನಿಸ್ತಂ ಪ್ರತ್ಯುವಾಚೇದಂ ಸ್ಥಾನಂ ಕಥಯ ಮೇ ಪರಂ ॥ ೫೨ ॥
ಸ್ಥಾನಂ ನೈವಾಽಸ್ತಿ ತೇ ಭವ್ಯಂ ತತೋ ಹ್ಯೇವಂ ಭವಿಷ್ಯತಿ ।
ಅತ್ರ ತೇ ಸ್ಥಾತುಮಿಚ್ಛಾಸ್ತಿ ಯದಿ ಸಂಸ್ಥಾಸ್ಯತೇ ತ್ವಿಹ ॥ ೫೩ ॥
ಲೋಕೇ ನಿತ್ಯಂ ಸಮಾಚಾರ ಲೋಕಸಂಸ್ಥಿತಿಹೇತುಕಃ ।
ಸಂಭವಾರ್ಥಮಿಹಾಸ ತ್ವಂ ನಿಜಸತ್ವಪರಾಕ್ರಮಃ ॥ ೫೪ ॥

---

೪೯. "ನನ್ನಲ್ಲಿಗೆ ಬಾ" ಎಂದು ಹೇಳುತ್ತ ತನ್ನ ತಲೆಯಲ್ಲಿಯೇ ಅದನ್ನು ಇರಿಸಿಕೊಂಡನು. ಆ ತಲೆಯ ಐದನೆಯ ಮುಖವೇ ಬ್ರಹ್ಮದೇವನ ಊರ್ಧ್ವ ಮುಖವೆನ್ನಲ್ಪಡುವುದು.

೫೦. ಇಂತು ಉಕಾರಾಗ್ನಿಯೂ ಸಾಕಾರನಾಗಿ ಪ್ರತಿಷ್ಠಿತನಾದನು. ಆದುದರಿಂದ ಸೂರ್ಯನೂ ಅಗ್ನಿಯೂ ಒಂದೇ ಎಂದು ತಿಳಿದು ವ್ಯವಹರಿಸ ಬೇಕು.

೫೧. ಆಗ ಈಶ್ವರಾಗ್ನಿಯೂ ಸಹ ಬ್ರಹ್ಮನಿಗೆ, "ನಿನ್ನ ಅಗ್ನಿಗಳಿಗೆ ತೋರಿ ಸಿದಂತೆಯೇ ನನಗೂ ಒಂದು ಮನೋಹರವಾದ ಸ್ಥಾನವನ್ನು ತೋರಿಸು" ಎಂದು ಕೇಳಿದನು.

೫೨. ಬ್ರಹ್ಮನು, "ಎಲೈ ಅಗ್ನಿಯೆ! ನಿನಗೆ ಎಷ್ಟನೆಯ ಸ್ಥಾನವು ರುಚಿಸು ವುದು?" ಎಂದು ಪ್ರಶ್ನಿಸಲು ಅಗ್ನಿಯು "ನನಗೆ ಕೊನೆಯದಾದ ಸ್ಥಾನವನ್ನು ಕಲ್ಪಿಸಿಕೊಡು" ಎಂದನು.

೫೩. ಬ್ರಹ್ಮನೆಂದನು: "ನಿನಗೆ ಉತ್ತಮವಾದ ಸ್ಥಾನವೊಂದಿಲ್ಲ. ಆದರೆ ಇಲ್ಲಿಯೇ ನಿಲ್ಲಲಪೇಕ್ಷೆಯುಳ್ಳವನಾದರೆ ಈ ಲೋಕದಲ್ಲಿಯೇ ನಿನ್ನನ್ನು ಸ್ಥಾಪಿಸುವೆನು.

೫೪. ನೀನು ಲೋಕದ ಪರಿಪಾಲನೆಗೆ ಕಾರಣನಾಗಿ ಲೋಕದಲ್ಲಿಯೇ ಸಂಚರಿಸಿಕೊಂಡಿರು. ನಿನ್ನ ಸತ್ತ್ವ ಮತ್ತು ಪರಾಕ್ರಮಗಳಿಂದ ಭೂತೋತ್ಪತ್ತಿ ಗಾಗಿ ಇಲ್ಲಿಯೆ ನೆಲೆಗೊಳಿಸು.

ಯದಿಹ ತ್ವಂ ಮಹಾಜ್ವಾಲಾಭಾಭಿಃ ಕಲಿತಶೋಭನಃ ।
ಪ್ರಾಪ್ಸ್ಯಸೇ ಸರ್ವಜಂತೂನಾಂ ಭಾಸುರತ್ವಮನುತ್ತಮಂ ।
ನಹ್ಯೇಷ ಧರ್ಮಶ್ಚಾದ್ಯೋ ಮಾಯಾಮೋಹಿಕಕಾಮ್ಯಯಾ ॥ ೫೫ ॥
ಇತ್ಯುಕ್ತೋ ಬ್ರಹ್ಮಣಾ ಸೋಽಗ್ನಿಃ ಪ್ರಜಜ್ವಾಲ ಸಹಸ್ರಶಃ ।
ಅನಂತಜ್ವಾಲಾಭಿತತೋ ನಾನಾವರ್ಣಾದಿಭಿಃ ಶ್ರಿತಃ ॥ ೫೬ ॥
ಅಕಾರೇಕಾರ ಊಕಾರೋ ಬ್ರಹ್ಮಾ ತಮಥ ದೃಷ್ಟವಾನ್ ।
ನೈವಾಽಸೌ ಶಾಮ್ಯತಾಂ ಯಾತಿ ವಹ್ನಿರ್ಭೂಯೋ ವ್ಯವರ್ಧತ ॥ ೫೭ ॥
ವ್ಯಾಪ್ತಂ ಭವಾಽಗ್ನಿನಾ ಸರ್ವಂ ತಿರ್ಯಗೂರ್ಧ್ವಮಧಸ್ತಥಾ ।
ಜ್ವಾಲಾಭಿರುಪರಿಕ್ಷಿಪ್ತಂ ದೃಷ್ಟ್ವಾಽಽತ್ಮಾನಂ ಸಮಂತತಃ ॥ ೫೮ ॥
ಚಿಂತಯಂತಂ ತು ಬ್ರಹ್ಮಾಣಂ ಭೀತಂ ಚೈವ ವಿಶೇಷತಃ ।
ಶಿರಸ್ಯಂಜಲಿಮಾಧಾಯ ತುಷ್ಟಾವಾಽಥ ಪ್ರಣಮ್ಯ ತಂ ॥ ೫೯ ॥
ತೇಜೋನಿಧಿಂ ಚ ಸರ್ವೇಶಂ ಜ್ಞಾತುಮಿಚ್ಛನ್ಪ್ರಜಾಪತಿಃ ।
ನಿರುಕ್ತಸೂಕ್ತರಾಹಸ್ಯೈರ್ಋಗ್ಯಜುಃ ಸಾಮಭಾಷಿತೈಃ ॥ ೬೦ ॥

---

೫೫. ನೀನು ಇಲ್ಲಿಯೇ ನಿನ್ನ ಮಹಾಜ್ವಾಲೆಗಳಿಂದ ಲೋಕಕಲ್ಯಾಣವನ್ನುಂಟುಮಾಡುತ್ತಿರುವೆಯಾದರೆ ಸಕಲ ಜಂತುಗಳಲ್ಲಿಯೂ ಸರ್ವೋತ್ತಮವಾದ ಭಾಸುರತ್ವವನ್ನು ಪಡೆಯುವೆ. ಮಾಯಾಮೋಹಿತರಾದ ಜೀವರ ಅಪೇಕ್ಷೆಯಿಂದ ಇದೂ ಸಹ ಪ್ರಥಮಧರ್ಮವಲ್ಲ.''

೫೬. ಇಂತೆಂದು ಬ್ರಹ್ಮನಿಂದ ಹೇಳಲ್ಪಟ್ಟ ಅಗ್ನಿಯು ಸಹಸ್ರಸಂಖ್ಯಾಕಗಳಾದ ಜ್ವಾಲೆಗಳಿಂದ ಉರಿಯತೊಡಗಿದನು. ಅನಂತಜ್ವಾಲೆಗಳಿಂದಾವೃತನಾಗಿ ಅನೇಕ ವರ್ಣಗಳಿಂದ ಕೂಡಿದ್ದನು.

೫೭. ಆ ಒಂದು ಅಗ್ನಿಯೇ ಅಕಾರ, ಇಕಾರ, ಉಕಾರಾಗ್ನಿಗಳಾಗಿರುವುದನ್ನು ಬ್ರಹ್ಮದೇವನು ಕಂಡನು. ಅದು ಉಪಶಮನವನ್ನು ಹೊಂದದೆ ಮತ್ತೆ ಮತ್ತೆ ಹೆಚ್ಚುತ್ತಲೇ ಇದ್ದಿತು.

೫೮–೫೯. ಭವಾಗ್ನಿಯಿಂದ ಅಧೋಲೋಕ, ಮಧ್ಯಲೋಕ, ಊರ್ಧ್ವಲೋಕಗಳೆಲ್ಲವೂ ವ್ಯಾಪಿತಗಳಾದುವು. ಆ ಜ್ವಾಲೆಗಳಿಂದ ಬ್ರಹ್ಮದೇವನೂ ಸಹ ಮೇಲಕ್ಕೆಸೆಯಲ್ಪಟ್ಟನು. ಬ್ರಹ್ಮನು ಇದನ್ನೇ ಕುರಿತು ಚಿಂತಿಸುತ್ತ ಬಹುವಾಗಿ ಭಯಗೊಂಡನು. ಆತನು ತಲೆಯಲ್ಲಿ ಕೈಗಳನ್ನು ಜೋಡಿಸಿಕೊಂಡು ಆ ಅಗ್ನಿಯನ್ನು ಸ್ತೋತ್ರಮಾಡಲುಪಕ್ರಮಿಸಿದನು.

೬೦. ತೇಜೋರಾಶಿಯಾದ ಸರ್ವೇಶ್ವರನ ನಿಜತತ್ತ್ವವನ್ನು ತಿಳಿಯಲಪೇಕ್ಷಿಸಿ ಆ ಪ್ರಜಾಪತಿಯು ಋಗ್ವೇದ, ಯಜುರ್ವೇದ, ಸಾಮವೇದಗಳೊಳಗಿರುವುವೂ, ನಿರುಕ್ತದಲ್ಲಿ ವಿವರಿಸಲ್ಪಟ್ಟ ರಹಸ್ಯಗಳುಳ್ಳವುಗಳೂ ಆದ ಮಂತ್ರಗಳಿಂದ ಅಗ್ನಿಯನ್ನು ಸ್ತುತಿಸಿದನು.

ಬ್ರಹ್ಮೋವಾಚ :—
ಸಪ್ತತೇಜೋ ನಮಸ್ತೇಽಸ್ತು ಪರಸ್ಮೈ ಪರಮಾತ್ಮನೇ ।
ಅದ್ಭುತಾನಾಂ ಪ್ರತಿಶ್ರೋತ್ರೇ ತೇಜಸಾಂ ನಿಧಯೇ ನಮಃ ॥ ೬೧ ॥
ಬೀಜಂ ಯೋ ವಿಶ್ವಭಾವಾನಾಂ ಸಂಮೋಹನವಿಮೋಹನಂ ।
ಅಂಧಕಾರೋ ಯುಗಾವರ್ತಕಾಲೇ ಕಾಲೇ ಚ ದುಃಸಹ ॥ ೬೨ ॥
ಊರ್ಧ್ವವಕ್ತ್ರ ನಮಸ್ತೇಽಸ್ತು ಸತ್ವಾತ್ಮಕ ಧರಾತ್ಮಕ ।
ಜ್ವಲಜ್ಜ್ವಾಲೋತ್ಪನ್ನಜಲ ಜಲಜೇಶ ಜಲೇಚರ ॥ ೬೩ ॥
ಜಲಜೋತ್ಫುಲ್ಲ ಪತ್ರಾಕ್ಷ ಜಲದೇವ ಹುತಾಶನ ।
ಕೃಷ್ಣಕಾಂತೇ ಕೃಷ್ಣಮಾರ್ಗ ಸ್ವರ್ಗಮಾರ್ಗ ಪ್ರದಾಯಕ ॥ ೬೪ ॥
ಯಜ್ಞಾಹುತಿಸಮಾಚಾರ ಯಜ್ಞರೂಪ ನಮೋನಮಃ ।
ಸ್ವರ್ಣಗರ್ಭ ಶಮೀಗರ್ಭ ಜಯದೇವ ಸನಾತನ ॥ ೬೫ ॥
ತಮೋಹಾರ ಮಹಾಹಾರ ಸ್ವಾಹಾಪ್ರಿಯ ತಮೋಹರ ।
ಪ್ರದೀಪ್ತರೋಚಿರ್ದೇವೇಶ ಚಿತ್ರಭಾನೋ ನಮೋಽಸ್ತುತೇ ॥ ೬೬ ॥

---

೬೧. ಬ್ರಹ್ಮನು ಹೇಳುತ್ತಾನೆ:—ಸಪ್ತಜಿಹ್ವನೂ, ಪರಮನೂ, ಪರಮಪುರುಷಸ್ವರೂಪನೂ ಆದ ನಿನಗೆ ನಮಸ್ಕಾರವು. ಅನೇಕ ಅದ್ಭುತಗಳನ್ನು ಭಕ್ತರಿಗೆ ಕೈಗೂಡಿಸುವವನೂ ತೇಜೋನಿಧಿಯೂ ಆದ ನಿನಗೆ ನಮಸ್ಕಾರವು.

೬೨. ಸಕಲ ಪದಾರ್ಥಗಳಿಗೂ ನೀನೇ ಬೀಜರೂಪನಾಗಿ ಜೀವರಿಗೆ ಸಂಮೋಹನವನ್ನೂ ಜ್ಞಾನವನ್ನೂ ಉಂಟುಮಾಡುತ್ತಿರುವೆ. ಚತುರ್ಯುಗವು ಮುಗಿದ ಕಾಲದಲ್ಲಿ ಅಂಧಂತಮಸ್ಸಾಗಿರುವೆ. ಪ್ರಳಯಕಾಲದಲ್ಲಿ ದುಸ್ಸಹವಾದ ತೇಜಸ್ಸಿನಿಂದ ಎಲ್ಲವನ್ನೂ ಸಂಹರಿಸುವೆ.

೬೩. ಊರ್ಧ್ವಮುಖನೂ, ಸತ್ತ್ವಾತ್ಮಕನೂ, ಭೂಮಿಸ್ವರೂಪನೂ ಆದ ನಿನಗೆ ನಮಸ್ಕರಿಸುವೆನು. ಹೊಳೆಯುತ್ತಿರುವ ನಿನ್ನ ಜ್ವಾಲೆಗಳಿಂದ ಜಲವುಂಟಾಯಿತು. ನೀನೇ ಜಲಚರಜಂತುಗಳಿಗೆ ಒಡೆಯನೂ ಜಲಾಂತರ್ಗತನೂ ಆಗಿರುವೆ.

೬೪. ಕಮಲದಂತೆ ವಿಶಾಲಗಳಾದ ನೇತ್ರಗಳುಳ್ಳವನು ನೀನೆ! ನೀನೇ ಜಲದೇವನು. ಆಹುತಿಗಳನ್ನು ಸ್ವೀಕರಿಸುವವನೂ ನೀನೇ! ಕಪ್ಪಾದ ಹೊಗೆಯಿಂದ ಕೂಡಿದವನೂ, ನೀಲದೇಹವುಳ್ಳವನೂ, ಸ್ವರ್ಗಕ್ಕೆ ಮಾರ್ಗವನ್ನು ತೋರಿಸಿಕೊಡುವವನೂ ನೀನೆ.

೬೫. ಯಜ್ಞಗಳಲ್ಲಿ ಆಹುತಿಗಳನ್ನು ತೆಗೆದುಕೊಳ್ಳುವವನೂ ಯಜ್ಞರೂಪನೂ ಆದ ನಿನಗೆ ನಮಸ್ಕಾರವು. ಸುವರ್ಣದಲ್ಲಿ ಅಡಗಿರುವವನೂ, ಶಮೀಕಾಷ್ಠಗಳಲ್ಲಿರುವವನೂ, ಅನಾದಿನಿಧನನಾದವನೂ, ದೇವದೇವನೂ ಆದ ನಿನಗೆ ನಮಸ್ಕಾರವನ್ನು ಮಾಡುವೆನು.

೬೬. ತಮಸ್ಸನ್ನು ನಾಶಗೊಳಿಸುವವನೂ, ಸರ್ವಭಕ್ಷಕನೂ, ಸ್ವಾಹಾ

ವೈಶ್ವಾನರಾಽನಲೋದಗ್ರ ಊರ್ಧ್ವಪಾವಕ ಸರ್ವಗ ।
ವಿಭಾವಸೋ ಮಹಾಭಾಗ ಕೃಷ್ಣವರ್ತ್ಮನ್ನಮೋಽನಮಃ ॥ ೬೭ ॥

ಸನತ್ಕುಮಾರ ಉವಾಚ :—

ಏವಂ ಸ್ತುತಸ್ತದಾ ಸೋಽಗ್ನಿರ್ವಿರಿಂಚಿಮಬ್ರವೀದ್ವಚಃ ।
ತುಷ್ಟೋಽಹಂ ಭವತೋ ಬ್ರಹ್ಮನ್ಸ್ಥಾವಕರ್ಮ ಪ್ರಸಿದ್ಧ್ಯತಿ ॥ ೬೮ ॥
ಏವಮುಕ್ತಸ್ತದಾ ಬ್ರಹ್ಮಾ ನಮಸ್ಕೃತ್ಯಾಽಬ್ರವೀತ್ಪುನಃ ।
ಜ್ಞಾತುಮಿಚ್ಛಾಮ್ಯಹಂ ದೇವ ಕೋ ಹಿ ತ್ವಂ ಭಗವಾನಿತಿ ॥ ೬೯ ॥
ಅಬ್ರವೀತ್ಸೋಽಥ ಬ್ರಹ್ಮಾಣಂ ಪುರುಷಸ್ತ್ವಂ ಪ್ರಜಾಪತಿಃ ।
ಅಜ್ಞೇಯಂ ಪರಮಂ ರೂಪಂ ತೇನ ಯೋಗ್ಯೇನ ಪಶ್ಯ ಮೇ ॥ ೭೦ ॥
ಅಥಾಽಪಶ್ಯತ್ಸ ದಿವ್ಯೇನ ಭಗವಂತಂ ಸನಾತನಂ ।
ಸರ್ವಜ್ಞಂ ವಿಧಿಕರ್ತಾರಮೀಶ್ವರಂ ಸದಸತ್ಪರಂ ॥ ೭೧ ॥

---

ದೇವಿಗೆ ವಲ್ಲಭನೂ ನೀನೇ ಆಗಿರುವೆ. ನೀನು ದಿಕ್ಕುಗಳನ್ನು ಬೆಳಗಿಸುವ ತೇಜಸ್ಸುಳ್ಳ ದೇವತಾಸಾರ್ವಭೌಮನು. ಚಿತ್ರಭಾನುವಾದ ನಿನಗೆ ನಮಸ್ಕಾರವು.

೬೭. ಸಕಲ ಜೀವರಲ್ಲಿ ಅಡಗಿರುವ ಎಲೈ ಅಗ್ನಿಯೆ ! ನೀನು ಅತ್ಯುತ್ತಮನು. ಊರ್ಧ್ವಜ್ವಾಲೆಗಳುಳ್ಳವನು ; ಸರ್ವವ್ಯಾಪಿಯು ; ವಿಭಾವಸುವು ; ಮಹಾಭಾಗ್ಯಶಾಲಿಯೆ ! ಧೂಮಮಾರ್ಗದರ್ಶಕನಾದ ನಿನ್ನನ್ನು ವಂದಿಸುವೆನು.

೬೮. ಸನತ್ಕುಮಾರನು ಹೇಳುತ್ತಾನೆ:—ಇಂತು ಸ್ತೋತ್ರಮಾಡಲ್ಪಟ್ಟ ಆ ಅಗ್ನಿಯು ಬ್ರಹ್ಮನನ್ನು ಕುರಿತು ಹೇಳಿದನು : "ಎಲೈ ಬ್ರಹ್ಮನೆ! ನಿನ್ನ ಸ್ತೋತ್ರದಿಂದ ನಾನು ಸಂತುಷ್ಟನಾದೆನು. ನಿನ್ನಿಂದ ಲೋಕಸೃಷ್ಟಿಯ ಕಾರ್ಯವು ನೆರವೇರುವುದು."

೬೯. ಇಂತೆನಲು ಆಗ ಬ್ರಹ್ಮನು ಪುನಃ ನಮಸ್ಕಾರವನ್ನು ಮಾಡಿ "ದೇವದೇವನೆ! ಭಗವಂತನಾದ ನೀನು ಯಾರೆಂಬುದನ್ನು ತಿಳಿಯಲಿಚ್ಛಿಸುತ್ತೇನೆ" ಎಂದನು.

೭೦. ಅಗ್ನಿಯು ಬ್ರಹ್ಮನಿಗೆ ಹೇಳಿದನು :—ಪ್ರಜಾಪತಿಯಾದ ನೀನು ದೇವರಾಶಿಗಳಲ್ಲಿ ಪ್ರವಿಷ್ಟನಾಗಿರುವೆಯಾದುದರಿಂದ ನನ್ನ ಉತ್ತಮರೂಪವನ್ನು ತಿಳಿಯಲಾರದವನಾಗಿರುವೆ. ಆದುದರಿಂದ ಯೋಗದೃಷ್ಟಿಯಿಂದ ನನ್ನನ್ನು ನೋಡು.

೭೧. ಆಗ ಬ್ರಹ್ಮನು ದಿವ್ಯದೃಷ್ಟಿಯಿಂದ ನೋಡಲು ಅಗ್ನಿಯು ಸನಾತನನಾದ ಭಗವಂತನೇ ಎಂಬುದನ್ನು ತಿಳಿದನು. ಆತನೇ ಸರ್ವಜ್ಞನು. ಬ್ರಹ್ಮನಿಗೂ ಕಾರಣನು. ಲೋಕೇಶ್ವರನು ಸತ್ತು, ಅಸತ್ತು ಎಂಬ ಭಾವಗಳಿಗೆ ಹೊರಗು.

ಜ್ವಲನಂ ಗಗನಂ ಭೂಮಿಂ ದೃಶ್ಯಾಽದೃಶ್ಯಂ ಪರಂ ಪದಂ ।
ಭೂತಂ ಭವ್ಯಂ ಭವಿಷ್ಯಂ ಚ ಜಗತ್ಸ್ಥಾವರಜಂಗಮಂ ।
ಸದೈವ ಕುರುತೇ ದೇವೋ ಭುಂಕ್ತೇ ಸರ್ವಂ ಯತಃ ಪ್ರಭುಃ ॥ ೭೨ ॥
ಅತಿಸಂಭೂತಿಭವ್ಯೇನ ಸ್ತೋತ್ರೇಣಾಽಥ ಪ್ರಜಾಪತಿಃ ।
ತುಷ್ಟಾವ ದೇವಂ ಪ್ರಕೃತಂ ಪುರಾಣಮಜಮವ್ಯಯಂ ॥ ೭೩ ॥
ತತೋಽತಿರಿಕ್ತವರ್ಣಂ ಚ ದೃಷ್ಟ್ವಾ ದೇವಃ ಪ್ರಜಾಪತಿಃ ।
ವಿಶ್ವತೋ ಬಾಹುಚರಣಂ ವಿಶ್ವತೋಽಗ್ನಿಶಿರೋಮುಖಂ ॥ ೭೪ ॥
ವ್ಯಕ್ತಾಽವ್ಯಕ್ತಪ್ರಣೇತಾರಂ ಪ್ರಣಮಂಛಿರಸಾ ಸ್ವಯಂ ।
ಪಶ್ಯತೇಽಥ ನಮಸ್ತೇಽಸ್ತು ತುಭ್ಯಂ ವಿಶ್ವಭವಾತ್ಮನೇ ॥ ೭೫ ॥
ಪೃಥಿವೀ ವಾಯುರಾಕಾಶಂ ಯಚ್ಚಾಽನ್ಯದ್ಭುವನತ್ರಯಂ ।
ಲೋಕಾಲೋಕೇಶ್ವರಂ ಚೈವ ಜಗತ್ಸ್ಥಾವರಜಂಗಮಂ ॥ ೭೬ ॥
ತತ್ತ್ವಸರ್ಗಂ ಭೂತಸರ್ಗಂ ಭಾವಸರ್ಗಂ ತಥೈವ ಚ ।
ಬ್ರಹ್ಮತೇಜೋಮಯಾತ್ಮಾನಂ ಸಂಪಶ್ಯಂಶ್ಚಕ್ಷುಷಾ ಸ್ವತಃ ॥ ೭೭ ॥

---

೭೨. ಆತನೇ ಅಗ್ನಿ, ಆಕಾಶ, ಭೂಮಿಗಳು. ದೃಶ್ಯ ಮತ್ತು ಅದೃಶ್ಯಗಳನ್ನತಿಕ್ರಮಿಸಿದ ಪರಮಪದವು. ಆತನೇ ಭೂತ ವರ್ತಮಾನ ಭವಿಷ್ಯತ್ಕಾಲಗಳು. ಸ್ಥಾವರಜಂಗಮಗಳಿಂದ ತುಂಬಿದ ಜಗತ್ತೂ ಆತನೇ. ನಿತ್ಯವೂ ಲೋಕಗಳ ಸೃಷ್ಟಿಯನ್ನೂ ಸಂಹಾರವನ್ನೂ ಮಾಡುತ್ತಿರುವವನಾದುದರಿಂದ ಆತನೇ ಸರ್ವಸ್ವಾಮಿಯು.

೭೩. ಇದನ್ನು ಕಂಡು ಪ್ರಜಾಪತಿಯು ಅತ್ಯಂತ ಭಕ್ತಿಯಿಂದುಂಟಾದ ಸ್ತೋತ್ರದಿಂದ ಕಾರಣಪುರುಷನೂ, ಪುರಾಣನೂ, ಜನನಮರಣವರ್ಜಿತನೂ ಆದ ಆ ಆದಿದೇವನನ್ನು ಸ್ತೋತ್ರಮಾಡಿದನು.

೭೪–೭೫. ಆಗ ಪ್ರಜಾಪತಿಯು ವರ್ಣವಿಭೇದಗಳಿಲ್ಲದವನೂ, ಅನಂತ ಬಾಹುಚರಣಗಳುಳ್ಳವನೂ, ಅನಂತಾಗ್ನಿಶಿರೋಮುಖಸಹಿತನೂ, ವ್ಯಕ್ತಾವ್ಯಕ್ತಗಳೆರಡಕ್ಕೂ ನಿಯಾಮಕನೂ ಆದ ಮಹಾದೇವನಿಗೆ ಶಿರಸಾ ಅಷ್ಟಾಂಗ ನಮಸ್ಕಾರವನ್ನು ಮಾಡಿ ಸ್ತೋತ್ರಮಾಡಿದನು. "ಸಕಲಕ್ಕೂ ದ್ರಷ್ಟೃವಾದ ನಿನಗೆ ನಮಸ್ಕಾರವು. ಆತ್ಮದಿಂದಲೇ ಬ್ರಹ್ಮಾಂಡವನ್ನು ಹೊರಗೆಡಹಿದ ನಿನ್ನನ್ನು ನಮಸ್ಕರಿಸುವೆನು.

೭೬–೭೭. ನೀನೇ ಭೂಮಿಯು, ವಾಯುವು, ಆಕಾಶವು. ಮೂರು ಲೋಕಗಳಲ್ಲಿರುವ ಸಮಸ್ತವೂ ನೀನೇ ಆಗಿರುವೆ. ದೃಶ್ಯಾದೃಶ್ಯಗಳಿಗೆ ನೀನೇ ಒಡೆಯನು. ಸ್ಥಾವರಜಂಗಮಾತ್ಮಕವಾದ ಜಗತ್ತೂ ನೀನೆ. ತತ್ತ್ವಗಳಿಗೂ, ಪಂಚಭೂತಗಳಿಗೂ, ಜೀವರಿಗೂ ನೀನೇ ಆದಿಕಾರಣನಾಗಿರುವೆ. ಬ್ರಹ್ಮತೇಜೋಮಯವಾದ ನನ್ನ ಆತ್ಮವೂ ನೀನೇ ಎಂಬುದನ್ನು ನನ್ನ ಕಣ್ಣುಗಳಿಂದಲೇ ನೋಡುತ್ತಿರುವೆನು.

**ಯತ್ಕಿಂಚಿದ್ವಸ್ತುಜಾತಂ ಹಿ ತತ್ಸರ್ವಮಚರಂ ಚರಂ ।**
**ಏವಂ ಸ್ತುತಃ ಸತು ತದಾ ಅನಾದಿರ್ಭಗವಾನ್ಪ್ರಭುಃ ॥ ೭೮ ॥**
**ಅಥೇಶಃ ಪ್ರಾಹ ಬ್ರಹ್ಮಾಣಂ ತ್ವಯಾ ದೃಷ್ಟಂ ಯಥಾತಥಂ ।**
**ಸೃಜೇದಾನೀಂ ಪ್ರಜಾಃ ಸರ್ವಾಃ ಸ ಚ ತ್ವಂ ವಿನಯಾನ್ವಿತಃ ॥ ೭೯ ॥**
**ಕರ್ತಾಽಹಮನುಕರ್ತಾ ತ್ವಂ ಲೋಕಾನಾಂ ಸ್ಥಿತಿಕಾರಣೇ ।**
**ಕುರುಷ್ವೈತತ್ತಥಾ ಭಾವ್ಯಂ ಮಯಾ ಪೂರ್ವಂ ವಿನಿರ್ಮಿತಂ ॥ ೮೦ ॥**
**ಇತ್ಯುಕ್ತೋ ದೇವದೇವೇನ ಬ್ರಹ್ಮಾ ವಚನಮಬ್ರವೀತ್ ।**
**ನಮಸ್ತೇಽಸ್ತು ಮಹಾದೇವ ಭವ ಶರ್ವ ನಮೋಽಸ್ತು ತೇ ॥ ೮೧ ॥**
**ತ್ವತ್ಪ್ರಸಾದಾತ್ಪ್ರಜಾಸರ್ಗಂ ಕುರ್ವತೋ ಮೇ ಮಹೇಶ್ವರ ।**
**ಸಖಾಯಂ ಪ್ರಾಪ್ತುಮಿಚ್ಛಾಮಿ ತ್ವಯಾ ದತ್ತಂ ಜಗತ್ಪತೇ ॥ ೮೨ ॥**

**ಮಹೇಶ್ವರ ಉವಾಚ :—**

**ಧ್ಯಾಯತಃ ಪುತ್ರಕಾಮಸ್ಯ ಸ್ರಷ್ಟುಕಾಮಸ್ಯ ತೇ ಯತಃ ।**
**ಕಲ್ಪಿತಂ ಭವಿತಾ ದೇವ ಮದುತ್ಪತ್ತಿಂ ಯದೀಪ್ಸ್ಯಸಿ ॥ ೮೩ ॥**

---

೭೮–೭೯. ಪ್ರಪಂಚದಲ್ಲಿರುವ ಪ್ರತಿಯೊಂದು ವಸ್ತುವೂ ಚರ ಮತ್ತು ಸ್ಥಿರವಾದ ನಿನ್ನ ರೂಪವೇ ಆಗಿರುವುದು.'' ಬ್ರಹ್ಮನು ಹೀಗೆ ಸ್ತುತಿಸಲು ಆದ್ಯಂತ ರಹಿತನೂ, ಅಷ್ಟೈಶ್ವರ್ಯಸಹಿತನೂ ಆದ ಮಹೇಶ್ವರನು ಆತನಿಗೆ ಅಪ್ಪಣೆಯನ್ನು ಮಾಡಿದನು. ''ನೀನು ಈಗ ನೋಡಿದುದೆಲ್ಲ ಯಥಾರ್ಥವೇ ಆಗಿರುವುದು. ಇದನ್ನು ಸ್ಮರಿಸಿಕೊಂಡು ವಿನಯವಂತನಾಗಿ ಸಕಲ ಪ್ರಜೆಗಳನ್ನೂ ಸೃಷ್ಟಿಮಾಡು.

೮೦. ಮುಖ್ಯವಾದ ಲೋಕಕರ್ತೃವು ನಾನೇ. ನೀನು ಕೇವಲ ಅನುಕರಣದಿಂದ ನನಗೆ ಸಹಾಯಕನಾಗಿರುವೆ. ಆದುದರಿಂದ ಲೋಕಗಳ ಉತ್ಪತ್ತಿ ಕಾರ್ಯವನ್ನು ನೀನು ಮಾಡು. ಈ ಕಾರ್ಯವು ಹೀಗೆಯೇ ನಡೆಯಬೇಕೆಂದು ನಾನು ಮೊದಲೇ ನಿಶ್ಚಯಿಸಿರುವೆನು.''

೮೧. ಇಂತೆಂದು ಆ ದೇವದೇವನು ಹೇಳಲು ಬ್ರಹ್ಮನು ಮಾತನಾಡಿದನು. ''ಮಹಾದೇವನೆ! ಆದಿಕಾರಣನೆ! ಶರ್ವನೆ! ನಿನ್ನನ್ನು ನಮಸ್ಕರಿಸುವೆನು.

೮೨. ಮಹೇಶ್ವರ! ನಿನ್ನ ಅನುಗ್ರಹದಿಂದ ಪ್ರಜಾಸೃಷ್ಟಿಯನ್ನು ಮಾಡುವ ಕೆಲಸದಲ್ಲಿ ಜಗನ್ನಾಯಕನಾದ ನಿನ್ನಿಂದಲೇ ಕೊಡಲ್ಪಡುವ ಒಬ್ಬ ಸಹಾಯಕನನ್ನು ಕೋರುತ್ತೇನೆ.''

೮೩. ಮಹೇಶ್ವರನು ಹೇಳುತ್ತಾನೆ:—ಅಯ್ಯಾ ಬ್ರಹ್ಮನೆ! ಪುತ್ರಾಪೇಕ್ಷೆಯುಳ್ಳವನಾಗಿಯೂ, ಲೋಕಸೃಷ್ಟಿಯನ್ನು ಮಾಡುವವನಾಗಿಯೂ ನೀನು ನನ್ನನ್ನೇ ಧ್ಯಾನಿಸುತ್ತಿರುವುದರಿಂದ ನಿನ್ನ ಮನೋಭಿಲಾಷೆಯು ನೆರವೇರುವುದು. ನನ್ನ ಜನ್ಮವನ್ನೇ ನೀನು ಕೋರುತ್ತಿರುವೆಯಲ್ಲವೆ.

ಪುತ್ರತ್ವಂ ಪ್ರಾಪ್ಯ ಹೇಶಸ್ತೇ ಛೇತ್ಸ್ಯಾಮಿ ಪಂಚಮಂ ಶಿರಃ ।
ತತ್ರ ಚೋತ್ಪಾದಯಿಷ್ಯಾಮಿ ನರನಾರಾಯಣಾವುಭೌ ॥ ೮೪ ॥

ಬ್ರಹ್ಮೋವಾಚ :—

ಕಥಂ ನಾರಾಯಣೋ ದೇವಸ್ತಪಸಾ ಮನ್ಯತೇ ಸ ನಃ ।
ಕೀರ್ತಯಸ್ವ ಸಖಾ ಧನ್ಯಃ ಸ ನಃ ಪೂಜ್ಯೋ ಭವಿಷ್ಯತಿ ॥ ೮೫ ॥
ಅಥಾಽಪಶ್ಯತ್ತತೋ ಬ್ರಹ್ಮಾ ತೇಜಸಾ ಹರಿಮಚ್ಯುತಂ ।
ತಂ ಸರ್ವಗಮನಂ ಗಮ್ಯಂ ಶಿವಂ ನಾರಾಯಣಾತ್ಮಕಂ ॥ ೮೬ ॥
ಮಹೇಶ್ವರಸ್ಯ ತೇಜೋರ್ಧ್ವಗಂ ಸಂತಂ ನಾರಾಯಣಂ ಪ್ರಭುಂ ।
ಚಕಾರ ವ್ಯಾಹರನ್ನಾರ್ತಂ ಶ್ರೀರೂಪಂ ಶಕ್ತಿಸಾಮ್ಯತಃ ॥ ೮೭ ॥
ಅಂಗುಲ್ಯಾ ಸಂಸ್ಪೃಶನ್ದೇವೋ ಬ್ರಹ್ಮಾಣಮಬ್ರವೀದ್ವಚಃ ।
ಬ್ರಹ್ಮಂಸ್ತೇ ಪರಮಂ ಧಾಮ ಋಷಿರ್ನಾರಾಯಣಾನುಗಃ ॥ ೮೮ ॥
ಭವಿತಾ ಲೋಕರಕ್ಷಾರ್ಥಂ ಶ್ರೇಷ್ಠಃ ಸರ್ವಧನುಷ್ಮತಾಂ ।
ನಾರಾಯಣಮಹಾವೀರ್ಯಶಕ್ತಿರೇಷಾ ಮದೀಯಕಾ ॥ ೮೯ ॥

---

೮೪. ಈಶ್ವರನಾದ ನಾನೇ ನಿನ್ನ ಪುತ್ರನಾಗಿ ಜನಿಸಿ ನಿನ್ನ ಐದನೆಯ ತಲೆಯನ್ನು ಕಡಿದು, ಆದರಿಂದಲೇ ನರನಾರಾಯಣರೆಂಬ ಇಬ್ಬರನ್ನುಂಟು ಮಾಡುವೆನು.

೮೫. ಬ್ರಹ್ಮನು ಹೇಳುತ್ತಾನೆ:—ದೇವೋತ್ತಮನಾದ ನಾರಾಯಣನು ತಪಸ್ಸಿನಲ್ಲಿ ನಿರತನಾಗಲು ನಮ್ಮನ್ನು ತಿಳಿಯುವುದೆಂತು? ಈ ಪುಣ್ಯವಂತನು ನನಗೆ ಸಖನಾಗುವುದು ಹೇಗೆಂಬುದನ್ನು ವಿಸ್ತರಿಸಿ ಹೇಳು. ಅವನೇ ನಮಗೆ ಸಂಪೂಜ್ಯನಾಗುವನಷ್ಟೆ.

೮೬. ಆಗ ಬ್ರಹ್ಮನು ಈಶ್ವರನ ತೇಜಸ್ಸಿನಿಂದಲೇ ಶಾಶ್ವತನಾದ ಶ್ರೀಹರಿ ಯುದ್ಭವಿಸಿದುದನ್ನು ಕಂಡನು. ಸರ್ವವ್ಯಾಪಿಯೂ, ಪ್ರಾಪ್ಯವಸ್ತುವೂ ಆದ ಪರಮಶಿವನೇ ನಾರಾಯಣಾತ್ಮಕನಾಗಿರುವುದನ್ನೂ ತಿಳಿದನು.

೮೭. ಪ್ರಭುವಾದ ಆ ನಾರಾಯಣನು ಮಹೇಶ್ವರನ ತೇಜೋಗ್ನಿಯಮೇಲೆ ಇದ್ದುದನ್ನು ಕಂಡು ಆರ್ತನಾದವನ್ನು ಮಾಡಲು ಅಗ್ನಿರೂಪವಾದ ತನ್ನ ಶಕ್ತಿಯನ್ನುಪಸಂಹರಿಸಿಕೊಂಡು ಮಹಾದೇವನು ಸೌಮ್ಯರೂಪನಾದನು.

೮೮–೮೯. ಆತನು ತನ್ನ ಬೆರಳುಗಳಿಂದ ಬ್ರಹ್ಮನ ಮೈಯನ್ನು ಸವರುತ್ತ ಇಂತೆಂದು ಹೇಳಿದನು. "ಎಲೈ ಬ್ರಹ್ಮನೆ! ನಾರಾಯಣನ ಸಹಚರನಾದ ನರಋಷಿಯೇ ನಿನಗೆ ಪರಮಪ್ರಾಪ್ಯನಾಗಿರುವನು. ಸಕಲ ಲೋಕಗಳ ಪರಿಪಾಲನಾರ್ಥವಾಗಿ ಇವನು ಸಮಸ್ತ ಧನುರ್ಧಾರಿಗಳಲ್ಲಿ ಶ್ರೇಷ್ಠನಾಗಿರುವನು. ಮಹಾಪರಾಕ್ರಮಿಯಾದ ನಾರಾಯಣನ ಶಕ್ತಿಯಾದ ಈ ಅಗ್ನಿಯೇ ನನ್ನ ಶಕ್ತಿಯು.

ಇತ್ಯುಕ್ತ್ವಾ ಭಗವಾನ್ದೇವಸ್ತಮಗ್ನಿಂ ಪಾಣಿನಾಽಗ್ರಹೀತ್ ।
ದಕ್ಷಹಸ್ತಾಂಗುಲಿನಖಮಧ್ಯಸ್ಥಂ ಸಮಚೀಕರತ್ ॥ ೯೦ ॥
ಇತಿ ಸತ್ಕೃತ್ಯ ಸತತಂ ನರಂ ಚೈವ ಮಹೇಶ್ವರಃ ।
ಬ್ರಹ್ಮಣೋ ದರ್ಶಯಿತ್ವಾಽಥ ತತ್ರೈವಾಽಂತರಧೀಯತ ॥ ೯೧ ॥
ಅಥಾಽಬ್ರವೀತ್ತತೋ ಬ್ರಹ್ಮಾ ಅಗ್ನಿಂ ತಂ ತು ಯುಗಕ್ಷಯೇ ।
ಸ್ಪೃಶನ್ದಕ್ಷಿಣವಾಮಾಭ್ಯಾಂ ಸಾಂತ್ವಯನ್ನಿವ ತಂ ಗಿರಾ ॥ ೯೨ ॥
ಭೃಗುಶ್ಚೈವಾಂಗಿರಾಃ ಪುತ್ರೌ ಭವಿತಾರೌ ನ ಸಂಶಯಃ ।
ಅತ್ರೈವ ಮಮ ಭವತಾಂ ವಂಶೇ ವಿಖ್ಯಾತಕರ್ಮಣೌ ॥ ೯೩ ॥
ದ್ವಿಧಾ ಸಂಭಜ್ಯ ತೇನಾಽಗ್ನಿಂ ಸೃಷ್ಟೇರ್ಯಜ್ಞೋ ಭವಿಷ್ಯತಿ ।
ಭವಂತೌ ತಿಷ್ಠತಸ್ತತ್ರ ಪೃಥಿವ್ಯಾಂ ದಾನಮಾಶ್ರಿತೌ ॥ ೯೪ ॥
ಬ್ರಹ್ಮಣಾಽಗ್ನೀ ಸಮೇತೌ ತು ಬ್ರಹ್ಮಾಣಮನುನೋದಿತೌ ।
ತಸ್ಮಾದೇವಂ ವಿಧಾತವ್ಯೌ ನಿರ್ಮಥ್ಯ ವಿಧಿಪೂರ್ವಕಂ ॥ ೯೫ ॥
ಅತೋಽಶ್ವತ್ಥೇ ಶಮೀಗರ್ಭೇ ಸಂಯೋಗಸ್ತತ್ರ ಪಠ್ಯತೇ ।
ಭಾರ್ಗವಾಂಗಿರಶ್ಚೈವ ದ್ವಿವಿಧೋ ದೈವ ಉಚ್ಯತೇ ॥ ೯೬ ॥

---

೯೦. ಇಂತೆಂದು ಹೇಳಿ ಮಹೇಶ್ವರನು ಆ ಅಗ್ನಿಯನ್ನು ತನ್ನ ಕೈಯಲ್ಲಿ ಸ್ವೀಕರಿಸಿದನು. ಅಲ್ಲದೆ ತನ್ನ ಬಲಗೈಬೆರಳಿನ ಉಗುರ ಮಧ್ಯದಲ್ಲಿ ಅದನ್ನು ನೆಲೆಗೊಳಿಸಿದನು.

೯೧. ಇಂತು ನುಡಿದು ಎಲ್ಲರನ್ನೂ ಸತ್ಕರಿಸಿ ನರನನ್ನೂ ಬ್ರಹ್ಮದೇವನಿಗೆ ತೋರಿಸಿಕೊಟ್ಟು ಆ ಮಹೇಶ್ವರನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೯೨-೯೩. ಆಗ ಬ್ರಹ್ಮನು ಯುಗಕ್ಷಯಕಾಲದಲ್ಲಿ ಅಗ್ನಿಯನ್ನು ಒಳ್ಳೆಯ ಮಾತುಗಳಿಂದ ಸಮಾಧಾನಗೊಳಿಸುವವನಾಗಿ ತನ್ನ ಎರಡು ಕೈಗಳಿಂದಲೂ ಮುಟ್ಟುತ್ತ ಹೇಳತೊಡಗಿದನು. "ಭೃಗು ಮತ್ತು ಅಂಗೀರಸರೆಂಬ ಇಬ್ಬರು ಮಕ್ಕಳು ನಿನಗಾಗುವರು. ಇದರಲ್ಲಿ ಸಂದೇಹವಿಲ್ಲ. ಅವರು ನನ್ನ ವಂಶಕರರಾಗಿ ವಿಖ್ಯಾತಕರ್ಮಗಳನ್ನು ಮಾಡುವವರಾಗಲಿ.

೯೪. ಆಗ ನೀನು ಅವರಿಂದ ಇಬ್ಭಾಗವಾಗುವೆ. ಆಗ ಸೃಷ್ಟಿಯಜ್ಞವು ನಡೆಯುವುದು. ನಿನ್ನ ಎರಡು ರೂಪಗಳೂ ಭೂಲೋಕದಲ್ಲಿ ಅಂದಿನಿಂದ ದಾನ ಕರ್ಮವನ್ನಾಶ್ರಯಿಸಿಕೊಂಡಿರುವುವು."

೯೫. ಆ ಎರಡು ಅಗ್ನಿಗಳೂ ಬ್ರಹ್ಮನೊಡನೆಯೇ ಇರುವುದಾಗಿ ಅವನನ್ನು ಪ್ರೇರಿಸುತ್ತಿರುವರು. ಆದುದರಿಂದ ವಿಧಿಪೂರ್ವಕವಾಗಿ ಈ ಎರಡು ಅಗ್ನಿಗಳನ್ನು ನಿರ್ಮಥನಮಾಡಿ ಧಾರಣಮಾಡಬೇಕು.

೯೬. ಅಶ್ವತ್ಥ ಮತ್ತು ಶಮೀಕಾಷ್ಠಗಳಲ್ಲಿ ಅವುಗಳ ಸಂಯೋಗವಿರುವು

ತಸ್ಮಾತ್ಸುತಹಿತಃ ಶ್ರೇಷ್ಠಶ್ಚತುರ್ಥ ಇತಿ ಕಥ್ಯತೇ ।
ಏವಂ ವ್ಯಾಸ ಸಮುತ್ಪನ್ನೋ ನರೋಽಸೌ ಪೂರ್ವಜನ್ಮನಿ ॥ ೯೭ ॥
ಏವಂ ತು ಬ್ರಹ್ಮಣೋ ವಕ್ತ್ರಂ ಪಂಚಮಂ ಸಮುಪದ್ಯತ ॥ ೯೮ ॥
ಏತದ್ಯೋ ಬುಧ್ಯತೇ ದೇವತೇಜಃಸರ್ಗಮನುತ್ತಮಂ ।
ಬ್ರಹ್ಮಣೋ ಯಾತಿ ಸಾಲೋಕ್ಯಂ ಶಾಂತೋ ದಾಂತೋ ಜಿತೇಂದ್ರಿಯಃ ॥
ಏತದ್ಯೋಽಗ್ನಿಸಮುದ್ಭವಂ ಪಶುಪತೇರ್ಮಾಹಾತ್ಮ್ಯಸಂಸೂಚಕಂ
ವಹ್ನೇಃ ಸಾಧುಮತಿಃ ಶೃಣೋತಿ ಸತತಂ ಯಃ ಶ್ರದ್ಧಯಾ ಭಾವಿತಂ ।
ಯೋ ವ್ಯಾಸ ದ್ವಿಜದೇವತಾ ಪ್ರಮುಖತಃ ಸಂಶ್ರಾವಯೇದ್ಭಕ್ತಿತಃ
ಸೋಽತ್ಯರ್ಥಂ ಭವಭಾವಿತಃ ಶಿವಪುರೇ ಸಂಪೂಜ್ಯತೇ ದೈವತೈಃ ॥೧೦೦॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ವೈಶ್ವಾನರೋತ್ಪತ್ತಿ ವರ್ಣನಂ"ನಾಮ ಚತುರ್ಥೋಽಧ್ಯಾಯಃ

---

ದೆಂದು ಶಾಸ್ತ್ರಗಳು ಹೇಳುವುವು. ದ್ವೈವಿಕವಾದ ಅಗ್ನಿಯು ಭಾರ್ಗವ ಮತ್ತು ಆಂಗಿರಸವೆಂದು ಎರಡುವಿಧವಾಗಿರುವುದೆಂದು ಹೇಳುವರು.

೯೭. ಅಕಾರ, ಇಕಾರ, ಉಕಾರಾಗ್ನಿಗಳಿಗಿಂತ ಸುತಹಿತವೆಂಬ ಈ ನಾಲ್ಕನೆಯ ಅಗ್ನಿಯು ಶ್ರೇಷ್ಠವೆಂದು ಕರೆಯಲ್ಪಡುವುದು. ಎಲೈ ವ್ಯಾಸನೆ! ಈ ವಿಧವಾಗಿಯೇ ಪೂರ್ವಜನ್ಮದಲ್ಲಿ ನರನು ಉತ್ಪನ್ನನಾದನು.

೯೮. ಈಪ್ರಕಾರದಿಂದಲೇ ಬ್ರಹ್ಮನಿಗೆ ಐದನೆಯ ಮುಖವೂ ಉಂಟಾಯಿತು.

೯೯. ಸರ್ವೋತ್ತಮವಾದ ದೇವತೇಜಸ್ಸಿನ ಉತ್ಪತ್ತಿಯ ಈ ಕ್ರಮವನ್ನು ಯಾವ ಮನುಷ್ಯನು ತಿಳಿಯುವನೊ, ಅವನು ಶಮ, ದಮ, ಇಂದ್ರಿಯ ನಿಗ್ರಹಗಳಿಂದ ಕೂಡಿದವನಾಗಿ ಬ್ರಹ್ಮನ ಸಾಲೋಕ್ಯವನ್ನು ಪಡೆಯುವನು.

೧೦೦. ಎಲೈ ವ್ಯಾಸ ಮಹರ್ಷಿಯೆ! ಪಶುಪತಿಯ ಮಾಹಾತ್ಮ್ಯವನ್ನು ಪ್ರತಿಪಾದನಮಾಡುವ ಅಗ್ನಿಯ ಉತ್ಪತ್ತಿಯನ್ನು ಕುರಿತ ಈ ಅಧ್ಯಾಯವನ್ನು ಸಾಧು ಬುದ್ಧಿಯಾದ ಯಾವ ಮನುಜನು ಶ್ರದ್ಧಾಭಕ್ತಿಗಳಿಂದ ನಿತ್ಯವೂ ಕೇಳುತ್ತಿರುವನೊ, ಯಾವನು ದೇವತುಲ್ಯರಾದ ಬ್ರಾಹ್ಮಣರ ಮುಖದಿಂದ ಇದನ್ನು ಭಕ್ತಿಯಿಂದ ಇತರರಿಗೆ ಕೇಳಿಸುವನೊ, ಅವನು ಪರಮೇಶ್ವರನಿಗೆ ಅತ್ಯಂತ ಪ್ರಿಯನಾಗಿ ಶಿವಪುರವೆನಿಸಿದ ಕೈಲಾಸದಲ್ಲಿ ದೇವತೆಗಳಿಂದಲೂ ಪೂಜೆಗೊಳ್ಳುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅಂವತೀಕ್ಷೇತ್ರ ಮಾಹಾತ್ಮ್ಯದಲ್ಲಿ "ವೈಶ್ವಾನರೋತ್ಪತ್ತಿವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ದೇವಾಗಮನವರ್ಣನಂ

ವ್ಯಾಸ ಉವಾಚ :—

ಯುದ್ಧೇ ನಿವಾರಿತೇ ತತ್ರ ರಕ್ತಸ್ವೇದಜಯೋಃ ಪುರಾ ।
ಕಿಂ ಕೃತಂ ಬ್ರಹ್ಮಣಾ ತತ್ರ ಪ್ರಾಯಶ್ಚಿತ್ತಂ ಚ ಕರ್ಮಣಾಂ ॥ ೧ ॥
ಜನಾರ್ದನೇನ ಕಿಂ ಕರ್ಮ ಶಂಕರೇಣ ಚ ಯನ್ಮುನೇ ।
ಏತತ್ಸರ್ವಂ ಸಮಾಖ್ಯಾಹಿ ಪ್ರಸೀದ ವದತಾಂ ವರ ॥ ೨ ॥

ಸನತ್ಕುಮಾರ ಉವಾಚ :—

ಬ್ರಹ್ಮಾ ಜುಹ್ವನ್ನಗ್ನಿಹೋತ್ರಂ ವನೌಷಧಿಫಲಚ್ಛದೈಃ ।
ಶಸ್ತೈಃ ಕುಶಸಮಿದ್ಭಿಶ್ಚ ಯಥೋಕ್ತಂ ಹರಿಣಾ ಪುರಾ ॥ ೩ ॥
ಬದರ್ಯಾಶ್ರಮಮಾಸಾದ್ಯ ನರನಾರಾಯಣಾವೃಷೀ ।
ತೇಪತುಸ್ತೌ ತಪಶ್ಚೋಗ್ರಂ ಹಿತಾರ್ಥಂ ಸರ್ವದೇಹಿನಾಂ ॥ ೪ ॥

---

## ಕನ್ನಡದ ಅನುವಾದ

### ದೇವಾಗಮನವರ್ಣನ

೧. ವ್ಯಾಸನು ಕೇಳುತ್ತಾನೆ:—ವಿಷ್ಣುವಿನ ರಕ್ತದಿಂದಲೂ, ಬ್ರಹ್ಮನ ಸ್ವೇದದಿಂದಲೂ ಹುಟ್ಟಿದ ಇಬ್ಬರು ನರರಿಗೂ ನಡೆದ ಯುದ್ಧವು ಇಂತು ಉಪರತಿಯನ್ನು ಹೊಂದಲು ಬ್ರಹ್ಮನು ತಾನು ಮಾಡಿದ ಕರ್ಮಕ್ಕೆ ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಂಡನು ?

೨. ಅಯ್ಯಾ ಮುನಿವರ್ಯನೆ! ಜನಾರ್ದನನು ಏನು ಮಾಡಿದನು ? ಶಂಕರನಿಂದ ಯಾವ ಕಾರ್ಯವು ಮಾಡಲ್ಪಟ್ಟಿತು ? ವಕ್ತೃಗಳಲ್ಲಿ ಶ್ರೇಷ್ಠನಾದವನೆ ! ಪ್ರಸನ್ನನಾಗಿ ಇದನ್ನೆಲ್ಲವನ್ನೂ ವಿಸ್ತಾರವಾಗಿ ಹೇಳುವವನಾಗು.

೩. ಸನತ್ಕುಮಾರನು ಹೇಳುತ್ತಾನೆ:—ಶ್ರೀ ಹರಿಯು ಹಿಂದೆ ಅಪ್ಪಣೆಮಾಡಿದಂತೆ ಬ್ರಹ್ಮನು ವನೌಷಧಿಗಳಿಂದಲೂ, ಫಲಗಳಿಂದಲೂ, ಪತ್ರಗಳಿಂದಲೂ, ಪ್ರಶಸ್ತಗಳಾದ ಕುಶಗಳಿಂದಲೂ, ಸಮಿತ್ತುಗಳಿಂದಲೂ ಅಗ್ನಿತ್ರಯಗಳನ್ನು ಉಪರಿಚರಿಸುತ್ತಿದ್ದನು.

೪. ನರನಾರಾಯಣರಾದರೊ, ಮಹರ್ಷಿಗಳಾಗಿ ಬದರ್ಯಾಶ್ರಮವನ್ನು ಸೇರಿ ಸಕಲ ಜೀವರ ಕಲ್ಯಾಣಕ್ಕಾಗಿ ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದರು.

ಕಪಾಲಪಾಣಿರ್ದೇವೇಶಃ ಪರ್ಯಟನ್ವಸುಧಾಮಿಮಾಂ ।
ಕುಶಸ್ಥಲೀಂ ಸಮಾಸಾದ್ಯ ಪ್ರವಿಷ್ಟಸ್ತದ್ವನೋತ್ತಮಂ ॥ ೫ ॥
ನಾನಾದ್ರುಮಲತಾಕೀರ್ಣಂ ನಾನಾಪುಷ್ಪೋಪಶೋಭಿತಂ ।
ನಾನಾಪಕ್ಷಿರವಾಕೀರ್ಣಂ ನಾನಾಮೃಗಸಮಾಕುಲಂ ॥ ೬ ॥
ದ್ರುಮಪುಷ್ಪಭರಾಮೋದವಾಸಿತಂ ಯತ್ಸ್ಪವಾಯುನಾ ।
ಬುದ್ಧಿಪೂರ್ವಮಿವ ನ್ಯಸ್ತೈಃ ಫಲಪುಷ್ಪೈಃ ಸುಪೂಜಿತಂ ॥ ೭ ॥
ನಾನಾಗಂಧರಸಾಢ್ಯೈಶ್ಚ ಪಕ್ವಾಽಪಕ್ವ ಫಲೋದ್ಭವೈಃ ।
ಫಲೈಃ ಸುವರ್ಣರೂಪಾಢ್ಯೈರಾಸಮಂತಾನ್ಮನೋರಮೈಃ ॥ ೮ ॥
ಜೀರ್ಣಪತ್ರತೃಣಾದೀನಿ ಶುಷ್ಕಕಾಷ್ಠಫಲಾನಿ ಚ ।
ಬಹಿಃ ಕ್ಷಿಪಂತಿ ಜಾತಾನಿ ಮರುತೋಽನುಗ್ರಹಾಣಿ ಚ ॥ ೯ ॥
ನಾನಾಪುಷ್ಪಸಮೂಹಾನಾಂ ಗಂಧಮಾದಾಯ ಮಾರುತಃ ।
ಶೀತಲೋ ವಾತಿ ತಂ ಭೂಮಿದೇಶಂ ಯತ್ರ ವಿವೇಶ ಸಃ ॥ ೧೦ ॥

---

೫. ದೇವೇಶ್ವರನಾದರೊ, ಕೈಗೆ ಅಂಟಿಕೊಂಡಿರುವ ಆ ಬ್ರಹ್ಮಕಪಾಲ ದಿಂದಲೇ ಕೂಡಿದವನಾಗಿ ಭೂಮಂಡಲವನ್ನೆಲ್ಲ ಸುತ್ತುತ್ತ ಕುಶಸ್ಥಲವನ್ನು ಸೇರಿ ಅಲ್ಲಿನ ಸರ್ವೋತ್ತಮವಾದ ವನವನ್ನು ಪ್ರವೇಶಿಸಿದನು.

೬. ಆ ವನವು ಬಗೆಬಗೆಯ ಮರಬಳ್ಳಿಗಳಿಂದ ಕೂಡಿದುದಾಗಿ ಅನೇಕ ಪುಷ್ಪಗಳಿಂದ ಶೋಭಿಸುತ್ತಿದ್ದಿತು. ಅನೇಕ ಪಕ್ಷಿಗಳ ಧ್ವನಿಗಳಿಂದ ತುಂಬಿ ಬಹುವಿಧ ಮೃಗಗಳಿಂದ ನಿಬಿಡವಾಗಿದ್ದಿತು.

೭. ವೃಕ್ಷಗಳ ಪುಷ್ಪಭಾರಗಳ ಮೇಲೆ ಬೀಸುವ ಮಂದಮಾರುತನಿಂದ ವನವೆಲ್ಲವೂ ಸುಗಂಧಿತವಾಗಿದ್ದಿತು; ಬುದ್ಧಿಪೂರ್ವಕವಾಗಿ ವಿಸ್ತರಿಸಲ್ಪಟ್ಟ ಫಲಗಳಿಂದಲೂ, ಪುಷ್ಪಗಳಿಂದಲೂ ವನದೇವತೆಯು ಪೂಜೆಯನ್ನು ಮಾಡಿರುವಂತಿದ್ದಿತು.

೮. ಪುಷ್ಪಗಳು ನಾನಾಗಂಧಗಳಿಂದ ಕೂಡಿದ್ದುವು. ಫಲಗಳು ನಾನಾ ರಸಭರಿತಗಳಾಗಿದ್ದುವು. ಅನೇಕ ಹಣ್ಣು ಕಾಯಿಗಳು ಚಿನ್ನದ ಬಣ್ಣದಿಂದೊಪ್ಪುತ್ತ ವನವೆಲ್ಲವನ್ನೂ ರಮ್ಯವನ್ನಾಗಿ ಮಾಡಿದ್ದುವು.

೯. ವನವಾಸಿಗಳಾದ ಮಹರ್ಷಿಗಳ ಅನುಗ್ರಹಕ್ಕಾಗಿ ವಾಯುಗಳು ಹಣ್ಣಾದ ಎಲೆ, ತೃಣಗಳನ್ನೂ, ಒಣಗಿದ ಸಮಿತ್ಫಲಗಳನ್ನೂ ಹೊರಕ್ಕೆ ಚೆಲ್ಲುತ್ತಿದ್ದುವು

೧೦. ಅನೇಕ ಪುಷ್ಪಗಳ ಸೌರಭವನ್ನು ತೆಗೆದುಕೊಂಡು ಮಂದಮಾರುತವು ಶೀತಳವಾಗಿ ಪರಮೇಶ್ವರನು ಪ್ರವೇಶಿಸಿದ ಪ್ರದೇಶದ ಮೇಲೆ ಸುಖಸ್ಪರ್ಶದಿಂದ ಬೀಸುತ್ತಿದ್ದಿತು.

ಹರಿತಸ್ನಿಗ್ಧನಿಚ್ಛಿದ್ರೈಃ ಪರ್ಣೈರಚ್ಛಿದ್ರಕೋಟರೈಃ ।
ವೃಕ್ಷೈರನೇಕಸಂಖ್ಯೈಶ್ಚ ಭೂಷಿತಂ ಶಿರಸಾನ್ವಿತೈಃ ॥ ೧೧ ॥
ಅರೋಗಿದರ್ಶನೀಯೈಶ್ಚ ಸುವೃತ್ತೈಃ ಕ್ವಚಿದುದ್ಧತೈಃ ।
ಕುಟುಂಬೈರಿವ ವಿಪ್ರಾಣಾಂ ಸಿದ್ಧಿರ್ವೈ ಭಾತಿ ಸರ್ವತಃ ॥ ೧೨ ॥
ಶೋಭನೈರ್ವಾಯುಸಂಕೀರ್ಣೈರಂಕುರೈಃ ಪ್ರಾವೃತಾ ದ್ರುಮಾಃ ।
ಕುಲೀನೈರಿವ ನಿಶ್ಛಿದ್ರೈಃ ಸ್ವಗುಣೈಃ ಪ್ರಾವೃತಾ ನರಾಃ ॥ ೧೩ ॥
ಪವನೋದ್ಧೂತಶಿಖರೈಃ ಸ್ಪರ್ಶಯಂತಿ ಪರಸ್ಪರಂ ।
ಆರಾತ್ಪವನತೋಽನ್ಯೋನ್ಯಸ್ಪೃಷ್ಟಶಾಖಾವತಂಸಕಾಃ ॥ ೧೪ ॥
ನಾಗವೃಕ್ಷಾಃ ಕ್ವಚಿತ್ಪುಷ್ಪೈರ್ಭ್ರಮರಾಲೀನಕೇಸರೈಃ ।
ನಯನೈರಿವ ಶೋಭಂತೇ ಧವಲೈಃ ಕೃಷ್ಣತಾರಕೈಃ ॥ ೧೫ ॥
ಪುಷ್ಪಸನ್ನದ್ಧಶಿಖರಾಃ ಕರ್ಣಿಕಾರದ್ರುಮಾಃ ಕ್ವಚಿತ್ ।
ಯುಗ್ಮಯುಗ್ಮವಿವಾಹೇ ಚ ಶೋಭಂತೇ ಸಾಧುದಂಪತೀ ॥ ೧೬ ॥

---

೧೧. ಹಸುರಾಗಿಯೂ, ದಟ್ಟವಾಗಿಯೂ, ಪೂರ್ಣವಾಗಿಯೂ ಇರುವ ಎಲೆಗಳಿಂದಲಂಕೃತಗಳಾದ ಶಿರೋಭಾಗಗಳಿಂದಲೂ, ಏಕಾಕಾರಗಳಾದ ಕೋಟರಗಳಿಂದಲೂ ಕೂಡಿದ ಅಸಂಖ್ಯಾತಗಳಾದ ವೃಕ್ಷಗಳು ವನವನ್ನು ಭೂಷಿತವನ್ನಾಗಿ ಮಾಡಿದ್ದುವು.

೧೨. ರೋಗರಹಿತರೂ, ಸುಂದರರೂ, ಪುಷ್ಟಾಂಗರೂ, ಬಲಶಾಲಿಗಳೂ ಆದ ಅನೇಕ ಬ್ರಾಹ್ಮಣರ ಕುಟುಂಬಗಳಿಂದ ಎಲ್ಲೆಲ್ಲಿಯೂ ತಪಸ್ಸಿದ್ಧಿಯೇ ವ್ಯಾಪಿಸಿಕೊಂಡಿರುವಂತೆ ಆ ವನವು ತೋರುತ್ತಿದ್ದಿತು.

೧೩. ಅಸಂಖ್ಯಾತರೂ, ತಮಗೆ ಸಮಾನಗುಣವುಳ್ಳವರೂ ಆದ ಮಕ್ಕಳು, ಮೊಮ್ಮಕ್ಕಳುಗಳಿಂದ ಪರಿವೃತರಾದ ಕುಲವೃದ್ಧರಂತೆ ಆ ವನದ ಮಹಾವೃಕ್ಷಗಳು ಸುಂದರಗಳೂ ಗಾಳಿಗೆ ಅಲುಗಾಡುತ್ತಿರುವುವೂ ಆದ ಅಂಕುರಗಳಿಂದ ಸುತ್ತುವರೆಯಲ್ಪಟ್ಟಿದ್ದುವು.

೧೪. ಬಿರುಗಾಳಿಗಳಿಂದ ತಲೆಗಳು ಒಂದನ್ನೊಂದು ಮುಟ್ಟಿ ತೂಗಾಡುತ್ತಿರಲು ಮಹಾವೃಕ್ಷಗಳು ತಮ್ಮತಮ್ಮಲ್ಲಿಯೇ ಬೆಳೆದು ಹೆಣೆದುಕೊಂಡಿರುವ ಶಾಖೆಗಳೂ ಪ್ರಶಾಖೆಗಳೂ ಉಳ್ಳವುಗಳಾಗಿದ್ದುವು.

೧೫. ನಾಗವೃಕ್ಷಗಳು, ಕೆಲವೆಡೆಗಳಲ್ಲಿ ಪುಷ್ಪಿತಗಳಾದ ಹೂವುಗಳ ಮಧ್ಯ ಕೇಸರಗಳಲ್ಲಿ ದುಂಬಿಗಳು ಕುಳಿತಿರಲು ಕರಿಯ ಗುಡ್ಡೆಗಳುಳ್ಳ ಬಿಳಿಯ ಕಣ್ಣುಗಳಿಂದ ನೋಡುತ್ತಿರುವುವೊ ಎಂಬಂತೆ ಕಾಣುತ್ತಿದ್ದುವು.

೧೬. ಕೆಲವೆಡೆಗಳಲ್ಲಿ ಪುಷ್ಪಗಳಿಂದ ನಿಬಿಡಿತಗಳಾದ ಕೊನೆಗಳುಳ್ಳ ಕರ್ಣಿಕಾರವೃಕ್ಷಗಳು ಎರಡೆರಡಾಗಿ ಜೊತೆಗೊಂಡು ವಿವಾಹಿತರಾದ ಸಾಧುದಂಪತಿಗಳಂತೆ ತೋರುತ್ತಿದ್ದುವು.

ಸುಪುಷ್ಪವಿಭವಾಟೋಪೈಃ ಸಿಂದುವಾರಸ್ಯ ಪಂಕ್ತಯಃ ।
ಮೂರ್ತಿಮತ್ಯ ಇವಾಭಾಂತಿ ಪೂಜಿತಾ ವನದೇವತಾಃ ॥ ೧೭ ॥
ಕ್ವಚಿತ್ಕ್ವಚಿತ್ಕುಂದಲತಾಃ ಸುಪುಷ್ಪಾಭರಣೋಜ್ಜ್ವಲಾಃ ।
ದಿಕ್ಷು ದಿಕ್ಷು ಪ್ರಶೋಭಂತೇ ಬಾಲಚಂದ್ರಾ ಇವೋದ್ಯತಾಃ ॥ ೧೮ ॥
ಅತಿವಿದ್ರುಮಶೋಭಾಢ್ಯಾ ಕಾಸಂತ್ಯೋ ಯೂಥಿಕಾಲತಾಃ ।
ಪುಷ್ಪಿತಾಃ ಪುಷ್ಪವಿಟಪಾನ್ ವೀಜಯಂತ್ಯ ಇವೋತ್ಥಿತಾಃ ॥ ೧೯ ॥
ಶಾಲಾರ್ಜುನಾಃ ಕ್ವಚಿದ್ಭಾಂತಿ ವನೋದ್ದೇಶೇಷು ಪುಷ್ಪಿತಾಃ ।
ಧೌತಕೌಶೇಯವಾಸೋಭಿಃ ಪ್ರಾವೃತಾಃ ಪುರುಷೋತ್ತಮಾಃ ॥ ೨೦ ॥
ಅವಿಮುಕ್ತಂ ತು ವಲ್ಲೀಭಿಃ ಪುಷ್ಪಿತಾಸ್ತು ದ್ರುಮಾಸ್ತಥಾ ।
ಉಪಗೂಢಾ ವಿರಾಜಂತೇ ನಾರೀಭಿರಿವ ಸುಪ್ರಿಯಾಃ ॥ ೨೧ ॥
ಚೂತಾಶ್ಚ ತಿಲಕಾಶ್ಚೈವ ಮಂಜರೀಭಿಃ ಕರೈರಿವ ।
ವಾಯುಪ್ರತ್ತಾಭಿರನ್ಯೋನ್ಯಂ ಢೌಕಂತೀವ ಹಿ ಸಜ್ಜನಾನ್ ॥ ೨೨ ॥

---

೧೭. ಸಿಂದುವಾರ ವೃಕ್ಷಗಳ ಪಙ್ಕ್ತಿಗಳು ಪುಷ್ಪವಿಭವದ ಸೌಂದರ್ಯದಿಂದ ಮೂರ್ತಿಗೊಂಡು ಪುಷ್ಪಗಳಿಂದ ಪೂಜಿಸಲ್ಪಟ್ಟ ವನದೇವತೆಗಳೊ ಎಂಬಂತೆ ರಾರಾಜಿಸುತ್ತಿದ್ದುವು.

೧೮. ಅಲ್ಲಲ್ಲಿ ಮಲ್ಲಿಗೆಯ ಬಳ್ಳಿಗಳು ಆಮೂಲಾಗ್ರವಾಗಿ ಪುಷ್ಪಗಳನ್ನು ಹೊಂದಿ ಕಂಗೊಳಿಸುತ್ತ ದಿಕ್ಕುದಿಕ್ಕುಗಳಲ್ಲಿಯೂ ಮೂಡುತ್ತಿರುವ ಬಾಲಚಂದ್ರರಂತೆ ಶೋಭಿಸುತ್ತಿದ್ದುವು.

೧೯. ಯೂಥಿಕಾಲತೆಗಳು ಪುಷ್ಪಿತಗಳಾಗಿ ಕೆಂಪಾದ ಕಾಂತಿಯನ್ನು ತಳೆದು ತಾವು ಸುತ್ತಿಕೊಂಡಿರುವ ಪುಷ್ಪವೃಕ್ಷಗಳಿಗೆ ಗಾಳಿಹಾಕುತ್ತಿರುವಂತೆ ತೂಗಾಡುತ್ತಿದ್ದುವು.

೨೦. ಬಿಳುಪಾದ ಸಾಲವೃಕ್ಷಗಳು ಪುಷ್ಪಭಾರಗಳನ್ನು ತಳೆದು ವನಪ್ರದೇಶಗಳಲ್ಲಿ ಶುಭ್ರಗಳಾದ ರೇಷ್ಮೆಯ ವಸ್ತ್ರಗಳನ್ನು ಧರಿಸಿದ ಅನೇಕ ನಾರಾಯಣರನ್ನು ಹೋಲುತ್ತಿದ್ದುವು.

೨೧. ಜಾಜಿ, ಮಲ್ಲಿಗೆ ಮುಂತಾದ ಬಳ್ಳಿಗಳು ತಮ್ಮನ್ನು ಗಾಢವಾಗಿ ಸುತ್ತಿಕೊಂಡಿರಲು ಪುಷ್ಪಭರಿತಗಳಾದ ಪಲವು ವೃಕ್ಷಗಳು ನಾರಿಯರಿಂದ ಆಲಿಂಗಿತರಾದ ನಾಗರಿಕರಂತೆ ತೋರುತ್ತಿದ್ದುವು.

೨೨. ಆಮ್ರ ಮತ್ತು ತಿಲಕವೃಕ್ಷಗಳು ವಾಯುವಿನಿಂದ ತೂಗಾಡುವ ಹೂಗೊಂಚಲುಗಳುಳ್ಳವುಗಳಾಗಿ ತಮ್ಮತಮ್ಮಲ್ಲಿ ಸ್ಪರ್ಧಿಸಿ ಸಜ್ಜನರನ್ನು ಬಳಿಗೆ ಕರೆಯಲು ಕೈಸನ್ನೆಗಳನ್ನು ಮಾಡುತ್ತಿರುವುವೊ ಎಂಬಂತಿದ್ದುವು.

ಪರಸ್ಪರಂ ಚ ಸಂಯುಕ್ತೈಸ್ತಿಲಕಾಃ ಶೋಕಪಲ್ಲವೈಃ ।
ಹಸ್ತೈರ್ಹಸ್ತಾನ್ಸ್ಪೃಶಂತೀವ ಸುಹೃದಶ್ಚಿತ್ತಸಂಗತಾಃ ॥ ೨೩ ॥
ಫಲಪುಷ್ಪನಗಾ ನಮ್ರಾಃ ಪೇಶಲೇನೇವ ಸಜ್ಜನಾಃ ।
ಅನ್ಯೋನ್ಯಮರ್ಪಯಂತೀವ ಸಪುಷ್ಪಾಣಿ ಫಲಾನಿ ಚ ॥ ೨೪ ॥
ಮಾರುತಾಶ್ಲಿಷ್ಟಸಂತುಷ್ಟೈಃ ಪಾದಪಾಃ ಶಾಲಿವಾರಿಭಿಃ ।
ಆರ್ಯಾಃ ಸಮಾಗತಾ ಲೋಕೇ ಪ್ರೀತಿದಾಯ ಇವ ಸ್ಥಿತಾಃ ॥ ೨೫ ॥
ಪುಷ್ಪಾಣಾಮಿವ ವೇಗೇನ ಸ್ವಶೋಭಾರ್ಥಂ ವ್ರಜಂತಿ ವೈ ।
ಸಮುಸನ್ನಾಹಮಾಸಾದ್ಯ ಪುರುಷಾಃ ಸ್ಪರ್ಧಯೇವ ಹಿ ॥ ೨೬ ॥
ಪುಷ್ಪಶೋಭಾಭರನತೈಃ ಶಿಖರೈಃ ಕಂಪಸಂಯುತೈಃ ।
ನೃತ್ಯಂತಿ ಪಕ್ಷಿಣೋ ಮತ್ತಾ ಯುಕ್ತಾಃ ಶೋಭನಶೇಖರೈಃ ॥ ೨೭ ॥
ಭೃಂಗಾಃ ಪವನವಿಕ್ಷಿಪ್ತಾಽಮೃತವಲ್ಲೀ ಲತಾಽಽಶ್ರಿತಾಃ ।
ಸವಲ್ಲಿಕಾಃ ಪ್ರನೃತ್ಯಂತಿ ಮಾನವಾ ಇವ ಸಪ್ರಿಯಾಃ ॥ ೨೮ ॥

---

೨೩. ತಿಲಕ ಮತ್ತು ಅಶೋಕವೃಕ್ಷಗಳು ಮೊಳೆದು ಬೆಳೆದು ಏಕಚಿತ್ತ ರಾದ ಸ್ನೇಹಿತರು ಬಹುಕಾಲದಮೇಲೆ ಕಲೆತು ಪರಸ್ಪರ ಹಸ್ತಲಾಘವವನ್ನು ಕೊಡುತ್ತಿರುವರೊ ಎಂಬಂತಿದ್ದುವು.

೨೪. ಫಲಪುಷ್ಪಗಳ ಭಾರದಿಂದ ನೆಲಕ್ಕೆ ಬಾಗಿದ ವೃಕ್ಷಗಳು ಸಾಧುಗಳಾದ ಸಜ್ಜನರಂತೆ ಉತ್ತಮ ಪುಷ್ಪಗಳನ್ನೂ ಫಲಗಳನ್ನೂ ತಮ್ಮತಮ್ಮಲ್ಲಿ ಅರ್ಪಿಸು ತ್ತಿರುವಂತಿದ್ದುವು.

೨೫. ಗದ್ದೆಗಳ ಮಧ್ಯದಲ್ಲಿ ಬೆಳೆದ ವೃಕ್ಷಗಳು ತಮ್ಮ ಸುತ್ತಲೂ ಗಾಳಿಯ ಹೊಡೆತಕ್ಕೆ ಸಿಕ್ಕಿ ಓಲಾಡುತ್ತಿರುವ ಬತ್ತದ ಪೈರುಗಳಲ್ಲಿ ನಿಂತಿರಲು, ಲೋಕದಲ್ಲಿ ಸಜ್ಜನರೊಂದುಗೂಡಿ ತಮ್ಮ ಇಷ್ಟಾರ್ಥಗಳನ್ನು ಕೈಗೂಡಿಸುವಂತಹ ದಾನಶೀಲ ನನ್ನು ಸುತ್ತುವರೆದಂತೆ ಕಾಣುತ್ತಿದ್ದುವು.

೨೬. ವೃಕ್ಷಗಳ ಪುಷ್ಪಗಳು ಬಿರುಗಾಳಿಗೆ ಈಡಾಡುತ್ತಿರಲು ಸಮಯುದ್ಧ ದಲ್ಲಿ ಸೇರಿ ಸ್ಪರ್ಧಿಸುತ್ತಿರುವ ಯೋಧರು ತಮ್ಮತಮ್ಮ ಪರಾಕ್ರಮಗಳಿಂದ ಶೋಭಿಸುತ್ತಿರುವುದನ್ನು ಹೋಲುತ್ತಿದ್ದುವು.

೨೭. ಮನೋಹರಗಳಾದ ಪುಷ್ಪಗುಚ್ಛಗಳು ಗಾಳಿಯಲ್ಲಿ ಕಂಪಿಸುತ್ತಿರಲು ತಲೆಗಳಲ್ಲಿ ಉತ್ತಮ ಗರಿಗಳನ್ನು ಹೊತ್ತು ಮದದಿಂದ ಕುಣಿಯುತ್ತಿರುವ ನವಿಲು ಗಳನ್ನು ಅನುಕರಿಸುವಂತಿದ್ದುವು.

೨೮. ತಂಗಾಳಿಗೆ ತೂಗುತ್ತಿರುವ ಅಮೃತವಲ್ಲಿಯ ಲತೆಗಳೊಡನೆ ಅವುಗಳ ನ್ನಾಶ್ರಯಿಸಿದ ದುಂಬಿಗಳೂ ಓಡಾಡುತ್ತ ಪ್ರಿಯೆಯರನ್ನಾಲಿಂಗಿಸಿ ಕುಣಿಯು ತ್ತಿರುವ ನಾಯಕರಂತೆ ತೋರುತ್ತಿದ್ದುವು.

ಪುಷ್ಪಾಭಿಃ ಕುಂದವಲ್ಲೀಭಿಃ ಪಾದಪಾಃ ಕ್ವಚಿದಾವೃತಾಃ ।
ಭಾತಿ ತಾರಾಗಣೈಶ್ಚಿತ್ರೈಃ ಶರದೀವ ನಭಸ್ತಲಂ ॥ ೨೯ ॥
ದ್ರುಮಾಣಾಮುಪ್ಯಥಾಗ್ರೇಷು ಪುಷ್ಪಿತಾ ಮಾಧವೀ ಲತಾ ।
ಶಿಖರಾ ಇವ ಶೋಭಂತೇ ರಚಿತಾ ಬುದ್ಧಿಪೂರ್ವಕಂ ॥ ೩೦ ॥
ಹರಿತಾಃ ಕಾಂಚನಚ್ಛಾಯಾಃ ಫಲಿತಾಃ ಪುಷ್ಪಿತಾ ದ್ರುಮಾಃ ।
ಸೌಹೃದಂ ದರ್ಶಯಂತೀವ ನರಾಃ ಸಾಧುಸಮಾಗಮೇ ॥ ೩೧ ॥
ಪುಷ್ಪಕಿಂಜಲ್ಕಬಹುಲಾಃ ಕಿಂಜಲ್ಕಬಹುಲೋದರಾಃ ।
ಕಿಂಜಲ್ಕಮತ್ತಮಧುಪಾ ವಿಶದಾ ಇವ ಶಾರಿಕಾಃ ॥ ೩೨ ॥
ಶಿರೀಷಪುಷ್ಪಸಂಕಾಶಾಃ ಶುಕಾ ಮಿಥುನತಃ ಕ್ವಚಿತ್ ।
ಕೀರ್ತಯಂತಿ ಗಿರಶ್ಚಿತ್ರಾಃ ಪೂಜಿತಾ ಬ್ರಾಹ್ಮಣಾ ಯಥಾ ॥ ೩೩ ॥
ಸಂಯುಕ್ತಾಃ ಸಹಚಾರಿಣ್ಯಾ ಮಯೂರಾಶ್ಚಿತ್ರಬರ್ಹಿಣಃ ।
ವನಾಂತರೇ ವ್ಯತಿಷ್ಯಂತ ಏಕಾಂತ ಇವ ಸಂಸ್ಥಿತಾಃ ॥ ೩೪ ॥

---

೨೯. ಕೆಲವು ವೃಕ್ಷಗಳು ಪುಷ್ಪಭರಿತಗಳಾದ ಮಲ್ಲಿಗೆಯ ಬಳ್ಳಿಗಳಿಂದಾವೃತಗಳಾಗಿ, ಶರತ್ಕಾಲದಲ್ಲಿ ನಾನಾ ಪ್ರಕಾರಗಳಾದ ನಕ್ಷತ್ರಗಳಿಂದ ಕೂಡಿದ ನಿರ್ಮಲಾಕಾಶದಂತೆ ತೋರುತ್ತಿದ್ದುವು.

೩೦. ಹಲವು ವೃಕ್ಷಗಳ ತುದಿಗಳಲ್ಲಿ ಹೂವಿನಿಂದ ಕೂಡಿದ ಮಾಧವೀ ಲತೆಯನ್ನು ನೋಡಲು ಬುದ್ಧಿಪೂರ್ವಕವಾಗಿಯೇ ಯಾರಾದರೂ ಪುಷ್ಪಗಳ ಕಿರೀಟವನ್ನು ಮಾಡಿಟ್ಟಿರುವರೊ ಎನ್ನುವಂತಿದ್ದಿತು.

೩೧. ಹಳದಿಯ ಮತ್ತು ಚಿನ್ನದ ಬಣ್ಣದ ಹೂವುಗಳಿಂದಲೂ, ಹಣ್ಣುಗಳಿಂದಲೂ ಕೂಡಿದ ವೃಕ್ಷಗಳು ಮನೆಗೆ ಬಂದ ಸಾಧುಗಳಿಗೆ ಸತ್ಕಾರವನ್ನು ಮಾಡುತ್ತಿರುವ ಮನುಷ್ಯರನ್ನು ಹೋಲುತ್ತಿದ್ದುವು.

೩೨. ಪುಷ್ಪಗಳೆಲ್ಲವೂ ದಟ್ಟವಾದ ಕೇಸರಗಳಿಂದೊಡಗೂಡಿದ್ದುವು. ಕೇಸರಗಳ ಮಧ್ಯೆ ದೊಡ್ಡವುಗಳಾದ ಪುಷ್ಪೋದರಗಳಿದ್ದುವು. ಆ ಕೇಸರಗಳ ಮಧುವನ್ನು ಪಾನಮಾಡಿದ ದುಂಬಿಗಳು ಮದಿಸಿದ ಶಾರಿಕೆಗಳನ್ನು ಹೋಲುತ್ತಿದ್ದುವು.

೩೩. ಶಿರೀಷಪುಷ್ಪಗಳನ್ನು ಹೋಲುವ ಗಿಳಿಗಳ ದಂಪತಿಗಳು ಒಂದೆಡೆಯಲ್ಲಿ ಕುಳಿತು ಸತ್ಕಾರಗೊಂಡ ಬ್ರಾಹ್ಮಣರಂತೆ ಮನೋಹರವಾಗಿ ಮಾತುಗಳನ್ನಾಡುತ್ತಿದ್ದುವು.

೩೪. ತಮ್ಮ ಹೆಣ್ಣುಗಳಿಂದೊಡಗೂಡಿ ಬಣ್ಣಬಣ್ಣದ ಗರಿಗಳುಳ್ಳ ನವಿಲುಗಳು ಏಕಾಂತದಲ್ಲಿರುವ ದಂಪತಿಗಳಂತೆ ವನಮಧ್ಯದಲ್ಲಿ ಸಂಚರಿಸುತ್ತಿದ್ದುವು.

**ಕೂಜಂತಿ ಪತ್ರಿಸಂಘಾತಾ ನಾನಾಽದ್ಭುತ ವಿರಾವಿಣಃ ।**
**ಕುರ್ವಂತಿ ರಮಣೀಯಂ ಹಿ ರಮಣೀಯತರಂ ವನಂ ॥ ೩೫ ॥**
**ನಾನಾಮೃಗಗಣಾಕೀರ್ಣಂ ನಿತ್ಯಂ ಸಮುದಿತಾಂಡಜಂ ।**
**ತದ್ವನಂ ನಂದನಸಮಂ ಮನೋದೃಷ್ಟಿವಿವರ್ಧನಂ ॥ ೩೬ ॥**
**ಕಪಾಲಪಾಣಿರ್ಭಗವಾಂಸ್ತಥಾರೂಪಂ ವನೋತ್ತಮಂ ।**
**ದದರ್ಶ ಶಂಕರೋ ದೃಷ್ಟ್ಯಾ ಸೌಮ್ಯಯಾ ನಂದನೋಪಮಂ ॥ ೩೭ ॥**
**ತಾ ವೃಕ್ಷಪಂಕ್ತಯಃ ಸರ್ವಾ ದೃಷ್ಟ್ವಾ ರುದ್ರಂ ಸಮಾಗತಂ ।**
**ನಿವೇದ್ಯ ಶಂಭವೇ ಭಕ್ತ್ಯಾ ಮುಮುಚುಃ ಪುಷ್ಪಸಂಪದಂ ॥ ೩೮ ॥**
**ಪುಷ್ಪಪ್ರತಿಗ್ರಹಂ ಕೃತ್ವಾ ಪಾದಪಾನಾಂ ಮಹೇಶ್ವರಃ ।**
**ವರಂ ವೃಣೀಧ್ವಂ ಭದ್ರಂ ವಃ ಪಾದಪಾನಿತ್ಯುವಾಚ ಸಃ ॥ ೩೯ ॥**
**ಏವಮುಕ್ತೇ ಭಗವತಾ ತರವೋ ನಿರವಗ್ರಹಾಃ ।**
**ಊಚುಃ ಪ್ರಾಂಜಲಯಃ ಸರ್ವೇ ನಮಸ್ಕೃತ್ಯ ಮಹೇಶ್ವರಂ ॥ ೪೦ ॥**

---

೩೫. ಬಹುವಾಗಿಯೂ, ಅದ್ಭುತವಾಗಿಯೂ ಧ್ವನಿಗೈಯುತ್ತಿರುವ ಪಕ್ಷಿಗಣಗಳು ಮನೋಹರವಾದ ಆ ವನವನ್ನು ಮತ್ತೂ ರಮಣೀಯವಾಗಿ ತೋರುವಂತೆ ಮಾಡುತ್ತಿದ್ದುವು.

೩೬. ಇಂತು ಅನೇಕ ಮೃಗಗಳಿಂದ ನಿಬಿಡವಾದುದೂ, ಬಗೆಬಗೆಯ ಪಕ್ಷಿಗಳಿಂದ ಕೂಡಿದುದೂ ಆದ ಆ ವನವು ನೋಡುವವರ ಮನಸ್ಸಿಗೂ ನೇತ್ರಗಳಿಗೂ ಆನಂದವನ್ನುಂಟುಮಾಡುತ್ತ ಮಹೇಂದ್ರನ ನಂದನವನಕ್ಕೆ ಸಮಾನವಾಗಿದ್ದಿತು.

೩೭. ಕಪಾಲಪಾಣಿಯೂ, ಭಗವಂತನೂ ಆದ ಶಂಕರನು ನಂದನಕ್ಕೆ ಸಮಾನವಾದ ಈ ಉತ್ತಮ ವನವನ್ನು ಸೌಮ್ಯದೃಷ್ಟಿಯಿಂದ ನೋಡುತ್ತ ಬಂದನು.

೩೮. ಆ ವೃಕ್ಷಸಮೂಹಗಳೆಲ್ಲವೂ ಮಹಾದೇವನು ಬಂದುದನ್ನು ಕಂಡು ಆತನಿಗೆ ಭಕ್ತಿಯಿಂದ ನಿವೇದನವನ್ನು ಮಾಡಿ ಹೂಮಳೆಗರೆದುವು.

೩೯. ಮಹೇಶ್ವರನಾದರೊ, ಆ ವೃಕ್ಷಗಳರ್ಪಿಸಿದ ಪುಷ್ಪಗಳನ್ನು ಸ್ವೀಕರಿಸಿ ಆ ಮರಗಳನ್ನು ಕುರಿತು "ನಿಮಗೆ ಮಂಗಳವಾಗಲಿ; ಬೇಕಾದ ವರವನ್ನು ಕೇಳಿಕೊಳ್ಳಿರಿ" ಎಂದನು.

೪೦. ಇಂತೆಂದು ಭಗವಂತನು ಅನುಗ್ರಹಿಸಲು ಎಡಬಿಡದೆ ಬೆಳೆದಿದ್ದ ಆ ಮರಗಳೆಲ್ಲವೂ ಅಂಜಲಿಬಂಧವನ್ನು ಮಾಡಿಕೊಂಡು ಮಹೇಶ್ವರನಿಗೆ ನಮಸ್ಕರಿಸಿ ಹೇಳತೊಡಗಿದುವು.

ವರಂ ದದಾಸಿ ದೇವೇಶ ಪ್ರಸನ್ನಜನವತ್ಸಲ ।
ಇಹೈವ ಭಗವನ್ನಿತ್ಯಂ ವನೇ ಸನ್ನಿಹಿತೋ ಭವ ॥ ೪೧ ॥
ಏಷ ನಃ ಪರಮಃ ಕಾಮೋ ದೇವದೇವ ನಮೋಽಸ್ತು ತೇ ।
ತ್ವಂ ಚೇದ್ವಸಸಿ ದೇವೇಶ ವನೇಽಸ್ಮಿನ್ವಿಶ್ವಭಾವನ ॥ ೪೨ ॥
ಸರ್ವಾತ್ಮನಾ ಪ್ರಪನ್ನಾ ಸ್ಮೋ ಯಾಚಾಮಹೇ ವರೋತ್ತಮಂ ।
ಕಿಮನ್ಯವರಕೋಟೀಭಿರೇಷ ನೋ ದೀಯತಾಂ ವರಃ ॥ ೪೩ ॥
ಇತ್ಯುಕ್ತಃ ಪಾದಪೈಃ ಸರ್ವೈಃ ಶರಣಾಗತವತ್ಸಲಃ ।
ವರಂ ದದೌ ಪಾದಪೇಭ್ಯಃ ಪ್ರೋಚ್ಯಮಾನಂ ಮಯಾ ಶೃಣು ॥ ೪೪ ॥

ಮಹೇಶ್ವರ ಉವಾಚ :—

ಬಾಢಂ ಮೇ ಮನಸಾ ವಾಸೋ ನಿತ್ಯಮತ್ರ ವನೋತ್ತಮೇ ।
ವರಂ ದದಾಮಿ ಭೂಯೋ ವೋ ನ ವೃಥಾ ದರ್ಶನಂ ಮಮ ॥ ೪೫ ॥
ನಾಽಗ್ನಿರ್ನವಾಯುರ್ನಜಲಂ ನ ಸೂರ್ಯಕಿರಣಾತಪಃ ।
ನ ವಿದ್ಯುದಶನಿಃ ಶೀತಂ ರುಜಂ ವೋ ಜನಯಿಷ್ಯತಿ ॥ ೪೬ ॥

---

೪೧. ದೇವಾಧಿದೇವನೆ! ಭಕ್ತವತ್ಸಲನೆ! ಈಶ್ವರನಾದ ನೀನು ನಮ್ಮಲ್ಲಿ ಪ್ರಸನ್ನನಾಗಿ ವರವನ್ನು ಕೊಡುವೆಯಾದರೆ ಇಂದಿನಿಂದ ಯಾವಾಗಲೂ ಈ ವನದಲ್ಲಿ ಸನ್ನಿಹಿತನಾಗಿರು.

೪೨. ಇದೇ ನಮಗೆ ಉತ್ತಮವಾದ ವರವು. ದೇವದೇವನೆ! ನಿನ್ನನ್ನು ನಮಸ್ಕರಿಸುವೆವು. ದೇವೇಶ್ವರನೂ, ಭೂತಭಾವವನೂ ಆದ ನೀನು ಈ ವನದಲ್ಲಿಯೇ ವಾಸಮಾಡುತ್ತಿರಬೇಕು.

೪೩. ತ್ರಿಕರಣಗಳಿಂದಲೂ ನಿನ್ನನ್ನು ಶರಣುಹೊಕ್ಕಿರುವೆವು. ಉತ್ತಮವಾದ ಈ ವರವೊಂದನ್ನೇ ಯಾಚಿಸುತ್ತಿರುವೆವು. ಬೇರೆ ಒಂದು ಕೋಟಿ ವರಗಳಿಂದಾಗ ಬೇಕಾದುದೇನು? ಈ ವರವೊಂದನ್ನೇ ಅನುಗ್ರಹಿಸು.''

೪೪. ಇಂತೆಂದು ಆ ವೃಕ್ಷಗಳೆಲ್ಲ ಬೇಡಿಕೊಳ್ಳಲು ಶರಣಾಗತವತ್ಸಲನಾದ ಮಹೇಶ್ವರನು ಅವುಗಳಿಗೆ ವರವನ್ನಿತ್ತನು. ಅದರ ವಿವರವನ್ನು ಹೇಳುವೆನು, ಕೇಳು.

೪೫. ಮಹೇಶ್ವರನು ಹೇಳುತ್ತಾನೆ:—'' ಈ ಉತ್ತಮವನದಲ್ಲಿ ನಿತ್ಯವೂ ವಾಸಮಾಡುತ್ತಿರುವುದು ನನ್ನ ಮನಸ್ಸಿಗೆ ಒಪ್ಪಿಗೆಯಾಗಿಯೇ ಇರುವುದು. ನಿಮಗೆ ಬೇರೊಂದು ವರವನ್ನೂ ಕೊಡುವೆನು. ನನ್ನ ದರ್ಶನವು ಎಂದಿಗೂ ಫಲಹೀನವಾಗುವುದಿಲ್ಲವಷ್ಟೆ.

೪೬. ಅಗ್ನಿಯಾಗಲಿ, ವಾಯುವಾಗಲಿ, ಸೂರ್ಯರಶ್ಮಿಗಳ ಬೇಗೆಯಾಗಲಿ, ಸಿಡಿಲುಗಳಾಗಲಿ ನಿಮಗೆ ಶೀತವನ್ನಾಗಲಿ, ದುಃಖವನ್ನಾಗಲಿ ಇನ್ನುಮೇಲೆ ಉಂಟುಮಾಡಲಾರವು.

ನಿತ್ಯಂ ಪುಷ್ಪವರೋಪೇತಾ ನಿತ್ಯಂ ಸುಸ್ಥಿರಯೌವನಾಃ ।
ಕಾಮಗಾಃ ಕಾಮರೂಪಾಶ್ಚ ಕಾಮರೂಪಫಲಪ್ರದಾಃ ॥ ೪೭ ॥
ಕಾಮಸಂದರ್ಶನಾಃ ಪುಂಸಾಂ ತಪಃ ಸಂಧ್ಯಾಜ್ವಲದ್ದೃಶಾಂ ।
ಶ್ರಿಯಾ ಪರಮಯಾ ಯುಕ್ತಾ ಮತ್ಪ್ರಸಾದಾದ್ಭವಿಷ್ಯಥ ॥ ೪೮ ॥
ಏವಂ ಸ ವರದಃ ಶಂಭುರನುಜಗ್ರಾಹ ಪಾದಪಾನ್ ।
ಸ್ಥಿತ್ವಾ ವರ್ಷಸಹಸ್ರಂ ತು ಕಪಾಲಂ ಚಾಕ್ಷಿಪದ್ಭುವಿ ॥ ೪೯ ॥
ಕ್ಷಿತಿಂ ನಿಪತತಾ ತೇನ ಕಂಪತೇಸ್ಮ ರಸಾತಲಂ ।
ವಿವಶಾಸ್ತತ್ಯಜುರ್ವೇಲಾಂ ಸಾಗರಾಃ ಕ್ಷುಭಿತೋರ್ಮಯಃ ॥ ೫೦ ॥
ಶಕ್ರಾಶನಿಹತಾನೀವ ವ್ಯಾಘ್ರವ್ಯಾಲಾನ್ವಿತಾನಿ ಚ ।
ಶಿಖರಾಣಿ ವ್ಯಶೀರ್ಯಂತ ಪರ್ವತಾನಾಂ ಸಹಸ್ರಶಃ ॥ ೫೧ ॥
ದೇವಸಿದ್ಧವಿಮಾನಾನಿ ಗಂದರ್ವನಗರಾಣಿ ಚ ।
ಪ್ರಸ್ಫುರಂತಿ ವಿನಿಷ್ಪೇತುರ್ವಿನಿನೇಶುರ್ಧರಾತಲೇ ॥ ೫೨ ॥

---

೪೭. ನೀವು ಯಾವಾಗಲೂ ಪುಷ್ಪಭರಿತಗಳಾಗಿಯೂ, ಶಾಶ್ವತವಾದ ಯೌವನವುಳ್ಳವುಗಳಾಗಿಯೂ, ಕಾಮಚಾರಿಗಳಾಗಿಯೂ, ಸ್ವೇಚ್ಛಾರೂಪಧಾರಿಗಳಾಗಿಯೂ, ಯಥೇಷ್ಟಫಲಗಳನ್ನು ಕೊಡುವುವುಗಳಾಗಿಯೂ ಇರುವಿರಿ.

೪೮. ತಪಸ್ಸು ಮತ್ತು ಸಂಧ್ಯಾವಂದನಾದಿ ನಿತ್ಯಕರ್ಮಗಳ ಅನುಷ್ಠಾನದಿಂದ ಉತ್ತೇಜಿತಗಳಾದ ನೇತ್ರಗಳುಳ್ಳವರಿಗೆ ನಿಮ್ಮ ಇಷ್ಟದಂತೆ ಸಂದರ್ಶನವನ್ನು ಕೊಡುತ್ತಿರುವಿರಿ. ನನ್ನ ಅನುಗ್ರಹದಿಂದ ಸರ್ವೋತ್ತಮವಾದ ಐಶ್ವರ್ಯದಿಂದ ಯುಕ್ತರಾಗಿರುವಿರಿ.''

೪೯. ಪ್ರಸನ್ನನಾದ ಮಹೇಶ್ವರನು ಇಂತೆಂದು ಆ ವೃಕ್ಷಗಳಿಗೆ ಅನುಗ್ರಹವನ್ನು ಮಾಡಿದನು. ಅಲ್ಲಿಯೇ ಒಂದು ಸಾವಿರ ವರ್ಷಗಳಕಾಲ ನೆಲಸಿರಲು ಒಂದು ದಿನ ಆತನ ಕೈಯಲ್ಲಿದ್ದ ಬ್ರಹ್ಮಕಪಾಲವು ನೆಲಕ್ಕೆ ಬಿದ್ದಿತು.

೫೦. ಭೂಮಿಯಲ್ಲಿ ಬಿದ್ದ ಆ ಕಪಾಲದ ಭಾರಕ್ಕೆ ರಸಾತಲವೇ ಕಂಪಿಸಿತು. ಸಪ್ತಸಮುದ್ರಗಳೂ ಅಲೆಗಳು ಉಕ್ಕಿಬರಲು ಅನಿಚ್ಛೆಯಿಂದಲೇ ತಮ್ಮ ಮೇರೆಗಳನ್ನು ಅತಿಕ್ರಮಿಸಿದುವು.

೫೧. ವ್ಯಾಘ್ರ, ಸರ್ಪಾದಿಗಳಿಂದ ಕೂಡಿದ ಸಾವಿರಾರು ಪರ್ವತಗಳ ಶಿಖರಗಳು ಮಹೇಂದ್ರನ ವಜ್ರಾಯುಧದ ಪೆಟ್ಟಿಗೆ ಸಿಕ್ಕಿದುವೊ ಎಂಬಂತೆ ಸೀಳಿ ಬಿದ್ದುವು.

೫೨. ದೇವತೆಗಳ ಮತ್ತು ಸಿದ್ಧರ ವಿಮಾನಗಳೂ ಗಂಧರ್ವರ ಪಟ್ಟಣಗಳೂ ಬಲವಾಗಿ ಚಲಿಸಿ ಕೆಳಕ್ಕೆ ಬಿದ್ದು ಭೂಮಿಯಲ್ಲಿ ನಾಶವನ್ನು ಹೊಂದಿದುವು.

ಕಪೋತಮೇಷಾಶ್ಚಾಽತ್ಯಂತಂ ಪುನಃ ಸಂಘಾತದರ್ಶನಾಃ ।
ಜ್ಯೋತಿರ್ಗ್ರಹಾಶ್ಚಾದಯಂತೋ ಬಭೂವುಸ್ತೀರ್ಣಭಾಸ್ಕರಾಃ ॥ ೫೩ ॥
ಮಹತಾ ತಸ್ಯ ಶಬ್ದೇನ ಜಡಾಂಧಬಧಿರಂ ಕೃತಂ ।
ಬಭೂವ ವ್ಯಾಕುಲಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೫೪ ॥
ಸುರಾಽಸುರಾಣಾಂ ಸರ್ವೇಷಾಂ ಶರೀರಾಣಿ ಮನಾಂಸಿ ಚ ।
ಅವಸೇದುಶ್ಚಕಂಪುಶ್ಚ ಕಿಮೇತದಿತಿ ಜಜ್ಞಿರೇ ॥ ೫೫ ॥
ಧೈರ್ಯಮಾಲಂಬ್ಯ ಸರ್ವೇಽಪಿ ಸಮಾಗಮ್ಯೇಂದ್ರಪೂರ್ವಕಾಃ ।
ಬ್ರಹ್ಮಲೋಕಂ ಸಮಾಸಾದ್ಯ ಬ್ರಹ್ಮಾಣಮಿದಮೂಚಿರೇ ॥ ೫೬ ॥
ಕಿಂ ನಿಮಿತ್ತಂ ತು ಭಗವನ್ನೇತದುತ್ಪಾತದರ್ಶನೇ ।
ತ್ರೈಲೋಕ್ಯಂ ಕಂಪಿತಂ ಯೇನ ಸಂಯುಕ್ತಂ ಕಾಲಕರ್ಮಣಾ ॥ ೫೭ ॥
ಜಾತಂ ಕಲ್ಪಾಽವಸಾನಂ ಚ ಭಿನ್ನಮರ್ಯಾದಸಾಗರಂ ।
ಚತ್ವಾರೋ ದಿಗ್ಗಜಾಃ ಕಿಂ ನು ಬಭೂವುರಚಲಾಶ್ಚಲಾಃ ॥ ೫೮ ॥

---

೫೩. ಪಕ್ಷಿಗಳೂ ಮೃಗಗಳೂ ಒಂದುಗೂಡಿ ಅತ್ಯಂತ ಭಯದಿಂದ ಇದನ್ನು ನೋಡುತ್ತಿದ್ದುವು. ಜ್ಯೋತಿರ್ಗ್ರಹಗಳು ಆಕಾಶವನ್ನೆಲ್ಲ ಆವರಿಸಿಕೊಂಡು ಸೂರ್ಯನನ್ನೂ ಸಹ ಮರೆಮಾಡಿದಂತಿದ್ದುವು.

೫೪. ಮಹತ್ತರವಾದ ಆ ಶಬ್ದದಿಂದ ಚರಾಚರಗಳನ್ನೊಳಕೊಂಡ ತ್ರಿಲೋಕಗಳೂ ಸಿಕ್ಕಿಬಿದ್ದಂತೆ ಸಕಲಪ್ರಾಣಿಗಳೂ ಕುರುಡು, ಕಿವುಡುಗಳಾದುವು. ಬ್ರಹ್ಮಾಂಡವೆಲ್ಲವೂ ವ್ಯಾಕುಲಗೊಂಡಿತು.

೫೫. ದೇವತೆಗಳಿಗೂ, ರಾಕ್ಷಸರಿಗೂ, ಎಲ್ಲರಿಗೂ ಶರೀರಗಳು ಕಂಪಿಸಿದುವು. ಮನಸ್ಸುಗಳು ಕದಡಿದುವು. ಬಳಿಕ ಅವರು ವಿಷಯವೇನೆಂಬುದನ್ನು ತಿಳಿದರು.

೫೬. ಸಕಲರೂ ಸ್ವಲ್ಪ ಧೈರ್ಯವನ್ನು ತಂದುಕೊಂಡು ಒಟ್ಟುಗೂಡಿ ಇಂದ್ರನನ್ನು ಮುಂದುಮಾಡಿ ಬ್ರಹ್ಮಲೋಕಕ್ಕೆ ತೆರಳಿ ಬ್ರಹ್ಮದೇವನನ್ನು ಕುರಿತು ಇಂತೆಂದರು.

೫೭. "ಎಲೈ ಸೃಷ್ಟಿಕರ್ತನೆ! ಈ ಉತ್ಪಾತವುಂಟಾದುದಕ್ಕೆ ಕಾರಣವೇನು? ಕಾಲಕರ್ಮಗಳ ಸಂಯೋಗವಾದುದರಿಂದುಟಾಯಿತೆ? ಇದರಿಂದ ಮೂರು ಲೋಕಗಳೂ ಕಂಪಿಸುತ್ತಿರುವುವು.

೫೮. ಸಕಲ ಸಮುದ್ರಗಳೂ ತಮ್ಮ ಎಲ್ಲೆಗಳನ್ನು ಮೀರಿಬರುವ ಪ್ರಳಯ ಕಾಲವು ಈಗಲೇ ಉಂಟಾಯಿತೆ? ಅಥವ ಭೂಮಿಯನ್ನು ಹೊತ್ತು ನಿಂತು ಅಚಲಗಳೆನಿಸಿರುವ ನಾಲ್ಕು ದಿಗ್ಗಜಗಳೇನಾದರೂ ಚಲಿಸಿದುವೆ?

ಧರಾ ಸಮಾ ಧೃತಾ ಕಸ್ಮಾತ್ಸಪ್ತಸಾಗರವಾರಿಣಾ ।
ಉತ್ಪತ್ತಿರ್ನಾಽಸ್ತಿ ಸರ್ವಸ್ಯ ಭಗವನ್ನಪ್ರಯೋಜನಂ ॥ ೫೯ ॥
ಯಾದೃಶೋಽಯಂ ಶ್ರುತಃ ಶಬ್ದೋ ನ ಭೂತೋ ನಾಽಪಿ ವಿಶ್ರುತಃ ।
ತ್ರೈಲೋಕ್ಯಮಾಕುಲಂ ಯೇನ ಚಕ್ರೇ ರೌದ್ರೇಣ ಭೂಯಸಾ ॥ ೬೦ ॥
ಏವಮುಕ್ತೋಽಬ್ರವೀದ್ಬ್ರಹ್ಮಾ ಪರಮೇಶಾಽನುಭಾವಿತಃ ।
ತತ್ಪ್ರಸಾದಾತ್ಪ್ರತಿಜ್ಞಾನೀ ಜ್ಞಾತ್ವಾ ರುದ್ರಮುಪಸ್ಥಿತಂ ॥ ೬೧ ॥
ಯತ್ಪೃಷ್ಟಂ ಮರುತಃ ಸರ್ವೇ ಶೃಣುಧ್ವಂ ತತ್ರ ಕಾರಣಂ ।
ನಿಶ್ಚಯೇನಾಽತ್ರ ವಿಜ್ಞೇಯಂ ಶ್ರದ್ದಧಾನೈರ್ಯಥಾವಿಧಿ ॥ ೬೨ ॥
ಮುಖಂ ಛಿತ್ವಾ ನಖಾಗ್ರೇಣ ಮದ್ದೇಹಾತ್ಪಂಚಮಂ ಶಿರಃ ।
ಕಪಾಲಪಾಣಿರ್ಭಗವಾನ್ವಿಷ್ಣೋರಾಶ್ರಮಮಭ್ಯಗಾತ್ ॥ ೬೩ ॥
ಯಯಾಚೇ ಪಾತ್ರಮಾದಾಯ ಭಿಕ್ಷಾಂ ನಾರಾಯಣಂ ಪ್ರಭುಂ ।
ಉತ್ಪಪಾತ ಮುನಿಸ್ತತ್ರ ನರೋ ನಾಮ ಧನುರ್ಧರಃ ॥ ೬೪ ॥

---

೫೯. ಭೂಮಿಯೆಲ್ಲವೂ ಸಪ್ತಸಮುದ್ರಗಳ ನೀರಿನಲ್ಲಿ ಏಕೆ ಮುಳುಗಿತು? ಪಿತಾಮಹನೆ! ಯಾವುದರ ಉತ್ಪತ್ತಿಯೂ ಪ್ರಯೋಜನವಿಲ್ಲದಂತೆ ಉಂಟಾಗುವುದಿಲ್ಲವಲ್ಲವೆ?

೬೦. ಇಂತಹ ಭಯಂಕರ ಶಬ್ದವನ್ನು ಹಿಂದೆ ನಾವು ಕೇಳಿರಲಿಲ್ಲ. ಆಗಿದ್ದಂತೆಯೂ ಎಲ್ಲಿಯೂ ಕೇಳಿರುವುದಿಲ್ಲ. ಇದು ಬಹು ಭಯಂಕರ ಸ್ವಭಾವದಿಂದ ಮೂರು ಲೋಕಗಳನ್ನೂ ವ್ಯಾಕುಲಗೊಳಿಸುತ್ತಿರುವುದು.''

೬೧. ಇಂತೆಂದು ಪ್ರಶ್ನಿಸಮಾಡುತ್ತಿರಲು ಪರಮೇಶ್ವರನ ಚಿಂತೆಯಲ್ಲಿಯೇ ಮಗ್ನನಾಗಿದ್ದ ಬ್ರಹ್ಮನು ಈಶ್ವರಾನುಗ್ರಹದಿಂದಲೇ ಜ್ಞಾನವನ್ನು ಪಡೆದು ರುದ್ರನು ಕುಶಸ್ಥಳಿಯ ವನದಲ್ಲಿ ನೆಲಸಿರುವುದನ್ನು ತಿಳಿದು ಇಂತೆಂದನು.

೬೨. ''ಅಯ್ಯಾ ದೇವತೆಗಳಿರಾ! ಎಲ್ಲರೂ ಕೇಳಿರಿ. ನೀವು ಯಾವ ಶಬ್ದವನ್ನು ಕುರಿತು ಕೇಳಿದಿರೊ, ಅದರ ಕಾರಣವನ್ನು ತಿಳಿಸುವೆನು. ಶ್ರದ್ಧಾಳುಗಳಾದವರು ಯಥಾವಿಧಿಯಾಗಿ ಇದನ್ನು ಕೇಳಿ ದೃಢಮನಸ್ಸಿನಿಂದ ತಿಳಿಯಬೇಕು.

೬೩. ಮಹೇಶ್ವರನು ತನ್ನ ಕೈಬೆರಳಿನ ಉಗುರಿನಿಂದ ನನ್ನ ಐದನೆಯ ತಲೆಯನ್ನು ಕತ್ತರಿಸಿ ಕಪಾಲಪಾಣಿಯಾಗಿ ಮಹಾವಿಷ್ಣುವಿನ ಆಶ್ರಮವನ್ನು ಸೇರಿದನು.

೬೪. ಆ ಪಾತ್ರೆಯನ್ನು ಹಿಡಿದು ಪ್ರಭುವಾದ ನಾರಾಯಣನಲ್ಲಿ ಭಿಕ್ಷೆಯನ್ನು ಬೇಡಿದನು. ಆ ಕಪಾಲದಿಂದ ದನುರ್ಧಾರಿಯಾದ ನರನೆಂಬ ಮುನಿಯು ಉದ್ಭವಿಸಿದನು.

ತತಃ ಕುಶಸ್ಥಲೀಮೇತ್ಯ ಭಗವಾಂಸ್ತದ್ವನೋತ್ತಮಂ ।
ವಿವೇಶ ತರುಮಾರ್ಗೇಣ ಪುಷ್ಪಾಮೋದಾಽಭಿನಂದಿತಃ ॥ ೬೫ ॥
ಅನುಗೃಹ್ಯಾಽಥ ಭಗವಾನ್ವನಂ ತತ್ಸರ್ವಗಾಂಡಜಂ ।
ಜಗತೋಽನುಗ್ರಹಾರ್ಥಾಯ ತತ್ರ ವಾಸಮರೋಚಯತ್ ॥ ೬೬ ॥
ತತ್ಕಪಾಲಂ ಕರಸ್ಥಂ ಯನ್ನ್ಯಸ್ತಂ ಭಗವತಾ ಕ್ಷಿತೌ ।
ತೇನೇಷಾ ಕಂಪಿತಾ ಭೂಮಿಃ ಕೃತಂ ತ್ರೈಲೋಕ್ಯಮಾಕುಲಂ ॥ ೬೭ ॥
ತದ್ದ್ರಕ್ಷ್ಯಥ ವಿರೂಪಾಕ್ಷಂ ಪ್ರಪದ್ಯತ ಮಯಾ ಸಹ ।
ಆರಾಧ್ಯಮಾನೋ ಭಗವಾನ್ಪ್ರದಾಸ್ಯತಿ ವರಂ ಹಿ ವಃ ॥ ೬೮ ॥
ಇತ್ಯುಕ್ತ್ವಾ ಭಗವಾನ್ಬ್ರಹ್ಮಾ ಸಹ ತೈರ್ದೇವದಾನವೈಃ ।
ಜಗಾಮ ತದ್ವನೋದ್ದೇಶಂ ಯತ್ರಾಸ್ತೇ ವೃಷಭಧ್ವಜಃ ॥ ೬೯ ॥
ಪ್ರಹೃಷ್ಟಮನಸಃ ಸರ್ವೇ ಕೋಕಿಲಾಽಽಲಾಪಲಾಪಿತಾಂ ।
ಪುಷ್ಪೋಚ್ಚಯೋಕ್ಷಿತಾಂ ಸೀಮಾಂ ವಿವಿಶುಃ ಶಂಕರೇಪ್ಸವಃ ॥ ೭೦ ॥

---

೬೫. ಬಳಿಕ ಮಹಾದೇವನು ಕುಶಸ್ಥಳಿಗೆ ಬಂದು ಅಲ್ಲಿದ್ದ ಉತ್ತಮ ವನವನ್ನು ಪ್ರವೇಶಿಸಿ ವೃಕ್ಷಗಳ ಮಧ್ಯದಲ್ಲಿ ಓಡಾಡುತ್ತ ಅವುಗಳ ಪುಷ್ಪಗಳ ಸುಗಂಧದಿಂದ ಆದರಿಸಲ್ಪಟ್ಟನು.

೬೬. ಎಲ್ಲೆಲ್ಲಿಯೂ ಪಕ್ಷಿಗಳಿಂದ ನಿಬಿಡಿತವಾದ ಆ ವನಕ್ಕೆ ಅನುಗ್ರಹ ವನ್ನಿತ್ತು ಭಗವಂತನು ಲೋಕಾನುಗ್ರಹಕ್ಕಾಗಿ ಅಲ್ಲಿಯೇ ವಾಸ ಮಾಡಲಪೇಕ್ಷಿಸಿದನು.

೬೭. ಆಗ ಆ ಸ್ವಾಮಿಯು ತನ್ನ ಕೈಯಲ್ಲಿದ್ದ ಕಪಾಲವನ್ನು ಭೂಮಿಯಲ್ಲಿ ಇಟ್ಟನು. ಅದರಿಂದಲೇ ಭೂಮಿಯು ನಡುಗಿತು. ಮೂರು ಲೋಕಗಳೂ ವ್ಯಾಕುಲಗೊಂಡುವು.

೬೮. ಆದುದರಿಂದ ಈಗ ವಿರೂಪಾಕ್ಷನನ್ನು ನನ್ನೊಡನೆಯೇ ಬಂದು ನೋಡಿರಿ. ನಮ್ಮಿಂದ ಪೂಜೆಗೊಂಡ ಮಹೇಶ್ವರನು ನಿಮಗೆ ವರವನ್ನು ಕೊಡುವನು.''

೬೯. ಇಂತೆಂದು ಬ್ರಹ್ಮದೇವನು ಆ ದೇವತೆಗಳಿಂದಲೂ ದಾನವರಿಂದಲೂ ಪರಿವೃತನಾಗಿ ವೃಷಭವಾಹನನು ವಾಸಮಾಡುತ್ತಿದ್ದ ಆ ವನಪ್ರದೇಶವನ್ನು ಕುರಿತು ಹೊರಟನು.

೭೦. ಅವರೆಲ್ಲರೂ ಸಂತುಷ್ಟಮನಸ್ಸುಳ್ಳವರಾಗಿ ಕೋಗಿಲೆಗಳ ಕಲರವದಿಂದ ತುಂಬಿದುದೂ, ಪುಷ್ಪಗಳಿಂದ ಎರಚಲ್ಪಟ್ಟುದೂ ಆದ ಆ ವನದ ಸೀಮೆಯನ್ನು ಶಂಕರನನ್ನು ನೋಡುವ ಅಭಿಲಾಷೆಯಿಂದ ಪ್ರವೇಶಿಸಿದರು.

ಸಂಪ್ರಾಪ್ತಂ ಸರ್ವಮೇತೈಸ್ತದ್ವನಂ ನಂದನಸಂಮಿತಂ ।
ಸುವಲ್ಲೀಗೃಹಶೋಭಾಢ್ಯಂ ಸುದೃಢಂ ಶುಶುಭೇ ತದಾ ॥ ೭೧ ॥
ದೃಷ್ಟ್ವಾ ತದ್ವನಮುತ್ತಮಂ ತನುಭೃತಾಮಾಹ್ಲಾದಕಂ ಚೇತಸಾಂ
ನಾನಾಸತ್ಫಲಪುಷ್ಪಪಾದಪವನೈರಾಸೇವಿತಂ ಸರ್ವತಃ ।
ತಸ್ಮಿನ್ಬರ್ಹಿಣಹಂಸಸಾರಸಕುಲೈರ್ಮಂಡೂಕಮತ್ಸ್ಯೈರ್ಯುತೇ
ದ್ರಕ್ಷ್ಯಾಮೋ ಹರಮತ್ರ ಚೇತಸಿ ಸುರಾಃ ಪ್ರಾಪುರ್ಮುದಂ ತೇ ತದಾ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ದೇವಾಗಮನ ವರ್ಣನಂ" ನಾಮ ಪಂಚಮೋಽಧ್ಯಾಯಃ

---

೭೧. ಅವರಿಂದ ವ್ಯಾಪ್ತವಾದ ಆ ವನವು ಆದ್ಯಂತಸಹಿತವಾಗಿ ನಂದನ ವನವನ್ನು ಹೋಲುತ್ತ, ಉತ್ತಮಗಳಾದ ಲತಾಗೃಹಗಳಿಂದ ಕಂಗೊಳಿಸುತ್ತ ಬಹುವಾಗಿ ಶೋಭಿಸುತ್ತಿದ್ದಿತು.

೭೨. ದೇಹಧಾರಿಗಳಾದವರ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವುದೂ, ನಾನಾವಿಧಗಳಾದ ಪುಷ್ಪಗಳನ್ನೂ ಫಲಗಳನ್ನೂ ಕೊಡುತ್ತಿರುವ ವೃಕ್ಷಗಳಿಂದ ಎಲ್ಲೆಲ್ಲಿಯೂ ನಿಬಿಡಿತವಾದುದೂ ಆದ ಆ ವನವನ್ನು ಕಂಡು "ನವಿಲುಗಳು, ಹಂಸಗಳು, ಚಕ್ರವಾಕಗಳು, ಕಪ್ಪೆಗಳು, ಮೀನುಗಳು–ಇವುಗಳಿಂದ ಕೂಡಿರುವ ಈ ವನದಲ್ಲಿಯೇ ಪರಮೇಶ್ವರನನ್ನು ನೋಡುವೆವು" ಎಂಬುದಾಗಿ ದೇವತೆಗಳೆಲ್ಲರೂ ಮನಸ್ಸಿನಲ್ಲಿ ಆನಂದವನವನ್ನು ಹೊಂದಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಹಾತ್ಮ್ಯದಲ್ಲಿ "ದೇವಾಗಮನವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಕಪಾಲಮೋಕ್ಷಣವರ್ಣನಂ

**ಸನತ್ಕುಮಾರ ಉವಾಚ :—**

**ಪ್ರವಿಶ್ಯಾಽಥ ವನಂ ದೇವಾಃ ಸರ್ವ ಪುಷ್ಪೋಪಶೋಭಿತಂ ।**
**ಇಹ ದೇವೋಽತ್ರ ದೇವೋಽತ್ರ ವಿವಿಶುಸ್ತೇ ದಿದೃಕ್ಷವಃ ॥ ೧ ॥**
**ಅದ್ಭುತಸ್ಯ ವನಸ್ಯಾಂತೇ ನ ತೇ ದದೃಶಿರೇ ಸುರಾಃ ।**
**ವಿಚಿನ್ವಂತೋ ಮಹಾದೇವಂ ದೇವೈರ್ಬಹುವಿಲೋಕಿತಃ ॥ ೨ ॥**
**ತಮುವಾಚ ಸ ಭದ್ರಂ ವೈ ದ್ರಕ್ಷ್ಯಧ್ವಂ ನ ತಪೋ ವಿನಾ ।**
**ವಿಚಿನ್ವಂತೋ ವಿರೂಪಾಕ್ಷಂ ನೈನಂ ಪಶ್ಯತ ಶಂಕರಂ ॥ ೩ ॥**
**ಸ ಯುಕ್ತಂ ಹೃದಯೇ ಸ್ಮೃತ್ವಾ ಬ್ರಹ್ಮಾ ದೇವಾಂಸ್ತತೋಽಬ್ರವೀತ್ ।**
**ತ್ರಿವಿಧೋ ದರ್ಶನೋಪಾಯಸ್ತಸ್ಯ ದೇವಸ್ಯ ಸರ್ವದಾ ॥ ೪ ॥**
**ಶ್ರದ್ಧಾ ಜ್ಞಾನೇನ ತಪಸಾ ಯೋಗೇನೈವ ನಿಗದ್ಯತೇ ।**
**ಸಕಲಂ ನಿಷ್ಕಲಂ ಚಾಽಪಿ ದೇವಾಃ ಪಶ್ಯಂತಿ ಯೋಗಿನಃ ॥ ೫ ॥**

---

## ಕನ್ನಡದ ಅನುವಾದ

### ಕಪಾಲಮೋಕ್ಷಣವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಇಂತು ಸರ್ವರ್ತುಕುಸುಮಗಳಿಂದ ಶೋಭಿಸುತ್ತಿರುವ ಆ ವನವನ್ನು ಪ್ರವೇಶಿಸಿ ದೇವತೆಗಳೆಲ್ಲರೂ "ದೇವದೇವನು ಅಲ್ಲಿರುವನು; ಅಲ್ಲಿ ಅಲ್ಲಿ!" ಎಂದು ಕೂಗುತ್ತ ಆತನನ್ನು ನೋಡುವ ತವಕದಿಂದ ವನವನ್ನೆಲ್ಲ ಹುಡುಕುತ್ತಿದ್ದರು.

೨. ಮಹಾದೇವನನ್ನು ಎಷ್ಟು ಹುಡುಕಿದರೂ ಎಲ್ಲೆಲ್ಲಿ ನೋಡಿದರೂ ಅದ್ಭುತವಾದ ಆ ವನಾಂತರದಲ್ಲಿ ಎಲ್ಲಿಯೂ ಆತನನ್ನು ಆ ದೇವತೆಗಳು ಕಾಣಲಿಲ್ಲ.

೩. ಆಗ ಮಹೇಶ್ವರನು ಅಶರೀರಿಯಾಗಿಯೇ ಬ್ರಹ್ಮನಿಗೆ ಹೇಳಿದನು. "ತಪಸ್ಸನ್ನು ಮಾಡಿದಲ್ಲದೆ ಸೌಖ್ಯವನ್ನು ಪಡೆಯಲಾಗದು. ವಿರೂಪಾಕ್ಷನಾದ ಶಂಕರನನ್ನು ನೀವೆಷ್ಟು ಹುಡುಕಿದರೂ ಆತನನ್ನು ಕಾಣಲಾರಿರಿ."

೪. ಇದು ಯುಕ್ತವೆಂದು ಮನಸ್ಸಿನಲ್ಲಿ ತಿಳಿದುಕೊಂಡು ಬ್ರಹ್ಮನು ದೇವತೆಗಳಿಗೆ ಹೇಳಿದನು. "ಆ ದೇವನನ್ನು ನೋಡುವುದಕ್ಕೆ ಯಾವಾಗಲೂ ಮೂರು ಉಪಾಯಗಳುಂಟೆಂದು ಹೇಳುವರು.

೫. ಶ್ರದ್ಧಾಯುಕ್ತವಾದ ಜ್ಞಾನವೊಂದು. ಎರಡನೆಯದು ತಪಸ್ಸು. ಮೂರನೆಯದೇ ಯೋಗವೆಂದು ಕರೆಯಲ್ಪಡುವುದು. ದೇವತೆಗಳಿರಾ! ಪರಾತ್ಪರನಾದ ಆ ದೇವನನ್ನು ಯೋಗಿಗಳು ಸಾಕಾರನನ್ನಾಗಿಯೂ ನೋಡುತ್ತಿರುವರು.

ತಪಸ್ವಿನಸ್ತು ಸಕಲಂ ಜ್ಞಾನಿನೋ ನಿಷ್ಕಲಂ ಪರಂ ।
ಸಮುತ್ಪನ್ನೇಽಪಿ ವಿಜ್ಞಾನೇ ಮಂದಶ್ರದ್ಧೋ ನ ಪಶ್ಯತಿ ॥ ೬ ॥
ಭಕ್ತ್ಯಾ ಪರಮಯೋಪೇತಾಃ ಪರಂ ಪಶ್ಯಂತಿ ಯೋಗಿನಃ ।
ದ್ರಷ್ಟವ್ಯೋ ನಿರ್ವಿಕಾರೋಽಸೌ ಪ್ರಧಾನಪುರುಷೇಶ್ವರಃ ॥ ೭ ॥
ನಾದೀಕ್ಷಿತೈರತೋ ದೇವಾಃ ಶೈವೀಂ ದೀಕ್ಷಾಂ ಪ್ರಪದ್ಯತ ।
ಕರ್ಮಣಾ ಮನಸಾ ವಾಚಾ ನಿತ್ಯಯುಕ್ತಾ ಮಹೇಶ್ವರೇ ॥ ೮ ॥
ತಪಶ್ಚರತ ಭದ್ರಂ ವೋ ರುದ್ರಾರಾಧನತತ್ಪರಾಃ ।
ಶಿವದೀಕ್ಷಾಂ ಪ್ರಪನ್ನಾನಾಂ ಭಕ್ತಾನಾಂ ಚ ತಪಸ್ವಿನಾಂ ॥ ೯ ॥
ಸರ್ವಕಾಲಂ ವಿಜಾನಾತಿ ದಾತವ್ಯಂ ದರ್ಶನಂ ಮಯಾ ।
ಬ್ರಹ್ಮಣೋ ವಚನಂ ಶ್ರುತ್ವಾ ಹಿತಮೇವ ಯದುಕ್ತವಾನ್ ॥ ೧೦ ॥
ಶಿವೇಕ್ಷಾವಿಷ್ಟಮತಯೋ ಬ್ರಹ್ಮಾಣಮಿದಮಬ್ರುವನ್ ।
ಮಾರ್ಗೇಣ ವಿಧಿನಾ ಚೈವ ಶಿವದೀಕ್ಷಾಸು ತತ್ಪರಾಃ ॥ ೧೧ ॥

---

೬. ತಪೋಮಾರ್ಗದಲ್ಲಿರುವವರು ಸಾಕಾರವಾಗಿಯೂ ಜ್ಞಾನಮಾರ್ಗಾನುಯಾಯಿಗಳು ನಿರಾಕಾರವಾಗಿಯೂ ಕಾಣುವರು. ವಿಜ್ಞಾನವುಂಟಾಗಿದ್ದರೂ ತೀವ್ರಶ್ರದ್ಧೆಯಿಲ್ಲದ ಮನುಷ್ಯನು ಆತನನ್ನು ಕಾಣಲಾರನು.

೭. ಯೋಗಿಗಳು ಆತ್ಯಂತಿಕವಾದ ಭಕ್ತಿಯಿಂದೊಡಗೂಡಿದವರಾಗಿ ಪರಮಾತ್ಮನನ್ನು ನೋಡುವರು. ಆದರೆ ಪ್ರಕೃತಿಗೂ ಜೀವರಿಗೂ ಈಶ್ವರನಾದ ಆತನ ನಿರ್ವಿಕಾರಸ್ವರೂಪವನ್ನೇ ನೋಡಬೇಕು.

೮. ಅಯ್ಯಾ ದೇವತೆಗಳಿರಾ! ದೀಕ್ಷಿತರಲ್ಲದವರಿಗೆ ಅವನು ಕಾಣುವುದಿಲ್ಲ. ಆದುದರಿಂದ ನೀವೆಲ್ಲರೂ ಶೈವದೀಕ್ಷೆಯನ್ನು ಕೈಕೊಳ್ಳಿರಿ. ಕರ್ಮದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಯಾವಾಗಲೂ ಮಹೇಶ್ವರನಲ್ಲಿಯೇ ಅನುರಕ್ತರಾಗಿರಿ.

೯–೧೦. ರುದ್ರನ ಪೂಜೆಯಲ್ಲಿಯೇ ತತ್ಪರರಾಗಿ ತಪಸ್ಸನ್ನಾಚರಿಸಿರಿ. ನಿಮಗೆ ಮಂಗಳವುಂಟಾಗುವುದು. ಶಿವದೀಕ್ಷೆಯನ್ನು ಕೈಕೊಂಡವರೂ, ಭಕ್ತರೂ, ತಪಸ್ವಿಗಳೂ ಆದವರಲ್ಲಿ 'ನಾನು ಇವರಿಗೆ ದರ್ಶನವನ್ನು ಕೊಡಬೇಕು' ಎಂಬುದನ್ನು ಆತನು ಯಾವಾಗಲೂ ತಿಳಿದೇ ಇರುವನು.'' ಬ್ರಹ್ಮನ ಈ ಮಾತನ್ನು ಕೇಳಿ ದೇವತೆಗಳು "ಈತನು ನಮಗೆ ಹಿತವಾಕ್ಯಗಳನ್ನೇ ಆಡಿರುವನು" ಎಂದುಕೊಂಡರು.

೧೧. ಶಿವದೀಕ್ಷೆಯಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಅವರು ಸನ್ಮಾರ್ಗದಿಂದಲೂ ವಿಧ್ಯುಕ್ತರೀತಿಯಿಂದಲೂ ಶಿವದೀಕ್ಷೆಯನ್ನು ತೆಗೆದುಕೊಳ್ಳುವ ಅಭಿಲಾಷೆಯಿಂದ ಬ್ರಹ್ಮನನ್ನು ಕುರಿತು ಇಂತೆಂದರು.

ಪ್ರಯಚ್ಛ ಬ್ರಹ್ಮನ್ಸರ್ವೇಷಾಂ ದೀಕ್ಷಾಂ ನಃ ಶಿವತೋಷದಾಂ ।
ಶ್ರುತ್ವೇತಿ ವಚನಂ ಬ್ರಹ್ಮಾ ಪ್ರತ್ಯುವಾಚ ವಿಚಾರಿತಂ ॥ ೧೨ ॥
ಸಂದಿದೀಕ್ಷಯಿಷುಃ ಕ್ಷಿಪ್ರಮಮರಾಂ ಶಿವದೀಕ್ಷಯಾ ।
ಶಿವಯಜ್ಞಾರ್ಥಸಂಭಾರಾನಾನಯಧ್ವಮಲಂ ಸುರಾಃ ॥ ೧೩ ॥
ವೇದೀ ಪ್ರಕಲ್ಪ್ಯತಾಮತ್ರ ಯಷ್ಟವ್ಯೋಽಷ್ಟತನುಃ ಶಿವಃ ।
ಪದ್ಮಯೋನೇರ್ವಚಃ ಶ್ರುತ್ವಾ ಚಕ್ರುಃ ಸರ್ವಮತಃ ಸುರಾಃ ॥ ೧೪ ॥
ವಿನೀತವೇಷಾಃ ಪ್ರಣತಾ ಅನೇನಸಸ್ತಮನ್ವಗುಃ ।
ಶಿವಪ್ರಸಾದಸಂಪ್ರಾಪ್ತ್ಯೈ ಪುಷ್ಕರಜ್ಞಾನವಿಸ್ತಾರಿತಂ ॥ ೧೫ ॥
ಯಜ್ಞಂ ಚಕಾರ ವಿಧಿನಾ ವೇಧಾಶ್ಚಂದ್ರಾರ್ಧಧಾರಿಣಃ ।
ಪದ್ಮಯೋನಿಃ ಪುರಸ್ಕೃತ್ಯ ತದಾ ದೀಕ್ಷಾಂ ಪ್ರಯೋಗತಃ ॥ ೧೬ ॥
ಅನುಗ್ರಹೇಣ ದೇವಾಂಸ್ತಾನಕಾರಯತ ಭಾವತಃ ।
ತತೋ ವ್ರತಾನಾಂ ಪ್ರವರಂ ವ್ರತಂ ದಿವ್ಯಂ ಮಹಾಪ್ರಭುಃ ॥ ೧೭ ॥

---

೧೨. ಎಲೈ ಬ್ರಹ್ಮದೇವನೆ! ಶಿವನಿಗೆ ಪರಮಸಂತೋಷಕಾರಕವಾದ ಈ ದೀಕ್ಷೆಯನ್ನು ನಮಗೆಲ್ಲರಿಗೂ ಅನುಗ್ರಹಿಸು.'' ಈ ವಾಕ್ಯವನ್ನು ಕೇಳಿ ಬ್ರಹ್ಮನು ವಿಚಾರ ಪೂರ್ವಕವಾಗಿ ಇಂತೆಂದನು.

೧೩. ಆತನು ದೇವತೆಗಳನ್ನೆಲ್ಲ ಶಿವದೀಕ್ಷೆಯಲ್ಲಿ ಬೇಗ ದೀಕ್ಷಿತರನ್ನಾಗಿ ಮಾಡಲಪೇಕ್ಷಿಸಿ ಹೇಳತೊಡಗಿದನು. "ದೇವತೆಗಳಿರಾ! ಮಹೇಶ್ವರನನ್ನುದ್ದೇಶಿಸಿ ಯಜ್ಞವನ್ನು ಮಾಡಬೇಕಾಗಿರುವುದರಿಂದ ಬೇಕಾದ ಸಂಭಾರಗಳನ್ನು ಕ್ಷಿಪ್ರದಲ್ಲಿಯೇ ಶೇಖರಿಸಿ ತನ್ನಿರಿ.

೧೪. ಇಲ್ಲಿ ಉತ್ತಮವಾದ ವೇದಿಕೆಯೊಂದನ್ನು ನಿರ್ಮಿಸಿರಿ. ಇಲ್ಲಿಯೆ ಅಷ್ಟಮೂರ್ತಿಯಾದ ಶಿವನನ್ನುದ್ದೇಶಿಸಿ ಮಾಹೇಶ್ವರಯಜ್ಞವನ್ನು ಮಾಡಬೇಕು.'' ಇಂತೆಂದ ಚತುರ್ಮುಖನ ಮಾತುಗಳನ್ನು ಕೇಳಿ ದೇವತೆಗಳು ಎಲ್ಲವನ್ನೂ ಅಣಿಮಾಡಿದರು.

೧೫. ಎಲ್ಲರೂ ವಿನೀತಭಾವದಿಂದಲೂ, ಪ್ರಣಾಮಗಳಿಂದಲೂ ಪಾಪರಹಿತರಾಗಿ ಬ್ರಹ್ಮನನ್ನೇ ಸುತ್ತುವರೆದಿದ್ದರು. ಶಿವನ ಪ್ರಸನ್ನತೆಯನ್ನು ಪಡೆಯುವುದಕ್ಕಾಗಿ ಪುಷ್ಕರಜ್ಞಾನವೆಂಬ ಯಜ್ಞವು ಶಾಸ್ತ್ರೋಕ್ತವಾಗಿರುವುದು.

೧೬. ಪದ್ಮಸಂಭವನಾದ ಬ್ರಹ್ಮನು ಯಥಾವಿಧಿಯಾಗಿ ದೀಕ್ಷೆಯನ್ನು ಕೈಕೊಂಡು ಕಲ್ಪೋಕ್ತಮಾರ್ಗದಿಂದ ಮಹೇಶ್ವರನನ್ನು ಕುರಿತು ಯಜ್ಞವನ್ನು ಸಾಂಗವಾಗಿ ನೆರವೇರಿಸಿದನು.

೧೭. ಮಹಾಪ್ರಭುವಾದ ಬ್ರಹ್ಮನು ದೇವತೆಗಳಲ್ಲಿ ಅನುಗ್ರಹವನ್ನು ಮಾಡಿ ಅವರಿಂದ ಸರ್ವಜ್ಯೇಷ್ಠವೆನಿಸಿದ ದಿವ್ಯವಾದ ವ್ರತವೊಂದನ್ನು ಮಾಡಿಸಿದನು.

ತೇಭ್ಯೋ ದದೌ ದೇವತಾಭ್ಯಃ ಸ ತದಪ್ಯವಿರೋಧವಿತ್ ।
ಪಶ್ಯತೇ ಶಿವಶಾಲಾಯಾಂ ಮಹಾಪಾಶುಪತಂ ವ್ರತಂ ॥ ೧೮ ॥
ಶೈವಂ ಯಥೋದಿತಂ ಯಚ್ಚ ಆಗಮಾಚಾರಚೇಷ್ಟಿತಂ ।
ಶಿವಾರಾಧನಮುಖ್ಯಾನಾಂ ಮುನೀನಾಂ ತೀವ್ರತೇಜಸಾಂ ॥ ೧೯ ॥
ಸರ್ವಾನುಗ್ರಾಹಕಃ ಶಂಭುಃ ಸರ್ವದೇವೈಃ ಪ್ರಕಲ್ಪಿತಂ ।
ತದೇವಂ ಪ್ರಾರ್ಥಿತಂ ಬುದ್ಧ್ವಾ ವ್ರತಂ ರೌದ್ರಂ ಶಿವಂ ಸಮಂ ॥ ೨೦ ॥
ತತ್ತೇಭ್ಯೋ ವಿಸ್ಮಯಂ ತ್ಯಕ್ತ್ವಾ ಪ್ರಾಯಚ್ಛತ್ಕನಕಾಂಡಜಃ ।
ಕಾಮಿಕಂ ಭಸ್ಮನಾಮಾಢ್ಯಂ ಸರ್ವದಾ ಕೀರ್ತಿತಂ ಶುಭಂ ॥ ೨೧ ॥
ಪಾಪಘ್ನಂ ದುಃಖಶಮನಂ ಪುಷ್ಟಿಶ್ರೀಬಲವರ್ಧನಂ ।
ಸಿದ್ಧಿದಂ ಕೀರ್ತಿಕೃತ್ಕಾಂತಂ ಕಲಿಕಲ್ಮಷಮೋಕ್ಷಣಂ ॥ ೨೨ ॥
ತಸ್ಮಾತ್ಸರ್ವಪ್ರಯತ್ನೇನ ಭಸ್ಮಸ್ನಾನಂ ಸಮಾಹಿತಾಃ ।
ಕುರ್ವಂತೋ ಮಾನವಾ ದಾಂತಾ ದೀಕ್ಷಿತಾಃ ಸಂಯತೇಂದ್ರಿಯಾಃ ॥೨೩॥

---

೧೮. ತಮ್ಮ ಉದ್ದೇಶದ ಅವಿರೋಧವನ್ನು ತಿಳಿದ ಆತನು ತಾನು ಮಾಡಿದ ಯಜ್ಞದ ಫಲವನ್ನೂ ಸಹ ಅವರಿಗೇ ಕೊಟ್ಟನು. ಶಿವಭಕ್ತರ ಸಮೂಹದಲ್ಲಿ ಮಹಾಪಾಶುಪತವೆಂಬ ವ್ರತವೊಂದು ಪ್ರಸಿದ್ಧವಾಗಿರುವುದಷ್ಟೆ.

೧೯. ಶಿವಪೂಜೆಯಲ್ಲಿ ಪ್ರಮುಖರೂ, ಉಗ್ರತೇಜಸ್ವಿಗಳೂ ಆದ ಮಹಾ ಮುನಿಗಳಿಂದ ಹೇಗೆ ಆಚರಿಸಲ್ಪಟ್ಟಿತೊ, ಆಗಮಗಳಲ್ಲಿ ಹೇಗೆ ವಿಧಿಸಲ್ಪಟ್ಟಿದೆಯೊ, ಹಾಗೆಯೇ ಆ ಶೈವವ್ರತವು ಸಂಪೂರ್ಣವಾಯಿತು.

೨೦. ಸಕಲರನ್ನೂ ಅನುಗ್ರಹಿಸುವ ಮಹೇಶ್ವರನು ಸರ್ವದೇವತೆಗಳಿಂದ ಕಲ್ಪಿತವಾದುದೂ, ಬುದ್ಧಿಪೂರ್ವಕವಾಗಿ ಪ್ರಾರ್ಥಿತವಾದುದೂ, ಮಂಗಳ ಕರವೂ, ಸರ್ವಸಮವೂ ಆದ ಈ ಮಹೇಶ್ವರವ್ರತವನ್ನಂಗೀಕರಿಸಿದನು.

೨೧. ಆಗ ಬ್ರಹ್ಮನು ವಿಸ್ಮಯವನ್ನುಳಿದು ಕಾಮಪ್ರದವೂ, ಯಾವಾಗಲೂ ಮಂಗಳಕರವೆಂಬ ಕೀರ್ತಿಯನ್ನು ಪಡೆದಿರುವುದೂ ಆದ ವಿಭೂತಿಯನ್ನು ಅವರೆಲ್ಲ ರಿಗೂ ಕೊಟ್ಟನು.

೨೨. ಈ ಭಸ್ಮವು ಸಾಮಾನ್ಯವಲ್ಲ. ಪಾಪಗಳನ್ನು ಕಳೆಯುವುದು. ದುಃಖಗಳನ್ನು ದೂರಮಾಡುವುದು. ದೇಹಸೌಷ್ಠವವನ್ನೂ, ಐಶ್ವರ್ಯವನ್ನೂ, ಬಲವನ್ನೂ ಹೆಚ್ಚಿಸುವುದು. ಕಾರ್ಯಸಿದ್ಧಿಯನ್ನುಂಟುಮಾಡುವುದು. ಕೀರ್ತಿಕಾರ ಕವು. ಮನೋಹರವಾದುದು. ಕಲಿದೋಷಗಳನ್ನು ನಿರ್ಮೂಲಗೊಳಿಸುವುದು.

೨೩. ಆದುದರಿಂದಲೇ ಅಂತರಿಂದ್ರಿಯ ಬಹಿರಿಂದ್ರಿಯಗಳನ್ನು ನಿಗ್ರಹಿಸಿ ದವರೂ, ಯಜ್ಞದೀಕ್ಷಿತರೂ ಆದ ಮಾನವರು ಸಾವಧಾನಮನಸ್ಕರಾಗಿ ಸರ್ವ ಪ್ರಯತ್ನದಿಂದಲೂ ಭಸ್ಮಸ್ನಾನವನ್ನು ಮಾಡುವರು.

ಸರ್ವೇ ಕಮಂಡಲುಧರಾಃ ಸರ್ವೇ ರುದ್ರಾಕ್ಷಧಾರಿಣಃ ।
ಅನಿಷ್ಟದರ್ಶನಾಲಾಪಸಂಗತ್ಯಾ ಪರಿವರ್ಜಿತಾಃ ॥ ೨೪ ॥
ಏವಂ ವ್ರತಧರಾಃ ಸರ್ವೇ ವನೇ ತಸ್ಮಿನ್ಮಹೇಶ್ವರಂ ।
ಆರಾಧಯಂಸ್ತ್ವಮೀಶಾನಂ ವ್ರತೇನೈವ ಉಮಾಧವಂ ॥ ೨೫ ॥
ಭಕ್ತ್ಯಾ ಪರಮಯಾ ಯುಕ್ತಾ ವಿಧಿನಾ ಪರಮೇಣ ಚ ।
ಕಾಲೇನ ಮಹತಾ ಧ್ಯಾನಾದೇವಂ ಜ್ಞಾತ್ವಾ ಮನೋಗತಂ ॥ ೨೬ ॥
ರುದ್ರಧ್ಯಾನಾಗ್ನಿನಿರ್ದಗ್ಧಕಲ್ಮಷಾಶ್ಚ ಶ್ರಿಯಾನ್ವಿತಾಃ ।
ತದಾ ಹತ್ವಾಽಸುರಂ ಶಂಭುಃ ಪ್ರತ್ಯಕ್ಷೋ ಭಗವಾನಭೂತ್ ॥ ೨೭ ॥

ಸನತ್ಕುಮಾರ ಉವಾಚ :—

ಬ್ರಹ್ಮದತ್ತಂ ವರಂ ದೇವಾಃ ಸರ್ವೇ ಶರ್ವಾನುಭಾವಿತಾಃ ।
ಸಮುಚೀಕರನ್ಪ್ರತ್ಯುಕ್ತಾ ಬ್ರಹ್ಮಾಽಪೀಶಾನಭಾವಿತಃ ॥ ೨೮ ॥
ಗತೇ ವರ್ಷಸಹಸ್ರೇ ಸ ದಿವ್ಯೇ ದೇವೇಶ್ವರೇಶ್ವರಃ ।
ಜಾತಾನುಕಂಪೋ ದೇವಾನಾಂ ದೀಪ್ತೋ ದರ್ಶನಮೇಯಿವಾನ್ ॥ ೨೯ ॥

---

೨೪. ಆ ವನದಲ್ಲಿ ನೆರೆದಿದ್ದ ದೇವತೆಗಳೆಲ್ಲರೂ ಕಮಂಡಲುಗಳನ್ನು ಕೈಗಳಲ್ಲಿ ಹಿಡಿದು ರುದ್ರಾಕ್ಷಿಗಳ ಹಾರಗಳನ್ನು ಧರಿಸಿದ್ದರು. ವ್ರತಬಾಹಿರರಾದವರ ದರ್ಶನ, ಭಾಷಣ, ಸಹವಾಸಗಳನ್ನು ದೂರದಿಂದಲೇ ತ್ಯಾಗಮಾಡಿದ್ದರು.

೨೫. ಇಂತು ಆ ವನದಲ್ಲಿ ಎಲ್ಲರೂ ನಿಯಮಸಹಿತರಾಗಿ ಮಹೇಶ್ವರನೂ, ಲೋಕನಿಯಾಮಕನೂ, ಪಾರ್ವತೀಪತಿಯೂ ಆದ ಆ ಮಹಾದೇವನನ್ನು ಆ ವ್ರತದಿಂದಲೇ ಆರಾಧಿಸುತ್ತಿದ್ದರು.

೨೬. ಸರ್ವೋತ್ತಮವಾದ ಭಕ್ತಿಯಿಂದಲೂ, ಸ್ವಲ್ಪವೂ ತಪ್ಪದಂತಹ ವಿಧಿಯಿಂದಲೂ ಬಹಳ ಕಾಲದವರೆಗೂ ಧ್ಯಾನಾಸಕ್ತರಾಗಿರಲು ಪರಮೇಶ್ವರನು ತಮ್ಮ ಮನಸ್ಸಿನಲ್ಲಿಯೇ ನಿಯಾಮಕನಾಗಿರುವನೆಂಬುದನ್ನು ತಿಳಿದರು.

೨೭. ಇಂತು ಅವರೆಲ್ಲರೂ ರುದ್ರಧ್ಯಾನವೆಂಬ ಅಗ್ನಿಯಿಂದ ಭಸ್ಮೀಕೃತಗಳಾದ ಕಲ್ಮಷವುಳ್ಳವರೂ, ಸರ್ವೈಶ್ವರ್ಯಭರಿತರೂ ಆಗಿರಲು ಮಹೇಶ್ವರನೂ ರಾಕ್ಷಸನನ್ನು ಸಂಹರಿಸಿ ಅವರಿಗೆ ಪ್ರತ್ಯಕ್ಷನಾದನು.

೨೮. ಸನತ್ಕುಮಾರನು ಹೇಳುತ್ತಾನೆ:—ಬ್ರಹ್ಮದತ್ತವಾದ ಈ ಉತ್ತಮ ವ್ರತವನ್ನು ದೇವತೆಗಳೆಲ್ಲರೂ ಮಹೇಶ್ವರನಲ್ಲಿ ಏಕಾಗ್ರವಾದ ಮನಸ್ಸನ್ನಿಟ್ಟು ಸಮಗ್ರವಾಗಿ ನೆರವೇರಿಸಿದರು. ಬ್ರಹ್ಮನೂ ಶಿವನಲ್ಲಿ ಭಕ್ತಿಯನ್ನು ಮಾಡಿದನು.

೨೯. ದೇವಮಾನದ ಒಂದು ಸಾವಿರ ವರ್ಷಗಳು ಕಳೆದುಹೋಗಲು ದೇವಾಧಿದೇವನಾದ ಪರಶಿವನಿಗೆ ಅವರಲ್ಲಿ ಅನುಕಂಪವುಂಟಾಗಿ ಜ್ಯೋತೀರೂಪನಾಗಿ ಅವರಿಗೆ ದೃಗ್ಗೋಚರನಾದನು.

ಗಣೈರ್ನಾನಾವಿಧೈಃ ಸಾರ್ಧಂ ನಾನಾಭೂಷಣಭೂಷಿತೈಃ ।
ಸುದರ್ಪೋದ್ಧೂತದರ್ಪಾಢ್ಯೈರ್ಘೋರೈರ್ಘೋರವಿಘಾತಿಭಿಃ ॥ ೩೦ ॥
ಕಾಮರೂಪೈರಕಾಮೈಶ್ಚ ಸರ್ವಕಾಮಸಮನ್ವಿತೈಃ ।
ಕರೀಂದ್ರಕರಟಾಟೋಪಪಾಟನೈಃ ಸಿಂಹದೇಹಿಭಿಃ ॥ ೩೧ ॥
ಅಣಿಮಾದಿಗುಣೈರ್ದಿವ್ಯೈರ್ಯೋಗೈಶ್ವರ್ಯಾದಿನಾಮಭಿಃ ।
ವ್ಯಾಲೋಲಕೇಶರಶನಾದಂಷ್ಟ್ರಾಕಟಕಟೋದ್ಭವೈಃ ॥ ೩೨ ॥
ವ್ಯಾಘ್ರವ್ಯಾಲಾನನೈ ರೌದ್ರೈಃ ಕಾಕಕಂಕವಟೈಸ್ತಥಾ ॥ ೩೩ ॥
ಅರೂಪೈಃ ಸಮರೂಪೈಶ್ಚ ಸುರೂಪೈರ್ಬಹುರೂಪಕೈಃ ।
ಏಕದ್ವಿತ್ರಿಶಿರೋಭಿಶ್ಚ ಬಹುಶೀರ್ಷೈರಶೀರ್ಷಕೈಃ ॥ ೩೪ ॥
ಏಕದ್ವಿತ್ರಿಶಿಖೈಶ್ಚೈವ ನಾನಾರೂಪವಿರಾಜಿತೈಃ ।
ಬಹುನೇತ್ರೈರನೇತ್ರೈಶ್ಚ ಏಕದ್ವಿತ್ರಿವಿಲೋಚನೈಃ ॥ ೩೫ ॥

---

೩೦. ಆತನ ಸುತ್ತಲೂ ಬಹುವಿಧಗಳಾದ ಗಣಗಳು ನೆರೆದಿದ್ದರು. ಅವರೆಲ್ಲರೂ ನಾನಾವಿಧಗಳಾದ ಆಭರಣಗಳಿಂದಲಂಕೃತರಾಗಿ, ತಮ್ಮ ದರ್ಪದಿಂದ ಇತರರ ದರ್ಪಗಳನ್ನಡಗಿಸುತ್ತ, ಘೋರರೂಪರೂ, ಅನಿಷ್ಟನಿವಾರಕರೂ ಆಗಿದ್ದರು.

೩೧. ಎಲ್ಲರೂ ಸ್ವೇಚ್ಛಾರೂಪಗಳನ್ನು ಸ್ವೀಕರಿಸುವವರು, ನಿಷ್ಕಾಮಿಗಳು, ಸಕಲಾಭೀಷ್ಟಗಳನ್ನು ಪಡೆದವರು. ಮದಿಸಿದ ಮಹಾಗಜಗಳನ್ನೂ ಆಟೋಪದಿಂದ ಹೊಡೆದು ಕೆಡಹುವ ಸಿಂಹಗಳನ್ನು ಹೋಲುತ್ತಿದ್ದರು.

೩೨. ಅಣಿಮಾದ್ಯಷ್ಟಸಿದ್ಧಿಗಳನ್ನು ಪಡೆದಿದ್ದರು. ದೇವತೆಗಳಿಗೆ ಸಹಜವಾದ ಯೋಗ, ಐಶ್ವರ್ಯಾದಿ ಗುಣಗಳಿಂದ ಕೂಡಿದ್ದರು. ಅಲೆದಾಡುತ್ತಿರುವ ತಲೆಗೂದಲುಗಳ ಜಡೆಗಳುಳ್ಳವರಾಗಿ ಕೋರೆದಾಡೆಗಳಿಂದ ಕಟಕಟಾಶಬ್ದಗಳನ್ನು ಮಾಡುತ್ತಿದ್ದರು.

೩೩. ಕೆಲವು ಗಣಗಳು ಹುಲಿ, ಹಾವುಗಳ ಮುಖಗಳನ್ನು ಹೋಲುವ ಮುಖಗಳನ್ನು ಹೊಂದಿಯೂ, ಕೆಲವರು ಕಾಗೆ, ಕೊಕ್ಕರೆಗಳನ್ನು ಹೋಲುವವರೂ ಆಗಿದ್ದರು.

೩೪. ಕೆಲವರು ನೀರೂಪರೂ, ಸಮರೂಪರೂ, ಸುಂದರರೂಪರೂ, ಅನೇಕರೂಪರೂ ಆಗಿದ್ದರು. ಹಲವರಿಗೆ ಒಂದು, ಎರಡು, ಮೂರು ತಲೆಗಳಿದ್ದುವು. ಕೆಲವರಿಗೆ ಅನೇಕ ತಲೆಗಳಿದ್ದುವು. ಕೆಲವರಿಗೆ ತಲೆಗಳೇ ಇರಲಿಲ್ಲ.

೩೫. ಕೆಲವರು ಏಕಶಿಖೆಯುಳ್ಳವರೂ, ದ್ವಿಶಿಖಾಯುತರೂ, ತ್ರಿಶಿಖೆಗಳುಳ್ಳವರೂ ಆಗಿದ್ದರು. ಕೆಲವರು ನಾನಾರೂಪಗಳಿಂದ ವಿರಾಜಿಸುತ್ತಿದ್ದರು. ಕೆಲವರಿಗೆ ಅನೇಕ ನೇತ್ರಗಳೂ, ಒಂದು, ಎರಡು, ಮೂರು ನೇತ್ರಗಳೂ, ಇದ್ದುವು. ಹಲವರಿಗೆ ಕಣ್ಣುಗಳೇ ಇಲ್ಲದೆಯೂ ಇತ್ತು.

ಏಕಕರ್ಣೈರ್ದ್ವಿಕರ್ಣೈಶ್ಚ ಬಹುಕರ್ಣೈರಕರ್ಣಕೈಃ ।
ಏಕದ್ವಿತ್ರಿಸುನಾಸ್ಯೈಶ್ಚ ಬಹುನಾಸ್ಯೈರನಾಸಿಕೈಃ ॥ ೩೬ ॥
ಏಕಜಂಘೈರ್ದ್ವಿಜಂಘೈಶ್ಚ ಬಹುಜಂಘೈರಜಂಘಕೈಃ ।
ಏಕಪಾದೈರ್ದ್ವಿಪಾದೈಶ್ಚ ಬಹುಪಾದೈರಪಾದಕೈಃ ॥ ೩೭ ॥
ಗೌರಶ್ಯಾಮೈಃ ಶ್ಯಾಮಗೌರೈರಸಿತೈಃ ಕರ್ಬುರೈಸ್ತಥಾ ।
ಭುಜಂಗಹಾರವಲಯೈಃ ಕೃತಯಜ್ಞೋಪವೀತಕೈಃ ॥ ೩೮ ॥
ಶೂಲಾಽಸಿ ಪಟ್ಟಿಶಧರೈರ್ಭುಶುಂಡೀಪರಿಘಾಯುಧೈಃ ।
ಚಕ್ರ ಕಕ್ರಚ ಕೋದಂಡ ಕಾಂಡದಂಡಾಽಸ್ತ್ರಪಾಣಿಭಿಃ ॥ ೩೯ ॥
ಗದಾಮುದ್ಗರಪಾಷಾಣಮುಸಲಾಯುಧಹಸ್ತಕೈಃ ।
ವಜ್ರ ಶಕ್ತ್ಯಶನಿ ಪ್ರಾಸ ಕುಂತಕರ್ತೃಕ ಧಾರಿಭಿಃ ॥ ೪೦ ॥
ಭಂಭಾ ಭೇರೀರ್ವಾದಯದ್ಭಿರ್ವೀಣಾ ಪಣವವೇಣುಕಾನ್ ।
ಮೃದಂಗ ವಿಮಲಾ ಢಕ್ಕಾ ಕಾಹಲಾನಕದುಂದುಭೀನ್ ॥ ೪೧ ॥

---

೩೬. ಒಂದು ಮತ್ತು ಎರಡು ಕಿವಿಗಳುಳ್ಳವರೂ, ಬಹುಕರ್ಣರೂ, ಕರ್ಣರಹಿತರೂ, ವಿಕಾರವಾದ ಕಿವಿಗಳುಳ್ಳವರೂ, ಒಂದು, ಎರಡು, ಮೂರು ಮೂಗುಗಳುಳ್ಳವರೂ, ಬಹುನಾಸಿಕರೂ, ಮೂಗಿಲ್ಲದವರೂ ಇದ್ದರು.

೩೭. ಒಂದು, ಎರಡು, ಮತ್ತು ಅನೇಕ ಮೊಣಕಾಲುಗಳುಳ್ಳವರು, ಮೊಣಕಾಲುಗಳೇ ಇಲ್ಲದವರೂ, ಒಂದು, ಎರಡು ಮತ್ತು ಅನೇಕ ಪಾದಗಳುಳ್ಳವರೂ, ಪಾದಹೀನರೂ ಆ ಗಣಸೈನ್ಯದಲ್ಲಿದ್ದರು.

೩೮. ಕೆಲವರಿಗೆ ಕೆಂಪು ಮುಖಗಳೂ, ಕರಿಯ ದೇಹಗಳೂ ಇದ್ದುವು. ಹಲವರಿಗೆ ಕರಿಯ ಮುಖಗಳೂ, ಕೆಂಪು ದೇಹಗಳೂ ಇದ್ದುವು. ಕೆಲವರು ಹಳದಿಯ ಬಣ್ಣವುಳ್ಳವರೂ, ಕೆಲವರು ಅನೇಕ ಬಣ್ಣಗಳ ದೇಹಗಳುಳ್ಳವರೂ ಆಗಿದ್ದರು. ಎಲ್ಲರೂ ಹಾವುಗಳನ್ನೇ ಹಾರಗಳಾಗಿಯೂ, ಕಂಕಣಗಳಾಗಿಯೂ, ಯಜ್ಞೋಪವೀತಗಳಾಗಿಯೂ ಧರಿಸಿದ್ದರು.

೩೯–೪೦. ಶೂಲ, ಕತ್ತಿ, ಪಟ್ಟಿಶಗಳನ್ನು ಧರಿಸಿದವರು ಕೆಲವರು. ಭುಶುಂಡಿ ಮತ್ತು ಪರಿಘಾಯುಧಗಳನ್ನು ಹಿಡಿದಿದ್ದವರು ಕೆಲವರು. ಕೆಲವರು ಚಕ್ರಗಳನ್ನೂ, ಗರಗಸಗಳನ್ನೂ, ಬಿಲ್ಲುಗಳನ್ನೂ, ಬಡಿಗೋಲುಗಳನ್ನೂ, ಇತರ ಅಸ್ತ್ರಶಸ್ತ್ರಗಳನ್ನೂ ಕೈಗಳಲ್ಲಿ ಹಿಡಿದಿದ್ದರು. ಕೆಲವರ ಕೈಗಳಲ್ಲಿ ಗದೆ, ಒನಕೆ, ಕೋಡುಗಣು, ಗಂಡುಗೊಡಲಿ, ಮುಂತಾದ ಆಯುಧಗಳಿದ್ದುವು. ಕೆಲವರು ವಜ್ರಾಯುಧ, ಶಕ್ತಿ, ಅಶನಿ, ಪ್ರಾಸ, ಕುಂತ, ಕತ್ತರಿ, ಮೊದಲಾದುವನ್ನು ಹಿಡಿದಿದ್ದರು.

೪೧. ಗಂಭೀರಧ್ವನಿಗೊಡುವ ಭೇರಿಗಳನ್ನೂ, ವೀಣೆಗಳು, ಪಣವಗಳು, ವೇಣುಗಳು, ಮೃದಂಗಗಳು, ಶುದ್ಧಗಳಾದ ಢಕ್ಕೆಗಳು, ಕಹಳೆಗಳು, ತಮಟೆಗಳು, ನಗಾರಿಗಳು—ಇವುಗಳನ್ನು ಬಾಜಿಸುತ್ತಿದ್ದರು.

ಹುಡಂಕಾ ಶೃಂಗಿಕಾದ್ಯಾನಿ ನಾನಾವಾದ್ಯಾನಿ ವಾದಕೈಃ ।
ಏವಂ ನಾನಾವಿಧೈ ರೌದ್ರೈರ್ಭೀಮೈರ್ಭೀಮಪರಾಕ್ರಮೈಃ ॥ ೪೨ ॥
ಗಣೇಶ್ವರೈಃ ಸುದುರ್ಧರ್ಷೈರ್ವೃತಃ ಸೂರ್ಯೋ ಗ್ರಹೈರಿವ ।
ಆವಿರ್ಭೂತೋ ಮಹಾದೇವಃ ಸ್ವಗಣೈಃ ಪರಿವಾರಿತಃ ।
ತಂ ಪಶ್ಯತಾಂ ತದಾ ವ್ಯಾಸ ಬ್ರಹ್ಮಾದೀನಾಂ ದಿವೌಕಸಾಂ ॥ ೪೩ ॥
ಅಥ ಬ್ರಹ್ಮಾದಯೋ ದೇವಾ ದೃಷ್ಟ್ವಾಽಗ್ರೇ ಗಣನಾಯಕಂ ।
ತೇಜಸಾಽಧ್ಯಾಸಿತಾಸ್ತಸ್ಯ ಬಭೂವುರ್ಭ್ರಾಂತಚೇತಸಃ ॥ ೪೪ ॥
ತತೋಽವಲಂಬ್ಯ ತೇ ಧೈರ್ಯಂ ದೃಷ್ಟ್ವಾ ದೇವಂ ಯಥಾವಿಧಿ ।
ಷಡಂಗವೇದಯೋಗೇನ ಹೃಷ್ಟಚಿತ್ತವಪುರ್ಧರಾಃ ॥ ೪೫ ॥
ಶಿರೋಗತೈರಂಜಲಿಭಿಃ ಪಾದೇಭ್ಯಶ್ಚ ಮಹೀಂ ಗತೈಃ ।
ತುಷ್ಟುವುಃ ಸೃಷ್ಟಿಸಂಹಾರಸ್ಥಿತಿಕರ್ತಾರಮೀಶ್ವರಂ ॥ ೪೬ ॥

ದೇವಾ ಊಚುಃ:—

ನಮಃ ಶಿವಾಯ ಶಾಂತಾಯ ಸಗಣಾಯ ಸನಂದಿನೇ ।
ವೃಷಾಸನಾಯ ಸೌಮ್ಯಾಯ ಶೂಲಶಕ್ತಿಧರಾಯ ತೇ ॥ ೪೭ ॥

---

೪೨–೪೩. ಬುಡುಬುಡಿಕೆಗಳು ಮತ್ತು ಕೊಂಬುಗಳೇ ಮುಂತಾದ ಅನೇಕ ವಾದ್ಯಗಳನ್ನು ಧ್ವನಿಗೈಯುತ್ತ ಅನೇಕ ರೂಪಗಳುಳ್ಳವರಾಗಿ ಈಶ್ವರಾನುಚರರೂ, ಭಯಂಕರರೂ, ಭಯಂಕರ ಪರಾಕ್ರಮವಂತರೂ, ಅಜೇಯರೂ ಆದ ಗಣ ನಾಯಕರಿಂದ ಪರಿವೃತನಾದ ಮಹಾದೇವನು ಗ್ರಹಗಳಿಂದ ಪರಿವಾರಿತನಾದ ಸೂರ್ಯದೇವನಂತೆ ಕಂಗೊಳಿಸುತ್ತಿದ್ದನು. ಎಲೈ ವ್ಯಾಸನೆ! ಇಂತು ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ನೋಡುತ್ತಿರುವಂತೆಯೇ ಗಣಪರಿವಾರದಿಂದಾವೃತ ನಾದ ಮಹಾದೇವನು ದೃಗ್ಗೋಚರನಾದನು.

೪೪. ಆಗ ಆ ಗಣಸೈನ್ಯದ ಮುಂಭಾಗದಲ್ಲಿದ್ದ ಗಣಪತಿಯನ್ನು ಕಂಡು ಬ್ರಹ್ಮಾದಿ ದೇವತೆಗಳು ಆತನ ತೇಜಸ್ಸಿನಿಂದ ಅಭಿಭೂತರಾಗಿ ಭ್ರಾಂತಚಿತ್ತ ರಾಗಿದ್ದರು.

೪೫–೪೬. ಆದರೂ ಧೈರ್ಯವನ್ನವಲಂಬಿಸಿಕೊಂಡು ಯಥಾವಿಧಿಯಾಗಿ ಮಹಾದೇವನ ದರ್ಶನವನ್ನು ಮಾಡಿ ಷಡಂಗಸಹಿತಗಳಾದ ವೇದಗಳ ಜ್ಞಾನದಿಂದ ಹರ್ಷಚಿತ್ತರಾಗಿ ಉಬ್ಬಿದ ಮೈಗಳಿಂದಲೂ, ತಲೆಯಲ್ಲಿ ಜೋಡಿಸಿದ ಅಂಜಲಿ ಗಳಿಂದಲೂ, ಭೂಮಿಯಲ್ಲಿ ಹಿನ್ನೀಡಿದ ಕಾಲುಗಳಿಂದಲೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದ ಮಹೇಶ್ವರನನ್ನು ಸ್ತುತಿಸಿದರು.

೪೭. ದೇವತೆಗಳು ಹೇಳುತ್ತಾರೆ:—ಮಂಗಳಪ್ರದನೂ, ಪ್ರಶಾಂತನೂ, ಗಣಪರಿವೃತನೂ, ನಂದಿವಾಹನನೂ, ವೃಷಭಧ್ವಜನೂ, ಸೌಮ್ಯನೂ, ತ್ರಿಶೂಲ ಶಕ್ತಿಹಸ್ತನೂ ಆದ ಓ ಪರಮೇಶ್ವರಾ! ನಿನಗೆ ನಮಸ್ಕಾರವು.

ನಮೋ ದಿಕ್ಚರ್ಮವಸ್ತ್ರಾಯ ಶುಚಯೇ ತೀವ್ರತೇಜಸೇ ।
ಬ್ರಹ್ಮಣೇ ಬ್ರಹ್ಮದೇಹಾಯ ಬ್ರಹ್ಮಣಾ ಯೋಜಿತಾಯ ಚ ॥ ೪೮ ॥
ನಮೋಽಂಧಕವಿನಾಶಾಯ ಪರೇಶಾಯ ನಮೋನಮಃ ।
ರುದ್ರಾಯ ಪಂಚವಕ್ತ್ರಾಯ ಸರ್ವರೋಗಾಽಪಹಾರಿಣೇ ॥ ೪೯ ॥
ಗಿರಿಶಾಯ ಸುರೇಶಾಯ ಈಶಾನಾಯ ನಮೋನಮಃ ।
ಭೀಮೋಗ್ರಾದಿಸ್ವರೂಪಾಯ ವಿಜಯಾಯ ನಮೋನಮಃ ॥ ೫೦ ॥
ಸುರಾಽಸುರಾಽಧಿಪತಯೇ ಯತೀನಾಂ ಪತಯೇ ನಮಃ ।
ಚಂಡಾಯ ಚಂಡದಂಡಾಯ ವರಖಟ್ವಾಂಗದಂಡಿನೇ ॥ ೫೧ ॥
ವಿರೂಪಾಕ್ಷ ಶುಭಾಖ್ಯಾಯ ವಿಶ್ವರೂಪಾಯ ವೈ ನಮಃ ।
ಶಾಂತಾಯ ಚ ಮನೋಜ್ಞಾಯ ತ್ರಿನೇತ್ರಾಯ ನಮೋನಮಃ ॥ ೫೨ ॥
ವೇಧಸೇ ವಿಶ್ವರೂಪಾಯ ದೈತ್ಯಸಂಹಾರಿಣೇ ನಮಃ ।
ಭಕ್ತಾಽನುಕಂಪಿನೇಽತ್ಯರ್ಥಂ ರುದ್ರಜ್ಞಾನಪರಾಯ ಚ ॥ ೫೩ ॥

---

೪೮. ಕೆಲವುವೇಳೆ ದಿಗಂಬರನೂ, ಕೆಲವುವೇಳೆ ಗಜಚರ್ಮಧಾರಿಯೂ, ಪರಿಶುದ್ಧನೂ, ಉಗ್ರವಾದ ತೇಜಸ್ಸಿನಿಂದ ಕೂಡಿದವನೂ, ಸರ್ವವ್ಯಾಪಿಯೂ, ಬ್ರಹ್ಮನಾಗಿ ಅವತರಿಸಿದವನೂ, ವೇದಪ್ರತಿಪಾದ್ಯನೂ ಆದ ನಿನ್ನನ್ನು ನಮಸ್ಕರಿಸುವೆವು.

೪೯. ಅಂಧಕಾಸುರಸಂಹಾರಕನೂ, ಪರಮೇಶ್ವರನೂ, ದುಷ್ಟರನ್ನು ಗೋಳಾಡಿಸುವವನೂ, ಪಂಚಮುಖನೂ, ಸಕಲ ರೋಗನಿವಾರಕನೂ ಆದ ನಿನ್ನನ್ನು ವಂದಿಸುವೆವು.

೫೦. ಗಿರೀಶ್ವರನೂ, ದೇವಾಧಿದೇವನೂ, ಸರ್ವಸ್ವಾಮಿಯೂ, ಭೀಮ, ಉಗ್ರ ಮುಂತಾದ ಹೆಸರುಗಳಿಂದ ನಾನಾ ಸ್ವರೂಪಗಳುಳ್ಳವನೂ, ಸರ್ವತೋ ವಿಜಯಿಯೂ ಆದ ನಿನಗೆ ನಮಸ್ಕಾರವು.

೫೧. ನೀನು ದೇವತೆಗಳಿಗೂ, ರಾಕ್ಷಸರಿಗೂ ಒಡೆಯನು. ಯೋಗಿಗಳಿಗೆ ಸ್ವಾಮಿಯು. ಮಹಾಕಾಲನು. ಕಾಲಯಮನಿಗೂ ಕಾಲನು. ಉತ್ತಮವಾದ ಖಟ್ವಾಂಗವೆಂಬ ಆಯುಧವನ್ನು ಧರಿಸಿರುವವನು.

೫೨. ವಿರೂಪಾಕ್ಷನೆಂಬ ಶುಭನಾಮಧೇಯವುಳ್ಳವನು. ಈ ಬ್ರಹ್ಮಾಂಡವೇ ನಿನ್ನ ಸ್ವರೂಪವಾಗಿರುವುದು. ಪ್ರಶಾಂತನೂ, ಮನೋಹರನೂ, ತ್ರಿಲೋಚನನೂ ಆದ ನಿನ್ನನ್ನು ನಮಸ್ಕರಿಸುವೆವು.

೫೩. ನೀನೇ ಸರ್ವಕಾರಣನು. ವಿಶ್ವಸ್ವರೂಪನು. ದೈತ್ಯಕುಲನಾಶಕನು. ಭಕ್ತರಲ್ಲಿ ಮಹತ್ತರವಾದ ಅನುಕಂಪವುಳ್ಳವನು. ಸಂಸಾರಮೋಚಕವಾದ ಜ್ಞಾನವನ್ನು ಕೊಡುವವನು.

**ವಿರೂಪಾಯ ಸುರೂಪಾಯ ರೂಪಾಣಾಂ ಶತಧಾರಿಣೇ ।**
**ಪಂಚಾಸ್ಯಾಯ ಶುಭಾಸ್ಯಾಯ ಚಂದ್ರಾಸ್ಯಾಯ ನಮೋನಮಃ ॥ ೫೪ ॥**
**ವರದಾಯ ವರಾಹಾಯ ಸುಕೂರ್ಮಾಯ ನಮೋನಮಃ ॥ ೫೫ ॥**
**ತ್ರಿನೇತ್ರತ್ರಾಣಮಸ್ಮಾಕಂ ತ್ರಿಪುರಘ್ನ ವಿಧೀಯತಾಂ ।**
**ವಾಙ್ಮನಃ ಕಾಯಭಾವೈಸ್ತ್ವಾಂ ಪ್ರಪನ್ನಾನಾಂ ಮಹೇಶ್ವರ ॥ ೫೬ ॥**

**ಸನತ್ಕುಮಾರ ಉವಾಚ :—**

**ಏವಂ ಸ್ತುತಸ್ತದಾ ದೇವೈರ್ವಿರಿಂಚ್ಯಾದ್ಯೈಸ್ತಥಾ ಹರಃ ।**
**ಶರೀರಾಣಿ ವಿಲೋಕ್ಯೇಶಃ ಕೃಶಾನ್ಯಥ ದಿವೌಕಸಾಂ ॥ ೫೭ ॥**
**ದಿವ್ಯಪ್ರತಾಪಧಾರೇಣ ತ್ರಿವೇಧೇನಾಽಂತರಾತ್ಮನಾ ॥ ೫೮ ॥**
**ಆರಾಧನಾಂ ಸಮೀಕ್ಷ್ಯಾಹ ಬ್ರಹ್ಮಾದೀನಾಂ ಸುರೇಶ್ವರಃ ।**
**ಸಾಧು ಸಾಧು ಮಹಾಭಾಗಾಃ ಶಶ್ವದ್ವ್ರತಮುಪಾಸಿತಂ ॥ ೫೯ ॥**
**ದಿವ್ಯೇನಾಽನೇನ ವಿಧಿನಾ ಭೃಶಮಾರಾಧಿತೋಽಹ್ಯಹಂ ।**
**ಭವದ್ಭಿಃ ಶ್ರದ್ಧಯಾಽತ್ಯರ್ಥಂ ಮಮ ದರ್ಶನಕಾಂಕ್ಷಯಾ ॥ ೬೦ ॥**

---

೫೪. ಅನೇಕ ರೂಪಗಳುಳ್ಳವನು. ಸುಂದರರೂಪನು. ನೂರಾರು ರೂಪಗಳನ್ನು ಇಚ್ಛಾಮಾತ್ರದಿಂದಲೇ ಧರಿಸುವವನು. ಐದು ಮುಖಗಳುಳ್ಳವನು. ಶುಭವಕ್ತ್ರನೆನಿಸಿದವನು. ಓ ಪ್ರಭುವೆ! ಚಂದ್ರನಂತೆ ಆಹ್ಲಾದಕರವಾದ ಮುಖವುಳ್ಳ ನಿನಗೆ ನಮಸ್ಕಾರವು.

೫೫. ವರಪ್ರದನೂ, ವರಾಹ ಮತ್ತು ಕೂರ್ಮಗಳ ಅವತಾರಗಳನ್ನೆತ್ತಿದವನೂ ಆದ ನಿನಗೆ ನಮಸ್ಕಾರವು.

೫೬. ಎಲೈ ತ್ರಿನೇತ್ರನೆ, ತ್ರಿಪುರಧ್ವಂಸಿಯೆ! ನಮಗೆ ಅಭಯಸ್ಥಾನವನ್ನು ಕೊಡುವವನಾಗು. ಮಹೇಶ್ವರ! ನಮ್ಮ ವಾಕ್ಕು, ಮನಸ್ಸು, ದೇಹಗಳ ಸರ್ವ ಭಾವಗಳಿಂದಲೂ ನಿನ್ನಲ್ಲಿಯೇ ಪ್ರಪನ್ನನಾಗಿರುವೆವು.

೫೭–೫೯. ಸನತ್ಕುಮಾರನು ಹೇಳುತ್ತಾನೆ:—ಚತುರ್ಮುಖನೇ ಮೊದಲಾದ ದೇವತೆಗಳಿಂದ ಇಂತು ಸಂಸ್ತುತನಾದ ಪರಮೇಶ್ವರನು ಅವರ ಉಗ್ರವಾದ ತಪಶ್ಚರಣೆಯಿಂದ ಬಡವಾಗಿರುವ ದೇಹಗಳನ್ನು ನೋಡಿ ದಿವ್ಯಾನುಗ್ರಹವನ್ನು ಸ್ಮರಿಸುವ ದೃಷ್ಟಿಯುಳ್ಳವನಾದನು. ತ್ರಿಕರಣ ಶುದ್ಧಿಯಿಂದ ಅವರು ಮಾಡಿದ ಆರಾಧನೆಯನ್ನು ತನ್ನ ಅಂತರಂಗದಲ್ಲಿಯೇ ತಿಳಿದುಕೊಂಡು ಹರನು ಬ್ರಹ್ಮಾದಿಗಳನ್ನು ಕುರಿತು ಇಂತೆಂದನು. "ಎಲೈ ಮಹಾತ್ಮರಿರಾ! ಭಾಪು, ಭಾಪು, ಉಗ್ರವಾದ ಈ ವ್ರತವನ್ನು ಸಾಂಗವಾಗಿ ಉಪಾಸನೆಮಾಡಿರುವಿರಿ.

೬೦. ನನ್ನನ್ನು ನೋಡಬೇಕೆಂಬ ಬಯಕೆಯಿಂದ ನೀವು ದಿವ್ಯವಾದ ವಿಧಿಯಿಂದಲೂ, ಅತಿಶಯವಾದ ಶ್ರದ್ಧೆಯಿಂದಲೂ ಬಹುವಿಧವಾಗಿ ನನ್ನನ್ನಾರಾಧಿಸಿರುವಿರಿ.

ವ್ರತಸ್ಥಾ ಮಾಂ ಹಿ ಪಶ್ಯಂತಿ ಮಾನುಷಾ ದೇವತಾ ಅಪಿ ।
ಯದಿ ಯಚ್ಛ ಪ್ರಯಚ್ಛಾಮಿ ಕಾಂಕ್ಷಿದ್ಭ್ಯೋ ಹಿ ವರಾಂಛುಭಾನ್ ॥ ೬೧ ॥
ಏಕೈಕಶೋ ದ್ವಿತ್ರಿಶೋವಾ ಸಮಸ್ತೇಭ್ಯಃ ಸಮೇನ ವಃ ।
ಸರ್ವಕಾಮಪ್ರಸಿಧ್ಯರ್ಥಂ ದಾಸ್ಯಾಮ್ಯೇನಂ ವರಂ ಹಿ ವಃ ॥ ೬೨ ॥
ಹಿತಾಯ ಭವತಾಂ ಚಾಽಹಮಾಗಾಮುಜ್ಜಯಿನೀಂ ಪ್ರತಿ ।
ಕ್ಷಿಪ್ತಂ ಕಪಾಲಂ ಚ ಮಯಾ ಕಿಂ ಪುನರ್ಭದ್ರಮಸ್ತು ವಃ ॥ ೬೩ ॥

ದೇವಾ ಊಚುಃ:—

ಕಿಂ ಕೃತಂ ಹಿತಮಸ್ಮಾಕಂ ಕಪಾಲಂ ಕ್ಷಿಪತಾ ತ್ವಯಾ ॥ ೬೪ ॥
ಕಿಮರ್ಥಂ ಕಂಪಿತಾ ಭೂಮಿಸ್ತ್ರೈಲೋಕ್ಯಂ ವ್ಯಾಕುಲೀಕೃತಂ ।
ನೈತನ್ನಿರರ್ಥಕಂ ದೇವ ಕಥ್ಯತಾಮತ್ರ ಕಾರಣಂ ॥ ೬೫ ॥

ಮಹಾದೇವ ಉವಾಚ:—

ಯುಷ್ಮದ್ಧಿತಾರ್ಥಮೇತದ್ವೈ ಭಯಂ ವಿನಿಹಿತಂ ಕೃತಂ ।
ದೇವತಾನಾಂ ತು ರಕ್ಷಾರ್ಥಂ ಶ್ರೂಯತಾಮತ್ರಕಾರಣಂ ॥ ೬೬ ॥

---

೬೧. ಮನುಷ್ಯರಾಗಲಿ, ದೇವತೆಗಳಾಗಲಿ, ವ್ರತವನ್ನು ಸ್ವೀಕರಿಸಿದರೆ ಮಾತ್ರ ನನ್ನನ್ನು ನೋಡಲು ಶಕ್ತರಾಗುವರು. ಆದುದರಿಂದ ನಿಮಗೆ ಬೇಕಾದ ಯಾವ ಶುಭವರಗಳನ್ನಾದರೂ ಕೊಡುವೆನು.

೬೨. ಒಬ್ಬೊಬ್ಬರಿಗಾಗಲಿ, ಇಬ್ಬರು ಮೂವರಿಗಾಗಲಿ, ನಿಮಗೆಲ್ಲರಿಗೇ ಆಗಲಿ ಸರ್ವಸಮವಾಗಿ ಎಲ್ಲರ ಅಭಿಲಾಷೆಗಳೂ ಈಡೇರುವಂತೆ ವರವನ್ನು ನಿಮಗೆ ಕೊಡುವೆನು.

೬೩. ಈಗಾಗಲೇ ನಿಮ್ಮ ಹಿತಕ್ಕಾಗಿಯೇ ನಾನು ಉಜ್ಜಯಿನಿಗೆ ಬಂದಿರುವೆನಷ್ಟೆ. ಬ್ರಹ್ಮಕಪಾಲವನ್ನೂ ಅಲ್ಲಿ ಬಿಸುಟಿರುವೆನು. ಮುಂದೆ ನಿಮ್ಮ ಮಂಗಳಕ್ಕಾಗಿ ಮತ್ತೇನನ್ನು ಮಾಡಲಿ?

೬೪. ದೇವತೆಗಳು ಹೇಳುತ್ತಾರೆ:—ಕಪಾಲವನ್ನು ಭೂಮಿಗೆಸೆದ ನಿನ್ನಿಂದ ನಮಗೆ ಯಾವ ವಿಧವಾದ ಹಿತವುಂಟಾಯಿತು?

೬೫. ಭೂಮಿಯು ನಡುಗಿದುದೇಕೆ? ಮೂರುಲೋಕಗಳೂ ವ್ಯಾಕುಲಗೊಂಡುದೇಕೆ? ಎಲೈ ದೇವದೇವನೆ! ಇದೆಲ್ಲವೂ ನಿಷ್ಪ್ರಯೋಜನವಾಗಿರಲಾರದು. ಇದಕ್ಕೆ ಕಾರಣವನ್ನು ತಿಳಿಸುವವನಾಗು.

೬೬. ಮಹಾದೇವನು ಹೇಳುತ್ತಾನೆ:—ನಿಮ್ಮ ಹಿತದ ದೃಷ್ಟಿಯಿಂದಲೇ ಭೂಲೋಕದಲ್ಲಿ ಈ ಭಯವನ್ನುಂಟುಮಾಡಬೇಕಾಯಿತು. ನಾನು ದೇವತೆಗಳ ರಕ್ಷಣೆಗಾಗಿಯೇ ಮಾಡಿದ ಈ ಕಾರ್ಯದ ಕಾರಣವನ್ನು ಕೇಳಿರಿ.

ಅಸುರೋ ದ್ರೋಹಣೋ ನಾಮ ಬಲವಾನ್ಯೋಗಮಾಯಿಕಃ ।
ಅವಸ್ಥಿತಸ್ತ್ವವಷ್ಟಭ್ಯ ರಸಾತಲತಲಾಶ್ರಯಂ ॥ ೬೭ ॥
ತಸ್ಯ ದೈತ್ಯಸ್ಯ ಬಲಿನೋ ದೈತ್ಯಾಃ ಪರಪುರಂಜಯಾಃ ।
ಯುಷ್ಮಾನ್ ಜ್ಞಾತ್ವಾ ತಪಸ್ಥಾಂಶ್ಚಾಽಪ್ಯಭ್ಯಗುರ್ಬಹವೋ ಹಿ ತೇ ॥ ೬೮ ॥
ಸೇಂದ್ರಾನ್ನಿಹಂತುಮಿಚ್ಛಂತೋ ಮಾಯಾಪ್ರಚ್ಛನ್ನಚಾರಕಾಃ ।
ಪುರೀಂ ಕನಕಶೃಂಗಾಢ್ಯಾಮೇನಾಮಧಿಕುಶಸ್ಥಲೀಂ ।
ಸಮುದ್ಯಯುಃ ಸುರಾನ್ ಹಂತುಮುದ್ಯತಾ ಉದ್ಯತಾಯುಧಾಃ ॥ ೬೯ ॥
ತೇಷಾಂ ಕಪಾಲಪಾತೇನ ಭೂಮಿ ನಿಷ್ಕಂಪನೇನ ಚ ।
ಶಬ್ದೇನ ಚಾಽತಿಘೋರೇಣ ದೇಹಾತ್ಪ್ರಾಣಾ ವಿನಿರ್ಯಯುಃ ॥ ೭೦ ॥
ಲೋಕಸ್ಥಿತಿವಿನಾಶಾರ್ಥಂ ತೇಷಾಮಾಸೀತ್ಸಮುದ್ಯಮಃ ।
ರಾಜ್ಯೈಶ್ವರ್ಯೇಣ ದರ್ಪಿಷ್ಠಾಸ್ತೇನ ತೇ ನಿಹತಾ ಮಯಾ ॥ ೭೧ ॥

ದೇವಾ ಊಚುಃ:—

ವಿಶ್ವಸ್ತಾನಾಂ ಪುನಶ್ಚೈವಮೇವ ಚಾಽನುಗ್ರಹಃ ಕೃತಃ ।
ದೇವಾಽನುಗ್ರಹಕರ್ತಾ ತ್ವಂ ಗುಣಸ್ಮೃತಿನಿಷೇವಿತಃ ॥ ೭೨ ॥

---

೬೭-೬೮. ದ್ರೋಹಣನೆಂಬ ರಾಕ್ಷಸನೊಬ್ಬನು ಮಹಾಬಲಶಾಲಿಯೂ, ಯೋಗಮಾಯಾಸಮನ್ವಿತನೂ ಆಗಿ ರಸಾತಲಲೋಕದ ಪ್ರದೇಶವನ್ನು ಆಶ್ರಯಿಸಿಕೊಂಡಿದ್ದನು. ಆ ರಾಕ್ಷಸೇಂದ್ರನ ಅನುಯಾಯಿಗಳು ಬಲಶಾಲಿಗಳೂ ಶತ್ರುನಗರ ನಾಶಕರೂ ಆಗಿದ್ದರು. ನೀವೆಲ್ಲರೂ ತಪಸ್ಸಿನಲ್ಲಿ ನಿರತರಾಗಿದ್ದುದನ್ನು ತಿಳಿದು ಅಸಂಖ್ಯಾತರಾದ ಅವರು ನೀವಿದ್ದ ಪ್ರದೇಶವನ್ನಾಕ್ರಮಿಸಿದರು.

೬೯-೭೦. ಇಂದ್ರ ಸಹಿತರಾದ ನಿಮ್ಮೆಲ್ಲರನ್ನೂ ಕೊಲ್ಲಲಪೇಕ್ಷಿಸಿ ಮಾಯಾಬಲದಿಂದ ತಮ್ಮ ಸಂಚಾರವನ್ನು ಮರೆಮಾಡಿ ಉನ್ಮತ್ತರೂ ಆಯುಧಪಾಣಿಗಳೂ ಆಗಿ ಚಿನ್ನದ ಕಳಶಗಳಿಂದ ಶೋಭಿಸುತ್ತಿರುವ ಈ ಕುಶಸ್ಥಳಿಯೆಂಬ ನಗರವನ್ನು ಮುತ್ತಿದರು. ಬ್ರಹ್ಮಕಪಾಲದ ಹೊಡೆತದಿಂದಲೂ, ಭೂಮಿಯ ನಡುಕದಿಂದಲೂ, ಮಹಾಭಯಂಕರವಾದ ಆ ಶಬ್ದದಿಂದಲೂ ಅವರ ಪ್ರಾಣಗಳೆಲ್ಲವೂ ದೇಹಗಳನ್ನು ಬಿಟ್ಟು ಹೊರಟವು.

೭೧. ತ್ರಿಲೋಕಗಳ ಸ್ಥಿತಿಯನ್ನು ನಾಶಗೊಳಿಸುವುದಕ್ಕಾಗಿಯೇ ಅವರ ಪ್ರಯತ್ನವುಂಟಾಯಿತು. ರಾಜ್ಯ ಮತ್ತು ಐಶ್ವರ್ಯಗಳ ಆಧಿಕ್ಯದಿಂದ ಅವರು ಮತ್ತರಾಗಿದ್ದರು. ಆದುದರಿಂದಲೇ ನಾನು ಅವರನ್ನು ಸಂಹರಿಸಿದೆನು.

೭೨. ದೇವತೆಗಳು ಹೇಳುತ್ತಾರೆ:—ನಿನ್ನಲ್ಲಿಯೇ ವಿಶ್ವಾಸವನ್ನಿಟ್ಟಿರುವ ನಮ್ಮಲ್ಲಿ ಮತ್ತೊಂದುಸಾರಿ ಅನುಗ್ರಹವನ್ನು ಮಾಡಿರುವೆ. ನೀನೇ ದೇವತೆಗಳಲ್ಲಿ ಅನುಗ್ರಹವನ್ನು ಮಾಡುವವನು. ನಿನ್ನ ಸದ್ಗುಣಗಳನ್ನು ಸ್ಮರಿಸುವ ಮಾರ್ಗದಿಂದ ಸಕಲರೂ ನಿನ್ನನ್ನು ಸೇವಿಸುತ್ತಿರುವರು.

ದಿವ್ಯದೃಷ್ಟಿಭಿರತ್ಯರ್ಥಂ ಯಶೋಽರ್ಥಂ ಭೀಮ ನಂದಿತಾಃ ।
ಇತ್ಯುಕ್ತ್ವಾ ಪ್ರಣತಾನ್ದೇವಾನುತ್ಥಾಪ್ಯೋಚೇ ಪುನರ್ಭವಃ ॥ ೭೩ ॥
ಶಿವ ಉವಾಚ :—
ಪರಿಚರ್ಯಾಽಭಿಸಂಯುಕ್ತಂ ನಿತ್ಯಮುಗ್ರನಿಷೇವಿತಂ ।
ಧ್ಯಾನಸಾಧನನಿಷ್ಪನ್ನಂ ಯದನ್ಯೇಷಾಂ ಚ ವಿದ್ಯತೇ ॥ ೭೪ ॥
ಮನೋವಾಕ್ಕಾಯಭಾವೇನ ದುಷ್ಕರಂ ದುಶ್ಚರಂ ತಪಃ ।
ಅನೇನ ತಪಸಾ ಯುಕ್ತಾಃ ಕಷ್ಟೇನ ದುಃಸಹೇನ ಚ ॥ ೭೫ ॥
ಮಹತಾ ತನುಸಾಧ್ಯೇನ ಬಹುಕಾಲಾರ್ಜಿತೇನ ವಃ ।
ಸಮಂತಾದಭಿವರ್ಧೇತಾಂ ಯುಷ್ಮತ್ತೇಜಸ್ತಪೋಽಪಿ ಚ ॥ ೭೬ ॥
ಸನತ್ಕುಮಾರ ಉವಾಚ :—
ಇತ್ಯುಕ್ತಾ ದೇವದೇವೇನ ದೇವಾ ಬ್ರಹ್ಮಪುರೋಗಮಾಃ ।
ಊಚುರುನ್ನಾಮ್ಯ ವಕ್ತ್ರಾಣಿ ಸ್ಥಿತಾ ಜಾನುಭಿರೀಶ್ವರಂ ॥ ೭೭ ॥
ದೇವಾ ಊಚುಃ :—
ಪ್ರಾಣದಸ್ತ್ವಂ ಕಾರಣಸ್ತ್ವಂ ತಪಸಾಂ ದೇವ ದೃಶ್ಯಸೇ ।
ತದಸ್ಮಾಕಂ ಪ್ರವೃತ್ತಾನಾಂ ಮಾನುಷಾಣಾಂ ವರಪ್ರದ ॥ ೭೮ ॥

---

೭೩. ಎಲೈ ಭೀಮನೆ! ನಿನ್ನ ದಿವ್ಯದೃಷ್ಟಿಯಿಂದಲೂ ಯಶೋವರ್ಧಕಗಳಾದ ಕಾರ್ಯಗಳಿಂದಲೂ ನಾವು ಬಹಳ ಸಂತುಷ್ಟರಾಗಿರುವೆವು. ಇಂತೆಂದು ನಮಸ್ಕರಿಸುತ್ತಿರುವ ದೇವತೆಗಳನ್ನೆಬ್ಬಿಸಿ ಮಹಾದೇವನು ಮತ್ತೆ ಹೇಳತೊಡಗಿದನು.

೭೪. ಶಿವನು ಹೇಳುತ್ತಾನೆ:—ನನ್ನ ಪರಿಚರ್ಯೆಯಿಂದ ಕೂಡಿದುದೂ, ನಿತ್ಯವೂ ಕಠಿನನಿಯಮಗಳಿಂದ ಸೇವಿಸಲ್ಪಡುತ್ತಿರುವುದೂ, ಧ್ಯಾನವೆಂಬ ಸಾಧನದಿಂದ ಹುಟ್ಟಿರುವುದೂ ಆದ ನಿಮ್ಮ ತಪಸ್ಸು ಬೇರೆಯಾರಲ್ಲಿಯೂ ಇದುವರೆಗೆ ಕಾಣಲಿಲ್ಲ.

೭೫. ಮನಸ್ಸು, ವಾಕ್ಕು, ದೇಹಗಳಿಂದ ತಪಸ್ಸನ್ನು ಮಾಡುವುದು ಕಷ್ಟಸಾಧ್ಯವೂ ಅನನ್ಯಸಾಧಾರಣವೂ ಆಗಿರುವುದು. ಇಂತಹ ಕಷ್ಟವೂ ಅಸಹ್ಯವೂ ಆದ ತಪಸ್ಸಿನಿಂದ ನೀವು ಕೂಡಿರುವಿರಿ.

೭೬. ಮಹತ್ತರವಾದ ನಿಮ್ಮ ತಪಸ್ಸು ಮತ್ತು ದೃಢದೇಹಗಳಿಂದಮಾತ್ರವೇ ಸಾಧ್ಯವೂ, ಬಹುಕಾಲದಿಂದ ಸಂಪಾದ್ಯವೂ ಆಗಿರುವುದು. ಆದುದರಿಂದ ನಿಮ್ಮ ತೇಜವೂ ತಪಸ್ಸೂ ಸರ್ವತೋಮುಖವಾಗಿ ಅಭಿವೃದ್ಧಿಯನ್ನು ಪಡೆಯಲಿ.

೭೭. ಸನತ್ಕುಮಾರನು ಹೇಳುತ್ತಾನೆ:—ದೇವೇಶ್ವರನು ಇಂತೆನ್ನಲು ಬ್ರಹ್ಮಾದಿದೇವತೆಗಳೆಲ್ಲರೂ ಮೊಣಕಾಲುಗಳ ಮೇಲೆ ನಿಂತು ಮುಖಗಳನ್ನು ಮೇಲಕ್ಕೆತ್ತಿಕೊಂಡು ಹೇಳಿದರು.

೭೮. ದೇವತೆಗಳು ಹೇಳುತ್ತಾರೆ:—ಎಲೈ ದೇವದೇವನೆ! ನೀನೇ ನಮಗೆ

ರಕ್ಷಾಂ ಕುರುಷ್ವ ದೇವೇಶ ಭಕ್ತಾನಾಮಭಯಂಕರ ॥ ೭೯ ॥
ಈಶ್ವರ ಉವಾಚ:—
ಯತ್ನೇನ ವಿಧಿನಾ ದತ್ತಂ ಸುವ್ಯಕ್ತಂ ದರ್ಶನಂ ಹಿ ವಃ ।
ಸುದುರ್ಲಭಾನ್ಯಪಿ ಪುನರ್ದಾಸ್ಯಾಮಿ ವೋ ವರಾನ್ಬಹೂನ್ ॥ ೮೦ ॥
ಏವಮುಕ್ತೋ ಭಗವತಾ ಬ್ರಹ್ಮಾ ವಚನಮಬ್ರವೀತ್ ।
ದೇವಾನಾಮಗ್ರತಃ ಸ್ಥಿತ್ವಾ ಶ್ರುತಿಶಬ್ದೋದ್ಭವಂ ಭವಂ ॥ ೮೧ ॥
ಪ್ರಾಪ್ತಾ ವಯಂ ಚ ಭಗವನ್ಸಪರ್ಯಾಪ್ತೋ ಮಹಾವರಃ ।
ಜಾಯತಾಂ ನಃ ಸದೈಶ್ವರ್ಯಂ ವಾಸಸ್ಥಾನಮಥಾಽಕ್ಷಯಂ ॥ ೮೨ ॥
ಶಿವ ಉವಾಚ:—
ಲೋಕೇಽಸ್ಮಿನ್ಮಮ ಯೇ ಭಕ್ತಾ ಮಯಾ ವಿನಿಹತಾಶ್ಚ ಯೇ ।
ನೈವ ತೇ ದುರ್ಗತಿಂ ಯಾಂತಿ ಲಭಂತೇ ಸುಮತಿಂ ಪರಾಂ ॥ ೮೩ ॥

---

ಪ್ರಾಣದಾತನು. ನೀನೇ ನಮ್ಮ ತಪಸ್ಸಿಗೆ ಕಾರಣವಾಗಿಯೂ ಕಾಣುತ್ತಿರುವೆ. ಆದುದರಿಂದ ಈ ಕಾರ್ಯದಲ್ಲಿ ಪ್ರವರ್ತಿಸಿರುವ ನಮಗೂ ಮನುಷ್ಯರಿಗೂ ವರಪ್ರದನಾಗು.

೭೯. ಭಕ್ತರಿಗೆ ಅಭಯವನ್ನು ಕೊಡುವ ದೇವೇಶ್ವರನಾದ ನೀನು ನಮ್ಮ ಸಂರಕ್ಷಣೆಯನ್ನು ಮಾಡು.

೮೦. ಈಶ್ವರನು ಹೇಳುತ್ತಾನೆ:—ವಿಧ್ಯುಕ್ತರೀತಿಯಿಂದ ನೀವು ಮಾಡಿದ ಪ್ರಯತ್ನದ ಫಲವಾಗಿಯೇ ನಾನು ಸಾಕ್ಷಾತ್ತಾಗಿ ನಿಮಗೆ ದರ್ಶನವನ್ನು ಕೊಟ್ಟಿರುವೆನು. ಅಲ್ಲದೆ ಅತ್ಯಂತದುರ್ಲಭಗಳಾದ ಇನ್ನೂ ಅನೇಕ ವರಗಳನ್ನು ನಿಮಗೆ ಕೊಡಲಿರುವೆನು.

೮೧. ಇಂತೆಂದು ಭಗವಂತನು ಹೇಳಲು ಬ್ರಹ್ಮನು ದೇವತೆಗಳ ಮುಂಗಡೆ ನಿಂತು ವೇದಶಬ್ದಗಳಿಂದ ಪ್ರತಿಪಾದ್ಯನಾದ ಆತನನ್ನು ಕುರಿತು ಮಾತನಾಡಲು ಪಕ್ರಮಿಸಿದನು.

೮೨. "ಎಲೈ ಭಗವಂತನೆ! ನಾವು ನಿನ್ನನ್ನೇ ಶರಣುಹೊಂದಿರುವೆವು. ಇದರಿಂದಲೇ ಮಹಾವರವನ್ನು ಪಡೆದಂತಾಯಿತು. ನಮಗೆ ಯಾವಾಗಲೂ ಐಶ್ವರ್ಯವೂ ನಾಶರಹಿತವಾದ ಉತ್ತಮಸ್ಥಾನವೂ ಲಭಿಸಲಿ."

೮೩. ಶಿವನು ಹೇಳುತ್ತಾನೆ:—ಈ ಲೋಕದಲ್ಲಿ ನನಗೆ ಯಾರು ಭಕ್ತರಾಗಿರುವರೊ, ಯಾರಿಗೆ ಸಾಕ್ಷಾತ್ತಾಗಿ ನನ್ನ ಕೈಗಳಿಂದಲೇ ಮರಣವು ಸಂಭವಿಸಿರುವುದೊ, ಅವರಿಗೆಂದಿಗೂ ದುರ್ಗತಿಯುಂಟಾಗುವುದಿಲ್ಲ. ಮೋಕ್ಷಪ್ರದವಾದ ಸುಜ್ಞಾನವನ್ನೇ ಅವರು ಪಡೆಯುವರು.

ಸಾರ್ಧಂ ತತ್ರ ಜಟಾಜೂಟೈಃ ಶಿರೋಭಿಃ ಶೂಲಪಾಣಯಃ ।
ಭಾಂತಿ ಮದ್ವಾಮಪಾರ್ಶ್ವಸ್ಥಾ ಇಮೇ ತೇ ದಾರುಣಾ ಗಣಾಃ ॥ ೮೪ ॥
ಯೇಷಾಂ ವಿನಿಗ್ರಹಾರ್ಥಾಯ ಯುಷ್ಮತ್ಸಂಬೋಧನಾಯ ಚ ।
ಸವಿಕಾರಂ ಮಯಾಕ್ಷಿಪ್ತಂ ಕಪಾಲಂ ಧರಣೀತಲೇ ॥ ೮೫ ॥
ಕೃತೋ ಮೇಽನುಗ್ರಹಸ್ತೇಷಾಂ ಭಕ್ತಾನಾಂ ಭಕ್ತಿಮಿಚ್ಛತಾಂ ।
ವಸೇಽಸ್ಮಿನ್ನಿತ್ಯವಾಸೋ ಮೇ ವೃಕ್ಷೈರಭ್ಯರ್ಥಿತಸ್ಯ ಚ ॥ ೮೬ ॥
ಮಹಾಕಾಲವನೇ ದೇವಾ ಆಗತಸ್ಯ ಮಮಾಽನಘಾಃ ।
ತಪಸ್ಯತಾಂ ಚ ಭವತಾಂ ಮಹಾಕಾಲವನಂ ತತಃ ॥ ೮೭ ॥
ನಾಮದ್ವಯಯುತಂ ಗುಹ್ಯಂ ಲೋಕೇ ಖ್ಯಾತಂ ಭವಿಷ್ಯತಿ ।
ಗುಹ್ಯಂ ವನಂ ಶ್ಮಶಾನಂ ಚ ಕ್ಷೇತ್ರಾಣಾಂ ಪ್ರವರಂ ಮಹತ್ ॥ ೮೮ ॥
ಕಪಾಲವ್ರತಚರ್ಯಾ ಚ ಮಯಾ ಹ್ಯೇಷಾ ಪ್ರಕೀರ್ತಿತಾ ।
ಕಪಾಲಪಾತ್ರೇ ಭುಂಜಾನಃ ಕಪಾಲವ್ರತಭೂಷಣಃ ॥ ೮೯ ॥

---

೮೪. ನನ್ನ ಲೋಕದಲ್ಲಿ ಅವರೆಲ್ಲರೂ ಜಟಾಜೂಟಗಳಿಂದಲಂಕೃತಗಳಾದ ತಲೆಗಳಿಂದಲೂ, ತ್ರಿಶೂಲಾಯುಧಗಳಿಂದಲೂ ಕೂಡಿದವರಾಗಿ ಭೀಕರರಾದ ಗಣಗಳೆನಿಸಿ ನನ್ನ ಎಡಭಾಗದಲ್ಲಿ ಪ್ರಕಾಶಿಸುತ್ತಿರುವರು.

೮೫. ಆ ರಾಕ್ಷಸರನ್ನು ನಿಗ್ರಹಿಸುವುದಕ್ಕಾಗಿಯೂ ನಿಮಗೆ ಸರ್ವೇಶ್ವರನಾದ ನಾನೊಬ್ಬನಿರುವೆನೆಂಬುದನ್ನು ಜ್ಞಾಪಿಸುವುದಕ್ಕಾಗಿಯೂ ವಿಕಾರ ಸಹಿತವಾದ ಈ ಕಪಾಲವನ್ನು ಭೂಮಿಯಲ್ಲಿ ಬಿಸುಟೆನು.

೮೬. ನನ್ನ ಭಕ್ತರೂ, ನನ್ನಲ್ಲಿ ಅನನ್ಯಭಕ್ತಿಯನ್ನಪೇಕ್ಷಿಸುವವರೂ ಆದ ವರಿಗೆಲ್ಲ ನಾನು ಇದರಿಂದ ಅನುಗ್ರಹವನ್ನು ಮಾಡಿರುವೆನು. ಹಿಂದೆಯೇ ನಾನು ಈ ವನವೃಕ್ಷಗಳಿಂದ ಪ್ರಾರ್ಥಿತನಾಗಿ ಇಲ್ಲಿಯೇ ನಿತ್ಯವೂ ವಾಸಮಾಡುವೆನೆಂದು ಹೇಳಿರುವೆನು.

೮೭. ನಿಷ್ಪಾಪರಾದ ಎಲೈ ದೇವತೆಗಳಿರಾ! ಮಹಾಭಯಂಕರವಾದ ಈ ವನದಲ್ಲಿಯೇ ನಾನು ನೆಲಸಿರುವುದರಿಂದಲೂ, ನೀವೂ ಇಲ್ಲಿಯೇ ಘೋರ ವಾದ ತಪಸ್ಸನ್ನು ಮಾಡುತ್ತಿರುವುದರಿಂದಲೂ, ಇದಕ್ಕೆ ಮಹಾಕಾಲವನವೆಂದು ಹೆಸರಾಗುವುದು.

೮೮. ಗುಹ್ಯವನ ಮತ್ತು ಶ್ಮಶಾನಗಳೆಂಬ ಎರಡು ಹೆಸರುಗಳಿಂದ ಕೂಡಿದ ಈ ಏಕಾಂತಪ್ರದೇಶವು ಲೋಕದಲ್ಲೆಲ್ಲ ಪ್ರಖ್ಯಾತವಾಗುವುದು. ಇದು ಸಕಲ ಕ್ಷೇತ್ರಗಳಲ್ಲಿಯೂ ಜ್ಯೇಷ್ಠವೂ ಶ್ರೇಷ್ಠವೂ ಎನಿಸಿರುವುದು.

೮೯. ನನ್ನ ಭಕ್ತರಿಗಾಗಿ ಕಪಾಲವ್ರತವನ್ನು ಆಚರಿಸುವ ಕ್ರಮವನ್ನು ವಿಸ್ತರಿಸುವೆನು. ನನ್ನ ಭಕ್ತನು ಕಪಾಲಪಾತ್ರೆಯಲ್ಲಿಯೇ ಊಟವನ್ನು ಮಾಡ ಬೇಕು. ಈ ಕಪಾಲವ್ರತವೇ ಆತನಿಗೆ ಭೂಷಣವು.

ಕಪಾಲಪಾಣಿಃ ಸಂತುಷ್ಟೋ ಭಿಕ್ಷಾವ್ರತಸಮನ್ವಿತಃ ।
ಶ್ಮಶಾನನಿಲಯೋ ರೌದ್ರೋ ವ್ರತೋನ್ಮತ್ತವಿಮೂಢಧೀಃ ॥ ೯೦ ॥
ನಂದಿತಃ ಸರ್ವಭೂತೇಷು ಪ್ರಿಯಾಪ್ರಿಯಸಮಃ ಸದಾ ।
ಭಸ್ಮಭೂಷಿತಸರ್ವಾಂಗೋ ಜ್ಞಾನೀ ಚೈವ ವಿಶೇಷತಃ ॥ ೯೧ ॥
ಜಿತೇಂದ್ರಿಯೋಽಸರ್ವಸಂಗೋ ಮೃದ್ಭಸ್ಮೋದಕಸಂಗ್ರಹೀ ।
ನಿತ್ಯಯುಕ್ತಃ ಸದಾ ವ್ಯಾಪೀ ಜಾಪೀ ಜಿತವರಾಸನಃ ॥ ೯೨ ॥
ಪುಣ್ಯತೀರ್ಥಾಶ್ರಮೋಪೇತಃ ಸ್ವರೇ ದೇವೇ ಸಮಾಹಿತಃ ।
ಲೋಕಾತೀತಂ ಪರಂ ಜ್ಞಾನಂ ಮಹಾಪಾಶುಪತಂ ವ್ರತಂ ॥ ೯೩ ॥
ಕಪಾಲವ್ರತಮಾಸ್ಥಾಯ ಪುರಾ ಚೀರ್ಣಂ ಮಯಾ ಸ್ವಯಂ ।
ಕಪಾಲಂ ಪರಮಂ ಗುಹ್ಯಂ ಪವಿತ್ರಂ ಪಾಪನಾಶನಂ ॥ ೯೪ ॥

---

೯೦. ಕಪಾಲವನ್ನು ಕೈಯಲ್ಲಿ ಹಿಡಿದಿರಬೇಕು. ಯದೃಚ್ಛಾಲಾಭ ಸಂತುಷ್ಟನಾಗಿರಬೇಕು. ಭಿಕ್ಷೆಯಿಂದ ಮಾತ್ರವೇ ಹಸಿವನ್ನು ನೀಗಿಸುವ ವ್ರತವುಳ್ಳವನಾಗಬೇಕು. ಶ್ಮಶಾನಗಳಲ್ಲಿ ವಾಸಮಾಡುತ್ತ ರುದ್ರಾರಾಧನತತ್ಪರನಾಗಿ ವ್ರತದಲ್ಲಿ ಉನ್ಮತ್ತನೂ ಪ್ರಾಪಂಚಿಕ ವಿಷಯಗಳಿಗೆ ಮೂಢಬುದ್ಧಿಯೂ ಆಗಿರಬೇಕು.

೯೧. ಸಕಲ ಪ್ರಾಣಿಗಳಲ್ಲಿಯೂ ಮೈತ್ರಿಯುಳ್ಳವನೂ, ಪ್ರಿಯಾಪ್ರಿಯಗಳು ಸಂಭವಿಸಿದಲ್ಲಿ ನಿತ್ಯವೂ ಸಮಚಿತ್ತನೂ ಆಗಿರಬೇಕು. ಸರ್ವಾಂಗಗಳಲ್ಲಿಯೂ ವಿಭೂತಿಯನ್ನು ಧರಿಸಿರಬೇಕು. ಎಲ್ಲಕ್ಕಿಂತಲೂ ವಿಶೇಷವಾಗಿ ಈಶ್ವರ ಮಾಹಾತ್ಮ್ಯದ ಜ್ಞಾನವನ್ನು ಪಡೆದಿರಬೇಕು.

೯೨. ಜಿತೇಂದ್ರಿಯನಾಗಿರಬೇಕು. ಸರ್ವರಲ್ಲಿಯೂ ವಿವೇಚನೆಯಿಲ್ಲದೆ ಬೆರೆಯಬಾರದು. ಶೌಚಕ್ಕಾಗಿ ಮೃತ್ತಿಕೆ, ಭಸ್ಮ ಮತ್ತು ಜಲಗಳನ್ನುಮಾತ್ರ ಸಂಗ್ರಹಿಸಬೇಕು. ಯಾವಾಗಲೂ ಯೋಗಯುಕ್ತನಾಗಿರಬೇಕು. ಯಾವಾಗಲೂ ವ್ಯಾಪಕನೂ, ಜಪಶೀಲನೂ, ಆಸನಸಿದ್ಧಿಯನ್ನು ಪಡೆದವನೂ ಆಗಿರಬೇಕು.

೯೩. ಪುಣ್ಯತೀರ್ಥಗಳಲ್ಲಿಯೂ ಆಶ್ರಮಗಳಲ್ಲಿಯೂ ಕಾಲವನ್ನು ಕಳೆಯುತ್ತ ಸ್ವರಮಣನಾದ ಪರಮಾತ್ಮನಲ್ಲಿ ಸಮಾಧಿಯುತಮನಸ್ಕನಾಗಬೇಕು. ಮಹಾಪಾಶುಪತವೆಂಬ ಈ ವ್ರತವು ಲೋಕಾತೀತವೂ, ಉತ್ತಮಜ್ಞಾನಪ್ರದವೂ ಆಗಿರುವುದು.

೯೪. ಈ ಕಪಾಲವ್ರತವನ್ನನುಸರಿಸಿಯೇ ನಾನು ಹಿಂದೆ ಉಗ್ರವಾದ ತಪಸ್ಸನ್ನಾಚರಿಸಿದೆನು. ಈ ಕಪಾಲವ್ರತವು ಅತ್ಯಂತಗುಹ್ಯವೂ, ಪಾಪಪರಿಹಾರಕವೂ ಆಗಿರುವುದು.

ಕಪಾಲವ್ರತಮೇತದ್ಧಿ ದುರ್ಧರಂ ಪರಮಾದ್ಭುತಂ ।
ಅತ್ಯಂತಮುತ್ಕಟಂ ರೌದ್ರಮುಘೋರಂ ಲೋಮಹರ್ಷಣಂ ॥ ೯೫ ॥
ಮಹಾವ್ರತಂ ದ್ವಿಷನ್ಮೋಹಾತ್ಪಾಪೇಷ್ವೇವ ಸ್ಥಿತೋ ನರಃ ।
ನ ಮುಚ್ಯತೇ ಸ ಪಾಪೇನ ಜನ್ಮಕೋಟಿಶತೈರಪಿ ॥ ೯೬ ॥
ಮಹಾಪಾಶುಪತಂ ತಸ್ಮಾನ್ನಹನ್ಯಾನ್ನ ಚ ದೂಷಯೇತ್ ।
ಏತಸ್ಮಿನ್ನಿಹತೇ ತಸ್ಮಾತ್ಕೋಟಿರ್ಭವತಿ ಘಾತಿತಾ ॥ ೯೭ ॥
ಏವಂ ಮಹಾವ್ರತಂ ಯಸ್ತು ಭೋಜಯೇಚ್ಛ್ರದ್ಧಯಾನ್ವಿತಃ ।
ತಸ್ಯ ಭುಕ್ತ್ವಾ ಭವೇತ್ಕೋಟಿರ್ವಿಪ್ರಾಣಾಂ ವೇದಪಾಠಿನಾಂ ॥ ೯೮ ॥
ಕಪಾಲಪೂರಣೀಂ ಭಿಕ್ಷಾಂ ಯತೀನಾಂ ಯಃ ಪ್ರಯಚ್ಛತಿ ।
ವಿಮುಕ್ತಃ ಸರ್ವಪಾಪೇಭ್ಯೋ ನಾಽಸೌ ದುರ್ಗತಿಮಾಪ್ನುಯಾತ್ ॥ ೯೯ ॥
ಕಪಾಲೇ ಭೋಜನಂ ಶ್ರೇಷ್ಠಂ ಮಾರ್ಗೋಽಯಂ ಬ್ರಹ್ಮಸಂಭವಃ ।
ವದಂತಿ ಲೋಕೇ ವೇದೇಷು ಪೂಜಿತಂ ದೇವದಾನವೈಃ ॥ ೧೦೦ ॥

---

೯೫. ಈ ವ್ರತವನ್ನು ಅನುಷ್ಠಾನಮಾಡುವುದು ಬಹಳ ಕಷ್ಟವು. ಇದು ಮಹಾದ್ಭುತಮಹಿಮೆಯುಳ್ಳದ್ದು. ಅತ್ಯಂತ ತೀಕ್ಷ್ಣವೂ, ರುದ್ರಪ್ರಸಾದ ಜನಕವೂ, ಘೋರವೂ, ರೋಮಾಂಚವನ್ನುಂಟುಮಾಡುವುದೂ ಆಗಿರುವುದು.

೯೬. ಯಾವ ಮಾನವನು ಈ ಮಹಾವ್ರತವನ್ನು ದ್ವೇಷಿಸುತ್ತ ಪಾಪಕೃತ್ಯಗಳಲ್ಲಿಯೇ ನಿರತನಾಗಿರುವನೊ, ಅವನು ನೂರು ಕೋಟಿ ಜನ್ಮಗಳನ್ನು ತಾಳಿದರೂ ಮೋಕ್ಷವನ್ನು ಪಡೆಯಲಾರನು.

೯೭. ಆದುದರಿಂದ ಈ ವ್ರತವನ್ನನುಸರಿಸುವ ಶಿವಭಕ್ತನನ್ನು ಎಂದಿಗೂ ಕೊಲ್ಲಬಾರದು; ದೂಷಿಸಬಾರದು. ಇಂತಹ ಒಬ್ಬನನ್ನು ಕೊಂದರೆ ಕೋಟಿ ನರಹತ್ಯೆಗಳನ್ನು ಮಾಡಿದ ಪಾತಕವು ತಪ್ಪದು.

೯೮. ಈ ಮಹಾವ್ರತವನ್ನನುಸರಿಸುವವನಿಗೆ ಯಾವನು ಶ್ರದ್ಧಾಭಕ್ತಿಗಳಿಂದ ಭೋಜನವನ್ನಿಡುವನೊ, ಅವನು ವೇದವೇದಾಂಗಪಾರಂಗತರಾದ ಒಂದು ಕೋಟಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದ ಪುಣ್ಯಕ್ಕೆ ಭಾಗಿಯಾಗುವನು.

೯೯. ಯಾವನು ಯತಿಗಳಿಗೆ ಅವರ ಕಪಾಲದ ತುಂಬ ಭಿಕ್ಷೆಯನ್ನು ನೀಡುವನೊ, ಅವನು ಸಮಸ್ತ ಪಾತಕಗಳಿಂದಲೂ ವಿಮುಕ್ತನಾಗುವನಲ್ಲದೆ ಎಂದಿಗೂ ದುರ್ಗತಿಯನ್ನು ಪಡೆಯುವುದಿಲ್ಲ.

೧೦೦. ಕಪಾಲದಲ್ಲಿ ಮಾಡುವ ಭೋಜನವೇ ಸರ್ವಶ್ರೇಷ್ಠವಾದುದು. ಈ ಮಾರ್ಗವು ಬ್ರಹ್ಮನಿಂದ ಹುಟ್ಟಿ ಬಂದಿರುವುದು. ಲೋಕದಲ್ಲಿಯೂ ವೇದಗಳಲ್ಲಿಯೂ ಪ್ರತಿಪಾದ್ಯವಾಗಿರುವುದು. ಸಕಲ ದೇವತೆಗಳಿಂದಲೂ ದಾನವರಿಂದಲೂ ಪೂಜಿಸಲ್ಪಟ್ಟಿರುವುದು.

ಧಾರಯಿಷ್ಯಂತಿ ಯೇ ವಿಪ್ರಾಃ ಕಪಾಲಂ ಭೂತಮೋಹನಂ ।
ಮಮ ತುಲ್ಯಾಸ್ತು ತೇ ಬ್ರಹ್ಮನ್ವಿಚರಂತಿ ಮಹೀತಲೇ ॥ ೧೦೧ ॥
ಜಪೈಕನಿರತಾ ಧೀರಾಃ ಕಪಾಲಕೃತಭೂಷಣಾಃ ।
ಮಹಾ ಪಾಶುಪತಾ ಲೋಕೇ ರುದ್ರಾಃ ಸಂಸಾರತಾರಕಾಃ ॥ ೧೦೨ ॥
ಧರ್ಮಾಽಧರ್ಮವಿಮುಕ್ತಾಶ್ಚ ಕೃತ್ಯಾಽಕೃತ್ಯವಿವರ್ಜಿತಾಃ ।
ದೀಕ್ಷಯಾ ಜ್ಞಾನಯೋಗೇನ ಪ್ರಾಣಿನಸ್ತಾರಯಂತಿ ತೇ ॥ ೧೦೩ ॥
ಯಾನಿ ತೀರ್ಥಾನಿ ಲೋಕೇಽಸ್ಮಿನ್ಯಜ್ಞಕೋಟಿಶತಾನಿ ಚ ।
ವಿಶುದ್ಧಸ್ಯ ವಿಜ್ಞಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೧೦೪ ॥
ಯಥಾಽಹಂ ಸರ್ವದೇವಾನಾಂ ಸಂಪೂಜ್ಯೋ ವೈ ಪಿತಾಮಹ ।
ತಥೈವ ಸರ್ವಯೋಗೇಭ್ಯಃ ಸಂಪೂಜ್ಯೋಽಯಂ ಮಹಾವ್ರತೀ ॥ ೧೦೫ ॥
ಸಂಸಾರಬಂಧನೋಕ್ಷಾರ್ಥಂ ಶಿವಗುಹ್ಯಮಿದಂ ವ್ರತಂ ।
ಯದೇತತ್ಸರ್ವಧರ್ಮೇಣ ಅಪುನರ್ಭವಕಾರಣಂ ॥ ೧೦೬ ॥

---

೧೦೧. ಅಯ್ಯಾ ಬ್ರಹ್ಮನೆ! ಯಾವ ಬ್ರಾಹ್ಮಣರು ಸಕಲ ಪ್ರಾಣಿಗಳಿಗೂ ಮೋಹಕವಾದ ಕಪಾಲವನ್ನು ಕೈಯಲ್ಲಿ ಧರಿಸಿರುವರೊ, ಅವರೆಲ್ಲರೂ ನನಗೆ ಸಮಾನರೆನಿಸಿ ಭೂಮಿಯಲ್ಲಿ ಸಂಚರಿಸುತ್ತಿರುವರು.

೧೦೨. ನನ್ನ ನಾಮದ ಜಪದಲ್ಲಿಯೇ ನಿರತರಾಗಿ, ಇಂದ್ರಿಯಗಳನ್ನು ನಿಗ್ರಹಿಸಿ, ಕಪಾಲವನ್ನೇ ಭೂಷಣವನ್ನಾಗಿ ಮಾಡಿಕೊಂಡು ಯಾರು ಮಹಾ ಪಾಶುಪತ ವ್ರತವನ್ನು ಧರಿಸಿರುವರೊ, ಅವರನ್ನು ಈಶ್ವರರೆಂದೇ ತಿಳಿಯಬೇಕು. ಅವರೇ ನಮ್ಮನ್ನು ಸಂಸಾರದಿಂದ ಕಡೆಹಾಯಿಸುವವರು.

೧೦೩. ಧರ್ಮ, ಅಧರ್ಮಗಳ ಭಾವನೆಗೆ ದೂರರಾದವರು. ಅವರಿಗೆ ಕಾರ್ಯ, ಅಕಾರ್ಯಗಳೆಂಬುದಿಲ್ಲ. ಶಿವದೀಕ್ಷೆಯಿಂದಲೂ ಜ್ಞಾನಯೋಗದ ಮಾಹಾತ್ಮ್ಯದಿಂದಲೂ ಅವರು ಜನರನ್ನು ಕಡೆಹಾಯಿಸುವರು.

೧೦೪. ಇಡೀ ಭೂಮಂಡಲದಲ್ಲಿರುವ ತೀರ್ಥಗಳೂ, ನೂರುಕೋಟಿ ಯಜ್ಞಗಳೂ ವಿಶುದ್ಧವಾದ ಪರಮಾತ್ಮನ ಜ್ಞಾನದ ಹದಿನಾರನೆಯ ಒಂದು ಭಾಗವನ್ನೂ ಹೋಲಲಾರವು.

೧೦೫. ಎಲೈ ಪಿತಾಮಹನೆ! ಸಕಲ ದೇವತೆಗಳಲ್ಲಿಯೂ ನಾನು ಸರ್ವೋತ್ತಮನಾಗಿ ಹೇಗೆ ಸಂಪೂಜ್ಯನಾಗಿರುವೆನೊ, ಹಾಗೆಯೇ ಸಮಸ್ತ ಯೋಗಗಳನ್ನು ಅಭ್ಯಾಸಮಾಡಿದವರಿಗಿಂತಲೂ ನನ್ನ ಈ ವ್ರತವನ್ನನುಸರಿಸುವ ಮಾನವನೇ ಪೂಜಾರ್ಹನು.

೧೦೬. ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದಲೆಳಸುವವರಿಗಾಗಿ ಪರಮ ಮಂಗಳಕಾರಕವೂ ಏಕಾಂತವೂ ಆದ ಈ ವ್ರತವು ಹೇಳಲ್ಪಟ್ಟಿರುವುದು.

**ಕಪಾಲವ್ರತಮಾದಾಯ ಯಸ್ತ್ಯಜೇದಜಿತೇಂದ್ರಿಯಃ ।**
**ರೌರವಂ ಸ ಪ್ರಯಾತ್ಯಾಶು ಪ್ರಣೀತೋ ಯಮಕಿಂಕರೈಃ ॥ ೧೦೭ ॥**
**ಆಲಾಪಯತಿ ಭಾವೇನ ನ ತು ಕರ್ಮ ಕರೋತಿ ಯಃ ।**
**ಸರಾಗಚಿತ್ತಃ ಶೃಂಗಾರೀ ನ ಚ ಧರ್ಮಪ್ರಿಯಂಕರಃ ॥ ೧೦೮ ॥**
**ಏಕತ್ರ ಭೋಜೀ ಮಿಷ್ಟಾಶೀ ಕೈತವೇನ ಪ್ರಿಯಸ್ತಥಾ ।**
**ಕುಗ್ರಾಮನಗರೇ ವಾಸೀ ಕೃಷಿವಾಣಿಜ್ಯಸೇವಕಃ ॥ ೧೦೯ ॥**
**ಇತ್ಯಾದಿ ದುಷ್ಟದೋಷಶ್ಚ ತಸ್ಯ ಸಂಭಾಷಣಾದಪಿ ।**
**ನರೋ ನರಕಗಾಮೀ ಸ್ಯಾದ್ಯತೋ ಮದ್ವ್ರತದೂಷಕಃ ॥ ೧೧೦ ॥**
**ದೃಷ್ಟ್ವಾ ಚ ಶಿಷ್ಟಮಥ ವೈ ಮಹಾವ್ರತಧರೋ ನರಃ ।**
**ನ ಸ್ಪೃಶೇದಂಗಮಂಗೇನ ಸ್ಪೃಷ್ಟ್ವಾ ಸ್ನಾಯಾತ್ತು ಚಾಽಂಬುಭಿಃ ॥೧೧೧॥**
**ಏವಂ ಚ ಸರ್ವಮಾಖ್ಯಾತಂ ಕಪಾಲಸ್ಯ ಚ ಮೋಕ್ಷಣಂ ।**
**ಯಥಾ ಮಯಾಽತ್ರ ನಿಕ್ಷಿಪ್ತಮಜ್ಞಾನೇನ ಹತಂ ಸ್ವಯಂ ॥ ೧೧೨ ॥**

---

ಇದನ್ನಾಚರಿಸುವುದರಿಂದ ಸಕಲ ಧರ್ಮಗಳನ್ನೂ ಅನುಷ್ಠಾನಮಾಡಿದಂತಾಗಿ ಪುನರ್ಜನ್ಮರಹಿತವಾದ ಪದವಿಯನ್ನು ಪಡೆಯಲು ಕಾರಣವಾಗುವುದು.

೧೦೭. ಯಾವನು ಕಪಾಲವ್ರತವನ್ನೊಮ್ಮೆ ಕೈಗೊಂಡು ಇಂದ್ರಿಯಗಳನ್ನು ಜಯಿಸಲಾರದೆ ಕೈಬಿಡುವನೊ, ಅವನು ಯಮಕಿಂಕರರಿಂದ ಸೆಳೆಯಲ್ಪಟ್ಟು ರೌರವನರಕವನ್ನು ಸೇರುವನು.

೧೦೮–೧೦೯. ಭಕ್ತಿಭಾವವನ್ನು ತೋರುತ್ತ ಸ್ತೋತ್ರಮಾಡುವವನು, ವ್ರತವನ್ನು ಮಾತ್ರ ಸರಿಯಾಗಿ ನಡೆಸದವನು, ಆಶೆಯಿಂದ ಕೂಡಿದ ಮನಸ್ಸುಳ್ಳವನು, ಶೃಂಗಾರಪ್ರಿಯನು, ಧರ್ಮಕಾರ್ಯಗಳನ್ನು ಪ್ರೀತಿಯಿಂದ ಮಾಡದವನು, ಏಕಾಂತದಲ್ಲಿ ಭೋಜನ ಮಾಡುವವನು, ಮೃಷ್ಟಾನ್ನಭೋಜಿಯು, ಮೋಸ ಮಾಡುವುದಕ್ಕಾಗಿ ಪ್ರೀತಿಯನ್ನು ನಟಿಸುವವನು, ನೀಚರಿರುವ ಗ್ರಾಮ, ಪಟ್ಟಣಗಳಲ್ಲಿ ವಾಸಿಸುವವನು, ಕೃಷಿ, ವಾಣಿಜ್ಯಗಳನ್ನು ಜೀವನೋಪಾಯವನ್ನಾಗಿ ಮಾಡಿಕೊಂಡಿರುವವನು—ಇವರೆಲ್ಲರೂ ದುಷ್ಟರೆಂದು ತಿಳಿಯಬೇಕು.

೧೧೦–೧೧೧. ಈ ದೋಷಗಳಿಂದ ದೂಷಿತನಾದವನು ನನ್ನ ವ್ರತವನ್ನೂ ದೂಷಿಸುತ್ತಿರುವನು. ಅಂತಹವನೊಡನೆ ಮಾತನಾಡುವುದರಿಂದಲೂ ಮಾನವನಾದವನು ನರಕಭಾಜನನಾಗುವನು. ಮಹಾವ್ರತವನ್ನು ಧರಿಸಿದ ಒಬ್ಬ ಮನುಷ್ಯನು ಅಂತಹ ಶಿಷ್ಟನಾದ ಮತ್ತೊಬ್ಬನನ್ನು ಕಂಡರೆ ಆತನನ್ನು ಮುಟ್ಟಬಾರದು. ಮುಟ್ಟಿದರೆ ನೀರಿನಲ್ಲಿ ಸ್ನಾನವನ್ನು ಮಾಡಬೇಕು.

೧೧೨. ಇಂತು ನಿನಗೆ ಕಪಾಲವು ನನ್ನ ಕೈಬಿಟ್ಟುದನ್ನೂ, ಅದನ್ನು ನಾನು ಇಲ್ಲಿ ಇಟ್ಟುದನ್ನೂ, ಬ್ರಹ್ಮನ ಅಜ್ಞಾನದಿಂದ ತಾನೇ ಕಳಚಿಹೋದ ವೃತ್ತಾಂತವನ್ನೂ ಕೂಲಂಕಷವಾಗಿ ತಿಳಿಸಿರುವೆನು.

ಸನತ್ಕುಮಾರ ಉವಾಚ :—

ಏವಮುಕ್ತ್ವಾ ಸ ಭಗವಾನ್ಬ್ರಹ್ಮಾದ್ಯೈರಮರೈಃ ಸಹ ।
ಕ್ಷೇತ್ರಂ ನಿವಾಸಯಾಮಾಸ ಯಥಾವತ್ಕಥಯಾಮಿ ತೇ ॥ ೧೧೩ ॥
ಆದ್ಯಮೇತತ್ ಸ್ಮಶಾನಂ ಚ ಪಠ್ಯತೇ ಮುನಿಸತ್ತಮೈಃ ।
ಮಹಾಕಾಲವನಂ ವ್ಯಾಸ ಯತ್ರ ಸನ್ನಿಹಿತೋ ಹರಃ ॥ ೧೧೪ ॥
ಅನುಗ್ರಹಸ್ಯ ಭುವನಂ ಭೂಮಿಭಾಗೋ ನ ಸಂಶಯಃ ।
ಅನುಗ್ರಹಾರ್ಥಂ ಭೂತಾನಾಂ ಕ್ಷೇತ್ರಾಂತರ್ಮೃತ್ಯುಧರ್ಮಿಣಾಂ॥ ೧೧೫ ॥
ಸುವರ್ಣವಜ್ರಪರ್ಯಂಕವೇದಿಕಾ ಚ ಮಹೀಕೃತಾ ।
ವಿಚಿತ್ರಕುಸುಮೈ ರತ್ನೈಃ ಕಾರಿತಾ ಸರ್ವಶೋಭನಾ ॥ ೧೧೬ ॥
ಸ್ವರ್ಣವಜ್ರಾಂಕಿತತಲಾ ಶ್ರೇಷ್ಠಾ ಹರಿತಶಾದ್ವಲಾ ।
ತ್ರಿಂಶಚ್ಚತ್ವಾರಿಂಶಪೂರ್ಣಾಃ ಕಲಶಾಃ ಕೋಣಸಂಸ್ಥಿತಾಃ ॥ ೧೧೭ ॥

---

೧೧೩. ಸನತ್ಕುಮಾರನು ಹೇಳುತ್ತಾನೆ:—ಇಂತೆಂದು ಅಪ್ಪಣೆಯನ್ನು ಮಾಡಿ ಮಹೇಶ್ವರನು ಬ್ರಹ್ಮಾದಿ ದೇವತೆಗಳಿಂದೊಡಗೂಡಿ ಆ ಕ್ಷೇತ್ರದಲ್ಲಿಯೇ ವಾಸಮಾಡತೊಡಗಿದನು. ಆ ಪ್ರಕಾರವನ್ನು ಕ್ರಮವಾಗಿ ನನಗೆ ಹೇಳಿರುವೆನು.

೧೧೪. ಎಲೈ ವ್ಯಾಸನೆ! ಆದುದರಿಂದ ಈ ಕ್ಷೇತ್ರವನ್ನು ಆದಿ ಸ್ಮಶಾನವೆಂದೂ, ಮಹಾಕಾಲವನವೆಂದೂ ಮುನಿಶ್ರೇಷ್ಠರು ಕರೆಯುವರು. ಇಲ್ಲಿ ನಿತ್ಯವೂ ಮಹಾದೇವನ ಸಾನ್ನಿಧ್ಯವಿರುವುದು.

೧೧೫. ಭೂಮಿಯಲ್ಲಿ ಈ ಕ್ಷೇತ್ರವಿರುವುದು, ಸಕಲ ಭೂಮಂಡಲಕ್ಕೂ ಒಂದು ಅನುಗ್ರಹವೇ ಎಂಬುದರಲ್ಲಿ ಸಂದೇಹವೇ ಇಲ್ಲ. ಮತ್ತು ಮರಣಧರ್ಮಿಗಳಾದ ಸಕಲ ಜಂತುಗಳೂ ಈ ಕ್ಷೇತ್ರವನ್ನು ಪ್ರವೇಶಿಸುವ ಮಾತ್ರದಿಂದಲೇ ಶಿವನ ಅನುಗ್ರಹವನ್ನು ಪಡೆಯುವುವು.

೧೧೬. ಭೂದೇವಿಯು ಈ ಪ್ರದೇಶವನ್ನು ಚಿನ್ನ ಮತ್ತು ವಜ್ರಗಳ ಪರ್ಯಂಕವನ್ನಾಗಿಯೂ, ವೇದಿಕೆಯನ್ನಾಗಿಯೂ ಮಾಡಿರುವಳು. ಅಲ್ಲದೆ ನವರತ್ನಖಚಿತಗಳಾದ ಬಗೆಬಗೆಯ ಹೂವುಗಳಿಂದ ಎಲ್ಲವೂ ಮಂಗಳಕರವಾಗಿ ಶೋಭಿಸುತ್ತಿರುವುದು.

೧೧೭. ಇಲ್ಲಿ ಚಿನ್ನ, ವಜ್ರಗಳಿಂದ ಕೂಡಿದ ನೆಲವು ಶ್ರೇಷ್ಠವಾಗಿರುವುದು. ಹುಲ್ಲುಗಾವಲುಗಳಂತೆ ನೆಲವು ನೀಲಮಣಿಗಳ ವಿಸ್ತಾರದಿಂದ ಕೂಡಿರುವುದು. ಕ್ಷೇತ್ರದ ಮೂಲೆ ಮೂಲೆಗಳಲ್ಲಿಯೂ ಮೂವತ್ತು ನಲವತ್ತು ಕಳಶಗಳು ಸ್ಥಾಪಿತಗಳಾಗಿರುವುವು.

ದ್ವಾರಾಣಿ ತತ್ರ ಚತ್ವಾರಿ ಪ್ರವರ್ಣಾನಿ ತಪಂತಿ ಚ ।
ಕುಂಭಾಃ ಶೋಭಂತಿ ತತ್ರಸ್ಥಾಃ ಉದಿತಾ ಭಾಸ್ಕರಾ ಇವ ॥ ೧೧೮ ॥
ರಮತೇ ತತ್ರ ಭಗವಾನ್ಸನಾನಾಮುತ್ತಮೇ ವನೇ ।
ಸನಂದಿದೇವಗಣಪಃ ಕಾಲದಂಡಾದಿಸಂಯುತಃ ॥ ೧೧೯ ॥
ಏತತ್ಕೃತಯುಗೇ ಸರ್ವಂ ಪ್ರತ್ಯಕ್ಷಂ ದೃಶ್ಯತೇ ವನೇ ।
ತ್ರೇತಾಯಾಂ ಧರ್ಮನಿರತಾಸ್ತಾಪಸಾ ಬ್ರಹ್ಮಚಾರಿಣಃ ॥ ೧೨೦ ॥
ದ್ವಾಪರೇ ಧರ್ಮಶೀಲಾ ಯೇ ಶ್ರುತವಿಜ್ಞಾನಶಾಲಿನಃ ।
ಕಲೌ ತು ಶುದ್ಧವಿಜ್ಞಾನಶಾಲಿನಃ ಶಂಕರಂ ಹರಂ ॥ ೧೨೧ ॥
ತಪೋಽಧಿಕಾಃ ಪ್ರಪಶ್ಯಂತಿ ದೇವದೇವಂ ಮಹೇಶ್ವರಂ ।
ಮಹಾಕಾಲವನೇ ನಿತ್ಯಂ ಶೂಲಪಟ್ಟಿಶಧಾರಿಣಂ ॥ ೧೨೨ ॥
ಏತತ್ತೇ ತಥ್ಯಮಾಖ್ಯಾತಂ ಲೋಕಾಽನುಗ್ರಹಕಾರಕಂ ।
ಸಹಿತಾಸುಕ್ರಮೇಣಾಽತ್ರ ಮಂತ್ರೈಶ್ಚ ವಿಧಿಪೂರ್ವಕಂ ॥ ೧೨೩ ॥

---

೧೧೮. ಆ ಕ್ಷೇತ್ರಕ್ಕೆ ನಾಲ್ಕು ದ್ವಾರಗಳಿರುವುವು. ಅವು ಅನೇಕ ವರ್ಣಗಳಿಂದ ಪ್ರಜ್ವಲಿಸುತ್ತಿರುವುವು. ಅಲ್ಲಿರುವ ಪೂರ್ಣಕುಂಭಗಳು ಮೂಡುತ್ತಿರುವ ಸೂರ್ಯರಂತೆ ಶೋಭಿಸುತ್ತಿರುವುವು.

೧೧೯. ಇಂತಹ ಸರ್ವೋತ್ತಮವಾದ ವನದಲ್ಲಿ ನಂದಿ, ದೇವತೆಗಳು, ಗಣಪತಿಗಳಿಂದ ಕೂಡಿ ಕಾಲದಂಡವನ್ನು ಕೈಯಲ್ಲಿ ಹಿಡಿದು ಭಗವಂತನು ಯಾವಾಗಲೂ ಕ್ರೀಡಿಸುತ್ತಿರುವನು.

೧೨೦. ಕೃತಯುಗದಲ್ಲಿ ಇದೆಲ್ಲವೂ ಮಹಾಕಾಲವನದಲ್ಲಿ ಪ್ರತ್ಯಕ್ಷವಾಗಿರುವುದು. ತ್ರೇತಾಯುಗದಲ್ಲಿ ಧರ್ಮನಿರತರೂ, ತಪಸ್ವಿಗಳೂ, ಬ್ರಹ್ಮಚಾರಿಗಳೂ ಮಾತ್ರ ನೋಡಬಲ್ಲರು.

೧೨೧–೧೨೨. ದ್ವಾಪರಯುಗದಲ್ಲಿ ಧರ್ಮಶೀಲರೂ, ವೇದಶಾಸ್ತ್ರಶ್ರವಣದಿಂದ ಪರಮೇಶ್ವರನ ವಿಶೇಷಜ್ಞಾನವನ್ನು ಪಡೆದವರೂ ನೋಡಬಲ್ಲರು. ಕಲಿಯುಗದಲ್ಲಿ ಶುದ್ಧವಾದ ಜ್ಞಾನವನ್ನು ಪಡೆದು ಮಹತ್ತರವಾದ ತಪಸ್ಸನ್ನು ಮಾಡಿದವರು ಮಾತ್ರ ಮಂಗಳಕರನೂ, ಸಂಸಾರಮೋಚಕನೂ, ದೇವದೇವೋತ್ತಮನೂ, ತ್ರಿಶೂಲ, ಪಟ್ಟಿಶಗಳನ್ನು ಧರಿಸಿದವನೂ ಆದ ಮಹೇಶ್ವರನನ್ನು ನಿತ್ಯವೂ ಮಹಾಕಾಲವನದಲ್ಲಿ ನೋಡುತ್ತಿರುವರು.

೧೨೩–೧೨೪. ಇಂತು ಲೋಕಕ್ಕೆ ಅನುಗ್ರಹವನ್ನುಂಟುಮಾಡುವ ಚರಿತ್ರೆಯನ್ನು ನಿನಗೆ ಹೇಳಿರುವೆನು. ಸಂಹಿತೆಗಳ ಮಾರ್ಗವನ್ನನುಸರಿಸಿ ವಿಧಿಪೂರ್ವಕವಾಗಿ ಮಂತ್ರಗಳಿಂದ ಯಾವ ಬ್ರಾಹ್ಮಣರು ಭಕ್ತಿಭರಿತರಾಗಿ ಮಹಾದೇವನ

ಸಮರ್ಚಯಂತಿ ಯೇ ವಿಪ್ರಾ ಭಕ್ತ್ಯಾ ಶಂಭುಮಹಾಪದಂ ।
ವಸಂತೀಹ ಸಮೀಪಂ ತೇ ಮಹಾಕಾಲಾನುಭಾವಿತಾಃ ॥ ೧೨೪ ॥
ಪಠತಿ ಯ ಇಹ ಲೋಕೇ ತಸ್ಯ ಸಂಸ್ಥಾನಮೇತ
ತ್ಪ್ರಥಿತಗುಣಗಣೌಘೈರರ್ಚಿತಂ ದೋಷಹಂ ತತ್ ।
ಶುಭಮತಿರಭಿಷಿಕ್ತಃ ಸೋಽಮರೈರರ್ಚ್ಯಮಾನೋ
ವ್ರಜತಿ ಹರಪುರಂ ಯಃ ಸಂಶೃಣೋತ್ಯೇಕಚಿತ್ತಃ ॥ ೧೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕಪಾಲಮೋಕ್ಷಣ ವರ್ಣನಂ" ನಾಮ ಷಷ್ಠೋಽಧ್ಯಾಯಃ

---

ಈ ಕ್ಷೇತ್ರೋತ್ತಮವನ್ನು ಪೂಜಿಸುವರೊ, ಅವರು ಮಹಾಕಾಲನ ಕೃಪೆಗೆ ಪಾತ್ರರಾಗಿ ಇಲ್ಲಿ ಆತನ ಸಮೀಪದಲ್ಲಿಯೇ ವಾಸಮಾಡುತ್ತಿರುವರು.

೧೨೫. ಲೋಕದಲ್ಲಿ ಯಾವನು ಈ ಅಧ್ಯಾಯವನ್ನು ಶ್ರದ್ಧೆಯಿಂದ ಪಠನ ಮಾಡುವನೊ, ಅವನಿಗೆ ಉತ್ತಮ ಗುಣಾಢ್ಯರಿಂದ ಪೂಜ್ಯವೂ ಸಕಲ ಕಲ್ಮಷಾ ಪಹವೂ ಆದ ಉತ್ತಮಸ್ಥಾನವು ದೊರಕುವುದು. ಅಂತಹ ಶುಭಬುದ್ಧಿಯು ದೇವತೆಗಳಿಂದಲೂ ಪಟ್ಟಾಭಿಷಿಕ್ತನಾಗಿ ಅವರ ಪೂಜೆಯನ್ನು ಕೈಕೊಳ್ಳುವನು. ಯಾವನು ತದೇಕಚಿತ್ತದಿಂದ ಇದನ್ನು ಕೇಳುವನೊ, ಅವನು ಖಂಡಿತವಾಗಿಯೂ ಕೈಲಾಸವನ್ನು ಕುರಿತು ಹೊರಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕಪಾಲಮೋಕ್ಷಣವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಮಹಾಕಾಲವನವಾಸವಿಧಿವರ್ಣನಂ

**ವ್ಯಾಸ ಉವಾಚ :—**

**ಭಗವನ್ಕೇನ ವಿಧಿನಾ ಮಹಾಕಾಲವನೇ ನರೈಃ ।**
**ರುದ್ರಲೋಕಮಭೀಪ್ಸದ್ಭಿರ್ವಸ್ತವ್ಯಂ ಕ್ಷೇತ್ರವಾಸಿಭಿಃ ॥ ೧ ॥**
**ಕಿಂ ಮನುಷ್ಯೈರುತಸ್ತ್ರೀಭಿಃ ಸಿದ್ಧ್ಯರ್ಥಂ ಹ್ಯಾಶ್ರಮಾನ್ವಿತೈಃ ।**
**ವಸದ್ಭಿಃ ಕಿಮನುಷ್ಠೇಯಮೇತತ್ಸರ್ವಂ ಬ್ರವೀಹಿ ನಃ ॥ ೨ ॥**
**ನರೈಃ ಸ್ತ್ರೀಭಿಶ್ಚ ವಸ್ತವ್ಯಂ ವರ್ಣೈರಾಶ್ರಮವಾಸಿಭಿಃ ।**
**ಸ್ವಧರ್ಮಾಚಾರನಿರತೈರ್ದಂಭಮೋಹವಿವರ್ಜಿತೈಃ ॥ ೩ ॥**
**ಕರ್ಮಣಾ ಮನಸಾ ವಾಚಾ ರುದ್ರಭಕ್ತೈರ್ಯತೇಂದ್ರಿಯೈಃ ।**
**ಅನುಶ್ರುತಿಭಿರಕ್ಷುದ್ರೈಃ ಸರ್ವಭೂತಹಿತೇ ರತೈಃ ।**
**ಕಿಂ ಕುರ್ವಾಣೈರ್ನರೈಃ ಕರ್ಮ ರುದ್ರಭಕ್ತಿಂ ಬ್ರವೀಹಿ ನಃ ॥ ೪ ॥**

---

## ಕನ್ನಡದ ಅನುವಾದ

### ಮಹಾಕಾಲವನವಾಸವಿಧಿವರ್ಣನ

೧. ವ್ಯಾಸನು ಹೇಳುತ್ತಾನೆ:—ಮುನಿವರ್ಯನೆ! ರುದ್ರಲೋಕವನ್ನು ಅಪೇಕ್ಷಿಸುತ್ತಿರುವ ಮಾನವರು ಈ ಮಹಾಕಾಲವನದಲ್ಲಿ ಯಾವ ವಿಧಿಯನ್ನನು ಸರಿಸಿ ಕ್ಷೇತ್ರವಾಸವನ್ನು ಮಾಡಬೇಕು?

೨. ಈ ಆಶ್ರಮವನ್ನು ಸೇರಿದ ಗಂಡಸರು ಹೇಗೆ ನಡೆದುಕೊಳ್ಳಬೇಕು? ಸ್ತ್ರೀಯರು ಹೇಗೆ ನಡೆಯಬೇಕು? ಕಾರ್ಯಸಿದ್ಧಿಗಾಗಿ ಇಲ್ಲಿ ವಾಸಿಸುವ ಜನರು ಯಾವುದನ್ನು ಅನುಷ್ಠಾನಮಾಡಬೇಕು? ಇದೆಲ್ಲವನ್ನೂ ನಮಗೆ ತಿಳಿಸು.

೩. ಚಾತುರ್ವರ್ಣ್ಯದವರೂ, ಚತುರಾಶ್ರಮಸ್ಥರೂ ಆದ ನರರೂ ನಾರಿಯರೂ ತಮ್ಮತಮ್ಮ ವರ್ಣಾಶ್ರಮಾಚಾರಧರ್ಮಗಳಲ್ಲಿ ನಿರತರಾಗಿ ದಂಭ ಮೋಹಗಳಿಲ್ಲದೆ ವಾಸಮಾಡಬೇಕಲ್ಲವೆ!

೪. ಕರ್ಮ, ಮನಸ್ಸು, ವಾಕ್ಕುಗಳಿಂದ ರುದ್ರಭಕ್ತರಾಗಿರಬೇಕು. ಜಿತೇಂದ್ರಿಯರಾಗಬೇಕು. ವೇದೋದಿತಕರ್ಮಗಳನ್ನು ಮಾಡಬೇಕು. ಕ್ಷುದ್ರ ಭಾವವನ್ನು ಮಾಡಲಾಗದು. ಸಕಲಪ್ರಾಣಿಗಳಲ್ಲಿಯೂ ದಯೆಯನ್ನು ತೋರಿಸಬೇಕು. ನರರು ಯಾವ ಕರ್ಮವನ್ನು ಮಾಡುವುದರಿಂದ ರುದ್ರಭಕ್ತಿಯನ್ನು ಪಡೆಯುವರೆಂಬುದನ್ನು ನಮಗೆ ಹೇಳು.

ಸನತ್ಕುಮಾರ ಉವಾಚ :—

ತ್ರಿವಿಧಾ ಕಥಿತಾ ಹ್ಯತ್ರ ಮನೋವಾಕ್ಕಾಯಸಂಭವಾ ।
ಲೌಕಿಕೀ ವೈದಿಕೀ ಚಾಽನ್ಯಾ ಭವೇದಾಧ್ಯಾತ್ಮಿಕೀ ತಥಾ ॥ ೫ ॥
ಧ್ಯಾನಧಾರಣಯಾ ಬುದ್ಧ್ಯಾ ರುದ್ರಾಣಾಂ ಸ್ಮರಣಂ ಹಿ ತತ್ ।
ರುದ್ರಭಕ್ತಿಕರೀ ಚೈಷಾ ಮಾನಸೀ ಭಕ್ತಿರುಚ್ಯತೇ ॥ ೬ ॥
ವ್ರತೋಪವಾಸನಿಯಮೈರ್ಯತೇಂದ್ರಿಯನಿರೋಧಿಭಿಃ ।
ಕಾಯಿಕಾ ಭಕ್ತೀ ರುದ್ರಸ್ಯ ಜ್ಞಾನಧ್ಯಾನಸ್ಯ ಧರ್ಮಿಣಾಂ ॥ ೭ ॥
ಗೋಘೃತಕ್ಷೀರದಧಿಭಿರ್ಗಂಧರಕ್ತಕುಶೋದಕೈಃ ।
ಗಂಧಮಾಲ್ಯೈಶ್ಚ ವಿವಿಧೈರ್ಧಾತುಭಿಶ್ಚೋಪಪಾದಿತಾ ॥ ೮ ॥
ಘೃತಗುಗ್ಗುಲಧೂಪೈಶ್ಚ ಕೃಷ್ಣಾಗರುಸುಗಂಧಿಭಿಃ ।
ಭೂಷಣೈರ್ಹೇಮರತ್ನಾನಾಂ ಚಿತ್ರಾಭಿಃ ಸ್ರಗ್ಭಿರೇವ ಚ ॥ ೯ ॥
ವಾಸಪ್ರವಿಸರಾಸ್ತೋತ್ರೈಃ ಪತಾಕಾವ್ಯಜನೋಚ್ಛ್ರಿತೈಃ ।
ನೃತ್ಯವಾದಿತ್ರಗೀತೈಶ್ಚ ಸರ್ವಪ್ರತ್ಯುಪಹಾರಕೈಃ ॥ ೧೦ ॥

---

೫. ಸನತ್ಕುಮಾರನು ಹೇಳುತ್ತಾನೆ:—ಮನಸ್ಸು, ವಾಕ್ಕು, ಕಾಯಗಳಿಂದ ಹುಟ್ಟಿದುದೆಂದೂ, ಲೌಕಿಕ, ವೈದಿಕ ಮತ್ತು ಆಧ್ಯಾತ್ಮಿಕವೆಂಬುದಾಗಿಯೂ ಭಕ್ತಿಯು ಮೂರು ಬಗೆಯೆಂದು ಹೇಳುತ್ತಿರುವರು.

೬. ಧ್ಯಾನ ಮತ್ತು ಧಾರಣಗಳಿಂದ ಕೂಡಿದ ಬುದ್ಧಿಯಿಂದ ರುದ್ರಸ್ಮರಣೆಯನ್ನು ಮಾಡುತ್ತಿರುವುದೇ ಮಾನಸಿಕವಾದ ರುದ್ರಭಕ್ತಿಯೆಂದು ಕರೆಯಲ್ಪಡುವುದು.

೭. ಜ್ಞಾನ ಮತ್ತು ಧ್ಯಾನಗಳೇ ಧರ್ಮಗಳಾಗಿರುವ ಜನರು ವ್ರತ, ಉಪವಾಸಗಳಿಂದ ಮಾಡುವ ಇಂದ್ರಿಯಸಂಯಮರೂಪವಾದ ನಿಯಮಾನುಪಾಲನವೇ ರುದ್ರನಲ್ಲಿ ಕಾಯಿಕಭಕ್ತಿಯೆನಿಸುವುದು.

೮–೧೧. ಗೋವಿನ ತುಪ್ಪ, ಹಾಲು, ಮೊಸರು, ಗಂಧ, ಕುಂಕುಮ, ಕುಶೋದಕ, ಸುಗಂಧಭರಿತಗಳಾದ ಪುಷ್ಪಮಾಲೆಗಳು, ಬಗೆಬಗೆಯ ಗೈರಿಕಾದಿ ಧಾತುಗಳ ಸಂಭಾರಗಳು, ತುಪ್ಪ ಮತ್ತು ಗುಗ್ಗುಳಗಳ ಧೂಪಗಳು, ಕರಿಯ ಅಗರುವಿನ ಸುಗಂಧ ದ್ರವ್ಯಗಳು, ಚಿನ್ನ ಮತ್ತು ನವರತ್ನಗಳ ಒಡವೆಗಳು, ವಿಚಿತ್ರಗಳಾದ ಪುಷ್ಪಮಾಲಿಗಳು, ಬಹುವಿಧ ವಸ್ತ್ರಗಳು, ಉತ್ತಮವಾದ ಸ್ತೋತ್ರಗಳು, ಪತಾಕೆಗಳನ್ನೂ, ಬೀಸಣಿಗೆಗಳನ್ನೂ ಎತ್ತಿ ಹಿಡಿಯುವುದು, ನೃತ್ಯ, ಮಂಗಳ ವಾದ್ಯಗಳು, ಗೀತಗಾನಗಳು, ಸರ್ವಪ್ರಕಾರಗಳ ಪೂಜಾಸಾಮಗ್ರಿಗಳು, ಭಕ್ಷ್ಯಭೋಜ್ಯಗಳನ್ನೊಳಕೊಂಡ ನೈವೇದ್ಯಗಳು, ಪೂಜೆಯ ಆದ್ಯಂತವೂ ಲಾಜಾ

ಭಕ್ಷ್ಯಭೋಜ್ಯಾನುಪಾನೈಶ್ಚ ಯಾವತ್ಪೂಜಾಽಕ್ಷತೈರ್ನರೈಃ ।
ಮಹೇಶ್ವರಂ ಪುರಸ್ಕೃತ್ಯ ಭಕ್ತಿಃ ಸಾ ಲೌಕಿಕೀ ಮತಾ ॥ ೧೧ ॥
ವೇದಮಂತ್ರಹವಿರ್ಯೋಗೈರ್ಯಾ ಕ್ರಿಯಾ ವೈದಿಕೀ ಮತಾ ॥ ೧೨ ॥
ದರ್ಶೇ ಚ ಪೂರ್ಣಮಾಸ್ಯಾಂ ವಾ ಕರ್ತವ್ಯಂ ಚಾಽಗ್ನಿಹೋತ್ರಕಂ ।
ಪ್ರಾಶನಂ ದಕ್ಷಿಣಾದಾನಂ ಪುರೋಡಾಶಶ್ಚ ಸತ್ಕ್ರಿಯಾ ॥ ೧೩ ॥
ಇಷ್ಟವೃತ್ತಿಃ ಸೋಮಪಾನಂ ಯಾಜ್ಞಿಕಂ ಸರ್ವಕರ್ಮ ಚ ।
ಋಗ್ಯಜುಃಸಾಮ ಜಾಪ್ಯಾನಿ ಸಂಹಿತಾಽಧ್ಯಯನಾನಿ ಚ ॥ ೧೪ ॥
ಕ್ರಿಯತೇ ರುದ್ರಮುದ್ದಿಶ್ಯ ಸಾ ಭಕ್ತಿರ್ವೈದಿಕೀ ಸ್ಮೃತಾ ।
ಅಗ್ನಿಭೂಮ್ಯನಿಲಾಕಾಶನಿಶಾಕರ ದಿವಾಕರಾನ್ ॥ ೧೫ ॥
ಸಮುದ್ದಿಶ್ಯ ಕೃತಂ ಕರ್ಮ ತತ್ಸರ್ವಂ ದೈವಿಕಂ ಭವೇತ್ ।
ಆಧ್ಯಾತ್ಮಿಕೀ ತು ದ್ವಿವಿಧಾ ರುದ್ರಭಕ್ತಿಃ ಸ್ಥಿತಾ ಮುನೇ ॥ ೧೬ ॥
ಸಾಂಖ್ಯಾಖ್ಯಾ ಯೌಗಿಕೀ ಚಾಽನ್ಯಾ ವಿಭಾಗಂ ತತ್ರ ಮೇ ಶೃಣು ।
ಚತುರ್ವಿಂಶತಿ ತತ್ವಾನಿ ಪ್ರಧಾನಾದೀನಿ ಸಂಖ್ಯಯಾ ॥ ೧೭ ॥

---

ಕ್ಷತೆಗಳ ಉಪಯೋಗ—ಇವುಗಳಿಂದ ಮಹೇಶ್ವರನನ್ನು ಆದರಿಸಿ ಪೂಜಿಸಿ ಮಾಡುವ ಭಕ್ತಿಯು ಲೌಕಿಕಭಕ್ತಿಯೆಂದು ಬಲ್ಲವರ ಅಭಿಪ್ರಾಯವು.

೧೨. ವೇದಗಳಲ್ಲಿರುವ ಮಂತ್ರಗಳನ್ನುಚ್ಚರಿಸುತ್ತ ಅಗ್ನಿಯಲ್ಲಿ ಹೋಮವನ್ನು ಮಾಡುವ ಯಾಗಾದಿ ಕ್ರಿಯೆಗಳು ವೈದಿಕಭಕ್ತಿಗೆ ಸೇರಿದುವು.

೧೩. ಅಮಾವಾಸ್ಯೆ ಮತ್ತು ಹುಣ್ಣಿಮೆಗಳಲ್ಲಿ ಮಾಡಬೇಕಾದುದು ಅಗ್ನಿಹೋತ್ರಕರ್ಮವು. ಯಜ್ಞಶೇಷದ ಸೇವನೆ, ದಕ್ಷಿಣೆಯ ವಿನಿಯೋಗ, ಪುರುಡಾಶದ ಭಕ್ಷಣ, ಅತಿಥಿ ಅಭ್ಯಾಗತರ ಸತ್ಕಾರ ಮೊದಲಾದುವು.

೧೪. ವರ್ಣಾಶ್ರಮೋಚಿತವಾದ ವೃತ್ತಿ, ಯಜ್ಞದಲ್ಲಿ ಸೋಮರಸದ ಪಾನ, ಯಜ್ಞದ ಸಕಲ ಕಾರ್ಯಗಳನ್ನು ಮಾಡುವುದು, ಋಗ್ವೇದ, ಯಜುರ್ವೇದ, ಸಾಮವೇದಗಳ ಅಧ್ಯಯನ, ಪುರಾಣಸಂಹಿತೆಯ ಪಾಠ;

೧೫. ಇವುಗಳೆಲ್ಲವನ್ನೂ ಈಶ್ವರಾರ್ಪಣ ಬುದ್ಧಿಯಿಂದ ಮಾಡುವ ಭಕ್ತಿಗೆ ವೈದಿಕಭಕ್ತಿಯೆಂದು ಹೆಸರು. ಅಗ್ನಿ, ಭೂಮಿ, ವಾಯು, ಆಕಾಶ, ಚಂದ್ರ, ಸೂರ್ಯರು ಪರಮಾತ್ಮನ ರೂಪಗಳೇ.

೧೬–೧೭. ಇವರನ್ನುದ್ದೇಶಿಸಿ ಮಾಡಿದ ಸಕಲ ಕರ್ಮವೂ ದೈವಿಕವೆನಿಸುವುದು. ಅಯ್ಯಾ ಮುನಿವರ್ಯನೆ! ಆಧ್ಯಾತ್ಮಿಕವಾದ ರುದ್ರಭಕ್ತಿಯು ಎರಡು ವಿಧವಾಗಿರುವುದು. ಮೊದಲನೆಯದೇ ಸಾಂಖ್ಯಮಾರ್ಗವು; ಎರಡನೆಯದು ಯೋಗಮಾರ್ಗವು. ಇವುಗಳ ವಿಭಾಗವನ್ನು ತಿಳಿಸುವೆನು, ಕೇಳು. ಗಣನೆ ಮಾಡಿ ನೋಡಲು ಪ್ರಧಾನವೇ ಮೊದಲಾದ ಇಪ್ಪತ್ತುನಾಲ್ಕು ತತ್ತ್ವಗಳು ಜಗತ್ಕಾರಣಗಳಾಗಿರುವುವು.

ಅಚೇತನಾನಿ ಯೋಜ್ಯಾನಿ ಪುರುಷಃ ಪಂಚವಿಂಶಕಃ ।
ಚೇತನಃ ಪುರುಷೋ ಭೋಕ್ತಾ ನ ಕಾರ್ಯಂ ತಸ್ಯ ಕರ್ಮಣಃ ॥ ೧೮ ॥
ರುದ್ರಃ ಷಡ್ವಿಂಶಕಃ ಕರ್ತಾ ಸರ್ವಜ್ಞಶ್ಚೇತನಃ ಪ್ರಭುಃ ।
ಅಜನ್ಮಾ ನಿತ್ಯಮವ್ಯಕ್ತಮಧಿಷ್ಠಾತಾ ಪ್ರಯೋಜಕಃ ॥ ೧೯ ॥
ಪುರುಷೋ ನಿತ್ಯವ್ಯಕ್ತಃ ಸ್ಯಾತ್ಕಾರಣಂ ಚ ಮಹೇಶ್ವರಃ ।
ತತ್ವಸರ್ಗಂ ಭವೇತ್ಸರ್ಗಂ ಭೂತಸರ್ಗಂ ಚ ತತ್ವತಃ ॥ ೨೦ ॥
ಸಂಖ್ಯಯಾ ಪರಿಸರ್ಗಾಯ ಪ್ರಧಾನಂ ಚ ಗುಣಾತ್ಮಕಂ ।
ಸಾಧರ್ಮ್ಯಮಾತ್ಮನ್ಯೈಶ್ವರ್ಯಂ ಪ್ರಧಾನಂ ವೈ ವಿಧರ್ಮಿ ಚ ॥ ೨೧ ॥
ಕಾರಣಂ ತಚ್ಚ ರುದ್ರಸ್ಯ ಕಾಮ್ಯತ್ವಮಿದಮುಚ್ಯತೇ ।
ಸರ್ವತ್ರ ಕರ್ತೃತಾ ರುದ್ರೇ ಪುರುಷೇಚಾಽಪ್ಯಕರ್ತೃತಾ ॥ ೨೨ ॥

---

೧೮. ಇವುಗಳೆಲ್ಲವೂ ಅಚೇತನಗಳು. ಮತ್ತೊಬ್ಬನಿಗೆ ಕರಣಗಳಾಗಿರುವುವು. ಇವುಗಳನ್ನು ನಿಯೋಗಿಸುವ ಪುರುಷನೇ ಇಪ್ಪತ್ತೈದನೆಯ ತತ್ತ್ವವು. ಇವನು ಚೇತನನು. ಕೇವಲ ಭೋಕ್ತೃವು. ಅವನಿಗೆ ಯಾವ ಕರ್ಮದಲ್ಲಿಯೂ ಕರ್ತೃತ್ವವಿಲ್ಲ.

೧೯. ಇಪ್ಪತ್ತಾರನೆಯವನಾದ ಪರಮೇಶ್ವರನೇ ಸ್ವತಂತ್ರಕರ್ತೃವು. ಅವನೇ ಸರ್ವಜ್ಞನು; ಚೇತನಘನನು; ಸರ್ವೇಶ್ವರನು; ಜನನರಹಿತನು; ಶಾಶ್ವತನು; ಯಾವಾಗಲೂ ಅವ್ಯಕ್ತವನ್ನಧಿಷ್ಠಿಸಿರುವನು; ತನ್ನ ಸಾನ್ನಿಧ್ಯದಿಂದ ಅವುಗಳ ವ್ಯಾಪಾರಗಳನ್ನು ನಡೆಸುತ್ತಿರುವನು.

೨೦. ಪುರುಷನು (ಜೀವನು) ನಿತ್ಯನೂ ಅನುಭವವೇದ್ಯನೂ ಆಗಿರುವನು. ಮಹೇಶ್ವರನಿಗೆ ಜಗತ್ಕಾರಣನೆಂದೂ ಹೇಳುವರು. ಅವ್ಯಕ್ತದಿಂದ ಮೊದಲು ಮಹದಹಂಕಾರಗಳೆಂಬ ಪ್ರಕೃತಿರೂಪಗಳುಂಟಾಗುವುವು. ಆ ತತ್ತ್ವಗಳಿಂದ ಪಂಚಭೂತಗಳೇ ಮೊದಲಾದ ಹದಿನಾರು ವಿಕಾರಗಳುದ್ಭವಿಸುವುವು.

೨೧. ಈ ಸಂಖ್ಯೆಯನ್ನನುಸರಿಸಿಯೇ ತ್ರಿಗುಣಾತ್ಮಕವಾದ ಪ್ರಧಾನವು ಪ್ರಪಂಚದ ಸೃಷ್ಟಿಗೆ ಕಾರಣವಾಗಿರುವುದು. ಆತ್ಮನಿಗೆ ಐಶ್ವರ್ಯಾದಿ ಗುಣಗಳು ಸಹಜವಾಗಿರುವುವು. ಪ್ರಧಾನವು ಇದಕ್ಕೆ ವಿಪರೀತವೆನಿಸಿ ಜಡವಾಗಿರುವುದು.

೨೨. ಆ ಪ್ರಧಾನದ ಪ್ರವೃತ್ತಿಗೆ ರುದ್ರನ ಕಾಮನೆಯೇ ಕಾರಣವಾಗಿರುವುದೆಂದು ಹೇಳುವರು. ಸರ್ವವಿಧದಲ್ಲಿಯೂ, ಮಹೇಶ್ವರನಿಗೆ ಮಾತ್ರ ಕರ್ತೃತ್ವವೂ, ಜೀವನಿಗೆ ಅಕರ್ತೃತ್ವವೂ (ಕೇವಲ ಭೋಕ್ತೃತ್ವವೂ) ಧರ್ಮವಾಗಿರುವುದು.

ಅಚೇತನಂ ಪ್ರಧಾನೇ ಚ ತಚ್ಚ ತತ್ವಮಿದಂ ಸ್ಮೃತಂ ।
ತತ್ವಾಂತರೇಣ ಮುಚ್ಯಂತೇ ಕಾರ್ಯಂ ಕಾರಣಮೇವ ಚ ॥ ೨೩ ॥
ಪ್ರಯೋಜನೇ ಚ ವೈಜಾತ್ಯಂ ಜ್ಞಾತ್ವಾ ತತ್ವಮಸಂಖ್ಯಯಾ ।
ಸಂಖ್ಯಾಽಸ್ತೀತ್ಯುಚ್ಯತೇ ಪ್ರಾಜ್ಞೈ ರುದ್ರತತ್ತ್ವಾರ್ಥಚಿಂತಕೈಃ ॥ ೨೪ ॥
ಇತಿ ತಸ್ಯ ತತ್ತ್ವಭಾವಂ ತತ್ತ್ವಸಂಖ್ಯಾ ಚ ತತ್ತ್ವತಃ ।
ರುದ್ರತತ್ತ್ವಾಽಧಿಕಂ ಚಾಽಪಿ ಜ್ಞಾನತತ್ತ್ವಂ ವಿದುರ್ಬುಧಾಃ ॥ ೨೫ ॥
ಸಾಂಖ್ಯೇ ಕೃತಾ ಭಕ್ತಿರೇಷಾ ಸದ್ಭಿರಾಧ್ಯಾತ್ಮಿಕೀ ಮತಾ ।
ಯೋಗಿನಾಮಪಿ ಮೇ ಭಕ್ತ್ಯಾ ಶೃಣು ಭಕ್ತಿಂ ಮಹಾಸುರ ॥ ೨೬ ॥
ಪ್ರಾಣಾಯಾಮಪರೋ ನಿತ್ಯಂ ಧ್ಯಾಯತೇ ನಿಯತೇಂದ್ರಿಯಃ ।
ಧಾರಣಾಂ ಹೃದಯೇ ಧೃತ್ವಾ ಧ್ಯಾಯತೇ ಯೋ ಮಹೇಶ್ವರಂ ॥ ೨೭ ॥
ಹೃತ್ಕಂಜಕರ್ಣಿಕಾಸೀನಂ ಪಂಚವಕ್ತ್ರಂ ತ್ರಿಲೋಚನಂ ।
ಶಶಾಂಕಜ್ಯೋತಿಜಠರಂ ವ್ಯಾಲವೃತ್ತಕಟೀತಟಂ ॥ ೨೮ ॥

---

೨೩. ಪ್ರಧಾನವು ಮಾತ್ರ ಕೇವಲ ಜಡವಾಗಿರುವುದು. ಈ ಮೂರರ ಯಥಾರ್ಥಜ್ಞಾನವೇ ತತ್ತ್ವಜ್ಞಾನವು. ಈ ಇಪ್ಪತ್ತೈದು ತತ್ತ್ವಗಳನ್ನು ವಿಮರ್ಶಿಸಿ ತಿಳಿಯಲು ಪ್ರಪಂಚದ ಕಾರ್ಯಕಾರಣಭಾವವೆಲ್ಲವೂ ನಾಶವಾಗುವುದು.

೨೪. ತತ್ತ್ವಗಳನ್ನು ಸಂಖ್ಯಾನುಗುಣವಾಗಿ ತಿಳಿಯದಿದ್ದಲ್ಲಿ ಫಲವೈಪರೀತ್ಯ ವುಂಟಾಗುವುದು. ಆದುದರಿಂದಲೇ ಮಾಹೇಶ್ವರ ತತ್ತ್ವವನ್ನು ಚಿಂತಿಸಿ ತಿಳಿದ ಪ್ರಾಜ್ಞರು ಸಾಂಖ್ಯಮತವನ್ನೊಪ್ಪಿಕೊಂಡಿರುವರು.

೨೫. ಇಂತು ಈಶ್ವರನ ನಿಜಸ್ವರೂಪವೂ ತತ್ತ್ವಗಳ ಪ್ರಸಂಖ್ಯಾನವೂ ಯಥಾರ್ಥವಾಗಿ ಹೇಳಲ್ಪಟ್ಟುವು. ಸರ್ವೋತ್ತಮವಾದ ಈ ಮಾಹೇಶ್ವರ ಜ್ಞಾನ ವನ್ನೇ ಪಂಡಿತರು ಜ್ಞಾನತತ್ತ್ವವೆಂದು ತಿಳಿದಿರುವರು.

೨೬. ಇದೇ ಸಜ್ಜನಸ್ವೀಕೃತವಾದ ಸಾಂಖ್ಯಮಾರ್ಗವು. ಆಧ್ಯಾತ್ಮಿಕ ಭಕ್ತಿಗಳಲ್ಲಿ ಇದು ಮೊದಲನೆಯದು. ಇನ್ನು ಯೋಗಮಾರ್ಗಾನುಸಾರಿಯಾದ ಭಕ್ತಿಯನ್ನು ನಿರೂಪಿಸುವೆನು. ಶ್ರದ್ಧೆಯಿಂದ ಕೇಳು.

೨೭. ಈ ಮಾರ್ಗವನ್ನನುಸರಿಸುವವನು ನಿತ್ಯವೂ ಪ್ರಾಣಾಯಾಮವನ್ನ ಭ್ಯಾಸಮಾಡಬೇಕು. ಧ್ಯಾನಕಾಲದಲ್ಲಿ ಜಿತೇಂದ್ರಿಯನಾಗಿರಬೇಕು. ಅಖಂಡ ವಾದ ಮನೋವೃತ್ತಿಯಿಂದ ಮಹೇಶ್ವರನ ದಿವ್ಯರೂಪವನ್ನೇ ಹೃದಯದಲ್ಲಿ ನೆಲೆಗೊಳಿಸಿ ಚಿಂತಿಸುತ್ತಿರಬೇಕು.

೨೮. ಮಹೇಶ್ವರನು ಹೃದಯಕಮಲದ ಮಧ್ಯಕರ್ಣಿಕೆಯಲ್ಲಿ ಸುಖಾಸೀನ ನಾಗಿರುವನು. ಅವನಿಗೆ ಐದು ಮುಖಗಳಿರುವುವು; ಮೂರು ಕಣ್ಣುಗಳಿರು ವುವು; ಆತನಿಗೆ ಚಂದ್ರನಂತೆ ಶುಭ್ರವರ್ಣದ ಹೊಟ್ಟೆಯೂ ಹಾವುಗಳ ಉಡಿದಾರದಿಂದ ಕೂಡಿದ ನಡುವೂ ಇರುವುವು.

ಶ್ವೇತಂ ದಶಭುಜಂ ಭದ್ರಂ ವರದಾಽಭಯಹಸ್ತಕಂ ।
ಯೋಗಜಾ ಮಾನಸೀ ವ್ಯಾಸ ರುದ್ರಭಕ್ತಿಃ ಪರಾ ಸ್ಮೃತಾ ॥ ೨೯ ॥
ಯ ಏವ ಭಕ್ತಿಮಾನ್ರುದ್ರೇ ರುದ್ರಭಕ್ತಃ ಸ ಉಚ್ಯತೇ ।
ವಿಧಿಂ ತು ಶೃಣು ಮೇ ವ್ಯಾಸ ಯಃ ಸ್ಮೃತಃ ಕ್ಷೇತ್ರವಾಸಿನಾಂ ॥ ೩೦ ॥
ಸ್ವಯಂ ರುದ್ರೇಣ ವಿಹಿತೋ ಬ್ರಹ್ಮಾದೀನಾಂ ಸಮಾಗಮೇ ।
ಕಥಿತೋ ವಿಸ್ತರಾತ್ಪೂರ್ವಂ ಸರ್ವೇಷಾಂ ತತ್ರ ಸನ್ನಿಧೌ ॥ ೩೧ ॥
ನಿರ್ಮಮಾ ನಿರಹಂಕಾರಾ ನಿಃಸಂಗಾ ನಿಷ್ಪರಿಗ್ರಹಾಃ ।
ಬಂಧುವರ್ಗೇಣ ನಿಃಸ್ನೇಹಾಃ ಸಮಲೋಷ್ಟಾಽಶ್ಮಕಾಂಚನಾಃ ॥ ೩೨ ॥
ಭೂತಾನಾಂ ಕರ್ಮಭಿರ್ನಿತ್ಯಂ ತ್ರಿವಿಧೈರಭಯಪ್ರದಾಃ ।
ಸಾಂಖ್ಯಯೋಗವಿಧಿಜ್ಞಾಶ್ಚ ಧರ್ಮಜ್ಞಾಶ್ಛಿನ್ನಸಂಶಯಾಃ ॥ ೩೩ ॥

---

೨೯. ದೇಹದ ಆದ್ಯಂತವೂ ಶ್ವೇತವರ್ಣವು. ಹತ್ತು ಭುಜಗಳಿಂದಾತ ನೊಪ್ಪುತ್ತಿರುವನು. ಮಂಗಳ ಸ್ವರೂಪನು. ಕೈಗಳಲ್ಲಿ ವರದ ಮತ್ತು ಅಭಯ ಗಳೆಂಬ ಮುದ್ರೆಗಳನ್ನು ತೋರುತ್ತಿರುವನು. ಎಲೈ ವ್ಯಾಸನೆ! ಇಂತಹ ಮೂರ್ತಿಯನ್ನು ಧ್ಯಾನಿಸುವ ಯೋಗದಿಂದುಂಟಾದ ಈಶ್ವರಭಕ್ತಿಯು ಸರ್ವೋ ತ್ತಮವೆಂದು ಹೇಳಲ್ಪಟ್ಟಿರುವುದು.

೩೦. ಯಾವನು ರುದ್ರನಲ್ಲಿ ಅನನ್ಯವಾದ ಭಕ್ತಿಯನ್ನಿಟ್ಟಿರುವನೊ, ಅವ ನನ್ನೇ ರುದ್ರಭಕ್ತನೆಂದು ಕರೆಯುವರು. ಎಲೈ ವ್ಯಾಸಮುನಿಯೆ! ಇನ್ನು ಸ್ಮೃತಿ ಗಳಲ್ಲಿ ಹೇಳಿರುವಂತೆ ಮಾಹೇಶ್ವರರು ಕ್ಷೇತ್ರವಾಸಿಗಳಾಗಿರುವಾಗ ಅನುಸರಿಸ ಬೇಕಾದ ವಿಧಿಯನ್ನು ಕೇಳು.

೩೧. ಇದನ್ನು ಬ್ರಹ್ಮಾದಿಗಳು ಸೇರಿದ್ದ ಸಭೆಯಲ್ಲಿ ಮಹಾದೇವನು ತಾನೇ ವಿಧಿಸಿರುವನು. ಪೂರ್ವದಲ್ಲಿ ಅವರ ಸಮಕ್ಷದಲ್ಲಿಯೇ ವಿಸ್ತಾರವಾಗಿ ನಿರೂಪಿ ಸಿರುವನು.

೩೨. ಕ್ಷೇತ್ರವಾಸಿಗಳಾದವರು ಮಮತಾಹಂಕಾರಗಳಿಲ್ಲದವರೂ, ನಿಸ್ಸಂಗರೂ, ಯಾವುದನ್ನೂ ಸ್ವೀಕರಿಸದವರೂ, ಬಂಧುವರ್ಗದವರಲ್ಲಿ ಅಭಿಮಾನ ಶೂನ್ಯರೂ, ಮಣ್ಣು, ಕಲ್ಲು, ಚಿನ್ನಗಳನ್ನೆಲ್ಲ ಸಮಾನದೃಷ್ಟಿಯಿಂದ ನೋಡು ವವರೂ ಆಗಿರಬೇಕು.

೩೩. ಮನೋವಾಕ್ಕಾಯಗಳಿಂದಲೂ, ಕರ್ಮವನ್ನು ಮಾಡುವಾಗಲೂ, ಸಕಲ ಭೂತಗಳಿಗೂ ಅಭಯವನ್ನು ಬಯಸಬೇಕು. ಸಾಂಖ್ಯ ಮತ್ತು ಯೋಗಗಳ ಎರಡು ಮಾರ್ಗಗಳನ್ನೂ ಚೆನ್ನಾಗಿ ತಿಳಿದಿರಬೇಕು. ಧರ್ಮ ತತ್ಪರರಾಗಿರಬೇಕು. ನಿಶ್ಚಯಜ್ಞಾನವಂತರಾಗಿರಬೇಕು.

ಯಜಂತೋ ವಿವಿಧೈರ್ಯಜ್ಞೈರ್ಯೇ ವಿಪ್ರಾಃ ಕ್ಷೇತ್ರವಾಸಿನಃ ।
ಮಹಾಕಾಲವನೇ ತೇಷಾಂ ಮೃತಾನಾಂ ಯತ್ಫಲಂ ಶೃಣು ॥ ೩೪ ॥
ವ್ರಜಂತ್ಯೇವ ಸುದುಷ್ಪ್ರಾಪ್ಯಂ ಬ್ರಹ್ಮಸಾಯುಜ್ಯಮಕ್ಷಯಂ ।
ಸಂಪ್ರಾಪ್ಯ ನ ಪುನರ್ಜನ್ಮ ಲಭಂತೇ ಮೋಕ್ಷಮವ್ಯಯಂ ॥ ೩೫ ॥
ಪುನರಾವರ್ತನಂ ಹಿತ್ವಾ ವಿಧಿಂ ಮಾಹೇಶ್ವರಂ ಸ್ಥಿತಾಃ ।
ಪುನರಾವೃತ್ತಿರನ್ಯೇಷಾಂ ಪ್ರಪಂಚಾಶ್ರಮವಾಸಿನಾಂ ॥ ೩೬ ॥
ಗಾರ್ಹಸ್ಥ್ಯಂ ವಿಧಿಮಾಸಾದ್ಯ ಷಟ್ಕರ್ಮನಿರತಾಃ ಸದಾ ।
ಜುಹ್ವತೇ ವಿಧಿನಾ ಸಮ್ಯಙ್ಮಂತ್ರಸ್ತೋತ್ರೈರ್ನಿಯಂತ್ರಿತಾಃ ॥ ೩೭ ॥
ಅಧಿಕಂ ಫಲಮಾಯಾಂತಿ ಸರ್ವದುಃಖವಿವರ್ಜಿತಾಃ ।
ಸರ್ವಲೋಕೇಷು ಚಾಽನ್ಯತ್ರ ಗತಿಸ್ತಸ್ಯ ನ ಹನ್ಯತೇ ॥ ೩೮ ॥
ದಿವ್ಯೇನೈಶ್ವರ್ಯಯೋಗೇನ ಸ್ವಾರೂಢಃ ಸ್ವಪರಿಗ್ರಹಃ ।
ಬಹುಸೂರ್ಯಪ್ರಕಾಶೇನ ವಿಮಾನೇನ ಸುವರ್ಚಸಾ ॥ ೩೯ ॥

---

೩೪. ಈ ಮಹಾಕಾಲವನದಲ್ಲಿ ಕ್ಷೇತ್ರವಾಸವನ್ನು ಮಾಡುತ್ತ ಅನೇಕ ವಿಧಗಳಾದ ಯಜ್ಞಗಳಿಂದ ಪರಮೇಶ್ವರನನ್ನು ಪೂಜಿಸುವ ಬ್ರಾಹ್ಮಣರು ಇಲ್ಲಿಯೇ ಮರಣವನ್ನು ಹೊಂದಿದರೆ ಅವರಿಗೆ ಲಭಿಸುವ ಗತಿಯನ್ನು ಕೇಳು.

೩೫. ಅವರೆಲ್ಲರೂ ಅತ್ಯಂತ ಅಲಭ್ಯವೂ ನಾಶರಹಿತವೂ ಆದ ಬ್ರಹ್ಮ ಸಾಯುಜ್ಯವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಶಾಶ್ವತಮೋಕ್ಷವನ್ನು ಪಡೆದ ಅವರು ಮತ್ತೆ ಜನ್ಮವನ್ನು ಪಡೆಯುವುದಿಲ್ಲ.

೩೬. ಪುನರಾವೃತ್ತಿಯನ್ನು ಕಳೆದುಕೊಂಡು ಅವರು ಮಾಹೇಶ್ವರವ್ರತ ಗಳಲ್ಲಿಯೇ ನಿರತರಾಗಿರುವರು. ಪ್ರಪಂಚದಲ್ಲಿ ಭಕ್ತಿಹೀನರಾಗಿ ಕೇವಲ ಆಶ್ರಮ ವಾಸವನ್ನು ಮಾತ್ರ ಮಾಡುವವರಿಗೆ ಪುನರ್ಜನ್ಮವು ತಪ್ಪುವುದಿಲ್ಲ.

೩೭. ಕೆಲವರು ಗಾರ್ಹಸ್ಥ್ಯಧರ್ಮವನ್ನು ಕೈಕೊಂಡು ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮಗಳಲ್ಲಿಯೇ ನಿರತ ರಾಗಿ ಯಾವಾಗಲೂ ಮಂತ್ರಸ್ತೋತ್ರಗಳನ್ನುಚ್ಚರಿಸುತ್ತ ಶಾಸ್ತ್ರೋಕ್ತ ವಿಧಿಯಿಂದ ಹೋಮಗಳನ್ನು ಮಾಡುತ್ತಿರುವರು.

೩೮. ಅವರು ಸಮಸ್ತ ದುಃಖಗಳನ್ನೂ ಕಳೆದುಕೊಂಡು ಸರ್ವೋತ್ಕೃಷ್ಟ ವಾದ ಫಲವನ್ನು ಪಡೆಯುವರು. ಅಂತಹ ಮಾನವರಿಗೆ ಸಕಲ ಲೋಕಗಳಲ್ಲಿಯೂ ಸ್ವೇಚ್ಛೆಯಾಗಿ ಸಂಚರಿಸಲು ಅಂತಕವಿರುವುದಿಲ್ಲ.

೩೯–೪೦. ದೇವತೆಗಳಿಗೆ ಸಹಜವಾದ ಅಣಿಮಾದ್ಯೈಶ್ವರ್ಯಗಳನ್ನು ಪಡೆದು ಆತನು ಉಚಿತವಾಹನವನ್ನೇರಿ, ತನ್ನ ಪರಿವಾರದೊಡನೆ ಅನೇಕ ಸೂರ್ಯ ಪ್ರಕಾಶದಂತೆ ಕಾಂತಿಯುಕ್ತವಾದ ವಿಮಾನದಲ್ಲಿ ಕುಳಿತು, ಸಾವಿರಾರು ಸ್ತ್ರೀಯ

ವೃತಃ ಸ್ತ್ರೀಣಾಂ ಸಹಸ್ರೈಶ್ಚ ಸ್ವಚ್ಛಂದಗಮನಾಲಯಃ ।
ವಿಚರತ್ಯವಿಚಾರ್ಯೈರ್ವ ಸರ್ವಲೋಕಾನ್ದಿವೌಕಸಾಂ ॥ ೪೦ ॥
ಸ್ಪೃಹಣೀಯತಮಃ ಪುಂಸಾಂ ಸರ್ವವರ್ಣೋತ್ತಮೋ ಧನೀ ।
ಸ್ವರ್ಗಾಚ್ಚ್ಯುತಃ ಪ್ರಜಾಯೇತ ಕುಲೇ ಮಹತಿ ರೂಪವಾನ್ ॥ ೪೧ ॥
ಧರ್ಮಜ್ಞೋ ರುದ್ರಭಕ್ತಶ್ಚ ಸರ್ವವಿದ್ಯಾರ್ಥಪಾರಗಃ ।
ತಥೈವ ಬ್ರಹ್ಮಚರ್ಯೇಣ ಗುರುಶುಶ್ರೂಷಣೇನ ಚ ॥ ೪೨ ॥
ವೇದಾಽಧ್ಯಯನಸಂಯುಕ್ತೋ ಭೈಕ್ಷವೃತ್ತಿರ್ಜಿತೇಂದ್ರಿಯಃ ।
ನಿತ್ಯಂ ಸತ್ಯವ್ರತೇ ಯುಕ್ತಃ ಸ್ವಧರ್ಮೇ ಚ ಪ್ರಮೋದವಾನ್ ॥ ೪೩ ॥
ಮೃತಃ ಕಾಲೇ ಸಮೃದ್ಧೇನ ಸರ್ವಭೋಗಾಽವಲಂಬಿನಾ ।
ಸೂರ್ಯೇಣೇವ ದ್ವಿತೀಯೇನ ವಿಮಾನೇನ ವಿಚಾರಿತಃ ॥ ೪೪ ॥
ಗುಹ್ಯಕೋ ನಾಮ ರುದ್ರಸ್ಯ ಗಣಃ ಪರಮಸಮ್ಮತಃ ।
ಅಪ್ರಮೇಯಬಲೈಶ್ವರ್ಯೋ ದೇವದಾನವಪೂಜಿತಃ ॥ ೪೫ ॥

---

ರಿಂದ ಸೇವೆಯನ್ನು ಕೊಳ್ಳುತ್ತ, ಇಚ್ಛಾಮಾತ್ರದಿಂದ ಬಯಸಿದಲ್ಲಿಗೆ ಹೋಗುವ ಮಂಟಪವನ್ನು ಸೇರಿ ನಿಶ್ಚಿಂತೆಯಾಗಿ ದೇವತೆಗಳ ಸಕಲ ಲೋಕಗಳಲ್ಲಿಯೂ ಸಂಚರಿಸುತ್ತಿರುವನು.

೪೧. ಸ್ವರ್ಗಲೋಕದಿಂದ ಚ್ಯುತನಾಗಿ ಭೂಮಿಗೆ ಬಂದವನು ಸಕಲ ಮಾನವರಿಗೂ ಬೇಕಾದವನಾಗಿಯೂ, ಉತ್ತಮವರ್ಣದವನಾಗಿಯೂ, ಧನಾಢ್ಯನಾಗಿಯೂ, ರೂಪವಂತನಾಗಿಯೂ ಉತ್ತಮವಾದ ಕುಲದಲ್ಲಿ ಜನ್ಮವನ್ನು ಪಡೆಯುವನು.

೪೨–೪೩. ಧರ್ಮಜ್ಞನೂ, ಮಹೇಶ್ವರಭಕ್ತನೂ, ಸಕಲವಿದ್ಯೆಗಳ ಸಂಪೂರ್ಣ ಜ್ಞಾನವುಳ್ಳವನೂ, ಬ್ರಹ್ಮಚರ್ಯ ಗುರುಶುಶ್ರೂಷೆಗಳಿಂದ ವೇದಗಳನ್ನು ಸಾಂಗವಾಗಿ ಅಧ್ಯಯನಮಾಡುವವನೂ, ಭಿಕ್ಷಾನ್ನಮಾತ್ರದಿಂದ ಜೀವಿಸುವವನೂ, ಜಿತೇಂದ್ರಿಯನೂ, ಯಾವಾಗಲೂ ಸತ್ಯವನ್ನೇ ನುಡಿಯುವವನೂ, ತನ್ನ ವರ್ಣಾಶ್ರಮಗಳ ಧರ್ಮಗಳನ್ನಾಚರಿಸುವುದರಲ್ಲಿ ಸಂತೋಷವುಳ್ಳವನೂ ಆಗಿರುವನು.

೪೪. ದೇಹವನ್ನು ಬಿಡಲು ಅವನು ಸಕಲಸಂಪತ್ಸಮೃದ್ಧವೂ, ಸಮಸ್ತ ಭೋಗಸಾಮಗ್ರೀಸಹಿತವೂ ಆಗಿ ಎರಡನೆಯ ಸೂರ್ಯನಂತೆ ರಾರಾಜಿಸುತ್ತಿರುವ ವಿಮಾನದಲ್ಲಿ ಕುಳಿತು ಸಂಚರಿಸುವನು.

೪೫. ಗುಹ್ಯಕರೆಂಬ ಹೆಸರಿನ ರುದ್ರಗಣಗಳಲ್ಲಿ ಒಬ್ಬನಾಗಿ ಸಾಧುಸಮ್ಮತನಾಗುವನು. ಅಪಾರವಾದ ಪರಾಕ್ರಮೈಶ್ವರ್ಯಗಳಿಂದ ಕೂಡಿದ ಆತನನ್ನು ದೇವತೆಗಳೂ ದಾನವರೂ ಪೂಜಿಸುವರು.

ತೇಷಾಂ ಚ ಸಮತಾಂ ಯಾತಿ ತುಲ್ಯೈಶ್ವರ್ಯಸಮನ್ವಿತಃ ।
ದೇವದಾನವಮರ್ತ್ಯೇಷು ಸ ಚ ಪೂಜ್ಯತಮೋ ಭವೇತ್ ॥ ೪೬ ॥
ವರ್ಷಕೋಟಿಸಹಸ್ರಾಣಿ ವರ್ಷಕೋಟಿಶತಾನಿ ಚ ।
ಏವಮೈಶ್ವರ್ಯಸಂಯುಕ್ತೋ ರುದ್ರಲೋಕೇ ಮಹೀಯತೇ ॥ ೪೭ ॥
ಉಷಿತ್ವಾಽಸೌ ವಿಭೂತ್ಯಾ ವೈ ಯದಾ ಚ ಚ್ಯವತೇ ನರಃ ।
ರುದ್ರಲೋಕಾಚ್ಚ್ಯುತೋ ಭೂಮೌ ವಸತೇ ನಾಽತ್ರ ಸಂಶಯಃ ॥ ೪೮ ॥
ಮಹಾಕಾಲವನೇ ಕ್ಷೇತ್ರೇ ಬ್ರಹ್ಮಚರ್ಯಾಶ್ರಮೇ ಸ್ಥಿತಃ ।
ಮಹೇಶ್ವರಪರೋ ನಿತ್ಯಂ ವಸೇದ್ವಾಽಥ ಮ್ರಿಯೇತ ವಾ ॥ ೪೯ ॥
ಮೃತೋಽಸೌ ಯಾತಿ ದಿವ್ಯೇ ವೈ ವಿಮಾನೇ ಸೂರ್ಯವರ್ಚಸಿ ।
ಪೂರ್ಣಚಂದ್ರಪ್ರಕಾಶೋ ವೈ ಶಶಿವತ್ಪ್ರಿಯದರ್ಶನಃ ॥ ೫೦ ॥
ರುದ್ರಲೋಕಂ ಸಮಾಸಾದ್ಯ ಗುಹ್ಯಕೈಃಸಹ ಮೋದತೇ ।
ಐಶ್ವರ್ಯಂ ಚ ಮಹದ್ಭುಂಕ್ತೇ ಸರ್ವಸ್ಯ ಜಗತಃ ಪ್ರಭುಃ ॥ ೫೧ ॥

---

೪೬. ಅವರಿಗೆ ಸಮಾನವಾದ ಐಶ್ವರ್ಯವನ್ನು ಪಡೆದು ಅವರಿಗೆ ಸಮಾನನಾಗುವನು. ದೇವತೆಗಳು, ದಾನವರು, ಮನುಷ್ಯರೆಲ್ಲರಲ್ಲಿಯೂ ಆತನೇ ಪರಮಪೂಜ್ಯನಾಗಿರುವನು.

೪೭. ನೂರಾರು ಕೋಟಿವರ್ಷಗಳೂ ಸಾವಿರಾರು ಕೋಟಿವರ್ಷಗಳೂ, ಅವನು ಸಕಲೈಶ್ವರ್ಯಸಮನ್ವಿತನಾಗಿ ರುದ್ರಲೋಕದಲ್ಲಿ ಪೂಜ್ಯಸ್ಥಾನವನ್ನು ಪಡೆಯುವನು.

೪೮. ಇಂತು ವೈಭವದಿಂದ ವಾಸಮಾಡುತ್ತ ಕಾಲಕ್ರಮದಲ್ಲಿ ಅಲ್ಲಿಂದ ಚ್ಯುತನಾಗಲು ಮತ್ತೆ ಭೂಲೋಕದಲ್ಲಿಯೇ ಹುಟ್ಟುವನು. ಇದರಲ್ಲಿ ಸಂದೇಹವಿಲ್ಲ.

೪೯. ಮಹಾಕಾಲವನವೆಂಬ ಈ ಕ್ಷೇತ್ರದಲ್ಲಿ ಅವನು ಬ್ರಹ್ಮಚರ್ಯಾಶ್ರಮದಲ್ಲಿದ್ದುಕೊಂಡು ಆಜೀವವೂ ನಿತ್ಯವೂ ಮಹೇಶ್ವರನ ಭಕ್ತಿಯನ್ನೇ ಮಾಡುತ್ತಿರುವನು. ಅಥವಾ ಮರಣಕಾಲಕ್ಕಾದರೂ ಇಲ್ಲಿಗೆ ಬಂದೇ ಬರುವನು.

೫೦. ಇಲ್ಲಿ ದೇಹತ್ಯಾಗವನ್ನುಮಾಡಲು ದಿವ್ಯದೇಹವನ್ನು ತಳೆದು ಪೂರ್ಣಚಂದ್ರನ ತೇಜಸ್ಸಿನಿಂದಲೂ ಚಂದ್ರನಂತೆಯೇ ಆಹ್ಲಾದಕರವಾದ ಮುಖದಿಂದಲೂ ಕೂಡಿದವನಾಗಿ ಸೂರ್ಯಸಮಾನತೇಜದ ವಿಮಾನದಲ್ಲಿ ಕುಳಿತುಕೊಳ್ಳುವನು.

೫೧. ರುದ್ರಲೋಕವನ್ನು ಸೇರಿ ಗುಹ್ಯಕರೊಡನೆ ಸಂತೋಷದಿಂದಿರುವನು. ಮಹತ್ತರವಾದ ಐಶ್ವರ್ಯವನ್ನನುಭವಿಸುವನು. ಸಕಲಲೋಕಕ್ಕೂ ಪ್ರಭುವಾಗಿರುವನು.

ಭುಕ್ತ್ವಾ ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ।
ಪ್ರಚ್ಯುತಸ್ತು ಪುನಸ್ತಸ್ಮಾದ್ರುದ್ರಲೋಕಾತ್ಕ್ರಮೇಣ ತು ॥ ೫೨ ॥
ನಿತ್ಯಂ ಪ್ರಮುದಿತಸ್ತತ್ರ ಭುಕ್ತ್ವಾ ಲೋಕಮನಾಮಯಂ ।
ದ್ವಿಜಾನಾಂ ಸಾಧನೇ ನಿತ್ಯಂ ಕುಲೇ ಮಹತಿ ಜಾಯತೇ ॥ ೫೩ ॥
ಮಾನವೇಷು ಚ ಧರ್ಮೇಷು ವಸೇದ್ಭೂಯಾಂಶ್ಚ ರೂಪವಾನ್ ।
ಸ್ಪೃಹಣೀಯವಪುಃ ಸ್ತ್ರೀಣಾಂ ಮಹಾಭೋಗಪತಿರ್ಭವೇತ್ ॥ ೫೪ ॥
ವಾನಪ್ರಸ್ಥಸಮಾಚಾರೋ ವನೌಷಧಿವಿವರ್ಜಿತಃ ।
ಶೀರ್ಣಪರ್ಣಸಮಾಹಾರಃ ಫಲಪುಷ್ಪಾಂಽಬುಭೋಜನಃ ॥ ೫೫ ॥
ಕಣಾಽಶನೋಽಶ್ಮಕುಟ್ಟೋವಾ ದಂತೋಲೂಖಲಕೋಽಥವಾ ।
ಯೇನ ಕೇನಾಽಪ್ಯುಪಾಯೇನ ಜೀರ್ಣವಲ್ಕಲಧಾರಕಃ ॥ ೫೬ ॥
ಜಟೀ ತ್ರಿಷವಣಸ್ನಾಯೀ ಮುಕ್ತಕೇಶಃ ಸುದಂಡವಾನ್ ।
ಜಲಶಾಯೀ ಪಂಚತಪಾ ವರ್ಷಾಸ್ವಭ್ರಾಽವಕಾಶಕಃ ॥ ೫೭ ॥

---

೫೨. ಸಾವಿರಾರು ಯುಗಗಳವರೆಗೂ ಈ ಭೋಗಗಳನ್ನನುಭವಿಸುತ್ತ ರುದ್ರಲೋಕದಲ್ಲಿ ಗೌರವವನ್ನು ಪಡೆಯುವನು. ಕ್ರಮವಾಗಿ ಪುಣ್ಯಕ್ಷಯವಾಗಲು ಆ ರುದ್ರಲೋಕದಿಂದ ಚ್ಯುತನಾಗುವನು.

೫೩. ಅಲ್ಲಿ ಸಂತೋಷದಿಂದ ನಿತ್ಯವೂ ದುಃಖರಹಿತಗಳಾದ ಭೋಗಗಳನ್ನನುಭವಿಸುತ್ತ ತೀವ್ರಸಾಧನೆಯಿಂದ ಮಾತ್ರ ಲಭಿಸುವ ಸರ್ವೋತ್ತಮವಾದ ಬ್ರಾಹ್ಮಣಕುಲದಲ್ಲಿ ಹುಟ್ಟುವನು.

೫೪. ಪುನಃ ಮಾನವಧರ್ಮಗಳನ್ನಾಚರಿಸುತ್ತಿರುವನು. ಸುಂದರ ರೂಪಿಯೂ, ಸ್ತ್ರೀಯರ ಚಿತ್ತವನ್ನಾಕರ್ಷಿಸುವ ದೇಹವುಳ್ಳವನೂ, ಮಹಾಭೋಗಗಳನ್ನು ಪಡೆದವನೂ ಆಗುವನು.

೫೫. ವಾನಪ್ರಸ್ಥಾಶ್ರಮದ ನಿಯಮಗಳನ್ನಾಚರಿಸುತ್ತ ವನದಲ್ಲಿಯೂ ಕೃಷ್ಟಪಚ್ಯಗಳನ್ನು ತ್ಯಾಗಮಾಡಿ ತರಗೆಲೆಗಳನ್ನೊ, ಫಲಗಳನ್ನೊ, ಪುಷ್ಪಗಳನ್ನೊ, ಕೇವಲ ಜಲವನ್ನೋ ಸೇವಿಸುತ್ತಿರುವನು.

೫೬. ಧಾನ್ಯದ ಕಾಳುಗಳನ್ನಾರಿಸುತ್ತಲೊ, ಕಲ್ಲಿನಿಂದ ಕುಟ್ಟಿ ಭತ್ತವನ್ನು ಹೊಟ್ಟು ತೆಗೆದೊ, ಹಲ್ಲುಗಳಲ್ಲಿಯೇ ಅಗಿದು ಹೊಟ್ಟನ್ನುಗುಳಿಯೊ ಯಾವ ಬಗೆಯಿಂದಲೊ ಆಹಾರವನ್ನು ದೇಹಧಾರಣಮಾತ್ರಕ್ಕಾಗಿ ತೆಗೆದುಕೊಳ್ಳುತ್ತ ಹರಿದ ನಾರುಡೆಯನ್ನು ಮಾತ್ರ ಧರಿಸಿರುವನು.

೫೭. ತ್ರಿಸಂಧ್ಯೆಗಳಲ್ಲಿಯೂ ಸ್ನಾನವನ್ನು ಮಾಡುವನು. ಕೂದಲನ್ನು ಸಿಕ್ಕುಬಿಡಿಸುವುದಿಲ್ಲ. ದಂಡವನ್ನು ಪರಿಗ್ರಹಿಸಿರುವನು. ಶಿಶಿರಋತುವಿನಲ್ಲಿ ಜಲವಾಸವನ್ನೂ, ಗ್ರೀಷ್ಮದಲ್ಲಿ ಪಂಚತಪವನ್ನೂ ವರ್ಷಾಕಾಲದಲ್ಲಿ ಆಕಾಶವಸನನೂ ಆಗಿರುವನು.

ಕೀಟಕಂಟಕಪಾಷಾಣಭೂಮ್ಯಾಂ ತು ಶಯನಂ ತಥಾ ।
ಸ್ಥಾನಂ ವೀರಾಸನರತಃ ಸಂವಿಭಾಗೀ ದೃಢವ್ರತಃ ॥ ೫೮ ॥
ಅರಣ್ಯೌಷಧಿಭೋಕ್ತಾ ಚ ಸರ್ವಭೂತಾಽಭಯಪ್ರದಃ ।
ನಿತ್ಯಂ ಧರ್ಮಪರೋ ಮೌನೀ ಜಿತಕ್ರೋಧೋ ಜಿತೇಂದ್ರಿಯಃ ॥ ೫೯ ॥
ರುದ್ರಭಕ್ತಃ ಕ್ಷೇತ್ರವಾಸೀ ಮಹಾಕಾಲವನೇ ಮುನಿಃ ।
ಸರ್ವಸಂಗಪರಿತ್ಯಾಗೀ ಸ್ವಾರಾಮೋ ವಿಗತಸ್ಪೃಹಃ ॥ ೬೦ ॥
ಯಶ್ಚಾಽತ್ರ ವಸತೇ ವ್ಯಾಸ ಶೃಣು ತಸ್ಯ ಹಿ ಯಾ ಗತಿಃ ।
ತರುಣಾರ್ಕಪ್ರದೀಪ್ತೇನ ವೇದಿಕಾಸ್ತಂಭಶೋಭಿನಾ ॥ ೬೧ ॥
ರುದ್ರಭಕ್ತೋ ವಿಮಾನೇನ ಯಾತಿ ಕಾಮಪ್ರಚಾರಿಣಾ ।
ವಿರಾಜಮಾನೋ ನಭಸಿ ದ್ವಿತೀಯ ಇವ ಚಂದ್ರಮಾಃ ॥ ೬೨ ॥
ಗೀತವಾದಿತ್ರಶಬ್ದೇನ ಸಂವೃತೋಽಪ್ಸರಸಾಂ ಗಣೈಃ ।
ವರ್ಷಕೋಟಿಶತಂ ಸಾಗ್ರಂ ರುದ್ರಲೋಕೇ ಮಹೀಯತೇ ॥ ೬೩ ॥

---

೫೮. ಕ್ರಿಮಿಕೀಟಗಳು, ಮುಳ್ಳುಗಳು, ಕಲ್ಲುಗಳಿಂದ ಕೂಡಿದ ಭೂಮಿಯಲ್ಲಿ ಮಲಗುವನು. ಅಲ್ಲಿಯೇ ವಾಸಮಾಡುವನು. ವೀರಾಸನಾಸೀನನಾಗಿರುವನು. ನಿರ್ವಂಚನೆಯಿಂದ ತನ್ನ ಸರ್ವಸ್ವವನ್ನೂ ಇತರರೊಡನೆ ಹಂಚಿಕೊಳ್ಳುವನು. ವ್ರತನಿಯಮಗಳನ್ನು ಹಟದಿಂದ ಸಾಧಿಸುವನು.

೫೯. ಅರಣ್ಯದಲ್ಲಿ ಸಿಕ್ಕುವ ಶಾಕಗಳನ್ನೇ ಭೋಜನಮಾಡುವನು. ಸಕಲ ಭೂತಗಳಿಗೂ ಅಭಯವನ್ನು ಕೊಡುವನು. ನಿತ್ಯವೂ ಧರ್ಮಪರನೂ, ಮೌನವನ್ನು ಧರಿಸಿದವನೂ, ಕಾಮಕ್ರೋಧಗಳನ್ನು ಗೆದ್ದವನೂ, ಸಂಯತೇಂದ್ರಿಯನೂ ಆಗಿರುವನು.

೬೦. ರುದ್ರಭಕ್ತನಾಗಿರುವನು. ಕ್ಷೇತ್ರವಾಸವನ್ನು ಮಾಡುವನು. ಮಹಾಕಾಲವನದಲ್ಲಿ ವಾಸಮಾಡುವ ಮುನಿಯಾಗಿ ಸರ್ವಸಂಗವನ್ನೂ ಪರಿತ್ಯಜಿಸಿ ಆತ್ಮಾರಾಮನೂ, ಆಶಾರಹಿತನೂ ಆಗಿರುವನು. ಎಲೈ ವ್ಯಾಸನೆ! ಇಂತು ವಾಸಮಾಡುವ ಮನುಷ್ಯೋತ್ತಮನಿಗೆ ಲಭಿಸುವ ಗತಿಯೇನೆಂಬುದನ್ನು ಕೇಳು.

೬೧. ಎಳೆನೇಸರಿನಂತೆ ಹೊಳೆಯುವುದೂ, ಜಗುಲಿ, ಸ್ತಂಭಗಳಿಂದ ಕೂಡಿದುದೂ, ಯಥೇಚ್ಛವಾಗಿ ಸಂಚರಿಸುವುದೂ ಆದ ವಿಮಾನದಲ್ಲಿ ಆ ರುದ್ರಭಕ್ತನು ಸಂಚರಿಸುವನು.

೬೨–೬೩. ಆಕಾಶದಲ್ಲಿ ಎರಡನೆಯ ಚಂದ್ರನಂತೆ ವಿರಾಜಮಾನನಾಗಿ ಸಂಗೀತ ಮತ್ತು ವಾದ್ಯಗಳ ಮಂಜುಳಧ್ವನಿಗಳನ್ನು ಕೇಳುತ್ತ ಅನೇಕ ಅಪ್ಸರಸೆಯರ ಸಮೂಹಗಳಿಂದ ಪರಿವೃತನಾಗಿರುವನು. ಒಂದುನೂರು ಕೋಟಿ ವರ್ಷಗಳು ಸಂಪೂರ್ಣವಾಗಿ ರುದ್ರಲೋಕದಲ್ಲಿ ವೈಭವದಿಂದಿರುವನು. ರುದ್ರಲೋಕದಿಂದ ಚ್ಯುತನಾದ ಮೇಲೆ ಅವನು ವಿಷ್ಣುಲೋಕದಲ್ಲಿ ವಾಸಮಾಡುವನು.

ರುದ್ರಲೋಕಾಚ್ಚ್ಯುತಶ್ಚಾಽಪಿ ವಿಷ್ಣುಲೋಕೇ ಮಹೀಯತೇ ।
ವಿಷ್ಣುಲೋಕಾತ್ಪರಿಭ್ರಷ್ಟೋ ಬ್ರಹ್ಮಲೋಕಂ ಸ ಗಚ್ಛತಿ ॥ ೬೪ ॥
ತಸ್ಮಾದಪಿ ಚ್ಯುತಃ ಸ್ಥಾನಾದ್ದ್ವೀಪೇಷು ಸ ಹಿ ಜಾಯತೇ ।
ಸ್ವರ್ಗೇಷು ಚ ತಥಾಽನ್ಯೇಷು ಭೋಗಾನ್ಭುಂಕ್ತೇ ಯಥೇಚ್ಛಯಾ ॥ ೬೫ ॥
ಭುಕ್ತ್ವೈಶ್ವರ್ಯೋ ನರಸ್ತೇಷು ಮರ್ತ್ಯಾಽಮರ್ತ್ಯೇಷು ಜಾಯತೇ ।
ರಾಜಾ ವಾ ರಾಜತುಲ್ಯೋ ವಾ ಜಾಯತೇ ಧನವಾನ್ಸುಖೀ ।
ಸುರೂಪಃ ಸುಭಗಃ ಕಾಂತಃ ಕೀರ್ತಿಮಾನ್ರುದ್ರಭಾವಿತಃ ॥ ೬೬ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವಾ ಕ್ಷೇತ್ರವಾಸಿನಃ ।
ಸ್ವಧರ್ಮನಿರತಾ ವ್ಯಾಸ ಸ್ವಭೃತ್ಯಾ ಚಾರಜೀವಿನಃ ॥ ೬೭ ॥
ಸರ್ವಾತ್ಮನಾ ರುದ್ರಭಕ್ತಾ ಭೂತಾಽನುಗ್ರಹಕಾರಿಣಃ ।
ಮಹಾಕಾಲವನೇ ಕ್ಷೇತ್ರೇ ಯೇ ವಸಂತಿ ಮುಮುಕ್ಷವಃ ॥ ೬೮ ॥
ಮೃತಾಸ್ತೇ ರುದ್ರಭವನಂ ವಿಮಾನೈರ್ಯಾಂತಿ ಶೋಭನೈಃ ।
ಅಪ್ಸರೋಗಣಸಂಯುಕ್ತೈಃ ಕಾಮಗೈಃ ಕಾಮರೂಪಿಭಿಃ ॥ ೬೯ ॥

---

೬೪–೬೫. ವಿಷ್ಣುಲೋಕದಿಂದಲೂ ಕೆಳಕ್ಕೆ ಬಂದರೆ ಬ್ರಹ್ಮಲೋಕವನ್ನು ಸೇರುವನು. ಆ ಸ್ಥಾನದಿಂದಲೂ ಚ್ಯುತನಾಗುವನು, ಭೂಲೋಕದಲ್ಲಿ ಜಂಬೂ, ಪ್ಲಕ್ಷಾದಿ ದ್ವೀಪಗಳಲ್ಲಿ ಹುಟ್ಟುವನು. ಸ್ವರ್ಗಲೋಕಗಳಲ್ಲಿಯೂ ಇತರ ಭೋಗ ಭೂಮಿಗಳಲ್ಲಿಯೂ ಸ್ವೇಚ್ಛೆಯಿಂದ ಅನೇಕಭೋಗಗಳನ್ನು ಅನುಭವಿಸುವನು. ಆ ಭೂಮಿಗಳಲ್ಲಿ ಐಶ್ವರ್ಯಗಳನ್ನು ಅನುಭವಿಸಿ ಪುಣ್ಯಕ್ಷಯವಾಗಲು ಮರ್ತ್ಯ ಪಾತಾಳಾದಿ ಲೋಕಗಳಲ್ಲಿ ಜನಿಸುವನು.

೬೬. ಅಂತಹ ಮಾನವನು ರಾಜನೊ, ರಾಜಸಮಾನನೊ ಆಗಿ ಧನಾಢ್ಯನೂ, ಸುಖಿಯೂ, ಸುಂದರನೂ, ಹೃಷ್ಟಾಂಗನೂ, ತೇಜೋವಂತನೂ, ಕೀರ್ತಿ ವಂತನೂ, ರುದ್ರನಿಗೆ ಪರಮಪ್ರಿಯನೂ ಆಗಿರುವನು.

೬೭. ಎಲೈ ವ್ಯಾಸನೆ! ಈ ಕ್ಷೇತ್ರವಾಸವನ್ನುಮಾಡುವ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರಲ್ಲಿ ಯಾರೇ ಆಗಲಿ, ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳಲ್ಲಿ ನಿರತರಾಗಿರಬೇಕು. ತಮ್ಮ ದೇಹಧಾರಣೆಗೆ ಸಹಜವಾದ ವೃತ್ತಿಯಿಂದಲೇ ಜೀವನವನ್ನು ನಡೆಸಬೇಕು.

೬೮. ಸರ್ವಭಾವದಿಂದಲೂ ರುದ್ರನಲ್ಲಿ ಭಕ್ತಿಯನ್ನು ಮಾಡುತ್ತ ಸಕಲ ಭೂತಗಳಲ್ಲಿಯೂ ಅನುಗ್ರಹವುಳ್ಳವರಾಗಿ ಮುಮುಕ್ಷುಗಳಾದವರು ಮಹಾ ಕಾಲವನಕ್ಷೇತ್ರದಲ್ಲಿ ವಾಸಮಾಡಬೇಕು.

೬೯. ಅಲ್ಲಿಯೇ ಅವರು ದೇಹಗಳನ್ನು ಬಿಟ್ಟು ಮಂಗಳಕರಗಳೂ, ಅಪ್ಸರೋ ಗಣಸಹಿತಗಳೂ, ಸ್ವೇಚ್ಛಾಗಾಮಿಗಳೂ, ಕಾಮರೂಪಧರಗಳೂ ಆದ ವಿಮಾನ ಗಳಲ್ಲಿ ಕುಳಿತು ರುದ್ರಲೋಕಕ್ಕೆ ಹೋಗುವರು.

ಅಥವಾ ಸಂವಿದಗ್ನೌ ಚ ಶರೀರಂ ವಿಜುಹೋತಿ ಯಃ ।
ರುದ್ರಾಧ್ಯಾಯೀ ಮಹಾಸತ್ತ್ವಃ ಸ ರುದ್ರಭವನೇ ವಸೇತ್ ॥ ೭೦ ॥
ರುದ್ರಲೋಕೋಽಕ್ಷಯಸ್ತೇಷಾಂ ಶಾಶ್ವತೋ ಗುಹ್ಯಕೈಃ ಸಹ ।
ಸರ್ವಲೋಕೋತ್ತಮೋ ರಮ್ಯೋ ಭವತೀಷ್ಟಾರ್ಥಸಾಧಕಃ ॥ ೭೧ ॥
ಯೇ ತ್ಯಜಂತಿ ಮಹಾಕಾಲೇ ಪ್ರಾಣಾನನಶನೈರ್ನರಾಃ ।
ತೇಷಾಮಪ್ಯಕ್ಷಯೋ ವ್ಯಾಸ ರುದ್ರಲೋಕೋ ಮಹಾತ್ಮನಾಂ ॥ ೭೨ ॥
ಸಾಂಖ್ಯಾಃ ಸ್ತುವಂತಿ ತೇ ರುದ್ರಂ ಸರ್ವದುಃಖವಿವರ್ಜಿತಾಃ ।
ಸರ್ವಾಽಮರಯುತಂ ದೇವಂ ನಂದಿದೇವಗಣೈರ್ಯುತಂ ।
ಅನಾಶಕಮೃತಾಃ ಶೂದ್ರಾ ಮಹಾಕಾಲವನೇ ನರಾಃ ॥ ೭೩ ॥
ಸಿಂಹಯುಕ್ತೈಸ್ತು ತೇ ಯಾಂತಿ ವಿಮಾನೈರರ್ಕಸನ್ನಿಭೈಃ ॥ ೭೪ ॥
ನಾನಾವರ್ಣಸುವರ್ಣಾಢ್ಯೈರ್ಹೃಷ್ಟಗಂಧಾಽಧಿವಾಸಿತೈಃ ।
ಅನೌಪಮ್ಯಗುಣೈ ರಮ್ಯೈರಪ್ಸರೋಗೀತವಾದಿಭಿಃ ॥ ೭೫ ॥

---

೭೦. ಅಲ್ಲದೆ ರುದ್ರಾಧ್ಯಾಯವನ್ನು ಜಪಿಸುವವನೂ, ಮಹಾಪರಾಕ್ರಮಿಯೂ ಆದ ಯಾವನು ಜ್ಞಾನಾಗ್ನಿಯಲ್ಲಿ ತನ್ನ ದೇಹವನ್ನು ಹೋಮಮಾಡಿರುವನೊ, ಅವನೂ ಕೈಲಾಸದಲ್ಲಿಯೇ ವಾಸಮಾಡುವನು.

೭೧. ಇವರೆಲ್ಲರಿಗೂ ಗುಹ್ಯಕರೊಡನೆ ನಾಶರಹಿತವೂ, ಏಕಪ್ರಕಾರವೂ, ಸರ್ವೋತ್ತಮವೂ, ಮನೋಹರವೂ, ಇಷ್ಟಾರ್ಥಗಳನ್ನೀಯುವುದೂ ಆದ ರುದ್ರ ಲೋಕವು ಲಭಿಸುವುದು.

೭೨. ಯಾವ ಮನುಜರು ನಿರಾಹಾರವ್ರತದಿಂದ ಮಹಾಕಾಲವನದಲ್ಲಿ ಪ್ರಾಣಗಳನ್ನು ತ್ಯಜಿಸುವರೊ, ಆ ಮಹಾತ್ಮರಿಗೂ ಅನಂತವಾದ ರುದ್ರಲೋಕ ವಾಸವು ಲಭಿಸುವುದು.

೭೩–೭೪. ಸಾಂಖ್ಯಮಾರ್ಗವನ್ನನುಸರಿಸಿದವರು ತಮ್ಮ ಸಕಲ ದುಃಖ ಗಳನ್ನೂ ಕಳೆದುಕೊಂಡು ಸಕಲದೇವತಾಪರಿವಾರಿತನೂ, ದೇವೋತ್ತಮನೂ, ನಂದಿಯೇ ಮೊದಲಾದಗಣಗಳಿಂದ ಕೂಡಿದವನೂ ಆದ ರುದ್ರನನ್ನು ಸ್ತೋತ್ರ ಮಾಡುವರು. ಮಹಾಕಾಲವನದಲ್ಲಿ ಸಹಜಮರಣವನ್ನು ಹೊಂದಿದ ಶೂದ್ರರು ಸಿಂಹಗಳನ್ನು ಹೂಡಿರುವ ಸೂರ್ಯ ಸನ್ನಿಭಗಳಾದ ವಿಮಾನಗಳಲ್ಲಿ ಸಂಚರಿ ಸುವರು.

೭೫. ಆ ವಿಮಾನಗಳು ಹಲವು ಬಣ್ಣಗಳಿಂದ ಹೊಳೆದು ಚಿನ್ನದಿಂದಲೂ, ಸುಗಂಧದ್ರವ್ಯಗಳ ಸುವಾಸನೆಗಳಿಂದಲೂ, ಸಾಟಿಯಿಲ್ಲದ ಅನೇಕಾನುಕೂಲ ಗಳಿಂದಲೂ, ಗೀತಗಳನ್ನು ಹಾಡುತ್ತಿರುವ ಅಪ್ಸರಸೆಯರಿಂದಲೂ ಕೂಡಿರುವುವು.

ಪತಾಕಾಧ್ವಜವಿನ್ಯಸ್ತೈರ್ನಾನಾಘಂಟಾನಿನಾದಿತೈಃ ।
ಸುಪ್ರಭೈರ್ಗುಣಸಂಪನ್ನೈರ್ಮಯೂಖವರಚಾರಿಭಿಃ ॥ ೭೬ ॥
ರುದ್ರಲೋಕೇ ನರಾ ಧೀರಾಃ ಸರ್ವೇಽಚಾಽನಶನೈರ್ಮೃತಾಃ ।
ತತ್ರೋಷಿತ್ವಾ ಚಿರಂ ಕಾಲಂ ಭೋಗಾನ್ಭುಕ್ತ್ವಾ ಯಥೇಪ್ಸಿತಾನ್ ।
ಧನೀ ವಿಪ್ರಕುಲೇ ಭೋಗೀ ಜಾಯತೇ ಮರ್ತ್ಯಮಾಗತಃ ॥ ೭೭ ॥
ಕರೀಷಂ ಸಾಧಯೇದ್ಯಸ್ತು ಮಹಾಕಾಲವನೇ ನರಃ ।
ಸರ್ವಭೋಗವಿನಿರ್ಮುಕ್ತೋ ರುದ್ರಲೋಕಂ ಸ ಗಚ್ಛತಿ ॥ ೭೮ ॥
ರುದ್ರಲೋಕೇ ವಸೇತ್ತಾವದ್ಯಾವತ್ಕಲ್ಪಕ್ಷಯೋ ಭವೇತ್ ॥ ೭೯ ॥
ತತ್ರ ಭುಕ್ತ್ವಾ ಮಹಾಭೋಗಾನಿಹ ಜಾತೋ ಮಹೀಪತಿಃ ।
ಪೃಥಿವ್ಯಾಃ ಸಕಲಾಯಾಶ್ಚ ರೂಪವಾನ್ ಸುಭಗೋ ಭವೇತ್ ॥ ೮೦ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಹಾತ್ಮ್ಯೇ "ಮಹಾಕಾಲವನವಾಸವಿಧಿವರ್ಣನಂ"ನಾಮ ಸಪ್ತಮೋಽಧ್ಯಾಯಃ**

---

೭೬. ಪತಾಕೆಗಳೂ, ಧ್ವಜಗಳೂ ಕಟ್ಟಲ್ಪಟ್ಟಿರುವುವು. ಅಸಂಖ್ಯಾತ ಘಂಟೆಗಳು ಧ್ವನಿಗೈಯುತ್ತಿರುವುವು. ತೇಜೋಮಯಗಳಾಗಿರುವುವು. ನವಿಲುಗಳೇ ಅವುಗಳನ್ನು ಹೊತ್ತುಕೊಂಡು ತಿರುಗುತ್ತಿರುವುವು.

೭೭. ಜಿತೇಂದ್ರಿಯರಾಗಿ ಉಪವಾಸವ್ರತದಿಂದ ಮೃತರಾದವರೆಲ್ಲರೂ ರುದ್ರಲೋಕವನ್ನು ಸೇರುವರು. ಅಲ್ಲಿ ಬಹುಕಾಲದವರೆಗೂ ವಾಸಮಾಡಿ ಮನಸ್ಸಿನಲ್ಲಿ ಅಪೇಕ್ಷಿಸಿದ ಭೋಗಗಳೆಲ್ಲವನ್ನೂ ಅನುಭವಿಸಿದ ಮೇಲೆ ಪ್ರತಿಯೊಬ್ಬನೂ ಮರ್ತ್ಯಲೋಕಕ್ಕೆ ಬಂದು ಧನವಂತನೂ, ಭೋಗಯುಕ್ತನೂ ಆಗಿ ಉತ್ತಮವಾದ ಬ್ರಾಹ್ಮಣಕುಲದಲ್ಲಿ ಹುಟ್ಟುವನು.

೭೮. ಯಾವ ನರನು ಮಹಾಕಾಲವನದಲ್ಲಿ ಪಂಚಗವ್ಯವನ್ನು ಮಾತ್ರ ಸೇವಿಸುತ್ತ ಸಾಧನೆಯನ್ನು ಮಾಡುವನೊ, ಸಮಸ್ತ ಭೋಗಸಾಮಗ್ರಿಗಳನ್ನೂ ದೂರಮಾಡುವನೊ, ಅವನೂ ರುದ್ರಲೋಕಕ್ಕೆ ಹೋಗುವನು.

೭೯–೮೦. ಅವನು ಮಹಾಕಲ್ಪವು ಕಳೆದು ಪ್ರಳಯವಾಗುವವರೆಗೂ ರುದ್ರಲೋಕದಲ್ಲಿಯೇ ವಾಸಮಾಡುತ್ತಿರುವನು. ಅಲ್ಲಿ ಮಹಾಭೋಗಗಳನ್ನು ಅನುಭವಿಸಿ ಭೂಲೋಕಕ್ಕಿಳಿಯಲು ಸಕಲಭೂಮಿಗೂ ಸಾರ್ವಭೌಮನೂ, ಸುಂದರದೇಹವುಳ್ಳವನೂ, ಸರ್ವೈಶ್ವರ್ಯಸಮನ್ವಿತನೂ ಆಗಿ ಬಾಳುವನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಮಹಾಕಾಲವನವಾಸವಿಧಿವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

## ಅಪ್ಸರಃಕುಂಡಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

ಆಚಾರಃ ಪರಮೋ ಧರ್ಮಃ ಸರ್ವಧರ್ಮಪರಾಯಣಃ ।
ಸ್ವಧರ್ಮನಿರತಾಶ್ಚೈವ ಜಿತಕ್ರೋಧಾ ಜಿತೇಂದ್ರಿಯಾಃ ॥ ೧ ॥
ರುದ್ರಲೋಕಂ ವ್ರಜಂತೀಹ ನಾಽತ್ರ ಚಿತ್ರಾ ಮತಿರ್ಮಮ ।
ಅಸಂಶಯಂ ಚ ಗಚ್ಛಂತಿ ಲೋಕಾನನ್ಯಾಂಛಶಿಪ್ರಭೈಃ ॥ ೨ ॥
ವಿನಾಽಪಿ ಕ್ಷೇತ್ರವಾಸೇನ ತಥೈವ ನಿಯಮೇನ ಚ ।
ಸ್ತ್ರಿಯೋ ಮ್ಲೇಚ್ಛಾಶ್ಚ ಶೂದ್ರಾಶ್ಚ ಪಶವಃ ಪಕ್ಷಿಣೋ ಮೃಗಾಃ ॥ ೩ ॥
ಮೂಕಾ ಜಡಾಂಧಬಧಿರಾಸ್ತಪೋನಿಯಮವರ್ಜಿತಾಃ ।
ಏಷಾಂ ತು ಕಾ ಗತಿಶ್ಚೇತ್ತೇ ಮಹಾಕಾಲವನೇ ಮೃತಾಃ ॥ ೪ ॥

ಸನತ್ಕುಮಾರ ಉವಾಚ :—

ಸ್ತ್ರಿಯೋ ಮ್ಲೇಚ್ಛಾಶ್ಚ ಮೂಢಾಶ್ಚ ಪಶವಃ ಪಕ್ಷಿಣೋ ಮೃಗಾಃ ।
ಕಾಲೇನೈವ ಮೃತಾ ವ್ಯಾಸ ರುದ್ರಲೋಕಂ ವ್ರಜಂತಿ ತೇ ॥ ೫ ॥

---

### ಕನ್ನಡದ ಅನುವಾದ

#### ಅಪ್ಸರಃಕುಂಡಮಾಹಾತ್ಮ್ಯವರ್ಣನ

೧–೨. ವ್ಯಾಸನು ಹೇಳುತ್ತಾನೆ:—ಸಕಲಧರ್ಮಗಳಿಗೂ ಆಧಾರಸ್ತಂಭದಂತಿರುವ ಸದಾಚಾರವೇ ಪ್ರಥಮಕರ್ತವ್ಯವು. ಇಂತಹ ಸ್ವಧರ್ಮದಲ್ಲಿ ನಿರತರಾದವರೂ, ಕೋಪವನ್ನು ಗೆದ್ದವರೂ, ಸಂಯತೇಂದ್ರಿಯರೂ, ರುದ್ರಲೋಕವನ್ನು ಸೇರುವರೆಂಬುದರಲ್ಲಿ ನನ್ನ ಮನಸ್ಸಿಗೆ ಯಾವ ವಿಶೇಷವೂ ತೋರುವುದಿಲ್ಲ. ಚಂದ್ರಸಂಕಾಶಗಳಾದ ವಿಮಾನಗಳಿಂದ ಅವರು ಖಂಡಿತವಾಗಿಯೂ ಇತರ ಲೋಕಗಳಿಗೂ ಹೋಗುವರು.

೩–೪. ಆದರೆ ಕ್ಷೇತ್ರವಾಸವನ್ನೂ ಮಾಡಲಾರದ, ನಿಯಮಗಳನ್ನೂ ಪಾಲಿಸಲಾರದ ಸ್ತ್ರೀಯರು, ಮ್ಲೇಚ್ಛರು, ಶೂದ್ರರು, ಪಶುಗಳು, ಪಕ್ಷಿಗಳು, ಮೃಗಗಳು, ಮನುಷ್ಯರಲ್ಲಿಯೂ ಮೂಗರು, ಜಡರು, ಕುರುಡರು, ಕಿವುಡರು ಮುಂತಾದ ತಪೋನಿಯಮಗಳನ್ನು ಪಾಲಿಸಲು ಅನಧಿಕಾರಿಗಳಾದ ಅನೇಕರಿರುವರಲ್ಲವೆ. ಇಂತಹವರೂ ಪುಣ್ಯವಶದಿಂದ ಮಹಾಕಾಲವನದಲ್ಲಿ ಮರಣವನ್ನು ಹೊಂದಿದರೆ ಅವರಿಗೆ ಯಾವ ಗತಿಯು ದೊರಕುವುದು ?

೫. ಸನತ್ಕುಮಾರನು ಹೇಳುತ್ತಾನೆ: -ವ್ಯಾಸಮುನಿಯೆ ! ಸ್ತ್ರೀಯರಾಗಲಿ,

ಶರೀರೈರ್ದಿವ್ಯರೂಪೈಶ್ಚ ಸರ್ವಭೋಗಸಮನ್ವಿತಾಃ ।
ರಮಂತೇ ಶಂಭುನಾ ಸಾರ್ಧಂ ಸ್ಮಶಾನೇ ಪ್ರೇತಸಂಕುಲೇ ॥ ೬ ॥
ನಿರ್ಭರ್ತ್ಸಿತಾ ಪುರಾ ದೇವೀ ಕಾಲೀತಿ ಪಾರ್ವತೀತಿ ಚ ।
ತದಾ ಸಾ ಕುಪಿತಾ ದೇವೀ ಕಟಿಕೇ ಶಂಕರಂ ಪ್ರತಿ ॥ ೭ ॥
ಏವಂ ಹಿ ಕಲಹೋ ಜಾತಃ ಶಿವಗೌರ್ಯೋರ್ಹಿ ಯತ್ರ ತು ।
ದೇವಸ್ತತ್ರ ಸಮುದ್ಭೂತೋ ನಾಮ್ನಾ ಕಲಕಲೇಶ್ವರಃ ॥ ೮ ॥
ಕೃತಮಗ್ರೇ ತದಾ ಕುಂಡಂ ನಾಮ್ನಾ ಕಲಹನಾಶನಂ ।
ಸ್ನಾನೇ ತತ್ರ ಕೃತೇ ವ್ಯಾಸ ಜಾತಾಃಕಲಹಿನೀ ಪ್ರಿಯಾ ॥ ೯ ॥
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಪೂಜಯಿತ್ವಾ ಮಹೇಶ್ವರಂ ।
ಉಪೋಷ್ಯ ರಜನೀಮೇಕಾಂ ಕುಲಾನಾಂ ತಾರಯೇಚ್ಛತಂ ॥ ೧೦ ॥
ತತ್ರ ಯಚ್ಛತಿ ಯೋ ದಾನಂ ತ್ರುಟಿಮಾತ್ರಂ ಚ ಚಂದನಂ ।
ಆತ್ಮನಾ ತಾರಿತಾಸ್ತೇನ ದಶಪೂರ್ವೇ ದಶಾಃಪರೇ ॥ ೧೧ ॥

---

ಮ್ಲೇಚ್ಛರಾಗಲಿ, ಮೂಢರಾಗಲಿ, ಪಶುಪಕ್ಷಿಮೃಗಗಳಾಗಲಿ ಕಾಲಮೃತ್ಯುವನ್ನು ಕ್ಷೇತ್ರದಲ್ಲಿ ಪಡೆದರೆ ಅವರೂ ರುದ್ರಲೋಕವನ್ನು ಸೇರುವರು.

೬. ಪರಮಸುಂದರದೇಹಗಳನ್ನು ಪಡೆದು ಸಕಲಭೋಗಭಾಗ್ಯಗಳಿಂದ ಕೂಡಿದವರಾಗಿ ಪ್ರೇತಭರಿತವಾದ ಈ ಸ್ಮಶಾನಕ್ಷೇತ್ರದಲ್ಲಿ ಮಹೇಶ್ವರನೊಡನೆಯೇ ವಿಹರಿಸುತ್ತಿರುವರು.

೭. ಪೂರ್ವದಲ್ಲಿ ಶಿವಗೌರಿಯರು ಹಿಮಾಲಯದ ತಪ್ಪಲುಗಳಲ್ಲಿ ಒಮ್ಮೆ ಸಂಚರಿಸುತ್ತಿರಲು ಶಿವನು ಮಡದಿಯನ್ನು ಕಾಳಿಯೆಂದೂ ಪರ್ವತಪುತ್ರಿಯೆಂದೂ ಹಾಸ್ಯಮಾಡಿದನು. ಅದರಿಂದ ಕೋಪಗೊಂಡು ದೇವಿಯು ಶಂಕರನನ್ನಗಲಿದಳು.

೮. ಇಂತು ಶಿವಗೌರಿಯರಿಗೆ ಕಲಹವೆಲ್ಲಿ ಸಂಭವಿಸಿತೊ, ಅಲ್ಲಿಯೇ ಕಲಕಲೇಶ್ವರನೆಂಬ ಹೆಸರಿನ ಲಿಂಗವೊಂದುದ್ಭವಿಸಿತು.

೯. ಅದರ ಸಮ್ಮುಖದಲ್ಲಿಯೇ ಮಹಾದೇವನು ಕಲಹನಾಶನವೆಂಬ ಕುಂಡವನ್ನು ನಿರ್ಮಿಸಿದನು. ಎಲೈ ವ್ಯಾಸನೆ! ಅದರಲ್ಲಿ ಸ್ನಾನವನ್ನು ಮಾಡುವುದರಿಂದ ಪಾರ್ವತಿಯು ಕಲಹವನ್ನು ಮರೆತು ಮತ್ತೆ ಶಂಕರನಿಗೆ ಪ್ರಿಯೆಯಾದಳು.

೧೦. ಆ ತೀರ್ಥೋತ್ತಮದಲ್ಲಿ ನರನು ಸ್ನಾನಮಾಡಿ ಕಲಕಲೇಶ್ವರನನ್ನು ಪೂಜಿಸಿ ಒಂದು ರಾತ್ರಿಯ ಉಪವಾಸವನ್ನು ಮಾಡಲು ನೂರು ಕುಲದವರನ್ನುದ್ಧರಿಸುವನು.

೧೧. ಅಲ್ಲಿ ಯಾವನು ಅಣುಮಾತ್ರದಷ್ಟು ಚಂದನವನ್ನಾದರೂ ದಾನ ಮಾಡುವನೊ, ಅವನು ತನ್ನ ಹಿಂದೆಯೂ, ಮುಂದೆಯೂ ಹತ್ತು ತಲೆಯವರನ್ನು ಸಂಸಾರದಿಂದ ಕಡೆಹಾಯಿಸುವನು.

ಭೂಮಿದಾನಂ ಚ ಯಸ್ತತ್ರ ಪ್ರದಾಸ್ಯತಿ ನರೋ ಮುನೇ ।
ಅಪಿ ಗೋಚರ್ಮಮಾತ್ರೇಣ ಸರ್ವಭೂಮ್ಯಧಿಪೋ ಭವೇತ್ ॥ ೧೨ ॥
ಗಾಮೇಕಾಂ ರಕ್ತಿಕಾಮೇಕಾಂ ಭೂಮೇರಪ್ಯೇಕಮಂಗುಲಂ ।
ಯಃ ಪ್ರದಾಸ್ಯತಿ ಭಕ್ತ್ಯಾ ಹಿ ಸ ವೈ ರಾಜಾ ಭವಿಷ್ಯತಿ ॥ ೧೩ ॥
ಧೇನುಮಶ್ವಾಂಸ್ತಿಲಾನ್ವಸ್ತ್ರಂ ಭಾಜನಂ ತಾಮ್ರದೋಹನಂ ।
ಉಪಾನಹಶ್ಚ ಛತ್ರಂ ಚ ತಥಾ ಚ ಶ್ರೇಷ್ಠಪಾದುಕೇ ॥ ೧೪ ॥
ಯೇ ಪ್ರದಾಸ್ಯಂತಿ ವಿಪ್ರೇಭ್ಯಸ್ತೇಷಾಂ ಲೋಕಾಃ ಸದಾಽಕ್ಷಯಾಃ ।
ತಸ್ಯ ದಕ್ಷಿಣಪಾರ್ಶ್ವೇ ತು ಪೃಷ್ಠೇ ಮಾತ್ರಾಖ್ಯದೇವತಾಃ ॥ ೧೫ ॥
ಸಾ ತತ್ರ ಸರ್ವಲೋಕಾನಾಂ ದೇವೀ ದುರಿತಹಾರಿಣೀ ।
ಸರ್ವ ತೀರ್ಥಂ ತು ವಿಜ್ಞೇಯಂ ಮಣಿಕರ್ಣಿಕಮುತ್ತಮಂ ॥ ೧೬ ॥
ತಸ್ಮಿನ್ಸ್ನಾತ್ವಾ ತು ಯಃ ಪಶ್ಯೇತ್ಪೃಷ್ಠಮಾತರ ಆದರಾತ್ ।
ಸ ಮುಕ್ತಃ ಸರ್ವಪಾಪೇಭ್ಯಃ ಸಿದ್ಧಿಮಾಪ್ನೋತಿ ವಾಂಛಿತಾಂ ॥ ೧೭ ॥

---

೧೨. ಮುನಿವರ್ಯನೆ! ಯಾವ ನರನು ಆ ಕ್ಷೇತ್ರದಲ್ಲಿ ಗೋಚರ್ಮದಷ್ಟು ಭೂಮಿಯನ್ನಾದರೂ ದಾನಮಾಡುವನೊ, ಅವನು ಸಮಸ್ತ ಭೂಮಂಡಲಕ್ಕೂ ಅಧಿಪತಿಯಾಗುವನು.

೧೩. ಆ ತೀರ್ಥದಲ್ಲಿ ಯಾವನು ಭಕ್ತಿಯಿಂದ ಒಂದು ಹಸುವನ್ನಾಗಲಿ, ಗುಲಗಂಜಿಯನ್ನೇ ಆಗಲಿ, ಒಂದಂಗುಲದ ಭೂಮಿಯನ್ನೇ ಆಗಲಿ ದಾನವಾಗಿ ಕೊಡುವನೊ, ಅವನು ರಾಜನಾಗಿ ಜನಿಸುವನು.

೧೪–೧೫. ಆಕಳು, ಕುದುರೆ, ಎಳ್ಳು, ವಸ್ತ್ರ, ಪಾತ್ರೆ, ತಾಮ್ರದ ತಂಬಿಗೆ, ಪಾದರಕ್ಷೆ, ಛತ್ರಿ, ಉತ್ತಮ ಪಾದುಕೆಗಳು — ಇವುಗಳನ್ನು ಬ್ರಾಹ್ಮಣರಿಗೆ ಯಾರು ದಾನಮಾಡುವರೊ, ಅವರಿಗೆ ಯಾವಾಗಲೂ ನಾಶವಿಲ್ಲದ ಉತ್ತಮಲೋಕಗಳು ಸಿಕ್ಕುವುವು. ಆ ಕಲಕಲೇಶ್ವರನಿಗೆ ಬಲಭಾಗ ದಲ್ಲಿಯೂ, ಹಿಂದುಗಡೆಯಲ್ಲಿಯೂ ಮಾತೃಕೆಯರೆಂಬ ದೇವತೆಗಳು ಪ್ರತಿಷ್ಠಿತ ರಾಗಿರುವರು.

೧೬. ಪಾರ್ವತೀದೇವಿಯೇ ಸಕಲ ಲೋಕಗಳ ಪಾತಕಗಳನ್ನು ನಾಶ ಗೊಳಿಸುತ್ತ ಅಲ್ಲಿ ನೆಲಸಿರುವಳು. ಅಲ್ಲಿಯೇ ಸಕಲತೀರ್ಥಗಳ ಸಾರವನ್ನೊಳ ಕೊಂಡ ಉತ್ತಮವಾದ ಮಣಿಕರ್ಣಿಕತೀರ್ಥವೂ ಇರುವುದು.

೧೭. ಅದರಲ್ಲಿ ಯಾವನು ಆದರದಿಂದ ಸ್ನಾನಮಾಡಿ ಹಿಂದಿರುವ ಮಾತೃಕೆಯರ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಸರ್ವಪಾತಕ ಗಳಿಂದಲೂ ಮುಕ್ತನಾಗಿ ಮನೋಭೀಷ್ಟಗಳ ಸಿದ್ಧಿಯನ್ನು ಪಡೆಯುವನು.

ತಾಸಾಂ ತು ದರ್ಶನಂ ಕೃತ್ವಾ ಮಾರ್ಗೇ ಗಮನಮಾಚರೇತ್ ।
ನ ಭಯಂ ತಸ್ಯ ಚೋರೇಭ್ಯೋ ರಕ್ಷೋಭೂತಭಯಂ ತಥಾ ॥ ೧೮ ॥
ಸ್ವದೇಶೇ ಪರದೇಶೇ ವಾ ಪರ್ವತೇಷ್ವಟವೀಷು ಚ ।
ನ ಸಮುದ್ರೇ ಭಯಂ ತಸ್ಯ ತಥಾ ವೈ ದುಷ್ಟಭಾವನಾ ॥ ೧೯ ॥
ಗ್ರಹಪೀಡಾಸು ಸರ್ವಾಸು ತಥಾ ರಾಜಭಯಾದಿಕಂ ।
ಬಸ್ತಂ ವಾ ಯದಿ ವಾ ಮೇಷಂ ಮಹಿಷಂ ಚಾಽಪಿ ಘಾತಯೇತ್ ॥ ೨೦ ॥
ದೇವೀಮುದ್ದಿಶ್ಯ ಯೋ ವಿಪ್ರ ಸೋಽಭೀಷ್ಟಫಲಮಶ್ನುತೇ ।
ಆಶ್ವಿನಸ್ಯ ಸಿತಾಷ್ಟಮ್ಯಾಮರ್ಧರಾತ್ರಿಗತೇ ನರಃ ॥ ೨೧ ॥
ಯಃ ಸ್ನಾತಿ ಪುರತೋ ದೇವ್ಯಾಃ ಸ ಸಿದ್ಧಿಂ ಲಭತೇ ಪರಾಂ ।
ಮೃತಪುತ್ರಾ ಚ ಯಾ ನಾರೀ ಕುಂಡೇ ಸ್ನಾತ್ವಾ ಸ ಭರ್ತೃಕಾ ॥ ೨೨ ॥
ಸ್ನಾತಿ ವೈ ಫಲಕುಂಭೇನ ಅಗ್ರೇ ದೇವ್ಯಾ ವಿಧಾನತಃ ।
ಸ್ನಾತ್ವಾ ನಾಽನ್ಯಮುಖಂ ಪಶ್ಯೇತ್ಕುಂಭಸ್ನಾನೇನ ವೈ ಮುನೇ ॥ ೨೩ ॥

---

೧೮. ಆ ಮಾತೃಕೆಯರ ದರ್ಶನವನ್ನು ಮಾಡಿಕೊಂಡೇ ಮಾರ್ಗದಲ್ಲಿ ಪ್ರಯಾಣವನ್ನು ಮಾಡಬೇಕು. ಅಂತಹನಿಗೆ ಕಳ್ಳರಿಂದಲೂ ರಾಕ್ಷಸರಿಂದಲೂ, ಭೂತಗಳಿಂದಲೂ ಭಯವುಂಟಾಗುವುದಿಲ್ಲ.

೧೯. ಸ್ವದೇಶದಲ್ಲಿಯಾಗಲಿ, ಪರದೇಶದಲ್ಲಾಗಲಿ, ಪರ್ವತಗಳಲ್ಲಾಗಲಿ, ಕಾಡುಗಳಲ್ಲಾಗಲಿ, ಸಮುದ್ರಸಂಚಾರದಲ್ಲಾಗಲಿ ಅವನಿಗೆ ಭಯವಿರಲಾರದು. ಅವನ ಮನಸ್ಸಿನಲ್ಲಿ ದುಷ್ಟಭಾವನೆಗಳೂ ಉಂಟಾಗುವುದಿಲ್ಲ.

೨೦. ಸರ್ವವಿಧಗಳಾದ ನವಗ್ರಹಪೀಡೆಗಳಲ್ಲಿಯೂ, ರಾಜಾದಿಗಳಿಂದ ಭಯವುಂಟಾದಾಗಲೂ ಆ ದೇವಿಗೆ ಕುರಿಯನ್ನೊ, ಮೇಕೆಯನ್ನೊ, ಕೋಣನನ್ನೊ ಬಲಿಯನ್ನು ಕೊಡಬೇಕು.

೨೧–೨೨. ಅಯ್ಯಾ ಬ್ರಾಹ್ಮಣೋತ್ತಮನೆ! ದೇವಿಯನ್ನುದ್ದೇಶಿಸಿ ಈ ಕೆಲಸವನ್ನು ಮಾಡಿದವನು ತನ್ನ ಅಭೀಷ್ಟಸಿದ್ಧಿಯನ್ನು ಪಡೆಯುವನು. ಆಶ್ವಯುಜ ಮಾಸದ ಶುಕ್ಲಾಷ್ಟಮಿಯದಿನ ಅರ್ಧರಾತ್ರಿಯು ಕಳೆದಿರಲು ಯಾವ ಮನುಜನು ದೇವಿಯ ಮುಂದಿರುವ ತೀರ್ಥದಲ್ಲಿ ಸ್ನಾನಮಾಡುವನೊ, ಅವನು ಸರ್ವೋತ್ಕೃಷ್ಟವಾದ ಕಾರ್ಯಸಿದ್ಧಿಯನ್ನು ಪಡೆಯುವನು. ಮಕ್ಕಳನ್ನು ಕಳೆದುಕೊಳ್ಳುವ ನಾರಿಯು ತನ್ನ ಪತಿಯೊಡನೆ ಈ ಕುಂಡದಲ್ಲಿ ಸ್ನಾನಮಾಡಬೇಕು.

೨೩–೨೪. ದೇವಿಯ ಮುಂದುಗಡೆಯಲ್ಲಿ ಶಾಸ್ತ್ರೋಕ್ತವಿಧಾನದಿಂದ ಫಲಸಹಿತವಾದ ಕಳಶವನ್ನು ಸ್ಥಾಪಿಸಿ ಸ್ನಾನಮಾಡಬೇಕು. ಬಳಿಕ ಬೇರೆ ಯಾರ ಮುಖವನ್ನೂ ನೋಡಬಾರದು. ಇದಕ್ಕೆ ಕುಂಭಸ್ನಾನವೆನ್ನುವರು. ಎಲೈ

ತಸ್ಯ ಸಂಜಾಯತೇ ಪುತ್ರೋ ಯಥಾ ದೇವಃ ಷಡಾನನಃ ।
ಪೃಷ್ಠೇ ಮಾತುಃ ಪರಂ ಪುಣ್ಯಂ ತೀರ್ಥಮಪ್ಸರಸಾಂ ಶುಭಂ ॥ ೨೪ ॥
ರೂಪಸೌಭಾಗ್ಯಸಂಪನ್ನಸ್ತತ್ರ ಸ್ನಾತೋ ಭವೇನ್ನರಃ ।
ಉರ್ವಶ್ಯಾ ವೈ ಪುರಾ ವ್ಯಾಸ ತೀರ್ಥಸ್ಯಾಽಸ್ಯ ಪ್ರಭಾವತಃ ॥ ೨೫ ॥
ಭರ್ತಾ ಪುರೂರವಾ ಲಬ್ಧ ಐಲೇಯೋಽಸೌ ಮಹೀಪತಿಃ ।
ಇತಿ ಕೌತೂಹಲಂ ಶ್ರುತ್ವಾ ವ್ಯಾಸೋ ವಚನಮಬ್ರವೀತ್ ॥ ೨೬ ॥

ವ್ಯಾಸ ಉವಾಚ :—

ಕಥಮಪ್ಸರಸಾಂ ತೀರ್ಥಂ ತತ್ರ ಜಾತಂ ಮಹಾಮುನೇ ।
ಕಾರಣೇನ ಯಥಾ ತೇನ ಯಸ್ಮಿನ್ಕಾಲೇ ಪ್ರತಿಷ್ಠಿತಂ ।
ತಥಾ ತನ್ಮೇ ಸವಿಸ್ತಾರಂ ಸರಹಸ್ಯಂ ಪ್ರಕೀರ್ತಯ ॥ ೨೭ ॥
ಕಥಂ ಪುರೂರವಾಶ್ಚಾಽಸೌ ಭಾರ್ಯಾಸ್ತಸ್ಯ ವರಾಽಪ್ಸರಾಃ ।
ಉರ್ವಶೀ ನಾಮ ಕಾ ಸಾ ತು ಕೇನ ಜಾತಾ ವರಾಂಗನಾ ।
ಸರ್ವಮೇತದ್ಯಥಾವೃತ್ತಂ ವದ ಕೌತೂಹಲಂ ಹಿ ಮೇ ॥ ೨೮ ॥

---

ಮುನಿಯೆ! ಇದರ ಫಲವಾಗಿ ಆ ಮನುಜನಿಗೆ ಷಣ್ಮುಖಸ್ವಾಮಿಯಂತಿರುವ ಪುತ್ರನುಂಟಾಗುವನು. ಮಾತೆಯ ಹಿಂದೆಯೇ ಸರ್ವೋತ್ತಮವೂ, ಪುಣ್ಯಪ್ರದವೂ, ಶುಭವೂ ಆದ ಅಪ್ಸರೋತೀರ್ಥವಿರುವುದು.

೨೫–೨೬. ಅದರಲ್ಲಿ ಮಿಂಯುವ ನರನು ರೂಪಸಂಪನ್ನನೂ ಸೌಭಾಗ್ಯವಂತನೂ ಆಗುವನು. ಅಯ್ಯಾ ವ್ಯಾಸನೆ! ಈ ತೀರ್ಥದ ಪ್ರಭಾವದಿಂದಲೇ ಪೂರ್ವದಲ್ಲಿ ಊರ್ವಶಿಯೆಂಬ ಅಪ್ಸರಸೆಯು ಬುಧ ಮತ್ತು ಇಳಾದೇವಿಯರ ಪುತ್ರನೂ ಚಕ್ರವರ್ತಿಯೂ ಆದ ಪುರೂರವನನ್ನು ಪತಿಯಾಗಿ ಪಡೆದಳು. ಇಂತೆಂದ ಕೌತುಕಕಥೆಯಿಂದೊಡಗೂಡಿದ ಮಾತುಗಳನ್ನು ಕೇಳಿ ವ್ಯಾಸನು ಸನತ್ಕುಮಾರನನ್ನು ಪ್ರಶ್ನೆಮಾಡಿದನು.

೨೭. ವ್ಯಾಸನು ಹೇಳುತ್ತಾನೆ:—ಮಹರ್ಷಿಯೆ! ಅಲ್ಲಿ ಈ ಅಪ್ಸರೋತೀರ್ಥವು ಹೇಗುಂಟಾಯಿತು? ಯಾವ ಕಾರಣದಿಂದ ಯಾವ ಕಾಲದಲ್ಲಿ ಪ್ರತಿಷ್ಠೆಗೊಂಡಿತು? ಇದೆಲ್ಲವನ್ನೂ ವಿಸ್ತಾರವಾಗಿ ರಹಸ್ಯಗಳನ್ನು ಸ್ವಲ್ಪವೂ ಬಿಡದೆ ಹೇಳುವವನಾಗು.

೨೮. ಈ ಪುರೂರವನೆಂಬುವನು ಹುಟ್ಟಿದುದು ಹೇಗೆ! ಆತನಿಗೆ ಅಪ್ಸರಸೆಯರು ಹೇಗೆ ಹೆಂಡತಿಯರಾದರು? ಊರ್ವಶಿಯೆಂಬುವಳು ಯಾರು? ಆ ಸುಂದರಿಯು ಯಾರ ಮಗಳು? ಇದೆಲ್ಲವನ್ನೂ ನಡೆದಂತೆಯೇ ಹೇಳು. ಕೇಳಿ ತಿಳಿಯಲು ನನಗೆ ಬಹಳ ಕುತೂಹಲವಾಗಿರುವುದು.

**ಸನತ್ಕುಮಾರ ಉವಾಚ :—**

**ನರನಾರಾಯಣೌ ಪೂರ್ವಂ ಯತ್ರ ವೈ ತೇಪತುಸ್ತಪಃ ।**
**ಬದರಿಕಾಶ್ರಮಸ್ಥೌ ತೌ ತೇನೇಂದ್ರೋ ಭಯಮಾಗತಃ ॥ ೨೯ ॥**
**ಸರ್ವಾಶ್ಚಾಪ್ಸರಸೋ ಹೃದ್ಯಾ ರೂಪಯೌವನದರ್ಪಿತಾಃ ।**
**ಆದಿಷ್ಟಾ ಯಾ ಮಘವತಾ ವಿಘ್ನಾರ್ಥೇ ಚ ಸಮಾಗತಾಃ ॥ ೩೦ ॥**
**ತೌ ದೃಷ್ಟ್ವಾಽಪ್ಸರಸಸ್ತತ್ರ ರಮಂತೀರ್ಮದವಿಹ್ವಲಾಃ ।**
**ವಿಘ್ನಾರ್ಥಮಿಹ ಆಯಾತಾಸ್ತದಾ ದೇವೌ ಜಜಲ್ಪತುಃ ॥ ೩೧ ॥**
**ಅಸ್ಮಾಕಂ ನ ಸ್ತ್ರಿಯಃ ಸಂತಿ ತೇನ ವೈ ವಿಘ್ನಕಾರಣಂ ।**
**ಏವಂ ಸಂಜಲ್ಪ್ಯ ಚ ನರೋ ನಾರಾಯಣಮುವಾಚ ಹ ॥ ೩೨ ॥**
**ಕರಿಷ್ಯಾಮ್ಯಹಮೇಕಾಂ ವೈ ಆಸಾಂ ತು ರೂಪತೋಽಧಿಕಾಂ ।**
**ಮಂಜರ್ಯಾ ಸಹಕಾರಸ್ಯ ಸ್ತ್ರೀಮೂರುಭ್ಯಾಂ ಚಕಾರ ಹ ॥ ೩೩ ॥**
**ರೂಪೇಣಾಽಪ್ರತಿಮಾಂ ಲೋಕೇ ಸರ್ವಾಭರಣಭೂಷಿತಾಂ ।**
**ಉತ್ಥಿತಾಂ ಪ್ರಮದಾಂ ದೃಷ್ಟ್ವಾ ಜ್ವಲನಾಭಾಂ ವರಾಂಗನಾಂ ॥ ೩೪ ॥**

---

೨೯. ಸನತ್ಕುಮಾರನು ಹೇಳುತ್ತಾನೆ :—ಪೂರ್ವದಲ್ಲಿ ನರನಾರಾಯಣರು ಬದರಿಕಾಶ್ರಮವನ್ನು ಸೇರಿ ಅಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದರು. ಅದರಿಂದ ಇಂದ್ರನು ಬಹಳ ಭಯಗೊಂಡನು.

೩೦. ಆತನಿಂದ ಆಜ್ಞಪ್ತರಾಗಿ ಸೌಂದರ್ಯಯೌವನಗಳಿಂದ ಗರ್ವಿತರಾಗಿದ್ದ ಅಪ್ಸರಸ್ತ್ರೀಯರೆಲ್ಲರೂ ನೋಡಿದವರ ಮನಸ್ಸನ್ನು ಸೆಳೆಯುತ್ತ ಅವರ ತಪಸ್ಸಿಗೆ ವಿಘ್ನವನ್ನು ಮಾಡಲು ಬಂದರು.

೩೧. ಆಶ್ರಮದ ಸುತ್ತಲೂ ವಿಹರಿಸುತ್ತ ಮದಿರಾಪಾನದಿಂದ ವೈಮರೆತಿದ್ದ ಆ ಅಪ್ಸರೆಯರನ್ನು ಕಂಡು ನರನಾರಯಣರು "ಇವರು ನಮ್ಮ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಬಂದಿರುವರು" ಎಂದು ತಮ್ಮಲ್ಲಿಯೇ ಮಾತನಾಡಿಕೊಂಡರು.

೩೨. "ನಮಗೆ ಸ್ತ್ರೀಯರಿಲ್ಲದುದರಿಂದ ಈ ವಿಘ್ನವು ಬಂದೊದಗಿತು" ಎಂಬುದಾಗಿ ಸಂಭಾಷಿಸುತ್ತಿರಲು ನರನು ನಾರಾಯಣನನ್ನು ಕುರಿತು ಹೇಳತೊಡಗಿದನು.

೩೩. "ಇವರಿಂಗಿತಲೂ ರೂಪದಲ್ಲಿ ಅತ್ಯಧಿಕಳಾದ ಒಬ್ಬಳನ್ನು ಸೃಷ್ಟಿಮಾಡುತ್ತೇನೆ" ಎಂದು ಹೇಳಿ ಮಾವಿನ ಕುಡಿಗಳನ್ನು ತೊಡೆಯಮೇಲೆ ಉಜ್ಜಿ ಒಬ್ಬ ಸ್ತ್ರೀಯನ್ನುಂಟುಮಾಡಿದನು.

೩೪–೩೫. ಆಕೆಯು ಸಕಲ ಲೋಕದಲ್ಲಿಯೂ ರೂಪದಲ್ಲಿ ಅದ್ವಿತೀಯಳಾಗಿ ಸಕಲಾಭರಣಗಳಿಂದಲಂಕೃತಳಾಗಿದ್ದಳು. ಬೆಂಕಿಯಂತೆ ಕಾಂತಿಯುಕ್ತಳೂ

ಗತ್ವಾ ಶಶಂಸುಸ್ತಾಶ್ಶಕ್ರಂ ನ ತೌ ಲೋಭಯಿತುಂ ಕ್ಷಮಾಃ ।
ಶಕ್ರಸ್ತಾಸಾಂ ವಚಃ ಶ್ರುತ್ವಾ ಗತ್ವಾ ದೇವಾವುವಾಚ ಹ ॥ ೩೫ ॥
ಪ್ರಣಾಮಾಽವನತೋ ಭೂತ್ವಾ ಕೃತ್ವಾ ಶಿರಸಿ ಚಾಽಂಜಲಿಂ ।
ಅಹಮರ್ಥೀ ಸ್ತ್ರಿಯಾಶ್ಚಾಽಸ್ಯಾಃ ಪ್ರಸಾದಃ ಕ್ರಿಯತಾಮಿತಿ ॥ ೩೬ ॥
ತತಸ್ತಾಂ ದದತುರ್ದೇವಾವಿಂದ್ರಾಯ ಪರಮೇಶ್ವರೌ ।
ಅಸ್ಮದ್ವಚನಸಾಮರ್ಥ್ಯಾದ್ಗೃಹಾಣೇಮಾಂ ತ್ವಮುರ್ವಶೀಂ ॥ ೩೭ ॥
ಊರುಭ್ಯಾಂ ಜನಿತಾ ಯಸ್ಮಾನ್ನರೇಣೇಯಂ ವರಾಂಗನಾ ।
ಮಂಜರ್ಯಾ ಸಹಕಾರಸ್ಯ ತೇನೇಯಮುರ್ವಶೀ ಸ್ಮೃತಾ ॥ ೩೮ ॥
ಪುರಂದರೋ ಗೃಹೀತ್ವಾ ತಾಮುರ್ವಶೀಂ ಪರಮಾಂಗನಾಂ ।
ಗತ್ವಾ ಸ್ವರ್ಗಮಥಾಹೂಯ ಚಿತ್ರಾಂಗದಮುವಾಚ ಹ ॥ ೩೯ ॥
ಶಿಕ್ಷಾಽಸ್ಯಾಃ ಕ್ರಿಯತಾಂ ಚಿತ್ರ ಯಥಾ ನೃತ್ಯೇ ವಿಚಕ್ಷಣಾ ।
ಕ್ರಿಯತಾಮಚಿರಾದೇಷಾ ಯತ್ನಮಾಸ್ಥಾಯ ಶೋಭನಂ ॥ ೪೦ ॥

---

ಯೌವನಮದವುಳ್ಳವಳೂ ಆದ ಆ ಉತ್ತಮಸ್ತ್ರೀಯನ್ನು ಕಂಡು ಅಪ್ಸರೆಯರೆಲ್ಲರೂ ಸ್ವರ್ಗಕ್ಕೆ ಹಿಂದಿರುಗಿ ಇಂದ್ರನನ್ನು ಕುರಿತು, "ಆ ಇಬ್ಬರನ್ನು ಪ್ರಲೋಭನಗೊಳಿಸಲು ನಾವು ಶಕ್ತರಾಗಲಿಲ್ಲ" ಎಂಬುದಾಗಿ ಬಿನ್ನವಿಸಿದರು. ಇಂದ್ರನು ಅವರ ಮಾತುಗಳನ್ನು ಕೇಳಿ ಬದರಿಕಾಶ್ರಮಕ್ಕೆ ಬಂದು ನರನಾರಾಯಣರಿಗೆ ಹೇಳಿದನು.

೩೬. ಸಾಷ್ಟಾಂಗವಾದ ಪ್ರಣಾಮವನ್ನು ಮಾಡಿ ತಲೆಯಲ್ಲಿ ಅಂಜಲಿಬಂಧವನ್ನು ಮಾಡಿಕೊಂಡು "ನಾನು ಈ ಕನ್ಯಕೆಗಾಗಿ ಯಾಚಕನಾಗಿರುವೆನು ; ನನ್ನಲ್ಲಿ ಅನುಗ್ರಹವನ್ನು ಮಾಡಿ" ಎಂದು ಬೇಡಿದನು.

೩೭. ಆಗ ಲೋಕೇಶ್ವರರಾದ ಅವರಿಬ್ಬರೂ ಆ ಸ್ತ್ರೀಯನ್ನು ಇಂದ್ರನಿಗೆ ಕೊಟ್ಟು ಹೇಳಿದರು. "ನಮ್ಮ ಮಾತಿನ ಗೌರವದಿಂದ ನೀನು ಈ ಊರ್ವಶಿಯನ್ನು ಸ್ವೀಕರಿಸು.

೩೮. ಈ ಉತ್ತಮಕನ್ಯೆಯು ನರನ ತೊಡೆಗಳಲ್ಲಿ ಮಾವಿನಕುಡಿಗಳ ದೆಸೆಯಿಂದ ಹುಟ್ಟಿರುವಳಾದುದರಿಂದ ಇವಳಿಗೆ ಊರ್ವಶಿಯೆಂಬ ಹೆಸರೇ ಪ್ರಖ್ಯಾತವಾಗಲಿ."

೩೯–೪೦. ಹೆಣ್ಮಣಿಯಾದ ಆ ಊರ್ವಶಿಯನ್ನು ಮಹೇಂದ್ರನು ಕರೆದು ತಂದು ಸ್ವರ್ಗವನ್ನು ಸೇರಿ ಚಿತ್ರಾಂಗದನೆಂಬ ಗಂಧರ್ವನನ್ನು ಬಳಿಗೆ ಕರೆದು ಆಜ್ಞಾಪಿಸಿದನು. "ಎಲೈ ಚಿತ್ರಾಂಗದನೆ! ಇವಳು ನೃತ್ಯದಲ್ಲಿ ಪಾರಂಗತಳಾಗುವಂತೆ ಇವಳಿಗೆ ಉತ್ತಮ ಶಿಕ್ಷೆಯನ್ನು ಕೊಡು. ಮಹತ್ತರವಾದ ಪ್ರಯತ್ನವನ್ನಾದರೂ ಮಾಡು. ಅತ್ಯಲ್ಪಕಾಲದಲ್ಲಿಯೇ ಇವಳು ಪ್ರಾಜ್ಞಳಾಗಬೇಕು."

ಏವಮುಕ್ತೇ ತು ಶಕ್ರೇಣ ಕೃತಾ ತೇನ ವಿಚಕ್ಷಣಾ ।
ವರಂ ಪ್ರವೀಣಾ ಸಾ ಜಾತಾ ನೃತ್ಯೇ ಗೀತೇ ಚ ಕೋವಿದಾ ॥ ೪೧ ॥
ಏವಂ ಸಾ ನ್ಯವಸತ್ತತ್ರ ಸುರಸದ್ಮನಿ ಸುಂದರೀ ।
ಗತೇ ಬಹುತಿಥೇ ಕಾಲೇ ತತ್ರಾಽಗಾತ್ಸ ನರೇಶ್ವರಃ ॥ ೪೨ ॥
ಇಲಸ್ಯ ಪುತ್ರೋ ಧರ್ಮಾತ್ಮಾ ನಾಮ್ನಾ ಚೈವ ಪುರೂರವಾಃ ।
ಇಂದ್ರಸ್ಯಾರ್ಧಾಸನಗತೋ ನೃತ್ಯಂ ಪಶ್ಯತಿ ತತ್ರಹ ॥ ೪೩ ॥
ನೃತ್ಯಂತೀಂ ವಾಸವಸ್ಯಾಗ್ರೇ ಉರ್ವಶೀಂ ವೀಕ್ಷ್ಯ ಕಾಮುಕಃ ।
ಹೃತಚಿತ್ತಸ್ತಯಾ ರಾಜಾ ನ ಕಿಂಚಿತ್ಪ್ರತ್ಯಪದ್ಯತ ॥ ೪೪ ॥
ಧೈರ್ಯಂ ಚಿತ್ತೇ ಸಮಾವೇಶ್ಯ ಮುಹೂರ್ತಂ ಪರ್ಯವಸ್ಥಿತಃ ।
ಉರ್ವಶೀ ಚ ತದಾ ತೇನ ದರ್ಶನಾಹೃತಮಾನಸಾ ॥ ೪೫ ॥
ತತ್ಪ್ರದೇಶಾದ್ವಿನಿಷ್ಕ್ರಮ್ಯ ಕಾಮಾರ್ತಾ ಚಾಽತಿ ವಿಹ್ವಲಾ ।
ಭೂಮೌ ಸಾ ಪತಿತಾ ಬಾಲಾ ಉಚ್ಛ್ರಿತಾದ್ರಂಗಮಂಡಲಾತ್ ॥ ೪೬ ॥

---

೪೧. ಇಂತೆಂದು ಶಕ್ರನು ಆಜ್ಞೆಯನ್ನು ಮಾಡಲು ಅವನು ಅವಳಿಗೆ ವಿದ್ಯೆಯನ್ನು ಕಲಿಸಿದನು. ಆಕೆಯು ಸ್ವಲ್ಪಕಾಲದಲ್ಲಿಯೇ ನಾಟ್ಯಶಾಸ್ತ್ರದಲ್ಲಿ ಬಹುಪ್ರವೀಣೆಯೂ, ಸಂಗೀತದಲ್ಲಿ ವಿಚಕ್ಷಣೆಯೂ ಆದಳು.

೪೨. ಈ ವಿಧವಾಗಿ ಆ ಸುಂದರಿಯು ಸ್ವರ್ಗಲೋಕದಲ್ಲಿ ವಾಸಮಾಡುತ್ತಿದ್ದಳು. ಹೀಗೆಯೇ ಬಹಳ ದಿನಗಳು ಕಳೆಯಲು ಒಮ್ಮೆ ಆ ಪುರೂರವ ಮಹಾರಾಜನು ಸ್ವರ್ಗಕ್ಕೆ ಬಂದನು.

೪೩. ಇಳಮಹಾರಾಜನ ಪುತ್ರನೂ ಧರ್ಮಾತ್ಮನೂ ಆದ ಆ ಪುರೂರವನು ಇಂದ್ರನ ಅರ್ಧಾಸನದಲ್ಲಿಯೇ ಕುಳಿತುಕೊಂಡು ಊರ್ವಶಿಯ ನೃತ್ಯವನ್ನು ನೋಡುತ್ತಿದ್ದನು.

೪೪. ಮಹೇಂದ್ರನ ಎದುರಿನಲ್ಲಿ ನರ್ತನಮಾಡುತ್ತಿದ್ದ ಊರ್ವಶಿಯನ್ನು ನೋಡಿ ಆ ರಾಜನು ಕಾಮಪೀಡಿತನಾಗಿ ಅವಳು ತನ್ನ ಮನಸ್ಸನ್ನಪಹರಿಸಲು ಬೇರೆ ಯಾವುದನ್ನೂ ತಿಳಿಯಲಿಲ್ಲ.

೪೫. ಪುನಃ ಮನಸ್ಸಿಗೆ ಧೈರ್ಯವನ್ನು ತಂದುಕೊಂಡು ಒಂದು ಮುಹೂರ್ತಕಾಲದವರೆಗೂ ಅಲ್ಲಿಯೇ ಕುಳಿತಿದ್ದನು. ಊರ್ವಶಿಯೂ ಸಹ ಆ ರಾಜನ ದರ್ಶನದಿಂದಲೇ ಹೃತಮನಸ್ಕಳಾದಳು.

೪೬. ಕಾಮಪೀಡಿತೆಯೂ, ಬಹಳ ಕಳವಳಗೊಂಡವಳೂ ಆಗಿ ಅವಳು ಆ ಪ್ರದೇಶದಿಂದ ಹೊರಬಿದ್ದು ಎತ್ತರವಾದ ರಂಗಮಂಡಪದಿಂದ ನೆಲಕ್ಕೆ ಉರುಳಿಬಿದ್ದಳು.

ಅಥಾತ್ಮಾನಂ ಚ ಸಂವೇದ್ಯ ಉತ್ಥಿತಾ ಭೂಮಿಮಂಡಲಾತ್ ।
ದೃಷ್ಟ್ವಾ ಸಾ ರಾಜಸಿಂಹೇನ ಮನ್ಮಥೇನ ಪ್ರಪೀಡಿತಾ ॥ ೪೭ ॥
ಗತಃ ಪುರೂರವಾ ಭೂಮಿಂ ತಾಮೇವ ಮನಸಾ ಸ್ಮರನ್ ।
ಸ್ಮರಂತೀ ರಾಜಶಾರ್ದೂಲಂ ಗತಾ ಸಾಽಪ್ಯುರ್ವಶೀ ಗೃಹಂ ॥ ೪೮ ॥
ಚಿತ್ರಾಂಗದಗೃಹೇ ಗತ್ವಾ ದೂತಂ ಸಾಽಥ ಚಕಾರ ಹ ।
ಚಿತ್ರಾಂಗದೇನ ಸಾ ನೀತಾ ರಾತ್ರೌ ಯತ್ರ ಪುರೂರವಾಃ ॥ ೪೯ ॥
ಉರ್ವಶ್ಯಾ ರಹಿತಃ ಸ್ವರ್ಗಃ ಶೂನ್ಯೋಽಪ್ಯಾಸೀದ್ದಿವೌಕಸಾಂ ।
ರಾತ್ರಾವೇವ ಚ ಸಾ ತೇನ ಆನೀತಾ ತ್ರಿದಿವಂ ಪುನಃ ॥ ೫೦ ॥
ತಯಾ ವಿರಹಿತಃ ಸೋಽಪಿ ಶೂನ್ಯಚಿತ್ತಃ ಪರಿಭ್ರಮನ್ ।
ಉನ್ಮತ್ತತಾಂ ಗತೋ ವ್ಯಾಸ ಷಷ್ಟಿವರ್ಷಾಣಿ ಪಾರ್ಥಿವಃ ॥ ೫೧ ॥
ಪರಿಭ್ರಮನ್ ಸ ತೀರ್ಥಾನಿ ಮಹಾಕಾಲವನಂ ಗತಃ ।
ಗಂದರ್ವೇಣೋರ್ವಶೀ ಸ್ವರ್ಗೇ ನೀತಾ ಸಾ ಪರಮಾಽಪ್ಸರಾಃ ॥ ೫೨ ॥

---

೪೭. ಕೆಲವು ಕಾಲದಮೇಲೆ ತಿಳಿವಳಿಕೆಯು ಬರಲು ಭೂಮಿಯಿಂದ ಮೇಲಕ್ಕೆದ್ದು ಮನ್ಮಥನಿಂದ ಪೀಡಿತಳಾಗಿದ್ದ ಊರ್ವಶಿಯನ್ನು ಆ ರಾಜಶ್ರೇಷ್ಠನೂ ನೋಡಿದನು.

೪೮. ಆಕೆಯನ್ನೇ ಮನಸ್ಸಿನಲ್ಲಿ ಸ್ಮರಿಸುತ್ತ ಪುರೂರವನು ಭೂಲೋಕಕ್ಕೆ ಹೊರಟುಹೋದನು. ಆ ರಾಜಶಾರ್ದೂಲನನ್ನೇ ಸ್ಮರಿಸುತ್ತ ಊರ್ವಶಿಯೂ ತನ್ನ ಮನೆಗೆ ಹೊರಟುಹೋದಳು.

೪೯. ತರುವಾಯ ಅವಳು, ಚಿತ್ರಾಂಗದನ ಮನೆಗೆ ಹೋಗಿ ಅವನನ್ನೇ ತನ್ನ ದೂತನಾಗಿ ಮಾಡಿಕೊಂಡಳು. ಚಿತ್ರಾಂಗದನೂ ಆಕೆಯನ್ನು ರಾತ್ರಿಯ ಕಾಲದಲ್ಲಿ ಪುರೂರವನಿದ್ದೆಡೆಗೆ ಕರೆದುಕೊಂಡು ಹೋದನು.

೫೦. ಊರ್ವಶೀರಹಿತವಾದ ಸ್ವರ್ಗವು ದೇವತೆಗಳೆಲ್ಲರಿಗೂ ಶೂನ್ಯವಾದಂತೆ ತೋರುತ್ತಿದ್ದಿತು. ಮತ್ತೆ ರಾತ್ರಿಯಲ್ಲಿಯೇ ಅವಳು ಚಿತ್ರಾಂಗದನಿಂದ ಹಿಂದಕ್ಕೆ ಕರೆತರಲ್ಪಟ್ಟಳು.

೫೧. ಎಲೈ ವ್ಯಾಸನೆ! ಆಕೆಯ ವಿರಹದಿಂದ ಆ ರಾಜನೂ ಮುಂದುಗಾಣದವನಾಗಿ ಅಲೆದಾಡುತ್ತ ಅರುವತ್ತು ವರ್ಷಗಳವರೆಗೂ ಹುಚ್ಚು ಹಿಡಿದವನಾಗಿದ್ದನು.

೫೨. ಇಂತು ಅವನು ಅನೇಕ ತೀರ್ಥಗಳನ್ನು ಸುತ್ತುತ್ತ ಮಹಾಕಾಲವನವನ್ನು ಸೇರಿದನು. ಅಪ್ಸರೆಯರಲ್ಲಿ ಉತ್ತಮಳಾದ ಊರ್ವಶಿಯೂ ಗಂಧರ್ವನಿಂದ ಸ್ವರ್ಗಕ್ಕೆ ಕರೆತರಲ್ಪಟ್ಟಳು.

ನಾಽಪಿ ಶೇತೇ ನ ವಾ ಸ್ನಾತಿ ಹೇ ರಾಜನ್ನಿತಿ ಜಲ್ಪತಿ ।
ತಾವದಪ್ಸರಸಃ ಸರ್ವಾಸ್ತಾಃ ಪ್ರಾಪ್ತಾ ಯತ್ರ ಚೋರ್ವಶೀ ॥ ೫೩ ॥
ರಂಭಾ ಚ ಮೇನಕಾ ಚೈವ ಪ್ರಮ್ಲೋಚಾ ಪುಂಜಿಕಸ್ಥಲೀ ।
ಜಲಪೂರ್ಣಾಽಶ್ರುಪೂರ್ಣಾ ಚ ವಸಂತಾ ಚಂದ್ರಿಕಾ ತಥಾ ॥ ೫೪ ॥
ಸೂರ್ಯದತ್ತಾ ವಿಶಾಲಾಕ್ಷೀ ಚಂದ್ರಾ ಚಂದ್ರಪ್ರಭಾ ತಥಾ ।
ಆಗತ್ಯ ತಾಸ್ತು ಸಹಿತಾ ಉರ್ವಶೀಂ ವಾಕ್ಯಮಬ್ರುವನ್ ॥ ೫೫ ॥
ಕಿಂ ರೋದಿಷಿ ವರಾರೋಹೇ ಮರ್ತ್ಯಹೇತೋಃ ಸುಲೋಚನೇ ।
ತದ್ವಾಕ್ಯಮುರ್ವಶೀ ತಾಸಾಂ ಶ್ರುತ್ವಾ ವಚನಮಬ್ರವೀತ್ ॥ ೫೬ ॥
ಸೌಖ್ಯಂ ಷಂಢೋ ನ ಜಾನಾತಿ ಸಂಗಾತ್ಸ್ತ್ರೀಪುಂಸಯೋರ್ಹಿ ಯತ್ ।
ಅನಯೋಪಮಯಾ ಜ್ಞೇಯಂ ತಸ್ಯಾರ್ಥೇ ಕೃತನಿಶ್ಚಯಾ ॥ ೫೭ ॥
ಶ್ರುತ್ವಾ ಚೇತಿ ವಚಸ್ತಸ್ಯಾಸ್ತಾಃ ಸಂಮಂತ್ರ್ಯ ಸಮಾಹಿತಾಃ ।
ಅವಿದಿತೇ ಚ ದೇವಾನಾಂ ಮಹಾಕಾಲವನೇ ಗತಾಃ ॥ ೫೮ ॥
ನೃಪಂ ಚ ದದೃಶುಸ್ತತ್ರ ವೃಕ್ಷಚ್ಛಾಯಾನಿಷೇವಿತಂ ।
ದೃಷ್ಟ್ವಾ ಚಾಽಥ ನೃಪಂ ಸರ್ವಾ ಭೃಶಂ ಜಾತಾಃ ಸುವಿಹ್ವಲಾಃ ॥ ೫೯ ॥

---

೫೩. ಆಕೆಯು ನಿದ್ರೆಮಾಡಲಿಲ್ಲ. ಸ್ನಾನಮಾಡಲಿಲ್ಲ. ಯಾವಾಗಲೂ "ರಾಜೇಂದ್ರ!" ಎಂದೇ ಹಂಬಲಿಸುತ್ತಿದ್ದಳು. ಇದನ್ನು ಕಂಡು ಎಲ್ಲ ಅಪ್ಸರೆಯರೂ ಊರ್ವಶಿಯಿದ್ದಲ್ಲಿಗೆ ಬಂದು ಸೇರಿದರು.

೫೪–೫೫. ರಂಭೆ, ಮೇನಕೆ, ಪ್ರಮ್ಲೋಚೆ, ಪುಂಜಿಕಸ್ಥಳೆ, ಜಲಪೂರ್ಣೆ, ಅಶ್ರುಪೂರ್ಣೆ, ವಸಂತಾ, ಚಂದ್ರಿಕಾ, ಸೂರ್ಯದತ್ತಾ, ವಿಶಾಲಾಕ್ಷಿ, ಚಂದ್ರಾ, ಚಂದ್ರಪ್ರಭಾ ಮುಂತಾದವರೆಲ್ಲರೂ ಒಟ್ಟುಗೂಡಿ ಬಂದು ಊರ್ವಶಿಯನ್ನು ಕುರಿತು ಈ ವಾಕ್ಯವನ್ನು ಹೇಳಿದರು.

೫೬. "ಸುಂದರಿಯೆ, ವಿಶಾಲನೇತ್ರೆಯೆ, ಊರ್ವಶಿ! ಮನುಷ್ಯಮಾತ್ರನಾದ ಈತನಿಗಾಗಿ ನೀನೇಕಿಂತು ದುಃಖಿಸುತ್ತಿರುವೆ?" ಎಂಬ ಅವರ ಮಾತನ್ನು ಕೇಳಿ ಊರ್ವಶಿಯು ಅವರಿಗಿಂತೆಂದಳು.

೫೭. "ಸ್ತ್ರೀಪುರುಷರ ಸಂಯೋಗದಿಂದ ಅನುಭವಿಸುವ ಸೌಖ್ಯವನ್ನು ನಪುಂಸಕನೆಂದಿಗೂ ತಿಳಿಯಲಾರನಷ್ಟೆ. ಈ ಉಪಮಾನದಿಂದ ನಾನು ಆತನಲ್ಲಿ ಮನಸ್ಸನ್ನಿಟ್ಟಿರುವ ಬಗೆಯನ್ನು ನೀವು ತಿಳಿಯಬಹುದು."

೫೮. ಆಕೆಯಾಡಿದ ಮಾತನ್ನು ಕೇಳಿ ಅವರೆಲ್ಲರೂ ಸಾವಧಾನಮನಸ್ಕರಾಗಿ ತಮ್ಮಲ್ಲಿಯೇ ಮಂತ್ರಾಲೋಚನೆಯನ್ನು ಮಾಡಿ ದೇವತೆಗಳಿಗೆ ತಿಳಿಯದಂತೆಯೇ ಎಲ್ಲರೂ ಮಹಾಕಾಲವನವನ್ನು ಸೇರಿದರು.

೫೯. ಅಲ್ಲಿ ಒಂದು ಮರದ ನೆರಳಿನಲ್ಲಿ ಮಲಗಿದ್ದ ಮಹಾರಾಜನನ್ನು ನೋಡಿದರು. ಆತನನ್ನು ನೋಡಿ ಅವರೆಲ್ಲರೂ ಸಹ ದುಗುಡವನ್ನು ಹೊಂದಿದವರಾದರು

ದೃಷ್ಟ್ವಾ ತಥಾ ವಿಧಾಃ ಸರ್ವಾಃ ಕಾಮಾರ್ತಾಃ ಸುರಯೋಷಿತಃ ।
ಮೂಢಚಿತ್ತಾಃ ಪ್ರಹಸ್ಯೈವಮುರ್ವಶೀ ವಾಕ್ಯಮಬ್ರವೀತ್ ॥ ೬೦ ॥

ಉರ್ವಶ್ಯುವಾಚ :—

ಅಯಂ ಸ ಪುರುಷವ್ಯಾಘ್ರೋ ವಿನಾ ಯೇನಾಽಹಮೀದೃಶೀ ।
ಐಲಃ ಪುರೂರವಾ ನಾಮ ವಿಖ್ಯಾತೋ ಜಗತೀಪತಿಃ ॥ ೬೧ ॥
ಏವಂ ಬ್ರುವಂತ್ಯಾಂ ವೈ ತಸ್ಯಾಮುರ್ವಶ್ಯಾಮಪ್ಸರೋಗಣಃ ।
ಮೌನೀಭೂತಶ್ಚಿರಂ ತಸ್ಥೌ ಲಜ್ಜಯಾನತಕಂಧರಃ ॥ ೬೨ ॥
ಏತಸ್ಮಿನ್ನಂತರೇ ಪ್ರಾಯಾದ್ಭಗವಾಂಸ್ತತ್ರನಾರದಃ ।
ದೃಷ್ಟ್ವಾ ತಥಾಗತಾಃ ಸರ್ವಾ ಉರ್ವಶ್ಯಾ ಸಹಿತಂ ನೃಪಂ ॥ ೬೩ ॥
ಸಂಪ್ರೇಕ್ಷ್ಯ ಚ ತತಃ ಪ್ರಾಹ ಕಿಂ ಯೂಯಮಿಹ ನಿಃಸ್ವನಾಃ ।
ತ್ಯಕ್ತ್ವಾ ತಥಾವಿಧಂ ರಮ್ಯಮಿಂದ್ರಸ್ಯಾಲಯಮುತ್ತಮಂ ॥ ೬೪ ॥
ವರಂ ಚ ವ್ರಿಯತಾಂ ಶೀಘ್ರಂ ವಿಯೋಗೋ ನ ಭವಿಷ್ಯತಿ ।
ಮಾಹಾತ್ಮ್ಯಂ ಚಾಸ್ಯ ತೀರ್ಥಸ್ಯ ಕಥಯಾಮಾಸ ನಾರದಃ ॥ ೬೫ ॥

---

೬೦. ಆ ದೇವಕನ್ಯೆಯರೆಲ್ಲರೂ ಈ ವಿಧವಾಗಿ ಕಾಮಪೀಡಿತರೂ, ಮೂಢ ಮನಸ್ಕರೂ ಆಗಿರುವುದನ್ನು ಕಂಡು ನಗುತ್ತ ಊರ್ವಶಿಯು ಮಾತನಾಡಲುಪ ಕ್ರಮಿಸಿದಳು.

೬೧. ಊರ್ವಶಿಯು ಹೇಳುತ್ತಾಳೆ:— "ಯಾವನನ್ನಗಲಿ ನಾನು ಈ ಅವಸ್ಥೆಯನ್ನನುಭವಿಸುತ್ತಿರುವೆನೊ, ಅವನೇ ಈ ಪುರುಷಶ್ರೇಷ್ಠನು. ಇವನೇ ಇಳ ಪುತ್ರನು. ಪುರೂರವನೆಂಬವನು. ಲೋಕವಿಖ್ಯಾತನಾದ ಚಕ್ರವರ್ತಿಯು."

೬೨. ಆ ಊರ್ವಶಿಯು ಇಂತು ಹೇಳುತ್ತಿರಲು ಅಪ್ಸರೆಯರ ಸಮೂಹ ವೆಲ್ಲವೂ ಮೌನವನ್ನವಲಂಬಿಸಿ ಕೆಲವುಕಾಲ ಲಜ್ಜೆಯಿಂದ ಕುತ್ತಿಗೆಗಳನ್ನು ಬಗ್ಗಿಸಿ ನಿಂತಿದ್ದಿತು.

೬೩. ಆ ಸಮಯಕ್ಕೆ ಸರಿಯಾಗಿ ಮಹರ್ಷಿಯಾದ ನಾರದನು ಅಲ್ಲಿಗೆ ಯಾದೃಚ್ಛಿಕವಾಗಿ ಬಂದು ಮರಳುಗೊಂಡು ನಿಂತಿದ್ದ ಅಪ್ಸರೆಯರನ್ನೂ ಊರ್ವಶಿ ಯೊಡನಿದ್ದ ಪುರೂರವನನ್ನೂ ನೋಡಿದನು.

೬೪. ನೋಡಿ ಹೇಳತೊಡಗಿದನು. "ಅದ್ಭುತವೂ ಮನೋಹರವೂ ಸರ್ವೋತ್ತಮವೂ ಆದ ಇಂದ್ರಸಭೆಯನ್ನು ತ್ಯಜಿಸಿ ಬಂದು, ನೀವೆಲ್ಲರೂ ಇಲ್ಲಿ ನಿಶ್ಶಬ್ದವಾಗಿ ನಿಂತಿರುವಿರೇಕೆ?

೬೫. ಬೇಗ ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ. ನಿಮಗೆ ಶುಭದ ವಿಯೋಗವುಂಟಾಗುವುದಿಲ್ಲ." ಹೀಗೆಂದು ನಾರದನು ಆ ತೀರ್ಥದ ಮಾಹಾತ್ಮ್ಯ ವನ್ನು ಹೇಳತೊಡಗಿದನು.

**ಅಸ್ಮಿನ್ತೀ ದುರ್ಭಗಾ ತೀರ್ಥೇ ಸ್ನಾತ್ವಾ ಸ್ತ್ರೀ ಪುರುಷೋಽಪಿವಾ ।**
**ಸೌಭಾಗ್ಯಂ ಲಭತೇ ಸಮ್ಯಕ್ಸರ್ವಭೋಗಾಂಸ್ತಥೋತ್ತಮಾನ್ ॥ ೬೬ ॥**
**ಆತ್ಮಾನಂ ತೋಲಯೇದ್ಯಸ್ತು ತಿಲೈರ್ವಾ ಲವಣೇನ ವಾ ।**
**ಶರ್ಕರಾಭಿಶ್ಚ ಬಹ್ವೀಭಿರ್ವಿತ್ತಶಾಠ್ಯವಿವರ್ಜಿತಃ ॥ ೬೭ ॥**
**ಗುಡೇನ ಮಧುನಾ ವಾಽಪಿ ದೇವೀಮುದ್ದಿಶ್ಯ ಪಾರ್ವತೀಂ ।**
**ಲವಣೇನ ಸ್ವರೂಪಾಢ್ಯಸ್ತಿಲೈಃ ಸರ್ವಾಂಗಶೋಭನಃ ॥ ೬೮ ॥**
**ದ್ರವ್ಯವೃದ್ಧಿಃ ಶರ್ಕರಯಾ ಗುಡೇನಾಂಗೇಷು ಪೂರ್ಣತಾ ।**
**ಮಧುನಾ ಚೈವ ಸೌಭಾಗ್ಯಂ ತೀರ್ಥಸ್ಯಾಽಸ್ಯ ಪ್ರಭಾವತಃ ॥ ೬೯ ॥**
**ದ್ವಾದಶೈವ ತು ಯುಗ್ಮಾನಿ ದೇವ್ಯಾ ದೇವಸ್ಯ ಭೋಜಯೇತ್ ।**
**ಕೂಪೀಂ ನಖರಿಣೀಂ ದದ್ಯಾತ್ತಾಟಂಕಂ ಕತಕಾಂಜನಂ ॥ ೭೦ ॥**
**ವೇತ್ರಜಾಂ ಕಂಚುಕೀಂ ಚೈವ ವಸ್ತ್ರೇ ಕೌಸುಂಭಕೇ ತಥಾ ।**
**ಶ್ವೇತಾಽನುಲೇಪನಂ ಪುಂಸಾಂ ಸ್ತ್ರೀಣಾಂ ದದ್ಯಾಚ್ಚ ಕುಂಕುಮಂ ॥ ೭೧ ॥**

---

೬೬. ನಿರ್ಭಾಗ್ಯರಾದ ಸ್ತ್ರೀಯಾಗಲಿ, ಪುರುಷರಾಗಲಿ ಈ ತೀರ್ಥದಲ್ಲಿ ಸ್ನಾನವನ್ನು ಮಾಡಲು ಸೌಭಾಗ್ಯಶಾಲಿಗಳಾಗುವರು. ಮತ್ತು ಸಕಲ ಭೋಗ ಗಳನ್ನೂ ಪಡೆಯುವರು.

೬೭–೬೮. ಯಾವನು ಎಳ್ಳಿನಲ್ಲಾಗಲಿ, ಉಪ್ಪಿನಿಂದಾಗಲಿ, ಸಕ್ಕರೆ ಯಿಂದಾಗಲಿ, ಬೆಲ್ಲದಿಂದಾಗಲಿ, ಜೇನುತುಪ್ಪದಿಂದಾಗಲಿ ತುಲಾಭಾರವನ್ನು ಮಾಡಿಸಿಕೊಂಡು ದ್ರವ್ಯಲೋಭವನ್ನು ಮಾಡದೆ ದಾನಮಾಡುವನೊ, ಅವನು ಪಾರ್ವತೀದೇವಿಯ ಪ್ರೀತಿಯನ್ನು ಪಡೆಯಲು ಮಾಡಿದ ಕಾರ್ಯವಾದರೆ ಲವಣ ದಾನದಿಂದ ರೂಪವಂತನೂ, ತಿಲದಾನದಿಂದ ಸರ್ವಾಂಗ ಕಾಂತಿಯುಕ್ತನೂ ಆಗುವನು.

೬೯. ಸಕ್ಕರೆಯಿಂದ ಅವನ ಧನವು ಅಭಿವೃದ್ಧಿಯನ್ನೈದುವುದು. ಬೆಲ್ಲದ ದಾನದಿಂದ ದೇಹದ ಅವಯವಗಳು ಹೃಷ್ಟಪುಷ್ಟಗಳಾಗುವುವು. ಜೇನುತುಪ್ಪ ದಿಂದ ಸೌಭಾಗ್ಯವು ಲಭಿಸುವುದು. ಈ ತೀರ್ಥದ ಪ್ರಭಾವವಿಂತಹ ಮಹತ್ತರ ವಾದುದು.

೭೦–೭೧. ದೇವಿಯ ಮತ್ತು ದೇವನ ಪ್ರೀತಿಗಾಗಿ ಹನ್ನೆರಡು ದಂಪತಿ ಗಳಿಗೆ ಭೋಜನವನ್ನು ಮಾಡಿಸಬೇಕು. ಮುತ್ತೈದೆಯರಿಗೆ ಪಂಚಪಾತ್ರೆ, ಉದ್ಧರಣೆಗಳನ್ನೂ, ಕಿವಿಯೋಲೆಗಳನ್ನೂ, ಮರದ ಬಾಗಿನಗಳನ್ನೂ, ಕುಪ್ಪಸ ಗಳನ್ನೂ, ಕೇಸರಿ ಬಣ್ಣದ ಸೀರೆಗಳನ್ನೂ ಕೊಡಬೇಕು. ಗಂಡಸರಿಗೆ ಬಿಳಿಯ ಅನುಲೇಪನ ದ್ರವ್ಯವನ್ನೂ ಸ್ತ್ರೀಯರಿಗೆ ಕುಂಕುಮವನ್ನೂ ದಾನಮಾಡಬೇಕು.

ಆಷಾಢೇ ಶ್ರಾವಣೇ ವಾಽಪಿ ಮಾಸಿ ಭಾದ್ರಪದೇ ತಥಾ ।
ಶುಕ್ಲಾಶ್ವಿನತೃತೀಯಾಯಾಮುತ್ತಮಂ ವ್ರತಮಾಚರೇತ್ ॥ ೭೨ ॥
ಉತ್ತಮಾ ಜಾಯತೇ ನಾರೀ ಯಥಾ ದೇವೀ ಉಮಾ ತಥಾ ।
ಉಮಾಮಹೇಶ್ವರೌ ಕಾರ್ಯೌ ಸೌವರ್ಣೌ ಚ ಸ್ವಶಕ್ತಿತಃ ॥ ೭೩ ॥
ಧಾರ್ಯೌ ನಾರ್ಯಾ ಹಿ ತೌ ದೇವೌ ಸ್ವಯಂ ತುಲಾಽವರೋಹಣೇ ।
ಫಲಾನಿ ಚೈವ ದೇಯಾನಿ ಶಾಕಾನಿ ವಿವಿಧಾನಿ ಚ ॥ ೭೪ ॥
ತತ್ರ ದತ್ತಂ ಹುತಂ ಜಪ್ತಂ ಸರ್ವಂ ಕೋಟಿಗುಣಂ ಭವೇತ್ ।
ಏವಂ ಯಾ ಕುರುತೇ ತತ್ರ ತೀರ್ಥೇ ನಾರೀ ಸಮಾಹಿತಾ ॥ ೭೫ ॥
ಗಂಧರ್ವಾಽಪ್ಸರಸಾಂ ಲೋಕೇ ಮೃತಾ ಯಾತಿ ನ ಸಂಶಯಃ ।
ಅತ್ರ ತೀರ್ಥೇ ಚ ದ್ವೇ ಲಿಂಗೇ ಪೂಜಿತೇ ದೇವದಾನವೈಃ ॥ ೭೬ ॥
ದೃಷ್ಟ್ವಾ ತೇ ಪರಮಾಂ ಸಿದ್ಧಿಂ ಪ್ರಾಪ್ನುತೋ ದಂಪತೀ ತದಾ ।
ಕಾರ್ತಿಕ್ಯಾಂ ತು ವಿಶೇಷೇಣ ಕೃತ್ವಾ ತತ್ರ ಪ್ರಜಾಗರಂ ।
ಸಂಪೂಜ್ಯ ಗಂಧಪುಷ್ಪೈಶ್ಚ ರುದ್ರಲೋಕಮವಾಪ್ನುಯಾತ್ ॥ ೭೭ ॥

---

೭೨. ಆಷಾಢ, ಶ್ರಾವಣ, ಭಾದ್ರಪದ ಮತ್ತು ಆಶ್ವಯುಜ ಮಾಸಗಳಲ್ಲಿ ಶುಕ್ಲಪಕ್ಷದ ತದಿಗೆಯ ದಿನಗಳಲ್ಲಿ ಉತ್ತಮವಾದ ವ್ರತವನ್ನು ಆಚರಿಸಬೇಕು.

೭೩. ಇದನ್ನು ಮಾಡಿದ ನಾರಿಯು ಪಾರ್ವತೀದೇವಿಯಂತೆಯೇ ಸರ್ವೋತ್ತಮಳಾಗುವಳು. ಪ್ರತಿಯು ತನ್ನ ಶಕ್ತ್ಯನುಸಾರವಾಗಿ ಚಿನ್ನದಿಂದ ಉಮಾಮಹೇಶ್ವರರ ವಿಗ್ರಹಗಳನ್ನು ಮಾಡಿಸಬೇಕು.

೭೪. ಹೆಂಗಸರು ತುಲಾಭಾರವನ್ನು ಮಾಡಿಕೊಂಡಮೇಲೆ ಆ ದೇವತೆಗಳ ವಿಗ್ರಹಗಳನ್ನು ಕೈಯಲ್ಲಿ ಧರಿಸಬೇಕು. ಬಹುವಿಧಗಳಾದ ಫಲಗಳನ್ನೂ ತರಕಾರಿಗಳನ್ನೂ ದ್ವಿಜರಿಗೆ ದಾನಮಾಡಬೇಕು.

೭೫. ಈ ತೀರ್ಥದಲ್ಲಿ ಮಾಡಿದ ದಾನ, ಹೋಮ, ಜಪ ಮುಂತಾದುವೆಲ್ಲವೂ ಕೋಟಿಗುಣಿತವಾಗುವುವು. ಇಂತು ಇಲ್ಲಿ ಯಾವ ಸ್ತ್ರೀಯು ಸಮಾಧಾನ ಮನಸ್ಸಿನಿಂದ ವ್ರತವನ್ನಾಚರಿಸುವಳೊ, ಅವಳು ಮೃತಳಾದರೆ ಗಂಧರ್ವ ಮತ್ತು ಅಪ್ಸರೆಯರ ಲೋಕಕ್ಕೆ ಹೋಗುವಳು ; ಇದರಲ್ಲಿ ಸಂದೇಹವಿಲ್ಲ.

೭೬. ಈ ತೀರ್ಥದಲ್ಲಿ ದೇವತೆಗಳಿಂದಲೂ ದಾನವರಿಂದಲೂ ಪೂಜೆಗೊಳ್ಳುತ್ತಿರುವ ಎರಡು ಲಿಂಗಗಳಿರುವುವು. ಅವುಗಳ ದರ್ಶನವನ್ನು ಮಾಡಲು ದಂಪತಿಗಳು ಸಕಲ ಕಾರ್ಯಗಳಲ್ಲಿಯೂ ಸಿದ್ಧಿಯನ್ನು ಪಡೆಯುವರು.

೭೭. ವಿಶೇಷವಾಗಿ ಕಾರ್ತಿಕ ಮಾಸದ ಹುಣ್ಣಿಮೆಯ ದಿನದಲ್ಲಿ ಸಾಯಂಕಾಲದ ಪೂಜೆಯನ್ನು ಗಂಧಪುಷ್ಪಗಳಿಂದ ಮಾಡಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದವನು ರುದ್ರಲೋಕವನ್ನು ಹೊಂದುವನು.

**ಯಥಾ ದೇವ್ಯಾಃ ಸ್ವರೂಪೇಣ ವಿಯೋಗೋ ನೈವ ದೃಶ್ಯತೇ ।**
**ತಥಾ ತಯೋರ್ವಿಯೋಗಶ್ಚ ದೃಶ್ಯತೇ ನ ಕದಾಚನ ॥ ೭೮ ॥**
**ಏವಂ ಕೃತ್ವಾಽಥ ತಾಂ ವಿಪ್ರ ಸರ್ವಾಶ್ಚ ತ್ರಿದಿವಂ ಗತಾಃ ।**
**ಉಕ್ತಮಪ್ಸರಸಾಂ ತೀರ್ಥಂ ತೀರ್ಥಾಂತರಮಥೋಚ್ಯತೇ ॥ ೭೯ ॥**
**ದಕ್ಷಿಣೇ ಪೃಷ್ಠದೇವ್ಯಾ ವೈ ಮಾಹಿಷಂ ಕುಂಡಮುಚ್ಯತೇ ।**
**ಮಹಿಷೋ ದಾನವಃ ಪೂರ್ವಂ ನಿಹತೋ ಗಣನಾಯಕೈಃ ॥ ೮೦ ॥**
**ತತ್ರ ತೀರ್ಥೇ ನರಃ ಸ್ನಾತ್ವಾ ಮಾತೄಃ ಸಂಪೂಜ್ಯ ಯತ್ನತಃ ।**
**ಪ್ರೇತರಕ್ಷಃಪಿಶಾಚಾನಾಂ ಪೀಡಯಾ ಸ ವಿಮುಚ್ಯತೇ ॥ ೮೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅಪ್ಸರಃಕುಂಡ ಮಾಹಾತ್ಮ್ಯವರ್ಣನಂ" ನಾಮಾಷ್ಟಮೋಽಧ್ಯಾಯಃ**

---

೭೮. ಪಾರ್ವತಿಗೆ ಪರಮೇಶ್ವರನ ಸ್ವರೂಪ (ದೇಹ)ದಿಂದ ಹೇಗೆ ವಿಯೋಗವು ಕಾಣುವುದಿಲ್ಲವೊ, ಹಾಗೆಯೇ ಆ ದಂಪತಿಗಳಿಗೂ ಎಂದಿಗೂ ವಿಯೋಗವುಂಟಾಗುವುದಿಲ್ಲ."

೭೯. ಈ ವಿಧವಾಗಿ ಊರ್ವಶಿಯನ್ನು ಪುರೂರವನೊಡನೆ ಬಿಟ್ಟು ಆ ಅಪ್ಸರ ಸ್ತ್ರೀಯರೆಲ್ಲರೂ ಸ್ವರ್ಗಕ್ಕೆ ತೆರಳಿದರು. ಎಲೈ ವ್ಯಾಸನೆ! ಅಪ್ಸರ ಸ್ತ್ರೀರ್ಥದ ಮಹಿಮೆಯನ್ನು ಹೇಳಿದೆನು. ಇನ್ನು ಬೇರೆ ತೀರ್ಥವನ್ನು ನಿರೂಪಿಸು ತ್ತೇನೆ.

೮೦. ಪೃಷ್ಠದೇವಿಗೆ ದಕ್ಷಿಣದಲ್ಲಿ ಮಾಹಿಷಕುಂಡವೆಂಬ ತೀರ್ಥವಿರುವುದು. ಅಲ್ಲಿಯೇ ಹಿಂದೆ ಮಹಿಷನೆಂಬ ರಾಕ್ಷಸನು ಗಣನಾಯಕರಿಂದ ಸಂಹರಿಸಲ್ಪಟ್ಟನು.

೮೧. ಆ ತೀರ್ಥದಲ್ಲಿ ಪ್ರಯತ್ನಪೂರ್ವಕವಾಗಿ ಸ್ನಾನವನ್ನು ಮಾಡಿ ಮಾತೃಕೆಯರನ್ನು ಪೂಜಿಸಿದರೆ ಮಾನವನು ಪ್ರೇತ, ರಾಕ್ಷಸ, ಪಿಶಾಚಗಳ ಪೀಡೆಯಿಂದ ಬಿಡುಗಡೆಯನ್ನು ಹೊಂದುವನು.

**ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅಪ್ಸರಃಕುಂಡಮಾಹಾತ್ಮ್ಯವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ನವಮೋಽಧ್ಯಾಯಃ

## ಮಹಿಷಕುಂಡ ರುದ್ರಸರೋಮಾಹಾತ್ಮ್ಯವರ್ಣನಂ

**ವ್ಯಾಸ ಉವಾಚ :—**

**ಕಥಂ ತನ್ಮಾಹಿಷಂ ಕುಂಡಂ ಮಾತೄಣಾಮಾಕೃತಿಃ ಕಥಂ ।**
**ರುದ್ರಸ್ಯೈವ ಕಥಂ ಕ್ಷೇತ್ರೇ ಮಹಿಷೋ ದಾನವೋ ಹತಃ ॥ ೧ ॥**

**ಸನತ್ಕುಮಾರ ಉವಾಚ :—**

**ಕಪಾಲಖಂಡಮಾದಾಯ ಮಹಾದೇವೋಽಪ್ಯತಿಪ್ರಭಂ ।**
**ಬ್ರಹ್ಮತೇಜೋಮಯಂ ದಿವ್ಯಂ ಜ್ವಲಂತಮಿವ ಚಾರ್ಚಿಷಾ ॥ ೨ ॥**
**ಕ್ರೀಡಮಾನೋ ಜಗನ್ನಾಥೋ ಮೋಹಯಾಮಾಸ ವೈ ಸುರಾನ್ ।**
**ನಿಮೇಷಾತ್ಸ ಇಮಂ ಲೋಕಂ ಯೋಗಾತ್ಮಾ ಯೋಗಲೀಲಯಾ ॥ ೩ ॥**
**ಪ್ರಾಪ್ಯ ಪುಣ್ಯತಮಂ ಕ್ಷೇತ್ರಂ ಯತ್ರಾಽತಿಷ್ಠನ್ಮಹಾಪ್ರಭುಃ ।**
**ತತ್ರ ತಚ್ಚ ಮಹದ್ದಿವ್ಯಂ ಕಪಾಲಂ ದೇವತಾಽಧಿಪಃ ॥ ೪ ॥**
**ಸ್ಥಾಪಯಾಮಾಸ ದೀಪ್ತಾರ್ಚಿರ್ಗಣಾನಾಮಗ್ರತಃ ಪ್ರಭುಃ ।**
**ತತ್ಸ್ಥಾಪಿತಮಥೋ ದೃಷ್ಟ್ವಾ ಗತಾಃ ಸರ್ವೇ ಮಹೌಜಸಃ ॥ ೫ ॥**

---

### ಕನ್ನಡದ ಅನುವಾದ

#### ಮಹಿಷಕುಂಡ— ರುದ್ರಸರೋಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಈ ಮಹಿಷಕುಂಡವುಂಟಾದುದು ಹೇಗೆ? ಮಾತೃಕೆಯರ ಸ್ವರೂಪವೆಂತು? ಪರಮೇಶ್ವರನ ಈ ಕ್ಷೇತ್ರದಲ್ಲಿಯೇ ಮಹಿಷನೆಂಬ ರಾಕ್ಷಸನು ಹೇಗೆ ಸಂಹೃತನಾದನು?

೨–೩. ಸನತ್ಕುಮಾರನು ಹೇಳುತ್ತಾನೆ:— ಲೋಕೇಶ್ವರನೂ, ಮಹಾಯೋಗಿಯೂ ಆದ ಮಹಾದೇವನು ಅತ್ಯಂತ ಕಾಂತಿಯುಕ್ತವೂ, ಬ್ರಹ್ಮತೇಜಸ್ಸಂಪನ್ನವೂ, ದಿವ್ಯವೂ, ಜ್ವಾಲೆಗಳಿಂದ ಲೋಕವನ್ನು ಸುಡುತ್ತಿರುವುದೂ ಆದ ಬ್ರಹ್ಮಕಪಾಲವನ್ನು ತೆಗೆದುಕೊಂಡು ನಾಟ್ಯವಾಡುತ್ತ ತನ್ನ ಯೋಗಮಾಯೆಯಿಂದ ನಿಮಿಷಮಾತ್ರದಲ್ಲಿಯೇ ದೇವತೆಗಳನ್ನೂ ಭೂಲೋಕವನ್ನೂ ಮೋಹಗೊಳಿಸಿದನು.

೪–೫. ಪುಣ್ಯತಮವಾದ ಮಹಾಕಾಲವನಕ್ಷೇತ್ರವನ್ನು ಸೇರಿ ಆ ಸರ್ವೇಶ್ವರನು ಅಲ್ಲಿಯೇ ನೆಲಸಿದನು. ಆಗಲಾತನು ಮಹತ್ತರವೂ, ದಿವ್ಯವೂ, ಉರಿಯನ್ನುಗುಳುತ್ತಿರುವುದೂ ಆದ ಕಪಾಲವನ್ನೂ ಅಲ್ಲಿಯೇ ತನ್ನ ಗಣಗಳ ಸಮ್ಮುಖದಲ್ಲಿರಿಸಿದನು. ಇಂತು ಸ್ಥಾಪಿತವಾದ ಕಪಾಲವನ್ನು ಕಂಡು ಪರಾಕ್ರಮಿಗಳಾದ ಸಕಲ ಗಣಗಳೂ ಅಲ್ಲಿ ನೆರೆದರು.

ವಿನದತ್ಸು ಮಹಾನಾದಂ ನಾದಯಂತೋ ದಿಶೋ ದಶ ।
ಕ್ಷೋಭಾರ್ಣವಾಶನಿಪ್ರಖ್ಯಂ ನಭೋ ಯೇನ ವಿದೀರ್ಯತೇ ॥ ೬ ॥
ತೇನ ಶಬ್ದೇನ ಘೋರೇಣ ದಾನವೋ ದೇವಕಂಟಕಃ ।
ಹಾಲಾಹಲ ಇತಿ ಖ್ಯಾತೋ ದೇಶಂ ತಮಭಿಧಾವಿತಃ ॥ ೭ ॥
ಅಮೃಷ್ಯಮಾಣಃ ಕ್ರೋಧಾರ್ತೋ ದುರಾತ್ಮಾ ದುರ್ಜಯಃ ಸುರೈಃ ।
ಬ್ರಹ್ಮದತ್ತವರಶ್ಚೈವ ಮಾಹಿಷಂ ವಪುರಾಸ್ಥಿತಃ ॥ ೮ ॥
ದೈತ್ಯೈಃ ಪರಿವೃತೋ ಘೋರೈಃ ಕೋಟಿಭಿಶ್ಚೋದ್ಯತಾಯುಧೈಃ ।
ತಮಾಯಾಂತಂ ತು ಸಕ್ರೋಧಂ ಮಹಿಷಂ ದೇವಕಂಟಕಂ ॥ ೯ ॥
ಸಮಾವೇಕ್ಷ್ಯಾಹ ವೈ ದೇವೋ ಗಣಾನ್ಸರ್ವಾನ್ಪಿನಾಕಧೃಕ್ ।
ಮಾಯಾವೀ ಗಣಪಾ ದೈತ್ಯಸ್ತ್ರೈಲೋಕ್ಯಸ್ಯಾಪಿ ಕಂಟಕಃ ॥ ೧೦ ॥
ಆಯಾತಿ ತ್ವರಿತೋ ಯೂಯಂ ತಸ್ಮಾದೇನಂ ವಿನಿಘ್ನಥ ।
ಕಪಾಲಸ್ಯ ಗತಿಂ ಸರ್ವ ಆಶ್ರಿತಾ ಗಣನಾಯಕಾಃ ॥ ೧೧ ॥

---

೬. ಅವರು ಮಹಾಘೋಷವನ್ನು ಮಾಡುತ್ತ ಉಕ್ಕಿಬರುವ ಕಡಲಿನಂತೆಯೂ ಸಿಡಿಲಿನಂತೆಯೂ ಇರುವ ಶಬ್ದದಿಂದ ಹತ್ತು ದಿಕ್ಕುಗಳನ್ನೂ ತುಂಬುತ್ತ ಆಕಾಶವನ್ನೇ ಸೀಳುವಂತಿದ್ದರು.

೭. ಘೋರವಾದ ಆ ಶಬ್ದವನ್ನು ಕೇಳಿ ದೇವತೆಗಳ ಶತ್ರುವಾದ ಹಾಲಾಹಲನೆಂಬ ರಾಕ್ಷಸನೊಬ್ಬನು ಆ ಕ್ಷೇತ್ರವನ್ನು ಕುರಿತು ಓಡಿಬಂದನು.

೮. ಈ ಶಬ್ದವನ್ನು ಸಹಿಸಲಾರದೆ ಕೋಪದಿಂದ ಕುದಿಯುತ್ತಿದ್ದ ಆ ದುರಾತ್ಮನು ದೇವತೆಗಳಿಗೂ ಜಯಿಸಲಸಾಧ್ಯನಾಗಿದ್ದನು. ಅವನು ಬ್ರಹ್ಮದೇವನು ಕೊಟ್ಟ ವರದ ಫಲವಾಗಿ ಮಹಿಷ (ಕಾಡುಕೋಣ)ದ ರೂಪವನ್ನು ಸ್ವೀಕರಿಸಿದ್ದನು.

೯. ಆ ರಾಕ್ಷಸನು ಭಯಂಕರರೂ ಅನೇಕ ಕೋಟಿ ಸಂಖ್ಯೆಯುಳ್ಳವರೂ, ಆಯುಧಗಳನ್ನು ಝಳಪಿಸುತ್ತಿರುವವರೂ ಆದ ರಾಕ್ಷಸರಿಂದ ಪರಿವೃತನಾಗಿದ್ದನು.

೧೦. ರೋಷಭರಿತನಾಗಿ ಬರುತ್ತಿರುವ ದೇವಶತ್ರುವಾದ ಆ ಮಹಿಷದಾನವನನ್ನು ಕಂಡು ದೇವದೇವನು ಪಿನಾಕವನ್ನು ಕೈಯಲ್ಲಿ ಹಿಡಿದು ತನ್ನ ಸಕಲ ಗಣಗಳಿಗೂ ಇಂತೆಂದನು.

೧೧. "ಎಲೈ ಗಣನಾಯಕರಿರಾ! ಈ ರಾಕ್ಷಸನು ಬೇಗ ಓಡಿಬರುತ್ತಿರುವನು. ಆದುದರಿಂದ ನೀವೆಲ್ಲರೂ ಈ ಕಪಾಲದ ಮರೆಯನ್ನು ಆಶ್ರಯಿಸಿಕೊಂಡು ಇವನನ್ನು ಸಂಹರಿಸಿರಿ.

ತತೋ ದೇವಗಣಾ ದೃಷ್ಟ್ವಾ ತಮಾಯಾಂತಂ ಮಹಾಽಸುರಂ ।
ಗರ್ಜಮಾನಂ ಮಹಾನಾದಂ ಭ್ರಮಮಾಣಂ ಮಹಾಭುಜಂ ॥ ೧೨ ॥
ಬಿಭಿದುಃ ಶೂಲಸಂಘಾತ್ಯೈರಸಿಭಿರ್ಮುಸಲ್ಯೈಸ್ತಥಾ ।
ಸಂಮುಹ್ಯ ಶರಜಾಲೇನ ತತೋ ಭೂಮೌ ನ್ಯಪಾತಯನ್ ॥ ೧೩ ॥
ಹತೇ ತಸ್ಮಿನ್ಮಹಾದೇವೋ ದೇವಾನ್ಪ್ರೋವಾಚ ವೈ ತದಾ ।
ಅಹೋ ದರ್ಪಾತಿಮೂಢಃ ಸ ದರ್ಪೇಣ ನಿಧನಂ ಗತಃ ॥ ೧೪ ॥
ಏತಸ್ಮಿನ್ನಂತರೇ ವ್ಯಾಸ ತತ್ಕಪಾಲಾತ್ಸುಭೈರವಾಃ ।
ದೀಪ್ತಾಸ್ಯಾ ಮಾತರಃ ಸರ್ವಾಃ ಪ್ರಚಂಡಾಸ್ತ್ರಾ ಮಹಾಬಲಾಃ ॥ ೧೫ ॥
ಅಭ್ಯಧಾವಂಸ್ತಮುದ್ದೇಶಂ ಮಹಾದೇವಂ ನಿವೇದ್ಯ ವೈ ।
ದೈತ್ಯಂ ತಾ ಭಕ್ಷಯಂತಿಸ್ಮ ಛಿತ್ವಾ ಛಿತ್ವಾ ಮಹಾಬಲಾಃ ॥ ೧೬ ॥
ಕಪಾಲಮಾತರಸ್ತಸ್ಮಾತ್ಖ್ಯಾತಾಃ ಕ್ಷೇತ್ರೇ ಮಹಾಬಲಾಃ ।
ಮಹಾಕಪಾಲಸ್ತಸ್ಮಾದ್ವೈ ತಾದೃಶಃ ಪರಿಕೀರ್ತಿತಃ ॥ ೧೭ ॥

---

೧೨. ಆಗ ಮಹಾನಾದವನ್ನು ಮಾಡುತ್ತಿರುವವನೂ, ಆಯುಧವನ್ನು ಹಿಡಿದ ಮಹಾಭುಜವನ್ನು ತಿರುಗಿಸುತ್ತ ಬರುತ್ತಿರುವ ಆ ಮಹಾದೈತ್ಯನನ್ನು ದೇವತಾಸಮೂಹಗಳು ನೋಡಿದರು.

೧೩. ಆ ರಾಕ್ಷಸನನ್ನು ತಮ್ಮ ಅನೇಕ ಶೂಲಗಳಿಂದಲೂ, ಕತ್ತಿಗಳಿಂದಲೂ, ಮುಸಲಾಯುಧಗಳಿಂದಲೂ ಹೊಡೆದು ಘಾಯಗಳನ್ನು ಮಾಡಿ ಬಾಣಗಳ ಮಳೆಯನ್ನು ಕರೆದು ಅವನನ್ನು ಮೂರ್ಛೆಗೊಳಿಸಿ ಬಳಿಕ ಭೂಮಿಯಲ್ಲಿ ಬೀಳಿಸಿದರು.

೧೪. ಇಂತು ರಾಕ್ಷಸನು ಹತನಾಗಲು ಮಹಾದೇವನು ದೇವತೆಗಳನ್ನು ಕುರಿತು "ಗರ್ವದಿಂದ ಮೂಢನಾದ ಈ ರಾಕ್ಷಸನು ತನ್ನ ಗರ್ವದಿಂದಲೇ ಮರಣವನ್ನು ಹೊಂದಿದನು" ಎಂದನು.

೧೫. ಎಲೈ ವ್ಯಾಸನೆ! ಇಷ್ಟರಲ್ಲಿಯೇ ಬ್ರಹ್ಮಕಪಾಲದಿಂದ ಭಯಂಕರರೂ, ಬಾಯಿಂದ ಉರಿಯನ್ನುಗುಳುತ್ತಿರುವವರೂ, ಭಯಂಕರಾಸ್ತ್ರಗಳನ್ನು ಹಿಡಿದಿರುವವರೂ, ಮಹಾಪರಾಕ್ರಮಿಗಳೂ ಆದ ಮಾತೃಕೆಯರುದಿಸಿದರು.

೧೬. ಆ ರಾಕ್ಷಸನು ಬಿದ್ದಿದ್ದ ಪ್ರದೇಶಕ್ಕೆ ಓಡಿಬಂದು ಮಹಾದೇವನ ಅನುಜ್ಞೆಯನ್ನು ಪಡೆದು ಮಹಾಬಲಶಾಲಿಗಳಾದ ಅವರೆಲ್ಲರೂ ಆ ದೇಹವನ್ನು ಕತ್ತರಿಸಿ ತಿಂದುಹಾಕಿದರು.

೧೭. ಆದುದರಿಂದ ಅವರಿಗೆ ಕಪಾಲಮಾತೆಯರೆಂಬ ಹೆಸರು ಪ್ರಖ್ಯಾತವಾಯಿತು. ಅದರಿಂದಲೇ ಆ ಪ್ರದೇಶವೂ ಮಹಾಕಪಾಲವೆಂದೇ ಕರೆಯಲ್ಪಡುತ್ತಿರುವುದು.

ಸ್ಥಾಪಿತಸ್ಯ ಕಪಾಲಸ್ಯ ಭಿತ್ವಾ ಸಮಭವತ್ಪುರಾ ।
ಖ್ಯಾತಂ ಶಿವತಡಾಗಂ ಚ ಸರ್ವಪಾಪಪ್ರಣಾಶನಂ ॥ ೧೮ ॥
ತದದ್ಯಾಪಿ ಮಹದ್ದಿವ್ಯಂ ಸರಸ್ತತ್ರ ಪ್ರಕಾಶತೇ ।
ತ್ರಿಷು ಲೋಕೇಷು ವಿಖ್ಯಾತಂ ಗಣಗಂಧರ್ವಸೇವಿತಂ ॥ ೧೯ ॥
ಪಾತ್ರಸ್ಥಮುದ್ಧೃತಂ ವಾಽಪಿ ಶೀತೋಷ್ಣಂ ಕ್ವಥಿತಂ ಜಲಂ ।
ರೌದ್ರಂ ಸರಃ ಪುನಾತೀಹಾಽಶ್ವಮೇಧಾಽವಭೃಥೋ ಯಥಾ ॥ ೨೦ ॥
ಪ್ರಾಗಾದ್ಬ್ರಹ್ಮಾಽಪಿ ತಂ ದೇಶಂ ದೇವತಾನಾಂ ಶತೈರ್ವೃತಃ ।
ಸ್ವರ್ಗಲೋಕಸ್ಯ ನಿಃಶ್ರೇಣೀ ಕೀರ್ತಿತಾ ಬ್ರಹ್ಮಣಾ ಸ್ವಯಂ ॥ ೨೧ ॥
ಅತ್ರ ತ್ಯಜಂತಿ ಯೇ ಪ್ರಾಣಾನ್ರುದ್ರಲೋಕಂ ವ್ರಜಂತಿ ತೇ ।
ಧನ್ಯಾ ವ್ಯಾಸ ನರಾ ಮರ್ತ್ಯೇ ಮಹಾಕಾಲವನೇ ಸ್ಥಿತಾಃ ॥ ೨೨ ॥
ರೌದ್ರೇ ಸರಸಿ ಯೇ ಸ್ನಾಂತಿ ಜಲಂ ವಾಽಪಿ ಪಿಬಂತಿ ಯೇ ।
ಸ್ವಧರ್ಮಾಚಾರನಿರತಾಃ ಪಶ್ಯಂತೀಶಾನಮೀಶ್ವರಂ ॥ ೨೩ ॥

---

೧೮. ಹಿಂದೆ ಇಲ್ಲಿ ಸ್ಥಾಪಿತವಾದ ಕಪಾಲವು ಒಡೆದು ಪ್ರಖ್ಯಾತವಾದ ಶಿವತಟಾಕವೆಂಬ ತೀರ್ಥವುಂಟಾಯಿತು. ಈ ತೀರ್ಥವು ಸಕಲಪಾತಕಗಳನ್ನೂ ನಾಶಗೊಳಿಸುವುದು.

೧೯. ಇಂದಿಗೂ ದಿವ್ಯವಾದ ಈ ಸರೋವರವು ಅಲ್ಲಿ ಬಹುವಾಗಿ ಪ್ರಕಾಶಿಸುತ್ತಿರುವುದು. ಮೂರುಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು. ರುದ್ರಗಣಗಳೂ ಗಂಧರ್ವರೂ ಅದನ್ನು ಸೇವಿಸುತ್ತಿರುವರು.

೨೦. ಪಾತ್ರೆಯಲ್ಲಿ ತಂದುದಾಗಲಿ, ತಣ್ಣಗಿರುವುದಾಗಲಿ, ಬೆಚ್ಚಗಿರುವುದಾಗಲಿ, ಕುದಿಸಿದುದಾಗಲಿ ರುದ್ರಸರೋವರದ ಜಲವು ಅಶ್ವಮೇಧಯಜ್ಞವನ್ನು ಮುಗಿಸಿ ಕೊನೆಯಲ್ಲಿ ಮಾಡಿದ ಅವಭೃಥಸ್ನಾನದಂತೆ ಮನುಷ್ಯರನ್ನು ಪಾವನಗೊಳಿಸುವುದು.

೨೧. ಬ್ರಹ್ಮದೇವನೂ ಸಹ ನೂರಾರು ದೇವತೆಗಳಿಂದೊಡಗೂಡಿ ಆ ದೇಶಕ್ಕೆ ಬಂದನು. ಆತನು ತಾನೇ, "ಸರೋವರವು ಸ್ವರ್ಗಲೋಕಕ್ಕೆ ಸೋಪಾನವಾಗಿರುವುದು" ಎಂದು ಅಪ್ಪಣೆಯಿತ್ತನು.

೨೨. ಇಲ್ಲಿ ಯಾರು ಪ್ರಾಣಗಳನ್ನು ಬಿಡುವರೊ, ಅವರೆಲ್ಲರೂ ರುದ್ರಲೋಕಕ್ಕೆ ಹೋಗುವರು. ಅಯ್ಯಾ ವ್ಯಾಸನೆ! ಮರ್ತ್ಯಲೋಕದಲ್ಲಿ ಮಹಾಕಾಲವನದಲ್ಲಿ ವಾಸಮಾಡುತ್ತಿರುವ ಜನರೇ ಪರಮಧನ್ಯರು.

೨೩. ಯಾರು ತಮ್ಮ ವರ್ಣಾಶ್ರಮಾಚಾರಗಳಲ್ಲಿ ಶ್ರದ್ಧೆಯುಳ್ಳವರಾಗಿ ರುದ್ರಸರೋವರದಲ್ಲಿ ಸ್ನಾನಮಾಡುವರೊ, ಮತ್ತು ಅದರ ನೀರನ್ನು ಕುಡಿಯುವರೊ, ಅವರು ಲೋಕೇಶ್ವರನಾದ ಮಹಾದೇವನನ್ನು ನೋಡುವರು.

ಇತಿ ಸ್ವರ್ಗಗತಾ ದೇವಾಃ ಸ್ಪೃಹಾಂ ಕುರ್ವಂತಿ ನಿತ್ಯಶಃ ॥ ೨೪ ॥
ಇದಂ ಶುಭಂ ದಿವ್ಯಮಧರ್ಮನಾಶನಂ
ಮಹಾಕಪಾಲಂ ಸುರದೈತ್ಯಪೂಜಿತಂ ।
ಮಹಾಪ್ರಭಂ ಪಾಪಹರಂ ಸನಾತನಂ
ಸುರೇಶಲೋಕಾದಪಿ ದುರ್ಲಭಂ ಸದಾ ॥ ೨೫ ॥
ತಪೋರತೈಃ ಸಿದ್ಧಗಣೈರಭಿಷ್ಟುತಂ
ಯಥಾ ನಭಃಸ್ಥಂ ದಿನನಾಥಮಂಡಲಂ ।
ಯ ಏಕಚಿತ್ತಃ ಶೃಣುಯಾತ್ಪ್ರಸಾದತ
ಸ್ತ್ರಿವಿಷ್ಟಪಂ ಗಚ್ಛತಿ ಸೋಽಭಿನಂದಿತಃ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಮಹಿಷಕುಂಡ ರುದ್ರಸರೋಮಾಹಾತ್ಮ್ಯವರ್ಣನಂ" ನಾಮ ನವಮೋಽಧ್ಯಾಯಃ

---

೨೪. ಆದಕಾರಣ ಸ್ವರ್ಗದಲ್ಲಿರುವ ದೇವತೆಗಳು ನಿತ್ಯವೂ ಈ ತೀರ್ಥದ ಸೇವೆಯನ್ನಪೇಕ್ಷಿಸುತ್ತಿರುವರು.

೨೫. ಈ ಮಹಾಕಪಾಲಕ್ಷೇತ್ರವು ಪವಿತ್ರವು; ದಿವ್ಯವಾದುದು; ಪಾತಕಗಳನ್ನು ನಾಶಮಾಡುವುದು; ದೇವತೆಗಳಿಂದಲೂ ದಾನವರಿಂದಲೂ ಪೂಜೆಗೊಳ್ಳುತ್ತಿರುವುದು; ಮಹಾಮಹಿಮೋಪೇತವು; ಪಾಪಹರವು; ಅನಾದಿಯಾಗಿರುವುದು; ಮಾನವರಿಗೆ ಸ್ವರ್ಗಲೋಕಕ್ಕಿಂತಲೂ ಅತ್ಯಂತ ದುರ್ಲಭವಾಗಿರುವುದು.

೨೬. ಆಕಾಶದಲ್ಲಿರುವ ಸೂರ್ಯಮಂಡಲದಂತೆ ಈ ತೀರ್ಥವು ತಪೋನಿರತರಾದ ಸಿದ್ಧರ ಸಮೂಹಗಳಿಂದ ಸ್ತುತಿಸಲ್ಪಟ್ಟಿರುವುದು. ಯಾವನು ಪ್ರಸನ್ನಮನಸ್ಕನಾಗಿ ಏಕಾಗ್ರಚಿತ್ತದಿಂದ ಈ ಅಧ್ಯಾಯವನ್ನು ಕೇಳುವನೊ, ಅವನು ಸಕಲರ ಪೂಜೆಯನ್ನು ಕೈಕೊಂಡು ಸ್ವರ್ಗವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೊಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಮಹಿಷಕುಂಡ—ರುದ್ರಸರೋಮಾಹಾತ್ಮ್ಯವರ್ಣನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಕುಟುಂಬಿಕೇಶ್ವರಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಅಥಾತಃ ಸಂಪ್ರವಕ್ಷ್ಯಾಮಿ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಸ್ವಯಂ ಭೂತಂ ಮಹೇಶಸ್ಯ ವಿಖ್ಯಾತಂ ಕುಟುಂಬಿಕೇಶ್ವರಂ ॥ ೧ ॥
ಮುಚ್ಯತೇ ಸರ್ವಪಾಪೈಸ್ತು ಸಪ್ತಜನ್ಮಕೃತೈರಪಿ ।
ಶುಚಿಃ ಪಶ್ಯತಿ ಯೋ ದೇವಂ ಕೃತ್ವಾ ಶ್ರಾದ್ಧಂ ಯಥಾವಿಧಿ ।
ಸರ್ವಾಂಲ್ಲೋಕಾನತಿಕ್ರಮ್ಯ ಶಿವಲೋಕಂ ಸ ಗಚ್ಛತಿ ॥ ೨ ॥
ಯಸ್ತು ಸರ್ವಾಣಿ ಶಾಕಾನಿ ಕಂದಾನಿ ವಿವಿಧಾನಿ ಚ ।
ತೀರೇ ತಸ್ಯ ಪ್ರಯಚ್ಛೇತ ಸ ಪ್ರಾಪ್ನೋತಿ ಪರಾಂ ಗತಿಂ ॥ ೩ ॥
ಪೌಷೇ ಪ್ರತಿಪದಿ ಸಿತೇ ಅಷ್ಟಮ್ಯಾಂ ವಾ ಸಮಾಹಿತಃ ।
ಏಕೇನೈವೋಪವಾಸೇನ ಅಶ್ವಮೇಧಫಲಂ ಲಭೇತ್ ॥ ೪ ॥
ಆಶ್ವಿನ್ಯಾಂ ಪೌರ್ಣಮಾಸ್ಯಾಂ ಚ ಶುಚಿಃ ಪಶ್ಯತಿ ಮಾನವಃ ।
ಪಟ್ಟಬಂಧಂ ಮಹೇಶಸ್ಯ ಸ ವಿಪಾಪ್ಮಾ ದಿವಂ ವ್ರಜೇತ್ ॥ ೫ ॥

---

## ಕನ್ನಡದ ಅನುವಾದ

### ಕುಟುಂಬಿಕೇಶ್ವರಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ :—ತ್ರಿಲೋಕಗಳಲ್ಲಿ ಪ್ರಖ್ಯಾತಿಯನ್ನು ಪಡೆದುದೂ, ಸ್ವಯಂಭೂತವೂ, ಮಹೇಶ್ವರನಿಗೆ ಪ್ರಿಯವೂ ಆದ ಕುಟುಂಬಿಕೇಶ್ವರವೆಂಬ ತೀರ್ಥವನ್ನು ವರ್ಣಿಸುವೆನು.

೨. ಅದನ್ನು ನೋಡಿದ ಮನುಜನು ಏಳು ಜನ್ಮಗಳಲ್ಲಿ ಮಾಡಿದ ಸಕಲ ಪಾತಕಗಳಿಂದಲೂ ಮುಕ್ತನಾಗುವನು. ಯಾವನು ಶುಚಿರ್ಭೂತನಾಗಿ ಶ್ರಾದ್ಧವನ್ನು ಯಥಾವಿಧಿಯಾಗಿ ನೆರವೇರಿಸಿ ಕುಟುಂಬಿಕೇಶ್ವರನ ದರ್ಶನವನ್ನು ಮಾಡುವನೊ, ಅವನು ಸಕಲಲೋಕಗಳನ್ನೂ ಅತಿಕ್ರಮಿಸಿ ಶಿವಲೋಕವನ್ನು ಸೇರುವನು.

೩. ಯಾವನು ಆ ತೀರ್ಥದ ದಡದಲ್ಲಿ ಬಹುವಿಧ ಶಾಕಗಳನ್ನೂ ಗಡ್ಡೆಗೆಣಸುಗಳನ್ನೂ ದಾನಮಾಡುವನೊ, ಅವನು ಉತ್ತಮಗತಿಯನ್ನು ಪಡೆಯುವನು.

೪. ಪುಷ್ಯಮಾಸದ ಶುಕ್ಲಪಕ್ಷದ ಪಾಡ್ಯದಲ್ಲಾಗಲಿ, ಅಷ್ಟಮಿಯಲ್ಲಾಗಲಿ ಶಾಂತಮನಸ್ಸಿನಿಂದ ಅಲ್ಲಿ ಒಂದು ಉಪವಾಸವನ್ನು ಮಾಡಿದರೂ ಅಶ್ವಮೇಧ ಯಜ್ಞದ ಫಲವನ್ನು ಪಡೆಯುವನು.

೫. ಆ ಕ್ಷೇತ್ರದಲ್ಲಿ ಆಶ್ವಯುಜಮಾಸದ ಹುಣ್ಣಿಮೆಯ ದಿನದಲ್ಲಿ ಶುಚಿಯಾದ ಮಾನವನು ಮಹೇಶ್ವರನಿಗೆ ವಸ್ತ್ರಾಲಂಕಾರವನ್ನು ಮಾಡುವುದನ್ನು ನೋಡಲು ಪಾಪರಹಿತನಾಗಿ ಸ್ವರ್ಗಕ್ಕೆ ಹೋಗುವನು.

ಚೈತ್ರೇ ಮಾಸಿ ಸಿತೇ ಪಕ್ಷೇ ಪಂಚಮ್ಯಾಂ ಸಮುಪೋಷಿತಃ ॥ ೬ ॥
ಕರ್ಪೂರಂ ಕುಂಕುಮಂ ಚೈವ ಮೃಗನಾಭಿ ಸಚಂದನಂ ।
ನಿವೇದಯಂತಿ ದೇವಾಯ ನೈವೇದ್ಯಂ ಘೃತಪಾಯಸಂ ॥ ೭ ॥
ಸ್ವರೂಪಂ ಚೈವ ವಿಪ್ರೇಂದ್ರ ಸಭಾರ್ಯಂ ಭೋಜಯೇದ್ದ್ವಿಜಂ ।
ರುದ್ರಲೋಕಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕುಟುಂಬಿಕೇಶ್ವರ ಮಾಹಾತ್ಮ್ಯವರ್ಣನಂ"ನಾಮ ದಶಮೋಽಧ್ಯಾಯಃ

---

೬–೮. ಚೈತ್ರಮಾಸದ ಶುಕ್ಲಪಕ್ಷದ ಪಂಚಮಿಯಲ್ಲಿ ಉಪವಾಸವನ್ನು ಮಾಡಬೇಕು. ಕುಟುಂಬಿಕೇಶ್ವರನಿಗೆ ಕರ್ಪೂರ, ಕುಂಕುಮ, ಕಸ್ತೂರಿ, ಶ್ರೀಗಂಧ ಇವುಗಳಿಂದ ಪೂಜೆಯನ್ನರ್ಪಿಸಿ ತುಪ್ಪದೊಡನೆ ಪಾಯಸದ ನೈವೇದ್ಯವನ್ನು ಸಮರ್ಪಿಸಬೇಕು. ಎಲೈ ವ್ಯಾಸನೆ! ಬ್ರಾಹ್ಮಣದಂಪತಿಗಳನ್ನು ಕರೆದು ಅವರನ್ನು ಉಮಾಮಹೇಶ್ವರರೆಂಬ ಭಾವದಿಂದ ಪೂಜಿಸಿ ಭೋಜನದಿಂದ ತೃಪ್ತಿಗೊಳಿಸಬೇಕು. ಅಂಥ ಮನುಜನು ಹದಿನಾಲ್ಕು ಇಂದ್ರಕಲ್ಪಗಳವರೆಗೂ ರುದ್ರಲೋಕದಲ್ಲಿ ವಾಸಮಾಡುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕುಟುಂಬಿಕೇಶ್ವರಮಾಹಾತ್ಮ್ಯವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕಾದಶೋಽಧ್ಯಾಯಃ

### ವಿದ್ಯಾಧರತೀರ್ಥಮಾಹಾತ್ಮ್ಯವರ್ಣನಂ

ಅಥಾಽತಃ ಸಂಪ್ರವಕ್ಷ್ಯಾಮಿ ತೀರ್ಥಂ ವಿದ್ಯಾಧರಸ್ಯ ತು ।
ತತ್ರ ಸ್ನಾತ್ವಾ ಶುಚಿರ್ಭೂತ್ವಾ ವಿದ್ಯಾಧರಪತಿರ್ಭವೇತ್ ॥ ೧ ॥

ವ್ಯಾಸ ಉವಾಚ :—

ಕಥಂ ತೀರ್ಥಮಿದಂ ಕ್ಷೇತ್ರೇ ಜಾತಮತ್ರ ಮಹಾಮುನೇ ।
ಪ್ರಸಾದಾದ್ಬ್ರೂಹಿ ಮೇ ಬ್ರಹ್ಮಂಛ್ರೋತುಮಿಚ್ಛಾಮಿ ಸಾಂಪ್ರತಂ ॥ ೨ ॥

ಸನತ್ಕುಮಾರ ಉವಾಚ :—

ವಿದ್ಯಾಧರಪತಿಃ ಕಶ್ಚಿದಾಸೀದ್ರೂಪಧರಃ ಪುರಾ ।
ಗ್ರಥಿತಾ ಪಾರಿಜಾತಸ್ಯ ಮಾಲಾ ತೇನ ಮನೋರಮಾ ॥ ೩ ॥
ಗೃಹೀತ್ವಾ ಚ ಸ ತಾಂ ಮಾಲಾಂ ಗತೋ ವಾಸವವೇಶ್ಮನಿ ।
ನೃತ್ಯಂತೀ ವಾಸವಸ್ಯಾಗ್ರೇ ದೃಷ್ಟ್ವಾ ತೇನ ಚ ಮೇನಕಾ ॥ ೪ ॥

---

### ಕನ್ನಡದ ಅನುವಾದ

#### ವಿದ್ಯಾಧರತೀರ್ಥಮಾಹಾತ್ಮ್ಯವರ್ಣನ

೧. ಇನ್ನು ವಿದ್ಯಾಧರತೀರ್ಥದ ಮಹಿಮೆಯನ್ನು ವರ್ಣಿಸುವೆನು. ಅಲ್ಲಿ ಸ್ನಾನವನ್ನುಮಾಡಿ ಶುಚಿರ್ಭೂತನಾದವನು ವಿದ್ಯಾಧರರೆಂಬ ದೇವತೆಗಳಿಗೆ ನಾಯಕನಾಗುವನು.

೨. ವ್ಯಾಸನು ಹೇಳುತ್ತಾನೆ:—ಮಹಾಮುನಿಯೆ! ಈ ಕ್ಷೇತ್ರದಲ್ಲಿ ಈ ತೀರ್ಥವು ಹೇಗೆ ಉದ್ಭವಿಸಿತು? ನನ್ನಲ್ಲಿ ಅನುಗ್ರಹವಿಟ್ಟು ತಿಳಿಸು. ಬ್ರಾಹ್ಮಣೋತ್ತಮನೆ! ನಾನು ಇದನ್ನು ಕೇಳಲಪೇಕ್ಷಿಸುವೆನು.

೩. ಸನತ್ಕುಮಾರನು ಹೇಳುತ್ತಾನೆ:— ಪೂರ್ವದಲ್ಲಿ ಸುಂದರರೂಪಸಂಪನ್ನನಾದ ಒಬ್ಬಾನೊಬ್ಬ ವಿದ್ಯಾಧರನಾಯಕನಿದ್ದನು. ಆತನು ದೇವಲೋಕದ ಪಾರಿಜಾತಪುಷ್ಪಗಳಿಂದ ಬಹಳ ರಮ್ಯವಾದ ಒಂದು ಹಾರವನ್ನು ರಚಿಸಿದನು.

೪. ಆ ಹಾರವನ್ನು ಕೈಯಲ್ಲಿ ಹಿಡಿದುಕೊಂಡು ದೇವೇಂದ್ರನ ಅರಮನೆಗೆ ಹೋದನು. ಅಲ್ಲಿ ಅವನು ಇಂದ್ರನ ಇದಿರಿನಲ್ಲಿ ನರ್ತನವನ್ನು ಮಾಡುತ್ತಿದ್ದ ಮೇನಕೆಯನ್ನು ಕಂಡನು.

ದತ್ತಾ ತಸ್ಯೈ ತದಾ ತೇನ ಸಾ ಮಾಲಾ ನೃತ್ಯಮಾಶ್ರಿತಃ ।
ಸಾ ಮೇನಕಾ ಸ್ಮೃತಾಽಸ್ಥಾನೇ ಮಾಲಯಾ ಮೋಹಿತಾಽಭವತ್ ॥ ೫ ॥
ಕೋಪಾವಿಷ್ಟೇನ ಶಕ್ರೇಣ ಶಪ್ತೋ ವಿದ್ಯಾಧರಸ್ತದಾ ।
ಪೃಥಿವ್ಯಾಂ ಗಚ್ಛ ಪಾಪಿಷ್ಠ ನೃತ್ಯಭಂಗಸ್ತ್ವಯಾ ಕೃತಃ ॥ ೬ ॥
ವಿದ್ಯಾಧರಪದಂ ತ್ಯಕ್ತ್ವಾ ಮಮ ಶಾಪಾಚ್ಚ ಸಾಂಪ್ರತಂ ।
ಏವಮುಕ್ತಸ್ತು ಶಕ್ರೇಣ ವಾಕ್ಯಂ ವಿದ್ಯಾಧರೋಽಬ್ರವೀತ್ ॥ ೭ ॥
ಅಜಾನತಾ ಮಯಾ ನಾಥ ಅಪರಾಧಃ ಕೃತೋಽಧುನಾ ।
ಅನುಗ್ರಹಮತೋ ದೇವ ಕುರು ಮೇ ತ್ವಂ ಪ್ರಸಾದತಃ ॥ ೮ ॥
ಏವಮುಕ್ತಃ ಸ ಶಕ್ರೋ ವೈ ವಿದ್ಯಾಧರಮುವಾಚ ಹ ।
ಗಚ್ಛಾಽವಂತೀಂ ತ್ವಮದ್ಯೈವ ಯತ್ರಾಸ್ತೇ ಗಾಂಗಟೇ ಗುಹಾ ॥ ೯ ॥
ತಸ್ಯಾಶ್ಚೋತ್ತರಭಾಗೇ ತು ವಿದ್ಯತೇ ತೀರ್ಥಮುತ್ತಮಂ ।
ಖ್ಯಾತಂ ತತ್ತ್ರಿಷು ಲೋಕೇಷು ನಾಮ್ನಾ ವಿದ್ಯಾಧರಂ ಶುಭಂ ॥ ೧೦ ॥

---

೫. ಆ ಪುಷ್ಪಮಾಲೆಯನ್ನು ಆಕೆಗೆ ಕೊಟ್ಟನು. ನಾಟ್ಯ ಮಧ್ಯದಲ್ಲಿ ಅವಕಾಶವಿಲ್ಲದ ಕಾಲದಲ್ಲಿ ಪುಷ್ಪಮಾಲೆಯನ್ನು ಪಡೆದ ಮೇನಕೆಯು ಅದರಿಂದ ಮೋಹಗೊಂಡವಳಾದಳು.

೬. ಇದನ್ನು ಕಂಡ ಮಹೇಂದ್ರನು ವಿದ್ಯಾಧರನನ್ನು ಕುರಿತು "ಎಲೈ ಪಾಪಿಯೆ! ನನ್ನ ಸಭೆಯಲ್ಲಿ ನಡೆಯುತ್ತಿದ್ದ ನಾಟ್ಯವನ್ನು ಭಂಗಗೊಳಿಸಿದೆ ಯಾದುದರಿಂದ ನೀನು ಭೂಲೋಕದಲ್ಲಿ ಹುಟ್ಟು" ಎಂಬುದಾಗಿ ಶಾಪವ ನ್ನಿತ್ತನು.

೭. "ನನ್ನ ಶಾಪದ ಫಲವಾಗಿ ನೀನು ತತ್‌ಕ್ಷಣದಲ್ಲಿಯೇ ನಿನ್ನ ವಿದ್ಯಾಧರ ಪದವಿಯನ್ನು ಕಳೆದುಕೊಳ್ಳುವೆ" ಎಂದು ಹೇಳಿದ ಇಂದ್ರನ ಮಾತನ್ನು ಕೇಳಿ ವಿದ್ಯಾಧರನು ಬಿನ್ನವಿಸಿದನು.

೮. "ಸ್ವಾಮಿಯೆ! ತಿಳುವಳಿಕೆಯಿಲ್ಲದೆ ನಾನು ಈ ಅಪರಾಧವನ್ನು ಮಾಡಿರುವೆನು. ಆದುದರಿಂದ ನನ್ನಲ್ಲಿ ಪ್ರಸನ್ನನಾಗಿ ವಿಶಾಪವನ್ನು ಅನು ಗ್ರಹಿಸುವವನಾಗು."

೯. ಇಂತೆಂದ ವಿದ್ಯಾಧರನ ಪ್ರಾರ್ಥನೆಯನ್ನು ಲಾಲಿಸಿ ಮಹೇಂದ್ರ ನಿಂತೆಂದನು. ನೀನು ಅವಂತೀಕ್ಷೇತ್ರವನ್ನು ಕುರಿತು ಪ್ರಯಾಣಮಾಡು. ಅಲ್ಲಿ ಗಾಂಗಟೆಯೆಂಬ ಹೆಸರಿನ ಗುಹೆಯೊಂದಿರುವುದು.

೧೦. ಆ ಗುಹೆಗೆ ಉತ್ತರದಿಕ್ಕಿನಲ್ಲಿ ಸರ್ವೋತ್ಕೃಷ್ಟವಾದ ತೀರ್ಥವೊಂದಿರು ವುದು. ಪವಿತ್ರವಾದ ಆ ತೀರ್ಥವು ವಿದ್ಯಾಧರತೀರ್ಥವೆಂದೇ ಮೂರುಲೋಕ ಗಳಲ್ಲಿಯೂ ಪ್ರಖ್ಯಾತವಾಗಿರುವುದು.

ಭಕ್ತ್ಯಾ ತತ್ರ ಕೃತೇ ಸ್ನಾನೇ ವಿದ್ಯಾಧರಪತಿರ್ಭವೇತ್ ।
ಅತಸ್ತ್ವಮಪಿ ತತ್ರೈವ ಕುರು ಸ್ನಾನಂ ಪ್ರಯತ್ನತಃ ॥ ೧೧ ॥
ಏವಮುಕ್ತಃ ಸ ಶಕ್ರೇಣ ಆಗತೋಽವಂತಿಮಂಡಲೇ ।
ಸ್ನಾನಂ ಕೃತ್ವಾ ಚ ತೇನೈವ ತೀರ್ಥೇ ತಸ್ಮಿನ್ಮನೋರಮೇ ॥ ೧೨ ॥
ಪ್ರಭಾವಾತ್ತಸ್ಯ ತೀರ್ಥಸ್ಯ ಪುನಃ ಪ್ರಾಪ್ತಂ ಪದಂ ಸ್ವಕಂ ।
ಏವಂ ವ್ಯಾಸ ಸಮಾಖ್ಯಾತಂ ತೀರ್ಥಂ ವಿದ್ಯಾಧರಂ ಶುಭಂ ॥ ೧೩ ॥
ತತ್ರ ಪುಷ್ಪಾಣಿ ಯೋ ದದ್ಯಾಚ್ಚಂದನಂ ಚ ವಿಲೇಪನಂ ।
ಲಭೇತ್ಸಮಸ್ತಭೋಗಾನ್ಸ ಇಹಲೋಕೇ ಪರತ್ರ ಚ ॥ ೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ವಿದ್ಯಾಧರತೀರ್ಥಮಾಹಾತ್ಮ್ಯವರ್ಣನಂ" ನಾಮೈಕಾದಶೋಽಧ್ಯಾಯಃ

---

೧೧. ಅಲ್ಲಿ ಭಕ್ತಿಯಿಂದ ಸ್ನಾನವನ್ನು ಮಾಡಿದ ಮಾನವನು ವಿದ್ಯಾಧರಪತಿಯಾಗುವನು. ಆದುದರಿಂದ ನೀನೂ ಆ ತೀರ್ಥದಲ್ಲಿ ಪ್ರಯತ್ನದಿಂದ ಸ್ನಾನವನ್ನು ಮಾಡು."

೧೨–೧೩. ಇಂತೆಂದ ಮಹೇಂದ್ರನ ಅಪ್ಪಣೆಯನ್ನು ಕೇಳಿ ಆ ವಿಧ್ಯಾಧರನು ಭೂಮಿಯಲ್ಲಿ ಹುಟ್ಟಿ ಅವಂತೀಕ್ಷೇತ್ರಕ್ಕೆ ಬಂದು ಆ ಮಾತಿನಂತೆಯೇ ಮನೋಹರವಾದ ಆ ತೀರ್ಥದಲ್ಲಿ ಮಿಂದು ಅದರ ಮಹಿಮೆಯಿಂದ ಮತ್ತೆ ತನ್ನ ಪೂರ್ವಪದವಿಯನ್ನು ಪಡೆದನು. ವ್ಯಾಸಮುನಿಯೆ! ಇಂತು ನಿನಗೆ ಶುಭಪ್ರದವಾದ ವಿದ್ಯಾಧರತೀರ್ಥದ ಚರಿತ್ರೆಯನ್ನು ಹೇಳಿರುವೆನು.

೧೪. ಆ ತೀರ್ಥದಲ್ಲಿ ಯಾವನು ಪುಷ್ಪಗಳನ್ನೂ, ಚಂದನವನ್ನೂ ಲೇಪನದ್ರವ್ಯಗಳನ್ನೂ ದಾನಮಾಡುವನೊ, ಅವನಿಗೆ ಇಹಲೋಕ ಪರಲೋಕಗಳೆರಡರಲ್ಲಿಯೂ ಸಕಲಭಾಗ್ಯಗಳೂ ಲಭಿಸುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರಮಾಹಾತ್ಮ್ಯದಲ್ಲಿ "ವಿದ್ಯಾಧರತೀರ್ಥಮಾಹಾತ್ಮ್ಯವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ಶೀತಲಾಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

**ಉತ್ತರೇ ತು ಪ್ರವಕ್ಷ್ಯಾಮಿ ಮರ್ಕಟೇಶ್ವರಮುತ್ತಮಂ ।**
**ತತ್ರ ತೀರ್ಥಂ ಚ ವಿಖ್ಯಾತಂ ಸರ್ವಕಾಮಪ್ರದಾಯಕಂ ॥ ೧ ॥**
**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಗೋಶತಸ್ಯ ಫಲಂ ಲಭೇತ್ ।**
**ವಿಸ್ಫೋಟಾನಾಂ ಪ್ರಶಾಂತ್ಯರ್ಥಂ ಬಾಲಾನಾಂ ಚೈವ ಕಾರಣೇ ॥ ೨ ॥**
**ಮಾಷೇನ ಮಾಷಿತಾನ್ಕೃತ್ವಾ ಮಸೂರಾಂಸ್ತತ್ರ ಕುಟ್ಟಯೇತ್ ।**
**ಶೀತಲಾಯಾಃ ಪ್ರಭಾವೇಣ ಬಾಲಾಃ ಸಂತು ನಿರಾಮಯಾಃ ॥ ೩ ॥**
**ಯೇ ಪಶ್ಯಂತಿ ನರಾ ಭಕ್ತ್ಯಾ ಶೀತಲಾಂ ದುರಿತಾಪಹಾಂ ।**
**ನ ತೇಷಾಂ ದುಷ್ಕೃತಂ ಕಿಂಚಿನ್ನ ದಾರಿದ್ರ್ಯಂ ದ್ವಿಜೋತ್ತಮ ॥ ೪ ॥**

---

## ಕನ್ನಡದ ಅನುವಾದ

### ಶೀತಲಾಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಕ್ಷೇತ್ರದ ಉತ್ತರಭಾಗದಲ್ಲಿ ಮರ್ಕಟೇಶ್ವರವೆಂಬ ಉತ್ತಮಲಿಂಗವಿರುವುದು. ಅದರ ಮಹಿಮೆಯನ್ನು ತಿಳಿಸುವೆನು. ಅದರ ಸಮೀಪದಲ್ಲಿರುವ ತೀರ್ಥವು ಸರ್ವಾಭೀಷ್ಟಪ್ರದವಾದುದೆಂದು ಪ್ರಖ್ಯಾತವಾಗಿರುವುದು.

೨–೩. ಆ ತೀರ್ಥದಲ್ಲಿ ಸ್ನಾನಮಾಡಲು ನೂರು ಗೋದಾನಗಳನ್ನು ಮಾಡಿದ ಫಲವನ್ನು ಹೊಂದುವನು. ವಿಸ್ಫೋಟರೋಗದ ಶಾಂತಿಗಾಗಿಯೂ ಮಕ್ಕಳ ಆರೋಗ್ಯಕ್ಕಾಗಿಯೂ ಅದರ ಸಮೀಪದಲ್ಲಿ ಒಂದು ಬಳ್ಳದಷ್ಟು ಕಡಲೆಯ ಬೇಳೆಯನ್ನು ಅಳೆದು ತಂದು "ಶೀತಲಾದೇವಿಯ ಪ್ರಭಾವದಿಂದ ಬಾಲಕರು ಆರೋಗ್ಯವಂತರಾಗಲಿ" ಎಂಬ ಮಂತ್ರವನ್ನು ಹೇಳುತ್ತ ಬೀಸಬೇಕು.

೪. ಬ್ರಾಹ್ಮಣೋತ್ತಮನೆ! ಸಕಲಪಾಪಗಳನ್ನೂ ಕಳೆಯುವ ಶೀತಲಾದೇವಿಯನ್ನು ಯಾರು ಭಕ್ತಿಯಿಂದ ಕಾಣುವರೊ, ಅವರಲ್ಲಿ ಸ್ವಲ್ಪವೂ ಪಾಪವಾಗಲಿ ದಾರಿದ್ರ್ಯವಾಗಲಿ ಇರುವುದಿಲ್ಲ.

**ನ ಚ ರೋಗಭಯಂ ತೇಷಾಂ ಗ್ರಹಪೀಡಾ ತಥೈವ ಚ ॥ ೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶೀತಲಾಮಾಹಾತ್ಮ್ಯ ವರ್ಣನಂ" ನಾಮ ದ್ವಾದಶೋಽಧ್ಯಾಯಃ**

---

೫. ಅವರಿಗೆ ರೋಗಭಯವಾಗಲಿ, ಗ್ರಹಗಳ ಪೀಡೆಯಾಗಲಿ ಉಂಟಾಗಲಾರದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಶೀತಲಾಮಾಹಾತ್ಮ್ಯವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಸ್ವರ್ಗದ್ವಾರಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

**ಸ್ವರ್ಗದ್ವಾರೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಚ ಭೈರವಂ ।**
**ಶ್ರಾದ್ಧಂ ತತ್ರೈವ ಕುರ್ವೀತ ಪಿತೄನುದ್ದಿಶ್ಯ ಭಕ್ತಿತಃ ।**
**ಪಿತೄಂಶ್ಚ ಸ ನರೋ ವ್ಯಾಸ ತಾರಯೇದಾತ್ಮನಾ ಸಹ ॥ ೧ ॥**
**ಸ್ವರ್ಗದ್ವಾರೇಣ ಯೋಽಭ್ಯೇತಿ ರುದ್ರಸ್ಯ ಪರಮಂ ಪದಂ ।**
**ಭೈರವಸ್ಯಾಗ್ರತೋ ದೇವೀ ಪೂರ್ವೇ ತಿಷ್ಠತಿ ಚಾಂಬಿಕಾ ॥ ೨ ॥**
**ತಾಂ ತು ದೃಷ್ಟ್ವಾ ನರಃ ಸ್ತ್ರೀ ವಾ ಮುಚ್ಯತೇ ಸರ್ವಪಾತಕೈಃ ।**
**ಮಹಾನವಮ್ಯಾಂ ಪುರುಷಃ ಕೃತ್ವಾ ಬಸ್ತಮಯಂ ಬಲಿಂ ॥ ೩ ॥**
**ಮಹಿಷಂ ವಾ ಸುರಾಂ ಮಾಂಸಂ ಮಾಲಾಂ ಬಿಲ್ವಮಯೀಂ ಶುಭಾಂ ।**
**ಭಕ್ತ್ಯಾ ನಿವೇದ್ಯ ದೇವ್ಯೈ ತು ಸರ್ವಾಂ ಸಿದ್ಧಿಮವಾಪ್ನುಯಾತ್ ॥ ೪ ॥**

---

## ಕನ್ನಡದ ಅನುವಾದ

### ಸ್ವರ್ಗದ್ವಾರಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ :—ಸ್ವರ್ಗದ್ವಾರತೀರ್ಥದಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಅಲ್ಲಿರುವ ಭೈರವನ ದರ್ಶನವನ್ನು ಮಾಡಿ ಅಲ್ಲಿಯೇ ಪಿತೃದೇವತೆಗಳ ತೃಪ್ತಿಗಾಗಿ ಶ್ರಾದ್ಧಗಳನ್ನು ಮಾಡಬೇಕು. ಅಯ್ಯಾ ವ್ಯಾಸನೇ! ಆ ನರನು ತನ್ನ ಪಿತೃದೇವತೆಗಳನ್ನೂ ತನ್ನನ್ನೂ ಸಹ ಉದ್ಧಾರಮಾಡುವನು.

೨. ಅವನು ಸ್ವರ್ಗದ್ವಾರದ ಮೂಲಕ ಮಹೇಶ್ವರನ ಪರಮಪದವನ್ನು ಪಡೆಯುವನು. ಭೈರವನಿಗೆ ಇದಿರಾಗಿ ಪೂರ್ವದಿಕ್ಕಿನಲ್ಲಿ ಅಂಬಿಕಾದೇವಿ ಯಿರುವಳು.

೩. ಆಕೆಯನ್ನು ನೋಡಿದ ನರನೂ ನಾರಿಯೂ ಸಕಲ ಪಾತಕಗಳಿಂದ ಮುಕ್ತರಾಗುವರು. ಆಶ್ವಯುಜ ಶುದ್ಧ ನವಮಿಯಲ್ಲಿ ಭಕ್ತನು ಆಕೆಗೆ ಆಡಿನ ಮಾಂಸದ ಬಲಿಯನ್ನು ಸಿದ್ಧಗೊಳಿಸಬೇಕು.

೪. ಅಥವಾ ಕೋಣವನ್ನು ಬಲಿಗೊಡಬೇಕು. ಇಂತು ಸುರೆಯನ್ನೂ, ಮಾಂಸವನ್ನೂ, ಬಿಲ್ವದಳಗಳ ಮಾಲೆಯನ್ನೂ ಭಕ್ತಿಯಿಂದ ದೇವಿಗೆ ಸಮರ್ಪಿಸಿದವನು ಸಕಲಸಿದ್ಧಿಗಳನ್ನೂ ಪಡೆಯುವನು.

**ತತ್ರ ಸ್ನಾತ್ವಾ ನರೋ ಭಕ್ತ್ಯಾ ಪೂಜಾಂ ಕೃತ್ವಾ ಮಹೇಶ್ವರೇ ।**
**ಸ್ವರ್ಗದ್ವಾರೇಣ ಸೋಽಭ್ಯೇತಿ ರುದ್ರಸ್ಯ ಭವನಂ ದ್ವಿಜ ॥ ೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಸ್ವರ್ಗದ್ವಾರ ಮಾಹಾತ್ಮ್ಯವರ್ಣನಂ" ನಾಮ ತ್ರಯೋದಶೋಽಧ್ಯಾಯಃ**

---

೫. ಎಲೈ ಬ್ರಾಹ್ಮಣಶ್ರೇಷ್ಠನೆ! ಆ ತೀರ್ಥದಲ್ಲಿ ಭಕ್ತಿಯಿಂದ ಮಿಂದು ಮಹೇಶ್ವರನ ಪೂಜೆಯನ್ನು ಮಾಡಲು, ಸ್ವರ್ಗಲೋಕದ ಮೂಲಕ ರುದ್ರನ ನಿಲಯವಾದ ಕೈಲಾಸವನ್ನು ಸೇರುವನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಸ್ವರ್ಗದ್ವಾರಮಾಹಾತ್ಮ್ಯವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಚತುಃಸಮುದ್ರಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

**ಸ್ನಾತ್ವಾ ಚತುಃಸಮುದ್ರೇ ತು ಪಶ್ಯೇದ್ರಾಜಸ್ಥಲಂ ಶಿವಂ ।**
**ಯಸ್ಯ ದರ್ಶನಮಾತ್ರೇಣ ಪುತ್ರವಾನ್ ಜಾಯತೇ ನರಃ ॥ ೧ ॥**
**ಸಮುದ್ರಾಃ ಸಂತಿ ಚತ್ವಾರಃ ಕ್ಷಾರಕ್ಷೀರದಧೀಕ್ಷವಃ ।**
**ಸಮೀಪೇ ತಸ್ಯ ದೇವಸ್ಯ ಸುದ್ಯುಮ್ನೇನ ಪ್ರತಿಷ್ಠಿತಾಃ ॥ ೨ ॥**

ವ್ಯಾಸ ಉವಾಚ :—

**ರಾಜಸ್ಥಲಸಮೀಪೇ ತು ಸಮುದ್ರಾಃ ಕೇನ ಹೇತುನಾ ।**
**ಕಥಯ ತ್ವಂ ಮುನಿಶ್ರೇಷ್ಠ ಸುದ್ಯುಮ್ನೇನ ಪ್ರತಿಷ್ಠಿತಾಃ ॥ ೩ ॥**
**ಲಕ್ಷಯೋಜನಪರ್ಯಂತಂ ಜಂಬೂದ್ವೀಪಂ ಸುಶೋಭನಂ ।**
**ಮರ್ಯಾದಾಯಾಂ ಸ್ಥಾಪಿತೋಽಯಂ ಸಮುದ್ರಃ ಕ್ಷಾರಸಂಜ್ಞಿತಃ ॥ ೪ ॥**
**ಶಾಕದ್ವೀಪೇ ದ್ವಿಲಕ್ಷೇ ತು ಕ್ಷೀರಾಬ್ಧಿಃ ಸಂಪ್ರತಿಷ್ಠಿತಃ ।**
**ದಧ್ಯಬ್ಧಿಸ್ತು ಕುಶದ್ವೀಪೇ ಚತುರ್ಲಕ್ಷಃ ಪ್ರತಿಷ್ಠಿತಃ ।**
**ಶಾಲ್ಮಲೇ ತ್ವಿಕ್ಷುಜಲಧಿರ್ಹ್ಯಷ್ಟಲಕ್ಷಃ ಪ್ರತಿಷ್ಠಿತಃ ॥ ೫ ॥**

---

## ಕನ್ನಡದ ಅನುವಾದ

### ಚತುಸ್ಸಮುದ್ರಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಚತುಸ್ಸಮುದ್ರತೀರ್ಥದಲ್ಲಿ ಮಿಂದ ನರನು ರಾಜಸ್ಥಳದಲ್ಲಿರುವ ಮಹಾದೇವನನ್ನು ನೋಡಬೇಕು. ಆ ದೇವನ ದರ್ಶನ ಮಾತ್ರದಿಂದಲೇ ಮನುಜನು ಪುತ್ರವಂತನಾಗುವನು.

೨. ಆ ದೇವದೇವನ ಸಮೀಪದಲ್ಲಿ ಸುದ್ಯುಮ್ನ ಮಹಾರಾಜನಿಂದ ಸ್ಥಾಪಿತಗಳಾದ ಲವಣ, ಕ್ಷೀರ, ದಧಿ, ಮತ್ತು ಇಕ್ಷುರಸಗಳ ಸಮುದ್ರಗಳ ಸಾರಗಳನ್ನೊಳಗೊಂಡ ನಾಲ್ಕು ತೀರ್ಥಗಳಿರುವುವು.

೩. ವ್ಯಾಸನು ಹೇಳುತ್ತಾನೆ:—ಮುನಿವರ್ಯನೆ! ಈ ಸಮುದ್ರಗಳನ್ನು ಯಾವ ಕಾರಣದಿಂದ ರಾಜಸ್ಥಳದ ಸಮೀಪದಲ್ಲಿ ಸುದ್ಯುಮ್ನ ಮಹಾರಾಜನು ಪ್ರತಿಷ್ಠಿಸಿದನು? ಅದನ್ನು ಹೇಳು.

೪. ಪರಮಪವಿತ್ರವಾದ ಜಂಬೂದ್ವೀಪವು ಒಂದು ಲಕ್ಷ ಯೋಜನಗಳ ವಿಸ್ತಾರವುಳ್ಳದಾಗಿರುವುದು. ಅದರ ಸುತ್ತಲೂ ಲವಣೋದಕದ ಸಮುದ್ರವು ಮೇರೆಯಂತಿರುವುದು.

**೫. ಅದರಾಚೆಗೆ ಶಾಕದ್ವೀಪವು ಎರಡು ಲಕ್ಷ ಯೋಜನಗಳ ವಿಸ್ತಾರ**

ಚತ್ವಾರಸ್ತೇ ಸಮಾಖ್ಯಾತಾಃ ಸಮುದ್ರಾ ಭೂಮಿಮಂಡಲೇ ।
ರಾಜಸ್ಥಲಸಮೀಪೇ ತು ಕಥಮೇಕತ್ರ ಸಂಗತಾಃ ॥ ೬ ॥
ಸನತ್ಕುಮಾರ ಉವಾಚ :—
ಸುದ್ಯುಮ್ನೋ ನಾಮ ರಾಜಾಽಽಸೀತ್ಪುರಾ ಕಲ್ಪೇ ಸುಧಾರ್ಮಿಕಃ ।
ತಸ್ಯ ಪತ್ನೀ ವರಾರೋಹಾ ನಾಮ್ನಾ ಖ್ಯಾತಾ ಸುದರ್ಶನಾ ॥ ೭ ॥
ಮುನಿಂ ದಾಲ್ಭ್ಯಂ ಚ ಸಾ ದೃಷ್ಟ್ವಾ ಪಪ್ರಚ್ಛ ಸುತಕಾಮ್ಯಯಾ ।
ಭಗವನ್ಕೇನ ದಾನೇನ ಸ್ನಾನೇನ ವಿಧಿನಾಽಥ ವಾ ॥ ೮ ॥
ಸರ್ವಲಕ್ಷಣಸಂಪೂರ್ಣಃ ಪುತ್ರೋ ಲಭ್ಯೋ ಮಯಾ ಕಥಂ ।
ಏತದಾಖ್ಯಾಹಿ ವಿಪ್ರರ್ಷೇ ಯಾಥಾತಥ್ಯಂ ಸವಿಸ್ತರಂ ॥ ೯ ॥
ದಾಲ್ಭ್ಯ ಉವಾಚ :—
ವಿಹಿತಾಸ್ತೇ ಪುರಾ ಪುತ್ರ್ಯ ಬ್ಧಯಃ ಪುತ್ರೇಪ್ಸಯೋತ್ತಮಾಃ ।
ಸ್ವಯಂಭುವೇನ ದೇವೇನ ಬ್ರಹ್ಮಣಾ ಲೋಕಕಾರಿಣಾ ॥ ೧೦ ॥

---

ವುಳ್ಳದ್ದು. ಅದಕ್ಕೆ ಕ್ಷೀರಸಮುದ್ರವೇ ಮೇರೆಯಾಗಿರುವುದು. ಅದರ ಹೊರಗೆ ನಾಲ್ಕು ಲಕ್ಷ ಯೋಜನಗಳ ವಿಸ್ತಾರದ ಕುಶದ್ವೀಪವೂ ಅದನ್ನಾವರಿಸಿದ ದಧಿ ಸಮುದ್ರವೂ ಇರುವುವು. ಬಳಿಕ ಎಂಟು ಲಕ್ಷ ಯೋಜನಗಳ ಅಳತೆಯುಳ್ಳ ಶಾಲ್ಮಲಿದ್ವೀಪವೂ ಅದನ್ನು ಸುತ್ತುವರಿಸಿರುವ ಇಕ್ಷು ಸಮುದ್ರವೂ ಇರುವುವು.

೬. ಇಂತು ಭೂಮಂಡಲದಲ್ಲಿ ನಾಲ್ಕು ಸಮುದ್ರಗಳು ಪ್ರಖ್ಯಾತಗಳಾಗಿ ರುವುವು. ಈ ನಾಲ್ಕು ಸಮುದ್ರಗಳೂ ರಾಜಸ್ಥಾನದ ಸಮೀಪದಲ್ಲಿ ಒಂದೆಡೆಯಲ್ಲಿಯೇ ಹೇಗೆ ಸನ್ನಿಹಿತಗಳಾದುವು?

೭. ಸನತ್ಕುಮಾರನು ಹೇಳುತ್ತಾನೆ:—ಹಿಂದಿನ ಕಲ್ಪದಲ್ಲಿ ಮಹಾ ಧಾರ್ಮಿಕನಾದ ಸುದ್ಯುಮ್ನನೆಂಬ ಮಹಾರಾಜನೊಬ್ಬನಿದ್ದನು. ಆತನಿಗೆ ಸರ್ವಾಂಗಸುಂದರಿಯಾದ ಸುದರ್ಶನೆಯೆಂಬ ಮಹಿಷಿಯಿದ್ದಳು.

೮–೯. ಸಂತಾನವಿಲ್ಲದ ಆಕೆಯು ಸುಪುತ್ರನನ್ನು ಪಡೆಯಲೆಳಸಿ ಒಮ್ಮೆ ದಾಲ್ಭ್ಯನೆಂಬ ಮುನಿವರ್ಯನನ್ನು ಕಂಡು ಬೆಸಗೊಂಡಳು. "ಮಹಾತ್ಮನೆ! ಸರ್ವಲಕ್ಷಣಸಂಪನ್ನನಾದ ಮಗನನ್ನು ಪಡೆಯಲು ಯಾವ ಉಪಾಯ ವಿರುವುದು? ಯಾವ ದಾನಗಳನ್ನು, ಸ್ನಾನಗಳನ್ನು ಅಥವಾ ವ್ರತಾದಿಗಳನ್ನು ಮಾಡಲಿ? ಬ್ರಾಹ್ಮಣೋತ್ತಮನೆ! ಇದನ್ನು ನನಗೆ ನಿಶ್ಚಯದಿಂದಲೂ ಸಮಗ್ರ ವಾಗಿಯೂ ತಿಳಿಸು."

೧೦. ದಾಲ್ಭ್ಯನು ಹೇಳುತ್ತಾನೆ—ಮಗಳೆ! ಪೂರ್ವದಲ್ಲಿಯೇ ಲೋಕ ಸೃಷ್ಟಿಕರ್ತನಾದ ಚತುರ್ಮುಖನು ಸರ್ವೋತ್ತಮರಾದ ಸಮುದ್ರನಾಯಕರನ್ನೇ ಪುತ್ರರನ್ನಾಗಿ ವಿಧಾಯಕ ಮಾಡಿರುವನು.

ತೇಷು ರಾಜ್ಞಾ ಕೃತೇ ಸ್ನಾನೇ ತವ ಪುತ್ರೋ ಭವಿಷ್ಯತಿ ।
ಶಂಕರಾರಾಧನೇ ಪುತ್ರಿ ತಸ್ಮಾತ್ಪ್ರೇರಯ ವಲ್ಲಭಂ ॥ ೧೧ ॥
ದಾಲ್ಭ್ಯಸ್ಯೈವ ತು ವಾಕ್ಯೇನ ವಿಚಿತ್ರಾಖ್ಯಾನಕೇನ ಚ ।
ಪ್ರಸ್ಥಾಪಯಾಮಾಸ ಪತಿಂ ಶಂಕರಾರಾಧನೇ ದ್ರುತಂ ॥ ೧೨ ॥
ಸ ಗತ್ವಾ ತೋಷಯಾಮಾಸ ಶಂಕರಂ ಗಂಧಮಾದನೇ ।
ಸಂತುಷ್ಟಃ ಶಂಕರಃ ಪ್ರಾಹ ಶಶಿಸೂರ್ಯಾಗ್ನಿಲೋಚನಃ ॥ ೧೩ ॥
ಅವಂತೀಂ ಗಚ್ಛ ರಾಜೇಂದ್ರ ಪುತ್ರಂ ಪ್ರಾಪ್ಸ್ಯಸಿ ಶೋಭನಂ ।
ಮಚ್ಛಾಸನಾಜ್ಜಲಧಯೋ ಗಮಿಷ್ಯಂತಿ ಕುಶಸ್ಥಲೀಂ ॥ ೧೪ ॥
ಮೇರುರೂಪೇ ಸ್ಥಲೇ ರಾಜನ್ ಸಮೀಪೇ ಶಂಕರಸ್ಯ ಚ ।
ದ್ರಕ್ಷ್ಯಸಿ ತ್ವಂ ನರಶ್ರೇಷ್ಠ ಜಲಧೀಂಸ್ತತ್ರ ಸಂಗತಾನ್ ।
ಅಭ್ಯರ್ಥಿತಾಸ್ತ್ವಯಾ ತತ್ರ ಸ್ಥಾಸ್ಯಂತಿ ಕಲಯಾ ಸದಾ ॥ ೧೫ ॥
ಏವಮುಕ್ತ್ವಾ ಮಹಾದೇವೋ ಜಗಾಮಾದರ್ಶನಂ ವಿಭುಃ ।
ಸುದ್ಯುಮ್ನೋ ಭಾರ್ಯಯಾ ಸಾರ್ಧಮಾಜಗಾಮ ಕುಶಸ್ಥಲೀಂ ॥ ೧೬ ॥

---

೧೧. ಆದುದರಿಂದ ನಿನ್ನ ಪತಿಯು ನಾಲ್ಕು ಸಮುದ್ರಗಳಲ್ಲಿಯೂ ಸ್ನಾನವನ್ನು ಮಾಡಿ ಮಹೇಶ್ವರನನ್ನು ಪೂಜಿಸಲು ನಿನಗೆ ಸುಪುತ್ರನಾಗುವನು. ಆ ಕಾರ್ಯಕ್ಕೆ ನಿನ್ನ ಪತಿಯನ್ನು ಪ್ರೇರಿಸು.

೧೨. ದಾಲ್ಭ್ಯನ ಈ ಮಾತುಗಳಿಂದಲೂ ಆಶ್ಚರ್ಯಕರವಾದ ಪೂರ್ವ ಚರಿತ್ರೆಯಿಂದಲೂ ನಂಬಿಕೆಯನ್ನು ಹೊಂದಿದ ರಾಜಪತ್ನಿಯು ಮಹೇಶ್ವರನ ಆರಾಧನೆಯನ್ನು ಮಾಡಲು ಪತಿಯನ್ನು ಬೇಗ ಕುತೂಹಲಗೊಳಿಸಿದಳು.

೧೩. ಆತನು ಗಂಧಮಾದನಪರ್ವತಕ್ಕೆ ಹೋಗಿ ಪರಮೇಶ್ವರನನ್ನು ಸಂತೋಷಗೊಳಿಸಿದನು. ಚಂದ್ರಸೂರ್ಯವಹ್ನಿಗಳೇ ಮೂರು ಕಣ್ಣುಗಳಾಗಿರುವ ಮಹೇಶ್ವರನು ಸಂತುಷ್ಟನಾಗಿ ಇಂತೆಂದನು.

೧೪. "ರಾಜೇಂದ್ರನೆ! ನೀನು ಅವಂತೀಕ್ಷೇತ್ರಕ್ಕೆ ಹೋಗು. ಅಲ್ಲಿ ಸರ್ವ ಲಕ್ಷಣ ಲಕ್ಷಿತನಾದ ಪುತ್ರನನ್ನು ಪಡೆಯುವೆ. ನನ್ನ ಅಪ್ಪಣೆಯಂತೆ ನಾಲ್ಕು ಸಮುದ್ರಗಳೂ ಕುಶಸ್ಥಲಿಯನ್ನು ಸೇರುವುವು.

೧೫. ಎಲೈ ಪುರುಷಪುಂಗವನೆ! ಮೇರುಪರ್ವತಕ್ಕೆ ಸಮಾನವಾದ ಆ ಪ್ರದೇಶದಲ್ಲಿ ಶಂಕರನ ಸಮೀಪದಲ್ಲಿ ಸಮುದ್ರಾಧಿನಾಯಕರೆಲ್ಲರೂ ಒಂದುಗೂಡಿರುವುದನ್ನು ನೀನು ಕಾಣುವೆ. ನೀನು ಪ್ರಾರ್ಥಿಸಲು, ತಮ್ಮ ಒಂದು ಅಂಶದಿಂದ ಅವರೆಲ್ಲರೂ ಅಲ್ಲಿ ನಿತ್ಯವೂ ನೆಲೆಸಿರುವರು."

೧೬. ಇಂತೆಂದು ಲೋಕೇಶ್ವರನಾದ ಮಹಾದೇವನು ಅಂತರ್ಧಾನವನ್ನು ಹೊಂದಿದನು. ಸುದ್ಯುಮ್ನನೂ ಹೆಂಡತಿಯೊಡಗೂಡಿ ಕುಶಸ್ಥಲಿಗೆ ಬಂದು ಸೇರಿದನು.

ಆಗತಸ್ತು ಕುಶಸ್ಥಲ್ಯಾಂ ಸಮುದ್ರಾಂಶ್ಚ ದದರ್ಶ ಹ ।
ತಾಂಸ್ತು ದೃಷ್ಟ್ವಾ ನಮಶ್ಚಕ್ರೇ ರಾಜಸ್ಥಲಸಮೀಪತಃ ॥ ೧೭ ॥
ತೇ ವೈ ದೃಷ್ಟ್ವಾ ಚ ಸುದ್ಯುಮ್ನಂ ಪ್ರಣತಂ ಭಕ್ತವತ್ಸಲಂ ।
ಪ್ರೋಚುರ್ವಾರಿಧಯಃ ಸರ್ವೇ ವರಂ ವರಯ ಸುವ್ರತ ॥ ೧೮ ॥
ಸ ವವ್ರೇ ಮನಸಾ ಪುತ್ರಂ ಸರ್ವಲಕ್ಷಣಸಂಯುತಂ ।
ಉವಾಚ ಚ ಪುನಾ ರಾಜಾ ಯಾವತ್ತಿಷ್ಠತಿ ಮೇದಿನೀ ।
ತಾವದತ್ರೈವ ಸ್ಥಾತವ್ಯಂ ರಾಜಸ್ಥಲಸಮೀಪತಃ ॥ ೧೯ ॥

ಸಮುದ್ರಾ ಊಚುಃ:—

ತಾವತ್ ಸ್ಥಾಸ್ಯಾಮಹೇಽತ್ರೈವ ಯಾವತ್ಕಲ್ಪಾವಸಾನಕಂ ॥ ೨೦ ॥
ಭವಿಷ್ಯತಿ ಚ ತೇ ಪುತ್ರಃ ಸರ್ವಲಕ್ಷಣಸಂಯುತಃ ।
ಅತ್ರ ತೇ ಸ್ನಾನಮಾತ್ರೇಣ ತಸ್ಮಾತ್ಸ್ನಾನಂ ಸಮಾಚರ ॥ ೨೧ ॥
ಸ್ಥಲೇಽತ್ರ ಶುಭೇ ರಾಜನ್ ಸ್ಥಾಸ್ಯಾಮಃ ಕಲಯಾ ಸಹ ।
ಏವಂ ವ್ಯಾಸ ಸಮುದ್ರಾಸ್ತು ಸುದ್ಯುಮ್ನೇನಾಽವತಾರಿತಾಃ ॥ ೨೨ ॥

---

೧೭. ಬಂದಕೂಡಲೆ ಅವನು ಕುಶಸ್ಥಲಿಯಲ್ಲಿ ನೆರೆದಿದ್ದ ಸಮುದ್ರನಾಯಕರನ್ನು ನೋಡಿದನು. ರಾಜಸ್ಥಳದ ಸಮೀಪದಲ್ಲಿ ಅವರನ್ನು ಕಂಡು ನಮಸ್ಕಾರವನ್ನು ಮಾಡಿದನು.

೧೮. ಪ್ರಣತನೂ ಭಕ್ತಿಭಾವಭರಿತನೂ ಆದ ಸುದ್ಯುಮ್ನನನ್ನು ಕಂಡು ಅವರೆಲ್ಲರೂ "ಪುಣ್ಯವಂತನೆ! ನಿನಗೆ ಬೇಕಾದ ವರವನ್ನು ಕೇಳಿಕೊ" ಎಂದು ಅನುಗ್ರಹಿಸಿದರು.

೧೯. ಆತನು ಮನಃಪೂರ್ವಕವಾಗಿ ಸಕಲಶುಭಲಕ್ಷಣಸಹಿತನಾದ ಮಗನನ್ನು ಕೇಳಿಕೊಂಡನಲ್ಲದೆ ಅವರನ್ನು ಕುರಿತು ಹೇಳಿದನು. "ಈ ಭೂಲೋಕವಿರುವವರೆಗೂ ನೀವೆಲ್ಲರೂ ಈ ರಾಜಸ್ಥಳದ ಸಮೀಪದಲ್ಲಿ ನೆಲಸಿರಬೇಕು."

೨೦. ಸಮುದ್ರರಾಜರು ಹೇಳುತ್ತಾರೆ:—ಈ ಬ್ರಹ್ಮಕಲ್ಪವು ಕೊನೆಗಾಣುವವರೆಗೂ ನಾವು ಇಲ್ಲಿಯೇ ನೆಲಗೊಳಿಸಿರುವೆವು.

೨೧. ನಿನಗೆ ಸರ್ವಲಕ್ಷಣಯುಕ್ತನಾದ ಪುತ್ರನೊಬ್ಬನು ಇಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಜನಿಸುವನು. ಆದುದರಿಂದ ಈ ತೀರ್ಥದಲ್ಲಿ ಸ್ನಾನವನ್ನು ಮಾಡು.

೨೨. ಎಲೈ ರಾಜನೆ! ನಾವೂ ಸಹ ಒಂದೊಂದಂಶದಿಂದ ಈ ಸ್ಥಳದಲ್ಲಿ ನಿಂತಿರುವೆವು." ವ್ಯಾಸಮುನಿಯೆ! ಇಂತು ಸುದ್ಯುಮ್ನ ಮಹಾರಾಜನಿಂದ ಚತುಸ್ಸಮುದ್ರಗಳೂ ಅಲ್ಲಿ ಸನ್ನಿಹಿತಗಳಾದುವು.

ಕುರುತೇ ತೇಷು ಯೋ ಯಾತ್ರಾಂ ತಸ್ಯ ಪುಣ್ಯಫಲಂ ಶೃಣು ।
ಸ್ನಾನಂ ಕೃತ್ವಾ ಮಹಾಪುಣ್ಯೇ ಸಮುದ್ರೇ ಕ್ಷಾರಸಂಜ್ಞಕೇ ॥ ೨೩ ॥
ಕುರ್ಯಾಚ್ಛ್ರಾದ್ಧಂ ತತೋ ವ್ಯಾಸ ಪಿತೄಣಾಂ ಭಕ್ತಿತತ್ಪರಃ ।
ಪೂಜಯೇಚ್ಚ ಮಹಾದೇವಂ ಸ್ಥಲಸ್ಥಂ ಪಾರ್ವತೀಪತಿಂ ॥ ೨೪ ॥
ಮಂಡಕಾಂಶ್ಚ ತತೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ।
ಪಾತ್ರಂ ತಾಮ್ರಮಯಂ ಕಾರ್ಯಂ ಲವಣೇನ ಪ್ರಪೂರಿತಂ ॥ ೨೫ ॥
ಸಹಿರಣ್ಯಂ ಚ ದಾತವ್ಯಂ ಬ್ರಾಹ್ಮಣೇ ವೇದಪಾರಗೇ ।
ಸಪ್ತಧಾನ್ಯಸಮಾಯುಕ್ತಂ ವೇಣುಜಂ ವಸ್ತ್ರವೇಷ್ಟಿತಂ ॥ ೨೬ ॥
ಸದಕ್ಷಿಣಂ ಫಲೈರ್ಯುಕ್ತಮರ್ಘ್ಯಂ ದದ್ಯಾತ್ಪ್ರಯತ್ನತಃ ।
ಕ್ಷೀರಾಬ್ಧಿಂ ಚ ತತೋ ಗತ್ವಾ ಸ್ನಾನಂ ಕುರ್ಯಾಚ್ಚ ಪೂರ್ವವತ್ ॥ ೨೭ ॥
ಕ್ಷೀರಂ ತತ್ರ ಪ್ರದಾತವ್ಯಂ ತಾಮ್ರಪಾತ್ರೇಣ ಪೂರಿತಂ ।
ದಧ್ಯಬ್ಧೌ ಚ ತಥಾ ಕೃತ್ವಾ ದದ್ಯಾದ್ದಧ್ಯೋದನಂ ಶುಭಂ ॥ ೨೮ ॥
ಇಕ್ಷ್ವಬ್ಧೌ ಚ ತಥಾ ಕೃತ್ವಾ ದದ್ಯಾದ್ವಿಪ್ರೇ ಗುಡಂ ಶುಭಂ ।
ಯಾತ್ರಾಂ ಕೃತ್ವಾ ತು ವೈ ವ್ಯಾಸ ಗಾಂ ಚ ದದ್ಯಾತ್ಪಯಸ್ವಿನೀಂ ॥ ೨೯ ॥

---

೨೩–೨೪. ಆ ತೀರ್ಥಗಳಲ್ಲಿ ಯಾತ್ರೆಯನ್ನು ಯಾವನು ಮಾಡುವನೊ, ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು. ಲವಣನಾಮಕವಾದ ಮಹಾಪುಣ್ಯಪ್ರದವಾದ ಸಮುದ್ರ ತೀರ್ಥದಲ್ಲಿ ಸ್ನಾನವನ್ನು ಮಾಡಿ ಪಿತೃದೇವತೆಗಳಲ್ಲಿ ಮಹಾಭಕ್ತಿತತ್ಪರನಾಗಿ ಶ್ರಾದ್ಧವನ್ನು ಮಾಡಬೇಕು. ಆ ಸ್ಥಳದಲ್ಲಿರುವ ಪಾರ್ವತೀಸಹಿತನಾದ ಮಹಾದೇವನನ್ನು ಪೂಜಿಸಬೇಕು.

೨೫. ವೇದಗಳಲ್ಲಿ ಪಾರಂಗತನಾದ ಬ್ರಾಹ್ಮಣನಿಗೆ ದೋಸೆಗಳನ್ನು ದಾನಮಾಡಬೇಕು. ತಾಮ್ರದ ಒಂದು ಪಾತ್ರೆಯನ್ನು ಉಪ್ಪಿನಿಂದ ತುಂಬಿ ಸಿದ್ಧಗೊಳಿಸಬೇಕು.

೨೬–೨೭. ಅದನ್ನು ಚಿನ್ನದ ದಕ್ಷಿಣೆಯೊಡನೆ ವೇದನಿಷ್ಣಾತನಾದ ಬ್ರಾಹ್ಮಣನಿಗೆ ಕೊಡಬೇಕು. ಬಳಿಕ ಏಳು ಧಾನ್ಯಗಳಿಂದ ಕೂಡಿದ ಮರದ ಬಾಗಿನವನ್ನು ವಸ್ತ್ರದಲ್ಲಿ ಕಟ್ಟಿ ದಕ್ಷಿಣೆ ಮತ್ತು ಫಲತಾಂಬೂಲಗಳೊಡನೆ ಪ್ರಯತ್ನಪೂರ್ವಕವಾಗಿ ದಾನಮಾಡಬೇಕು. ಬಳಿಕ ಕ್ಷೀರಸಮುದ್ರತೀರ್ಥಕ್ಕೆ ಹೋಗಿ ಮುನ್ನಿನಂತೆಯೇ ಅಲ್ಲಿ ಸ್ನಾನವನ್ನು ಮಾಡಬೇಕು.

೨೮. ಅಲ್ಲಿ ತಾಮ್ರದ ಪಾತ್ರೆಯ ತುಂಬ ಕ್ಷೀರವನ್ನು ದಾನಮಾಡಬೇಕು. ಬಳಿಕ ದಧಿಸಮುದ್ರ ತೀರ್ಥದ ಬಳಿಯಲ್ಲೂ ಅದೇಕ್ರಮವನ್ನನುಸರಿಸಿ ಶುಭ್ರವಾದ ದಧ್ಯೋದನವನ್ನು ದಾನಮಾಡಬೇಕು.

೨೯. ಇಕ್ಷುಸಮುದ್ರ ತೀರ್ಥದಲ್ಲಿಯೂ ಅದರಂತೆಯೇ ಮಾಡಿ ಬ್ರಾಹ್ಮಣ

**ಏವಂ ಯಃ ಕುರುತೇ ಯಾತ್ರಾಂ ರಾಜಸ್ಥಲಸಮೀಪತಃ ।**
**ಭವ್ಯಾಂ ಹಿ ಲಭತೇ ಲಕ್ಷ್ಮೀಂ ಪುತ್ರಾಂಶ್ಚಾಽಪಿ ಮನೋರಮಾನ್ ॥ ೩೦ ॥**
**ಮೃತೇ ಸ್ವರ್ಗಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ।**
**ತಾವತ್ಸ್ವರ್ಗಫಲಂ ಭುಕ್ತ್ವಾ ಪಶ್ಚಾನ್ಮೋಕ್ಷಂ ಪ್ರಯಾಸ್ಯತಿ ॥ ೩೧ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ
"ಚತುಃಸಮುದ್ರಮಾಹಾತ್ಮ್ಯವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

ನಿಗೆ ಬೆಲ್ಲವನ್ನು ದಾನಮಾಡಬೇಕು. ಎಲೈ ವ್ಯಾಸನೆ! ಇಂತು ಯಾತ್ರೆಯನ್ನು ಸಾಂಗವಾಗಿ ಮುಗಿಸಿದ ಮೇಲೆ ಹಾಲುಕರೆಯುತ್ತಿರುವ ಆಕಳನ್ನು ದಾನ ಮಾಡಬೇಕು.

೩೦. ರಾಜಸ್ಥಳದ ಸಮೀಪದಲ್ಲಿ ಇಂತು ಯಾತ್ರೆಯನ್ನು ನೆರವೇರಿಸಿದ ಮಾನವನು ಮುಂದಕ್ಕೆ ಐಶ್ವರ್ಯವನ್ನೂ, ಮನಸ್ಸಿಗೆ ಸಂತೋಷವನ್ನುಂಟು ಮಾಡುವ ಪುತ್ರರನ್ನೂ ಪಡೆಯುವ ಸಾಧನೆಯನ್ನು ಮಾಡುವನು.

೩೧. ಅಂತಹ ಭಕ್ತನು ದೇಹವನ್ನು ಬಿಡಲು ಸ್ವರ್ಗಲೋಕದಲ್ಲಿ ಹದಿನಾಲ್ಕು ಇಂದ್ರಕಲ್ಪಗಳವರೆಗೂ ವಾಸಮಾಡಿ ಅದರ ಅವಸಾನದಲ್ಲಿ ಮೋಕ್ಷಪದವಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ
ಮಾಹಾತ್ಮ್ಯದಲ್ಲಿ "ಚತುಸ್ಸಮುದ್ರಮಾಹಾತ್ಮ್ಯವರ್ಣನ"ವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ಶಂಕರಾದಿತ್ಯಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ:—

ಶೃಣು ವ್ಯಾಸ ಮಹಾತೀರ್ಥಂ ನಾಮ್ನಾ ಶಂಕರವಾಪಿಕಾ ।
ಕ್ರೀಡಮಾನೇನ ದೇವೇನ ನಿರ್ಮಿತಂ ತೀರ್ಥಮುತ್ತಮಂ ॥ ೧ ॥
ಪ್ರಕ್ಷಿಪ್ತಂ ದೇವದೇವೇನ ಕಪಾಲಕ್ಷಾಲನಂ ಜಲಂ ।
ವಾಪೀಗತಂ ಕೃತಂ ಯಸ್ಮಾದತಃ ಶಂಕರವಾಪಿಕಾ ॥ ೨ ॥
ಅರ್ಕಾಷ್ಟಮ್ಯಾಂ ನರಃ ಸ್ನಾತ್ವಾ ದಿಶಾಸು ವಿದಿಶಾಸು ಚ ।
ಪೂರ್ವಾದಿಕ್ರಮತೋ ಯಾವದ್ವಾಪೀ ಮಧ್ಯೇ ತಥೈವ ಚ ॥ ೩ ॥
ಹವಿಷ್ಯಾನ್ನಯುತಾನ್ವ್ಯಾಸ ದದ್ಯಾಚ್ಚ ಕರಕಾನ್ನವಾನ್ ।
ಶಾಕಮೂಲಾಂಶ್ಚ ವಿಪ್ರೇಭ್ಯಸ್ತಸ್ಯ ಪುಣ್ಯಫಲಂ ಶೃಣು ॥ ೪ ॥
ಪರತ್ರ ಚೇಹ ಯೇ ಲೋಕಾಃ ಸರ್ವಭಾವಸಮನ್ವಿತಾಃ ।
ತತ್ರ ತತ್ರ ಸಮಾಯಾತಿ ಭುನಕ್ತ್ಯೈಶ್ವರ್ಯಮುತ್ತಮಂ ॥ ೫ ॥

---

## ಕನ್ನಡದ ಅನುವಾದ

### ಶಂಕರಾದಿತ್ಯಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ವ್ಯಾಸನೆ! ಶಂಕರಕೂಪವೆಂದು ಪ್ರಸಿದ್ಧವಾದ ಮಹಾತೀರ್ಥವನ್ನು ಕುರಿತು ಹೇಳುವೆನು, ಕೇಳು. ಓಮ್ಮೆ ಮಹೇಶ್ವರನು ಕ್ರೀಡಾಸಕ್ತನಾಗಿರಲು ಈ ಉತ್ತಮತೀರ್ಥವನ್ನು ನಿರ್ಮಾಣ ಮಾಡಿದನು.

೨. ತನ್ನ ಕೈಯೊಳಗಿನ ಕಪಾಲವನ್ನು ತೊಳೆದು ಆ ನೀರನ್ನು ಹಳ್ಳವಾಗಿದ್ದ ಒಂದು ಪ್ರದೇಶದಲ್ಲಿ ಚೆಲ್ಲಿದನು. ಅಂದಿನಿಂದ ಆ ಕೂಪವು ಶಂಕರವಾಪಿಯೆಂಬ ನಾಮವನ್ನು ಪಡೆಯಿತು.

೩. ಉತ್ತರಾನಕ್ಷತ್ರದಿಂದ ಕೂಡಿದ ಅಷ್ಟಮಿಯ ದಿನದಲ್ಲಿ ಮಾನವನು ಆ ಕೂಪದಲ್ಲಿ ಪೂರ್ವವು ಮೊದಲಾಗಿ ದಿಕ್ಕುಗಳ ಕೋಣಗಳಲ್ಲಿಯೂ, ತೀರ್ಥ ಮಧ್ಯದಲ್ಲಿಯೂ ಸ್ನಾನವನ್ನು ಮಾಡಬೇಕು.

೪. ಎಲೈ ವ್ಯಾಸನೆ! ಅಂದು ಹವಿಷ್ಯದಿಂದ ತುಂಬಿದ ನೂತನ ಪಾತ್ರೆಗಳನ್ನೂ ತರಕಾರಿಗಳನ್ನೂ ಕಂದಮೂಲಗಳನ್ನೂ ಬ್ರಾಹ್ಮಣರಿಗೆ ದಾನ ಮಾಡಬೇಕು. ಅದರ ಪುಣ್ಯಫಲವನ್ನು ಕೇಳು.

೫. ಇಲ್ಲಿಯೂ ಸಕಲಭೋಗಸಮನ್ವಿತಗಳಾದ ಯಾವ ಯಾವ ಲೋಕಗಳಿರುವುವೊ, ಅವುಗಳೆಲ್ಲವುಗಳಲ್ಲಿಯೂ ಅವನು ಹೋಗಿ ಆಯಾ ಲೋಕದ ಉತ್ತಮಭೋಗಗಳನ್ನನುಭವಿಸುವನು.

ಯೇ ನರಾಃ ಕೀರ್ತಯಿಷ್ಯಂತಿ ಮಾಹಾತ್ಮ್ಯಮಿತಿ ಭಾವಿಕಾಃ ।
ರುದ್ರಲೋಕೇಽಪಿ ತೇ ಪೂಜ್ಯಾಸ್ತೇಭ್ಯೋಽಪಿ ಸತತಂ ನಮಃ ॥ ೬ ॥

ಸನತ್ಕುಮಾರ ಉವಾಚ :—

ತತೋ ವೈ ದೇವದೇವೇಶಃ ಪಿನಾಕೀ ವೃಷಭಧ್ವಜಃ ।
ತುಷ್ಟಾವ ಪ್ರಯತೋ ಭೂತ್ವಾ ದೇವದೇವಂ ದಿವಾಕರಂ ॥ ೭ ॥
ಆಜಗಾಮ ದಿವಾನಾಥಃ ಸಂತುಷ್ಟಃ ಪ್ರಾಹ ಶಂಕರಂ ॥ ೮ ॥

ಸೂರ್ಯ ಉವಾಚ :—

ವರಂ ವರಯ ಭೂತೇಶ ವರದೋಽಸ್ಮಿ ದದಾಮಿ ತೇ ।
ತಮಾಹ ವರದಶ್ಚೇತ್ತ್ವಂ ಯಾಚ್ಯಮಾನಂ ಕುರುಷ್ವ ಮೇ ॥ ೯ ॥
ಅಂಶೇನ ಸ್ಥೀಯತಾಮತ್ರ ಹಿತಾರ್ಥಂ ಸರ್ವದೇಹಿನಾಂ ।
ಅವತೀರ್ಣೋ ರವಿಸ್ತತ್ರ ಶ್ರುತ್ವಾ ಮಾಹೇಶ್ವರಂ ವಚಃ ॥ ೧೦ ॥
ತತೋ ದೇವಾಧಿದೇವಸ್ಯ ಶಂಕರಸ್ಯ ಮಹೌಜಸಃ ।
ವಾಕ್ಯೇನ ಭಾಸ್ಕರಸ್ತತ್ರ ಯಯೌ ಖ್ಯಾತಿಂ ಮಹಾದ್ಯುತಿಃ ॥ ೧೧ ॥

---

೬. ಈ ತೀರ್ಥದ ಮಾಹಾತ್ಮ್ಯವನ್ನು ಅತ್ಯಂತಶ್ರದ್ಧೆಯಿಂದ ಯಾವ ಮನುಷ್ಯರು ಪಠನಮಾಡುವರೊ, ಅವರು ರುದ್ರಲೋಕದಲ್ಲಿಯೂ ಪೂಜಿತ ರಾಗುವರು. ಅವರಿಗೂ ಸಹ ನಿತ್ಯವೂ ನಮಸ್ಕರಿಸಬೇಕು.

೭. ಸನತ್ಕುಮಾರನು ಹೇಳುತ್ತಾನೆ:—ಇಂತು ಶಂಕರವಾಪಿಯನ್ನು ನಿರ್ಮಾಣಮಾಡಿದ ಮೇಲೆ ದೇವದೇವನೂ, ಪಿನಾಕಪಾಣಿಯೂ, ವೃಷಭ ಧ್ವಜನೂ ಆದ ಮಹಾದೇವನು ಪ್ರಯತ್ನಪೂರ್ವಕವಾಗಿ ದೇವದೇವನಾದ ಸೂರ್ಯನನ್ನು ಸ್ತೋತ್ರಮಾಡಿದನು.

೮. ಆಗ ಸೂರ್ಯನು ಸಂತುಷ್ಟನಾಗಿ ಅಲ್ಲಿ ಪ್ರಸನ್ನನಾಗಿ ಶಂಕರನನ್ನು ಕುರಿತು ಹೇಳಿದನು.

೯. ಸೂರ್ಯನು ಹೇಳುತ್ತಾನೆ:—"ಭೂತೇಶ್ವರನೆ! ವರವನ್ನು ಕೊಡಲು ನಾನು ಪ್ರತ್ಯಕ್ಷನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ." ಶಿವನು ಆತನಿಗೆ ಹೇಳಿದನು. ನೀನು ವರದನಾಗಿದ್ದರೆ ನಾನು ಬೇಡಿದುದನ್ನು ನಡೆಸಿ ಕೊಡುವವನಾಗು.

೧೦. ಸಕಲ ಪ್ರಾಣಿಗಳಿಗೂ ಹಿತವನ್ನು ಮಾಡುತ್ತ ನೀನು ಒಂದಂಶದಿಂದ ಇಲ್ಲಿಯೇ ನೆಲೆಗೊಳ್ಳಬೇಕು." ಮಹೇಶ್ವರನ ಈ ಮಾತನ್ನು ಕೇಳಿ ಸೂರ್ಯನು ಭಾಸ್ಕರರೂಪವಾಗಿ ಅಲ್ಲಿಗೆ ಬಂದನು.

೧೧. ಬಳಿಕ ದೇವಾಧಿದೇವನೂ ಮಹಾಪರಾಕ್ರಮಿಯೂ ಆದ ಶಂಕರನ ಮಾತಿನಂತೆಯೇ ಮಹಾತೇಜಸ್ಸಂಪನ್ನನಾದ ಸೂರ್ಯನು ಅಲ್ಲಿ ನಿಂತನು.

ಶಂಕರಾದಿತ್ಯನಾಮೇತಿ ಲೋಕಾಽನುಗ್ರಹಕಾರಕಃ ।
ದೇವಾ ದೈತ್ಯಾಶ್ಚ ಗಂಧರ್ವಾ ವಿಸ್ಮಿತಾಃ ಸಹ ಕಿನ್ನರೈಃ ॥ ೧೨ ॥
ಅಹೋ ಧನ್ಯಮಿದಂ ಸ್ಥಾನಂ ಯತ್ರಾಸ್ತೇ ತ್ರಿಪುರಾಂತಕಃ ।
ಭಾಸ್ಕರೋಽಪಿ ಚ ತತ್ರಸ್ಥತೀರ್ಥಮಧ್ಯೇ ಚ ವರ್ತತೇ ॥ ೧೩ ॥
ತತಸ್ತುಷ್ಟಾಶ್ಚ ತೇ ಸರ್ವೇ ಬ್ರಹ್ಮಾದ್ಯಾಃ ಸುರಸತ್ತಮಾಃ ।
ದೇವೇಶಂ ಪೂಜಯಾಮಾಸುರಾದಿತ್ಯಂ ಶಂಕರಂ ತಥಾ ॥ ೧೪ ॥
ಮೂರ್ತಿಮಂತಶ್ಚ ತೇ ದೇವಾ ಅವತೀರ್ಯ ಚ ಶೋಭನಂ ।
ಸ್ಥಾಪಯಿತ್ವಾಽಬ್ರವೀದ್ವಾಕ್ಯಂ ಯೇಽತ್ರ ಸ್ನಾಸ್ಯಂತಿ ಮಾನವಾಃ ॥ ೧೫ ॥
ನ ದುಃಖಂ ಜಾಯತೇ ತೇಷಾಂ ಜರಾಮರಣಶೋಕಜಂ ।
ಸರ್ವಯಜ್ಞೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ।
ತಸ್ಮಾಚ್ಚೈವಾಧಿಕಂ ಹ್ಯತ್ರ ಶಂಕರಾದಿತ್ಯದರ್ಶನಾತ್ ॥ ೧೬ ॥
ವ್ಯಾಧಯೋ ನಾಧಯಶ್ಚೈವ ದಾರಿದ್ರ್ಯಂ ನ ಕದಾಚನ ।
ಐಶ್ವರ್ಯಂ ಚಾಽತುಲಂ ತೇಷಾಂ ಜಾಯತೇ ಭುವಿ ಸರ್ವದಾ ॥ ೧೭ ॥

---

೧೨. ಶಂಕರಾದಿತ್ಯನೆಂಬ ಹೆಸರಿನಿಂದ ಇಂದಿಗೂ ಆತನು ಲೋಕಾನುಗ್ರಹವನ್ನು ಮಾಡುವವನು. ಇದನ್ನು ಕಂಡು ದೇವತೆಗಳೂ, ದೈತ್ಯರೂ, ಗಂಧರ್ವರೂ, ಕಿನ್ನರರೂ ವಿಸ್ಮಯವನ್ನು ತಾಳಿದರು.

೧೩. "ಈಗ ಈ ಸ್ಥಳವು ಬಹಳ ಪವಿತ್ರತಮವಾದುದು. ಇಲ್ಲಿ ತ್ರಿಪುರಧ್ವಂಸಿಯಾದ ಮಹಾದೇವನೂ ಇರುವನು. ಸೂರ್ಯನೂ ಸಹ ಇಲ್ಲಿರುವ ತೀರ್ಥದ ಮಧ್ಯದಲ್ಲಿ ಕಂಗೊಳಿಸುತ್ತಿರುವನು."

೧೪. ಆಗ ಬ್ರಹ್ಮನೇ ಮೊದಲಾದ ಸಕಲದೇವತಾಸಮೂಹಗಳೂ ಸಂತೋಷದಿಂದ ಆದಿತ್ಯನನ್ನೂ ಮಹಾದೇವನನ್ನೂ ಪೂಜಿಸಿದರು.

೧೫. ಆ ದೇವತೆಗಳು ಅವತರಿಸಿ ಮೂರ್ತಿಮಂತರಾಗಿ ಆ ಪ್ರದೇಶವನ್ನೆಲ್ಲ ಪವಿತ್ರಗೊಳಿಸಿ ಇಂತೆಂದು ವರವನ್ನಿತ್ತರು. "ಯಾವ ಮಾನವರು ಈ ತೀರ್ಥದಲ್ಲಿ ಸ್ನಾನವನ್ನು ಮಾಡುವರೊ, ಅವರಿಗೆ ಜರಾಮರಣಗಳೆಂಬ ಶೋಕಗಳಿಂದ ದುಃಖವುಂಟಾಗುವುದಿಲ್ಲ.

೧೬. ಸಕಲ ಯಜ್ಞಗಳನ್ನು ಮಾಡುವುದರಿಂದ ಯಾವ ಫಲವುಂಟೊ, ಸಕಲ ದಾನಗಳಿಂದ ಯಾವ ಪುಣ್ಯವು ಲಭಿಸುವುದೊ, ಅದಕ್ಕಿಂತಲೂ ಅಧಿಕವಾದ ಫಲವು ಶಂಕರಾದಿತ್ಯನ ದರ್ಶನದಿಂದ ಲಭಿಸುವುದು.

೧೭. ಶಂಕರಾದಿತ್ಯನ ಭಕ್ತರಿಗೆ ದೈಹಿಕ ರೋಗಗಳಾಗಲಿ, ಮಾನಸಿಕ ಚಿಂತೆಗಳಾಗಲಿ, ದಾರಿದ್ರ್ಯವಾಗಲಿ ಎಂದಿಗೂ ಬರಲಾರವು. ಯಾವಾಗಲೂ ಅನಂತವಾದ ಐಶ್ವರ್ಯವು ಅವರಲ್ಲಿ ನೆಲೆಯಾಗಿರುವುದು.

**ನ ರೋಗೋ ನ ಚ ದಾರಿದ್ರ್ಯಂ ವಿಯೋಗೋ ನ ಚ ಬಂಧುಭಿಃ ।**
**ಜಾಯತೇ ಮುನಿಶಾರ್ದೂಲ ಶಂಕರಾದಿತ್ಯದರ್ಶನಾತ್ ॥ ೧೮ ॥**
**ಇತ್ಯೇವಂ ದೇವದೇವೇನ ಪುರಾ ವೈ ಶೂಲಪಾಣಿನಾ ।**
**ಶಂಕರಾದಿತ್ಯನಾಮ್ನಾ ಚ ಸ್ಥಾಪಿತಂ ಪರಮಂ ಪದಂ ॥ ೧೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶಂಕರಾದಿತ್ಯ ಮಾಹಾತ್ಮ್ಯವರ್ಣನಂ" ನಾಮ ಪಂಚದಶೋಽಧ್ಯಾಯಃ**

---

೧೮. ಮುನಿವರ್ಯನೆ! ಶಂಕರಾದಿತ್ಯನ ದರ್ಶನವನ್ನು ಮಾಡಿದವರಿಗೂ ಸಹ ರೋಗವೂ, ದಾರಿದ್ರ್ಯವೂ, ಬಂಧುಬಳಗಗಳಿಂದ ವಿಯೋಗವೂ ಎಂದಿಗೂ ಉಂಟಾಗುವುದಿಲ್ಲ.

೧೯. ಇಂತು ದೇವದೇವನಾದ ಶೂಲಪಾಣಿಯಿಂದ ಪೂರ್ವದಲ್ಲಿ ಸರ್ವೋತ್ತಮವಾದ ಶಂಕರಾದಿತ್ಯನ ಸನ್ನಿಧಿಯು ಸ್ಥಾಪಿತವಾಯಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಶಂಕರಾದಿತ್ಯಮಾಹಾತ್ಮ್ಯವರ್ಣನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ನೀಲಗಂಧವತೀಪ್ರಭಾವವರ್ಣನಂ

ಸನತ್ಕುಮಾರ ಉವಾಚ :—

ಅಥಾಽನ್ಯತ್ಸಂಪ್ರವಕ್ಷ್ಯಾಮಿ ತೀರ್ಥಾನಾಂ ತೀರ್ಥಮುತ್ತಮಂ ।
ಸ್ಥಾಪಿತಂ ಪರಮಂ ತೀರ್ಥಂ ಸ್ವನಾಮ್ನಾ ಮುನಿಸತ್ತಮ ॥ ೧ ॥
ಏಕದಾ ಸಮಯೇ ವ್ಯಾಸ ಕಪಾಲಕ್ಷಾಲನಾಯ ವೈ ।
ಶೀರ್ಷೋದಕಂ ಗೃಹೀತ್ವಾ ತು ಕಪಾಲೇನ ಮಹೇಶ್ವರಃ ॥ ೨ ॥
ಪ್ರಕ್ಷಾಲ್ಯ ಚಾಽಕ್ಷಿಪದ್ಭೂಮೌ ತತ್ರ ತೀರ್ಥಮನುತ್ತಮಂ ।
ನಾಮ್ನಾ ಗಂಧವತೀ ಪುಣ್ಯಾ ನದೀ ತ್ರೈಲೋಕ್ಯವಿಶ್ರುತಾ ॥ ೩ ॥
ಬ್ರಹ್ಮಣೋ ರುಧಿರೇಣಾಶು ಪರಿಪೂರ್ಣಾಽಭವತ್ಕ್ಷಣಾತ್ ।
ತಸ್ಯಾಂ ಸ್ನಾನಂ ಸದಾ ಶಸ್ತಂ ಸ್ವಯಂ ದೇವೇನ ಭಾಷಿತಂ ॥ ೪ ॥
ಶ್ರಾದ್ಧಂ ಚ ತರ್ಪಣಂ ಕೃತ್ವಾ ತತ್ಸರ್ವಂ ಚಾಽಕ್ಷಯಂ ಭವೇತ್ ।
ವಾಯುಭೂತಾಸ್ತು ಪಿತರಸ್ತಸ್ಯಾಸ್ತೀರೇ ತು ದಕ್ಷಿಣೇ ।
ತಿಷ್ಠಂತಿ ಮುನಿಶಾರ್ದೂಲ ಚಿಂತಯಂತಿ ಸ್ವಗೋತ್ರಜಂ ॥ ೫ ॥

---

### ಕನ್ನಡದ ಅನುವಾದ

#### ನೀಲಗಂಧವತೀಪ್ರಭಾವವರ್ಣನ

೧. ಸನತ್ಕುಮಾರನು ಹೇಳುತ್ತಾನೆ :—ತೀರ್ಥಗಳಲ್ಲೆಲ್ಲ ಉತ್ತಮತೀರ್ಥವೆನಿಸಿದ ಮತ್ತೊಂದು ತೀರ್ಥದ ಚರಿತ್ರೆಯನ್ನು ಹೇಳುವೆನು. ಮುನಿಸತ್ತಮನೆ! ಈ ಉತ್ತಮ ತೀರ್ಥವನ್ನು ಶಂಕರನು ತನ್ನ ಹೆಸರಿನಿಂದಲೇ ಸ್ಥಾಪಿಸಿದನು.

೨. ವ್ಯಾಸಮುನಿಯೆ! ಒಂದಾನೊಂದು ಸಮಯದಲ್ಲಿ ಬ್ರಹ್ಮಕಪಾಲವನ್ನು ತೊಳೆಯುವುದಕ್ಕಾಗಿ ಮಹೇಶ್ವರನು ಅದನ್ನು ಶೀರ್ಷೋದಕದಿಂದ ತುಂಬಿದ್ದನು.

೩. ಆ ಕಪಾಲವನ್ನು ತೊಳೆದು ಭೂಮಿಯಲ್ಲಿ ಚೆಲ್ಲಿದನು. ಅಲ್ಲಿಯೇ ಸರ್ವ ಶ್ರೇಷ್ಠವಾದ ತೀರ್ಥವುಂಟಾಯಿತು. ಪುಣ್ಯಪ್ರದವೂ ಮೂರು ಲೋಕಗಳಲ್ಲಿ ಪ್ರಖ್ಯಾತವೂ ಆದ ಗಂಧವತಿಯೆಂಬ ನದಿಯು ಅದರಿಂದ ಪ್ರವಹಿಸಿತು.

೪. ಆ ತೀರ್ಥವು ಕ್ಷಣಮಾತ್ರದಲ್ಲಿಯೇ ಬ್ರಹ್ಮದೇವನ ರಕ್ತದಿಂದ ತುಂಬಿನಿಂತಿತು. ಅದರಲ್ಲಿ ಸ್ನಾನವನ್ನು ಮಾಡುವುದು ಯಾವಾಗಲೂ ಪ್ರಶಸ್ತವೆಂದು ದೇವದೇವನೇ ಹೇಳಿರುವನು.

೫. ಅಲ್ಲಿ ಮಾಡಿದ ಶ್ರಾದ್ಧವಾಗಲಿ, ತರ್ಪಣವಾಗಲಿ ಸಕಲವೂ ಅಕ್ಷಯಫಲದಾಯಕವಾಗುವುದು. ಮುನಿಶ್ರೇಷ್ಠನೆ! ಪಿತೃದೇವತೆಗಳೆಲ್ಲರೂ ವಾಯು

ಆಗಮಿಷ್ಯತಿ ಪುತ್ರೋಽದ್ಯ ನಪ್ತಾ ವಾ ಸಂತತಾವಿಹ ।
ಸಂಯಾವಂ ಪಾಯಸಂ ವಾಽಪಿ ಶ್ಯಾಮಾಕಂ ಸನಿವಾರಕಂ ॥ ೬ ॥
ಸಕೃತ್ಕ್ಷೌದ್ರತಿಲೈರ್ಯುಕ್ತಂ ಪಿಂಡಂ ದಾಸ್ಯತಿ ವೈ ಕದಾ ।
ತೇನ ಪಿಂಡಪ್ರದಾನೇನ ತೃಪ್ತಿರ್ಭವತಿ ಚಾಽಕ್ಷಯಾ ॥ ೭ ॥
ಯಸ್ತು ಸ್ನಾತ್ವಾ ಚ ವೈ ಪಿಂಡಂ ದದ್ಯಾದ್ವೈ ಚಂದ್ರಪರ್ವಣಿ ।
ಪಿತರೌ ದ್ವಾದಶಾಽಬ್ದಾನಿ ತೃಪ್ತಿಂ ಯಾಸ್ಯಂತಿ ತಸ್ಯ ವೈ ॥ ೮ ॥
ಯೇಽತ್ರಾಗತ್ಯ ಸುವಿದ್ವಾಂಸೋ ಮಾನವಾ ವಾ ತಥಾ ದ್ವಿಜಾಃ ।
ಪಿತೄನ್ಸಂತರ್ಪಯಿಷ್ಯಂತಿ ಸ್ವರ್ಗಸ್ತೇಷಾಂ ಸದಾಽಕ್ಷಯಃ ॥ ೯ ॥
ತತ್ರ ಯದ್ದೀಯತೇ ದಾನಂ ತ್ರುಟಿಮಾತ್ರಂ ತು ಕಾಂಚನಂ ।
ಅಕ್ಷಯಂ ತಸ್ಯ ತತ್ಪ್ರೋಕ್ತಂ ಬ್ರಹ್ಮಣಾ ವೈ ಸ್ವಯಂಭುವಾ ॥ ೧೦ ॥
ಗಂಗಾದ್ವಾರೇ ಪ್ರಯಾಗೇ ಚ ಕುರುಕ್ಷೇತ್ರೇಽಥ ಪುಷ್ಕರೇ ।
ವಾರಾಣಸ್ಯಾಂ ಗಯಾಯಾಂ ಚ ಸಾ ನ ತೃಪ್ತಿರ್ಭವಿಷ್ಯತಿ ॥ ೧೧ ॥

---

ಶರೀರವುಳ್ಳವರಾಗಿ ಆ ತೀರ್ಥದ ದಕ್ಷಿಣತೀರದಲ್ಲಿ ನಿಂತು ತಮ್ಮ ವಂಶಗಳಲ್ಲಿ ಹುಟ್ಟಿದವರನ್ನು ಕುರಿತು ಇಂತು ಚಿಂತಿಸುತ್ತಿರುವರು.

೬–೭. "ನಮ್ಮ ಸಂತತಿಯಲ್ಲಿ ಯಾರೊಬ್ಬನ ಪುತ್ರನೊ, ಪೌತ್ರನೊ ಇಲ್ಲಿಗೆ ಬರುವನು. ಹೋಳಿಗೆ ಪಾಯಸಗಳನ್ನೂ, ಶ್ಯಾಮಾಕಧಾನ್ಯವನ್ನೂ, ಕಾಡಕ್ಕಿಯನ್ನೂ, ಒಮ್ಮೆಯಾದರೂ ಜೇನುತುಪ್ಪ, ಎಣ್ಣೆಗಳಿಂದ ಕೂಡಿದ ಪಿಂಡಗಳನ್ನೂ ಕೊಡುವನು. ಆ ಪಿಂಡಪ್ರದಾನದಿಂದ ನಮಗೆ ಅನಂತವಾದ ತೃಪ್ತಿಯುಂಟಾಗುವುದರಲ್ಲಿ ಸಂಶಯವಿಲ್ಲ."

೮. ಯಾವನು ಚಂದ್ರಗ್ರಹಣಕಾಲದಲ್ಲಿ ಆ ತೀರ್ಥದಲ್ಲಿ ಸ್ನಾನಮಾಡಿ ಪಿಂಡವನ್ನರ್ಪಿಸುವನೊ, ಅವನ ಪಿತೃಗಳು ಹನ್ನೆರಡು ವರ್ಷಗಳವರೆಗೂ ಅವನಲ್ಲಿ ಸಂತುಷ್ಟರಾಗಿರುವರು.

೯. ಯಾವ ವಿದ್ವಾಂಸರೂ, ಮನುಷ್ಯರೂ, ಬ್ರಾಹ್ಮಣರೂ ಇಲ್ಲಿ ಪಿತೃಗಳಿಗೆ ಸಂತೋಷವನ್ನುಂಟುಮಾಡುವರೊ, ಅವರಿಗೆ ಶಾಶ್ವತವಾದ ಸ್ವರ್ಗವಾಸವು ಲಭಿಸುವುದು.

೧೦. ಇಲ್ಲಿ ಮಾಡಿದ ಯಥಾಶಕ್ತಿದಾನವಾಗಲಿ, ಅಣುಮಾತ್ರದ ಚಿನ್ನವಾಗಲಿ ಅಕ್ಷಯಫಲಕಾರಕವೆಂದು ಲೋಕಪಿತಾಮಹನಾದ ಬ್ರಹ್ಮದೇವನೇ ಉದ್ಘೋಷಿಸಿರುವನು.

೧೧. ಗಂಗಾದ್ವಾರದಲ್ಲಾಗಲಿ, ಪ್ರಯಾಗದಲ್ಲಾಗಲಿ, ಕುರುಕ್ಷೇತ್ರದಲ್ಲಾಗಲಿ, ಪುಷ್ಕರಕ್ಷೇತ್ರದಲ್ಲಾಗಲಿ, ಕಾಶೀಕ್ಷೇತ್ರದಲ್ಲಾಗಲಿ, ಗಯೆಯಲ್ಲಿಯೂ ಪಿತೃಗಳಿಗೆ ಇಲ್ಲಿನ ಪಿಂಡಪ್ರದಾನದಿಂದಾಗುವಷ್ಟು ತೃಪ್ತಿಯುಂಟಾಗುವುದಿಲ್ಲ.

ತುಷ್ಟಾಶ್ಚ ಪಿತರೋ ನೃಣಾಂ ದಾಸ್ಯಂತಿ ಕಾಂಕ್ಷಿತಾನ್ವರಾನ್ ॥ ೧೨ ॥
ಯೋ ಯಮುದ್ದಿಶ್ಯ ವೈ ಕಾಮಮಿಹ ಶ್ರಾದ್ಧಂ ಕರಿಷ್ಯತಿ ।
ತಸ್ಯ ತಜ್ಜಾಯತೇ ಸರ್ವಂ ಮೃತಸ್ಯ ಪರಮಾ ಗತಿಃ ॥ ೧೩ ॥
ನವಮೀ ಅಷ್ಟಮೀ ಚೈವ ಅಮಾವಾಸ್ಯಾಽಥ ಪೂರ್ಣಿಮಾ ।
ಸರ್ವಾಣ್ಯೇತಾನಿ ವೈ ವ್ಯಾಸ ರವೇಃ ಸಂಕ್ರಮ ಏವ ಚ ॥ ೧೪ ॥
ಬ್ರಹ್ಮೇಂದ್ರರುದ್ರದೇವಾಂಶ್ಚ ಸೂರ್ಯಾಗ್ನಿಬ್ರಹ್ಮದೈವತಾನ್ ।
ವಿಶ್ವೇದೇವಾನ್ಸಗಂಧರ್ವಾನ್ಯಕ್ಷಾಂಶ್ಚ ಮನುಜಾನ್ಪಶೂನ್ ॥ ೧೫ ॥
ಸರೀಸೃಪಾನ್ಪಿತೃಗಣಾನ್ಯಚ್ಚಾಽನ್ಯದ್ಭುವಿ ಸಂಸ್ಥಿತಂ ।
ಶ್ರಾದ್ಧಂ ವೈ ಶ್ರದ್ಧಯಾ ಕುರ್ವನ್ಪ್ರೀಣಯತ್ಯಖಿಲಂ ಜಗತ್ ॥ ೧೬ ॥
ಮಾಸಿ ಮಾಸ್ಯಸಿತೇ ಪಕ್ಷೇ ಪಂಚದಶ್ಯಾಂ ದ್ವಿಜೋತ್ತಮ ।
ಇಂದುಕ್ಷಯೇ ಯದಾ ಮೈತ್ರಂ ವಿಶಾಖಾಂ ಚೈವ ರೋಹಿಣೀಂ ॥ ೧೭ ॥
ಶ್ರಾದ್ಧೇ ಪಿತೃಗಣಾಸ್ತೃಪ್ತಿಂ ಪ್ರಯಾಂತಿ ಪಿತರೋಽರ್ಜಿತಾಂ ।
ವಾಸವಾಂಚೈಕಪಾದರ್ಕ್ಷೇ ಪಿತೄಣಾಂ ತೃಪ್ತಿಮಿಚ್ಛತಾ ॥ ೧೮ ॥

---

೧೨. ಸಂತುಷ್ಟರಾದ ಪಿತೃಗಳು ಮನುಷ್ಯರಿಗೆ ಅಪೇಕ್ಷಿಸಿದ ವರಗಳನ್ನೆಲ್ಲ ಅನುಗ್ರಹಿಸುವರು.

೧೩. ಯಾವನು ಯಾವ ಅಭಿಲಾಷೆಯಿಂದ ಇಲ್ಲಿ ಶ್ರಾದ್ಧಕರ್ಮವನ್ನು ಮಾಡುವನೊ, ಅವನ ಅಭಿಲಾಷೆಯು ಸಂಪೂರ್ಣವಾಗಿ ನೆರವೇರುವುದು. ಅವನು ಮೃತನಾದರೆ ಉತ್ತಮಗತಿಯನ್ನೂ ಪಡೆಯುವನು.

೧೪. ಎಲೈ ವ್ಯಾಸನೆ! ಪ್ರತಿಮಾಸದಲ್ಲಿಯೂ ನವಮಿ, ಅಷ್ಟಮೀ ತಿಥಿಗಳೂ, ಅಮಾವಾಸ್ಯೆ ಪೌರ್ಣಮಿಗಳೂ, ಸೂರ್ಯಸಂಕ್ರಮಣದ ದಿನಗಳೂ ಪರ್ವದಿವಸಗಳೆನಿಸುವುವು.

೧೫–೧೬. ಆ ದಿನಗಳಲ್ಲಿ ಶ್ರಾದ್ಧಗಳನ್ನು ಮಾಡಿದವನು ಬ್ರಹ್ಮ, ಮಹೇಂದ್ರ, ರುದ್ರರನ್ನೂ, ಸೂರ್ಯ, ಅಗ್ನಿ, ಬ್ರಾಹ್ಮಣರನ್ನೂ, ವಿಶ್ವದೇವರನ್ನೂ, ಗಂಧರ್ವರನ್ನೂ, ಯಕ್ಷರನ್ನೂ, ಮನುಷ್ಯರನ್ನೂ, ಪಶುಗಳನ್ನೂ, ನಾಗರನ್ನೂ, ಪಿತೃಗಣಗಳನ್ನೂ, ಭೂಮಿಯಲ್ಲಿರುವ ಸಕಲ ಜೀವರನ್ನೂ, ಸಮಗ್ರವಾದ ಜಗತ್ತನ್ನೇ ತನ್ನ ಶ್ರದ್ಧೆಯಿಂದ ಸಂತೋಷಗೊಳಿಸುವನು.

೧೭–೨೦. ದ್ವಿಜಶ್ರೇಷ್ಠನೆ! ಪ್ರತಿ ತಿಂಗಳಲ್ಲಿಯೂ ಕೃಷ್ಣಪಕ್ಷದಲ್ಲಿ ಚಂದ್ರನು ಕಾಣದಿರವ ಅಮಾವಾಸ್ಯೆಯು ಅನೂರಾಧ, ವಿಶಾಖ ಅಥವ ರೋಹಿಣೀ ನಕ್ಷತ್ರಗಳಿಂದ ಕೂಡಿರಲು ಮಾಡಿದ ಶ್ರಾದ್ಧದಿಂದ ಪಿತೃಗಣಗಳು ತೃಪ್ತಿಯನ್ನು ಹೊಂದುವರು. ಅಲ್ಲದೆ ಪಿತೃಗಳ ಸಂತೋಷವನ್ನಪೇಕ್ಷಿಸುವವನು ಧನಿಷ್ಠಾ, ಪೂರ್ವಾಭಾದ್ರಪದ ನಕ್ಷತ್ರಗಳ ದಿನಗಳಲ್ಲಿ ಶ್ರಾದ್ಧಗಳನ್ನು ಮಾಡಬೇಕು.

**ಭಕ್ತ್ಯಾ ಶ್ರಾದ್ಧಂ ಪ್ರಕರ್ತವ್ಯಂ ಪಿತರಸ್ತೇನ ತರ್ಪಿತಾಃ ।**
**ಅಪಿ ಧನ್ಯಾಃ ಕುಲೇ ಜಾತಾ ಅಸ್ಮಾಕಂ ಮತಿಶಾಲಿನಃ ॥ ೧೯ ॥**
**ಯೇ ಕುರ್ವಂತಿ ಚ ವೈ ಶ್ರಾದ್ಧಂ ಪಿಂಡಾನ್ಯೇ ನಿರ್ವಪಂತಿ ಚ ।**
**ತೇನ ಪಿಂಡಪ್ರದಾನೇನ ತೃಪ್ತಿರ್ನೋ ಭವಿತಾಽಕ್ಷಯಾ ॥ ೨೦ ॥**
**ಇಹೈತ್ಯ ವೈ ಪುಣ್ಯಜಲೇಷು ಸಮ್ಯಕ್**
**ಸ್ನಾತ್ವಾ ನರಸ್ತಾಂತು ಲಭೇತ ಕಾಮಾನ್ ।**
**ಯಾನ್ಪ್ರಾಪ್ಯ ಚ ಪ್ರೇತಗಣೈಃ ಸಮೇತಃ**
**ಸ ಮೋದತೇ ದೇವವೃತೋಽಥ ಸಿದ್ಧಃ ॥ ೨೧ ॥**
**ಚಿತ್ತಂ ಚ ವಿತ್ತಂ ಚ ನೃಣಾಂ ಚ ಶುದ್ಧಂ**
**ಶಸ್ತಶ್ಚ ಕಾಲಃ ಕಥಿತೋ ವಿಧಿಶ್ಚ ।**
**ಪಾತ್ರಂ ಯಥೋಕ್ತಂ ಪರಮಾ ಚ ಭಕ್ತಿ**
**ರ್ನೃಣಾಂ ಪ್ರಯಚ್ಛಂತಿ ಹಿ ವಾಂಛಿತಾನಿ ॥ ೨೨ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ನೀಲಗಂಧವತೀ ಪ್ರಭಾವವರ್ಣನಂ" ನಾಮ ಷೋಡಶೋಽಧ್ಯಾಯಃ**

---

ಆದರಿಂದ ಪಿತೃದೇವತೆಗಳು ತೃಪ್ತಿಗೊಳ್ಳುವರು. ಅವರು ಯಾವಾಗಲೂ ಹೀಗೆಯೇ ಚಿಂತಿಸುತ್ತಿರುವರು. "ನಮ್ಮ ಕುಲದಲ್ಲಿ ಯಾರಾದರೂ ಧನ್ಯರು ಹುಟ್ಟಿ ಇಲ್ಲಿ ನಮಗೆ ಶ್ರಾದ್ಧವನ್ನು ಮಾಡಿ ಪಿಂಡಗಳನ್ನು ಕೊಡುತ್ತಾರೆ. ಆ ಪಿಂಡಗಳಿಂದ ನಮಗೂ ಅಕ್ಷಯವಾದ ತೃಪ್ತಿಯುಂಟಾಗಬಹುದು."

೨೧. ಇಲ್ಲಿಗೆ ಬಂದು ಈ ತೀರ್ಥದ ಪುಣ್ಯಜಲದಲ್ಲಿ ಮನುಷ್ಯನು ಚೆನ್ನಾಗಿ ಸ್ನಾನವನ್ನು ಮಾಡಬೇಕು. ಅವನು ವರಗಳನ್ನು ಪಡೆದು ಮಹೇಶ್ವರನ ಪ್ರೇತ ಗಣಗಳೊಡನೆ ವಾಸಿಸುತ್ತ ದೇವತೆಗಳಿಗೂ ಬೇಕಾದವನಾಗಿ ಸಿದ್ಧನೆನಿಸಿಕೊಂಡು ಸರ್ವಾಭೀಷ್ಟಗಳನ್ನೂ ಪಡೆಯುವನು.

೨೨. ಶುದ್ಧವಾದ ಚಿತ್ತ, ಸನ್ಮಾರ್ಗದಿಂದಾರ್ಜಿಸಿದ ಧನ, ಪ್ರಶಸ್ತವಾದ ಕಾಲ, ಶಾಸ್ತ್ರೋಕ್ತವಾದ ವಿಧಿ, ಯಥೋಕ್ತವಾದ ಪಾತ್ರದಲ್ಲಿ ದಾನ, ಅತ್ಯುತ್ತಮ ವಾದ ಭಕ್ತಿ—ಇವುಗಳೇ ಮನುಷ್ಯರಿಗೆ ಇಷ್ಟಾರ್ಥಗಳನ್ನು ಕೈಗೂಡಿಸುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ನೀಲಗಂಧವತೀಪ್ರಭಾವವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ದಶಾಽಶ್ವಮೇಧಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ದಶಾಽಶ್ವಮೇಧಿಕೇ ಸ್ನಾತ್ವಾ ದೃಷ್ಟ್ವಾ ದೇವಂ ಮಹೇಶ್ವರಂ
ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ॥ ೧ ॥
ಮನುನಾ ಮಾನವೇಂದ್ರೇಣ ರಾಜ್ಞಾ ಚೈವ ಯಯಾತಿನಾ ।
ರಘುಣೋಶನಸಾ ಚೈವ ಲೋಮಶೇನ ಮಹರ್ಷಿಣಾ ॥ ೨ ॥
ಅತ್ರಿಣಾ ಭೃಗುಣಾ ವ್ಯಾಸ ದತ್ತಾತ್ರೇಯೇಣ ಧೀಮತಾ ।
ಪುರೂರವಸಾ ಪುಣ್ಯೇನ ನಹುಷೇಣ ನಲೇನ ಚ ।
ಅತ್ರ ಸ್ನಾನೇನ ಸಂಪ್ರಾಪ್ತಂ ದಶಾಶ್ವಮೇಧಿಕಂ ಫಲಂ ॥ ೩ ॥
ಸಂಪ್ರಾಪ್ತೇ ದ್ವಾಪರಸ್ಯಾಂತೇ ರಾಜ್ಞಾ ಬಾಷ್ಕಲಿನಾ ತಥಾ ।
ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ತಂ ದ್ವಿಜೋತ್ತಮ ॥ ೪ ॥
ಕೃಷ್ಣವರ್ಣಂ ತಥಾ ಲಿಂಗಂ ಪೂಜಿತಂ ಭಕ್ತಿತಃ ಸದಾ ।
ದೃಷ್ಟ್ವಾ ಸ್ಪೃಷ್ಟ್ವಾ ಚ ತಂ ದೇವಂ ಪ್ರಾಗುಕ್ತಂ ಲಭತೇ ಫಲಂ ॥ ೫ ॥

---

## ಕನ್ನಡದ ಅನುವಾದ

### ದಶಾಶ್ವಮೇಧಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ದಶಾಶ್ವಮೇಧ ತೀರ್ಥದಲ್ಲಿ ಸ್ನಾನವನ್ನು ಮಾಡಿ ಅಲ್ಲಿರುವ ಮಹೇಶ್ವರನನ್ನು ನೋಡಿದ ಮಾನವನು ಹತ್ತು ಅಶ್ವಮೇಧಗಳನ್ನು ಮಾಡಿದ ಪುಣ್ಯಕ್ಕೆ ಭಾಗಿಯಾಗುವನು.

೨-೩. ಮನುಷ್ಯರಿಗೆ ಮೂಲಪುರುಷನಾದ ಮನುವು, ರಾಜೇಂದ್ರನಾದ ಯಯಾತಿ, ರಘುಮಹಾರಾಜ, ಉಶನಸನು, ಮಹರ್ಷಿಯಾದ ಲೋಮಶ, ಅತ್ರಿ, ಭೃಗು, ಸರ್ವಜ್ಞನಾದ ದತ್ತಾತ್ರೇಯ, ಪುಣ್ಯಪುರುಷನಾದ ಪುರೂರವ, ನಹುಷ ಚಕ್ರವರ್ತಿ, ನಳಮಹಾರಾಜ—ಇವರೆಲ್ಲರೂ ಇಲ್ಲಿ ಸ್ನಾನವನ್ನು ಮಾಡಿದುದರಿಂದ ಹತ್ತು ಅಶ್ವಮೇಧ ಯಜ್ಞಗಳನ್ನು ಮಾಡಿದ ಫಲವನ್ನು ಪಡೆದಿದ್ದರು.

೪. ಅಯ್ಯಾ ಬ್ರಾಹ್ಮಣೋತ್ತಮನೆ! ದ್ವಾಪರಯುಗದ ಅಂತ್ಯಕಾಲದಲ್ಲಿಯೂ ಮಹಾರಾಜನಾದ ಬಾಷ್ಕಲಿಯು ಈ ತೀರ್ಥದ ಸ್ನಾನದಿಂದಲೇ ಹತ್ತು ಅಶ್ವಮೇಧಗಳ ಫಲವನ್ನು ಪಡೆದನು.

೫. ಅಲ್ಲಿರುವ ಶಿವಲಿಂಗವು ಕಪ್ಪುಬಣ್ಣದ್ದಾಗಿರುವುದು. ಅದನ್ನು ನಿತ್ಯವೂ ಭಕ್ತಿಯಿಂದ ಪೂಜಿಸಬೇಕು. ಆ ಲಿಂಗವನ್ನು ಸಂದರ್ಶಿಸಿ ಮುಟ್ಟಿ ಸೇವಿಸಲು ಹಿಂದೆ ಹೇಳಿದ ಫಲವು ಲಭಿಸುವುದು.

ಚೈತ್ರೇ ಮಾಸಿ ಸಿತಾಽಷ್ಟಮ್ಯಾಂ ದೇವಂ ಸಂಪೂಜ್ಯ ಭಕ್ತಿತಃ ।
ಅಶ್ವಂ ದದ್ಯಾಚ್ಚ ವಿಪ್ರಾಯ ಸುರೂಪಂ ಚ ಗುಣಾನ್ವಿತಂ ॥ ೬ ॥
ಯಾವಂತಿ ತಸ್ಯ ರೋಮಾಣಿ ಗಣ್ಯಂತೇ ಸಂಖ್ಯಯಾ ದ್ವಿಜ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥ ೭ ॥
ಶಿವಲೋಕಾತ್ಪರಿಭ್ರಷ್ಟಃ ಸಾರ್ವಭೌಮೋ ಭವೇದ್ಭುವಿ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ದಶಾಽಶ್ವಮೇಧಮಾಹಾತ್ಮ್ಯವರ್ಣನಂ" ನಾಮ ಸಪ್ತದಶೋಽಧ್ಯಾಯಃ

---

೬. ಚೈತ್ರಮಾಸದ ಶುಕ್ಲಾಷ್ಟಮಿಯ ದಿನದಲ್ಲಿ ಭಕ್ತಿಯಿಂದ ಆ ಲಿಂಗವನ್ನು ಪೂಜಿಸಿ ಸರ್ವಲಕ್ಷಣಯುಕ್ತವೂ, ಸಾಧುವೂ ಆದ ಕುದುರೆಯನ್ನು ಬ್ರಾಹ್ಮಣನಿಗೆ ದಾನವನ್ನು ಮಾಡಬೇಕು.

೭. ಅಯ್ಯಾ ದ್ವಿಜಶ್ರೇಷ್ಠನೆ! ಆ ಕುದುರೆಯ ದೇಹದಲ್ಲಿ ಎಷ್ಟು ಕೂದಲುಗಳನ್ನು ಎಣಿಸಬಹುದೊ, ಅಷ್ಟು ಸಾವಿರ ವರ್ಷಗಳವರೆಗೂ ದಾನಮಾಡಿದವನು ಶಿವಲೋಕದಲ್ಲಿ ಪೂಜೆಗೊಳ್ಳುತ್ತಿರುವನು.

೮. ಶಿವಲೋಕದಿಂದ ಹಿಂದಿರುಗಿದಮೇಲೆ ಭೂಲೋಕದಲ್ಲಿ ಸಾರ್ವಭೌಮನಾಗಿ ಜನಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ದಶಾಶ್ವಮೇಧಮಾಹಾತ್ಮ್ಯವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಾದಶೋಽಧ್ಯಾಯಃ

### ಏಕಾನಂಶಾಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಏಕಾನಂಶಾಂ ನಮಸ್ಕೃತ್ಯ ದೇವೀಂ ತ್ರೈಲೋಕ್ಯವಿಶ್ರುತಾಂ ।
ಪೂಜಾಂ ಕೃತ್ವಾ ವಿಧಾನೇನ ಸರ್ವಸಿದ್ಧಿಫಲಂ ಲಭೇತ್ ॥ ೧ ॥
ಅಣಿಮಾದಿ ಗುಣಾನ್ಸರ್ವಾನ್ಗುಟಿಕಾಸಿದ್ಧಿಮಂಜನಂ ।
ಖಡ್ಗಂ ಚ ಪಾದುಕೇ ಚೈವ ಬಿಲವಾಸಂ ರಸಾಯನಂ ।
ಸರ್ವಂ ತುಷ್ಟಾ ಪ್ರಯಚ್ಛೇತ ನಾಽತ್ರ ಕಾರ್ಯಾ ವಿಚಾರಣಾ ॥ ೨ ॥
ಸುರಾಮಾಂಸೋಪಹಾರೈಶ್ಚ ಭಕ್ಷ್ಯಭೋಜ್ಯೈಶ್ಚ ಪೂಜಿತಾ ।
ಸರ್ವಾನ್ಕಾಮಾನ್ನೃಣಾಂ ದೇವೀ ತುಷ್ಟಾ ದದ್ಯಾಚ್ಚ ಸರ್ವದಾ ॥ ೩ ॥
ಮಹಾನವಮ್ಯಾಂ ಯೋ ದೇವೀಂ ಮಹಿಷೇಣ ಪ್ರಪೂಜಯೇತ್ ।
ಮೇಷೇಣ ವಾ ಯಥಾಲಾಭಂ ಸರ್ವಾನ್ಕಾಮಾನವಾಪ್ನುಯಾತ್ ॥ ೪ ॥

---

## ಕನ್ನಡದ ಅನುವಾದ

### ಏಕಾನಂಶಾಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವ ಏಕಾನಂಶೆಯೆಂಬ ದೇವಿಯನ್ನು ನಮಸ್ಕರಿಸಿ ವಿಧಿವಿಹಿತ ರೀತಿಯಿಂದ ಪೂಜೆಯನ್ನು ಮಾಡಿದವನು ಸಕಲ ಸಿದ್ಧಿಗಳನ್ನೂ ಪಡೆಯುವನು.

೨. ಈಕೆಯು ಸಂತುಷ್ಟಳಾಗಲು ಅಣಿಮಾದ್ಯಷ್ಟೈಶ್ವರ್ಯಗಳನ್ನೂ, ಗುಟಿಕಾಸಿದ್ಧಿಯನ್ನೂ, ಅಂಜನಕ್ರಿಯೆಯನ್ನೂ, ಅಭೇದ್ಯವಾದ ಖಡ್ಗವನ್ನೂ, ಇಚ್ಛೆಬಂದಲ್ಲಿಗೆ ಕರೆದುಕೊಂಡು ಹೋಗುವ ದಿವ್ಯಪಾದುಕೆಗಳನ್ನೂ, ಬಿಲವಾಸ ರಸಾಯನ ಕ್ರಿಯೆಗಳ ಸಿದ್ಧಿಯನ್ನೂ ಅನುಗ್ರಹಿಸುವಳು. ಈ ವಿಷಯದಲ್ಲಿ ಸಂದೇಹವಿಲ್ಲ.

೩. ಹೆಂಡ, ಮಾಂಸಗಳ ಉಪಹಾರಗಳಿಂದಲೂ, ಭಕ್ಷ್ಯಭೋಜ್ಯಗಳ ನೈವೇದ್ಯಗಳಿಂದಲೂ ಪೂಜೆಗೊಂಡ ಆ ದೇವಿಯು ಯಾವಾಗಲೂ ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕೃಪೆಮಾಡುವಳು.

೪. ಮಹಾನವಮಿಯ ದಿನದಲ್ಲಿ ದೇವಿಗೆ ಯಥಾಶಕ್ತಿಯಾಗಿ ಕೋಣವನ್ನಾಗಲಿ, ಆಡನ್ನಾಗಲಿ ಬಲಿಯಿತ್ತು ಯಾವನು ಪೂಜಿಸುವನೋ, ಅವನು ಸರ್ವಾಭೀಷ್ಟಗಳನ್ನೂ ಪಡೆಯುವನು.

**ವ್ಯಾಸ ಉವಾಚ :—**

**ಕಥಂ ದೇವೀ ಸಮುತ್ಪನ್ನಾ ಏಕಾನಂಶೇತಿ ವಿಶ್ರುತಾ ।**
**ತತ್ಸರ್ವಂ ಶ್ರೋತುಮಿಚ್ಛಾಮಿ ಸರ್ವಪಾಪಪ್ರಣಾಶಿನೀ ॥ ೫ ॥**

**ಸನತ್ಕುಮಾರ ಉವಾಚ :—**

**ಪುರಾ ಕೃತಯುಗಸ್ಯಾದೌ ಬ್ರಹ್ಮಾ ಲೋಕಪಿತಾಮಹಃ ।**
**ನಿಶಾಂ ಸಸ್ಮಾರ ಭಗವಾನ್ ಸ್ವಾಂ ತನೂಂ ಪೂರ್ವಸಂಭವಾಂ ॥ ೬ ॥**
**ತತೋ ಭಗವತೀ ರಾತ್ರಿರುಪತಸ್ಥೇ ಪಿತಾಮಹಂ ।**
**ತಾಂ ವಿವಿಕ್ತೇ ಸಮಾಲೋಕ್ಯ ಬ್ರಹ್ಮೋವಾಚ ವಿಭಾವರೀಂ ॥ ೭ ॥**

**ಬ್ರಹ್ಮೋವಾಚ :—**

**ವಿಭಾವರಿ ಮಹಾಮಾಯೇ ವಿಬುಧಾನಾಮುಪಸ್ಥಿತಂ ।**
**ಯತ್ಕರ್ತವ್ಯಂ ತ್ವಯಾ ದೇವಿ ಶೃಣು ಚಾಽರ್ಥಸ್ಯ ನಿಶ್ಚಯಂ ॥ ೮ ॥**
**ತಾರಕೋ ನಾಮ ದೈತ್ಯೇಂದ್ರಃ ಸುರಶತ್ರುರನಿರ್ಜಿತಃ ।**
**ಭಯೇನ ತಸ್ಯ ವೈ ದೇವಾಸ್ತ್ರಸ್ತಾಃ ಸರ್ವೇ ದಿವೌಕಸಃ ॥ ೯ ॥**
**ತಸ್ಮಾದ್ಭದ್ರೇ ಮಹೇಶೋ ವೈ ಜನಯಿಷ್ಯತಿ ಚೇದ್ವರಂ ।**
**ಸುತಂ ಸ ಭವಿತಾ ತಸ್ಯ ತಾರಕಸ್ಯಾಂತಕಃ ಕಿಲ ॥ ೧೦ ॥**

---

೫. ವ್ಯಾಸನು ಹೇಳುತ್ತಾನೆ:—ಏಕಾನಂಶೆಯೆಂದು ಪ್ರಖ್ಯಾತಳೂ ಸಕಲ ಪಾಪನಾಶಕಳೂ ಆದ ಈ ದೇವಿಯು ಅಲ್ಲಿ ಹೇಗೆ ನೆಲಸಿದಳು? ಆಕೆಯ ಚರಿತ್ರೆಯೆಲ್ಲವನ್ನೂ ಕೇಳಲಪೇಕ್ಷಿಸುತ್ತೇನೆ.

೬-೭. ಸನತ್ಕುಮಾರನು ಹೇಳುತ್ತಾನೆ:—ಹಿಂದೆ ಕೃತಯುಗದ ಆದಿಯಲ್ಲಿ ಲೋಕಪಿತಾಮಹನಾದ ಚತುರ್ಮುಖನು ಮೊದಲೇ ಹುಟ್ಟಿದ ತನ್ನ ಶರೀರವೆನಿಸಿದ ನಿಶಾದೇವಿಯನ್ನು ಸ್ಮರಿಸಿದನು. ಆಗ ದೇವಿಯಾದ ರಾತ್ರಿಯು ಬ್ರಹ್ಮನ ಸಮೀಪವನ್ನು ಸೇರಿದಳು. ಆಕೆಯನ್ನು ಏಕಾಂತಸ್ಥಳಕ್ಕೆ ಕರೆದುಕೊಂಡು ಹೋಗಿ ಬ್ರಹ್ಮನು ಆಕೆಗೆ ಹೇಳತೊಡಗಿದನು.

೮. ಬ್ರಹ್ಮನು ಹೇಳುತ್ತಾನೆ:—ಮಹಾಮಾಯೆಯ ಸ್ವರೂಪಳಾದ ರಾತ್ರಿದೇವಿಯೆ! ದೇವತೆಗಳಿಗೆ ಈಗ ಒಂದು ಮಹಾಸಂಕಟವೊದಗಿರುವುದು. ಅದರ ಪರಿಹಾರಕ್ಕಾಗಿ ನೀನು ಮಾಡಬೇಕಾಗಿರುವ ಕರ್ತವ್ಯದ ನಿಶ್ಚಯವನ್ನು ಕೇಳು.

೯. ತಾರಕಾಸುರನೆಂಬ ರಾಕ್ಷಸೇಂದ್ರನು ದೇವತೆಗಳಿಗೆ ಶತ್ರುವಾಗಿ ಅಜೇಯನಾಗಿರುವನು. ಅವನ ಭಯದಿಂದ ಸ್ವರ್ಗಲೋಕನಿವಾಸಿಗಳಾದ ದೇವತೆಗಳೆಲ್ಲರೂ ನಡುಗುತ್ತಿರುವರು.

೧೦. ಎಲೌ ಮಂಗಳಾಂಗಿಯೆ! ಈಗ ಮಹೇಶ್ವರನು ಸರ್ವೋತ್ತಮನಾದ ಪುತ್ರನನ್ನು ಪಡೆಯುವನಾದರೆ ಅವನೇ ಈ ತಾರಕಾಸುರನಿಗೆ ಅಂತಕನಾಗುವುದು ದಿಟವು.

**ಶಂಕರಸ್ಯಾಽಭವತ್ಪತ್ನೀ ಸತೀ ದಕ್ಷಸುತಾ ತು ಯಾ ।**
**ಸಾ ಪಿತುಃ ಕುಪಿತಾ ಭದ್ರೇ ಕಸ್ಮಿಂಶ್ಚಿತ್ಕಾರಣಾಂತರೇ ॥ ೧೧ ॥**
**ಭವಿತ್ರೀ ಹಿಮಶೈಲಸ್ಯ ದುಹಿತಾ ಲೋಕಪಾವನೀ ।**
**ವಿರಹೇಣ ಹರಸ್ತಸ್ಯಾ ಮತ್ವಾ ಶೂನ್ಯಂ ಜಗತ್ತ್ರಯಂ ॥ ೧೨ ॥**
**ಅತಪದ್ಧಿಮಶೈಲಸ್ಯ ಕಂದರೇ ಸಿದ್ಧಸೇವಿತೇ ।**
**ಪ್ರತೀಕ್ಷಮಾಣಸ್ತಜ್ಜನ್ಮ ಕಿಂಚಿತ್ಕಾಲಂ ವಸಿಷ್ಯತಿ ॥ ೧೩ ॥**
**ತಸ್ಮಾತ್ಸುತಪ್ತತಪಸೋರ್ಭವಿತಾ ಯೋ ಮಹಾಪ್ರಭುಃ ।**
**ಸ ಭವಿಷ್ಯತಿ ದೈತ್ಯಸ್ಯ ತಾರಕಸ್ಯ ನಿವಾರಕಃ ॥ ೧೪ ॥**
**ಜಾತಮಾತ್ರಾ ತು ಸಾ ದೇವೀ ಸ್ವಲ್ಪಸಂಜ್ಞೈವ ಭಾಮಿನೀ ।**
**ವಿರಹೋತ್ಕಂಠಿತಾ ಗಾಢಂ ಹರಸಂಗಮಲಾಲಸಾ ॥ ೧೫ ॥**
**ತಯೋಃ ಸುತಪ್ತತಪಸೋಃ ಸಂಯೋಗಃ ಸ್ಯಾತ್ಸುಯುಕ್ತಯೋಃ ।**
**ಪಾರ್ವತೀಹರಯೋಸ್ತಸ್ಮಾತ್ಸುರತಂ ಶಕ್ತಿಕಾರಣಂ ॥ ೧೬ ॥**

---

೧೧. ಎಲೌ ದೇವಿಯೆ! ದಕ್ಷಬ್ರಹ್ಮನ ಮಗಳಾದ ಸತೀದೇವಿಯು ಈಶ್ವರನಿಗೆ ಪತ್ನಿಯಾಗಿದ್ದಳು. ಆಕೆಯು ಒಂದಾನೊಂದು ಕಾರಣದಿಂದ ತಂದೆಯಲ್ಲಿ ಕೋಪಗೊಂಡವಳಾದಳು.

೧೨-೧೩. ಲೋಕಪಾವನೆಯಾದ ಅವಳು ಹಿಮವದ್ರಾಜನ ಮಗಳಾಗಿ ಜನಿಸುವಳು. ಪರಮಶಿವನು ಆಕೆಯ ವಿರಹದಿಂದ ತಪ್ತನಾಗಿ ಬ್ರಹ್ಮಾಂಡವನ್ನೇ ಶೂನ್ಯವಾಗಿ ತಿಳಿಯುತ್ತ ಹಿಮಾಲಯಪರ್ವತವನ್ನು ಸೇರಿ ಸಿದ್ಧರಿಂದ ಪರಿಸೇವಿತವಾದ ಗುಹೆಯೊಂದರಲ್ಲಿ ತಪಸ್ಸನ್ನು ಮಾಡುತ್ತಿದ್ದನು. ಆಕೆಯು ಮತ್ತೆ ಜನ್ಮವನ್ನು ತಾಳುವುದನ್ನೇ ಇದಿರುನೋಡುತ್ತ ಇನ್ನೂ ಕೆಲವು ಕಾಲ ಅಲ್ಲಿಯೇ ವಾಸಮಾಡುತ್ತಿರುವನು.

೧೪. ಇಂತು ಅತ್ಯಂತವಾಗಿ ತಪಸ್ಸನ್ನು ಮಾಡಿದ ಅವರೀರ್ವರಿಗೂ ಯಾವ ಮಹಾತ್ಮನು ಮಗನಾಗುವನೊ, ಅವನೇ ತಾರಕಮಹಾದೈತ್ಯನ ನಾಶಕ್ಕೆ ಕಾರಣನಾಗುವನು.

೧೫. ಆ ದೇವಿಯು ಹುಟ್ಟುತ್ತಲೇ ವಿವಾಹಯೋಗ್ಯವಯಸ್ಕಳಾಗಿ ವಿರಹತಾಪದಿಂದ ಬಳಲುತ್ತ ಮಹಾದೇವನ ಸಹವಾಸವನ್ನು ಕೋರುತ್ತಿರುವವಳೂ ಆಗಿರುವಳು.

೧೬-೧೭. ಆದರೆ ಪಾರ್ವತೀ ಪರಮೇಶ್ವರರಿಬ್ಬರೂ ಬಹಳವಾಗಿ ತಪಸ್ಸನ್ನು **ಮಾಡಿ ತೇಜಸ್ಸಂಪನ್ನರಾದಮೇಲೆ ಮಾತ್ರ ಅವರ ಸಂಯೋಗವು ತಾರಕಾಸುರನ ವಧೆಗೆ ತಕ್ಕ ಕಾರಣವಾದೀತು. ಆದುದರಿಂದ ದೇವತೆಗಳ ಹಿತಕ್ಕಾಗಿ**

ಭವೇತ್ತತ್ರ ಸುರಾಣಾಂ ಚ ಕಾರ್ಯಾರ್ಥೇ ವಿಘ್ನಮಾಚರ ।
ವಿಘ್ನಂ ತ್ವಯಾ ವಿಧಾತವ್ಯಂ ಯಥಾ ತಾಭ್ಯಾಂ ತಥಾ ಶೃಣು ॥ ೧೭ ॥
ಗರ್ಭಸ್ಥಾನೇಽಥ ತಾಂ ಮಾತಃ ಸ್ವೇನ ರೂಪೇಣ ರಂಜಯ ।
ತತೋ ರಹಸಿ ಶರ್ವಸ್ತಾಂ ಬಿಭ್ರದಾನಂದಪೂರ್ವಕಂ ॥ ೧೮ ॥
ಹಾಸಯಿಷ್ಯತಿ ಕಾಲೀತಿ ತತಃ ಸಾ ಕುಪಿತಾ ಸತೀ ।
ಪ್ರಯಾಸ್ಯತಿ ತಪಃ ಕರ್ತುಂ ತತಃ ಸಾ ತಪಸಾ ಯುತಾ ॥ ೧೯ ॥
ಜನಯಿಷ್ಯತಿ ಯಂ ಶರ್ವಾದಿಂದುವಜ್ಜ್ಯೋತಿಮಂಡಲಂ ।
ಸ ಭವಿಷ್ಯತಿ ಹಂತಾ ವೈ ಸುರಾರೀಣಾಂ ನ ಸಂಶಯಃ ॥ ೨೦ ॥
ತ್ವಯಾಽಪಿ ದಾನವಾ ದೇವಿ ಹಂತವ್ಯಾ ಲೋಕದುರ್ಜಯಾಃ ।
ಯಾವಚ್ಚ ನ ಸತೀ ದೇಹೇ ಸಂಕ್ರಾಂತಗುಣಸಂಚಯಾ ॥ ೨೧ ॥
ತತ್ಸಂಗಮೇನ ತಾವತ್ತ್ವಂ ದೈತ್ಯಾನ್ ಹಂತುಂ ಭವಿಷ್ಯಸಿ ।
ಏವಂ ಕೃತೇ ತ್ವಯಾ ದೇವಿ ತಪಃ ಕಾಲೀ ಕರಿಷ್ಯತಿ ॥ ೨೨ ॥

---

ನೀನು ಅವರ ಮೊದಲನೆಯ ಸಂಯೋಗಕ್ಕೆ ವಿಘ್ನವನ್ನುಂಟುಮಾಡಬೇಕು. ಅವರಿಬ್ಬರಿಗೂ ಹೇಗೆ ವಿಘ್ನವನ್ನುಂಟುಮಾಡಬೇಕೆಂಬುದನ್ನೂ ಹೇಳುವೆನು, ಕೇಳು.

೧೮–೧೯. ಆಕೆಯು ತಾಯಿಯ ಗರ್ಭದಲ್ಲಿರುವಾಗಲೇ ನೀನು ನಿನ್ನ ಬಣ್ಣದಿಂದ ಆಕೆಯ ದೇಹವನ್ನು ಕಪ್ಪಾಗಿ ಮಾಡಬೇಕು. ಬಳಿಕ ಆಕೆಯನ್ನು ಏಕಾಂತದಲ್ಲಿ ಆನಂದಭರಿತನಾದ ಮಹೇಶ್ವರನು ಕಂಡು ಕಾಳಿಯೆಂದು ಕರೆದು ಹಾಸ್ಯವನ್ನು ಮಾಡುವನು. ಇದರಿಂದ ಪಾರ್ವತಿಯು ಕೋಪಗೊಂಡು ತಪಸ್ಸನ್ನು ಮಾಡಲು ಹೊರಟುಹೋಗುವಳು. ಇಂತು ಆಕೆಯೂ ತಪಸ್ಸಂಪನ್ನಳಾಗುವಳು.

೨೦. ಬಳಿಕ ಮಹೇಶ್ವರನಿಂದ ಚಂದ್ರನಂತೆ ಆಹ್ಲಾದಕರನಾದ ಯಾವ ಪುತ್ರನನ್ನು ಪಡೆಯುವಳೋ, ಅವನೇ ದೇವಶತ್ರುಗಳನ್ನು ನಿಗ್ರಹಿಸುವವನಾಗುವನೆಂಬುದರಲ್ಲಿ ಸಂಶಯವಿಲ್ಲ.

೨೧. ಎಲೌ ದೇವಿಯೆ! ಸತೀದೇವಿಯು ಪುನಃ ಗುಣಭರಿತಳಾಗುವವರೆಗೆ ನೀನೂ ಲೋಕದಲ್ಲಿ ಅಜೇಯರಾದ ಬಹುಜನ ರಾಕ್ಷಸರನ್ನು ಸಂಹಾರ ಮಾಡಬೇಕು.

೨೨. ಅಲ್ಲಿಯವರೆಗೂ ಆಕೆಯ ಸಹವಾಸದಿಂದಲೇ ನೀನು ದೈತ್ಯನಿಗ್ರಹವನ್ನೂ ಮಾಡಲು ಶಕ್ತಳಾಗಿರುವೆ. ಇದನ್ನು ನೀನು ಮಾಡುವೆಯಾದರೆ ಕಾಳಿಯು ತಪಸ್ಸನ್ನು ಮಾಡುವಳು.

ಸಮಾಪ್ತನಿಯಮಾ ಸಾ ಚ ಯದಾ ಗೌರೀ ಭವಿಷ್ಯತಿ ।
ತದಾ ತವಾಽಪಿ ಸಾರೂಪ್ಯಂ ಶೈಲಜಾ ಸಂಪ್ರದಾಸ್ಯತಿ ॥ ೨೩ ॥
ತತಸ್ತವಾಽಪಿ ಸಹಜಾ ಸ್ಯೈಕಾನಂಶಾ ಭವಿಷ್ಯತಿ ।
ರೂಪಾಂಶೇನ ಚ ಸಂಯುಕ್ತಾ ತ್ವಮುಮಾಖ್ಯಾ ಭವಿಷ್ಯಸಿ ॥ ೨೪ ॥
ಏಕಾನಂಶೇತಿ ಲೋಕಸ್ತ್ವಾಂ ವರದೇ ಪೂಜಯಿಷ್ಯತಿ ।
ಭೇದೈರ್ಬಹುವಿಧಾಕಾರೈಃ ಸರ್ವಗಾಂ ಕಾಮಸಾಧನೀಂ ॥ ೨೫ ॥
ಓಂಕಾರವಕ್ತ್ರಾ ಗಾಯತ್ರೀ ತ್ವಮೇವ ಬ್ರಹ್ಮವಾದಿನೀ ।
ಆಕ್ರಾಂತರುಚಿರಾಕಾರಾ ರಾಜ್ಞಾಂ ಚಾಹವಶಾಲಿನೀ ॥ ೨೬ ॥
ವಿಶಾಂ ತ್ವಂ ಕಮಲಾ ದೇವೀ ಶೂದ್ರಾಣಾಂ ಜನನೀ ಸ್ವಯಂ ।
ಜ್ಞಾನಿನಾಂ ಜ್ಞೇಯರೂಪಾ ತ್ವಂ ತ್ವಂ ಗತಿಃ ಸರ್ವದೇಹಿನಾಂ ॥ ೨೭ ॥
ತ್ವಂ ಚ ಕೀರ್ತಿಮತಾಂ ಕೀರ್ತಿಸ್ತ್ವಂ ಭೂತಿಃ ಸರ್ವದೇಹಿನಾಂ ।
ರತಿದಾ ರಕ್ತಚಿತ್ತಾನಾಂ ಪ್ರೀತಿಸ್ತ್ವಂ ಸ್ನೇಹವರ್ತಿನಾಂ ॥ ೨೮ ॥

---

೨೩. ಆ ಪಾರ್ವತಿಯು ತನ್ನ ತಪಸ್ಸನ್ನು ಪೂರೈಸಿಕೊಂಡು ದೇಹವನ್ನು ಗೌರವರ್ಣದ್ದನ್ನಾಗಿ ಯಾವಾಗ ಮಾಡಿಕೊಳ್ಳುವಳೊ, ಆಗ ಆಕೆಯು ನಿನಗೂ ಸಾರೂಪ್ಯ ಪದವಿಯನ್ನು ಅನುಗ್ರಹಿಸುವಳು.

೨೪. ಆದುದರಿಂದ ನಿನಗೂ ಆಕೆಯು ಸಹೋದರಿಯೂ ಸರ್ವಾತ್ಮನಾ ಐಕ್ಯವನ್ನು ಹೊಂದಿದವಳೂ ಆಗುವಳು. ಆಕೆಯ ರೂಪದ ಒಂದಂಶದಿಂದ ಕೂಡಿದ ನೀನು ಉಮೆಯೆಂಬ ಹೆಸರನ್ನು ಪಡೆಯುವೆ.

೨೫. ವರಪ್ರದಳೆ! ಸರ್ವತ್ರವ್ಯಾಪ್ತಳೂ, ಅಭೀಷ್ಟದಾಯಕಳೂ ಆದ ನಿನ್ನನ್ನು ಏಕಾನಂಶೆಯೆಂಬ ಹೆಸರಿನಿಂದ ಅನೇಕ ವಿಧಗಳಾದ ರೂಪಗಳುಳ್ಳವಳನ್ನಾಗಿ ಲೋಕದ ಜನರು ಪೂಜಿಸುವರು.

೨೬. ನೀನೇ ಪ್ರಣವಮುಖಸಹಿತೆಯಾದ ಗಾಯತ್ರಿಯು. ಬ್ರಹ್ಮವಿದ್ಯೆಯ ಅಧಿಷ್ಠಾತ್ರಿಯು. ಸರ್ವಾಂಗಸುಂದರ ದೇಹವುಳ್ಳವಳು. ರಾಜರಲ್ಲಿ ಪರಸ್ಪರ ಕಲಹಗಳನ್ನು ಹುಟ್ಟಿಸುವವಳೂ ನೀನೆ.

೨೭. ವೈಶ್ಯರಿಗೆ ನೀನು ಮಹಾಲಕ್ಷ್ಮಿಯು. ಶೂದ್ರರಿಗೆ ಪ್ರತ್ಯಕ್ಷ ತಾಯಿಯಾಗಿರುವೆ. ಜ್ಞಾನಿಗಳಿಗೆ ಜ್ಞೇಯವಾದ ಪರಬ್ರಹ್ಮಸ್ವರೂಪವುಳ್ಳವಳು. ಸಕಲ ಪ್ರಾಣಿಗಳಿಗೂ ನೀನೇ ಮೋಕ್ಷದಾಯಕಳಾಗಿರುವೆ.

೨೮. ಮಹಾಪ್ರಖ್ಯಾತರಲ್ಲಿರುವ ಕೀರ್ತಿಯು ನೀನೇ. ನೀನು ಸಕಲ ಪ್ರಾಣಿಗಳಲ್ಲಿರುವ ಚೈತನ್ಯವು. ಕಾಮುಕರಾದವರ ಮನಸ್ಸಿಗೆ ಸಂತೋಷವನ್ನು ಕೊಡುವವಳೂ ಸ್ನೇಹಿತರಲ್ಲಿರುವ ಪ್ರೀತಿಯ ಸ್ವರೂಪಳೂ ನೀನೇ ಆಗಿರುವೆ.

ತ್ವಂ ಕಾಂತಿಃ ಕೃತಭೂಷಾಣಾಂ ತ್ವಂ ಶಾಂತಿರ್ಹೃಷ್ಟಕರ್ಮಣಾಂ ।
ತ್ವಂ ಚ ಭ್ರಾಂತಿರಬೋಧಾನಾಂ ತ್ವಂ ಕೀರ್ತಿಃ ಕ್ರಮಯಾಜಿನಾಂ ॥ ೨೯ ॥
ಮಹಾವೇಲಾ ಸಮುದ್ರಾಣಾಂ ವಿಲಾಸಸ್ತ್ವಂ ವಿಲಾಸಿನಾಂ ।
ಸಂಭೂತಿಸ್ತ್ವಂ ಪದಾರ್ಥಾನಾಂ ಸ್ಥಿತಿಸ್ತ್ವಂ ಲೋಕಶಾಲಿನಾಂ ॥ ೩೦ ॥
ಇತ್ಯನೇಕವಿಧೈರ್ದೇವಿ ರೂಪೈರ್ಲೋಕೇಷು ಚಾರ್ಚಿತಾ ।
ಯೇ ತ್ವಾಂ ಪಶ್ಯಂತಿ ವರದೇ ಪೂಜಯಿಷ್ಯಂತಿ ಚಾಽಪಿ ಯೇ ।
ಕಾಮಾನಾಪ್ಸ್ಯಂತಿ ತೇ ಸರ್ವೇ ನಿಯತಂ ನಾಽತ್ರ ಸಂಶಯಃ ॥ ೩೧ ॥
ಇತ್ಯೇವಂ ಸಾ ಸಮುತ್ಪನ್ನಾ ಬ್ರಹ್ಮಣಾ ಸಂಸ್ತುತಾ ಸತೀ ।
ಏಕಾನಂಶಾ ಮಹಾದೇವೀ ಧ್ಯಾತವ್ಯಾ ಸಾಽಪಿ ಭಕ್ತಿತಃ ॥ ೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಏಕಾನಂಶಾ ಮಾಹಾತ್ಮ್ಯವರ್ಣನಂ" ನಾಮಾಷ್ಟಾದಶೋಽಧ್ಯಾಯಃ

---

೨೯. ಭೂಷಣಾಲಂಕೃತರಾದವರಲ್ಲಿರುವ ಕಾಂತಿಯು ನೀನೇ. ಸಂತೋಷದಿಂದ ಕೆಲಸಮಾಡುವವರ ಮನಶ್ಶಾಂತಿಯೂ ನೀನೇ. ಮೂಢರಲ್ಲಿರುವ ಅಜ್ಞಾನವೂ, ಕ್ರಮವಾಗಿ ಯಜ್ಞಗಳನ್ನು ಮಾಡುವವರ ಸತ್ಕೀರ್ತಿಯೂ ನೀನೇ.

೩೦. ಸಮುದ್ರಗಳಿಗೆ ತಡೆಯಾದ ತೀರವೂ, ವಿಲಾಸಿಪುರುಷರ ವಿಲಾಸವೂ, ಸಕಲ ಪದಾರ್ಥಗಳ ಉತ್ಪತ್ತಿಗೆ ಕಾರಣಳೂ, ದೃಶ್ಯಗಳಾದ ಸಕಲ ಪದಾರ್ಥಗಳ ಸ್ಥಿತಿಗೆ ಹೇತುವೂ ನೀನೇ ಆಗಿರುವೆ.

೩೧. ಎಲೌ ದೇವಿಯೆ! ಇಂತು ಅನೇಕ ವಿರೂಪಗಳಿಂದ ಹದಿನಾಲ್ಕು ಲೋಕಗಳಲ್ಲಿಯೂ ನಿನ್ನನ್ನು ಪೂಜಿಸುತ್ತಿರುವರು. ಕುಶಸ್ಥಲಿಯಲ್ಲಿ ವರದಾಯಕಳಾಗಿ ನಿಂತಿರುವ ನಿನ್ನನ್ನು ಯಾರು ನೋಡುವರೊ, ಯಾರು ಪೂಜಿಸುವರೊ, ಅವರೆಲ್ಲರೂ ತಮ್ಮ ಅಭೀಷ್ಟಗಳನ್ನು ಖಂಡಿತವಾಗಿಯೂ ಪಡೆಯುವರು. ಇದರಲ್ಲಿ ಸಂದೇಹವಿಲ್ಲ.

೩೨. ಎಲೈ ವ್ಯಾಸನೆ! ಇಂತು ಏಕಾನಂಶೆಯೆಂಬ ಮಹಾದೇವಿಯ ಉತ್ಪತ್ತಿಯ ಕ್ರಮವನ್ನು ತಿಳಿಸಿರುವೆನು. ಬ್ರಹ್ಮದೇವನೂ ಆಕೆಯನ್ನು ಬಹುವಿಧವಾಗಿ ಸ್ತೋತ್ರಮಾಡಿರುವನು. ಆಕೆಯನ್ನು ಭಕ್ತಿಭರಿತರಾಗಿ ಸಕಲರೂ ಧ್ಯಾನಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಏಕಾನಂಶಾಮಾಹಾತ್ಮ್ಯವರ್ಣನ" ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶೋಽಧ್ಯಾಯಃ

### ಹರಸಿದ್ಧಿ ಮಾಹಾತ್ಮ್ಯವರ್ಣನಂ

**ಸನತ್ಕುಮಾರ ಉವಾಚ :—**

**ಅಥಾತಃ ಸಂಪ್ರವಕ್ಷ್ಯಾಮಿ ಹರಸಿದ್ಧಿಂ ಸುಸಿದ್ಧಿದಾಂ ।**
**ಪಾರ್ವತ್ಯಾ ಹರಣೇ ಯತ್ರ ಸಿದ್ಧಿಃ ಪ್ರಾಪ್ತಾ ಹರೇಣ ಚ ॥ ೧ ॥**
**ಬಲಿನೌ ದಾನವೌ ಜಾತೌ ನಾಮ್ನಾ ಚಂಡಪ್ರಚಂಡಕೌ ।**
**ಉತ್ಸಾದ್ಯ ತ್ರಿದಿವಂ ಸರ್ವಂ ಗಿರಿಂ ಕೈಲಾಸಮಾಗತೌ ॥ ೨ ॥**
**ದೃಷ್ಟ್ವಾ ತತ್ರ ಗಿರೀಶಂ ತು ಉದ್ಯತಾಕ್ಷಾಕ್ಷಹಸ್ತಕಂ ।**
**ನಾಗೇಶಂ ಶಶಿಖಟ್ವಾಂಗಂ ಗೃಹೀತ್ವಾ ದಕ್ಷಿಣೇ ಕರೇ ॥ ೩ ॥**
**ದೇವಿ ದೇವೀತಿ ಜಲ್ಪಂತಂ ದಾಸಸ್ತೇಽಸ್ಮೀತಿ ವಾದಿನಂ ।**
**ಯಾವದೇಕಂ ತು ಫಲಕಂ ತಾವದ್ದ್ಯೂತಂ ಪ್ರವರ್ತತಾಂ ॥ ೪ ॥**

---

### ಕನ್ನಡದ ಅನುವಾದ

#### ಹರಸಿದ್ಧಿ ಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಇನ್ನು ಸಕಲ ಕಾರ್ಯಗಳಲ್ಲಿ ಸಿದ್ಧಿಯನ್ನುಂಟುಮಾಡುವ ಹರಸಿದ್ಧಿದೇವಿಯನ್ನು ಕುರಿತು ಹೇಳುವೆನು. ಆ ಸ್ಥಳದಲ್ಲಿಯೇ ಪಾರ್ವತೀಹರಣಕಾಲದಲ್ಲಿ ಹರನು ಕಾರ್ಯಸಿದ್ಧಿಯನ್ನು ಪಡೆದನು.

೨. ಪೂರ್ವದಲ್ಲಿ ಚಂಡ ಪ್ರಚಂಡರೆಂಬ ಇಬ್ಬರು ಮಹಾಬಲಿಷ್ಠರಾದ ರಾಕ್ಷಸರು ಹುಟ್ಟಿದರು. ಅವರು ಸಕಲ ಸ್ವರ್ಗಲೋಕವನ್ನೂ ಅಲ್ಲಕಲ್ಲೋಲವನ್ನಾಗಿ ಮಾಡಿ ಕೈಲಾಸಪರ್ವತವನ್ನು ಸೇರಿದರು.

೩–೪. ಅಲ್ಲಿ ಮಹಾದೇವನು ದಾಳಗಳನ್ನು ಕೈಯಲ್ಲಿ ಎತ್ತಿಹಿಡಿದಿದ್ದನು. ಭೂಷಣಗಳಾದ ಶೇಷನನ್ನೂ, ಚಂದ್ರನನ್ನೂ, ಖಟ್ವಾಂಗವನ್ನೂ ಪಣಗಳನ್ನಾಗಿ ಮಾಡಿ ಬಲಗೈಯಲ್ಲಿ ಹಿಡಿದಿದ್ದನು. ಮತ್ತು ಪರಾಜಿತನಂತೆ ಕಾಣುತ್ತ, "ದೇವಿಯೆ! ನಾನು ನಿನಗೆ ದಾಸನಾಗಿರುವೆನು" ಎಂದು ಅಡಿಗಡಿಗೂ ಹೇಳುತ್ತಿದ್ದನು. "ಕೊನೆಯ ಕಾಯಿಯು ಇರುವವರೆಗೂ ಈ ದ್ಯೂತವು ಮುಂದುವರೆಯಲಿ" ಎನ್ನುತ್ತಿದ್ದನು.

ರಾಗೀಭೂತೇ ತದಾ ದೇವೇ ತೌ ಪ್ರಾಪ್ತೌ ದೇವಕಂಟಕೌ ।
ಉತ್ಪಾದಿತಾಃ ಶಿವಗಣಾ ನಂದಿನಾ ಪ್ರತಿಷೇಧಿತೌ ॥ ೫ ॥
ತತಸ್ತಾಭ್ಯಾಂ ತದಾ ನಂದೀ ಶೂಲಾಭ್ಯಾಂ ಪ್ರವಿದಾರಿತಃ ।
ಸಮಂ ಸವ್ಯಂ ದಕ್ಷಿಣಂ ವೈ ಸುಸ್ರಾವ ರುಧಿರಂ ಬಹು ॥ ೬ ॥
ನಂದಿನಂ ತಾಡಿತಂ ದೃಷ್ಟ್ವಾ ತದಾ ಶಿಲಾದನಂದನಂ ।
ಧ್ಯಾತಾ ಹರೇಣ ಸಾ ದೇವೀ ಪ್ರಣತಾ ಸಾಽಗ್ರತಃ ಸ್ಥಿತಾ ॥ ೭ ॥
ವಧ್ಯತಾಂ ತೌ ಮಹಾದೈತ್ಯೌ ವಧಾಮೀತಿ ವಚೋಽಬ್ರವೀತ್ ।
ಗೃಹೀತ್ವಾ ಮುದ್ಗರಂ ಘೋರಮತಿಕ್ರೋಧಾದತಾಡಯತ್ ॥ ೮ ॥
ಯದಾ ತಯಾ ಹತೌ ದೃಷ್ಟ್ವಾ ದಾನವೌ ಬಲಗರ್ವಿತೌ ।
ಹರಸ್ತಾಮಾಹ ಹೇ ಚಂಡಿ ಸಂಹೃತೌ ದುಷ್ಟದಾನವೌ ॥ ೯ ॥
ಹರಸಿದ್ಧಿರತೋ ಲೋಕೇ ನಾಮ್ನಾ ಖ್ಯಾತಿಂ ಗಮಿಷ್ಯಸಿ ।
ತತಃ ಪ್ರಭೃತಿ ಸಾ ದೇವೀ ಹರಸಿದ್ಧಿಪ್ರದಾಯಿನೀ ।
ಹರಸಿದ್ಧಿರಿತಿ ಖ್ಯಾತಾ ಮಹಾಕಾಲೇ ಬಭೂವ ಹ ॥ ೧೦ ॥

---

೫. ಇಂತು ಸದಾಶಿವನು ಪಗಡೆಯಾಟದಲ್ಲಿ ಅನುರಕ್ತನಾಗಿರುವ ಸಮಯದಲ್ಲಿಯೇ ದೇವಕಂಟಕರಾದ ಆ ರಾಕ್ಷಸರು ಅಲ್ಲಿಗೆ ಪ್ರಾಪ್ತರಾದರು. ಶಿವಗಣಗಳನ್ನೆಲ್ಲ ತಮ್ಮ ಪರಾಕ್ರಮದಿಂದ ಚೆದುರಿಸಿ ಬಂದ ಅವರನ್ನು ನಂದಿಯು ತಡೆದನು.

೬. ಅವರಿಬ್ಬರೂ ತಮ್ಮ ಶೂಲಾಯುಧಗಳಿಂದ ಬಹುವಾಗಿ ಹೊಡೆದು ನಂದಿಯ ಎಡಬಲಪಾರ್ಶ್ವಗಳಿಂದಲೂ ಬಹುವಾಗಿ ಘಾಯಗಳನ್ನು ಮಾಡಿ ರಕ್ತವನ್ನು ಸುರಿಸುತ್ತಿದ್ದರು.

೭. ಶಿಲಾದಪುತ್ರನಾದ ನಂದಿಯು ವ್ಯಥೆಗೊಂಡಿರುವುದನ್ನು ಕಂಡು ಮಹೇಶ್ವರನು ದೇವಿಯನ್ನು ಕುರಿತು ಚಿಂತಿಸಿದನು. ಆಕೆಯು ತತ್‌ಕ್ಷಣದಲ್ಲಿಯೇ ನಮಸ್ಕರಿಸಿ ಎದ್ದು ನಿಂತಳು.

೮. "ಈ ಇಬ್ಬರು ಮಹಾದೈತ್ಯರನ್ನು ಸಂಹರಿಸು" ಎಂದು ಅಪ್ಪಣೆಯನ್ನು ಮಾಡಲು "ವಧಿಸುವೆನು" ಎಂದು ಪ್ರತ್ಯುತ್ತರವನ್ನಿತ್ತು ದೇವಿಯು ಭಯಂಕರವಾದ ಮುದ್ಗರವೊಂದನ್ನು ತೆಗೆದುಕೊಂಡು ಬಹಳ ಸಿಟ್ಟಿನಿಂದ ಅವರಿಗೆ ಹೊಡೆದಳು.

೯. ಇಂತು ಬಲದಿಂದ ಉನ್ಮತ್ತರಾಗಿದ್ದ ಆ ರಾಕ್ಷಸರಿಬ್ಬರೂ ಸಂಹೃತರಾದುದನ್ನು ಕಂಡು ಮಹೇಶ್ವರನು ಹೇಳಿದನು. "ಎಲೌ ಚಂಡಿಯೆ! ನಿನ್ನಿಂದ ಈ ಇಬ್ಬರು ರಾಕ್ಷಸರೂ ಹತರಾದರು.

೧೦. ಆದುದರಿಂದ ನೀನು ಲೋಕದಲ್ಲಿ ಹರಸಿದ್ಧಿಯೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯುವೆ." ಇಂತು ಹರನಿಗೆ ಕಾರ್ಯಸಿದ್ಧಿಯನ್ನು ಮಾಡಿ

**ಯಃ ಪಶ್ಯೇತ್ಪರಯಾ ಭಕ್ತ್ಯಾ ಹರಸಿದ್ಧಿಂ ನರೋತ್ತಮಃ ।**
**ಸೋಽಕ್ಷಯಾಂಲ್ಲಭತೇ ಕಾಮಾನ್ಮೃತಃ ಶಿವಪುರಂ ವ್ರಜೇತ್ ॥ ೧೧ ॥**
**ಆದಿಸಿದ್ಧಿಂ ಮಹಾದೇವೀಂ ನಿತ್ಯಾಂ ವ್ಯೋಮಸ್ವರೂಪಿಣೀಂ ।**
**ಹರಸಿದ್ಧಿಂ ಪ್ರಪಶ್ಯೇದ್ಯಃ ಸೋಽಭೀಷ್ಟಂ ಲಭತೇ ಫಲಂ ॥ ೧೨ ॥**
**ಯಃ ಸ್ಮರೇದ್ಧರಸಿದ್ಧೀತಿ ಮಂತ್ರಂ ಚ ಚತುರಕ್ಷರಂ ।**
**ನ ವೈರಿಣೋ ಭಯಂ ತಸ್ಯ ದಾರಿದ್ರ್ಯಂ ನೈವ ಜಾಯತೇ ॥ ೧೩ ॥**
**ನರೋ ಮಹಾನವಮ್ಯಾಂ ಯೋ ಹರಸಿದ್ಧಿಂ ಪ್ರಪೂಜಯೇತ್ ।**
**ಮಹಿಷಂ ಚ ಬಲಿಂ ದದ್ಯಾತ್ಸ ಭವೇದ್ಭೂಪತಿರ್ಭುವಿ ॥ ೧೪ ॥**
**ನವಮ್ಯಾಂ ಪೂಜಿತಾ ದೇವೀ ಹರಸಿದ್ಧಿರ್ಹರಪ್ರಿಯಾ ।**
**ತುಷ್ಟಾ ನೃಣಾಂ ಸದಾ ವ್ಯಾಸ ದದಾತ್ಯನವಮಂ ಫಲಂ ॥ ೧೫ ॥**
**ಸಾ ಪುಣ್ಯಾ ಸಾ ಪವಿತ್ರಾ ಚ ಸರ್ವತ್ರ ಸುಖದಾಯಿನೀ ।**
**ಸ್ಮೃತಾ ಸಂಪೂಜಿತಾ ದೃಷ್ಟಾ ಧನಪುತ್ರಸುಖಪ್ರದಾ ॥ ೧೬ ॥**

---

ಕೊಟ್ಟ ದಿನದಿಂದ ಆ ದೇವಿಯು ಹರಸಿದ್ಧಿಯೆಂದೇ ಖ್ಯಾತಳಾಗಿ ಮಹಾಕಾಲ ವನದಲ್ಲಿ ನೆಲಸಿದಳು.

೧೧. ಯಾವ ಮಾನವೋತ್ತಮನು ಮಹಾಭಕ್ತಿಯಿಂದ ಹರಸಿದ್ಧಿದೇವಿಯ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಅನಂತಾಭಿಲಾಷೆಗಳನ್ನು ಪಡೆಯುವ ನಲ್ಲದೆ ಮೃತನಾಗಲು ಶಿವಲೋಕವನ್ನು ಸೇರುವನು.

೧೨. ಆದಿಸಿದ್ಧಿಯೂ, ಮಹಾದೇವಿಯೂ, ಶಾಶ್ವತಳೂ, ಆಕಾಶಸ್ವರೂಪಳೂ ಆದ ಹರಸಿದ್ಧಿದೇವಿಯನ್ನು ಯಾವನು ನೋಡುವನೊ, ಅವನು ಅಭೀಷ್ಟಫಲ ವನ್ನು ಹೊಂದುವನು.

೧೩. ಯಾವನು ಇದ್ದಲ್ಲಿಯೇ ಹರಸಿದ್ಧಿಯೆಂಬ ನಾಲ್ಕು ಅಕ್ಷರದ ಮಂತ್ರ ವನ್ನು ಮನಸ್ಸಿನಲ್ಲಿ ಸ್ಮರಿಸುವನೊ, ಅವನಿಗೂ ಸಹ ಶತ್ರುಗಳಿಂದ ಭಯವಾಗಲಿ, ದಾರಿದ್ರ್ಯವಾಗಲಿ ಸಂಭವಿಸುವುದಿಲ್ಲ.

೧೪. ಯಾವ ನರನು ಮಹಾನವಮಿಯ ದಿನ ಹರಸಿದ್ಧಿಯನ್ನು ಪೂಜಿಸು ವನೊ, ಅಥವಾ ಆಕೆಗೆ ಕೋಣನ ಬಲಿಯನ್ನು ಕೊಡುವನೊ, ಅವನು ಭೂಲೋಕದಲ್ಲಿ ಮಹಾರಾಜನಾಗುವನು.

೧೫. ವ್ಯಾಸಮುನಿಯೆ! ಮಹೇಶ್ವರನಿಗೆ ಪ್ರಿಯಳಾದ ಈ ಹರಸಿದ್ಧಿಯನ್ನು ನವಮಿಯಲ್ಲಿ ಪೂಜಿಸಿದ ಮಾನವನು ದೇವಿಯನ್ನು ಸಂತೋಷಗೊಳಿಸುವನು. ಅಂತಹವರಿಗೆ ಆಕೆಯು ಅತಿಶಯವಾದ ಫಲವನ್ನು ಕೊಡುವಳು.

೧೬. ಆ ದೇವಿಯು ಪುಣ್ಯಮೂರ್ತಿಯು. ಪವಿತ್ರಳು. ಸಕಲರಿಗೂ ಸುಖದಾಯಕಳು. ಆಕೆಯನ್ನು ಸ್ಮರಿಸಿದವರಿಗೂ, ಪೂಜಿಸಿದವರಿಗೂ, ನೋಡಿ ದವರಿಗೂ ಧನ ಮತ್ತು ಪುತ್ರರ ಸೌಖ್ಯವನ್ನು ಕೊಡುವಳು.

**ಮಹಾನವಮ್ಯಾಂ ಯೇ ವ್ಯಾಸ ಹನ್ಯಂತೇ ಮಹಿಷಾದಯಃ ।**
**ಸರ್ವೇ ತೇ ಸ್ವರ್ಗತಿಂ ಯಾಂತಿ ಘ್ನತಾಂ ಪಾಪಂ ನ ವಿದ್ಯತೇ ॥ ೧೭ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಹರಸಿದ್ಧಿಮಾಹಾತ್ಮ್ಯವರ್ಣನಂ"ನಾಮ್ನೈಕೋನವಿಂಶೋಽಧ್ಯಾಯಃ**

---

೧೭. ಎಲೈ ವ್ಯಾಸನೆ! ಮಹಾನವಮಿಯ ದಿನ ದೇವಿಗೆ ಬಲಿಯಾಗಿ ಯಾವ ಕೋಣವೇ ಮೊದಲಾದ ಪ್ರಾಣಿಗಳು ಕೊಲ್ಲಲ್ಪಡುವುವೊ, ಅವುಗಳೆಲ್ಲವೂ ಸ್ವರ್ಗಕ್ಕೆ ಹೋಗುವುವು. ಅವುಗಳನ್ನು ಕೊಂದವನಿಗೂ ಪಾತಕವು ಅಂಟುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಹರಸಿದ್ಧಿಮಾಹಾತ್ಮ್ಯವರ್ಣನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

। ಶ್ರೀಃ ॥

## ಅಥ ವಿಂಶೋಽಧ್ಯಾಯಃ

### ಚತುರ್ದಶತೀರ್ಥಯಾತ್ರಾವರ್ಣನಂ

**ಸನತ್ಕುಮಾರ ಉವಾಚ :—**

**ಮಾಸಮೇಕಂ ನರೋ ಭಕ್ತ್ಯಾ ಪಶ್ಯೇದ್ವಾ ವಟಯಕ್ಷಿಣೀಂ ।**
**ಪೂಜಯೇತ್ಸ್ವರ್ಣಪುಷ್ಪೈಶ್ಚ ತಸ್ಯ ಸಿದ್ಧಿರ್ನ ಹೀಯತೇ ॥ ೧ ॥**

॥ ಇತಿ ವಟಯಕ್ಷಿಣೀಮಾಹಾತ್ಮ್ಯಂ ॥

**ಪಿಶಾಚಕೇ ನರಃ ಸ್ನಾತ್ವಾ ಚತುರ್ದಶ್ಯಾಂ ವಿಶೇಷತಃ ।**
**ತಿಲಾನ್ದದಾತಿ ಯೋ ಭಕ್ತ್ಯಾ ನ ಪಿಶಾಚಃ ಪ್ರಜಾಯತೇ ॥ ೨ ॥**
**ಯಂ ಸಮುದ್ದಿಶ್ಯ ಯದ್ದತ್ತಂ ತದಕ್ಷಯತರಂ ಭವೇತ್ ।**
**ತತ್ಕುಲಂ ಹಿ ಪಿಶಾಚತ್ವಾನ್ಮುಚ್ಯತೇ ನಾಽತ್ರ ಸಂಶಯಃ ॥ ೩ ॥**
**ಯಸ್ಯ ನಾಮ್ನಾ ನರಃ ಸ್ನಾತಿ ಪಿಶಾಚತ್ವಾತ್ಸ ಮುಚ್ಯತೇ ॥ ೪ ॥**
**ಕುಂಭಾನ್ವಾ ಕರಕಾನ್ವಾಽಪಿ ಯೋಽತ್ರ ದದ್ಯಾತ್ಸಮಂಡಕಾನ್ ।**
**ತಸ್ಯ ವೈ ಶಾಶ್ವತೀ ಮುಕ್ತಿಃ ಕುಲೇ ಪ್ರೇತೋ ನ ಜಾಯತೇ ॥ ೫ ॥**

---

### ಕನ್ನಡದ ಅನುವಾದ

### ಚತುರ್ದಶತೀರ್ಥಯಾತ್ರಾವರ್ಣನ

೧. ಸನತ್ಕುಮಾರನು ಹೇಳುತ್ತಾನೆ :—ಯಾವನು ವಟಯಕ್ಷಿಣೀದೇವಿಯನ್ನು ಒಂದು ತಿಂಗಳ ದಿವಸ ದರ್ಶನಮಾಡುವನೊ, ಭಕ್ತಿಯಿಂದ ಚಿನ್ನದ ಪುಷ್ಪಗಳಿಂದ ಪೂಜಿಸುವನೊ, ಅವನ ಕಾರ್ಯಸಿದ್ಧಿಗೆ ತಡೆಯಿಲ್ಲ.

೨. ಯಾವ ದಿನದಲ್ಲಾಗಲಿ ವಿಶೇಷವಾಗಿ ಚತುರ್ದಶಿಯ ದಿನದಲ್ಲಾಗಲಿ ಪಿಶಾಚತೀರ್ಥದಲ್ಲಿ ಸ್ನಾನವನ್ನು ಮಾಡಿ ಭಕ್ತಿಯಿಂದ ಪಿತೃಗಳಿಗೆ ತಿಲತರ್ಪಣವನ್ನು ಕೊಟ್ಟವನಿಗೆ ಪಿಶಾಚಜನ್ಮವು ಬರುವುದಿಲ್ಲ.

೩. ಯಾವ ಮನುಷ್ಯನನ್ನುದ್ದೇಶಿಸಿ ಅಲ್ಲಿ ತಿಲತರ್ಪಣವನ್ನು ಕೊಡುವರೊ, ಅವನಿಗೆ ಅದು ಅಕ್ಷಯವಾಗುವುದು. ಅವನ ಕುಲವೇ ಪಿಶಾಚತ್ವದಿಂದ ಬಿಡುಗಡೆಯನ್ನು ಹೊಂದುವುದು. ಇದರಲ್ಲಿ ಸಂದೇಹವಿಲ್ಲ.

೪. ಯಾವನ ಹೆಸರಿನಲ್ಲಿ ಮನುಷ್ಯನು ಸ್ನಾನವನ್ನು ಮಾಡುವನೊ, ಅವನು ಪಿಶಾಚತ್ವದಿಂದ ಮೋಕ್ಷವನ್ನು ಪಡೆಯುವನು.

೫. ಯಾವನು ಅಲ್ಲಿ ಬಿಂದಿಗೆಗಳನ್ನಾಗಲಿ, ತಂಬಿಗೆ, ಪಂಚಪಾತ್ರೆಗಳನ್ನಾಗಲಿ, ದೋಸೆಗಳೊಡನೆ ಬ್ರಾಹ್ಮಣರಿಗೆ ದಾನಮಾಡುವನೊ, ಅವನಿಗೆ ಶಾಶ್ವತವಾದ ಮೋಕ್ಷವು ಕರಗತವಾಗಿರುವುದು. ಅವನ ವಂಶದಲ್ಲಿ ಯಾರೂ ಪಿಶಾಚಗಳಾಗುವುದಿಲ್ಲ.

ಶಿಪ್ರಾಗುಂಫೇಶ್ವರಂ ದೃಷ್ಟ್ವಾ ರುದ್ರಭಕ್ತೋ ಜಿತೇಂದ್ರಿಯಃ ।
ಮುಚ್ಯತೇ ಸರ್ವಪಾಪೇಭ್ಯಃ ಕಂಚುಕೇನ ಫಣೀ ಯಥಾ ॥ ೬ ॥
ಸ್ನಾತ್ವಾಽಗಸ್ತ್ಯೇಶ್ವರಂ ಪಶ್ಯೇದ್ಯೋಽತಿಭಕ್ತ್ಯಾ ಚ ಮಾನವಃ ।
ತ್ಯಕ್ತ್ವಾ ಯಮಗೃಹಂ ವ್ಯಾಸ ರುದ್ರಲೋಕಂ ಸ ಗಚ್ಛತಿ ॥ ೭ ॥
ಶಿಪ್ರಾಯಾಂ ಯೋ ನರಃ ಸ್ನಾತ್ವಾ ಪಶ್ಯೇದ್ಘುಂಢೇಶ್ವರಂ ಶಿವಂ ।
ಸೋಽಶ್ವಮೇಧಫಲಂ ವ್ಯಾಸ ಲಭತೇ ನಾಽತ್ರ ಸಂಶಯಃ ॥ ೮ ॥
ದೇವೇನಾಽತ್ರ ಪುರಾ ವ್ಯಾಸ ವಾದಿತೋ ಡಮರುರ್ಯತಃ ।
ದೇವಸ್ತೇನ ಸಮಾಖ್ಯಾತೋ ನಾಮ್ನಾ ಡಮರುಕೇಶ್ವರಃ ॥ ೯ ॥
ಭಕ್ತ್ಯಾ ಪಶ್ಯೇನ್ನರೋ ಯಸ್ತು ದೇವಂ ಡಮರುಕೇಶ್ವರಂ ।
ನೈವ ವ್ಯಾಧಿಭಯಂ ತಸ್ಯ ಮೃತಃ ಶಿವಪುರಂ ವ್ರಜೇತ್ ॥ ೧೦ ॥
ಅನಾದಿಕಲ್ಪೇಶ್ವರಂ ಯಸ್ತು ಭಕ್ತ್ಯಾ ಪಶ್ಯತಿ ಮಾನವಃ ।
ರಾಜ್ಯಂ ಸ ಲಭತೇ ಸ್ವರ್ಗಂ ಯಥಾ ದೇವಃ ಪುರಂದರಃ ॥ ೧೧ ॥

---

೬. ಯಾವ ಮಹೇಶ್ವರಭಕ್ತನು ಜಿತೇಂದ್ರಿಯನಾಗಿ ಶಿಪ್ರಾಗುಂಫೇಶ್ವರನ ದರ್ಶನವನ್ನು ಮಾಡುವನೊ, ಅವನು ಪೊರೆಯನ್ನು ಕಳಚಿಕೊಂಡ ಹಾವಿನಂತೆ ಸಕಲಪಾಪಗಳಿಂದಲೂ ಮುಕ್ತನಾಗುವನು.

೭. ಯಾವ ಮಾನವನು ಸ್ನಾನದಿಂದ ಶುಚಿಯಾಗಿ ಅಗಸ್ತ್ಯೇಶ್ವರನನ್ನು ನೋಡುವನೊ, ಅವನಿಗೆ ಯಮಲೋಕದ ವಾಸವಿಲ್ಲ. ಎಲೈ ವ್ಯಾಸನೆ! ಅವನು ರುದ್ರಲೋಕವನ್ನೇ ಸೇರುವನು.

೮. ಶಿಪ್ರಾನದಿಯಲ್ಲಿ ಸ್ನಾನವನ್ನು ಮಾಡಿ ಘುಂಢೇಶ್ವರನೆಂಬ ಶಿವ ಲಿಂಗವನ್ನು ನೋಡಿದ ಮನುಜನು ಅಶ್ವಮೇಧಯಜ್ಞವನ್ನು ಮಾಡಿದ ಫಲವನ್ನು ಪಡೆಯುವದರಲ್ಲಿ ಸಂದೇಹವಿಲ್ಲ.

೯. ವ್ಯಾಸಮಹರ್ಷಿಯೆ! ಪೂರ್ವದಲ್ಲಿ ಇಲ್ಲಿ ಮಹಾದೇವನು ತನ್ನ ಡಮರುವಾದ್ಯವನ್ನು ಬಾಜಿಸಿದನು. ಆದುದರಿಂದ ಇಲ್ಲಿರುವ ಮಹೇಶ್ವರ ಲಿಂಗಕ್ಕೆ ಡಮರುಕೇಶ್ವರನೆಂಬ ಹೆಸರು ಪ್ರಖ್ಯಾತವಾಯಿತು.

೧೦. ಯಾವ ನರನು ಭಕ್ತಿಯಿಂದ ದೇವೇಶ್ವರನಾದ ಡಮರುಕೇಶ್ವರನ ದರ್ಶನವನ್ನು ಮಾಡುವನೊ, ಅವನಿಗೆ ವ್ಯಾಧಿಭಯವಿಲ್ಲ. ದೇಹವನ್ನು ಬಿಡಲು ಅವನು ಕೈಲಾಸವನ್ನು ಸೇರುವನು.

೧೧. ಅನಾದಿಕಲ್ಪೇಶ್ವರಲಿಂಗವನ್ನು ಭಕ್ತಿಯಿಂದ ಯಾವ ಮಾನವನು ನೋಡುವನೊ, ಅವನು ಸ್ವರ್ಗಕ್ಕೆ ಆಧಿಪತ್ಯವನ್ನು ಪಡೆದ ದೇವೇಂದ್ರನಂತೆ ತಾನೂ ಒಂದು ರಾಜ್ಯವನ್ನು ಪಡೆಯುವನು.

ದೇವಾನಾಮಪ್ಯಸೌ ವ್ಯಾಸ ಸ್ಪರ್ಧನೀಯಃ ಸದಾ ಭವೇತ್ ।
ಕಲ್ಪಕೋಟಿಶತಂ ಸಾಗ್ರಂ ಭೋಗಯುಕ್ತಸ್ತು ಮೋದತೇ ॥ ೧೨ ॥
ಪಶ್ಯೇತ್ಸಿದ್ಧೇಶ್ವರಂ ಯಸ್ತು ವೀರಭದ್ರಂ ಚ ಚಂಡಿಕಾಂ ।
ಸೋಽತ್ರೈವ ಲಭತೇ ಸಿದ್ಧಿಂ ಜಯಂ ಸರ್ವತ್ರ ಮಾನವಃ ॥ ೧೩ ॥
ಸ್ವರ್ಣಜಾಲೇಶ್ವರಂ ದೃಷ್ಟ್ವಾ ಸ್ನಾತಸ್ತೀರ್ಥೇ ತ್ರಿವಿಷ್ಟಪೇ ।
ಸ್ವರ್ಣೇನ ಪೂಜಯೇದ್ದೇವಂ ಸರ್ವಪಾಪೈಃ ಪ್ರಮುಚ್ಯತೇ ॥ ೧೪ ॥
ಸ್ನಾತ್ವಾ ಪಶ್ಯೇನ್ನರೋ ಭಕ್ತ್ಯಾ ಯಃ ಕರ್ಕೋಟೇಶ್ವರಂ ಶಿವಂ ।
ಸರ್ಪತೋ ನ ಭಯಂ ತಸ್ಯ ದಾರಿದ್ರ್ಯಂ ನೈವ ಜಾಯತೇ ॥ ೧೫ ॥
ಯಃ ಪಶ್ಯೇತ್ಪರಯಾ ಭಕ್ತ್ಯಾ ಮಹಾಮಾಯಾಂ ಸನಾತನೀಂ ।
ವಿಷ್ಣುಮಾಯಾವಿನಿರ್ಮುಕ್ತಃ ಸ ಯಾತಿ ಪರಮಂ ಪದಂ ॥ ೧೬ ॥
ಅರ್ಚಯೇತ್ಪರಯಾ ಭಕ್ತ್ಯಾ ಯಃ ಕಪಾಲೇಶ್ವರಂ ನರಃ ।
ಸ ಮುಚ್ಯೇತ ಮಹಾಪಾಪೈರ್ಯದ್ಯಪಿ ಬ್ರಹ್ಮಹಾ ಭವೇತ್ ॥ ೧೭ ॥

---

೧೨. ಅಯ್ಯಾ ವ್ಯಾಸನೆ! ದೇವತೆಗಳಿಗೂ ಅವನ ಪದವಿಯು ಅಭಿಲಷಿತವಾಗಿರುವುದು. ಸಂಪೂರ್ಣವಾಗಿ ಒಂದು ನೂರು ಕೋಟಿಕಲ್ಪಗಳವರೆಗೂ ಅವನು ಭೋಗಗಳನ್ನನುಭವಿಸುತ್ತ ಸುಖದಿಂದಿರುವನು.

೧೩. ಸಿದ್ಧೇಶ್ವರ, ವೀರಭದ್ರ, ಚಂಡಿಕೆಯರನ್ನು ಭಕ್ತಿಯಿಂದ ನೋಡಿದ ಮನುಷ್ಯನು ಇಲ್ಲಿಯೇ ಅಷ್ಟಸಿದ್ಧಿಗಳನ್ನೂ ಸಕಲ ಕಾರ್ಯಗಳಲ್ಲಿಯೂ ಜಯವನ್ನೂ ಪಡೆಯುವನು.

೧೪. ತ್ರಿವಿಷ್ಟಪತೀರ್ಥದಲ್ಲಿ ಸ್ನಾನವನ್ನು ಮಾಡಿ ಸ್ವರ್ಣಜಾಲೇಶ್ವರನನ್ನು ನೋಡಬೇಕು. ಆ ಲಿಂಗವನ್ನು ಚಿನ್ನದಿಂದ ಪೂಜಿಸಿದವನು ಸಮಸ್ತಪಾಪಗಳಿಂದಲೂ ಮುಕ್ತನಾಗುವನು.

೧೫. ಸ್ನಾನದಿಂದ ಶುಚಿಭೂತನಾಗಿ ಭಕ್ತಿಯಿಂದ ಕರ್ಕೋಟೇಶ್ವರನೆಂಬ ಶಿವಲಿಂಗವನ್ನು ನೋಡಿದ ನರನಿಗೆ ಸರ್ಪಗಳಿಂದ ಭಯವಿಲ್ಲ. ಎಂದಿಗೂ ದಾರಿದ್ರ್ಯವನ್ನು ಅವನು ಅನುಭವಿಸುವುದಿಲ್ಲ.

೧೬. ಯಾವನು ಅನಾದಿಯಾಗಿ ಇಲ್ಲಿ ನೆಲಸಿರುವ ಮಹಾಮಾಯೆಯನ್ನು ಪರಮಭಕ್ತಿಯಿಂದ ಕಾಣುವನೊ, ಅವನು ವಿಷ್ಣುವಿನ ಸಂಸಾರರೂಪವಾದ ಮಾಯೆಯನ್ನು ದಾಟಿ ಪರಮಪದವನ್ನು ಪಡೆಯುವನು.

೧೭. ಯಾವ ನರನು ಅತ್ಯಂತಭಕ್ತಿಯಿಂದ ಕಪಾಲೇಶ್ವರನ ಪೂಜೆಯನ್ನು ಮಾಡುವನೊ, ಅವನು ಬ್ರಹ್ಮಹತ್ಯೆಯನ್ನು ಮಾಡಿದವನಾದರೂ ತನ್ನ ಮಹಾಪಾತಕಗಳಿಂದ ಮುಕ್ತನಾಗುವನು.

**ಸ್ವರ್ಗದ್ವಾರೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಚ ಭೈರವಂ ।**
**ದರ್ಶನಾತ್ತಸ್ಯ ದೇವಸ್ಯ ಶತಯಜ್ಞಫಲಂ ಭವೇತ್ ॥ ೧೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಚತುರ್ದಶ ತೀರ್ಥಯಾತ್ರಾವರ್ಣನಂ" ನಾಮ ವಿಂಶೋಽಧ್ಯಾಯಃ**

---

೧೮. ಸ್ವರ್ಗದ್ವಾರದಲ್ಲಿ ಸ್ನಾನವನ್ನು ಮಾಡಿ ಭೈರವೇಶ್ವರನ ದರ್ಶನವನ್ನು ಮಾಡಿದ ನರನು ಆ ದೇವನನ್ನು ನೋಡುವುದರಿಂದಲೇ ನೂರು ಯಜ್ಞಗಳನ್ನು ಮಾಡಿದ ಪುಣ್ಯವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರದ ಮಾಹಾತ್ಮ್ಯದಲ್ಲಿ "ಚತುರ್ದಶತೀರ್ಥಯಾತ್ರಾವರ್ಣನ"ವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕವಿಂಶೋಽಧ್ಯಾಯಃ

### ಹನುಮತ್ಕೇಶ್ವರಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಅಥಾಽನ್ಯತ್ಸಂಪ್ರವಕ್ಷ್ಯಾಮಿ ದೇವಂ ತ್ರಿದಶಪೂಜಿತಂ ।
ಹನುಮತ್ಕೇಶ್ವರಂ ನಾಮ ಭುಕ್ತಿಮುಕ್ತಿಫಲಪ್ರದಂ ॥ ೧ ॥
ಶೈವೇ ಸರಸಿ ಯಃ ಸ್ನಾತ್ವಾ ಪಶ್ಯೇದ್ಧನುಮತ್ಕೇಶ್ವರಂ ।
ಕಲ್ಪಕೋಟಿಸಹಸ್ರಾಣಿ ವಾಯುಲೋಕೇ ಸ ಮೋದತೇ ॥ ೨ ॥

ವ್ಯಾಸ ಉವಾಚ :—

ಹನುಮತ್ಕೇಶ್ವರೋ ಯಸ್ತು ಹ್ಯುಕ್ತಃ ಪೂರ್ವಂ ತ್ವಯಾಽನಘ ।
ಕಥಾಂ ಕಥಯ ಹ್ಯೇತಸ್ಯ ವೃತ್ತಪೂರ್ವಾಂ ಸನಾತನೀಂ ॥ ೩ ॥

ಸನತ್ಕುಮಾರ ಉವಾಚ :—

ತ್ರೈಲೋಕ್ಯಕಂಟಕಃ ಪೂರ್ವಂ ರಾವಣೋ ನಾಮ ರಾಕ್ಷಸಃ ।
ವಿಷ್ಣುನಾ ರಾಮರೂಪೇಣ ಲಂಕಾಯಾಂ ವಿನಿಪಾತಿತಃ ॥ ೪ ॥

---

## ಕನ್ನಡದ ಅನುವಾದ

### ಹನುಮತ್ಕೇಶ್ವರಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಇನ್ನು ದೇವತೆಗಳಿಗೆ ಪೂಜ್ಯನೂ, ಭುಕ್ತಿಮುಕ್ತಿಗಳನ್ನು ಕೊಡುವವನೂ ಆದ ಹನುಮತ್ಕೇಶ್ವರವೆಂಬ ಸನ್ನಿಧಿಯನ್ನು ವರ್ಣಿಸುತ್ತೇನೆ.

೨. ಶೈವಸರಸ್ಸಿನಲ್ಲಿ ಸ್ನಾನವನ್ನು ಮಾಡಿ ಯಾವನು ಹನುಮತ್ಕೇಶ್ವರನನ್ನು ನೋಡುವನೊ, ಅವನು ಸಾವಿರಾರು ಕೋಟಿ ಕಲ್ಪಗಳವರೆಗೂ ವಾಯು ಲೋಕದಲ್ಲಿ ಆನಂದದಿಂದಿರುವನು.

೩. ವ್ಯಾಸನು ಹೇಳುತ್ತಾನೆ:—ಪೂಜ್ಯನಾದ ಸನತ್ಕುಮಾರನೆ! ನೀನು ಹೇಳಿದ ಈ ಹನುಮತ್ಕೇಶ್ವರನು ಅಲ್ಲಿ ಬಂದು ನೆಲಸಿದುದಕ್ಕೆ ಸಂಬಂಧಿಸಿದ ಅನಾದಿಯಾದ ಕಥೆಯನ್ನು ಹೇಳು.

೪. ಸನತ್ಕುಮಾರನು ಹೇಳುತ್ತಾನೆ:—ಪೂರ್ವದಲ್ಲಿ ಮೂರು ಲೋಕಗಳಿಗೂ ಕಂಟಕಪ್ರಾಯನಾಗಿದ್ದ ರಾವಣನೆಂಬ ರಾಕ್ಷಸನೊಬ್ಬನಿದ್ದನು. ಮಹಾವಿಷ್ಣುವು ಶ್ರೀರಾಮನಾಗಿ ಅವತರಿಸಿ ಅವನನ್ನು ಲಂಕೆಯಲ್ಲಿ ಸಂಹಾರ ಮಾಡಿದನು.

ಘಾತಯಿತ್ವಾ ತು ತಂ ದುಷ್ಟಂ ಸೀತಾಮಾದಾಯ ಜಾನಕೀಂ ।
ವಾನರೈಃ ಸಹ ಋಕ್ಷೈಶ್ಚ ನಗರೀಂ ಸ್ವಾಮುಪಾಗತಃ ॥ ೫ ॥
ತತ್ರ ರಾಜ್ಯಮನುಪ್ರಾಪ್ಯ ಋಷಿಭಿಃ ಪರಿವಾರಿತಃ ।
ಕಥಾಽವಸಾನೇ ರಾಮೇಣ ಹ್ಯಗಸ್ತ್ಯೋ ಮುನಿಸತ್ತಮಃ ॥ ೬ ॥
ಪಪ್ರಚ್ಛ ಚ ದ್ವಯೋರ್ವೀರ್ಯಂ ಶಂಭುವಾತಜಯೋಸ್ತದಾ ।
ತದಾ ದಾಶರಥಿಂ ಪ್ರಾಹ ಅಗಸ್ತಿರ್ಮುನಿಸತ್ತಮಃ ॥ ೭ ॥
ಅನೌಪಮ್ಯೋ ಯಥಾ ದೇವೋ ಯುದ್ಧೇ ಶೌರ್ಯೇ ಮಹೇಶ್ವರಃ ।
ಜ್ಞೇಯೋ ವಾಯುಸುತಸ್ತದ್ವತ್ಸತ್ಯಮೇತದ್ಬ್ರವೀಮಿ ತೇ ॥ ೮ ॥
ಏತಚ್ಛ್ರುತ್ವಾಽಥ ಹನುಮಾನ್ಯದ್ಧರೇಣೋಪಮಾ ಮಮ ।
ಕೃತಾ ಮುನಿವರೇಣೇಹ ಪ್ರತ್ಯಕ್ಷಂ ರಾಘವಸ್ಯ ಹ ॥ ೯ ॥
ಗಮಿಷ್ಯೇ ನಗರೀಂ ಲಂಕಾಂ ಲಿಂಗಮೇಕಂ ಪ್ರಯಾಚಿತುಂ ।
ರಾಕ್ಷಸೇಂದ್ರಂ ಮಹಾಭಾಗಂ ವಿಭೀಷಣಮಕಲ್ಮಷಂ ॥ ೧೦ ॥

---

೫. ದುಷ್ಟನಾದ ಆ ರಾಕ್ಷಸನನ್ನು ಕೊಂದು ಜನಕಸುತೆಯೂ ತನ್ನ ಪತ್ನಿಯೂ ಆದ ಸೀತೆಯನ್ನು ಕರೆದುಕೊಂಡು ಬಂದು ತನ್ನ ಸೈನ್ಯವಾದ ಕಪಿಗಳು, ಕರಡಿಗಳೊಡನೆ ರಾಜಧಾನಿಗೆ ಹಿಂದಿರುಗಿದನು.

೬. ಇಂತು ರಾಜ್ಯವನ್ನು ಹೊಂದಿ ಮಹರ್ಷಿಗಳಿಂದ ಪರಿವಾರಿತನಾಗಿ ಒಡ್ಡೋಲಗದಲ್ಲಿರಲು ಮುನಿಶ್ರೇಷ್ಠನಾದ ಅಗಸ್ತ್ಯನನ್ನು ಕಥಾವಸಾನದ ಸಮಯ ದಲ್ಲಿ ಕಂಡನು.

೭. ಆಗ ಮಹೇಶ್ವರನಿಗೂ ಹನುಮಂತನಿಗೂ ಇರುವ ಪರಸ್ಪರ ಬಲಾಬಲ ಗಳನ್ನು ಕುರಿತು ಪ್ರಶ್ನೆಮಾಡಲು ಮುನಿವರ್ಯನಾದ ಅಗಸ್ತ್ಯನು ಶ್ರೀರಾಮನಿ ಗಿಂತೆಂದನು.

೮. ಯುದ್ಧವು ಪ್ರಾಪ್ತವಾಗಲು ಮಹಾದೇವನು ಹೇಗೆ ಅಸಮಾನವಾದ ಪರಾಕ್ರಮವಂತನಾಗಿರುವನೊ, ನಮ್ಮ ಹನುಮಂತನೂ ಹಾಗೆಯೇ ಅಸಹಾಯ ಶೂರನೆಂದು ತಿಳಿಯಬೇಕು. ಇದು ಸರ್ವಥಾ ಸತ್ಯವು.

೯. ಇದನ್ನು ಕೇಳಿ ಹನುಮಂತನು ಹೇಳಿದನು. "ಮುನಿವರ್ಯನಾದ ಅಗಸ್ತ್ಯನು ನನ್ನನ್ನು ಶ್ರೀರಾಮಚಂದ್ರನ ಸಮ್ಮುಖದಲ್ಲಿಯೇ ಪರಮೇಶ್ವರನಿಗೆ ಹೋಲಿಸಿ ನುಡಿದನಲ್ಲವೆ.

೧೦. ಈಗಲೇ ನಾನು ಲಂಕಾನಗರಿಗೆ ಹೋಗಿ ರಾಕ್ಷಸಶ್ರೇಷ್ಠನೂ, ಮಹಾ ಭಾಗ್ಯಶಾಲಿಯೂ, ನಿಷ್ಕಲ್ಮಷನೂ ಆದ ವಿಭೀಷಣನಲ್ಲಿ ಒಂದು ಲಿಂಗವನ್ನು ಬೇಡಿ ತರುವೆನು."

ತತೋ ಗತಃ ಸ ಲಂಕಾಯಾಂ ವಿಭೀಷಣಮುವಾಚ ಹ ।
ದೇಹಿ ಮೇ ತ್ವಂ ಮಹಾಭಾಗ ಲಿಂಗಮೇಕಂ ಚ ಶೋಭನಂ ।
ಉಕ್ತಂ ಚ ರಾಕ್ಷಸೇಂದ್ರೇಣ ಗೃಹಾಣೈತದ್ಯಥಾ ರುಚಿ ॥ ೧೧ ॥
ಏತಾನಿ ಷಟ್ಟ ಲಿಂಗಾನಿ ರಾವಣಸ್ಥಾಪಿತಾನಿ ವೈ ।
ತ್ರೈಲೋಕ್ಯವಿಜಯಾತ್ಪೂರ್ವಂ ಮಮ ಭ್ರಾತ್ರಾ ಮಹಾತ್ಮನಾ ॥ ೧೨ ॥
ಏತೇಷು ಯದಭೀಷ್ಟಂ ತೇ ಲಿಂಗಂ ಕಥಯ ಸುವ್ರತ ।
ತತ್ಪ್ರಯಚ್ಛಾಮಿ ತೇಽದ್ಯೈವ ಸತ್ಯಮೇತತ್ಪ್ಲವಂಗಮ ॥ ೧೩ ॥
ತತೋ ಜಗ್ರಾಹ ಹನುಮಾನ್ಲಿಂಗಂ ಮೌಕ್ತಿಕಸನ್ನಿಭಂ ।
ಯದೇತದ್ದೃಶ್ಯತೇ ವೀರ ತತ್ಪ್ರಯಚ್ಛ ಮಮಾಽನಘ ॥ ೧೪ ॥
ಶ್ರುತ್ವಾ ಹನುಮತೋ ವಾಕ್ಯಮಥೋವಾಚ ವಿಭೀಷಣಃ ।
ದತ್ತಮೇತನ್ಮಹಾವೀರ ಲಿಂಗಂ ಯದ್ಧೃತವಾನಸಿ ॥ ೧೫ ॥
ಶ್ರೂಯತೇ ಹಿ ಪುರಾವೃತ್ತಂ ಲಿಂಗಮೇತದ್ಧನೇಶ್ವರಃ ।
ರುದ್ರಭಕ್ತ್ಯಾ ಸಮಾಯುಕ್ತಸ್ತ್ರಿಕಾಲಮಪ್ಯಪೂಜಯತ್ ॥ ೧೬ ॥

---

೧೧. ಆ ಕ್ಷಣದಲ್ಲಿಯೇ ಲಂಕೆಗೆ ಹೋಗಿ ವಿಭೀಷಣನನ್ನು ಕುರಿತು "ಎಲೈ ಭಾಗ್ಯವಂತನೆ! ಸುಂದರವಾದ ಲಿಂಗವೊಂದನ್ನು ನನಗೆ ಕೊಡು" ಎಂದು ಹೇಳಿದನು. ಆ ರಾಕ್ಷಸೇಂದ್ರನೂ "ಇವುಗಳಲ್ಲಿ ನಿನಗೆ ಇಷ್ಟಬಂದ ಲಿಂಗವನ್ನು ತೆಗೆದುಕೊ" ಎಂದು ಉತ್ತರವಿತ್ತನು.

೧೨. "ನನ್ನ ಅಣ್ಣನೂ, ಮಹಾತ್ಮನೂ ಆದ ರಾವಣನು ಮೂರು ಲೋಕಗಳ ದಿಗ್ವಿಜಯಕ್ಕೆ ಹೊರಡುವ ಮುಂಚೆ ಈ ಆರು ಲಿಂಗಗಳನ್ನು ಇಲ್ಲಿ ಸ್ಥಾಪನೆ ಮಾಡಿದನು.

೧೩. ಸುವ್ರತನಾದ ಕಪಿಶ್ರೇಷ್ಠನೆ! ಇವುಗಳಲ್ಲಿ ನಿನಗೆ ಯಾವುದು ಬೇಕಾಗಿರುವುದೆಂಬುದನ್ನು ತಿಳಿಸು. ಸತ್ಯವಾಗಿಯೂ ನಿನಗೆ ಅದನ್ನು ಕೊಡುತ್ತೇನೆ."

೧೪. ಆಗ ಹನುಮಂತನು ಮುತ್ತಿನ ಕಾಂತಿಯಿಂದ ಹೊಳೆಯುತ್ತಿದ್ದ ಲಿಂಗವೊಂದನ್ನು ಮುಟ್ಟಿ, "ಮಹಾವೀರನೆ! ನಿಷ್ಪಾಪನೆ! ಇಲ್ಲಿರುವ ಈ ಲಿಂಗವನ್ನು ನನಗೆ ಕೊಡು" ಎಂದನು.

೧೫. ಹನುಮಂತನಾಡಿದ ಈ ವಾಕ್ಯವನ್ನು ಕೇಳಿ ವಿಭೀಷಣನು ಹೇಳಿದನು. "ಮಹಾವೀರನೆ! ನೀನು ಅಪೇಕ್ಷಿಸಿರುವ ಲಿಂಗವನ್ನೇ ನಿನಗೆ ಕೊಟ್ಟಿರುವೆನು, ತೆಗೆದುಕೊ.

೧೬. ಪೂರ್ವದಲ್ಲಿ ಕುಬೇರನು ಮಹಾರುದ್ರನಲ್ಲಿ ಭಕ್ತಿಯುಳ್ಳವನಾಗಿ ಈ ಲಿಂಗವನ್ನು ತ್ರಿಸಂಧ್ಯೆಗಳಲ್ಲಿಯೂ ಪೂಜಿಸುತ್ತಿದ್ದನೆಂಬ ಕಥೆಯನ್ನು ಕೇಳಿರುವೆನು.

ರಾವಣೇನ ಯದಾ ಬದ್ಧಸ್ತದಾನೀಂ ಹಿ ಧನೇಶ್ವರಃ ।
ಲಿಂಗಸ್ಯಾಽಸ್ಯ ಪ್ರಭಾವೇನ ವಿಮುಕ್ತಃ ಸಮುಪದ್ಯತ ॥ ೧೭ ॥
ಪ್ರಸಾದಾತ್ತಸ್ಯ ಲಿಂಗಸ್ಯ ಧನೇಶೋ ಧನರಕ್ಷಕಃ ।
ಗೃಹೀತ್ವಾ ತನ್ಮಹಾಲಿಂಗಂ ಸ್ವಸ್ಥೋ ಜಾತೋಽಥ ವಾನರಃ ॥ ೧೮ ॥

ಸನತ್ಕುಮಾರ ಉವಾಚ :—

ಗೃಹೀತ್ವಾ ತು ತತೋ ಲಿಂಗಂ ಪ್ರಸ್ಥಿತೋ ವಿಮಲೇಽಂಬರೇ ।
ಸಪ್ತಮೇ ದಿವಸೇ ಚೈವ ಸಂಪ್ರಾಪ್ತೋಽವಂತಿಕಾಂ ಪುರೀಂ ॥ ೧೯ ॥
ತತ್ರ ರುದ್ರಸರಸ್ತೀರೇ ಸ್ಥಾಪ್ಯ ಸ್ನಾನಮಥಾಽಕರೋತ್ ।
ಮಹಾಕಾಲಸ್ಯ ಪೂಜಾರ್ಥಂ ಗಮನಂ ಪ್ರತ್ಯಚಿಂತಯುತ್ ॥ ೨೦ ॥
ಉದ್ಧರ್ತುಕಾಮಸ್ತಲ್ಲಿಂಗಮುದ್ಧರ್ತುಂ ನ ಶಶಾಕ ಸಃ ॥ ೨೧ ॥
ತತೋ ವ್ಯವಸ್ಥಿತೋ ದೇವಃ ಪ್ರಾಹ ತಂ ವಾಯುನಂದನಂ ।
ಅಸ್ಮಿನ್ ಕ್ಷೇತ್ರೇ ಹನೂಮನ್ನಾಂ ತ್ವನ್ನಾಮ್ನೈವ ಪ್ರತಿಷ್ಠಾಪಯ ॥ ೨೨ ॥

---

೧೭. ರಾವಣನು ದಿಗ್ವಿಜಯಕಾಲದಲ್ಲಿ ಧನಪತಿಯನ್ನು ಬಂಧಿಸಿಟ್ಟಿದ್ದನು. ಆದರೂ ಈ ಮಹಾಲಿಂಗದ ಪ್ರಭಾವದಿಂದ ಅವನ ಬಂಧನವು ಕೊನೆಗಂಡು ಸ್ವಸ್ಥಾನವನ್ನು ಸೇರಿದನು.

೧೮. ಆ ಲಿಂಗದ ಮಹಿಮೆಯಿಂದಲೇ ಕುಬೇರನು ನವನಿಧಿಗಳಿಗೆ ಸಂರಕ್ಷಕನಾಗಿರುವನು.'' ಈ ಮಾತನ್ನು ಕೇಳಿ ಹನುಮಂತನು ಆ ಮಹಾಲಿಂಗವನ್ನು ತೆಗೆದುಕೊಂಡು ಕೃತಕಾರ್ಯನಾದನು.

೧೯. ಸನತ್ಕುಮಾರನು ಹೇಳುತ್ತಾನೆ:—ಇಂತು ಆ ವಾನರಪುಂಗವನು ಆ ಲಿಂಗವನ್ನು ತೆಗೆದುಕೊಂಡು ನಿರ್ಮಲಾಕಾಶದಲ್ಲಿ ಹಾರಿಬರುತ್ತ ಏಳನೆಯ ದಿನದಲ್ಲಿ ಅವಂತೀನಗರಿಯನ್ನು ಸೇರಿದನು.

೨೦. ಅಲ್ಲಿ ಪೂಜಾಸಮಯವಾಗಲು ಮಹಾಕಾಲನನ್ನು ಪೂಜಿಸುವುದಕ್ಕಾಗಿ ರುದ್ರಸರೋವರದ ತೀರದಲ್ಲಿ ತಾನು ತಂದಿದ್ದ ಲಿಂಗವನ್ನು ಕೆಳಗಿರಿಸಿ ಸ್ನಾನವನ್ನು ಮಾಡಿದನು. ಪೂಜೆಯಾದ ಮೇಲೆ ಹೊರಡಲನುವಾದನು.

೨೧. ಆ ಲಿಂಗವನ್ನು ತೆಗೆದುಕೊಳ್ಳಲು ಅಪೇಕ್ಷೆಯುಳ್ಳವನಾಗಿ ಪ್ರಯತ್ನಪಟ್ಟರೂ ಶಕ್ತನಾಗಲಿಲ್ಲ.

೨೨. ಆಗ ಮಹಾದೇವನು ಪ್ರತ್ಯಕ್ಷನಾಗಿ ವಾಯುಪುತ್ರನನ್ನು ಕುರಿತು ಹೇಳಿದನು. ''ಹನುಮಂತನೆ! ನಿನ್ನ ಹೆಸರಿನಿಂದಲೇ ಈ ಕ್ಷೇತ್ರದಲ್ಲಿ ಈ ಲಿಂಗವನ್ನು ಪ್ರತಿಷ್ಠೆಮಾಡು.

ಹನುಮತ್ಕೇಶ್ವರಂ ಚಾಽಥ ಲೋಕೇ ಖ್ಯಾತಂ ಭವಿಷ್ಯತಿ ।
ಶೈಲವಚ್ಚೋನ್ನತಂ ಲಿಂಗಂ ಸ್ಥಾಪಿತಂ ವಾಯುಸೂನುನಾ ॥ ೨೩ ॥
ಶನೌ ಪಶ್ಯೇನ್ನರೋ ಯಸ್ತು ಹನುಮತ್ಕೇಶ್ವರಂ ಶಿವಂ ।
ತಸ್ಯ ಶತ್ರುಭಯಂ ನಾಽಸ್ತಿ ಸಂಗ್ರಾಮೇ ಜಯಮಾಪ್ನುಯಾತ್ ॥ ೨೪ ॥
ನ ಚ ಚೌರಭಯಂ ತಸ್ಯ ನ ದಾರಿದ್ರ್ಯಂ ನ ದುರ್ಗತಿಃ ।
ತೈಲಾಽಭಿಷೇಕಂ ಯಃ ಕುರ್ಯಾದ್ಧನುಮತ್ಕೇಶ್ವರೇ ಶಿವೇ ॥ ೨೫ ॥
ತಸ್ಯ ರೋಗಾಃ ಪ್ರಲೀಯಂತೇ ಗ್ರಹಪೀಡಾ ನ ಜಾಯತೇ ।
ಯೇ ದ್ರಕ್ಷ್ಯಂತಿ ನರಾ ಭಕ್ತ್ಯಾ ತೇಷಾಂ ಮೋಕ್ಷೋ ಭವಿಷ್ಯತಿ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಹನುಮತ್ಕೇಶ್ವರ ಮಾಹಾತ್ಮ್ಯವರ್ಣನಂ" ನಾಮೈಕವಿಂಶೋಽಧ್ಯಾಯಃ

---

೨೩. ಈ ಮಹಾಲಿಂಗವು ಹನುಮತ್ಕೇಶ್ವರವೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧವಾಗುವುದು. ಇದನ್ನು ಕೇಳಿ ವಾಯುಪುತ್ರನಾದ ಹನುಮಂತನು ಪರ್ವತದಂತೆ ಅತ್ಯುನ್ನತವಾದ ಆ ಲಿಂಗವನ್ನು ಅಲ್ಲಿ ಪ್ರತಿಷ್ಠಿಸಿದನು.

೨೪. ಹನುಮತ್ಕೇಶ್ವರವೆಂಬ ಈ ಶಿವಲಿಂಗವನ್ನು ಶನಿವಾರದ ದಿನದಲ್ಲಿ ಯಾವನು ದರ್ಶನಮಾಡುವನೊ, ಅವನಿಗೆ ಶತ್ರುಭಯವಿಲ್ಲ. ಯುದ್ಧಗಳಲ್ಲಿ ವಿಜಯವೇ ಲಭಿಸುವುದು.

೨೫–೨೬. ಅವನಿಗೆ ಚೋರರಿಂದ ಭಯವಾಗಲಿ, ದಾರಿದ್ರ್ಯದುಃಖವಾಗಲಿ, ದುರ್ಗತಿಯಾಗಲಿ ಉಂಟಾಗಲಾರವು. ಈ ಹನುಮತ್ಕೇಶ್ವರಲಿಂಗಕ್ಕೆ ಯಾವನು ತೈಲಾಭಿಷೇಕವನ್ನು ಮಾಡಿಸುವನೊ, ಅವನ ದೇಹಗತಗಳಾದ ರೋಗಗಳೆಲ್ಲವೂ ನಾಶವಾಗುವುವು. ಅವನಿಗೆ ಗ್ರಹಗಳ ಪೀಡೆಯೂ ಅಂಟುವುದಿಲ್ಲ. ಯಾವ ಮಾನವರು ಭಕ್ತಿಯಿಂದ ಈ ಲಿಂಗದ ದರ್ಶನವನ್ನು ಮಾಡುವರೊ, ಅವರಿಗೆ ಮೋಕ್ಷವು ಸಿದ್ಧಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಹನುಮತ್ಕೇಶ್ವರಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾವಿಂಶೋಽಧ್ಯಾಯಃ

### ರುದ್ರಸರೋಮಾಹಾತ್ಮ್ಯವರ್ಣನಂ

ಶ್ರೀ ಸನತ್ಕುಮಾರ ಉವಾಚ :—

**ಯಮೇಶ್ವರಂ ತು ಯಃ ಪಶ್ಯೇತ್ಸ್ನಾಪಯಿತ್ವಾ ತಿಲಾಂಭಸಾ ।**
**ಕುಂಕುಮೇನ ಸಮಾಲಿಪ್ಯ ಪೂಜಯೇದುತ್ಪಲೈಸ್ತತಃ ॥ ೧ ॥**
**ದಹೇತ್ಕೃಷ್ಣಾಗರುಂ ಧೂಪಂ ದಾಪಯೇತ್ತಿಲತಂಡುಲಾನ್ ।**
**ಯ ಏವಮರ್ಚಯೇದ್ದೇವಮೀಶ್ವರಂ ಶೂಲಹಸ್ತಕಂ ॥ ೨ ॥**
**ಯತ್ರ ಕುತ್ರ ಮೃತಸ್ಯಾಽಪಿ ಯಮಃ ಪಿತೃಸಮೋ ಭವೇತ್ ॥ ೩ ॥**

॥ ಇತಿ ಯಮೇಶ್ವರಮಾಹಾತ್ಮ್ಯಂ ॥

ಸನತ್ಕುಮಾರ ಉವಾಚ :—

**ಕಥಯಾಮಿ ಪರಂ ವ್ಯಾಸ ತೀರ್ಥಂ ತೀರ್ಥೇಷು ಚೋತ್ತಮಂ ।**
**ನಾಮ್ನಾ ರುದ್ರಸರಃ ಪ್ರೋಕ್ತಂ ತ್ರಿಷು ಲೋಕೇಷು ವಿಶ್ರುತಂ ॥ ೪ ॥**
**ತತ್ರ ಸ್ನಾತ್ವಾ ಶುಚಿರ್ಭೂತ್ವಾ ಪಶ್ಯೇತ್ಕೋಟೇಶ್ವರಂ ಶಿವಂ ।**
**ಮುಚ್ಯತೇ ಸರ್ವಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ॥ ೫ ॥**

---

### ಕನ್ನಡದ ಅನುವಾದ

#### ರುದ್ರಸರೋಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:— ಯಮೇಶ್ವರನ ದರ್ಶನವನ್ನು ಮಾಡಿದ ಮನುಷ್ಯನು ಆ ಲಿಂಗಕ್ಕೆ ತಿಲೋದಕದಿಂದ ಸ್ನಾನವನ್ನು ಮಾಡಿಸಿ, ಕುಂಕುಮ ಲೇಪನವನ್ನು ಮಾಡಿ ಬಳಿಕ ಕನ್ನೈದಿಲೆಗಳಿಂದ ಪೂಜಿಸಬೇಕು.

೨–೩. ಕೃಷ್ಣಾಗರುವಿನ ಧೂಪವನ್ನಿಕ್ಕಿ ತಿಲತಂಡುಲಗಳ ನೈವೇದ್ಯವನ್ನಿಡಬೇಕು. ಇಂತು ತ್ರಿಶೂಲಪಾಣಿಯಾದ ಯಮೇಶ್ವರನನ್ನು ಯಾವನು ಪೂಜಿಸುತ್ತಾನೆಯೊ, ಅವನು ಎಲ್ಲಿ ದೇಹವನ್ನು ತ್ಯಜಿಸಿದರೂ ಯಮನು ಅವನಿಗೆ ತಂದೆಯಂತೆ ಸುಮುಖನಾಗಿರುವನು.

೪. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಸಕಲ ತೀರ್ಥಗಳಲ್ಲಿಯೂ ಉತ್ತಮವೆನಿಸಿದ ತೀರ್ಥವೊಂದನ್ನು ನಿರೂಪಿಸುವೆನು. ಇದನ್ನು ರುದ್ರಸರೋವರವೆಂದು ಕರೆಯುವರು. ಇದು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿರುವುದು.

೫. ಅಲ್ಲಿ ಮನುಜನು ಸ್ನಾನಮಾಡಿ ಶುಚಿಯಾಗಿ ಕೋಟೇಶ್ವರಲಿಂಗವನ್ನು ನೋಡಬೇಕು. ಅವನು ಸರ್ವಪಾಪಗಳನ್ನೂ ಕಳೆದುಕೊಂಡು ರುದ್ರಲೋಕವನ್ನು ಸೇರುವನು.

ಶ್ರಾದ್ಧಂ ತತ್ರೈವ ಕೃತ್ವಾ ತು ಶೃಣು ಯತ್ಫಲಮಾಪ್ನುಯಾತ್ ।
ದಶಾನಾಮಶ್ವಮೇಧಾನಾಂ ವಾಜಪೇಯಶತಸ್ಯ ಚ ।
ಫಲಂ ಕೋಟಿಗುಣಂ ವ್ಯಾಸ ಲಭತೇ ನಾಽತ್ರ ಸಂಶಯಃ ॥ ೬ ॥
ಪಿತೄನುದ್ದಿಶ್ಯ ಯತ್ಕಿಂಚಿತ್ಕೋಟಿತೀರ್ಥೇ ಪ್ರದೀಯತೇ ।
ತತ್ಸರ್ವಂ ಕೋಟಿಗುಣಿತಂ ಜಾಯತೇ ನಾಽತ್ರ ಸಂಶಯಃ ॥ ೭ ॥
ಕೋಟಿತೀರ್ಥೇ ನರಃ ಸ್ನಾತ್ವಾ ಧ್ಯಾಯೇದ್ಯಃ ಪರಮಾಕ್ಷರಂ ।
ಮುಚ್ಯತೇ ಸರ್ವಪಾಪೇಭ್ಯೋ ನಿರ್ಮೋಕೇನ ಯಥೋರಗಃ ॥ ೮ ॥
ಪ್ರಾತರುತ್ಥಾಯ ಯೋ ವಿಪ್ರ ತತ್ರ ಸ್ನಾನಂ ಕರೋತಿ ವೈ ।
ದೃಷ್ಟ್ವಾ ದೇವಂ ಮಹಾಕಾಲಂ ಗೋಸಹಸ್ರಫಲಂ ಲಭೇತ್ ॥ ೯ ॥
ಕೋಟಿತೀರ್ಥೇ ನರಃ ಸ್ನಾತ್ವಾ ಸಪ್ತರಾತ್ರೋಷಿತಃ ಶುಚಿಃ ।
ಚಾಂದ್ರಾಯಣಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೦ ॥
ಜಾಗರಂ ತತ್ರ ಕುರ್ಯಾದ್ಯೋ ಹ್ಯನಂತಫಲಮಶ್ನುತೇ ।
ಗಂಧಪುಷ್ಪಾರ್ಚನಂ ಕೃತ್ವಾ ಮಹಾಸ್ನಪನಪೂರ್ವಕಂ ॥ ೧೧ ॥

---

೬. ಅಲ್ಲಿಯೇ ಪಿತೃಶ್ರಾದ್ಧವನ್ನು ಮಾಡಿದವನು ಯಾವ ಫಲವನ್ನು ಪಡೆಯುವನೆಂಬುದನ್ನು ಕೇಳು. ಹತ್ತು ಅಶ್ವಮೇಧಗಳನ್ನೂ, ನೂರು ವಾಜಪೇಯಗಳನ್ನೂ ಮಾಡುವುದರಿಂದ ಯಾವ ಫಲವುಂಟೊ, ಅದಕ್ಕೂ ಕೋಟಿಗುಣಿತವಾದ ಫಲವನ್ನು ಅವನು ಹೊಂದುವನು. ಇದರಲ್ಲಿ ಸಂದೇಹವಿಲ್ಲ.

೭. ಈ ಕೋಟಿತೀರ್ಥದಲ್ಲಿ ಪಿತೃಗಳನ್ನುದ್ದೇಶಿಸಿ ಎಷ್ಟು ಅಲ್ಪವನ್ನು ದಾನ ಮಾಡಿದರೂ ಅದೆಲ್ಲವೂ ಕೋಟಿಗುಣಿತವಾಗುವುದರಲ್ಲಿ ಸಂಶಯವಿಲ್ಲ.

೮. ಕೋಟಿತೀರ್ಥದಲ್ಲಿ ಯಾವ ನರನು ಸ್ನಾನವನ್ನು ಮಾಡಿಕೊಂಡು ಪ್ರಣವದ ಉಪಾಸನೆಯನ್ನು ಮಾಡುವನೊ, ಅವನು ಪೊರೆಯಿಂದ ಹೊರಗೆ ಬಂದ ಹಾವಿನಂತೆ ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೯. ಬ್ರಾಹ್ಮಣೋತ್ತಮನೆ! ಬೆಳಿಗ್ಗೆ ಏಳುತ್ತಲೇ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಮಹಾಕಾಳೇಶ್ವರನ ದರ್ಶನವನ್ನು ಮಾಡಲು ಸಾವಿರ ಗೋದಾನಗಳನ್ನು ಮಾಡಿದ ಫಲವನ್ನು ಹೊಂದುವನು.

೧೦. ಕೋಟಿತೀರ್ಥದಲ್ಲಿ ಸ್ನಾನವನ್ನು ಮಾಡಿ ಏಳು ದಿವಸಗಳ ಉಪವಾಸದಿಂದ ಶುಚಿಯಾದ ನರನು ಒಂದು ಸಾವಿರ ಚಾಂದ್ರಾಯಣವ್ರತಗಳನ್ನು ಮಾಡಿದ ಫಲವನ್ನು ಪಡೆಯುವನು.

೧೧. ಆ ಮಹಾಕಾಳೇಶ್ವರನಿಗೆ ಮಹಾರುದ್ರಾಭಿಷೇಕವನ್ನು ಮಾಡಿಸಿ ಗಂಧಪುಷ್ಪಗಳಿಂದ ಪೂಜಿಸಿ ಆ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದ ಮನುಜನು ಅನಂತವಾದ ಪುಣ್ಯವನ್ನು ಪಡೆಯುವನು.

ಯ ಏವಂ ನಯತೇ ರಾತ್ರಿಂ ಸೋಽಪವಾಸೋ ಜಿತೇಂದ್ರಿಯಃ ।
ಲಭತೇ ಸರ್ವಕಾಮಿತ್ವಂ ಯತ್ಸುರೈರಪಿ ದುರ್ಲಭಂ ॥ ೧೨ ॥
ಕಾರ್ತಿಕ್ಯಾಮಥ ವೈಶಾಖ್ಯಾಂ ದೇವಂ ತತ್ರ ಪ್ರಪೂಜಯೇತ್ ।
ಗಂಧಪುಷ್ಪೈಶ್ಚ ಕಾಲೀನೈಸ್ತಥಾ ವಸ್ತ್ರೈಃ ಸುಶೋಭನೈಃ ॥ ೧೩ ॥
ಕರ್ಪೂರಂ ಕುಂಕುಮಂ ಚೈವ ಶ್ರೀಖಂಡಮಗರುಂ ತಥಾ ।
ಸಮಭಾಗಾನಿ ಕೃತ್ವಾ ತು ಶಿಲಾಪೃಷ್ಠೇ ಚ ಪೇಷಯೇತ್ ॥ ೧೪ ॥
ಅನುಲಿಪ್ಯ ಮಹಾಕಾಲಂ ರುದ್ರಸ್ಯಾಽನುಚರೋ ಭವೇತ್ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ರುದ್ರಸರೋಮಾಹಾತ್ಮ್ಯವರ್ಣನಂ" ನಾಮ ದ್ವಾವಿಂಶೋಽಧ್ಯಾಯಃ

---

೧೨. ಯಾವನು ಉಪವಾಸದಿಂದ ಜಿತೇಂದ್ರಿಯನಾಗಿ ಇಂತು ರಾತ್ರಿಯನ್ನು ಕಳೆಯುವನೊ, ಅವನು ದೇವತೆಗಳಿಗೂ ದುರ್ಲಭಗಳಾದ ಸಕಲೇಷ್ಟಾರ್ಥಗಳನ್ನೂ ಸುಲಭವಾಗಿ ಪಡೆಯುವನು.

೧೩. ಕಾರ್ತಿಕ ಮತ್ತು ವೈಶಾಖಮಾಸಗಳ ಹುಣ್ಣಿಮೆಗಳಲ್ಲಿ ಗಂಧದಿಂದಲೂ, ಆಯಾ ಕಾಲದಲ್ಲಿ ಸಿಕ್ಕುವ ಪುಷ್ಪಗಳಿಂದಲೂ, ಉತ್ತಮಗಳಾದ ವಸ್ತ್ರಗಳಿಂದಲೂ ಮಹಾಕಾಲನ ಪೂಜೆಯನ್ನು ಮಾಡಬೇಕು.

೧೪. ಕರ್ಪೂರ, ಕುಂಕುಮಕೇಸರಿ, ಶ್ರೀಖಂಡ, ಅಗರು ಎಂಬ ಪರಿಮಳ ದ್ರವ್ಯಗಳ ಸಮಭಾಗಗಳನ್ನು ತೆಗೆದುಕೊಂಡು ಒಂದು ಕಲ್ಲಿನಮೇಲೆ ಚೆನ್ನಾಗಿ ಅರೆದು ಗಂಧವನ್ನು ಮಾಡಬೇಕು.

೧೫. ಈ ಪರಿಕರದಿಂದ ಮಹಾಕಾಲೇಶ್ವರನಿಗೆ ಅನುಲೇಪನವನ್ನು ಮಾಡಿದವನು ಮಹೇಶ್ವರನಿಗೆ ಅನುಚರನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ರುದ್ರಸರೋಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋವಿಂಶೋಽಧ್ಯಾಯಃ

## ಮಹಾಕಾಲೇಶ್ವರಯಾತ್ರಾಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಅಥ ಯಾತ್ರಾಂ ಪ್ರವಕ್ಷ್ಯಾಮಿ ಮಹಾಕಾಲಸ್ಯ ಯತ್ನತಃ ।
ಶಿವಾಂ ಶ್ರೇಯಸ್ಕರೀಂ ಪುಣ್ಯಾಂ ಪುಣ್ಯಲೋಕಪ್ರದಾಯಿನೀಂ ॥ ೧ ॥
ಸ್ನಾತ್ವಾ ಸರಸಿ ರುದ್ರಸ್ಯ ದೃಷ್ಟ್ವಾ ಕೋಟೀಶ್ವರಂ ಶಿವಂ ।
ನಮಸ್ಕೃತ್ಯ ತತೋ ಗಚ್ಛೇನ್ಮಹಾಕಾಲಂ ಸನಾತನಂ ॥ ೨ ॥
ಗಂಧೈಃ ಪುಷ್ಪೈರ್ನಮಸ್ಕಾರೈಃ ಸಂಪೂಜ್ಯ ತ್ರಿದಶೇಶ್ವರಂ ।
ಪ್ರಣಿಪತ್ಯ ತತೋ ಗಚ್ಛೇದ್ದೇವಂ ಕಪಾಲಮೋಚನಂ ॥ ೩ ॥
ತತ್ರೈವ ದೇವದೇವೇಶಃ ಕಪಾಲಂ ನ್ಯಸ್ತವಾನ್ ಕ್ಷಿತೌ ।
ಕಪಾಲೇ ತತ್ಕ್ಷಣಾನ್ನ್ಯಸ್ತೇ ತತ್ರಾಽಭೂಲ್ಲಿಂಗಮುತ್ತಮಂ ॥ ೪ ॥
ಕಪಾಲಮೋಚನಂ ನಾಮ ಸರ್ವಪಾಪಪ್ರಣಾಶನಂ ।
ತತ್ರ ವೈ ಸ್ನಪನಂ ಕುರ್ಯಾದಾಜ್ಯಪಲಶತೇನ ವೈ ॥ ೫ ॥

---

### ಕನ್ನಡದ ಅನುವಾದ

#### ಮಹಾಕಾಲೇಶ್ವರಯಾತ್ರಾಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:— ಇನ್ನು ಮಹಾಕಾಲೇಶ್ವರನ ಯಾತ್ರೆಯನ್ನು ಪ್ರಯತ್ನದಿಂದ ಹೇಗೆ ಮಾಡಬೇಕೆಂಬುದನ್ನು ತಿಳಿಸುವೆನು. ಈ ಕ್ಷೇತ್ರಯಾತ್ರೆಯು ಮಂಗಳಪ್ರದವೂ, ಇಹಲೋಕದ ಭಾಗ್ಯಗಳನ್ನು ಕೊಡುವುದೂ, ಪುಣ್ಯಪ್ರದವೂ, ಪುಣ್ಯಲೋಕಗಳನ್ನು ದೊರಕಿಸುವುದೂ ಆಗಿರುವುದು.

೨. ರುದ್ರಸರೋವರದಲ್ಲಿ ಸ್ನಾನವನ್ನು ಮಾಡಿ ಕೋಟೀಶ್ವರ ಮಹಾಲಿಂಗವನ್ನು ಕಂಡು ಅದಕ್ಕೆ ನಮಸ್ಕರಿಸಿ, ಬಳಿಕ ಅನಾದಿನಿಧನನಾದ ಮಹಾಕಾಲೇಶ್ವರನ ಬಳಿಗೆ ಹೋಗಬೇಕು.

೩. ದೇವೇಶ್ವರನಾದ ಆತನನ್ನು ಗಂಧಗಳಿಂದಲೂ, ಪುಷ್ಪಗಳಿಂದಲೂ, ಪ್ರಣಾಮಗಳಿಂದಲೂ ಚೆನ್ನಾಗಿ ಅರ್ಚಿಸಿ ನಮಸ್ಕರಿಸಿ ಬೀಳ್ಕೊಂಡು ಕಪಾಲಮೋಚನೇಶ್ವರನನ್ನು ಕಾಣಬೇಕು.

೪. ಮಹಾದೇವನು ಅಲ್ಲಿಯೇ ಪೂರ್ವದಲ್ಲಿ ಬ್ರಹ್ಮಕಪಾಲವನ್ನು ಭೂಮಿಗಿಳಿಸಿದನು. ಕಪಾಲವು ನೆಲವನ್ನು ಸೋಕಿದ ಕ್ಷಣದಲ್ಲಿಯೇ ಅಲ್ಲಿ ಅದ್ಭುತವಾದ ಲಿಂಗವೊಂದುದ್ಭವಿಸಿತು.

೫. ಕಪಾಲಮೋಚನವೆಂಬ ಈ ಲಿಂಗವು ಸಕಲಪಾತಕಗಳನ್ನೂ ನಾಶ ಮಾಡುವುದು. ಆ ಲಿಂಗಕ್ಕೆ ನೂರು ಪಲಗಳ ತುಪ್ಪದಿಂದ ಅಭಿಷೇಕವನ್ನು ಮಾಡಿಸಬೇಕು.

ತದರ್ಧಾಽರ್ಧೇನ ಪಾದೇನ ವಿತ್ತಶಾಠ್ಯವಿವರ್ಜಿತಃ ।
ಕಾಲೇ ಪ್ರೂರ್ಣೇ ಸ ವಿಪ್ರೇಂದ್ರ ಶಿವಲೋಕೇ ಮಹೀಯತೇ ॥ ೬ ॥
ನಮಸ್ಕೃತ್ಯ ತತೋ ಗಚ್ಛೇತ್ಕಪಿಲೇಶ್ವರಮುತ್ತಮಂ ।
ದರ್ಶನಾದಸ್ಯ ದೇವಸ್ಯ ಮುಚ್ಯತೇ ಬ್ರಹ್ಮಹತ್ಯಯಾ ॥ ೭ ॥
ಹನುಮತ್ಕೇಶ್ವರಂ ದೇವಂ ತತೋ ಗಚ್ಛೇತ್ಸಮಾಹಿತಃ ।
ಐಶ್ವರ್ಯಮತುಲಂ ವ್ಯಾಸ ದರ್ಶನಾದಸ್ಯ ಜಾಯತೇ ॥ ೮ ॥
ತತೋ ಗಚ್ಛೇನ್ಮಹಾದೇವಂ ಪೈಪ್ಪಲಾಖ್ಯಂ ಸನಾತನಂ ।
ಯಸ್ಯ ದರ್ಶನಮಾತ್ರೇಣ ಮುಕ್ತಿಃ ಸ್ಯಾದ್ದ್ವಿಜಸತ್ತಮ ॥ ೯ ॥
ಸ್ವಪ್ನೇಶ್ವರಂ ತತೋ ಗಚ್ಛೇದ್ಭಕ್ತಿಶ್ರದ್ಧಾಸಮನ್ವಿತಃ ।
ದರ್ಶನಾದಸ್ಯ ದೇವಸ್ಯ ದುಃಸ್ವಪ್ನಂ ಚ ವಿನಶ್ಯತಿ ॥ ೧೦ ॥
ತತೋ ಗಚ್ಛೇನ್ಮಹಾದೇವಮೀಶಾನಂ ವಿಶ್ವತೋಮುಖಂ ।
ಯಸ್ಯ ದರ್ಶನಮಾತ್ರೇಣ ವಿಶ್ವಸ್ಯೈವ ಪತಿರ್ಭವೇತ್ ॥ ೧೧ ॥

---

೬. ಅದರ ಅರ್ಧದಿಂದಾಗಲಿ, ಅದರಲ್ಲೂ ಅರ್ಧದಿಂದಾಗಲಿ, ಅದರಲ್ಲೂ ನಾಲ್ಕನೆಯ ಭಾಗದಿಂದಾಗಲಿ ಅಭಿಷೇಕವನ್ನು ಮಾಡಿಸಬಹುದು. ಹಣದ ಲೋಭವನ್ನು ಮಾತ್ರ ಮಾಡಬಾರದು. ಎಲೈ ಬ್ರಾಹ್ಮಣಶ್ರೇಷ್ಠನೆ! ಕಾಲವೊದಗಿ ಬರಲು ಅವನು ಶಿವಲೋಕದಲ್ಲಿ ಪೂಜಿತನಾಗುವನು.

೭. ಕಪಾಲಮೋಚನೇಶ್ವರನನ್ನು ನಮಸ್ಕರಿಸಿ ಮಹಾಮಹಿಮನಾದ ಕಪಿಲೇಶ್ವರನ ಬಳಿಗೆ ಹೋಗಬೇಕು. ಆ ದೇವನನ್ನು ದರ್ಶನಮಾಡುವುದರಿಂದ ಬ್ರಹ್ಮಹತ್ಯೆಯೂ ಕಳೆದುಹೋಗುವುದು.

೮. ಬಳಿಕ ಸಾವಧಾನಮನಸ್ಕನಾಗಿ ಹನುಮತ್ಕೇಶ್ವರನನ್ನು ನೋಡಬೇಕು. ವ್ಯಾಸಮಹರ್ಷಿಯೆ! ಈ ಲಿಂಗದ ದರ್ಶನವನ್ನು ಮಾಡಿದವನಿಗೆ ಅಪರಿಮಿತವಾದ ಐಶ್ವರ್ಯವು ಲಭಿಸುವುದು.

೯. ಅಲ್ಲಿಂದ ಪೈಪ್ಪಲೇಶ್ವರವೆಂಬ ಸನಾತನವಾದ ಮಾಹೇಶ್ವರಲಿಂಗದ ಬಳಿಗೆ ಹೋಗಬೇಕು. ಎಲೈ ದ್ವಿಜಶ್ರೇಷ್ಠನೆ! ಅದರ ದರ್ಶನಮಾತ್ರದಿಂದಲೇ ಮಾನವನಿಗೆ ಸಂಸಾರಬಂಧದಿಂದ ಬಿಡುಗಡೆಯಾಗುವುದು.

೧೦. ಆಮೇಲೆ ಭಕ್ತಿಶ್ರದ್ಧೆಗಳಿಂದ ಕೂಡಿದವನಾಗಿ ಸ್ವಪ್ನೇಶ್ವರನನ್ನು ನೋಡಬೇಕು. ಆ ದೇವನ ದರ್ಶನದಿಂದ ದುಸ್ಸ್ವಪ್ನಗಳನ್ನು ಕಂಡ ಅಮಂಗಳಗಳು ನಾಶವನ್ನು ಹೊಂದುವುವು. ದುಸ್ಸ್ವಪ್ನಗಳೂ ಕಾಣುವುದಿಲ್ಲ.

೧೧. ಬಳಿಕ ಸರ್ವತೋಮುಖವಾಗಿ ನೆಲಸಿರುವ ಈಶಾನೇಶ್ವರನನ್ನು ಸೇರಬೇಕು. ಆ ಮಹಾಲಿಂಗವನ್ನು ದರ್ಶನಮಾಡುವುದರಿಂದ ಸಕಲ ಬ್ರಹ್ಮಾಂಡಕ್ಕೂ ಅಧಿಪತಿಯಾಗುವನು.

ಸೋಮೇಶ್ವರಂ ತತೋ ಗಚ್ಛೇಜ್ಜಿತಕ್ರೋಧೋ ಜಿತೇಂದ್ರಿಯಃ ।
ಕುಷ್ಠರೋಗಾದಿದೋಷೇಭ್ಯೋ ದರ್ಶನಾದಸ್ಯ ಮುಚ್ಯತೇ ॥ ೧೨ ॥
ವೈಶ್ವಾನರೇಶ್ವರಂ ವ್ಯಾಸ ತತೋ ಗಚ್ಛೇತ್ಸಮಾಹಿತಃ ।
ತಸ್ಯ ವೃದ್ಧಿಃ ಸದಾ ಲೋಕೇ ಜಾಯತೇ ತಸ್ಯ ದರ್ಶನಾತ್ ॥ ೧೩ ॥
ಬೀಜಪೂರಕಹಸ್ತಂ ತು ಲಕುಲೀಶಂ ತತೋ ವ್ರಜೇತ್ ।
ರುದ್ರತ್ವಂ ದರ್ಶನಾತ್ತಸ್ಯ ಜಾಯತೇ ನಾಽತ್ರ ಸಂಶಯಃ ॥ ೧೪ ॥
ತತೋ ಗಚ್ಛೇನ್ಮಹಾದೇವಂ ಗದ್ಯಾಣೇಶ್ವರಮುತ್ತಮಂ ।
ಯಸ್ಯ ದರ್ಶನಮಾತ್ರೇಣ ಜಾಯಂತೇ ಸರ್ವಸಿದ್ಧಯಃ ॥ ೧೫ ॥
ಅಭ್ಯರ್ಥಿತಃ ಸದಾ ದೇವೈಃ ಪೂಜಿತಃ ಸಿದ್ಧಿಕಾರಣಾತ್ ।
ತೇನಾಽಭ್ಯರ್ಥಿತೇಶ್ವರೋಽಯಂ ವಿಖ್ಯಾತೋ ವಿಘ್ನನಾಯಕಃ ॥ ೧೬ ॥
ವಯೋವೃದ್ಧಂ ತತೋ ಗಚ್ಛೇನ್ಮಹಾಕಾಲಂ ಸನಾತನಂ ।
ನ ರೋಗೋ ನ ಜರಾ ವ್ಯಾಧಿರ್ದರ್ಶನಾನ್ನಾಽತ್ರ ಸಂಶಯಃ ॥ ೧೭ ॥

---

೧೨. ಕೋಪವನ್ನೂ, ಇಂದ್ರಿಯಗಳನ್ನೂ ಜಯಿಸಿದ ಮೇಲೆ ಸೋಮೇಶ್ವರನ ದರ್ಶನವನ್ನು ಮಾಡಬೇಕು. ಆ ಲಿಂಗದ ದರ್ಶನದಿಂದ ದೇಹಗತಗಳಾದ ಕುಷ್ಠಾದಿ ಮಹಾರೋಗಗಳೂ ನಾಶವಾಗುವುವು.

೧೩. ಎಲೈ ವ್ಯಾಸಮುನಿಯೆ! ಸೋಮೇಶ್ವರನನ್ನು ನೋಡಿದ ಮೇಲೆ ವೈಶ್ವಾನರೇಶ್ವರನನ್ನು ನೋಡಬೇಕು. ಆ ದೇವನ ದರ್ಶನದಿಂದ ಭಕ್ತನ ಸಂತಾನವು ಸದಾ ವೃದ್ಧಿಯನ್ನು ಪಡೆಯುತ್ತಿರುವುದು.

೧೪. ಬಳಿಕ ಕೈಯಲ್ಲಿ ಬೀಜಪೂರಫಲವನ್ನು ಹಿಡಿದಿರುವ ಲಕುಲೀಶನ ಬಳಿಗೆ ಹೋಗಬೇಕು. ಆ ಲಿಂಗದ ದರ್ಶನದಿಂದ ರುದ್ರಪದವಿಯು ಲಭಿಸುವುದರಲ್ಲಿ ಸಂದೇಹವಿಲ್ಲ.

೧೫. ಬಳಿಕ ಉತ್ತಮನಾದ ಗದ್ಯಾಣೇಶ್ವರನೆಂಬ ಶಿವಲಿಂಗವನ್ನು ನೋಡಬೇಕು. ಅದರ ದರ್ಶನವನ್ನು ಮಾಡುವುದರಿಂದ ಸಕಲಸಿದ್ಧಿಗಳೂ ಕೈಗೂಡುವುವು.

೧೬. ತಮ್ಮ ಕಾರ್ಯಗಳ ಸಂಸಿದ್ಧಿಗಾಗಿ ದೇವತೆಗಳು ನಿತ್ಯವೂ ಈ ದೇವನನ್ನು ಪ್ರಾರ್ಥಿಸಿ ಪೂಜಿಸುತ್ತಿರುವರು. ಆದುದರಿಂದ ವಿಘ್ನಗಳನ್ನು ನಾಶಮಾಡುವ ಈ ದೇವನಿಗೆ ಅಭ್ಯರ್ಥಿತೇಶ್ವರನೆಂದೂ ಹೆಸರಾಗಿರುವುದು.

೧೭. ಅಲ್ಲಿಂದ ಮಹಾಕಾಲನೂ, ಸನಾತನನೂ ಆದ ವಯೋವೃದ್ಧೇಶ್ವರನ ಬಳಿಗೆ ಹೋಗಬೇಕು. ಆ ಲಿಂಗದ ದರ್ಶನವನ್ನು ಮಾಡಿದವರಿಗೆ ರೋಗವಾಗಲಿ ಮುಪ್ಪಾಗಲಿ ಸಂಭವಿಸುವುದಿಲ್ಲ. ಇದು ನಿಸ್ಸಂದೇಹವು.

ವಿಘ್ನನಾಶಂ ತತೋ ಗಚ್ಛೇತ್ಪ್ರಾಣೇಶಂ ಬಲಮುತ್ತಮಂ ।
ಸ್ನಾನಂ ಘಟಶತೈಸ್ತಸ್ಯ ಕುರ್ಯಾದ್ಭಕ್ತ್ಯಾ ಸಮಾಹಿತಃ ॥ ೧೮ ॥
ತಸ್ಯ ಚೈವ ಕೃತೇ ಸ್ನಾನೇ ಲಭ್ಯಂತೇ ಸರ್ವಸಿದ್ಧಯಃ ।
ಸ್ವರ್ಗಶ್ಚಾಽಪಿ ಸದಾ ವ್ಯಾಸ ದರ್ಶನಾದಸ್ಯ ಜಾಯತೇ ॥ ೧೯ ॥
ತನ್ನಯಂ ತಮನೂಲ್ಲಂಘ್ಯ ದಂಡಪಾಣಿಂ ತತೋ ವ್ರಜೇತ್ ।
ಯಸ್ಯ ದರ್ಶನಮಾತ್ರೇಣ ಯಮಲೋಕೋ ನ ದೃಶ್ಯತೇ ॥ ೨೦ ॥
ಪುಷ್ಪದಂತಂ ತತೋ ಗಚ್ಛೇದ್ಭಕ್ತಿಶ್ರದ್ಧಾಸಮನ್ವಿತಃ ।
ಯಸ್ಯ ದರ್ಶನಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೨೧ ॥
ಗುಹ್ಯಂ ಚೈವ ಮಹಾಕಾಲಂ ತತೋ ಗಚ್ಛೇತ್ಸಮಾಹಿತಃ ।
ಯಸ್ಯ ದರ್ಶನಮಾತ್ರೇಣ ಗುಹ್ಯಪಾಪೈಃ ಪ್ರಮುಚ್ಯತೇ ॥ ೨೨ ॥
ತತೋ ಗಚ್ಛೇತ್ಸಮಾಧಿಸ್ಥೋ ದುರ್ವಾಸೇಶ್ವರಮುತ್ತಮಂ ।
ಯಸ್ಯ ದರ್ಶನಮಾತ್ರೇಣ ಕೃತಕೃತ್ಯೋ ನರೋ ಭವೇತ್ ॥ ೨೩ ॥

---

೧೮. ಸಕಲ ವಿಘ್ನಾಪಹಾರಕನೂ, ಮಹಾಬಲಿಷ್ಠನೂ ಆದ ಪ್ರಾಣೇಶ್ವರನನ್ನು ಬಳಿಕ ನೋಡಬೇಕು. ಆ ಮಹಾಲಿಂಗಕ್ಕೆ ಸಮಾಹಿತಮನಸ್ಕನಾಗಿ ಒಂದು ನೂರು ಕೊಡಗಳ ನೀರಿನಿಂದ ಅಭಿಷೇಕವನ್ನು ಮಾಡಿಸಬೇಕು.

೧೯. ಇಂತು ಸ್ನಾನವನ್ನು ಮಾಡಿಸಿದವನಿಗೆ ಸಕಲ ಸಿದ್ಧಿಗಳೂ ಲಭಿಸುವುವು. ವ್ಯಾಸಮುನಿಯೆ! ಈ ಲಿಂಗದ ದರ್ಶನಮಾತ್ರದಿಂದಲೇ ಯಾವಾಗಲೂ ಸ್ವರ್ಗವು ಲಭಿಸುವುದು.

೨೦. ಬಳಿಕ ಕ್ರಮೋಲ್ಲಂಘನವನ್ನು ಮಾಡದೆ ದಂಡಪಾಣಿಯ ಬಳಿಗೆ ಹೋಗಬೇಕು. ಆತನ ದರ್ಶನವನ್ನು ಮಾಡಿದವನಿಗೆ ಯಮಲೋಕದ ದರ್ಶನವಾಗುವುದಿಲ್ಲವು.

೨೧. ಭಕ್ತಿಶ್ರದ್ಧಾಸಹಿತನಾಗಿ ಪುಷ್ಪದಂತನನ್ನು ನೋಡಬೇಕು. ಆ ದೇವತೆಯ ದರ್ಶನವನ್ನು ಮಾಡುವುದರಿಂದ ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೨೨. ಬಳಿಕ ಪ್ರಶಾಂತಮನಸ್ಸಿನಿಂದ ಗುಹ್ಯೇಶ್ವರನೆಂಬ ಮಹಾಲಿಂಗವನ್ನು ನೋಡಬೇಕು. ಆ ಲಿಂಗದ ದರ್ಶನದಿಂದ ಆಂತರಪಾತಕಗಳು ಪರಿಹಾರವಾಗುವುವು.

೨೩. ಅಲ್ಲಿಂದ ಸರ್ವೋತ್ತಮವಾದ ದೂರ್ವಾಸೇಶ್ವರನ ಸನ್ನಿಧಿಗೆ ಹೋಗಬೇಕು. ಆ ಲಿಂಗದ ದರ್ಶನ ಮಾತ್ರದಿಂದಲೇ ಮನುಷ್ಯನು ಕೃತಕೃತ್ಯನಾಗುವನು.

ಶ್ವಾಸಾಽವರೋಧನಂ ಕೃತ್ವಾ ದುರ್ವಾಸಸಃ ಸಮೀಪತಃ ।
ಗೌರೀಂ ಗತ್ವಾ ಮಹಾದುರ್ಗಾಂ ತ್ಯಜೇಚ್ಛ್ವಾಸಮನಂತರಂ ॥ ೨೪ ॥
ತತ್ರೋಚ್ಛ್ವಾಸೋ ವಿಮೋಕ್ತವ್ಯಸ್ತಾಮಭ್ಯರ್ಚ್ಯ ತು ಸರ್ವಥಾ ।
ಕಾಲೇಶ್ವರಂ ತತೋ ಗಚ್ಛೇದ್ದೇವದೇವಂ ಮಹೇಶ್ವರಂ ।
ಯಸ್ಯ ದರ್ಶನಮಾತ್ರೇಣ ಯಮಲೋಕಂ ನ ಪಶ್ಯತಿ ॥ ೨೫ ॥
ವಿಧೀಶಂ ಚ ತತೋ ಗಚ್ಛೇದ್ದೇವದೇವಂ ಮಹೇಶ್ವರಂ ।
ಯಸ್ಯ ದರ್ಶನಮಾತ್ರೇಣ ಬಧಿರತ್ವಂ ನ ಜಾಯತೇ ॥ ೨೬ ॥
ಕೀರ್ತಯೇದಾತ್ಮನೋ ನಾಮ ಸ್ಥಾನಂ ಗೋತ್ರಂ ಚ ತಸ್ಯ ವೈ ।
ನ ಕೀರ್ತಯೇದ್ಯದಾ ನಾಮ ಸಾ ಯಾತ್ರಾ ವಿಫಲೀಭವೇತ್ ॥ ೨೭ ॥
ದೇವಸ್ಯಾಽಗ್ರೇ ತತೋ ವ್ಯಾಸ ಉಪವಿಶ್ಯ ಸಮಾಹಿತಃ ।
ಭಕ್ತಿಯುಕ್ತಸ್ತತೋ ಬ್ರೂಯಾನ್ನಮಸ್ಕೃತ್ವಾ ಪುನಃ ಪುನಃ ॥ ೨೮ ॥
ಮಯಾ ಸಮರ್ಪಿತಾ ಪೂಜಾ ತ್ವತ್ಪ್ರಸಾದಾನ್ಮಹೇಶ್ವರ ।
ಸಂಸಾರಸಾಗರಾದ್ಘೋರಾನ್ಮಾಮುದ್ಧರ ಜಗತ್ಪತೇ ॥ ೨೯ ॥

---

೨೪. ಈ ದುರ್ವಾಸೇಶ್ವರನ ಸಮೀಪದಲ್ಲಿ ಉಸಿರಾಡುವುದನ್ನು ನಿಲ್ಲಿಸಿಕೊಂಡು ಹಾಗೆಯೇ ಮಹಾದುರ್ಗಿಯೆಂಬ ಹೆಸರಿನಿಂದ ಪಾರ್ವತೀದೇವಿಯಿರುವಲ್ಲಿಗೆ ಹೋಗಿ ಅಲ್ಲಿ ಉಸಿರನ್ನು ಬಿಡಬೇಕು.

೨೫. ಅಲ್ಲಿ ಉಸಿರನ್ನು ಬಿಟ್ಟು ಸರ್ವಸಂಪತ್ತಿನಿಂದ ಆ ದೇವಿಯನ್ನು ಪೂಜಿಸಬೇಕು. ಅಲ್ಲಿಂದ ದೇವದೇವನೂ, ಮಹೇಶ್ವರನೂ ಆದ ಕಾಲೇಶ್ವರನ ಬಳಿಗೆ ಹೋಗಬೇಕು. ಆತನ ದರ್ಶನದಿಂದಲೇ ಮನುಷ್ಯನು ಯಮಲೋಕವನ್ನು ನೋಡುವುದಿಲ್ಲ.

೨೬. ಅಲ್ಲಿಂದ ಮಹಾದೇವನಾದ ವಿಧೀಶನನ್ನು ನೋಡಲು ಹೋಗಬೇಕು. ಆ ಮಹಾಲಿಂಗದ ದರ್ಶನದಿಂದ ಮನುಷ್ಯನಿಗೆ ಕಿವುಡುತನವುಂಟಾಗುವುದಿಲ್ಲ.

೨೭. ಆ ದೇವನ ಇದಿರಿನಲ್ಲಿ ಭಕ್ತನು ತನ್ನ ಹೆಸರು, ಊರು, ಗೋತ್ರಗಳ ಕೀರ್ತನವನ್ನು ಮಾಡಬೇಕು. ತನ್ನ ಹೆಸರನ್ನು ಯಾವನು ಹೇಳಿಕೊಳ್ಳುವುದಿಲ್ಲವೊ, ಅವನ ತೀರ್ಥಯಾತ್ರೆಯು ನಿಷ್ಫಲವಾಗುವುದು.

೨೮. ಅಯ್ಯಾ ವ್ಯಾಸನೆ! ಬಳಿಕ ಆ ದೇವನ ಇದಿರಿನಲ್ಲಿ ಶಾಂತಮನಸ್ಸಿನಿಂದ ಕುಳಿತುಕೊಂಡು ಭಕ್ತಿಯುಕ್ತನಾಗಿ ಮತ್ತೆ ಮತ್ತೆ ನಮಸ್ಕರಿಸಿ ಮುಂದೆ ಹೇಳುವ ಶ್ಲೋಕವನ್ನು ಹೇಳಬೇಕು.

೨೯. "ಮಹೇಶ್ವರ! ನಿನ್ನ ಅನುಗ್ರಹದಿಂದ ನನ್ನ ಯಾತ್ರೆಯು ಸಂಪೂರ್ಣವಾಗಿ ನಡೆಯಿತು. ಎಲೈ ಲೋಕೇಶ್ವರನೆ! ನನ್ನನ್ನು ಭಯಂಕರವಾದ ಈ ಸಂಸಾರ ಸಮುದ್ರದಿಂದ ಕಡೆಹಾಯಿಸು."

ಅನೇನ ವಿಧಿನಾ ಯಸ್ತು ಮಹಾಕಾಲಂ ಪ್ರದಕ್ಷಯೇತ್ ।
ಪ್ರದಕ್ಷಿಣೇ ಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ ೩೦ ॥
ಗೋಲಕ್ಷಂ ದ್ವಿಜಲಕ್ಷಾಯ ದತ್ವಾ ಯಲ್ಲಭತೇ ಫಲಂ ।
ತತ್ಫಲಂ ದೇವದೇವಸ್ಯ ಸಕೃದ್ದತ್ವಾ ಪ್ರದಕ್ಷಿಣಂ ॥ ೩೧ ॥
ಭಕ್ತ್ಯಾ ಪರಮಯಾ ಯುಕ್ತೋ ಮಹಾಕಾಲಂ ಪ್ರದಕ್ಷಯೇತ್ ।
ಪದೇ ಪದೇ ಯಜ್ಞಫಲಮಿತಿ ಮೇ ಶಂಕರೋಽಬ್ರವೀತ್ ॥ ೩೨ ॥
ಷಷ್ಟಿಕೋಟಿ ಸಹಸ್ರಾಣಿ ಷಷ್ಟಿಕೋಟಿ ಶತಾನಿ ಚ ।
ಪೂಜಿತಾನಿ ಭವಂತ್ಯತ್ರ ಯಾತ್ರೇಶ್ವರಸಮರ್ಚನಾತ್ ॥ ೩೩ ॥
ಯ ಏವಂ ಕುರುತೇ ಯಾತ್ರಾಂ ಶಿವಧ್ಯಾನಪರಾಯಣಃ ।
ಸಹಸ್ರದಕ್ಷಿಣಾಂ ದದ್ಯಾತ್ತಸ್ಯ ಪುಣ್ಯಫಲಂ ಶೃಣು ॥ ೩೪ ॥
ಸಪ್ತಜನ್ಮ ಕೃತಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೩೫ ॥
ಏವಂ ಯಾತ್ರಾಂ ಸಮಾಪ್ಯಾಽಥ ಗತ್ವಾ ನಿಜಗೃಹಂ ನರಃ ।
ಯಾತ್ರಾದೈವತಸಂಖ್ಯಾನ್ವೈ ಷಡ್ವಿಂಶತಿ ದ್ವಿಜೋತ್ತಮಾನ್ ॥ ೩೬ ॥

---

೩೦. ಈ ಪ್ರಕಾರವಾಗಿ ಯಾವನು ಮಹಾಕಾಲಕ್ಷೇತ್ರದ ಪ್ರದಕ್ಷಿಣೆಯನ್ನು ಮಾಡುವನೊ, ಅವನು ಸಪ್ತದ್ವೀಪಗಳೊಡಗೂಡಿದ ಸಕಲ ಭೂಮಂಡಲವನ್ನೂ ಪ್ರದಕ್ಷಿಣೆಮಾಡಿದಂತೆಯೇ ಸರಿ.

೩೧. ಒಂದು ಲಕ್ಷ ಬ್ರಾಹ್ಮಣರನ್ನು ಕರೆದು ಒಬ್ಬೊಬ್ಬರಿಗೂ ಒಂದೊಂದು ಗೋವನ್ನು ದಾನಮಾಡುವುದರಿಂದ ಯಾವ ಫಲವುಂಟೊ, ದೇವದೇವನ ಕ್ಷೇತ್ರಕ್ಕೆ ಮಾಡುವ ಒಂದೇ ಪ್ರದಕ್ಷಿಣದಿಂದಲೂ ಅದೇ ಫಲವು ಲಭಿಸುವುದು.

೩೨. ಅತ್ಯಂತವಾದ ಭಕ್ತಿಯಿಂದ ಕೂಡಿದವನಾಗಿ ಮಹಾಕಾಲೇಶ್ವರನಿಗೆ ಪ್ರದಕ್ಷಿಣೆಯನ್ನು ಮಾಡಬೇಕು. ಒಂದೊಂದು ಹೆಜ್ಜೆಗೂ ಯಜ್ಞದ ಫಲವುಂಟೆಂದು ಪರಮೇಶ್ವರನೇ ನನಗೆ ಹೇಳಿರುವನು.

೩೩. ಇಲ್ಲಿರುವ ಯಾತ್ರೇಶ್ವರನೊಬ್ಬನನ್ನು ಪೂಜಿಸಿದರೆ ಅರುವತ್ತಾರು ಸಾವಿರ ಕೋಟಿ ಸಂಖ್ಯೆಯ ಲಿಂಗಗಳನ್ನು ಪೂಜಿಸಿದಂತಾಗುವುದು.

೩೪. ಯಾವನು ಶಿವಧ್ಯಾನದಲ್ಲಿಯೇ ನಿರತನಾಗಿ ಈ ವಿಧವಾಗಿ ಯಾತ್ರೆಯನ್ನು ಮಾಡುವನೊ, ಅವನು ಯಾತ್ರಾಂತ್ಯದಲ್ಲಿ ಒಂದು ಸಾವಿರ ಜನರಿಗೆ ದಕ್ಷಿಣೆಯನ್ನು ಕೊಡಬೇಕು. ಅದರ ಪುಣ್ಯಫಲವನ್ನು ಕೇಳು.

೩೫. ಅವನು ಏಳು ಜನ್ಮಗಳಲ್ಲಿ ಮಾಡಿದ ಸಕಲ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

೩೬–೩೭. ಇಂತು ಯಾತ್ರೆಯನ್ನು ಸಾಂಗವಾಗಿ ನೆರವೇರಿಸಿ ಭಕ್ತನು ತನ್ನ ಮನೆಗೆ ಹೋಗಿ ಯಾತ್ರೆಯಲ್ಲಿ ನೋಡಿದ ಲಿಂಗಗಳ ಸಂಖ್ಯೆಯನ್ನನುಸರಿಸಿ

**ಭೋಜಯೇಚ್ಛಿವಭಕ್ತಾಂಶ್ಚ ಶಿವಧ್ಯಾನಪರಾಯಣಾನ್ ।**
**ಸವಸ್ತ್ರಾಂ ದಕ್ಷಿಣಾಂ ದತ್ವಾ ಸ್ವಾಸ್ಯಾಽನುಜ್ಞಾಂ ವಿಸರ್ಜಯೇತ್ ॥ ೩೭ ॥**
**ಯಾತ್ರಾಕ್ರಮೇಣ ಚೈಕೈಕಂ ದ್ವಾರಾಂತರಮನುವ್ರಜೇತ್ ।**
**ಧರ್ಮೋಪದೇಶಕೇ ಪಶ್ಚಾತ್ಸರ್ವೋಪಸ್ಕರಸಂಯುತಾಂ ॥ ೩೮ ॥**
**ಧೇನುಂ ಪಯಸ್ವಿನೀಂ ದದ್ಯಾದ್ವಿತ್ತಶಾಠ್ಯವಿವರ್ಜಿತಃ ।**
**ಭುಂಜೀತಾಽಥ ಸ್ವಯಂ ವ್ಯಾಸ ಸರ್ವಭೃತ್ಯಸಮನ್ವಿತಃ ॥ ೩೯ ॥**
**ದೀನಾಽನಾಥದರಿದ್ರಾಂಧವಿಕಲಾದ್ಯಾಂಶ್ಚ ಭೋಜಯೇತ್ ।**
**ಯದತ್ರ ಫಲಮುದ್ದಿಷ್ಟಂ ತದ್ವದಾಮಿ ಶೃಣುಷ್ವ ಮೇ ॥ ೪೦ ॥**
**ಕುಲಾನಾಂ ಶತಮುದ್ಧೃತ್ಯ ಮಾತಾಪಿತ್ರೋಃ ಸಮಾಹಿತಃ ।**
**ಕಲ್ಪಕೋಟಿಸಹಸ್ರಾಣಿ ಶಿವಲೋಕೇ ಸ ಮೋದತೇ ॥ ೪೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಮಹಾಕಾಲೇಶ್ವರ ಯಾತ್ರಾಮಾಹಾತ್ಮ್ಯವರ್ಣನಂ" ನಾಮ ತ್ರಯೋವಿಂಶೋಽಧ್ಯಾಯಃ**

---

ಇಪ್ಪತ್ತಾರುಮಂದಿ ಶಿವಭಕ್ತರೂ, ಶಿವಧ್ಯಾನನಿರತರೂ ಆದ ಬ್ರಾಹ್ಮಣೋತ್ತಮರಿಗೆ ಭೋಜನ ಮಾಡಿಸಬೇಕು. ಅವರಿಗೆ ಉಡುಗೊರೆಗಳನ್ನೂ, ದಕ್ಷಿಣೆಯನ್ನೂ ಕೊಟ್ಟು ಆಶೀರ್ವಾದವನ್ನು ಪಡೆದು ಬಳಿಕ ಅವರನ್ನು ಬೀಳ್ಕೊಡಬೇಕು.

೩೮–೩೯. ಯಾತ್ರೆಯ ಕ್ರಮದಿಂದಲೇ ಒಬ್ಬೊಬ್ಬ ಬ್ರಾಹ್ಮಣನನ್ನೂ ಹಿಂಬಾಲಿಸಿ ಹೆಬ್ಬಾಗಿಲಿನವರೆಗೂ ಬಿಟ್ಟು ಬರಬೇಕು. ಬಳಿಕ ಧರ್ಮವನ್ನುಪದೇಶಿಸುವ ಪುರೋಹಿತನಿಗೆ ಧನಲೋಭವನ್ನು ಮಾಡದೆ ಸರ್ವಾಲಂಕಾರಸಹಿತವಾದುದೂ ಹಾಲುಕರೆಯುತ್ತಿರುವುದೂ ಆದ ಗೋವನ್ನು ದಾನಮಾಡಬೇಕು. ಆತನನ್ನು ಬೀಳ್ಕೊಟ್ಟ ಬಳಿಕ ಸಕಲ ಬಂಧುಭೃತ್ಯಾದಿಗಳೊಡನೆ ತಾನೂ ಭೋಜನವನ್ನು ಮಾಡಬೇಕು.

೪೦. ಬಳಿಕ ಯಾಚಕರು, ಅನಾಥರು, ದರಿದ್ರರು, ಕುರುಡರು, ಅಂಗಹೀನರು ಮುಂತಾದವರಿಗೂ ಅನ್ನದಾನವನ್ನು ಮಾಡಬೇಕು. ಈ ಯಾತ್ರಾಕ್ರಮದಿಂದ ಲಭಿಸುವ ಫಲವನ್ನು ಹೇಳುವೆನು, ಕೇಳು.

೪೧. ಆ ಭಕ್ತನು ಶ್ರದ್ಧಾಳುವಾಗಿ ತನ್ನ ತಾಯಿತಂದೆಗಳ ಎರಡು ಕುಲಗಳಲ್ಲಿಯೂ ನೂರು ತಲೆಗಳವರನ್ನು ಉದ್ಧಾರಮಾಡುವುದಲ್ಲದೆ ತಾನೂ ಶಿವಲೋಕದಲ್ಲಿ ಸಾವಿರಕೋಟಿಕಲ್ಪಗಳವರೆಗೂ ಆನಂದದಿಂದಿರುವನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರಮಾಹಾತ್ಮ್ಯದಲ್ಲಿ "ಮಹಾಕಾಲೇಶ್ವರಯಾತ್ರಾಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

### ವಾಲ್ಮೀಕೇಶ್ವರಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ವಾಲ್ಮೀಕೇಶ್ವರಮಿತ್ಯಾಖ್ಯಂ ಯಸ್ತು ದೇವಂ ಪ್ರಪೂಜಯೇತ್ ।
ಮೌನೀ ಧ್ಯಾನಪರೋ ಭೂತ್ವಾ ಸ ಕವಿತ್ವಮವಾಪ್ನುಯಾತ್ ॥ ೧ ॥

ವ್ಯಾಸ ಉವಾಚ :—

ಕಥಮತ್ರ ಸಮುತ್ಪನ್ನಃ ಕೋಽಸೌ ವಾಲ್ಮೀಕೇಶ್ವರಃ ಪ್ರಭುಃ ।
ಯಸ್ಯ ದರ್ಶನಮಾತ್ರೇಣ ಕವಿತ್ವಮುಪಜಾಯತೇ ॥ ೨ ॥

ಸನತ್ಕುಮಾರ ಉವಾಚ :—

ಆಸೀದ್ವ್ಯಾಸ ಪುರಾ ವಿಪ್ರಃ ಸುಮತಿರ್ಭೃಗುವಂಶಜಃ ।
ರೂಪಯೌವನಸಂಪನ್ನಾ ತಸ್ಯ ಭಾರ್ಯಾಽಥ ಕೌಶಿಕೀ ॥ ೩ ॥
ತಸ್ಯ ಪುತ್ರಃ ಸಮುತ್ಪನ್ನೋಽಹ್ಯಗ್ನಿಶರ್ಮೇತಿ ನಾಮತಃ ।
ಸ ಪಿತ್ರಾ ಪ್ರೋಚ್ಯಮಾನೋಽಪಿ ವೇದಾಽಭ್ಯಾಸಂ ನ ಮನ್ಯತೇ ॥ ೪ ॥

---

### ಕನ್ನಡದ ಅನುವಾದ

#### ವಾಲ್ಮೀಕೇಶ್ವರಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಯಾವನು ಮೌನಪರನೂ, ಧ್ಯಾನಾಸಕ್ತನೂ ಆಗಿ ವಾಲ್ಮೀಕೇಶ್ವರನೆಂಬ ದೇವನನ್ನು ಪೂಜಿಸುವನೊ, ಅವನು ಕವಿತ್ವವನ್ನು ಮಾಡುವ ಶಕ್ತಿಯನ್ನು ಪಡೆಯುವನು.

೨. ವ್ಯಾಸನು ಹೇಳುತ್ತಾನೆ:—ವಾಲ್ಮೀಕೇಶ್ವರನ ದರ್ಶನಮಾತ್ರದಿಂದ ಕವಿತ್ವಶಕ್ತಿಯುಂಟಾಗುವುದೆಂದು ಹೇಳಿದೆಯಲ್ಲವೆ. ಈ ವಾಲ್ಮೀಕೇಶ್ವರನು ಯಾರು? ಇಲ್ಲಿ ಹೇಗೆ ಸ್ಥಾಪಿತನಾದನು?

೩. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಪೂರ್ವಕಾಲದಲ್ಲಿ ಭೃಗುವಂಶಸಂಭೂತನಾದ ಸುಮತಿಯೆಂಬ ಬ್ರಾಹ್ಮಣನೊಬ್ಬನಿದ್ದನು. ಆತನಿಗೆ ರೂಪಯೌವನಸಂಪನ್ನೆಯಾದ ಕೌಶಿಕಿಯೆಂಬಾಕೆಯು ಧರ್ಮಪತ್ನಿಯಾಗಿದ್ದಳು.

೪. ಆ ದಂಪತಿಗಳಿಗೆ ಅಗ್ನಿಶರ್ಮನೆಂಬ ಒಬ್ಬ ಮಗನಾದನು. ತಂದೆಯು ಬಹುವಿಧವಾಗಿ ಉಪದೇಶಮಾಡಿದರೂ ಅವನು ಕುಲಧರ್ಮವಾದ ವೇದಾಭ್ಯಾಸವನ್ನು ಮಾಡುತ್ತಿರಲಿಲ್ಲ.

**ತತೋ ಬಹುತಿಥೇ ಕಾಲೇ ಅನಾವೃಷ್ಟಿರಜಾಯತ ।**
**ತಸ್ಯಾಂ ವಿಪದ್ಗತಃ ಸೋಽಥ ದಕ್ಷಿಣಾಮಾಶ್ರಿತೋ ದಿಶಂ ॥ ೫ ॥**
**ತತೋಽಸೌ ಸುಮತಿರ್ವಿಪ್ರಃ ಸಭಾರ್ಯಃ ಸಸುತಸ್ತಥಾ ।**
**ವಿದೇಶಂ ಕಾನನಂ ಪ್ರಾಪ್ತಃ ಕೃತ್ವಾ ಚಾಶ್ರಮಮಾಶ್ರಿತಃ ॥ ೬ ॥**
**ಆಭೀರೈರ್ದಸ್ಯುಭಿಃ ಸಾರ್ಧಂ ಸಂಗೋಽಭೂದಗ್ನಿಶರ್ಮಣಃ ।**
**ಆಗಚ್ಛತಿ ಪಥಾ ತೇನ ಯಸ್ತಂ ಹಂತಿ ಸ ಪಾಪಕೃತ್ ॥ ೭ ॥**
**ಸ್ಮೃತಿರ್ನಷ್ಟಾ ಗತಾ ವೇದಾ ಗತಂ ಗೋತ್ರಂ ಗತಾ ಶ್ರುತಿಃ ।**
**ಕಸ್ಮಿಂಶ್ಚಿದಥ ಕಾಲೇ ತು ತೀರ್ಥಯಾತ್ರಾಪ್ರಸಂಗತಃ ॥ ೮ ॥**
**ಸಪ್ತರ್ಷಯಃ ಪಥಾ ತೇನ ಸುವ್ರತಾಃ ಸಮುಪಸ್ಥಿತಾಃ ।**
**ಅಗ್ನಿಶರ್ಮಾಽಥ ತಾನ್ ದೃಷ್ಟ್ವಾ ಹಂತುಕಾಮೋಽಬ್ರವೀದಿದಂ ॥ ೯ ॥**
**ವಸ್ತ್ರಾಣೀಮಾನಿ ಮುಚ್ಯಧ್ವಂ ಛತ್ರಿಕೋಪಾನಹೌ ತಥಾ ।**
**ಹಂತವ್ಯಾ ಹಿ ಮಯಾ ಯೂಯಂ ಗಂತಾರೋ ಯಮಸಾದನೇ ॥ ೧೦ ॥**

---

೫. ಹೀಗೆಯೇ ಬಹಳ ದಿನಗಳು ಕಳೆಯಲು ಆತನಿದ್ದ ದೇಶದಲ್ಲಿ ಮಳೆಯಿಲ್ಲದೆ ಕ್ಷಾಮವುಂಟಾಗಲು ಆ ಬ್ರಾಹ್ಮಣನು ದಕ್ಷಿಣದಿಕ್ಕಿಗೆ ಪ್ರಯಾಣವನ್ನು ಬೆಳೆಸಿದನು.

೬. ಇಂತು ಸುಮತಿಯೆಂಬ ಆ ಬ್ರಾಹ್ಮಣನು ಪತ್ನೀಪುತ್ರಸಮೇತನಾಗಿ ಬಂದು ಜನರಹಿತವಾದ ಅರಣ್ಯವನ್ನು ಪ್ರವೇಶಿಸಿ ಅಲ್ಲಿಯೇ ಆಶ್ರಮವೊಂದನ್ನು ಕಟ್ಟಿಕೊಂಡು ವಾಸಮಾಡತೊಡಗಿದನು.

೭. ಆ ಅಗ್ನಿಶರ್ಮನಿಗೆ ಬೇಡರು, ಕಳ್ಳಕಾಕರರೊಡನೆ ಸಹವಾಸವು ಬೆಳೆದು ಬಂದಿತು. ಅವನೂ ಪಾಪವನ್ನು ಮಾಡುವವನಾಗಿ ಆ ದಾರಿಯಲ್ಲಿ ಬಂದ ಪ್ರತಿಯೊಬ್ಬನನ್ನೂ ಕೊಂದುಹಾಕುತ್ತಿದ್ದನು.

೮-೯. ಅವನಿಗೆ ಸ್ಮೃತಿಯು ನಷ್ಟವಾಯಿತು. ವೇದವಿದ್ಯೆಯು ನಾಶವನ್ನು ಹೊಂದಿತು. ಕುಲವೂ ಕಳಂಕಿತವಾಯಿತು. ಸತ್ಕೀರ್ತಿಯೂ ಮಣ್ಣುಪಾಲಾಯಿತು. ಹೀಗೆ ಕೆಲವು ಕಾಲವು ಕಳೆಯಲು ವ್ರತಪರಾಯಣರಾದ ಸಪ್ತರ್ಷಿಗಳು ತೀರ್ಥಯಾತ್ರೆಯನ್ನು ಮಾಡುವ ಪ್ರಸಂಗದಲ್ಲಿ ಆ ಮಾರ್ಗವಾಗಿ ಬರುತ್ತಿದ್ದರು. ಅವರನ್ನು ಕಂಡು ಅಗ್ನಿಶರ್ಮನು ಕೊಲ್ಲಲೆಳಸಿ ಅವರೊಡನೆ ಹೇಳಿದನು.

೧೦. ನಿಮ್ಮ ವಸ್ತ್ರಗಳನ್ನು ಬಿಚ್ಚಿಡಿರಿ. ಛತ್ರಿಗಳನ್ನೂ, ಪಾದುಕೆಗಳನ್ನೂ ಕೊಡಿರಿ. ನನ್ನಿಂದ ನೀವು ಮರಣವನ್ನು ಹೊಂದಿ ಇಂದು ಯಮನಗರಿಗೆ ಹೋಗುವವರಾಗಿರುವಿರಿ.

**ತಸ್ಯ ತದ್ವಚನಂ ಶ್ರುತ್ವಾ ಅತ್ರಿರ್ವಚನಮಬ್ರವೀತ್ ।**
**ಅಸ್ಮತ್ಪೀಡನಜಂ ಪಾಪಂ ಕಥಂ ತೇ ಹೃದಿ ವರ್ತತೇ ।**
**ವಯಂ ತಪಸ್ವಿನೋ ಭೂತ್ವಾ ತೀರ್ಥಯಾತ್ರಾಕೃತೋದ್ಯಮಾಃ ॥ ೧೧ ॥**

**ಅಗ್ನಿಶರ್ಮೋವಾಚ :—**

**ಮಮಾಽಸ್ತಿ ಮಾತಾಽಥ ಪಿತಾ ಸುತೋ ಭಾರ್ಯಾ ಗರೀಯಸೀ ।**
**ಪೋಷಯಾಮಿ ಸದಾ ತಾಂಸ್ತು ಏತನ್ಮೇ ಹೃದಿ ಸಂಸ್ಥಿತಂ ॥ ೧೨ ॥**

**ಅತ್ರಿರುವಾಚ :—**

**ಪಿತ್ರಾದೀನಾಶು ಪೃಚ್ಛಸ್ವ ಸ್ವಕರ್ಮೋಪಾರ್ಜಿತಂ ಪ್ರತಿ ।**
**ಯದ್ಯುಷ್ಮದರ್ಥಂ ಕ್ರಿಯತೇ ಪಾಪಂ ತತ್ಕಸ್ಯ ಕಥ್ಯತಾಂ ॥ ೧೩ ॥**
**ಯದಿ ತೇ ಕಥಯಂತಿಸ್ಮ ಮಾ ವೃಥಾ ಪ್ರಾಣಿನೋ ವಧೀಃ ॥ ೧೪ ॥**

**ಅಗ್ನಿಶರ್ಮೋವಾಚ :—**

**ನ ಕದಾಚಿನ್ಮಯಾ ತೇ ತು ಸಂಪೃಷ್ಟಾ ಈದೃಶಂ ವಚಃ ।**
**ಯುಷ್ಮಾಕಂ ವಚಸಾ ಮೇಽದ್ಯ ಪ್ರತಿಬೋಧಃ ಪ್ರವರ್ತತೇ ॥ ೧೫ ॥**

---

೧೧. ಅವನ ನಿಷ್ಠುರವಾಕ್ಯಗಳನ್ನು ಕೇಳಿ ಅತ್ರಿಮಹರ್ಷಿಯು ಹೇಳತೊಡಗಿದನು. ನಮ್ಮನ್ನು ಕೊಲ್ಲುವುದರಿಂದುಂಟಾಗುವ ಪಾತಕವು ನಿನ್ನ ಮನಸ್ಸಿನಲ್ಲಿ ಪರಿಣಮಿಸಿದುದೆಂತು? ನಾವಾದರೊ ಕೇವಲ ತಪೋನಿರತರಾಗಿರುವವರು. ತೀರ್ಥಯಾತ್ರೆಗಳನ್ನು ಮಾಡುವ ಪ್ರಯತ್ನದಲ್ಲಿರುವವರು.

೧೨. ಅಗ್ನಿಶರ್ಮನು ಹೇಳುತ್ತಾನೆ:—ನನಗೂ ತಂದೆ, ತಾಯಿ, ಮಗ, ಪ್ರೀತ್ಯಾಸ್ಪದಳಾದ ಹೆಂಡತಿ ಎಲ್ಲರೂ ಇರುವರು. ಈ ಕಾರ್ಯದಿಂದಲೇ ಅವರನ್ನು ಪೋಷಿಸುತ್ತಿರುವೆನು. ಇಷ್ಟುಮಾತ್ರವೇ ನನ್ನ ಮನಸ್ಸಿನಲ್ಲಿರುವ ಅಭಿಪ್ರಾಯವು.

೧೩. ಅತ್ರಿಯು ಹೇಳುತ್ತಾನೆ:—ನೀನು ಹೋಗಿ ನಿನ್ನ ತಂದೆಯೇ ಮೊದಲಾದವರನ್ನು ಕುರಿತು ನೀನು ಸಂಪಾದಿಸಿರುವ ಪಾಪರಾಶಿಯ ವಿಷಯವಾಗಿ "ನಿಮ್ಮನ್ನು ಪೋಷಿಸಲು ನಾನು ಮಾಡಿರುವ ಪಾಪದಲ್ಲಿ ಯಾರು ಭಾಗಿಗಳಾಗುವಿರಿ?" ಎಂದು ಪ್ರಶ್ನೆಮಾಡು.

೧೪. ಅವನು ಅದಕ್ಕೆ ಒಪ್ಪಿಕೊಂಡು ಮಾತನಾಡುವರೆ ಎಂಬುದನ್ನು ನೋಡು. ಸುಮ್ಮನೆ ಪ್ರಾಣಿಗಳನ್ನು ಕೊಲ್ಲಬೇಡ.

೧೫. ಅಗ್ನಿಶರ್ಮನು ಹೇಳುತ್ತಾನೆ:—ನಾನು ಯಾವಾಗಲೂ ಅವರಿಗೆ ಈ ವಿಧವಾದ ಪ್ರಶ್ನೆಯನ್ನು ಮಾಡಲಿಲ್ಲ. ನಿಮ್ಮ ಮಾತಿನಿಂದ ಇಂದು ನನಗೆ ಜ್ಞಾನೋದಯವಾಗುತ್ತಿರುವುದು.

ಗತ್ವಾ ಪೃಚ್ಛಾಮಿ ತಾನ್ಸರ್ವಾನ್ಕಸ್ಯ ಭಾವಶ್ಚ ಕೀದೃಶಃ ।
ಯೂಯಮತ್ರೈವ ತಿಷ್ಠಧ್ವಂ ಯಾವದಾಗಮನಂ ಮಮ ॥ ೧೬ ॥
ಇತ್ಯುಕ್ತ್ವಾ ತಾನ್ ಜಗಾಮಾಽಽಶು ಪಿತರಂ ಸ್ವಮುವಾಚ ಹ ।
ಧರ್ಮಸ್ಯ ಪ್ರತಿಘಾತೇನ ಪ್ರಾಣಿನಾಂ ಪೀಡನೇನ ಚ ॥ ೧೭ ॥
ಸುಮಹದ್ದೃಶ್ಯತೇ ಪಾಪಂ ಕಸ್ಯ ತತ್ಕಥ್ಯತಾಂ ಮಮ ।
ಪಿತಾ ಪ್ರಾಹ ತಥಾ ಮಾತಾ ನಾಽಪುಣ್ಯಮಾವಯೋರಿಹ ॥ ೧೮ ॥
ತ್ವಂ ಜಾನಾಸಿ ಯತ್ಕುರುಷೇ ಕೃತಂ ಭಾವ್ಯಂ ಪುನಸ್ತ್ವಯಾ ।
ತಯೋಸ್ತದ್ವಚನಂ ಶ್ರುತ್ವಾ ಭಾರ್ಯಾ ವಚನಮಬ್ರವೀತ್ ॥ ೧೯ ॥
ತಯಾಽಪ್ಯುಕ್ತಂ ನ ಮೇ ಪಾಪಂ ಪಾಪಮೇತತ್ತವೈವ ಹಿ ।
ತದ್ವಾಕ್ಯಮಬ್ರವೀತ್ಪುತ್ರಂ ಬಾಲೋಽಹಮಿತಿ ಸೋಽಬ್ರವೀತ್ ॥ ೨೦ ॥
ತಜ್ಜ್ಞಾತ್ವಾ ಹೃದಯಂ ತೇಷಾಂ ಚೇಷ್ಟಿತಂ ಚೈವ ತತ್ತ್ವತಃ ।
ನಷ್ಟೋಽಹಮಿತಿ ಮನ್ವಾನಃ ಶರಣಂ ಮೇ ತಪಸ್ವಿನಃ ॥ ೨೧ ॥

---

೧೬. ನಾನು ಹೋಗಿ ಅವರೆಲ್ಲರನ್ನೂ ಯಾರ ಯಾರ ಭಾವವು ಹೇಗಿರುವುದೆಂಬುದನ್ನು ಕೇಳಿ ತಿಳಿದುಬರುವೆನು. ನೀವೂ ನಾನು ಹಿಂದಿರುಗಿ ಬರುವವರೆಗೂ ಇಲ್ಲಿಯೇ ನಿಂತಿರಿ.

೧೭–೧೮. ಇಂತೆಂದು ತನ್ನ ಪರಿವಾರದವರನ್ನು ಕಲೆತು ತಂದೆಯೊಡನೆ ಹೇಳತೊಡಗಿದನು. "ಧರ್ಮವನ್ನು ತ್ಯಾಗಮಾಡಿದುದರಿಂದಲೂ ಪ್ರಾಣಿಹಿಂಸೆಯನ್ನು ಮಾಡಿದುದರಿಂದಲೂ ನನಗೆ ಮಹತ್ತರವಾದ ಪಾತಕವು ಅಂಟಿಕೊಂಡಿರುವುದು. ಅದನ್ನು ಯಾರು ತೆಗೆದುಕೊಳ್ಳುವಿರೆಂಬುದನ್ನು ನನಗೆ ಹೇಳಿರಿ." ಆಗ ತಂದೆಯೂ ತಾಯಿಯೂ "ನಿನ್ನ ಪಾಪದಲ್ಲಿ ನಮಗೆ ಲೇಶಮಾತ್ರವೂ ಸಂಪರ್ಕವಿಲ್ಲ" ಎಂದು ಹೇಳಿದರು.

೧೯. "ನೀನು ಮಾಡುವ ಕೆಲಸವನ್ನು ನೀನೇ ಬಲ್ಲೆ. ನಿನ್ನ ಕರ್ಮದ ಫಲವನ್ನು ನೀನೇ ಅನುಭವಿಸಬೇಕು" ಎಂಬ ಅವರ ಮಾತನ್ನು ಕೇಳಿ ಹೆಂಡತಿಯೂ ಹೇಳತೊಡಗಿದಳು.

೨೦. ಪತ್ನಿಯೂ "ಈ ಪಾಪವು ನನಗೆ ಎಳ್ಳಷ್ಟೂ ಅಂಟಲಾರದು; ಪಾಪವೆಲ್ಲವೂ ನಿನಗೆ ಸೇರಿದುದೇ" ಎನ್ನಲು ಮಗನನ್ನೂ ಅದೇರೀತಿ ಪ್ರಶ್ನೆಮಾಡಿದನು. ಮಗನಾದರೊ "ನಾನು ಕೇವಲ ಬಾಲಕನು; ನನಗೇನು ತಿಳಿಯುವುದು" ಎಂದುಬಿಟ್ಟನು.

೨೧. ಅವರ ಮನಸ್ಸಿನ ಅಭಿಪ್ರಾಯವನ್ನೂ ವ್ಯಾಪಾರವನ್ನೂ ಚೆನ್ನಾಗಿ ತಿಳಿದ ಅಗ್ನಿಶರ್ಮನು ತನ್ನಲ್ಲಿಯೇ, "ಆಹಾ! ನಾನು ಅನ್ಯಾಯವಾಗಿ ಹಾಳಾದೆನು; ಇನ್ನು ನನಗೆ ಆ ತಪಸ್ವಿಗಳೇ ಗತಿಕಾಣಿಸುವವರು" ಎಂದು ಯೋಚಿಸಿದನು.

ಕ್ಷಿಪ್ತ್ವಾಽಥ ಲಗುಡಂ ಕೃಷ್ಣಂ ಯೇನ ವೈ ಜಂತವೋ ಹತಾಃ ।
ಪ್ರಕೀರ್ಯ ಕೇಶಾಂಸ್ತ್ವರಿತ ಋಷೀಣಾಮಗ್ರತಃ ಸ್ಥಿತಃ ॥ ೨೨ ॥
ಪ್ರಣಮ್ಯ ದಂಡಪಾತೇನ ತತೋ ವಚನಮಬ್ರವೀತ್ ।
ನ ಮೇ ಮಾತಾ ನ ಚ ಪಿತಾ ನ ಭಾರ್ಯಾ ನ ಚ ಮೇ ಸುತಃ ॥ ೨೩ ॥
ಸರ್ವೈಸ್ತ್ಯಕ್ತಃ ಪರಿಮುಕ್ತೋಽಹಂ ಭವತಾಂ ಶರಣಂ ಗತಃ ।
ಸುಷ್ಠೂಪದೇಶದಾನಾನ್ಮಾಂ ನರಕಾತ್ತ್ರಾತುಮರ್ಹಥ ॥ ೨೪ ॥
ಏವಂ ತಂ ವಾದಿನಂ ದೃಷ್ಟ್ವಾ ಋಷಯೋಽತ್ರಿಮಥಾಽಬ್ರುವನ್ ।
ಭವತೋ ವಚನಾದಸ್ಯ ಪ್ರತಿಬೋಧಃ ಸಮಾಗತಃ ॥ ೨೫ ॥
ಭವತಾಽಯಮನುಗ್ರಾಹ್ಯಃ ಶಿಷ್ಯೋ ಭವತು ತೇ ಮುನೇ ।
ತಥೇತ್ಯುಕ್ತ್ವಾಽಥ ತಾನ್ಪ್ರಾಹ ಸಾಽಗ್ನಿ ಧ್ಯಾನಂ ಸಮಾಚರ ॥ ೨೬ ॥
ಅನೇನ ಧ್ಯಾನಯೋಗೇನ ಮಹಾಮಂತ್ರಜಪೇನ ಚ ।
ಅನೇಕ ದುಸ್ತರಾತ್ಯುಗ್ರಪಾಪಕೃಜ್ಜನಘಾತಕಃ ।
ಸಂಸ್ಥಿತೋ ವೃಕ್ಷಮೂಲೇ ತ್ವಂ ಪರಾಂ ಸಿದ್ಧಿಂ ಗಮಿಷ್ಯಸಿ ॥ ೨೭ ॥

---

೨೨–೨೩. ಇದುವರೆಗೂ ಅನೇಕ ಜಂತುಗಳನ್ನು ಹಿಂಸಿಸಲು ಆಯುಧ ವಾಗಿದ್ದ ದೊಣ್ಣೆಯನ್ನು ದೂರಕ್ಕೆ ಬಿಸುಟು ಓಡಿದ ವೇಗಕ್ಕೆ ತಲೆಗೂದಲುಗಳು ಚೆದರುತ್ತಿರಲು ಮಹರ್ಷಿಗಳ ಮುಂದೆ ಬಂದು ನಿಂತನು; ದೀರ್ಘದಂಡ ನಮಸ್ಕಾರವನ್ನು ಮಾಡಿ ಅವರಿಗೆ ಬಿನ್ನವಿಸಿದನು. "ನನಗೆ ತಾಯಿಯಾಗಲಿ, ತಂದೆಯಾಗಲಿ, ಹೆಂಡತಿಯಾಗಲಿ, ಮಗನಾಗಲಿ ಯಾರೂ ಇಲ್ಲದಂತಾಯಿತು.

೨೪. ಎಲ್ಲರೂ ನನ್ನನ್ನು ಕೈಬಿಟ್ಟರುವರು. ಏಕಾಂಗಿಯಾದ ನಾನು ನಿಮ್ಮನ್ನೇ ಶರಣುಹೊಕ್ಕಿರುವೆನು. ಉತ್ತಮವಾದ ಉಪದೇಶವನ್ನು ಕೊಟ್ಟು ನನ್ನನ್ನು ಉದ್ಧಾರಮಾಡಲು ನೀವೇ ಅರ್ಹರಾಗಿರುತ್ತೀರಿ."

೨೫. ಇಂತೆಂದು ಮೊರೆಯಿಡುತ್ತಿರುವ ಆತನನ್ನು ಕಂಡು ಉಳಿದ ಮಹರ್ಷಿ ಗಳೆಲ್ಲರೂ ಅತ್ರಿಮುನಿಯನ್ನು ಕುರಿತು ಇಂತೆಂದರು. "ನಿನ್ನ ಮಾತಿನಿಂದಲೇ ಈ ಮನುಷ್ಯನಿಗೆ ಜ್ಞಾನೋದಯವಾಯಿತು.

೨೬. ಇವನು ನಿನ್ನ ಅನುಗ್ರಹಕ್ಕೆ ಸತ್ಪಾತ್ರನು. ಮುನಿವರ್ಯ! ಇವನನ್ನು ನಿನ್ನ ಶಿಷ್ಯನನ್ನಾಗಿ ಮಾಡಿಕೊ." ಅತ್ರಿಮುನಿಯು ಹಾಗೆಯೇ ಆಗಲೆಂದು ಅವರಿಗೆ ಉತ್ತರವನ್ನಿತ್ತು, ಅಗ್ನಿಶರ್ಮನನ್ನು ಕುರಿತು ಹೇಳಿದನು. "ಅಗ್ನಿಸಾಕ್ಷಿಕ ವಾಗಿ ನಿನಗೆ ಉಪದೇಶವನ್ನು ಕೊಡುವೆನು. ಧ್ಯಾನವನ್ನು ಮಾಡು.

೨೭. ಧ್ಯಾನಯೋಗದಿಂದಲೂ, ನಾನು ಉಪದೇಶಮಾಡಿದ ಮಹಾ ಮಂತ್ರದ ಜಪದಿಂದಲೂ, ಅಸಂಖ್ಯಾತಗಳೂ, ಅಪರಿಹಾರ್ಯಗಳೂ, ಅತಿಕ್ರೂರ ಗಳೂ ಆದ ಪಾಪಗಳನ್ನು ಮಾಡಿ ಲೋಕಕಂಟಕನಾದ ನೀನು ಒಂದು ಮರದ ಬುಡದಲ್ಲಿ ಕುಳಿತು ತಪಸ್ಸನ್ನು ಮಾಡಲು ಉತ್ತಮಸಿದ್ಧಿಯನ್ನು ಪಡೆಯುವೆ."

**ಇತ್ಯುಕ್ತ್ವಾ ತೇ ಯಯುಃ ಸರ್ವೇ ಸಕಾಮಂ ಸೋಽಪಿ ತತ್ರ ವೈ ।**
**ತದ್ಧ್ಯಾನಸ್ಥೋಽಭವದ್ಯೋಗೀ ವತ್ಸರಾಣಿ ತ್ರಯೋದಶ ॥ ೨೮ ॥**
**ತಸ್ಯೋಪರ್ಯಭವತ್ತತ್ರ ವಲ್ಮೀಕೋಽವಿಚಲಸ್ಯ ಚ ।**
**ನಿವೃತ್ತಾಸ್ತು ಪಥಾ ತೇನ ಮುನಯಸ್ತತ್ರ ಶುಶ್ರುವುಃ ॥ ೨೯ ॥**
**ಉದೀರಿತಂ ಧ್ವನಿಂ ತೇನ ವಲ್ಮೀಕೇ ವಿಸ್ಮಯಾನ್ವಿತಾಃ ।**
**ತತಃ ಖನಿತ್ವಾ ವಲ್ಮೀಕಂ ಕಾಷ್ಠೀಭೂತೋರುಶಂಕುಭಿಃ ॥ ೩೦ ॥**
**ತಂ ದೃಷ್ಟ್ವೋತ್ಥಾಪಯಾಮಾಸುರ್ಮುನಯೋ ನಯಸಂಯುತಂ ।**
**ನಮಶ್ಚಕ್ರೇಽಥ ತಾನ್ಸರ್ವಾನ್ಸ ವಿಪ್ರೋ ಮುನಿಪುಂಗವಾನ್ ॥ ೩೧ ॥**
**ತಾನ್ಪ್ರಾಹ ಪ್ರಣತೋ ಭೂತ್ವಾ ತಪಸಾ ದೀಪ್ತತೇಜಸಃ ।**
**ಪ್ರಸಾದಾದ್ಭವತಾಮದ್ಯ ಜ್ಞಾನಂ ಲಬ್ಧಂ ಮಯಾ ಶುಭಂ ॥ ೩೨ ॥**
**ದೀನೋಽಹಮುದ್ಧೃತಃ ಸರ್ವೈರ್ಮಗ್ನೋಽಹಂ ಪಾಪಕರ್ದಮೇ ।**
**ಶ್ರುತ್ವಾ ತಸ್ಯೇತಿ ತೇ ವಾಕ್ಯಮೂಚುಃ ಪರಮಧಾರ್ಮಿಕಾಃ ॥ ೩೩ ॥**
**ವಲ್ಮೀಕೇಽಸ್ಮಿನ್ಸ್ಥಿತಃ ಪುತ್ರ ಯತಸ್ತ್ವಮೇಕಚಿತ್ತತಃ ।**
**ವಾಲ್ಮೀಕಿರಿತಿ ತೇ ನಾಮ ಭುವಿ ಖ್ಯಾತಂ ಭವಿಷ್ಯತಿ ॥ ೩೪ ॥**

---

೨೮. ಇಂತೆಂದು ಅವರೆಲ್ಲರೂ ಮನಬಂದೆಡೆಗೆ ಹೊರಟುಹೋದರು. ಅಗ್ನಿ ಶರ್ಮನೂ ಅಲ್ಲಿಯೇ ಹದಿಮೂರುವರ್ಷಗಳವರೆಗೂ ಧ್ಯಾನಾಸಕ್ತನಾಗಿದ್ದು ಮಹಾಯೋಗಿಯಾದನು.

೨೯–೩೧. ಆತನು ನಿಶ್ಚಲನಾಗಿ ತಪಸ್ಸನ್ನು ಮಾಡುತ್ತಿರಲು ದೇಹದ ಸುತ್ತಲೂ ಹುತ್ತವು ಬೆಳೆಯಿತು. ಕಾಲಾಂತರದಲ್ಲಿ ಹಿಂದಿರುಗುತ್ತಿದ್ದ ಸಪ್ತರ್ಷಿ ಗಳು ಆ ದಾರಿಯಲ್ಲಿಯೇ ಬರುತ್ತ ಹುತ್ತದೊಳಗಿನಿಂದ ಬರುತ್ತಿರುವ ಜಪದ ಧ್ವನಿಯನ್ನು ಕೇಳಿ ವಿಸ್ಮಯಗೊಂಡರು. ಬಳಿಕ ಆ ಹುತ್ತವನ್ನು ಅಗೆದು ಒಳಗೆ ಉಪವಾಸದಿಂದ ಕಡ್ಡಿಯಂತೆ ತೋರುವ ದೇಹ, ಕೈಕಾಲುಗಳೂ ಉಳ್ಳ ಆ ತಾಪಸನನ್ನು ಕಂಡು ವಿನಯಾನ್ವಿತನಾದ ಆತನನ್ನು ಹೊರಕ್ಕೆ ತೆಗೆದರು. ಆ ಬ್ರಾಹ್ಮಣನು ಆ ಮುನಿಪುಂಗವರಿಗೆಲ್ಲ ನಮಸ್ಕಾರವನ್ನು ಮಾಡಿದನು.

೩೨–೩೩. ತಪಸ್ಸಿನಿಂದ ಜ್ವಲಿಸುತ್ತಿದ್ದ ಆತನು ಅವರಿಗೆ ಪ್ರಣತನಾಗಿ ಹೇಳತೊಡಗಿದನು. "ನಿಮ್ಮೆಲ್ಲರ ಅನುಗ್ರಹದಿಂದ ನನಗೆ ನಿರ್ಮಲವಾದ ಜ್ಞಾನವು ಈಗ ಲಬ್ಧವಾಯಿತು. ಪಾಪವೆಂಬ ಕೆಸರಿನಲ್ಲಿ ಮುಳುಗುತ್ತ ದೀನ ನಾಗಿದ್ದ ನನ್ನನ್ನು ನೀವೆಲ್ಲರೂ ಕೈಹಿಡಿದು ಉದ್ಧರಿಸಿದಿರಿ." ಇಂತೆಂದ ಆತನ ವಚನಗಳನ್ನು ಕೇಳಿ ಪರಮಧಾರ್ಮಿಕರಾದ ಅವರು ಹೇಳಿದರು.

೩೪. "ಮಗನೆ! ಏಕಮನಸ್ಸಿನಿಂದ ಧ್ಯಾನಮಾಡುತ್ತ ಕುಳಿತ ನಿನ್ನನ್ನು ನಾವು ವಲ್ಮೀಕ (ಹುತ್ತ)ದಿಂದ ಹೊರಕ್ಕೆ ತೆಗೆದೆವು. ಆದುದರಿಂದ ವಾಲ್ಮೀಕಿ ಯೆಂಬ ಹೆಸರೇ ನಿನಗೆ ಲೋಕದಲ್ಲಿ ಪ್ರಖ್ಯಾತವಾಗುವುದು.

ಇತ್ಯುಕ್ತ್ವಾ ಮುನಯೋ ಜಗ್ಮುಃ ಸ್ವಾಂ ದಿಶಾಂ ತಪಸಾನ್ವಿತಾಃ ।
ಗತೇಷು ಮುನಿಮುಖ್ಯೇಷು ವಾಲ್ಮೀಕಿಸ್ತಪತಾಂ ವರಃ ।
ಕುಶಸ್ಥಲ್ಯಾಮಥಾಗಮ್ಯ ಸಮಾರಾಧ್ಯ ಮಹೇಶ್ವರಂ ॥ ೩೫ ॥
ತಸ್ಮಾತ್ಕವಿತ್ವಮಾಸಾದ್ಯ ಚಕ್ರೇ ಕಾವ್ಯಂ ಮನೋರಮಂ ।
ರಾಮಾಯಣಂ ಚ ಯತ್ಪ್ರಾಹುಃ ಕಥಾಂ ಸುಪ್ರಥಮಸ್ಥಿತಾಂ ॥ ೩೬ ॥
ತತಃ ಪ್ರಭೃತಿ ದೇವೇಶೋ ವಾಲ್ಮೀಕೇಶ್ವರಸಂಜ್ಞಕಃ ।
ಖ್ಯಾತೋಽವಂತ್ಯಾಂ ತತೋ ವ್ಯಾಸ ನೃಣಾಂ ಕವಿತ್ವದಾಯಕಃ ॥ ೩೭ ॥
ಇತಿ ತೇ ಕಥಿತಂ ಲಿಂಗಂ ವಾಲ್ಮೀಕೇಶ್ವರಮುತ್ತಮಂ ।
ಯಸ್ಯ ದರ್ಶನಮಾತ್ರೇಣ ಕವಿತ್ವಮುಪಪದ್ಯತೇ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ವಾಲ್ಮೀಕೇಶ್ವರ ಮಾಹಾತ್ಮ್ಯವರ್ಣನಂ" ನಾಮ ಚತುರ್ವಿಂಶೋಽಧ್ಯಾಯಃ

---

೩೫. ಹೀಗೆಂದು ತಪಸ್ಸಂಪನ್ನರಾದ ಮುನಿಗಳು ತಮ್ಮ ದಿಕ್ಕಿಗೆ ಹೊರಟು ಹೋದರು. ಮುನಿಶ್ರೇಷ್ಠರು ಹೊರಟುಹೋಗಲು ತಪಸ್ವಿಗಳಲ್ಲಿ ಅಗ್ರೇಸರನಾದ ವಾಲ್ಮೀಕಿಯು ಕುಶಸ್ಥಲಿಗೆ ಬಂದು ಸೇರಿ ಮಹೇಶ್ವರನ ಆರಾಧನೆಯನ್ನು ಮಾಡಿದನು.

೩೬. ಅದರಿಂದಲೇ ಕವಿತ್ವಶಕ್ತಿಯನ್ನು ಸಂಪಾದಿಸಿ ಆದಿಕಾವ್ಯವೆಂದು ಪ್ರಖ್ಯಾತಿಯನ್ನು ಪಡೆದಿರುವ ರಾಮಾಯಣವೆಂದು ಕರೆಯಲ್ಪಡುವ ಚರಿತ್ರೆಯನ್ನು ಮನೋಹರವಾದ ಕಾವ್ಯವನ್ನಾಗಿ ರಚಿಸಿದನು.

೩೭. ಅಂದಿನಿಂದ ಆತನು ಪೂಜಿಸಿದ ಲಿಂಗಕ್ಕೆ ವಾಲ್ಮೀಕೇಶ್ವರನೆಂಬ ಹೆಸರಾಯಿತು. ಎಲೈ ವ್ಯಾಸನೆ! ಅವಂತೀಕ್ಷೇತ್ರದಲ್ಲಿರುವ ಈ ಪ್ರಖ್ಯಾತ ಲಿಂಗವು ಮನುಷ್ಯರಿಗೆ ಕವಿತ್ವಶಕ್ತಿದಾಯಕವಾಗಿರುವುದು.

೩೮. ಇಂತು ನಿನಗೆ ವಾಲ್ಮೀಕೇಶ್ವರವೆಂಬ ಉತ್ತಮಲಿಂಗದ ಚರಿತ್ರೆಯನ್ನು ಹೇಳಿದೆನು. ಅದರ ದರ್ಶನವನ್ನು ಮಾಡುವುದರಿಂದಲೇ ಮನುಷ್ಯನಿಗೆ ಕವಿತಾ ಶಕ್ತಿಯು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ವಾಲ್ಮೀಕೇಶ್ವರಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

### ಶುಕ್ರೇಶ್ವರ ಭೀಮೇಶ್ವರ ಗರ್ಗೇಶ್ವರ ಕಾಮೇಶ್ವರ ಚೂಡಾಮಣೀಶ್ವರ ಚಂಡೀಶ್ವರಾದಿ ತೀರ್ಥಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಶುಕ್ರೇಶ್ವರಂ ಸಮಭ್ಯರ್ಚ್ಯ ಸಿತಪುಷ್ಪೈರ್ವಿಲೇಪನೈಃ ।
ಪ್ರಣಿಪತ್ಯ ತತೋ ಭಕ್ತ್ಯಾ ರುದ್ರಲೋಕೇ ಮಹೀಯತೇ ॥ ೧ ॥
ಭೀಮೇಶ್ವರಂ ನರೋ ದೃಷ್ಟ್ವಾ ಭಕ್ತ್ಯಾ ಸಂಪೂಜ್ಯ ಯತ್ನತಃ ।
ನ ಭಯಂ ಲಭತೇ ವ್ಯಾಸ ರಣೇ ರಾತ್ರೌ ಜಲೇಽನಲೇ ॥ ೨ ॥
ಗರ್ಗೇಶ್ವರಂ ಸ್ನಾಪಯಿತ್ವಾ ತಿಲತೈಲೇನ ಮಾನವಃ ।
ಬಿಲ್ವಪತ್ರೈಸ್ತು ಸಂಪೂಜ್ಯ ಧರ್ಮವೃದ್ಧಿಮವಾಪ್ನುಯಾತ್ ॥ ೩ ॥
ಉಪೋಷಿತಶ್ಚತುರ್ದಶ್ಯಾಂ ತಿಲಪ್ರಸ್ಥತಿಲಾಂಭಸಾ ।
ಸ್ನಾಪಯಿತ್ವಾ ತಿಲೈರಿಷ್ಟ್ವಾ ಸದಾ ಸೌಖ್ಯಮವಾಪ್ನುಯಾತ್ ॥ ೪ ॥
ಗೋಸಹಸ್ರಂ ನರೋ ದತ್ವಾ ಭಾವಂ ಕೃತ್ವಾ ವಿಶೇಷತಃ ।
ಭವಬಂಧವಿನಿರ್ಮುಕ್ತೋ ರುದ್ರಲೋಕಂ ಸ ಗಚ್ಛತಿ ॥ ೫ ॥

---

### ಕನ್ನಡದ ಅನುವಾದ

#### ಶುಕ್ರೇಶ್ವರಾದಿಲಿಂಗಷಟ್ಕಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಶುಕ್ರೇಶ್ವರನನ್ನು ಬಿಳಿಯ ಹೂವುಗಳಿಂದಲೂ, ಗಂಧಾದಿಲೇಪನಗಳಿಂದಲೂ ಪೂಜಿಸಿ ಭಕ್ತಿಯಿಂದ ನಮಸ್ಕಾರವನ್ನು ಮಾಡಲು ರುದ್ರಲೋಕದಲ್ಲಿ ಉತ್ತಮಸ್ಥಾನವನ್ನು ಪಡೆಯುವನು.

೨. ಭೀಮೇಶ್ವರನನ್ನು ನೋಡಿ ಯಥಾಶಕ್ತಿಯಾಗಿ ಭಕ್ತಿಯಿಂದ ಪೂಜೆ ಮಾಡಿದ ಮನುಜನು ಯುದ್ಧದಲ್ಲಾಗಲಿ, ರಾತ್ರಿಯಲ್ಲಾಗಲಿ, ಜಲಯಾನದಲ್ಲಾಗಲಿ, ಬೆಂಕಿಯಿಂದಾಗಲಿ ಭಯವನ್ನು ಕಾಣುವುದಿಲ್ಲ.

೩. ಗರ್ಗೇಶ್ವರಮಹಾಲಿಂಗಕ್ಕೆ ಎಳ್ಳೆಣ್ಣೆಯಿಂದ ಮಜ್ಜನವನ್ನು ಮಾಡಿಸಿ ಬಿಲ್ವದಳಗಳಿಂದ ಪೂಜಿಸಿದ ಮಾನವನು ಧರ್ಮವೃದ್ಧಿಯನ್ನು ಹೊಂದುವನು.

೪. ಚತುರ್ದಶಿಯ ದಿನದಲ್ಲಿ ಉಪವಾಸವನ್ನು ಮಾಡಿ ಒಂದು ಬಳ್ಳದಷ್ಟು ಎಳ್ಳಿನಿಂದ ಕೂಡಿದ ನೀರಿನಿಂದ ಅಭಿಷೇಕಮಾಡಿಸಿ ಎಳ್ಳಿನಿಂದಲೇ ಹೋಮವನ್ನು ಮಾಡಲು ಯಾವಾಗಲೂ ಸುಖಿಯಾಗಿರುವನು.

೫. ವಿಶೇಷವಾದ ಭಕ್ತಿಯಿಂದ ಕೂಡಿದವನಾಗಿ ಅಲ್ಲಿ ಒಂದು ಸಾವಿರ ಗೋವುಗಳನ್ನು ದಾನಮಾಡಿದ ನರನು ಸಂಸಾರಬಂಧನದಿಂದ ಮುಕ್ತನಾಗಿ ರುದ್ರಲೋಕವನ್ನು ಸೇರುವನು.

**ಕಾಮೇಶ್ವರಂ ಸಮಭ್ಯರ್ಚ್ಯ ಕುಂಕುಮಾದಿವಿಲೇಪನೈಃ ।**
**ಕಾಮಿಕೇನ ವಿಮಾನೇನ ಯಾತಿ ಸ್ವರ್ಗಂ ನ ಸಂಶಯಃ ॥ ೬ ॥**
**ಚೂಡಾಮಣಿಂ ನಮಸ್ಕೃತ್ಯ ನವಮ್ಯಾಂ ಕಾರ್ತಿಕೇ ಸಿತೇ ।**
**ನ ವಿಯೋನಿಂ ನರೋ ಯಾತಿ ಧರ್ಮಬುದ್ಧಿಃ ಸ ಜಾಯತೇ ॥ ೭ ॥**
**ಚಂಡೀಶ್ವರಂ ಸಮಭ್ಯರ್ಚ್ಯ ಕೃಷ್ಣಾಽಷ್ಟಮ್ಯಾಮುಪೋಷಿತಃ ।**
**ನಿರ್ಮಾಲ್ಯೋಲ್ಲಂಘನೋತ್ಥೇನ ನ ಶೋಕೇನಾಽಪಿ ಲಿಪ್ಯತೇ ॥ ೮ ॥**
**ಇತ್ಯಾದಿ ತೀರ್ಥಾನಿ ಮಹೇಶ್ವರಸ್ಯ**
**ಪುಣ್ಯಾನಿ ಸರ್ವಾಣಿ ನರೋಽಭಿಗಮ್ಯ ।**
**ವಿಶುದ್ಧಚಿತ್ತೋ ಭುವಿ ಭಾವಿತಾತ್ಮಾ**
**ಪ್ರಯಾತಿ ಶಂಭೋರ್ಭವನಂ ಸುರಮ್ಯಂ ॥ ೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶುಕ್ರೇಶ್ವರ ಭೀಮೇಶ್ವರ ಗರ್ಗೇಶ್ವರ ಕಾಮೇಶ್ವರ ಚೂಡಾಮಣೀಶ್ವರ ಚಂಡೀಶ್ವರಾದಿ ತೀರ್ಥಮಾಹಾತ್ಮ್ಯವರ್ಣನಂ" ನಾಮ ಪಂಚವಿಂಶೋಽಧ್ಯಾಯಃ**

---

೬. ಕಾಮೇಶ್ವರನನ್ನು ಕುಂಕುಮವೇ ಮುಂತಾದ ಲೇಪನದ್ರವ್ಯಗಳಿಂದ ಪೂಜಿಸಿದವನು ಸ್ವಚ್ಛಂದಗತಿಯುಳ್ಳ ವಿಮಾನದಿಂದ ಸ್ವರ್ಗಕ್ಕೆ ಹೋಗುವುದರಲ್ಲಿ ಸಂದೇಹವಿಲ್ಲ.

೭. ಕಾರ್ತೀಕಮಾಸದ ಶುದ್ಧನವಮಿಯಲ್ಲಿ ಚೂಡಾಮಣೀಶ್ವರನನ್ನು ಕಂಡು ನಮಸ್ಕರಿಸಿದವನು ತಿರ್ಯಗ್ಯೋನಿಗಳಲ್ಲಿ ಜನ್ಮವನ್ನು ಪಡೆಯುವುದಿಲ್ಲ. ಅವನ ಧರ್ಮವು ದಿನೇದಿನೇ ಅಭಿವೃದ್ಧಿಯನ್ನೈದುವುದು.

೮. ಕೃಷ್ಣಜನ್ಮಾಷ್ಟಮಿಯ ದಿನ ಉಪವಾಸವನ್ನು ಮಾಡಿ ಚಂಡೀಶ್ವರನ ಪೂಜೆಯನ್ನು ನೆರವೇರಿಸಲು ಶಿವನಿರ್ಮಾಲ್ಯಸ್ವೀಕಾರದ ನಿಯಮವನ್ನು ಉಲ್ಲಂಘಿಸಿದ ಪಾತಕವೂ ಮನುಜನಿಗೆ ಅಂಟುವುದಿಲ್ಲ.

೯. ಇವೇ ಮೊದಲಾದ ಮಹೇಶ್ವರನ ಪುಣ್ಯತೀರ್ಥಗಳೆಲ್ಲವನ್ನೂ ಸೇವಿಸಿದ ಮಾನವನು ನಿರ್ಮಲಮನಸ್ಸುಳ್ಳವನಾಗುವನು. ಇಹಲೋಕದಲ್ಲಿ ಎಲ್ಲರಲ್ಲಿಯೂ ಮರ್ಯಾದೆಯನ್ನು ಪಡೆದು ಮನೋಹರವಾದ ಶಿವಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಶುಕ್ರೇಶ್ವರಾದಿಲಿಂಗಷಟ್ಕಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡ್ವಿಂಶೋಽಧ್ಯಾಯಃ

### ಮಂದಾಕಿನೀಕ್ಷೇತ್ರಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

**ಗುಹ್ಯಸ್ಥಾನೇ ಪವಿತ್ರಾಣಿ ಕೀರ್ತಿತಾನಿ ತ್ವಯಾ ಮುನೇ ।**
**ಪ್ರಮಾಣಂ ಕಥಯಸ್ವಾಽದ್ಯ ಮಹಾಕಾಲವನಸ್ಯ ಮೇ ॥ ೧ ॥**

ಸನತ್ಕುಮಾರ ಉವಾಚ :—

**ಯಥಾ ಶ್ರುತಂ ಮಯಾ ಪೂರ್ವಂ ಗದತೋ ಬ್ರಹ್ಮಣಃ ಸ್ವಯಂ ।**
**ತತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವ ಗದತೋ ಮಮ ॥ ೨ ॥**
**ಯೋಜನಸ್ಯೈವ ಪರ್ಯಂತಂ ಚತುರ್ದಿಕ್ಷೂಪಶೋಭಿತಂ ।**
**ಸೌವರ್ಣೈಸ್ತೋರಣೈಶ್ಚೈವ ಮುಕ್ತಾದಾಮವಿಲಂಬಿಭಿಃ ॥ ೩ ॥**
**ದ್ವಾರಾಣಿ ತತ್ರ ಶೋಭಂತೇ ಕಾಂಚನೈಃ ಕಲಶೈಃ ಸ್ಥಿತೈಃ ।**
**ಸಿತಪದ್ಮಮುಖೈರ್ದ್ವಾರೈರನೇಕಮಣಿಮಂಡಿತೈಃ ॥ ೪ ॥**
**ಮಹೇಶ್ವರಪ್ರಯುಕ್ತಾಶ್ಚ ದ್ವಾರಾಽಧ್ಯಕ್ಷಾ ಮಹಾಬಲಾಃ ।**
**ದ್ವಾರೇಷು ತೇಷು ಶೋಭಂತೇ ಲೋಕಾಽನುಗ್ರಹಕಾರಕಾಃ ॥ ೫ ॥**

---

### ಕನ್ನಡದ ಅನುವಾದ

#### ಮಂದಾಕಿನೀಕ್ಷೇತ್ರಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಮುನಿಶ್ರೇಷ್ಠನೆ! ಮಹೇಶ್ವರನ ಗುಹ್ಯಸ್ಥಾನದಲ್ಲಿರುವ ಪವಿತ್ರಗಳಾದ ಲಿಂಗಗಳನ್ನೂ, ತೀರ್ಥಗಳನ್ನೂ ವಿವರಿಸಿರುವೆ. ಈಗ ಮಹಾಕಾಲವನಕ್ಷೇತ್ರದ ವಿಸ್ತಾರವನ್ನು ನನಗೆ ತಿಳಿಸು.

೨. ಸನತ್ಕುಮಾರನು ಹೇಳುತ್ತಾನೆ:—ಹಿಂದೆ ಬ್ರಹ್ಮದೇವನಿಂದ ನಾನು ಹೇಗೆ ಕೇಳಿರುವೆನೊ, ಹಾಗೆಯೇ ವಿವರಿಸುವೆನು. ನನ್ನ ಮಾತನ್ನು ಕೇಳು.

೩. ಆ ಕ್ಷೇತ್ರವು ಒಂದು ಯೋಜನಪರ್ಯಂತವಾಗಿ ವ್ಯಾಪಿಸಿರುವುದು. ನಾಲ್ಕು ದಿಕ್ಕುಗಳಲ್ಲಿಯೂ ತೂಗಾಡುತ್ತಿರುವ ಮುಕ್ತಾಹಾರಗಳಿಂದಲೂ, ಚಿನ್ನದ ಕಲಶಗಳಿಂದಲೂ ಶೋಭಿಸುತ್ತಿರುವ ಮಹಾದ್ವಾರಗಳಿರುವುವು.

೪. ಚಿನ್ನದ ಕಲಶಗಳಿಂದ ಕಂಗೊಳಿಸುತ್ತಿರುವ ಆ ದ್ವಾರಗಳಿಗೆ ಅನೇಕ ಮಣಿಗಳಿಂದಲಂಕೃತಗಳಾಗಿ ಬಿಳಿದಾವರೆಯ ಆಕಾರದ ಬಾಗಿಲುವಾಡಗಳು ಕೂಡಿಸಲ್ಪಟ್ಟಿರುವುವು.

೫. ಆ ದ್ವಾರಗಳಲ್ಲೆಲ್ಲ ಮಹೇಶ್ವರನಿಂದಾಜ್ಞಪ್ತರೂ, ಮಹಾಪರಾಕ್ರಮಿಗಳೂ, ಲೋಕಾನುಗ್ರಹತತ್ಪರರೂ ಆದ ದ್ವಾರಪಾಲಕರು ನೆಲಸಿರುವರು.

**ಪಿಂಗಲೇಶಃ ಸ್ಥಿತಃ ಪೂರ್ವೇ ಬಾಲರೂಪೋ ವಿಭಾವಸುಃ ।**
**ತೀರ್ಥಸ್ಯಾಽಭಿಮುಖೋ ಗೌರೋ ಗುರುರ್ಗಣೈರಥಾನುಗಃ ॥ ೬ ॥**
**ದಕ್ಷಿಣೇಽಪಿ ಮಹಾಯೋಗೀ ಕಾಯಾಽವರೋಹಣೇಶ್ವರಃ ।**
**ಬಿಲ್ವೇಶಃ ಪಶ್ಚಿಮೇ ದ್ವಾರೇ ಕ್ಷೇತ್ರಸ್ಯಾಽಭಿಮುಖಃ ಸ್ಥಿತಃ ॥ ೭ ॥**
**ನಿಯುಕ್ತೋ ವೈ ಮಹೇಶೇನ ವಾರುಣೀಂ ದಿಶಮಾಸ್ಥಿತಃ ।**
**ಉತ್ತರಾಂ ದಿಶಮಾಶ್ರಿತ್ಯ ಸ್ಥಿತಶ್ಚೈವೋತ್ತರೇಶ್ವರಃ ॥ ೮ ॥**
**ಸಾಧಕಃ ಸರ್ವಕಾರ್ಯಾಣಾಮಾದಿಷ್ಟಃ ಶಂಕರೇಣ ಸಃ ।**
**ಮಾನವಾ ಯೇ ವಿಶಂತ್ಯತ್ರ ಕ್ಷೇತ್ರಮಧ್ಯೇ ಸುಧಾರ್ಮಿಕಾಃ ॥ ೯ ॥**
**ಮೃತಾ ರುದ್ರಪುರಂ ಯಾಂತಿ ವಿಮಾನೈಃ ಸಾರ್ವಕಾಮಿಕೈಃ ।**
**ಕೃಷ್ಣಪಕ್ಷೇ ಚತುರ್ದಶ್ಯಾಮಥವಾಽರ್ಕೇಂದುಸಂಗಮೇ ॥ ೧೦ ॥**
**ಪಂಚೇಶಾನೀಂ ನಮಸ್ಕೃತ್ಯ ಪ್ರತಿಲೋಮಾಽನುಲೋಮತಃ ।**
**ಉಪೋಷಿತೋ ದಿನೈಕೇನ ಧ್ಯಾಯಮಾನೋ ಮಹೇಶ್ವರಂ ॥ ೧೧ ॥**

---

೬. ಪೂರ್ವದ್ವಾರದಲ್ಲಿ ಎಳೆಯವಯಸ್ಸಿನವನೂ, ತೇಜಸ್ಸಂಪನ್ನನೂ, ಗೌರವರ್ಣವುಳ್ಳವನೂ, ಮಹಾಪ್ರಾಜ್ಞನೂ ಆದ ಪಿಂಗಳೇಶ್ವರನು ತನ್ನ ಗಣಗಳಿಂದಾವೃತನಾಗಿ ನೆಲಸಿರುವನು.

೭. ದಕ್ಷಿಣದಲ್ಲಿ ಮಹಾಯೋಗಿಯಾದ ಕಾಯಾವರೋಹಣೇಶ್ವರನೂ, ಪಶ್ಚಿಮದ್ವಾರದಲ್ಲಿ ಬಿಲ್ವೇಶ್ವರನೂ ಕ್ಷೇತ್ರದಕಡೆಗೆ ಮುಖವನ್ನು ಮಾಡಿಕೊಂಡು ನಿಂತಿರುವರು.

೮. ಈತನು ಮಹೇಶ್ವರನ ಅಪ್ಪಣೆಯಿಂದಲೇ ಪಶ್ಚಿಮದಿಕ್ಕನ್ನಾಶ್ರಯಿಸಿರುವನು. ಉತ್ತರದಿಕ್ಕನ್ನಾಶ್ರಯಿಸಿ ಉತ್ತರೇಶ್ವರನು ಪ್ರತಿಷ್ಠಿತನಾಗಿರುವನು.

೯–೧೧. ಆತನು ಕ್ಷೇತ್ರವಾಸಿಗಳ ಸಕಲಕಾರ್ಯಗಳನ್ನೂ ಸಾಧಿಸಿಕೊಡುವುದಕ್ಕಾಗಿ ಶಂಕರನಿಂದ ಅನುಜ್ಞೆಯನ್ನು ಪಡೆದಿರುವನು. ಈ ನಾಲ್ಕು ದ್ವಾರಪಾಲಕರ ಮಧ್ಯದಲ್ಲಿ ಧರ್ಮತತ್ಪರರಾದ ಯಾವ ಮಾನವರು ವಾಸ ಮಾಡುತ್ತಿರುವರೊ, ಅವರು ಮೃತರಾಗಲು ಸಕಲ ಭೋಗಸಮನ್ವಿತವಾದ ವಿಮಾನದಲ್ಲಿ ಕುಳಿತು ರುದ್ರಲೋಕವನ್ನು ಸೇರುವರು. ಪ್ರತಿಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿಯೂ, ಅಮಾವಾಸ್ಯೆಯಲ್ಲಿಯೂ, ಈ ಐದು ಮಹಾಲಿಂಗಗಳನ್ನು ಸವ್ಯ ಮತ್ತು ಅಪಸವ್ಯ ಕ್ರಮಗಳಿಂದ ದರ್ಶನವನ್ನು ಯಾವನು ಮಾಡುವನೊ, ಅವನು ಆ ದಿವಸ ಉಪವಾಸವನ್ನು ಮಾಡಿ ಮಹೇಶ್ವರನನ್ನೇ ಕುರಿತು ಧ್ಯಾನಿಸುತ್ತಿರಬೇಕು.

ಮುಚ್ಯತೇ ಸರ್ವಪಾಪೈಸ್ತು ಬಹುಜನ್ಮಕೃತೈರಪಿ ।
ಏವಂ ಚ ವಿಪ್ರ ಯೋ ಯಾತ್ರಾಂ ಪಂಚೇಶಾನೀಂ ಸಮಾರಭೇತ್ ॥ ೧೨ ॥
ಅನೇನೈವ ಸ್ವದೇಹೇನ ರುದ್ರಲೋಕಂ ಸ ಗಚ್ಛತಿ ।
ಪಂಚೇಶಾನೀಮಥಾಽನ್ಯಾಂ ತೇ ಸುಖೇನ ಕ್ರಿಯತೇ ಯಥಾ ॥ ೧೩ ॥
ತಥಾ ಶೃಣು ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶಿನೀಂ ।
ಪ್ರಾತಃ ಸ್ನಾತ್ವಾ ರುದ್ರಸರಸ್ಯೇಕಾದಶ್ಯಾಂ ಸಮಾಹಿತಃ ॥ ೧೪ ॥
ಶ್ರಾದ್ಧಂ ಕೃತ್ವಾ ಮಹಾಕಾಲಂ ನತ್ವಾ ಚೇಶಾನಮೀಶ್ವರಂ ।
ಪಿಂಗಲೇಶಂ ತತಃ ಪ್ರಾಪ್ಯ ಸ್ನಾತ್ವಾ ಶ್ರಾದ್ಧಂ ಸಮಾಚರೇತ್ ॥ ೧೫ ॥
ಉಪಗಮ್ಯ ತತೋ ದೇವಂ ಗಣೇಶಂ ಪಿಂಗಲೇಶ್ವರಂ ।
ಗಂಧೈಃ ಪುಷ್ಪೈಶ್ಚ ಧೂಪೈಶ್ಚ ತಮಭ್ಯರ್ಚ್ಯ ನಿವರ್ತಯೇತ್ ॥ ೧೬ ॥
ಮಹಾಕಾಲೇಶ್ವರಂ ಪ್ರಾಪ್ಯ ಭೂಯಃ ಸ್ನಾತೋ ಜಿತೇಂದ್ರಿಯಃ ।
ಅರ್ಚಯೇದ್ದೇವದೇವೇಶಂ ಸ್ವಯಂಭುವಂ ಸನಾತನಂ ॥ ೧೭ ॥
ಈಶಾನೇ ಗಮಯೇದ್ರಾತ್ರಿಂ ಕೃತ್ವಾ ವೈ ನಕ್ತಭೋಜನಂ ।
ಧ್ಯಾಯಮಾನೋ ಮಹೇಶಾನಂ ಭೂಮೌ ವಿನ್ಯಸ್ಯ ವಿಗ್ರಹಂ ॥ ೧೮ ॥

---

೧೨–೧೫. ಅವನು ಅನೇಕ ಜನ್ಮಗಳಲ್ಲಿ ಮಾಡಿದ್ದ ಸಮಸ್ತಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುವನು. ಅಯ್ಯಾ ಬ್ರಾಹ್ಮಣೋತ್ತಮನೆ! ಈ ಪ್ರಕಾರದಿಂದ ಪಂಚೇಶಾನವೆಂಬ ಈ ಯಾತ್ರೆಯನ್ನು ಯಾವನು ಮಾಡುವನೊ, ಅವನು ಈ ಸ್ಥೂಲದೇಹದಿಂದಲೇ ರುದ್ರಲೋಕಕ್ಕೆ ಹೋಗುವನು. ಪಂಚೇಶಾನಯಾತ್ರೆಯನ್ನು ಇನ್ನೂ ಸುಲಭವಾಗಿ ಬೇರೊಂದು ವಿಧದಿಂದ ಮಾಡಬಹುದು. ಸಕಲ ಪಾಪಗಳನ್ನು ನಾಶಮಾಡುವ ಆ ಯಾತ್ರೆಯ ಕ್ರಮವನ್ನು ಹೇಳುವೆನು, ಕೇಳು. ಏಕಾದಶಿಯ ದಿನವಲ್ಲಿ ಪ್ರಶಾಂತಚಿತ್ತನಾಗಿ ರುದ್ರಸರೋವರದಲ್ಲಿ ಪ್ರಾತಃಸ್ನಾನವನ್ನು ಮುಗಿಸಿಕೊಂಡು ತೀರ್ಥಶ್ರಾದ್ಧವನ್ನು ಮಾಡಿ ಮಹಾಕಾಳೇಶ್ವರನಿಗೂ, ಈಶಾನೇಶ್ವರನಿಗೂ ನಮಸ್ಕಾರಗಳನ್ನು ಮಾಡಿ ಪಿಂಗಳೇಶ್ವರನ ಬಳಿಗೆ ಹೋಗಬೇಕು. ಅಲ್ಲಿಯೂ ಸ್ನಾನವನ್ನು ಮಾಡಿಕೊಂಡು ಪುನಃ ಶ್ರಾದ್ಧವನ್ನು ಮಾಡಬೇಕು.

೧೬. ಬಳಿಕ ಗಣೇಶ್ವರನ ಬಳಿಗೆ ಹೋಗಿ ನಮಸ್ಕರಿಸಿ ಪುನಃ ಪಿಂಗಳೇಶ್ವರನನ್ನು ಗಂಧ, ಪುಷ್ಪ, ಧೂಪಾದಿಗಳಿಂದ ಪೂಜಿಸಿ ಹಿಂದಿರುಗಬೇಕು.

೧೭. ಬಳಿಕ ಮಹಾಕಾಳೇಶ್ವರನನ್ನು ಸೇರಿ ಪುನಃ ಸ್ನಾನವನ್ನು ಮಾಡಿ ಜಿತೇಂದ್ರಿಯನಾಗಿ ದೇವದೇವೇಶ್ವರನೂ, ಸ್ವಯಂಭುವೂ, ಅನಾದಿನಿಧನನೂ ಆದ ಆ ದೇವನನ್ನು ಪೂಜಿಸಬೇಕು.

೧೮. ಈಶಾನೇಶ್ವರನ ಬಳಿಗೆ ಹೋಗಿ ರಾತ್ರಿಯಲ್ಲಿ ಭೋಜನವನ್ನು ಮಾಡಿ ಆ ದೇವನನ್ನೇ ಧ್ಯಾನಿಸುತ್ತ ಭೂಮಿಯಲ್ಲಿ ಶಯನಮಾಡಬೇಕು.

ದ್ವಾದಶ್ಯಾಂ ಪೂರ್ವವತ್ಸರ್ವಂ ಪ್ರಾತಃ ಸ್ನಾತ್ವಾ ವ್ರಜೇನ್ನರಃ ।
ಕಾಯಾಽವರೋಹಣಂ ಗತ್ವಾ ಪಿಂಗಲೇಶ್ವರವದ್ಯಜೇತ್ ॥ ೧೯ ॥
ತ್ರಯೋದಶ್ಯಾಮಥಾಪ್ಯೇವಂ ಬಿಲ್ವೇಶಂ ಪಶ್ಚಿಮೇಽರ್ಚಯೇತ್ ।
ಚತುರ್ದಶ್ಯಾಂ ತಥಾ ಸೌಮ್ಯೇ ಪೂಜಯೇದುತ್ತರೇಶ್ವರಂ ॥ ೨೦ ॥
ಅಮಾವಾಸ್ಯಾಂ ಶುಚಿಃ ಸ್ನಾತೋ ಮಹಾಕಾಲೇಶ್ವರಂ ಯಜೇತ್ ।
ಗಂಧೈಃ ಪುಷ್ಪೈಶ್ಚ ಧೂಪೈಶ್ಚ ನೈವೇದ್ಯೈರ್ವಿವಿಧೈಸ್ತಥಾ ॥ ೨೧ ॥
ಗೀತನೃತ್ಯಾದಿಕಂ ಕೃತ್ವಾ ಪ್ರಣಿಪತ್ಯ ಕ್ಷಮಾಪಯೇತ್ ।
ಯಾತ್ರಾಂ ಕೃತ್ವಾ ತು ಪೂರ್ವೋಕ್ತಾಂ ತತೋ ನಿಜಗೃಹಂ ವ್ರಜೇತ್॥೨೨॥
ಬ್ರಾಹ್ಮಣಾನ್ಭೋಜಯೇತ್ಪಂಚ ಶಿವಭಕ್ತಿಪರಾಯಣಾನ್ ।
ಪ್ರಣಮ್ಯ ದೇವತಾರೂಪಾನ್ ಮಹಾಕಾಲೋಷಿತಾನ್ ದ್ವಿಜಾನ್ ॥ ೨೩ ॥
ಪೂಜಯಿತ್ವಾ ಹಿರಣ್ಯೇನ ಸೂಕ್ಷ್ಮವಸ್ತ್ರಗುಣೈರ್ನವೈಃ ।
ರಥಂ ಪಿಂಗಲಕೇ ದದ್ಯಾದ್ಗಜಂ ಕಾಯಾಽವರೋಹಣೇ ॥ ೨೪ ॥

---

೧೯. ದ್ವಾದಶೀದಿನದಲ್ಲಿಯೂ ಪ್ರಾತಃಕಾಲದ ಸ್ನಾನವನ್ನು ಮಾಡಿ ಹಿಂದಿನ ದಿನದಲ್ಲಿ ಮಾಡಿದಂತೆಯೇ ಎಲ್ಲವನ್ನೂ ಮಾಡಬೇಕು. ಕಾಯಾವರೋಹಣೇಶ್ವರನ ಬಳಿಗೆ ಹೋಗಿ ಪಿಂಗಳೇಶ್ವರನಿಗೆ ಮಾಡಿದಂತೆಯೇ ಪೂಜೆಯನ್ನು ಮಾಡಬೇಕು.

೨೦. ಇದೇ ರೀತಿಯಲ್ಲಿಯೇ ತ್ರಯೋದಶಿಯ ದಿನ ಪಶ್ಚಿಮದಿಕ್ಕಿನಲ್ಲಿರುವ ಬಿಲ್ವೇಶ್ವರನನ್ನು ಅರ್ಚಿಸಬೇಕು. ಉತ್ತಮವಾದ ಚತುರ್ದಶಿಯಲ್ಲಿ ಉತ್ತರೇಶ್ವರನನ್ನು ಪೂಜಿಸಬೇಕು.

೨೧. ಅಮಾವಾಸ್ಯೆಯ ದಿನದಲ್ಲಿ ಸ್ನಾನದಿಂದ ಶುಚಿಯಾಗಿ ಮಹಾಕಾಳೇಶ್ವರನನ್ನು ಗಂಧ, ಪುಷ್ಪ, ಧೂಪಗಳಿಂದಲೂ ಬಹುವಿಧ ನೈವೇದ್ಯಗಳಿಂದಲೂ ಪೂಜಿಸಬೇಕು.

೨೨. ಗೀತನೃತ್ಯಾದಿಗಳನ್ನರ್ಪಿಸಿ ನಮಸ್ಕಾರವನ್ನು ಮಾಡಿ ಕ್ಷಮೆಯನ್ನು ಕೇಳಬೇಕು. ಇಂತು ಮೇಲೆಹೇಳಿದ ಯಾತ್ರೆಯನ್ನು ಮಾಡಿ ತನ್ನ ಮನೆಗೆ ಹಿಂದಿರುಗಬೇಕು.

೨೩. ಶಿವಭಕ್ತಿಪರಾಯಣರೂ, ಮಹಾಕಾಳೇಶ್ವರಕ್ಷೇತ್ರದಲ್ಲಿ ವಾಸಮಾಡುವವರೂ, ವೇದಪಾರಂಗತರೂ ಆದ ಐದು ಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಅವರಿಗೆ ನಮಸ್ಕರಿಸಬೇಕು.

೨೪. ಅವರನ್ನು ಚಿನ್ನದ ದಕ್ಷಿಣೆಯಿಂದಲೂ ಹೊಸ ಸೂಕ್ಷ್ಮವಸ್ತ್ರಗಳಿಂದಲೂ ಪೂಜಿಸಿ ಪಿಂಗಳೇಶ್ವರನ ಸಮೀಪದಲ್ಲಿ ರಥವನ್ನೂ, ಕಾಯಾವರೋಹಣೇಶ್ವರನ ಬಳಿಯಲ್ಲಿ ಗಜವನ್ನೂ ದಾನಮಾಡಬೇಕು.

ದತ್ವಾ ಬಿಲ್ವೇಶ್ವರೇ ಚಾಽಶ್ವಂ ವೃಷಂ ದತ್ವಾ ತು ಚೋತ್ತರೇ ।
ಧೇನುಂ ದತ್ವಾ ಮಹಾಕಾಲೇ ಸರ್ವೋಽಪಸ್ಕರಸಂಯುತಂ ॥ ೨೫ ॥
ಯ ಏವಂ ಕುರುತೇ ವ್ಯಾಸ ತಸ್ಯ ಪುಣ್ಯಫಲಂ ಶೃಣು ॥ ೨೬ ॥
ಪಿತೃಕೈರ್ಮಾತೃಕೈಃ ಸಾರ್ಧಂ ಕುಲೈಃ ಸ ದಿವಿ ಮೋದತೇ ।
ಅಪ್ಸರೋಗೀತನೃತ್ಯಾದ್ಯೈರ್ವಿಮಾನೈಃ ಸಾರ್ವಕಾಮಿಕೈಃ ॥ ೨೭ ॥

॥ ಇತಿ ಪಂಚೇಶಾನೀಯಾತ್ರಾಮಾಹಾತ್ಮ್ಯಂ ॥

ಯಸ್ತು ಪ್ರದಕ್ಷಿಣಾಂ ಕುರ್ಯಾನ್ನಿಯಮೇನ ಕುಶಸ್ಥಲೀಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ ೨೮ ॥
ಯಸ್ತು ಪದ್ಮಾವತೀಂ ಪಶ್ಯೇದರ್ಚಯೇತ್ಪಂಕಜೈರ್ನರಃ ।
ದತ್ವಾ ಧೂಪಂ ಸನೈವೇದ್ಯಂ ಮೃತೋ ಬ್ರಹ್ಮಪುರಂ ವ್ರಜೇತ್ ॥ ೨೯ ॥
ಸ್ವರ್ಣಶೃಂಗಾಟಿಕಾಂ ವ್ಯಾಸ ಕುಸುಮೈಃ ಸ್ವರ್ಣಸನ್ನಿಭೈಃ ।
ಸಮಭ್ಯರ್ಚ್ಯ ಮಹಾಭಕ್ತ್ಯಾ ಸ ಯಾತಿ ಶಿವಮಂದಿರಂ ॥ ೩೦ ॥

---

೨೫. ಬಿಲ್ವೇಶ್ವರನ ಸನ್ನಿಧಿಯಲ್ಲಿ ಕುದುರೆಯನ್ನೂ, ಉತ್ತರೇಶ್ವರನ ಸಮೀಪದಲ್ಲಿ ವೃಷಭವನ್ನೂ ದಾನಮಾಡಬೇಕು. ಮಹಾಕಾಲೇಶ್ವರನ ಬಳಿಯಲ್ಲಿ ಸಕಲೋಪಸ್ಕರಗಳಿಂದ ಕೂಡಿದ ಅಲಂಕೃತಧೇನುವನ್ನು ಕೊಡಬೇಕು.

೨೬. ವ್ಯಾಸನೆ! ಇಂತು ಯಾವನು ಯಾತ್ರೆಯನ್ನು ಮಾಡುವನೊ, ಅವನ ಪುಣ್ಯಫಲವನ್ನು ಕೇಳು.

೨೭. ಅಪ್ಸರಸೆಯರ ಸಂಗೀತನೃತ್ಯಾದಿ ಸೇವೆಗಳಿಂದಲೂ ಸಕಲ ಭೋಗಗಳಿಂದಲೂ ಕೂಡಿದ ವಿಮಾನದಲ್ಲಿ ಕುಳಿತು ಪಂಚೇಶಾನಯಾತ್ರೆಯನ್ನು ಮಾಡಿದವನು ತನ್ನ ತಂದೆತಾಯಿಯರ ಎರಡು ಕುಲದವರೊಡನೆಯೂ ಸ್ವರ್ಗಲೋಕದಲ್ಲಿ ಸಂತೋಷದಿಂದಿರುವನು.

೨೮. ಯಾವನು ನಿಯಮಸಹಿತವಾಗಿ ಕುಶಸ್ಥಲೀಕ್ಷೇತ್ರಕ್ಕೆ ಪ್ರದಕ್ಷಿಣೆಯನ್ನು ಮಾಡುವನೊ, ಅವನು ಸಪ್ತದ್ವೀಪಯುಕ್ತವಾದ ಭೂಮಂಡಲವನ್ನು ಪ್ರದಕ್ಷಿಣೆಯನ್ನು ಮಾಡಿದಂತೆಯೇ ಸರಿ.

೨೯. ಯಾವನು ಪದ್ಮಾವತಿಯ ದರ್ಶನವನ್ನು ಮಾಡಿಕೊಂಡು ಆಕೆಯನ್ನು ಕಮಲಗಳಿಂದರ್ಚಿಸಿ ಧೂಪನೈವೇದ್ಯಗಳನ್ನರ್ಪಿಸುವನೊ, ಆ ನರನು ಮೃತನಾಗಲು ಬ್ರಹ್ಮಪುರವನ್ನು ಸೇರುವನು.

೩೦. ವ್ಯಾಸನೆ! ಸ್ವರ್ಣಶೃಂಗಾಟಿಕಾದೇವಿಯನ್ನು ಚಿನ್ನದ ಬಣ್ಣದ ಹೂವುಗಳಿಂದ ಅತ್ಯಂತಭಕ್ತಿಯುಕ್ತನಾಗಿ ಪೂಜಿಸಿದವನು ಶಿವಮಂದಿರವನ್ನು ಸೇರುವನು.

ಅವಂತಿನೀಂ ತು ಯಃ ಪಶ್ಯೇದ್ದೇವೀಂ ತ್ರೈಲೋಕ್ಯವಿಶ್ರುತಾಂ ।
ಕಾಮಿಕೇನ ವಿಮಾನೇನ ಯಾತಿ ಪೌರಂದರಂ ಪುರಂ ॥ ೩೧ ॥
ಅರ್ಚಯೇತ್ಪಂಕಜೈರ್ಭಕ್ತ್ಯಾ ಯೋ ದೇವೀಮಮರಾವತೀಂ ।
ಅಮರೈಃ ಸಹ ಸಂಹೃಷ್ಟೋ ಮೋದತೇ ದಿವಿ ಸರ್ವದಾ ॥ ೩೨ ॥
ದೇವೀಮುಜ್ಜಯನೀಂ ಭಕ್ತ್ಯಾ ಯಃ ಪಶ್ಯತಿ ಸಮಾಹಿತಃ ।
ಸರ್ವೈಶ್ವರ್ಯಸಮಾಯುಕ್ತೋ ರುದ್ರಲೋಕೇ ಮಹೀಯತೇ ॥ ೩೩ ॥
ವಿಶಾಲಾಂ ಚೈವ ಯಃ ಪಶ್ಯೇದ್ರುದ್ರಭಕ್ತ್ಯಾ ಸಮಾಹಿತಃ ।
ಮುಚ್ಯತೇ ತ್ರಿವಿಧೈಃ ಪಾಪೈರ್ನಾತ್ರ ಕಾರ್ಯಾ ವಿಚಾರಣಾ ॥ ೩೪ ॥

॥ ಇತಿ ಶ್ರೀ ಕಲ್ಪಸಪ್ತಕಮಹಿಮಾ ॥

ಶೃಣು ವ್ಯಾಸ ಮಹಾತೀರ್ಥಂ ಪುರಾ ಯದ್ಬ್ರಹ್ಮಣಾಽರ್ಚಿತಂ ।
ಅಕ್ರೂರೇಶ್ವರಮಿತ್ಯಾಖ್ಯಂ ಯತ್ರ ಸಿದ್ಧಃ ಪಿತಾಮಹಃ ॥ ೩೫ ॥
ತತ್ರ ದೇವಾರ್ಚನಂ ಕೃತ್ವಾ ಕೃಷ್ಣಾಽಷ್ಟಮ್ಯಾಮುಪೋಷಿತಃ ।
ಜಿತೇಂದ್ರಿಯಃ ಶುಚಿರ್ದಾಂತೋ ರುದ್ರಲೋಕಮವಾಪ್ನುಯಾತ್॥ ೩೬ ॥

---

೩೧. ಮೂರು ಲೋಕಗಳಲ್ಲಿಯೂ ಪ್ರಖ್ಯಾತಳಾಗಿರುವ ಅವಂತಿನಿಯನ್ನು ಯಾವನು ನೋಡುವನೊ, ಅವನು ಇಷ್ಟಾರ್ಥಗಳನ್ನು ಕೊಡುವ ವಿಮಾನವನ್ನೇರಿ ಮಹೇಂದ್ರನ ಪಟ್ಟಣಕ್ಕೆ ಹೋಗುವನು.

೩೨. ಅಮರಾವತೀದೇವಿಯನ್ನು ಭಕ್ತಿಯಿಂದ ಕಮಲಗಳಿಂದ ಪೂಜಿಸಲು ಮನುಷ್ಯನು ಸಂತೋಷದಿಂದ ದೇವತೆಗಳೊಡನೆ ಯಾವಾಗಲೂ ಸ್ವರ್ಗಲೋಕದಲ್ಲಿ ವಾಸಮಾಡುವನು.

೩೩. ಶಾಂತಮನಸ್ಸಿನಿಂದ ಉಜ್ಜಯಿನೀದೇವಿಯನ್ನು ನೋಡಿ ಭಕ್ತಿಯನ್ನು ಮಾಡಿದವನು ಸಕಲೈಶ್ವರ್ಯಗಳಿಂದ ಕೂಡಿದವನಾಗಿ ರುದ್ರಲೋಕದಲ್ಲಿ ಉತ್ತಮಸ್ಥಾನವನ್ನು ಪಡೆಯುವನು.

೩೪. ಮಹೇಶ್ವರನಲ್ಲಿ ಭಕ್ತಿಯನ್ನಿಟ್ಟು ಏಕಾಗ್ರಚಿತ್ತದಿಂದ ವಿಶಾಲಾದೇವಿಯನ್ನು ಯಾವನು ನೋಡುವನೊ, ಅವನು ಕಾಯಿಕ, ವಾಚಿಕ, ಮಾನಸಿಕ ಪಾತಕಗಳಿಂದಲೂ ಮುಕ್ತನಾಗುವನು. ಸಂಶಯವಿಲ್ಲ.

೩೫. ವ್ಯಾಸನೆ! ಪೂರ್ವದಲ್ಲಿ ಬ್ರಹ್ಮದೇವನಿಂದ ಪೂಜಿಸಲ್ಪಟ್ಟ ಒಂದು ಮಹಾತೀರ್ಥದ ಇತಿಹಾಸವನ್ನು ಕೇಳು. ಅಕ್ರೂರೇಶ್ವರವೆಂದು ಕರೆಯಲ್ಪಡುವ ಈ ತೀರ್ಥದಲ್ಲಿಯೇ ಪಿತಾಮಹನು ಸಿದ್ಧಿಯನ್ನು ಪಡೆದನು.

೩೬. ಜಿತೇಂದ್ರಿಯನೂ, ಶುಚಿರ್ಭೂತನೂ, ದಮನಶೀಲನೂ ಆಗಿ ಕೃಷ್ಣಜನ್ಮಾಷ್ಟಮಿಯ ದಿವಸ ಅಲ್ಲಿ ಉಪವಾಸದಿಂದ ದೇವತಾರ್ಚನೆಯನ್ನು ಮಾಡಿದವನು ರುದ್ರಲೋಕವನ್ನು ಹೊಂದುವನು.

**ನ ವದೇತ್ಕೇನಚಿತ್ಸಾರ್ಧಂ ನರಃ ಪ್ರಾತರ್ಗೃಹೇ ಸ್ಥಿತಃ ।**
**ದೃಷ್ಟ್ವಾಽಕ್ರೂರೇಶ್ವರಂ ದೇವಂ ಹೇಮದಾನಫಲಂ ಲಭೇತ್ ॥ ೩೭ ॥**

॥ ಇತ್ಯಕ್ರೂರೇಶ್ವರಮಾಹಾತ್ಮ್ಯಂ ॥

**ಯಸ್ತು ಪಶ್ಯತಿ ಬ್ರಹ್ಮಾಣಂ ಶುಚಿಃ ಸ್ನಾತೋ ಜಿತೇಂದ್ರಿಯಃ ।**
**ಮುಚ್ಯತೇ ಪಾತಕಾದ್ಘೋರಾದ್ಬ್ರಹ್ಮಲೋಕಂ ಮೃತೋ ವ್ರಜೇತ್ ॥೩೮॥**
**ಪದ್ಮಾಸನಸ್ಥಿತೋ ಬ್ರಹ್ಮಾ ಧ್ಯಾಯಮಾನಃ ಪರಂ ಪದಂ ।**
**ವಸಿಷ್ಠಾದ್ಯೈರ್ಮುನಿವರ್ಯೈರ್ವಿಜ್ಞಪ್ತಃ ಕರ್ಮಸಂಭವಾನ್ ॥ ೩೯ ॥**

**ಋಷಯ ಊಚುಃ :—**

**ಆದಿತ್ಯಾ ಮರುತಃ ಸಾಧ್ಯಾಸ್ತಥಾ ಚೈವಾಽಶ್ವಿನಾವುಭೌ ।**
**ಪಿತರೋ ಯೇ ಚ ಲೋಕಾನಾಂ ಪೂಜ್ಯಂತೇ ಭುವಿ ಮಾನವೈಃ ॥ ೪೦ ॥**
**ಗ್ರಹಾರ್ಕತಾರಕಾ ಯಕ್ಷಾ ದಿಗ್ಗಜಾಶ್ಚಾಽನಲಾಽನಿಲಾಃ ।**
**ಅಮೀ ದೇವಾ ವಯಂ ಸರ್ವೇ ತ್ವದಂಶಾಃ ಪರಿಪಠ್ಯತೇ ॥ ೪೧ ॥**
**ಕಥಂ ಧ್ಯಾಯಸಿ ದೇವೇಶ ಏತತ್ಸರ್ವಂ ಬ್ರವೀಹಿ ನಃ ॥ ೪೨ ॥**

---

೩೭. ಪ್ರಾತಃಕಾಲದಲ್ಲಿ ಮನೆಯಲ್ಲಿಯೇ ಇದ್ದರೂ ಭಕ್ತನು ಯಾರೊಡನೆಯೂ ಮಾತನಾಡಬಾರದು. ಅಕ್ರೂರೇಶ್ವರಮಹಾಲಿಂಗವನ್ನು ನೋಡಲು ಚಿನ್ನದ ತುಲಾಭಾರವನ್ನು ದಾನಮಾಡಿದ ಫಲವನ್ನು ಪಡೆಯುವನು.

೩೮. ಯಾವನು ಶುಚಿಯೂ, ಸ್ನಾನಮಾಡಿದವನೂ, ಜಿತೇಂದ್ರಿಯನೂ ಆಗಿ ಬ್ರಹ್ಮದೇವನನ್ನು ನೋಡುವನೊ, ಅವನು ಮಹಾಪಾತಕಗಳಿಂದಲೂ ಮುಕ್ತನಾಗಿ ದೇಹವನ್ನು ಬಿಡಲು ರುದ್ರಲೋಕವನ್ನು ಸೇರುವನು.

೩೯. ಒಮ್ಮೆ ಚತುರ್ಮುಖನು ಪದ್ಮಾಸನಾಸೀನನಾಗಿ ಪರತತ್ತ್ವವನ್ನು ಧ್ಯಾನಿಸುತ್ತಿರಲು ವಸಿಷ್ಠನೇ ಮೊದಲಾದ ಮಹರ್ಷಿಗಳೆಲ್ಲರೂ ಆತನನ್ನು ಕಂಡು ಮನುಷ್ಯರು ಮಾಡಬೇಕಾದ ಕರ್ಮಗಳನ್ನೂ, ಅವುಗಳನ್ನು ಮಾಡುವ ಕ್ರಮಗಳನ್ನೂ ಫಲಗಳನ್ನೂ ಕುರಿತು ಪ್ರಶ್ನೆಮಾಡಿದರು.

೪೦. ಋಷಿಗಳು ಹೇಳುತ್ತಾರೆ :—ಆದಿತ್ಯರು, ಮರುತ್ತುಗಳು, ಸಾಧ್ಯರು, ಅಶ್ವಿನೀದೇವತೆಗಳು, ಪಿತೃಗಳು, ಮುಂತಾದವರೆಲ್ಲರೂ ಮನುಷ್ಯಲೋಕದ ಜನರಿಂದ ಪೂಜೆಗೊಳ್ಳುತ್ತಿರುವರಷ್ಟೆ.

೪೧. ಗ್ರಹಗಳು, ಸೂರ್ಯನು, ನಕ್ಷತ್ರಗಳು, ಯಕ್ಷರು, ದಿಗ್ಗಜಗಳು, ಅಗ್ನಿವಾಯುಗಳು, ಈ ದೇವತೆಗಳು, ನಾವು—ಎಲ್ಲರೂ ನಿನ್ನ ಅಂಶರೆಂದೇ ವೇದಗಳು ಹೇಳುತ್ತಿರುವುವು.

೪೨. ಇದೆಲ್ಲವನ್ನೂ ದೇವೇಶ್ವರನಾದ ನೀನು ಹೇಗೆ ಮನಸ್ಸಿನಲ್ಲಿ ಧ್ಯಾನ ಮಾಡುವೆಯೆಂಬುದನ್ನು ನಮಗೆ ಹೇಳು.

ಬ್ರಹ್ಮೋವಾಚ :—

ದ್ವೇ ವಿದ್ಯೇ ತತ್ವರೂಪೇ ಯೇ ಪರಾ ಚೈವಾಽಪರಾ ತಥಾ ।
ತೇ ದ್ವೇ ಚ ಮಮ ರೂಪೇ ದ್ವೇ ನಿತ್ಯೇ ಮೂರ್ತ್ಯಾತ್ಮಿಕೇ ಮಮ ॥ ೪೩ ॥

ಋಷಯ ಊಚುಃ :—

ಪಿತಾಮಹ ಕಥಂ ವಿದ್ಮೋ ಭವಂತಂ ಪರಮಂ ವಿಭುಂ ।
ಯೇನಾಽಸ್ಮಾಕಂ ಪರಾ ಸಿದ್ಧಿರ್ಜಾಯತೇ ತವ ದರ್ಶನಾತ್ ॥ ೪೪ ॥

ಬ್ರಹ್ಮೋವಾಚ :—

ಮಾಹೇಶ್ವರಂ ಪರಂ ಕ್ಷೇತ್ರಂ ಕುಶಸ್ಥಲೀತಿ ಶಬ್ದಿತಂ ।
ಯಜ್ಞಾರ್ಥಿನಾ ಮಯಾ ದೇವಃ ಶ್ರೀಕಂಠಃ ಪಾರ್ವತೀಪತಿಃ ॥ ೪೫ ॥
ಯಾಚಿತಸ್ತೇನ ದೇವೇನ ಉಕ್ತೋಽಹಂ ಪರಮೇಷ್ಠಿನಾ ।
ಸಮಂತಾದ್ಯೋಜನಂ ಸಾಗ್ರಂ ಕ್ಷೇತ್ರಮೇತತ್ಪಿತಾಮಹಃ ।
ಮಯಾ ದತ್ತಂ ತವ ವಿಭೋ ಮಹಾಕಾಲವನಾದೃತೇ ॥ ೪೬ ॥
ವಾರಿತಃ ಸ ಮಯಾ ತತ್ರ ವನೇ ಗುಪ್ತೋ ಹಿ ರೋಷತಃ ।
ಕಪರ್ದಿನಾ ಚ ತತ್ರೋಕ್ತೋ ಯಾಸ್ಯಾಮೋ ನ ತವಾಂತಿಕಂ ॥ ೪೭ ॥

---

೪೩. ಬ್ರಹ್ಮನು ಹೇಳುತ್ತಾನೆ :—ತತ್ತ್ವಸ್ವರೂಪಗಳನ್ನು ತಿಳಿಯಲು ಎರಡು ವಿದ್ಯಾಮಾರ್ಗಗಳಿರುವುವು. ಒಂದಕ್ಕೆ ಪರಾವಿದ್ಯೆಯೆಂದೂ ಮತ್ತೊಂದಕ್ಕೆ ಅಪರಾವಿದ್ಯೆಯೆಂದೂ ಕರೆಯುವರು. ಅವುಗಳೆರಡೂ ನನ್ನ ಎರಡು ರೂಪಗಳು. ನಿತ್ಯಗಳು. ಮತ್ತು ನನ್ನ ಮೂರ್ತಿಯಿಂದ ಹುಟ್ಟಿದವುಗಳು.

೪೪. ಋಷಿಗಳು ಹೇಳುತ್ತಾರೆ:—ಪಿತಾಮಹನೆ! ನಿನ್ನ ದರ್ಶನದಿಂದ ನಮಗೆ ಸರ್ವೋತ್ತಮಸಿದ್ಧಿಯಾಗಬೇಕಾದರೆ ಪರಾತ್ಪರನೂ, ಸರ್ವವ್ಯಾಪಕನೂ ಆದ ನಿನ್ನನ್ನು ಹೇಗೆ ತಿಳಿಯಬೇಕು ?

೪೫. ಬ್ರಹ್ಮನು ಹೇಳುತ್ತಾನೆ:—ಕುಶಸ್ಥಲಿಯೆಂದು ಪ್ರಖ್ಯಾತವಾದುದೂ, ಮಹೇಶ್ವರನಿಗೆ ಪರಮಪ್ರಿಯವಾದುದೂ ಆದ ಕ್ಷೇತ್ರವೊಂದಿರುವುದು. ಅಲ್ಲಿ ಯಜ್ಞವನ್ನು ಮಾಡಲೆಳಸಿ ನಾನು ದೇವದೇವನೂ ಪಾರ್ವತೀರಮಣನೂ ಆದ ಶ್ರೀಕಂಠನನ್ನು ಪ್ರಾರ್ಥಿಸಿದೆನು. ಆಗ ಪರಾತ್ಪರನಾದ ಆತನು ನನಗೆ ಇಂತೆಂದು ಅನುಗ್ರಹಿಸಿದನು.

೪೬. "ಎಲೈ ಚತುರ್ಮುಖನೆ! ನಾಲ್ಕು ಕಡೆಗಳಲ್ಲಿಯೂ ಒಂದು ಯೋಜನದ ಸಂಪೂರ್ಣ ಅಳತೆಯಿರುವ ಈ ಕ್ಷೇತ್ರವನ್ನು ನಿನಗೆ ಕೊಟ್ಟಿರುವೆನು. ಬ್ರಹ್ಮನೆ, ಆದರೆ ಮಹಾಕಾಲವನವನ್ನು ಮಾತ್ರ ಕೊಡಲಾರೆನು."

೪೭. ಅಲ್ಲಿಗೆ ಹೋಗುವುದನ್ನು ತಡೆಯಲು ನಾನು ಪ್ರಯತ್ನಿಸಲು ಆತನು ರೋಷದಿಂದ ವನದಲ್ಲಿ ಅಂತರ್ಹಿತನಾದನು. ಮತ್ತು ಕಪರ್ದಿಯಾದ ಆತನು ನನ್ನನ್ನು ಕುರಿತು "ನಾವು ನಿಮ್ಮಲ್ಲಿಗೆ ಬರುವುದಿಲ್ಲ" ಎಂದು ಹೇಳಿದನು.

ಆರಬ್ಧೋ ವೈ ತತೋ ಯಜ್ಞೋ ನಾರಾಯಣಪರಿಗ್ರಹಾತ್ ।
ಜ್ಞಾತಸ್ತಥಾಽಪಿ ನೋ ಯಜ್ಞೋ ದೇವದೇವೇನ ಶಂಭುನಾ ॥ ೪೮ ॥
ಯಜ್ಞವಾಟಂ ಕಪರ್ದೀಶಸ್ತತೋ ಭಿಕ್ಷಾರ್ಥಮಾಗತಃ ।
ಯಾಜ್ಞಿಕೈಃ ಸೋಽಥ ತತ್ರೋಕ್ತೋ ನಾಽತ್ರ ತಿಷ್ಠ ಜುಗುಪ್ಸಿತಃ ॥ ೪೯ ॥
ಕಪರ್ದಿನಾ ಚ ತೇ ತತ್ರ ಉಕ್ತಾ ಯಾಸ್ಯಾಮ್ಯಹಂ ಪುನಃ ।
ಏವಮುಕ್ತ್ವಾ ಕಪಾಲಂ ಸ ಭೂಮೌ ಸಂಸ್ಥಾಪ್ಯ ತತ್ರ ಹಿ ॥ ೫೦ ॥
ಸ್ನಾತುಂ ನದೀಂ ಯಯೌ ಶಿಪ್ರಾಂ ಕಪರ್ದೀ ಪರಮೇಶ್ವರಃ ।
ಉಕ್ತಂ ತಸ್ಮಿನ್ಗತೇ ಶಿಪ್ರಾಂ ಕಪರ್ದಿನಿ ದ್ವಿಜಾತಿಭಿಃ ॥ ೫೧ ॥
ಕಥಂ ಹಿ ಕ್ರಿಯತೇ ಹೋಮಃ ಕಪಾಲೇ ಸದಸಿ ಸ್ಥಿತೇ ।
ಅಕಪಾಲಾನಿ ಶೌಚಾನಿ ಪುರಾ ಪ್ರೋಕ್ತಂ ಮನೀಷಿಭಿಃ ॥ ೫೨ ॥
ತತ್ಕಪಾಲಂ ಸದಸ್ಯೇನ ಉತ್ಕ್ಷಿಪ್ತಂ ಪಾಣಿನಾ ಸ್ವಯಂ ।
ತಸ್ಮಿನ್ಕ್ಷಿಪ್ತೇಽಭವಚ್ಚಾಽನ್ಯತ್ಪುನಃ ಕ್ಷಿಪ್ತೇಽಭವತ್ಪುನಃ ॥ ೫೩ ॥
ಏವಂ ನಾಽಂತಂ ಕಪಾಲಾನಾಂ ಪ್ರಾಪ್ಯತೇ ಮುನಿಸತ್ತಮಾಃ ।
ರುದ್ರಂ ಕಪರ್ದಿನಂ ಮತ್ವಾ ಶರಣಂ ತಂ ಸಮಾಗತಾಃ ॥ ೫೪ ॥

---

೪೮. ಆಗ ಶ್ರೀಮನ್ನಾರಾಯಣನನ್ನೇ ಮುಂದಿಟ್ಟುಕೊಂಡು ಯಜ್ಞ ಕಾರ್ಯವನ್ನು ಆರಂಭಿಸಲಾಯಿತು. ಆದರೂ ದೇವದೇವನಾದ ಮಹಾದೇವನು ಇದನ್ನೆಲ್ಲವನ್ನೂ ತಿಳಿದೇ ಇದ್ದನು.

೪೯. ಜಟಾಧಾರಿಯಾದ ಆತನು ಭಿಕ್ಷಾರ್ಥವಾಗಿ ಯಜ್ಞಶಾಲೆಗೆ ಬಂದನು. ಯಾಜ್ಞಿಕರು ಆತನನ್ನು ಕಂಡು, "ನೀಚವೇಷಧಾರಿಯಾದ ನೀನಿಲ್ಲಿ ನಿಲ್ಲಬೇಡ" ಎಂದು ಗದರಿಸಿದರು.

೫೦. ಮಹೇಶ್ವರನು ಅವರಿಗೆ, "ನಾನು ಮತ್ತೆ ಬರುತ್ತೇನೆ" ಎಂದು ಹೇಳಿ ಕಪಾಲವನ್ನು ಅಲ್ಲಿಯೇ ಭೂಮಿಯಲ್ಲಿರಿಸಿದನು.

೫೧. ಪರಮೇಶ್ವರನು ಸ್ನಾನಮಾಡುವುದಕ್ಕಾಗಿ ಶಿಪ್ರಾನದಿಗೆ ಹೊರಟು ಹೋಗಲು ಆಗ ಬ್ರಾಹ್ಮಣರೆಲ್ಲರೂ ಕಲೆತು ಯೋಚಿಸತೊಡಗಿದರು.

೫೨. ಈ ಕಪಾಲವು ಯಜ್ಞಮಂಟಪದಲ್ಲಿರಲು ಹೋಮವನ್ನು ಮಾಡಲು ಹೇಗೆ ಬಂದೀತು? ಕಪಾಲಾದಿ ನರಾಸ್ಥಿಗಳಿಲ್ಲದ ಪ್ರದೇಶವೇ ಶುಚಿಯಾದುದೆಂದು ಹಿಂದಿನ ಶಾಸ್ತ್ರಜ್ಞರು ಹೇಳಿರುವರಲ್ಲವೆ.

೫೩–೫೪. ಆಗ ಒಬ್ಬ ಸಭಿಕನು ಆ ಕಪಾಲವನ್ನು ತಾನೇ ಕೈಯಿಂದ ತೆಗೆದು ಹೊರಗೆ ಬಿಸಾಡಿದನು. ಒಳಗೆ ಬರಲು ಅದಿದ್ದ ಸ್ಥಳದಲ್ಲಿ ಮತ್ತೊಂದು ಕಪಾಲವಿದ್ದಿತು. ಅದನ್ನೂ ಹೊರಗೆ ಹಾಕಲು ಮತ್ತೊಂದುಂಟಾಯಿತು. ಇಂತು ಆ ಮುನಿಶ್ರೇಷ್ಠರು ಕಪಾಲಗಳಿಗೆ ಕೊನೆಯನ್ನೇ ಕಾಣದಾದರು. ಆಗ ಭಿಕ್ಷುಕನು ಮಹೇಶ್ವರನೆಂಬ ಅರಿವುಂಟಾಗಲು ಆತನಿಗೆ ಶರಣುಹೊಕ್ಕರು.

ತತಃ ಸ ದರ್ಶನಂ ಪ್ರಾದಾದ್ಭಕ್ತ್ಯಾ ತುಷ್ಟೋ ಮಹೇಶ್ವರಃ ।
ಕಪಾಲಪಾಣಿರ್ಭಗವಾನ್ಮಾಮುವಾಚ ತತಃ ಪ್ರಭುಃ ॥ ೫೫ ॥
ವರಂ ವರಯ ಭೋ ಬ್ರಹ್ಮನ್ಯತ್ತೇ ಮನಸಿ ವರ್ತತೇ ।
ನಾಽಸ್ತ್ಯದೇಯಂ ಮಯಾ ತುಭ್ಯಂ ಸರ್ವಂ ದಾಸ್ಯಾಮಿ ತತ್ವತಃ ॥ ೫೬ ॥
ಬ್ರಹ್ಮೋತ್ತರಮಿದಂ ಸ್ಥಾನಂ ಮಯಾ ದತ್ತಂ ಚತುರ್ಮುಖ ।
ಕಾರಯಸ್ವ ಯಥಾಕಾಮಂ ಯಥಾವರ್ಣಚತುಷ್ಟಯಂ ॥ ೫೭ ॥
ಏವಂ ವದಂತಂ ವರದಮೀಶಾನಂ ಪರಮೇಶ್ವರಂ ।
ತಥೇತಿ ಚೋಕ್ತ್ವಾ ಸದಸಿ ನ ಮಯಾಽನ್ಯೋ ವರೋ ವೃತಃ ॥ ೫೮ ॥
ಉಜ್ಜಯಿನೀತಿ ವೈ ನಾಮ ಕುಶಸ್ಥಲ್ಯಾಂ ನಿವೇಶಿತಂ ।
ಕುಂಡಂ ಮಂದಾಕಿನೀ ತತ್ರ ಮಯಾ ಕೃತಮನಂತರಂ ॥ ೫೯ ॥
ತತ್ರ ವಿಪ್ರಾಃ ಕೃತೇ ಸ್ನಾನೇ ಸರ್ವಪಾಪೈಃ ಪ್ರಮುಚ್ಯತೇ ।
ತಸ್ಯಾಂ ಸಂಸ್ಥಾಪಯೇದ್ದಿಕ್ಷು ಚತುರೋಽರ್ಘಘಟಾಂಛುಭಾನ್ ॥ ೬೦ ॥

---

೫೫. ಅವರ ಭಕ್ತಿಗೆ ಸಂತುಷ್ಟನಾದ ಮಹೇಶ್ವರನು ಪ್ರತ್ಯಕ್ಷದರ್ಶನವನ್ನು ಅನುಗ್ರಹಿಸಿದನು. ಬಳಿಕ ಆ ಕಪಾಲವನ್ನು ಕೈಗೆ ತೆಗೆದುಕೊಂಡು ಲೋಕೇಶ್ವರನು ನನಗೆ ಹೇಳಿದನು.

೫೬. "ಬ್ರಹ್ಮದೇವನೆ! ನಿನಗೆ ಮನಸ್ಸಿನಲ್ಲಿ ಅಪೇಕ್ಷೆಯಿರುವ ವರವನ್ನು ಕೇಳಿಕೊ. ನಾನು ನಿನಗೆ ಕೊಡಲಾರದುದೇ ಇಲ್ಲವು. ನಿಜವಾಗಿಯೂ ನಿನಗೆ ಎಲ್ಲವನ್ನೂ ಕೊಡಲಿರುವೆನು.

೫೭. ಚತುರ್ಮುಖನೆ! ಈ ಸ್ಥಾನವನ್ನು ಬ್ರಹ್ಮೋತ್ತರವೆಂದು ಹೆಸರಿಟ್ಟು ನಿನಗೆ ಕೊಟ್ಟಿರುವೆನು. ಇದನ್ನು ನಿನಗೆ ಇಷ್ಟಬಂಗಂತೆ ಚಾತುರ್ವರ್ಣ್ಯದವರಿಗೂ ಅನುಕೂಲವಾಗುವಂತೆ ಮಾಡು."

೫೮. ಇಂತು ಹೇಳುತ್ತಿರುವ ವರಪ್ರದನೂ, ಲೋಕನಾಥನೂ ಆದ ಪರಮೇಶ್ವರನಿಗೆ, ನಾನು ಸಭಾಮಧ್ಯದಿಂದ ಹಾಗೆಯೇ ಆಗಲೆಂದು ಹೇಳಿದೆನು. ಬೇರೆ ಯಾವ ವರವನ್ನೂ ಬೇಡಲಿಲ್ಲ.

೫೯. ಕುಶಸ್ಥಳಿಗೆ ನಾನೇ ಉಜ್ಜಯಿನಿಯೆಂಬ ಹೆಸರನ್ನಿಟ್ಟೆನು. ಬಳಿಕ ಅಲ್ಲಿ ಮಂದಾಕಿನೀಕುಂಡವೆಂಬ ತೀರ್ಥವನ್ನೂ ನಿರ್ಮಿಸಿದೆನು.

೬೦. ಬ್ರಾಹ್ಮಣೋತ್ತಮರಿರಾ! ಅದರಲ್ಲಿ ಸ್ನಾನಮಾಡಿದವನ ಸಕಲಪಾತಕಗಳೂ ತೊಲಗುವುವು. ಯಾತ್ರಿಕನಾದವನು ಆ ಕುಂಡದ ನಾಲ್ಕು ದಿಕ್ಕುಗಳಲ್ಲಿಯೂ ಬೆಲೆಬಾಳುವ ನಾಲ್ಕು ಪವಿತ್ರಕುಂಭಗಳನ್ನು ಸ್ಥಾಪನೆ ಮಾಡಬೇಕು.

ಸತಿಲಾಂಸ್ತಾನ್ಸವಸ್ತ್ರಾಂಶ್ಚ ಸಫಲಾನ್ಮಂಡಕೈಃ ಸಹ ।
ಕಾರ್ತಿಕ್ಯಾಮಥ ಮಾಘ್ಯಾಂ ಚ ಚಾತುರ್ವಿದ್ಯೇ ಪ್ರದಾಪಯೇತ್ ॥ ೬೧ ॥
ಪ್ರಥಮಂ ಚ ಋಗ್ವೇದಾಯ ಯಜುರ್ವೇದಾಯ ದಕ್ಷಿಣಂ ।
ಪಶ್ಚಿಮಂ ಸಾಮವೇದಾಯ ಅಥರ್ವಣೇ ತಥೋತ್ತರಂ ॥ ೬೨ ॥
ವೇದಾನುದ್ದಿಶ್ಯ ಚಾಽಪ್ಯೇವಂ ಪ್ರೀಯತಾಂ ಮೇ ಪಿತಾಮಹಃ ।
ಕೃತೇ ಚೈವಂ ಹಿ ಯತ್ಪುಣ್ಯಂ ತಚ್ಛೃಣುಧ್ವಂ ಸಮಾಹಿತಾಃ ॥ ೬೩ ॥
ಸರ್ವತೀರ್ಥೇಷು ಯತ್ಪುಣ್ಯಂ ಮಂದಾಕಿನ್ಯಾಂ ತಥಾ ಭವೇತ್ ।
ಸಹಸ್ರಗುಣಿತಂ ಸ್ನಾನಂ ಜಾಪ್ಯಂ ಲಕ್ಷಗುಣಂ ಭವೇತ್ ॥ ೬೪ ॥
ದಾನಂ ಕೋಟಿಗುಣಂ ಜ್ಞೇಯಂ ಮಂದಾಕಿನ್ಯಾಂ ನ ಸಂಶಯಃ ।
ಕೌಮುದೇ ಮಾಸಿ ಸಂಪ್ರಾಪ್ತೇ ಗೋದಾನಂ ತತ್ರ ಕಾರಯೇತ್ ॥ ೬೫ ॥
ಘೃತಧೇನುಂ ಚ ಕಾರ್ತಿಕ್ಯಾಂ ಮಾಘ್ಯಾಂ ತಿಲಮಯೀಂ ತಥಾ ।
ಜಲಧೇನುಂ ತು ವೈಶಾಖ್ಯಾಂ ದತ್ವಾ ಮುಚ್ಯೇತ ಪಾತಕೈಃ ॥ ೬೬ ॥

---

೬೧. ಎಳ್ಳು, ವಸ್ತ್ರಗಳು, ಫಲಗಳು, ದೋಸೆಗಳು ಮುಂತಾದುವುಗಳಿಂದ ಕೂಡಿದ ಅವುಗಳನ್ನು ಕಾರ್ತಿಕ ಮತ್ತು ಮಾಘ ಮಾಸಗಳ ಹುಣ್ಣಿಮೆಗಳಲ್ಲಿ ಪೂಜಿಸಿ ನಾಲ್ಕು ವೇದಗಳಲ್ಲಿ ನಿಷ್ಣಾತರಾದವರಿಗೆ ದಾನಮಾಡಬೇಕು.

೬೨. ಪೂರ್ವದಿಕ್ಕಿನ ಕುಂಭವನ್ನು ಋಗ್ವೇದವನಿಗೂ, ಪಶ್ಚಿಮಕಲಶವನ್ನು ಸಾಮವೇದಿಗೂ, ಉತ್ತರಕಲಶವನ್ನು ಅಥರ್ವವೇದಪಾರಾಯಣಪರನಿಗೂ, ದಕ್ಷಿಣಕಲಶವನ್ನು ಯಜುರ್ವೇದಪಾಠಕನಿಗೂ ಕೊಡಬೇಕು.

೬೩. "ವೇದಗಳನ್ನುದ್ದೇಶಿಸಿ ಮಾಡಿದ ಈ ದಾನಫಲದಿಂದ ಬ್ರಹ್ಮದೇವನು ನನ್ನಲ್ಲಿ ಸುಪ್ರೀತನಾಗಲಿ" ಎಂದು ಪ್ರಾರ್ಥಿಸಬೇಕು. ಇಂತು ಮಾಡಿದವನ ಪುಣ್ಯವು ಎಷ್ಟೆಂಬುದನ್ನು ಸಮಾಹಿತಚಿತ್ತರಾಗಿ ಕೇಳಿರಿ.

೬೪. ಸಕಲ ತೀರ್ಥಗಳಲ್ಲಿಯೂ ಇರುವ ಪುಣ್ಯವೆಲ್ಲವೂ ಮಂದಾಕಿನೀ ತೀರ್ಥದಲ್ಲಿ ಒಟ್ಟುಗೂಡಿರುವುದು. ಅದರಲ್ಲಿ ಮಾಡಿದ ಸ್ನಾನವು ಬೇರೆ ತೀರ್ಥಗಳಲ್ಲಿ ಮಾಡಿದ ಸ್ನಾನದ ಸಾವಿರದಷ್ಟು ಪುಣ್ಯವನ್ನೂ, ಜಪವು ಲಕ್ಷದಷ್ಟು ಪುಣ್ಯವನ್ನೂ ಕೊಡುವುವು.

೬೫. ಮಂದಾಕಿನೀತೀರ್ಥದಲ್ಲಿ ಮಾಡಿದ ದಾನವು ಕೋಟಿಗುಣಿತವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಆಶ್ವಯುಜಮಾಸವು ಪ್ರಾಪ್ತವಾಗಲು ಅಲ್ಲಿ ಗೋದಾನವನ್ನು ಮಾಡಬೇಕು.

೬೬. ಕಾರ್ತಿಕಮಾಸದಲ್ಲಿ ಘೃತಧೇನುವನ್ನೂ, ಮಾಘಮಾಸದಲ್ಲಿ ತಿಲಧೇನುವನ್ನೂ, ವೈಶಾಖಮಾಸದಲ್ಲಿ ಜಲಧೇನುವನ್ನೂ ದಾನಮಾಡಿದವನು ಪಾತಕಗಳಿಂದ ಮುಕ್ತನಾಗುವನು.

ವಾಚಿಕಂ ಮಾನಸಂ ಪಾಪಂ ಕರ್ಮಜಂ ಯಚ್ಚ ದುಷ್ಕೃತಂ ।
ವಿನಶ್ಯೇತ್ಕಿಲ್ಬಿಷಂ ಸರ್ವಂ ಮಂದಾಕಿನ್ಯಾಸ್ತು ದರ್ಶನಾತ್ ॥ ೬೭ ॥
ಮಂದಾಕಿನೀಸಮಂ ತೀರ್ಥಂ ಪೃಥಿವ್ಯಾಂ ನೈವ ದೃಶ್ಯತೇ ।
ಯಸ್ಯ ದರ್ಶನಮಾತ್ರೇಣ ಬ್ರಹ್ಮಲೋಕೇ ಸ ಮೋದತೇ ॥ ೬೮ ॥
ಮಂದಾಕಿನ್ಯಾಂ ತು ಯಃ ಸ್ನಾನಂ ಕೃತ್ವಾ ಶ್ರಾದ್ಧಂ ಪ್ರದಾಸ್ಯತಿ ।
ದರ್ಶೇ ಚ ಪೂರ್ಣಿಮಾಯಾಂ ವಾ ಪಿತೃಲೋಕೇ ಸ ಮೋದತೇ ॥ ೬೯ ॥
ಪಿತಾಮಹಂ ತು ಯೋ ಭಕ್ತ್ಯಾ ನಿತ್ಯಂ ಪಶ್ಯತಿ ಮಾನವಃ ।
ಅಶ್ವಮೇಧಸಹಸ್ರೇಣ ರಾಜಸೂಯಶತೇನ ಚ ॥ ೭೦ ॥
ಯುಜ್ಯತೇ ನಾಽತ್ರ ಸಂದೇಹಃ ಸತ್ಯಮೇತತ್ತಪೋಧನಾಃ ।
ತತೋ ಮನ್ವಂತರೇಽತೀತೇ ಪ್ರಾಪ್ತೇ ವೈವಸ್ವತೇ ಪುನಃ ॥ ೭೧ ॥
ತೇನೈವೋನ್ಮತ್ತವೇಷೇಣ ಊರ್ಧ್ವಶಿಶ್ನೋ ಮಹೇಶ್ವರಃ ।
ಪ್ರವಿಷ್ಟೋ ಬ್ರಹ್ಮಣಃ ಸತ್ರೇ ದೃಷ್ಟಸ್ತೈರ್ದ್ವಿಜಸತ್ತಮೈಃ ॥ ೭೨ ॥
ತೇ ಬ್ರಾಹ್ಮಣಾಃ ಶಪಂತಿಸ್ಮ ನಿಂದಾಂ ಕುರ್ವಂತಿ ಚಾಽಪರೇ ।
ಅಪರೇ ಪಾಂಸುಭಿಃ ಶಿಶ್ನಂ ಘ್ನಂತಿ ತಸ್ಯಾಽಶಪನ್ದ್ವಿಜಾಃ ॥ ೭೩ ॥

---

೬೭. ಮಾತಿನಲ್ಲಾಗಲಿ, ಮನಸ್ಸಿನಲ್ಲಾಗಲಿ, ಕರ್ಮದಿಂದಲಾಗಲಿ ಯಾವ ಯಾವ ಪಾಪವನ್ನು ಮಾಡಿರುವೆವೊ, ಅದೆಲ್ಲವೂ ಮಂದಾಕಿನೀತೀರ್ಥದ ದರ್ಶನದಿಂದಲೇ ನಾಶವಾಗುವುದು.

೬೮. ಮಂದಾಕಿನಿಗೆ ಸಮನಾದ ತೀರ್ಥವು ಭೂಲೋಕದಲ್ಲಿಯೇ ಎಲ್ಲಿಯೂ ಕಾಣುವುದಿಲ್ಲ. ಅದರ ದರ್ಶನವನ್ನು ಮಾಡುವುದರಿಂದಲೇ ಮಾನವನು ಬ್ರಹ್ಮಲೋಕದಲ್ಲಿ ಆನಂದದಿಂದಿರುವನು.

೬೯. ಅಮಾವಾಸ್ಯೆಯಲ್ಲಾಗಲಿ, ಹುಣ್ಣಿಮೆಯಲ್ಲಾಗಲಿ ಮಂದಾಕಿನೀತೀರ್ಥದಲ್ಲಿ ಸ್ನಾನವನ್ನು ಮಾಡಿ ಯಾವನು ಶ್ರಾದ್ಧವನ್ನು ಮಾಡುವನೊ, ಅವನು ಪಿತೃಲೋಕದಲ್ಲಿ ಸಂತೋಷದಿಂದ ವಾಸಮಾಡುವನು.

೭೦–೭೨. ಯಾವ ಮಾನವನು ಭಕ್ತಿಯಿಂದ ನಿತ್ಯವೂ ಪಿತಾಮಹೇಶ್ವರನನ್ನು ನೋಡುವನೊ, ಅವನು ಒಂದು ಸಾವಿರ ಅಶ್ವಮೇಧಗಳನ್ನೂ, ನೂರು ರಾಜಸೂಯಗಳನ್ನೂ ಮಾಡಿದ ಪುಣ್ಯಕ್ಕೆ ಭಾಗಿಯಾಗುವನು. ಎಲೈ ತಪೋಧನರಿರಾ! ಇದು ನಿಜವು. ಇದರಲ್ಲಿ ಸಂದೇಹವೇ ಇಲ್ಲ. ಇಂತು ಆ ಮನ್ವಂತರವು ಕಳೆದು ಮತ್ತೆ ವೈವಸ್ವತಮನ್ವಂತರವು ಪ್ರಾರಂಭಿಸಲು ಪುನಃ ಹುಚ್ಚನಂತೆ ವೇಷವನ್ನು ಹಾಕಿಕೊಂಡು ಮಹೇಶ್ವರನು ಊರ್ಧ್ವಶಿಶ್ನನಾಗಿ ಬ್ರಹ್ಮನ ಯಜ್ಞಮಂಟಪವನ್ನು ಪ್ರವೇಶಿಸಿದನು. ಆ ಬ್ರಾಹ್ಮಣೋತ್ತಮರು ಆವನನ್ನು ಕಂಡರು.

೭೩. ಕೆಲವು ಬ್ರಾಹ್ಮಣರು ಆತನನ್ನು ಶಪಿಸಿದರು. ಹಲವರು ಆತನ

ಲೋಷ್ಟೈರ್ಲಗುಡಕೈಶ್ಚಾಽನ್ಯೇ ಘ್ನಂತಿ ತಂ ಬಲಗರ್ವಿತಾಃ ।
ಜಟಾಮುಕುಟಕಂ ಕೇಚಿದ್ಧೃತ್ವಾ ಕರ್ಷಂತಿ ಚಾಽಪರೇ ॥ ೭೪ ॥
ಪೃಚ್ಛಂತಿ ವ್ರತಚರ್ಯಾಂ ವೈ ವ್ರತಂ ಕೇನ ಚ ದರ್ಶಿತಂ ।
ಅತ್ರ ಚೈವ ಸ್ತ್ರಿಯಃ ಸಂತಿ ಕಥಮೇತತ್ತ್ವಯಾ ಕೃತಂ ॥ ೭೫ ॥
ಬ್ರಹ್ಮಣಾ ಚೇದೃಶೀ ಚರ್ಯಾ ವಿಷ್ಣುನಾ ವಾ ಕೃತಾ ಸ್ವಯಂ ।
ಗಿರಿಶೇನಾಽಪಿ ದೇವೇನ ಕೇನೇದಂ ದುಷ್ಕೃತಂ ಕೃತಂ ॥ ೭೬ ॥
ಮಾ ವಿಡಂಬಯ ದೇವೇಶಂ ವಧ್ಯೋ ಹಿ ನಸ್ತ್ವಮದ್ಯ ವೈ ।
ಏವಂ ತೈರ್ಹನ್ಯಮಾನಸ್ತು ಬ್ರಾಹ್ಮಣೈಸ್ತತ್ರ ಶಂಕರಃ ॥ ೭೭ ॥
ಸ್ಮಿತಂ ಕೃತ್ವಾಽಬ್ರವೀತ್ಸರ್ವಾನ್ಬ್ರಾಹ್ಮಣಾನ್ಪರಮೇಶ್ವರಃ ।
ಕಿಂ ಯೂಯಂ ಮಾಮಭಿಹಥ ಹ್ಯುನ್ಮತ್ತಂ ನಷ್ಟಚೇತಸಂ ॥ ೭೮ ॥
ಯೂಯಂ ಕಾರುಣಿಕಾಃ ಸರ್ವೇ ಮೈತ್ರಭಾವೇ ವ್ಯವಸ್ಥಿತಾಃ ।
ತಮೇವಂ ವಾದಿನಂ ದೇವಂ ಜಾಲ್ಮರೂಪಧರಂ ಹರಂ ॥ ೭೯ ॥

---

ನಿಂದೆಯನ್ನು ಮಾಡಿದರು. ಇತರರು ಸಗಣಿ, ಮಣ್ಣು ಹೆಂಟೆಗಳಿಂದ ಅವನ ಶಿಕ್ಷಿಕ್ಕೆ ಹೊಡೆದರು. ಇಂತು ಆ ದ್ವಿಜರೆಲ್ಲರೂ ಆತನನ್ನು ದೂಷಿಸತೊಡಗಿದರು.

೭೪. ಮತ್ತೆ ಕೆಲವರು ಬಲೋನ್ಮತ್ತರಾಗಿ ಕಬ್ಬಿಣದ ಸಲಾಕೆಗಳಿಂದಲೂ, ದೊಣ್ಣೆಗಳಿಂದಲೂ ಆತನನ್ನು ಹೊಡೆದರು. ಕೆಲವರು ಕಿರೀಟದಂತೆ ಕಟ್ಟಿರುವ ಆತನ ಜಟಾಮಂಡಲವನ್ನು ಹಿಡಿದು ಸೆಳೆಯುತ್ತಿದ್ದರು.

೭೫. ಕೆಲವರು ಆತನು ಮಾಡುತ್ತಿದ್ದ ವ್ರತಾಚರಣೆಯನ್ನು ಕುರಿತು ಪ್ರಶ್ನೆ ಮಾಡಿದರು. "ಈ ವ್ರತವನ್ನು ನಿನಗೆ ಯಾರು ಉಪದೇಶಿಸಿದರು? ಇಲ್ಲಿ ಬಹು ಮಂದಿ ಹೆಂಗಸರಿರುವರು. ನೀನು ಇಂತಹ ಅಕಾರ್ಯವನ್ನು ಹೇಗೆ ಮಾಡಿದೆ?

೭೬. ಬ್ರಹ್ಮದೇವನಾಗಲಿ, ಸಾಕ್ಷಾನ್ಮಹಾವಿಷ್ಣುವೇ ಆಗಲಿ, ದೇವೇಶ್ವರನಾದ ಮಹೇಶ್ವರನೇ ಆಗಲಿ—ಯಾರಾದರೂ ಇಂತಹ ದುಷ್ಕಾರ್ಯವನ್ನು ಮಾಡಿರುವರೆ?

೭೭. ದಿಗಂಬರನಾದ ಮಹಾದೇವನನ್ನು ನೀನು ಈ ವೇಷದಿಂದ ಅನುಕರಿಸಬೇಡ. ನೀನು ಈಗ ನಮಗೆ ವಧ್ಯನಾಗಿರುವೆ." ಇಂತೆಂದು ಕೂಗುತ್ತಿರುವ ಬ್ರಾಹ್ಮಣರಿಂದ ಆ ಶಂಕರನು ಅನೇಕ ಪೆಟ್ಟುಗಳನ್ನು ತಿಂದನು.

೭೮. ಆ ಪರಮೇಶ್ವರನು ಮಂದಹಾಸದಿಂದ ಕೂಡಿದವನಾಗಿ ಸಕಲ ಬ್ರಾಹ್ಮಣರನ್ನೂ ಕುರಿತು ಹೇಳಿದನು. "ಹುಚ್ಚನೂ, ನಷ್ಟಚೇತನನೂ ಆದ ನನ್ನನ್ನು ಸುಮ್ಮನೆ ನೀವೇಕೆ ಹೊಡೆಯುವಿರಿ?

೭೯–೮೦. ನೀವೆಲ್ಲರೂ ಕರುಣಾಮೂರ್ತಿಗಳಾಗಿರುವಿರಿ. ಅಲ್ಲದೆ ಸಕಲರಲ್ಲಿಯೂ ಮೈತ್ರೀಭಾವದಿಂದ ವರ್ತಿಸಬೇಕಾದ ಯಜ್ಞಕರ್ಮದಲ್ಲಿ ನಿರತರಾಗಿರು

ಮಾಯಯಾ ತಸ್ಯ ದೇವಸ್ಯ ಮೋಹಿತಾಸ್ತೇ ದ್ವಿಜಾತಯಃ ।
ಪುನಃ ಕಪರ್ದಿನಂ ಜಘ್ನುಃ ಪಾಣಿಪಾದೇನ ವೈ ದ್ವಿಜಾಃ ॥ ೮೦ ॥
ತಾಡ್ಯಮಾನಸ್ತು ತೈರ್ವಿಪ್ರೈಃ ಪರಂ ಕೋಪಮುಪಾಗಮತ್ ।
ತತೋ ದೇವೇನ ತೇ ಶಪ್ತಾ ಯೂಯಂ ವೇದವಿವರ್ಜಿತಾಃ ॥ ೮೧ ॥
ಊರ್ಧ್ವಜಟಾಃ ಸಲಗುಡಾಃ ಪರದಾರೋಪಜೀವಿನಃ ।
ರತಾ ದ್ಯೂತೇ ಚ ವೇಶ್ಯಾಯಾಂ ಪಿತೃಮಾತೃವಿವರ್ಜಿತಾಃ ॥ ೮೨ ॥
ನ ಪುತ್ರೇ ಪಿತೃವಿತ್ತಂ ಚ ವಿದ್ಯಾ ವಾಽಪಿ ಭವಿಷ್ಯತಿ ।
ಶಿಶ್ನೋ ಮಮ ಹತೋ ಯೈಶ್ಚ ತೇ ಸರ್ವೇಂದ್ರಿಯವರ್ಜಿತಾಃ ॥ ೮೩ ॥
ರೌದ್ರಾಂ ಭಿಕ್ಷಾಂ ತು ಭಿಕ್ಷಂತಃ ಪರಪಿಂಡೋಪಜೀವಿನಃ ।
ಆತ್ಮಾನಂ ವರ್ಣಯಿಷ್ಯಂತಿ ಧನಧಾನ್ಯವಿವರ್ಜಿತಾಃ ॥ ೮೪ ॥
ಯೈಶ್ಚ ತತ್ರ ಕೃತಾ ವಿಪ್ರೈರ್ಹನ್ಯಮಾನೇ ಕೃಪಾ ಮಯಿ ।
ತೇಷಾಂ ಧನಂ ಚ ಪುತ್ರಾಶ್ಚ ದಾಸೀದಾಸಾದಯಶ್ಚ ವೈ ॥ ೮೫ ॥

---

ವಿರಿ.'' ಇಂತೆಂದು ಪ್ರಾಕೃತವೇಷಧಾರಿಯಾದ ಆ ಮಹೇಶ್ವರನು ನುಡಿಯುತ್ತಿರಲು ಸರ್ವಾಂತರ್ಯಾಮಿಯಾದ ಆತನ ಮಾಯೆಯಿಂದ ಮೋಹಿತರಾದ ಬ್ರಾಹ್ಮಣರೆಲ್ಲರೂ ಮತ್ತೆ ಮತ್ತೆ ಆತನನ್ನು ಕೈಗಳಿಂದ ಹೊಡೆಯುತ್ತಿದ್ದರು.

೮೧. ಈ ರೀತಿ ಆ ವಿಪ್ರರಿಂದ ಹೊಡೆಯಲ್ಪಟ್ಟ ದೇವೇಶ್ವರನಿಗೆ ಬಹಳ ಸಿಟ್ಟು ಬಂದಿತು. ಆಗ ಆತನು ಅವರೆಲ್ಲರನ್ನೂ ಶಪಿಸಿದನು. ''ನೀವೆಲ್ಲರೂ ವೇದಜ್ಞಾನವಿಲ್ಲದವರಾಗುವಿರಿ.

೮೨. ತಲೆಯಮೇಲೆ ಜಡೆಗಳನ್ನು ಕಟ್ಟಿಕೊಂಡು ದೊಣ್ಣೆಗಳನ್ನು ಹಿಡಿದು ಪರಸ್ತ್ರೀಯರೊಡನೆ ಸಹವಾಸಮಾಡುವಿರಿ. ಜೂಜಾಟಗಳಲ್ಲಿಯೂ, ವೇಶ್ಯೆಯರಲ್ಲಿಯೂ ಆಸಕ್ತರಾಗುವಿರಿ. ತಾಯಿತಂದೆಗಳು ನಿಮ್ಮನ್ನು ಕೈಬಿಡುವರು.

೮೩. ನಿಮ್ಮ ವಂಶಗಳಲ್ಲಿ ಮಗನಿಗೆ ತಂದೆಯ ಧನವಾಗಲಿ, ವಿದ್ಯೆಯಾಗಲಿ ಅನುಸರಿಸಿ ಬರಲಾರದು. ನನ್ನ ಶಿಶ್ನಕ್ಕೆ ಹೊಡೆದವರು ಯಾರಿರುವರೊ, ಅವರಿಗೆ ಸಕಲೇಂದ್ರಿಯಗಳೂ ಶಿಥಿಲಗಳಾಗುವುವು.

೮೪. ನೀಚವಾದ ಭಿಕ್ಷಾಚರಣೆಯನ್ನು ಅವರು ಮಾಡಬೇಕು. ಪರಾನ್ನದಿಂದಲೇ ಅವರಿಗೆ ಜೀವನವು. ಯಾವಾಗಲೂ ಧನಧಾನ್ಯಗಳಿಲ್ಲದ ದರಿದ್ರರಾಗಿ ಅವರು ತಮ್ಮನ್ನೇ ನಿಂದಿಸಿಕೊಳ್ಳುತ್ತಿರುವರು.

೮೫. ನನ್ನನ್ನು ಹೊಡೆಯುತ್ತಿದ್ದಾಗ ಯಾವ ಹಲವರು ನನ್ನಲ್ಲಿ ಕರುಣೆಯನ್ನು ತೋರಿದರೊ, ಅವರಿಗೆ ಧನಧಾನ್ಯಸಮೃದ್ಧಿಯೂ, ಪುತ್ರಸಂತಾನವೂ, ದಾಸದಾಸೀಪರಿವಾರವೂ ಲಭಿಸುವುವು.

**ಕುಲೋತ್ಪನ್ನಾಶ್ಚ ವೈ ನಾರ್ಯೋ ಭವಿಷ್ಯಂತಿ ವರಾನ್ಮಮ ।**
**ಏವಂ ಶಾಪಂ ವರಂ ದತ್ವಾ ಗತೋಽಂತರ್ಧಾನಮೀಶ್ವರಃ ॥ ೮೬ ॥**
**ತತೋ ದ್ವಿಜಾ ಗತೇ ದೇವೇ ಮತ್ವಾ ತಂ ಶಂಕರಂ ವಿಭುಂ ।**
**ಅನ್ವೇಷಯಂತೋ ಯತ್ನೇನ ಮಹಾಕಾಲವನಂ ಗತಾಃ ॥ ೮೭ ॥**
**ಸ್ನಾತ್ವಾ ಸರಸಿ ರುದ್ರಸ್ಯ ಜಪಂತಃ ಶತರುದ್ರಿಯಂ ।**
**ಜಾಪ್ಯಾವಸಾನೇ ತಾನ್ದೇವೋಽಶರೀರಿಣ್ಯಾ ಗಿರಾಽಬ್ರವೀತ್ ॥ ೮೮ ॥**
**ಅನೃತಂ ನ ಮಯಾ ಪ್ರೋಕ್ತಂ ಸ್ವೈರೇಷ್ವಪಿ ಕುತಃ ಸುಖಂ ।**
**ಭೂಯೋಽಪ್ಯನುಗ್ರಹಂ ವಿಪ್ರಾ ಯುಷ್ಮಾಕಂ ಕರವಾಣ್ಯಹಂ ॥ ೮೯ ॥**
**ಶಾಂತಾ ದಾಂತಾಶ್ಚ ಯೇ ವಿಪ್ರಾ ಭಕ್ತಿಮಂತೋ ಮಯಿ ಸ್ಥಿತಾಃ ।**
**ನ ತೇಷಾಂ ಛಿದ್ಯತೇ ವಂಶೋ ನ ಧನಂ ನ ಚ ಸಂತತಿಃ ॥ ೯೦ ॥**
**ಅಗ್ನಿಹೋತ್ರರತಾ ಯೇ ಚ ಭಕ್ತಿಮಂತೋ ಜನಾರ್ದನೇ ।**
**ಪೂಜಯಂತಿ ಚ ಬ್ರಹ್ಮಾಣಂ ತೇಜೋರಾಶಿಂ ದಿವಾಕರಂ ॥ ೯೧ ॥**

---

೮೬. ಅವರಿಗೆ ನನ್ನ ವರಪ್ರಸಾದದ ಬಲದಿಂದ ಸತ್ಕುಲಪ್ರಸೂತೆಯರಾದ ಸ್ತ್ರೀಯರೇ ಪತ್ನಿಯರಾಗುವರು.'' ಇಂತು ಶಾಪವನ್ನೂ, ವರವನ್ನೂ ಏಕಕಾಲದಲ್ಲಿ ಕೊಟ್ಟು ಆ ಮಹಾದೇವನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೮೭. ಆ ದೇವದೇವನು ಕಾಣದೆಹೋದಮೇಲೆ ಬ್ರಾಹ್ಮಣರೆಲ್ಲರೂ, ಬಂದಿದ್ದಾತನು ಮಹೇಶ್ವರನೆಂಬುದನ್ನು ತಿಳಿದುಕೊಂಡು, ಪ್ರಯಾಸದಿಂದ ಆತನನ್ನು ಹುಡುಕುತ್ತ ಮಹಾಕಾಲವನಕ್ಕೆ ಬಂದರು.

೮೮. ಅಲ್ಲಿಯ ರುದ್ರಸರೋವರದಲ್ಲಿ ಎಲ್ಲರೂ ಸ್ನಾನವನ್ನು ಮಾಡಿ ಶತರುದ್ರೀಯವನ್ನು ಜಪಿಸುತ್ತಿದ್ದರು. ಜಪದ ಕೊನೆಯಲ್ಲಿ ಮಹಾದೇವನು ಪ್ರತ್ಯಕ್ಷನಾಗದೆ ಅಶರೀರವಾಣಿಯಿಂದಲೇ ಅವರಿಗೆ ಹೀಗೆ ಹೇಳಿದನು.

೮೯. "ನಾನು ಹೇಳಿದ ಮಾತುಗಳು ಸುಳ್ಳಾಗಲಾರವು. ಸ್ವೇಚ್ಛಾಚಾರಿಗಳಾದವರಿಗೆ ಸುಖವೆಲ್ಲಿಯದು? ಎಲೈ ಬ್ರಾಹ್ಮಣರಿರಾ! ಆದರೂ ನಿಮಗೆ ನಾನು ಮತ್ತೊಂದು ಅನುಗ್ರಹವನ್ನು ಮಾಡುತ್ತೇನೆ.

೯೦. ಅಂತರಿಂದ್ರಿಯ, ಬಹಿರಿಂದ್ರಿಯಗಳನ್ನು ನಿಗ್ರಹಿಸಿ ಯಾರು ನನ್ನಲ್ಲಿಯೇ ಅನನ್ಯವಾದ ಭಕ್ತಿಯನ್ನಿಟ್ಟಿರುವರೊ, ಅವರ ವಂಶವಾಗಲಿ, ಐಶ್ವರ್ಯವಾಗಲಿ, ಸಂತತಿಯಾಗಲಿ ಕೊನೆಗಾಣುವುದಿಲ್ಲ.

೯೧–೯೨. ಯಾರು ಅಗ್ನಿಹೋತ್ರವನ್ನು ಸರಿಯಾಗಿ ರಕ್ಷಿಸಿಕೊಳ್ಳುವರೊ, ಯಾರು ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡುವರೊ, ಬ್ರಹ್ಮನನ್ನೂ ತೇಜೋರಾಶಿಯಾದ ಸೂರ್ಯನನ್ನೂ ಯಾರು ಪೂಜಿಸುವರೊ, ಯಾರ ಮನಸ್ಸು ಸುಖದುಃಖಗಳಲ್ಲಿ ಸಮಾನವಾಗಿರುವುದೊ, ಅವರಿಗೆಂದಿಗೂ ಅಶುಭವುಂಟಾಗುವುದಿಲ್ಲ.''

ಸಾಽಶುಭಂ ವಿದ್ಯತೇ ತೇಷಾಂ ಯೇಷಾಂ ಸಾನ್ಯೇ ಸ್ಥಿತಾ ಮತಿಃ ।
ಏತಾವದುಕ್ತ್ವಾ ದೇವೇಶಸ್ತೂಷ್ಣೀಮಾಸೀಜ್ಜಗತ್ಪ್ರಭುಃ ॥ ೯೨ ॥
ಏವಂ ಶಾಪಂ ವರಂ ಲಬ್ಧ್ವಾ ದೇವದೇವಾನ್ಮಹೇಶ್ವರಾತ್ ।
ಆಜಗ್ಮುಃ ಸಹಿತಾಃ ಸರ್ವೇ ಯತ್ರ ದೇವಃ ಪಿತಾಮಹಃ ॥ ೯೩ ॥
ವಿರಿಂಚಿಮಥ ತೇ ಚಾಪ್ಯೈಸ್ತೋಷಯಂತೋಽಗ್ರತಃ ಸ್ಥಿತಾಃ ।
ತುಷ್ಟಸ್ತಾನಬ್ರವೀದ್ಬ್ರಹ್ಮಾ ಮತ್ತೋಽಪಿ ವ್ರಿಯತಾಂ ವರಃ ॥ ೯೪ ॥
ಬ್ರಹ್ಮಣಸ್ತೇನ ವಾಕ್ಯೇನ ತುಷ್ಟಾಃ ಸರ್ವೇ ದ್ವಿಜೋತ್ತಮಾಃ ।
ಕೋ ವರೋ ಯಾಚ್ಯತಾಂ ವಿಪ್ರಾಃ ಪರಿತುಷ್ಟೇ ಪಿತಾಮಹೇ ॥ ೯೫ ॥
ಏಕೇ ತತ್ರಾಬ್ರುವನ್ವಿಪ್ರಾ ವೇದಾನ್ವೈ ವೃಣವಾಮಹೈ ।
ತತೋಽನ್ಯೇ ಚ ಧನಂ ಧಾನ್ಯಂ ವ್ರಿಯತಾಮವಿಶಂಕಿತೈಃ ॥ ೯೬ ॥
ಅನ್ಯೇ ಪ್ರಾಹುಃ ಕಿಮಸ್ಮಾಕಂ ಧನ್ಯೈಸ್ತುಷ್ಟೇ ಪಿತಾಮಹೇ ।
ಅಗ್ನಿಹೋತ್ರಾಣಿ ವೇದಾಶ್ಚ ಶಾಸ್ತ್ರಾಣಿ ವಿವಿಧಾನಿ ಚ ॥ ೯೭ ॥
ಶಾಂತಾ ಆಢ್ಯಾಶ್ಚ ಲೋಕಾಶ್ಚ ವರದಾನಾದ್ಭವಂತು ನಃ ।
ಏವಂ ಪ್ರಜಲ್ಪತಾಂ ತತ್ರ ವಿಪ್ರಾಣಾಂ ಕೋಪ ಆವಿಶತ್ ॥ ೯೮ ॥

---

ಇಷ್ಟನ್ನು ಹೇಳಿ ದೇವೇಶ್ವರನೂ, ಜಗನ್ನಾಯಕನೂ ಆದ ಮಹಾದೇವನು ಸುಮ್ಮನಾದನು.

೯೩. ಇಂತು ಶಾಪವನ್ನೂ, ವರವನ್ನೂ ಮಹೇಶ್ವರನಿಂದ ಪಡೆದ ಬ್ರಾಹ್ಮಣರೆಲ್ಲರೂ ಗುಂಪಾಗಿಸೇರಿ ಪುನಃ ಪಿತಾಮಹನಾದ ಚತುರ್ಮುಖ ಬ್ರಹ್ಮನಿದ್ದಲ್ಲಿಗೆ ಹಿಂದಿರುಗಿ ಬಂದರು.

೯೪. ಅನೇಕ ಮಂತ್ರಗಳನ್ನುಚ್ಚರಿಸುತ್ತ ಆತನನ್ನು ಸುಮುಖಗೊಳಿಸಿ ಮುಂದೆ ನಿಂತಿದ್ದರು. ಆಗ ಸಂತುಷ್ಟನಾದ ಬ್ರಹ್ಮದೇವನು ಅವರನ್ನು ಕುರಿತು "ನನ್ನಿಂದಲೂ ಒಂದು ವರವನ್ನು ಕೇಳಿಕೊಳ್ಳಿರಿ" ಎಂದನು.

೯೫. ಬ್ರಹ್ಮನ ಈ ವಾಕ್ಯದಿಂದ ಸಂತೋಷಗೊಂಡ ಬ್ರಾಹ್ಮಣರೆಲ್ಲರೂ ತಮ್ಮತಮ್ಮಲ್ಲಿಯೇ "ಬ್ರಾಹ್ಮಣರಿರಾ! ಸಂತುಷ್ಟನಾದ ಬ್ರಹ್ಮದೇವನಲ್ಲಿ ನಾವು ಯಾವ ವರವನ್ನು ಕೇಳೋಣ?" ಎಂದು ವಿಚಾರಮಾಡತೊಡಗಿದರು.

೯೬. ಕೆಲವುಂದಿ ಬ್ರಾಹ್ಮಣರು "ವೇದಗಳನ್ನು ಬೇಡೋಣ" ಎಂದು ಹೇಳಿದರು. ಬೇರೆ ಕೆಲವರು "ಯೋಚನೆಮಾಡದೆ ಧನಧಾನ್ಯಸಮೃದ್ಧಿಯನ್ನು ಯಾಚಿಸಿರಿ" ಎಂದು ಸೂಚನೆಯಿತ್ತರು.

೯೭–೯೮. ಮತ್ತೆ ಕೆಲವರೆಂದರು :—"ಪಿತಾಮಹನೇ ಸಂತುಷ್ಟನಾಗಿರಲು ನಮಗೆ ಧನಾದಿಗಳಿಂದಾಗಬೇಕಾದುದೇನು? ವರವನ್ನು ಕೊಡುವುದಾದರೆ ಅಗ್ನಿಹೋತ್ರಗಳೂ, ವೇದಗಳೂ, ಶಾಸ್ತ್ರಗಳೂ, ಇಹಪರಲೋಕಗಳೂ, ನಮಗೆ ಪ್ರಶಾಂತಗಳೂ, ಸುಖಕರಗಳೂ ಆಗಿರಲಿ" ಎಂದು ಸೂಚಿಸಿದರು.

ಪರಸ್ಪರಂ ವರಾರ್ಥೇಽಥ ಯುದ್ಧಂ ಕರ್ತುಂ ಸಮುದ್ಯತಾಃ ।
ಯುಧ್ಯಂತೇ ಸಾಯುಧಾಃ ಕೇಚಿತ್ಕೇಚಿತ್ತತ್ರೋಪಸರ್ಪಕಾಃ ॥ ೯೯ ॥
ಕೇಚಿದ್ವಿಪ್ರಾ ಉದಾಸೀನಾಃ ಕೇಚಿದ್ವೈ ಮೌನಮಾಸ್ಥಿತಾಃ ।
ದೃಷ್ಟ್ವೈವಂ ಭಗವಾನ್ಪ್ರಾಹ ವಿಪ್ರಾನ್ಯುದ್ಧಂ ಪ್ರಕುರ್ವತಃ ॥ ೧೦೦ ॥
ಯುಸ್ಮಾತ್ಕುಮಂತ್ರಿತಾ ವಿಪ್ರಾಃ ಶಾಲಾಯಾ ಬಾಹ್ಯಸಂಸ್ಥಿತೇ ।
ತಸ್ಮಾದಾಮೂಲತೋ ವಿಪ್ರಾ ಗುಲ್ಮೇ ಯುದ್ಧೋಪಸರ್ಪಕಾಃ ॥ ೧೦೧ ॥
ಉದಾಸೀನಸ್ತು ಯೋ ಗುಲ್ಮೋ ವೃತ್ತಿಹೀನೋ ಭವಿಷ್ಯತಿ ।
ವೇದಾಸ್ತಸ್ಯ ಭವೇಯುರ್ವೈ ಯಸ್ತ್ವಸ್ತಿ ಮೌನಸಂಸ್ಥಿತಃ ॥ ೧೦೨ ॥
ತೃತೀಯಃ ಸಾಯುಧೋ ಗುಲ್ಮೋ ಯೋದ್ಯುಕಾಮುಸ್ತು ಯಃ ಸ್ಥಿತಃ ।
ಪರದಾರೇಷು ವೇಶ್ಯಾಯಾಂ ದ್ಯೂತೇ ಚೌರ್ಯೇ ಸದಾ ರತಃ ॥ ೧೦೩ ॥
ಚತುರ್ವಿಧಃ ಸ ವೈ ವಿಪ್ರೋ ವೃತ್ತಿಹೀನೋ ಭವಿಷ್ಯತಿ ।
ಏವಮುಕ್ತ್ವಾ ಯಯೌ ಬ್ರಹ್ಮಾ ವೈರಾಜಂ ಭವನೋತ್ತಮಂ ॥ ೧೦೪ ॥

---

೯೯. ವರದ ವಿಷಯಕ್ಕಾಗಿ ತಂತಮ್ಮಲ್ಲಿಯೇ ಪರಸ್ಪರ ಕಲಹವನ್ನು ಮಾಡಲನುವಾದರು. ಕೆಲವರು ಆಯುಧಗಳೊಡನೆ ಯುದ್ಧಮಾಡತೊಡಗಿದರು. ಹಲವರು ಯಜ್ಞಶಾಲೆಯಿಂದ ಓಡಿಹೋದರು.

೧೦೦. ಮತ್ತೆ ಕೆಲವರು ಉದಾಸೀನರಾಗಿ ಕುಳಿತುಬಿಟ್ಟರು. ಕೆಲವರು ಮೌನವನ್ನವಲಂಬಿಸಿದರು. ಇಂತು ಯುದ್ಧಾಸಕ್ತರಾಗಿದ್ದ ಆ ಬ್ರಾಹ್ಮಣರನ್ನು ಕಂಡು ಬ್ರಹ್ಮದೇವನು ಹೇಳಿದನು.

೧೦೧. "ಬ್ರಾಹ್ಮಣರಿರಾ! ನಿಮ್ಮಲ್ಲಿ ದುರ್ಬುದ್ಧಿಯಿಂದ ಕೆಲವರು ಯಜ್ಞಶಾಲೆಯನ್ನು ಬಿಟ್ಟು ಓಡಿಹೋಗಿರುವರಲ್ಲವೆ. ಆ ಗುಂಪಿನವರು ವಂಶಪಾರಂಪರ್ಯವಾಗಿ ಯುದ್ಧಭೀರುಗಳಾಗಿ ಪಲಾಯನಪರರಾಗುತ್ತಾರೆ.

೧೦೨. ಉದಾಸೀನವಾಗಿದ್ದ ಗುಂಪಿನ ಸಂತತಿಯು ಜೀವನೋಪಾಯವಿಲ್ಲದೆ ತಿರುಗುತ್ತಿರುವುದು. ಮೌನವನ್ನಾಶ್ರಯಿಸಿ ಕುಳಿತಿರುವ ಈ ಪಂಗಡಕ್ಕೆ ಮಾತ್ರ ವೇದಜ್ಞಾನವು ಲಭಿಸುವುದು.

೧೦೩. ಆಯುಧಪಾಣಿಗಳಾಗಿ ಯುದ್ಧಕ್ಕೆ ನಿಂತಿರುವ ಈ ಪಂಗಡವು ಯಾವಾಗಲೂ ಪರಸ್ತ್ರೀಯರಲ್ಲಿಯೂ, ವೇಶ್ಯೆಯರಲ್ಲಿಯೂ, ಜೂಜಾಟಗಳಲ್ಲಿಯೂ, ಚೌರ್ಯದಲ್ಲಿಯೂ ಆಸಕ್ತಿಯುಳ್ಳದ್ದಾಗಿರುವುದು.

೧೦೪. ಈ ನಾಲ್ಕು ಕಾರ್ಯಗಳಲ್ಲಿ ನಿರತನಾದ ಬ್ರಾಹ್ಮಣನು ವೃತ್ತಿಹೀನನಾಗುವನು." ಇಂತೆಂದು ನುಡಿದು ಬ್ರಹ್ಮದೇವನು ಉತ್ತಮವಾದ ತನ್ನ ಸತ್ಯಲೋಕಕ್ಕೆ ಹೊರಟುಹೋದನು.

ಏವಂ ಮೇ ಪರಮಂ ಕ್ಷೇತ್ರಂ ಮುನಯೋಽವಂತಿಮಂಡಲೇ ।
ಯಾಂ ದೇವನಗರೀಂ ಲೋಕೇ ಪ್ರವದಂತೀಹ ಮಾನವಾಃ ॥ ೧೦೫ ॥
ತಸ್ಯಾಂ ತು ಯೇ ದ್ವಿಜಾಃ ಶಾಂತಾ ವಸಂತಿ ಕ್ಷೇತ್ರವಾಸಿನಃ ।
ನ ತೇಷಾಂ ದುರ್ಲಭಂ ಕಿಂಚಿನ್ಮಮ ಲೋಕೇ ಭವಿಷ್ಯತಿ ॥ ೧೦೬ ॥
ಕೋಲಾಮುಖೇ ಕುರುಕ್ಷೇತ್ರೇ ನೈಮಿಷೇ ಪುಷ್ಕರೇಷು ಚ ।
ವಾರಾಣಸ್ಯಾಂ ಪ್ರಭಾಸೇ ಚ ತಥಾ ಬದರಿಕಾಶ್ರಮೇ ॥ ೧೦೭ ॥
ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ।
ರುದ್ರಕೋಟ್ಯಾಂ ವಿರೂಪಾಕ್ಷೇ ಮಿತ್ರಸ್ಯಾಽಪಿ ತಥಾ ವನೇ ॥ ೧೦೮ ॥
ತೀರ್ಥೇಷ್ವೇತೇಷು ಕ್ಷೇತ್ರೇಷು ಯಾ ಸಿದ್ಧಿರ್ದ್ವಾದಶಾಽಬ್ದಿಕಾ ।
ಪ್ರಾಪ್ಯತೇ ಮಾನವೈರ್ಲೋಕೇ ಸಾಮಾಸೇನೇಹ ಲಭ್ಯತೇ ।
ಉಜ್ಜಯಿನ್ಯಾಂ ನ ಸಂದೇಹೋ ಬ್ರಹ್ಮಚರ್ಯೇ ಮನೋ ಯದಿ॥ ೧೦೯ ॥
ತೀರ್ಥಾನಾಂ ಪ್ರವರಂ ತೀರ್ಥಂ ಕ್ಷೇತ್ರಾಣಾಮಪಿ ಚೋತ್ತಮಂ ।
ಸದಾಽಭಿರುಚಿತಂ ಮಹ್ಯಮೇತದ್ವೈ ಮುನಿಸತ್ತಮಾಃ ॥ ೧೧೦ ॥

---

೧೦೫. ಮಹರ್ಷಿಗಳಿರಾ ! ಇಂತು ಅವಂತೀದೇಶದಲ್ಲಿ ನನಗೆ ಪರಮಪ್ರಿಯ ವಾದ ಕ್ಷೇತ್ರವೊಂದಿರುವುದು. ಇದನ್ನೇ ಮಾನವರು ಭೂಲೋಕದ ಅಮರಾವತಿ ಯೆಂದು ಕರೆಯುತ್ತಿರುವರು.

೧೦೬. ಯಾವ ದ್ವಿಜರು ಶಾಂತಚಿತ್ತರಾಗಿ ಆ ಕ್ಷೇತ್ರದಲ್ಲಿ ವಾಸಮಾಡು ವರೊ, ಅವರಿಗೆ ನನ್ನ ಲೋಕದಲ್ಲಿ ದುರ್ಲಭವಾದುದು ಯಾವುದೂ ಇರುವು ದಿಲ್ಲವು.

೧೦೭–೧೦೯. ಕೋಲಾಮುಖ, ಕುರುಕ್ಷೇತ್ರ, ನೈಮಿಷಾರಣ್ಯ, ಪುಷ್ಕರ ಕ್ಷೇತ್ರ, ವಾರಾಣಸಿ, ಪ್ರಭಾಸ, ಬದರಿಕಾಶ್ರಮ, ಗಂಗಾದ್ವಾರ, ಪ್ರಯಾಗ, ಗಂಗಾಸಾಗರಸಂಗಮ, ರುದ್ರಕೋಟಿ, ವಿರೂಪಾಕ್ಷೇಶ್ವರ, ಮಿತ್ರವನವೇ ಮುಂತಾದ ತೀರ್ಥಗಳಲ್ಲಿಯೂ, ಕ್ಷೇತ್ರಗಳಲ್ಲಿಯೂ ಹನ್ನೆರಡು ವರ್ಷಗಳು ವಾಸಮಾಡುವುದರಿಂದ ಯಾವ ಕಾರ್ಯಸಿದ್ಧಿಯು ಲಭಿಸುವುದೊ, ಅದನ್ನೇ ಮಾನವನು ನಿಯತವಾದ ಬ್ರಹ್ಮಚರ್ಯವನ್ನು ಮನಃಪೂರ್ವಕವಾಗಿ ಪಾಲಿಸುವ ನಾದರೆ ಉಜ್ಜಯಿನೀಕ್ಷೇತ್ರದಲ್ಲಿ ಒಂದು ತಿಂಗಳಲ್ಲಿಯೇ ಪಡೆಯುವನು. ಇದರಲ್ಲಿ ಸಂದೇಹವೇ ಇಲ್ಲ.

೧೧೦. ಎಲೈ ಮುನಿಶ್ರೇಷ್ಠರಿರಾ ! ಇದು ತೀರ್ಥಗಳಲ್ಲೆಲ್ಲ ಉತ್ತಮ ತೀರ್ಥವು. ಕ್ಷೇತ್ರಗಳಲ್ಲಿಯೂ ಉತ್ತಮ ಕ್ಷೇತ್ರವಾಗಿರುವುದು. ನನಗೆ ಈ ಪ್ರದೇಶವೇ ಯಾವಾಗಲೂ ಅತ್ಯಂತ ಪ್ರಿಯವಾಗಿರುವುದು.

ಮಂದಾಕಿನ್ಯಾಸ್ತು ಮಾಹಾತ್ಮ್ಯಂ ಕ್ಷೇತ್ರಸ್ಯೋತ್ಪತ್ತಿರುತ್ತಮಾ ।
ಭೂಯಃ ಕಿಮನ್ಯದಿಚ್ಛಾಽಸ್ತಿ ಶ್ರೋತುಂ ವೈ ದ್ವಿಜಸತ್ತಮಾಃ ॥ ೧೧೧ ॥
ಸನತ್ಕುಮಾರ ಉವಾಚ:—
ಏತತ್ತೇ ಬ್ರಹ್ಮಣೋ ವಾಕ್ಯಂ ಶ್ರುತ್ವಾ ವ್ಯಾಸ ತಥಾ ವಿಧಂ ।
ವಸಿಷ್ಠಾದ್ಯಾಶ್ಚ ಮುನಯಃ ಪರಂ ಧ್ಯಾನಮುಥೋ ಗತಾಃ ॥ ೧೧೨ ॥
ಧ್ಯಾತ್ವಾ ತು ಸುಚಿರಂ ಕಾಲಂ ತತ್ರ ವಾಸೇ ಮನೋ ದಧುಃ ।
ಸಾಽಗ್ನಿಹೋತ್ರಾಃ ಸಪತ್ನೀಕಾ ಗತಾಶ್ಚಾಽವಂತಿಮಂಡಲೇ ॥ ೧೧೩ ॥
ಮಹಾಕಾಲವನಂ ದೃಷ್ಟ್ವಾ ಶಿಪ್ರಾಂ ಚೈವ ಮಹಾನದೀಂ ।
ಸ್ಮಶಾನಮೂಷರಂ ಚೈವ ನದೀಂ ಗಂಧವತೀಂ ತಥಾ ॥ ೧೧೪ ॥
ಕೋಟಿತೀರ್ಥಮುಪಸ್ಪೃಶ್ಯ ಚಕ್ರುರ್ವಾಸಂ ಚ ತತ್ರ ವೈ ।
ಸ್ಮೃತ್ವಾ ತದ್ಬ್ರಹ್ಮಣೋ ವಾಕ್ಯಂ ರುಚಿಸ್ತೇಷಾಂ ಸದಾಽಭವತ್॥ ೧೧೫ ॥
ಅರುಂಧತ್ಯಾ ವಸಿಷ್ಠಶ್ಚ ಗಮನಂ ಪ್ರತಿ ನೋದಿತಃ ।
ಉವಾಚ ತಾಂ ಮಹಾತ್ಮಾಽಸೌ ಸ್ವಾಂ ಭಾರ್ಯಾಂ ಮುನಿಸತ್ತಮಾಃ ॥

---

೧೧೧. ಅಯ್ಯಾ ವಿಪ್ರೋತ್ತಮರಿರಾ! ಮಂದಾಕಿನೀತೀರ್ಥದ ಮಾಹಾತ್ಮ್ಯವನ್ನೂ, ಕ್ಷೇತ್ರ ಸಮುತ್ಪತ್ತಿಯ ಪ್ರಕಾರವನ್ನೂ ತಿಳಿಸಿದೆನು. ಮತ್ತೇನನ್ನು ಕೇಳಲೆಳಸುವಿರಿ?

೧೧೨. ಸನತ್ಕುಮಾರನು ಹೇಳುತ್ತಾನೆ:—ವ್ಯಾಸಮುನಿಯೆ! ನಾನು ನಿನಗೆ ಈಗ ತಿಳಿಸಿದ ಬ್ರಹ್ಮದೇವನ ಮಾತುಗಳನ್ನು ಕೇಳಿ ವಸಿಷ್ಠನೇ ಮೊದಲಾದ ಮಹರ್ಷಿಗಳು ಧ್ಯಾನಾಸಕ್ತರಾದರು.

೧೧೩. ಬಹಳಕಾಲ ಯೋಚನೆಯನ್ನು ಮಾಡಿ ಅಲ್ಲಿಯೇ ವಾಸಮಾಡಬೇಕೆಂಬ ಮನಸ್ಸುಳ್ಳವರಾಗಿ ತಮ್ಮ ಅಗ್ನಿಹೋತ್ರಗಳೊಡನೆಯೂ, ಸಂಸಾರಗಳೊಡನೆಯೂ ಅವಂತೀ ಕ್ಷೇತ್ರಕ್ಕೆ ಪ್ರಯಾಣಮಾಡಿದರು.

೧೧೪. ಮಹಾಕಾಲವನವನ್ನೂ, ಶಿಪ್ರಾನದಿಯನ್ನೂ, ಶ್ಮಶಾನ, ಊಷರ ಪ್ರದೇಶಗಳನ್ನೂ, ಗಂಧವತೀನದಿಯನ್ನೂ ನೋಡುತ್ತ ಅವರು ಮುನ್ನಡೆದರು.

೧೧೫. ಬಳಿಕ ಕೋಟಿ ತೀರ್ಥದಲ್ಲಿ ಸ್ನಾನಗಳನ್ನು ಮಾಡಿ ಅಲ್ಲಿಯೇ ವಾಸಮಾಡಲುಪಕ್ರಮಿಸಿದರು. ಬ್ರಹ್ಮದೇವನಾಡಿದ ವಾಕ್ಯಗಳನ್ನು ಕೇಳಿ ಅವರಿಗೆ ಅಲ್ಲಿಯೇ ಇರುವ ಅಭಿಲಾಷೆಯುಂಟಾಯಿತು.

೧೧೬. ಎಲೈ ಮುನಿವರ್ಯರಿರಾ! ಅಲ್ಲಿಂದ ಹೊರಟುಹೋಗಬೇಕೆಂದು ಒತ್ತಾಯಮಾಡುತ್ತಿರುವ ಅರುಂಧತೀದೇವಿಯ ಮಾತುಗಳನ್ನು ಕೇಳಿ ಮಹಾತ್ಮನಾದ ವಸಿಷ್ಠನು ತನ್ನ ಹೆಂಡತಿಗೆ ಇಂತೆಂದನು.

**ಮಹಾಕಾಲಃ ಸರಿಚ್ಛಿಪ್ರಾ ಗತಿಶ್ಚೈವ ಸುನಿರ್ಮಲಾ ।**
**ಉಜ್ಜಯಿನ್ಯಾಂ ವಿಶಾಲಾಕ್ಷಿ ವಾಸಃ ಕಸ್ಯ ನ ರೋಚತೇ ॥ ೧೧೭ ॥**
**ಸ್ನಾನಂ ಕೃತ್ವಾ ನರೋ ಯಸ್ತು ಮಹಾನದ್ಯಾಂ ಹಿ ದುರ್ಲಭಂ ।**
**ಮಹಾಕಾಲಂ ನಮಸ್ಕೃತ್ಯ ನರೋ ಮೃತ್ಯುಂ ನ ಶೋಚಯೇತ್ ॥ ೧೧೮ ॥**
**ಮೃತಃ ಕೀಟಃ ಪತಂಗೋ ವಾ ರುದ್ರಸ್ಯಾನುಚರೋ ಭವೇತ್ ।**
**ಯತ್ರೈಷಾ ಶ್ರೂಯತೇ ಮುಕ್ತಿಃ ಕಥಂ ಸಾ ತ್ಯಜ್ಯತೇ ಮಯಾ ॥ ೧೧೯ ॥**
**ಏವಂ ಪ್ರಜಲ್ಪ್ಯಾಥ ಮುನಿಪ್ರಧಾನ**
**ಸ್ತತ್ರೈವ ವಾಸಂ ಸಹಸಾ ಚಕಾರ ।**
**ವನಸ್ಯ ವೃಷ್ಟಿಂ ಪರಿಕೀರ್ತಯಂಸ್ತು**
**ಸ್ಥಿತಃ ಸಹೈವಾತ್ರ ಮುನಿಪ್ರಧಾನೈಃ ॥ ೧೨೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಮಂದಾಕಿನೀಕ್ಷೇತ್ರ ಮಾಹಾತ್ಮ್ಯವರ್ಣನಂ" ನಾಮ ಷಡ್ವಿಂಶೋಽಧ್ಯಾಯಃ**

---

೧೧೭. ಇಲ್ಲಿ ಮಹಾಕಾಲೇಶ್ವರನ ಸನ್ನಿಧಿಯಿರುವುದು. ಶಿಪ್ರಾನದಿಯಿರುವುದು. ಉಜ್ಜಯಿನೀಕ್ಷೇತ್ರದಲ್ಲಿ ಜೀವನವೂ ಸುಗಮವಾಗಿ ಸಾಗುತ್ತಿರುವುದು. ವಿಶಾಲನೇತ್ರೆಯೆ ! ಇಂತಹ ಸ್ಥಳದಲ್ಲಿ ವಾಸವು ಯಾರಿಗೆ ತಾನೆ ರುಚಿಸುವುದಿಲ್ಲ.

೧೧೮. ಅತ್ಯಂತ ದುರ್ಲಭವಾದ ಮಹಾನದಿಯ ಸ್ನಾನವನ್ನು ಮಾಡಿಕೊಂಡು ಮಹಾಕಾಲನಿಗೆ ನಮಸ್ಕರಿಸಿದ ಮನುಜನು ಸಾಯುವುದಕ್ಕೂ ಶೋಕಪಡಬೇಕಾಗಿಲ್ಲವು.

೧೧೯. ಇಲ್ಲಿ ದೇಹವನ್ನು ತ್ಯಜಿಸಿದ ಕೀಟವೂ, ಪತಂಗವೂ ರುದ್ರನ ಅನುಚರರಾಗುವುವು. ಇಂತಹ ಮುಕ್ತಿಯನ್ನು ಕೊಡುವುದೆಂದು ಪ್ರಖ್ಯಾತವಾದ ಈ ಸ್ಥಾನವನ್ನು ನಾನು ಹೇಗೆ ತ್ಯಜಿಸಲಿ ?''

೧೨೦. ಇಂತೆಂದು ಆ ಮುನಿಶ್ರೇಷ್ಠನು ಅಲ್ಲಿಯೇ ವಾಸಿಸತೊಡಗಿದನು. ವನದ ಸೊಬಗನ್ನು ಬಹುವಿಧವಾಗಿ ಬಣ್ಣಿಸುತ್ತ ಇತರ ಮುನಿಮುಖ್ಯರೊಡನೆ ಅಲ್ಲಿಯೆ ನೆಲೆಯನ್ನು ಮಾಡಿಕೊಂಡನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಮಂದಾಕಿನೀಕ್ಷೇತ್ರಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶೋಽಧ್ಯಾಯಃ

## ಅಂಕಪಾದಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಯೋಽವಂತ್ಯಾಮಂಕಪಾದಾಖ್ಯೇ ಪಶ್ಯೇದ್ರಾಮಜನಾರ್ದನೌ ।
ಯಯೋರ್ದರ್ಶನಮಾತ್ರೇಣ ಯಮಲೋಕಂ ನ ಪಶ್ಯತಿ ॥ ೧ ॥

ವ್ಯಾಸ ಉವಾಚ :—

ಕಥಂ ತಾವಂಕಪಾದಾಖ್ಯೇ ಯಾತಾವತ್ರ ಮಹಾಮುನೇ ।
ನ ಪಶ್ಯೇದ್ಯಮಲೋಕಂ ಸ ಯದ್ಯಪಿ ಬ್ರಹ್ಮಹಾ ಭವೇತ್ ॥ ೨ ॥

ಸನತ್ಕುಮಾರ ಉವಾಚ :—

ಭಾರಾಽವತಾರಣಾರ್ಥಾಯ ದೇವೌ ರಾಮಜನಾರ್ದನೌ ।
ಅವತೀರ್ಣೌ ಯದೋರ್ವಂಶೇ ದಿವ್ಯರೂಪೌ ಮಹಾದ್ಯುತೀ ॥ ೩ ॥
ಕಂಸಂ ಹತ್ವಾ ಸಚಾಣೂರಮುಗ್ರಸೇನಂ ನರಾಧಿಪಂ ।
ಅಭಿಷಿಚ್ಯ ಸ್ವಯಂ ರಾಜ್ಯೇ ಯದುಸಿಂಹ ಉವಾಚ ತಂ ॥ ೪ ॥

---

## ಕನ್ನಡದ ಅನುವಾದ

### ಅಂಕಪಾದಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಅವಂತೀಕ್ಷೇತ್ರಕ್ಕೆ ಹೋದವನು ಅಂಕಪಾದವೆಂಬ ಪ್ರದೇಶದಲ್ಲಿರುವ ರಾಮಕೃಷ್ಣರನ್ನು ಆವಶ್ಯಕವಾಗಿ ನೋಡಲೇ ಬೇಕು. ಅವರ ದರ್ಶನಮಾತ್ರದಿಂದಲೇ ಯಮಲೋಕದ ದರ್ಶನವು ತಪ್ಪುವುದು.

೨. ವ್ಯಾಸನು ಹೇಳುತ್ತಾನೆ:—ಮಹಾಮುನಿಯೆ! ಆ ಇಬ್ಬರೂ ಅಂಕಪಾದ ಕ್ಷೇತ್ರದಲ್ಲಿ ಹೇಗೆ ನೆಲಸಿದರು? ಅವರ ದರ್ಶನಮಾತ್ರದಿಂದ ಬ್ರಹ್ಮಘಾತಕ ನಿಗೂ ಯಮಲೋಕದ ದರ್ಶನವಿಲ್ಲವೆಂಬುದು ಹೇಗೆ ಸಂಗತವು?

೩. ಸನತ್ಕುಮಾರನು ಹೇಳುತ್ತಾನೆ:—ದ್ವಾಪರಯುಗದ ಕಡೆಯಲ್ಲಿ ಭೂಭಾರವನ್ನಿಳುಹುವುದಕ್ಕಾಗಿ ದಿವ್ಯರೂಪರೂ, ಮಹಾತೇಜೋವಂತರೂ ಆದ ಬಲರಾಮಕೃಷ್ಣರು ಯದುವಂಶದಲ್ಲಿ ಅವತರಿಸಿದರು.

೪. ಆ ಯಾದವಶ್ರೇಷ್ಠನು ಚಾಣೂರಸಹಿತನಾದ ಕಂಸನನ್ನು ಸಂಹರಿಸಿ ಉಗ್ರಸೇನನಿಗೆ ಮಹಾರಾಜ್ಯಾಭಿಷೇಕವನ್ನು ಮಾಡಿಸಿ ಆತನನ್ನು ಕುರಿತು ಇಂತೆಂದನು.

**ಕಿಂ ಕಾರ್ಯಂ ತೇ ಮಯಾ ಬ್ರೂಹಿ ಕರ್ತವ್ಯಂ ತೇ ಸುತೇ ಹತೇ ।**
**ಏವಮುಕ್ತಃ ಸ ರಾಜಾ ವಾ ಉಗ್ರಸೇನೋಽಬ್ರವೀದಿದಂ ॥ ೫ ॥**
**ಸರ್ವಂ ಸಂಪತ್ಸ್ಯತೇ ಕೃಷ್ಣ ಭವತೋ ಹಿ ನ ದುರ್ಲಭಂ ।**
**ವಿಜ್ಞಾತಾಽಖಿಲವಿಜ್ಞಾನೌ ಭವಿತಾರಾವುಭಾವಪಿ ॥ ೬ ॥**
**ಗಚ್ಛೇತಮುಜ್ಜಯಿನ್ಯಾಂ ವೈ ಕೃತವಿದ್ಯೌ ಭವಿಷ್ಯಥಃ ।**
**ತತಃ ಸಾಂದೀಪನಿಂ ವಿಪ್ರಂ ಜಗ್ಮತೂ ರಾಮಕೇಶವೌ ॥ ೭ ॥**
**ಕಂಠಸ್ಥಾಂಶ್ಚಕ್ರತುರ್ವೇದಾನಾಚಾರಮಖಿಲಂ ಚ ತೌ ।**
**ಸರಹಸ್ಯಂ ಧನುರ್ವೇದಂ ಸಸಂಹಾರಂ ತಥೈವ ಚ ॥ ೮ ॥**
**ಅಹೋರಾತ್ರೈಶ್ಚತುಃಷಷ್ಟ್ಯಾ ತದದ್ಭುತಮಭೂದ್ದ್ವಿಜ ।**
**ಸಾಂದೀಪನಿರಸಂಭಾವ್ಯಂ ತಯೋಃ ಕರ್ಮಾತಿಮಾನುಷಂ ।**
**ವಿಚಿಂತ್ಯ ತೌ ತದಾ ಮೇನೇ ಪ್ರಾಪ್ತೌ ಚಂದ್ರದಿವಾಕರೌ ॥ ೯ ॥**
**ತತಃ ಕಿಂಚಿತ್ಸ ನೋವಾಚ ಸ್ನಾತುಂ ತೀರ್ಥಮಥಾಯಯೌ ।**
**ಶಿಷ್ಯೈಸ್ತು ಸಹಿತೋ ವಿಪ್ರೋ ಮಹಾಕಾಲವನೇಽವಿಶತ್ ॥ ೧೦ ॥**

---

೫. "ನಿನ್ನ ಮಗನನ್ನು ಕೊಂದೆನು. ನಿನ್ನ ಮನಶ್ಶಾಂತಿಗಾಗಿ ಈಗ ನಾನು ಯಾವ ಕಾರ್ಯವನ್ನು ಮಾಡಲಿ?" ಇಂತೆಂದ ಕೃಷ್ಣನಿಗೆ ರಾಜನಾದ ಉಗ್ರಸೇನನು ಹೇಳತೊಡಗಿದನು.

೬. "ಕೃಷ್ಣ! ನಿನ್ನಿಂದ ನಮಗೆ ಸಕಲವೂ ಕೈಗೂಡಿರುವುದು. ದುರ್ಲಭವಾದುದು ಯಾವುದೂ ಇರುವುದಿಲ್ಲ. ನೀವಿಬ್ಬರೂ ಸಕಲಶಾಸ್ತ್ರಗಳನ್ನೂ ತಿಳಿದವರಾಗಬೇಕೆಂದಾಶಿಸುತ್ತೇನೆ.

೭–೮. ಇಬ್ಬರೂ ಉಜ್ಜಯಿನಿಗೆ ಹೋಗಿ ಕೃತವಿದ್ಯರಾಗಿ ಹಿಂದಿರುಗಿ ಬನ್ನಿರಿ." ಈ ಮಾತನ್ನಂಗೀಕರಿಸಿ ಬಲರಾಮಕೇಶವರಿಬ್ಬರೂ ಸಾಂದೀಪನಿಯೆಂಬ ಬ್ರಾಹ್ಮಣೋತ್ತಮನಲ್ಲಿಗೆ ಹೋದರು. ಸಕಲವೇದಗಳನ್ನೂ ಆಚಾರಗಳನ್ನೂ ಕಂಠಸ್ಥಗಳನ್ನಾಗಿ ಮಾಡಿಕೊಂಡರು. ಧನುರ್ವೇದವನ್ನೂ ರಹಸ್ಯಗಳೊಡನೆ ಅಸ್ತ್ರೋಪಸಂಹಾರಸಹಿತವಾಗಿ ಸಾಂಗವಾಗಿ ಅಭ್ಯಾಸಮಾಡಿದರು.

೯. ಅಯ್ಯಾ ವ್ಯಾಸನೆ! ಅರುವತ್ತನಾಲ್ಕು ದಿವಸಗಳಲ್ಲಿಯೇ ಅವರು ಸಕಲ ಶಾಸ್ತ್ರಪಾರಂಗತರಾದರು. ಇದು ಮಹಾದ್ಭುತವೆನಿಸಿತು. ಕೇವಲ ಅಸಂಭವವೂ ಅತಿಮಾನುಷವೂ ಆದ ಈ ವಿದ್ಯಾವೈಭವವನ್ನು ಕಂಡು ಸಾಂದೀಪನ್ಯಾಚಾರ್ಯನು ಸೂರ್ಯಚಂದ್ರರೇ ತನಗೆ ಶಿಷ್ಯರಾಗಿ ಬಂದಿರಬಹುದೆಂದು ತಿಳಿದನು.

೧೦. ಬಳಿಕ ಏನನ್ನೂ ಮಾತನಾಡದೆ ತೀರ್ಥಸ್ನಾನವನ್ನು ಮಾಡಬೇಕೆಂಬ ಅಭಿಲಾಷೆಯಿಂದ ಶಿಷ್ಯರೊಡಗೂಡಿ ಬರುತ್ತ ಮಹಾಕಾಲವನದಲ್ಲಿ ಬಂದಿಳಿದನು.

ಶಿಷ್ಯೈಃ ಸಹ ಪ್ರವಿಷ್ಟೌ ದ್ವೌ ತದಾ ತೌ ರಾಮಕೇಶವೌ ।
ವಂದಮಾನೌ ಮಹಾಕಾಲಂ ಸ ತಂ ಕೇಶವಮಬ್ರವೀತ್ ॥ ೧೧ ॥
ತ್ವಯಾ ನಾಥೇನ ದೇವಾನಾಂ ಮಾನುಷತ್ವೇ ಹಿ ತಿಷ್ಠತಾ ।
ಸುಖಮಾಸೀಚ್ಚ ಸಾಧೂನಾಮಜ್ಞಾನಾನಾಂ ಚ ಸರ್ವದಾ ॥ ೧೨ ॥
ಜನೇ ಪೀಡಾಕರಾ ಯೇ ತು ಸದಾ ವಾ ಬಲದರ್ಪಿತಾಃ ।
ಯುವಾಭ್ಯಾಂ ತೇ ಹತಾಃ ಸರ್ವೇ ಕಂಸಪ್ರಮುಖತೋ ನೃಪಾಃ ॥ ೧೩ ॥
ಮುನಿಸಿದ್ಧಸುರಾದೀನಾಂ ಸ್ಥಿತಿಃ ಕಾರ್ಯಾ ತ್ವಯಾಽನಘ ।
ಕರಿಷ್ಯಾಮಿ ತಮಿತ್ಯುಕ್ತ್ವಾ ಸ ನಮಸ್ಯ ತತೋ ಯಯೌ ॥ ೧೪ ॥
ದೃಷ್ಟ್ವಾ ಸಾಂದೀಪನಿಂ ಶಿಷ್ಯಾ ಊಚುರೇವಂ ದಿನೇ ದಿನೇ ।
ಕಸ್ಯ ನ ಶ್ರದ್ದಧೇ ತೇಷಾಂ ವಚಸ್ತ್ವತ್ಯದ್ಭುತಂ ಯತಃ ॥ ೧೫ ॥
ಸ್ವಯಂ ಯಯೌ ತತೋ ದ್ರಷ್ಟುಮಾಶ್ಚರ್ಯಂ ಶಿಷ್ಯಭಾಷಿತಂ ।
ತತಸ್ತತ್ರೋತ್ಥಿತಃ ಶಬ್ದಃ ಸಂಶ್ಲೇಷೇ ಚ ತಥಾ ತಯೋಃ ॥ ೧೬ ॥

---

೧೧. ಆ ಶಿಷ್ಯರೊಡನೆಯೇ ಬಲರಾಮಕೃಷ್ಣರೂ ಕ್ಷೇತ್ರವನ್ನು ಸೇರಿ ಮಹಾಕಾಲೇಶ್ವರನನ್ನು ನಮಸ್ಕರಿಸಿದರು. ಆಗ ಮಹೇಶ್ವರನು ಶ್ರೀಕೃಷ್ಣನನ್ನು ಕುರಿತು ಹೇಳಿದನು.

೧೨. "ಲೋಕನಾಥನಾದ ನೀನು ಮನುಷ್ಯರಲ್ಲಿ ಅವತಾರವೆತ್ತಿ ನಿಂತಿರಲು ದೇವತೆಗಳಿಗೂ, ಸಾಧುಗಳಿಗೂ, ಅಜ್ಞಾನಿಗಳಿಗೂ ಸಹ ಯಾವಾಗಲೂ ಸೌಖ್ಯವುಂಟಾಗುತ್ತಿರುವುದು.

೧೩. ಜನರನ್ನು ಪೀಡಿಸುತ್ತಿದ್ದವರೂ, ನಿತ್ಯವೂ ತಮ್ಮ ಪರಾಕ್ರಮದಿಂದ ಗರ್ವಿತರಾದವರೂ ಆದ ಕಂಸನೇ ಮೊದಲಾದ ರಾಜರುಗಳೆಲ್ಲರೂ ನಿಮ್ಮಿಬ್ಬರಿಂದ ಸಂಹೃತರಾದರು.

೧೪. ಎಲೈ ನಿಷ್ಪಾಪನೆ! ಇನ್ನು ಮುನಿಗಳು, ಸಿದ್ಧರು, ದೇವತೆಗಳು— ಇವರುಗಳನ್ನು ಸುಖದಲ್ಲಿರಿಸುವ ಕಾರ್ಯವನ್ನು ನೀನು ಮಾಡಬೇಕು." ಈ ಮಾತುಗಳನ್ನು ಕೇಳಿ ಕೃಷ್ಣನು ಹಾಗೆಯೇ ಮಾಡುವೆನೆಂದು ವಚನವನ್ನಿತ್ತು ನಮಸ್ಕರಿಸಿ ಹಿಂದಿರುಗಿದನು.

೧೫. ಇವರಿಬ್ಬರ ಸಂಭಾಷಣವನ್ನು ನೋಡಿದ ಇತರ ಶಿಷ್ಯರು ಪ್ರತಿದಿನವೂ ಸಾಂದೀಪನ್ಯಾಚಾರ್ಯರಿಗೆ ಈ ವಿಷಯವನ್ನು ಹೇಳುತ್ತಿದ್ದರೂ ಈ ಅತ್ಯದ್ಭುತ ವ್ಯವಹಾರದ ವಿಷಯದಲ್ಲಿ ಅವರ ಮಾತನ್ನು ಅತನು ನಂಬಲಿಲ್ಲ.

೧೬. ಒಂದು ದಿನ ಶಿಷ್ಯರ ಮಾತುಗಳನ್ನು ಪರೀಕ್ಷಿಸಬೇಕೆಂದು ತಾನೇ ಆ ಆಶ್ಚರ್ಯವನ್ನು ನೋಡಲು ಹೊರಟನು. ಆಗ ಅಲ್ಲಿ ಕೃಷ್ಣಮಹೇಶ್ವರರು ಮಾತನಾಡುತ್ತಿದ್ದ ಶಬ್ದವುಂಟಾಯಿತು.

ತಾವಾಗತೌ ಗೃಹಂ ತತ್ರ ಗುರುರ್ವಚನಮಬ್ರವೀತ್ ।
ನ ವೈ ಜ್ಞಾತೌ ಮಯಾ ವೀರೌ ಯದುವೃಷ್ಣಿಕುಲೋದ್ಭವೌ ॥ ೧೭ ॥
ತತಃ ಸಾಂದೀಪನಿಂ ಕೃಷ್ಣಃ ಕೃತಕೃತ್ಯೋಽಬ್ರವೀದ್ವಚಃ ।
ಗುರ್ವರ್ಥಂ ಕಿಂ ದದಾಮೀತಿ ಸಹರಾಮೇಣ ಹರ್ಷಿತಃ ॥ ೧೮ ॥
ತಚ್ಛ್ರುತ್ವಾ ವಚನಂ ಹೃದ್ಯಂ ಗುರುಃ ಪ್ರೋವಾಚ ಹರ್ಷಿತಃ ।
ಪುತ್ರಮಿಚ್ಛಾಮ್ಯಹಂ ತ್ವತ್ತೋ ಯೋ ಮೃತೋ ಲವಣಾಂಭಸಿ ॥ ೧೯ ॥
ಪುತ್ರ ಏಕೋ ಹಿ ಮೇ ಜಾತಃ ಸ ಚಾಽಪಿ ತಿಮಿನಾ ಹೃತಃ ।
ಪ್ರಭಾಸೇ ತೀರ್ಥಯಾತ್ರಾಯಾಂ ತ್ವಮೇವ ತಮಿಹಾನಯ ॥ ೨೦ ॥
ತಥೇತಿ ಚಾಽಬ್ರವೀತ್ಕೃಷ್ಣೋ ರಾಮಸ್ಯಾಽನುಮತೇ ಗತಃ ।
ತಂ ಸಮುದ್ರ ಉವಾಚೇದಂ ದೈತ್ಯಃ ಪಂಚಜನೋ ಮಹಾನ್ ॥ ೨೧ ॥
ತಿಮಿರೂಪೇಣ ತಂ ಬಾಲಂ ಗ್ರಸ್ತವಾನ್ ಮಯಿ ಸಂಸ್ಥಿತಃ ।
ತತಃ ಪಂಚಜನಂ ಹತ್ವಾ ಗ್ರಾಹರೂಪಂ ಮಹಾಬಲಂ ॥ ೨೨ ॥

---

೧೭. ಅವರಿಬ್ಬರೂ ಮನೆಗೆ ಹಿಂದಿರುಗಲು ಗುರುವು ಅವರನ್ನು ಕುರಿತು "ವೀರರೂ ಯದುವೃಷ್ಣಿಕುಲಗಳಲ್ಲಿ ಹುಟ್ಟಿದವರೂ ಆದ ನೀವಿಬ್ಬರೂ ಯಾರೆಂಬುದನ್ನು ಮೊದಲು ನಾನು ತಿಳಿಯಲಿಲ್ಲ" ಎಂದು ಹೇಳಿದನು.

೧೮. ಆಗ ಕೃಷ್ಣಬಲರಾಮರು ಕೃತಕಾರ್ಯರೆನಿಸಿ ಆನಂದಭರಿತರಾಗಿ ಸಾಂದೀಪನ್ಯಾಚಾರ್ಯರನ್ನು ಕುರಿತು "ಗುರುದಕ್ಷಿಣೆಗಾಗಿ ಏನನ್ನು ಕೊಡಲಿ?" ಎಂಬುದಾಗಿ ಪ್ರಶ್ನೆಮಾಡಿದನು.

೧೯. ಮನಸ್ಸಿಗೆ ಪ್ರಿಯವಾದ ಆ ಮಾತನ್ನು ಕೇಳಿ ಗುರುವು ಸಂತೋಷದಿಂದ ಹೇಳಿದನು. "ಹಿಂದೆ ಲವಣಸಮುದ್ರದಲ್ಲಿ ಮುಳುಗಿ ಮೃತನಾದ ಪುತ್ರನನ್ನು ನೀನು ತಂದು ಕೊಡಬೇಕೆಂದು ಅಪೇಕ್ಷಿಸುವೆನು.

೨೦. ನನಗೆ ಒಬ್ಬನೇ ಒಬ್ಬ ಪುತ್ರನಿದ್ದನು. ಒಮ್ಮೆ ತೀರ್ಥಯಾತ್ರೆಯನ್ನು ಮಾಡುತ್ತ ಪ್ರಭಾಸಕ್ಷೇತ್ರಕ್ಕೆ ಹೋಗಿರಲು ಅಲ್ಲಿ ಒಂದು ತಿಮಿಯು ಅವನನ್ನು ಅಪಹರಿಸಿಕೊಂಡು ಹೋಯಿತು. ಅವನನ್ನು ನೀನು ನನಗೆ ತಂದುಕೊಡು."

೨೧. ಕೃಷ್ಣನು, ಹಾಗೆಯೇ ಆಗಲೆಂದು ಹೇಳಿ ಬಲರಾಮನ ಅನುಜ್ಞೆಯನ್ನು ಪಡೆದು ಹೊರಟನು. ಕೃಷ್ಣನಿಗೆ ಸಮುದ್ರರಾಜನಿಂತೆಂದನು. "ಪಂಚಜನನೆಂಬ ಮಹಾಬಲಶಾಲಿಯಾದ ದೈತ್ಯನೊಬ್ಬನಿರುವನು.

೨೨. ಅವನು ನನ್ನಲ್ಲಿಯೇ ತಿಮಿರೂಪದಿಂದ ನೆಲಸಿದ್ದು ಆ ಬಾಲಕನನ್ನು ಸೆಳೆದುಕೊಂಡು ನುಂಗಿದನು." ಆಗ ಕೃಷ್ಣನು ಮೊಸಳೆಯ ರೂಪವನ್ನು ಧರಿಸಿದ್ದ ಮಹಾಬಲನಾದ ಆ ಪಂಚಜನನನ್ನು ಸಂಹರಿಸಿದನು.

ತನ್ಮಧ್ಯಸ್ಥಂ ಚ ಜಗ್ರಾಹ ಶಂಖಂ ಗ್ರಸ್ತೋ ಹಿ ಯಃ ಪುರಾ ।
ಜಲೇಶ್ವರಗೃಹಾತ್ತೇನ ಗ್ರಾಹೇಣಾಽತೀವ ಲೀಲಯಾ ॥ ೨೩ ॥
ತಸ್ಯೋದರೇ ಯದಾ ಬಾಲಂ ನಾಪ್ತವಾಂಸ್ತು ಜನಾರ್ದನಃ ।
ಯಮಾಲಯಗತಂ ಮತ್ವಾ ತದಾ ವರುಣಮಬ್ರವೀತ್ ॥ ೨೪ ॥
ಭಗವನ್ಯಾದಸಾಮೀಶ ರಥೋ ಮೇ ದೀಯತಾಂ ಮಹಾನ್ ।
ಪುರಾಜಿರೇ ಹತಾ ದೈತ್ಯಾ ದಾನವಾ ಬಲದರ್ಪಿತಾಃ ॥ ೨೫ ॥
ಮಯಾ ಯೇನ ರಥೇನಾಽದ್ಯ ಮಹ್ಯಂ ಸ ದೀಯತಾಂ ರಥಃ ।
ನ್ಯಾಸಭೂತೋ ರಥೋ ಯಸ್ತೇ ವಿಧೃತೋ ನಿಹತಾಽರಿಣಾ ॥ ೨೬ ॥
ಮಯಾ ಧರ್ಮಂ ಪುರಸ್ಕೃತ್ಯ ಸ ದೀಯತಾಮಪಾಂಪತೇ ।
ಯೇನಾಹವೇ ಪ್ರೇತರಾಜಂ ಜಿತ್ವಾ ಪಶ್ಯಾಮಿ ಬಾಲಕಂ ॥ ೨೭ ॥
ಏತಚ್ಛ್ರುತ್ವಾ ಪ್ರಹೃಷ್ಟಾತ್ಮಾ ಜ್ಞಾತ್ವಾ ಕಾರ್ಯಾರ್ಥಿನಂ ಹರಿಂ ।
ದದೌ ತು ರಥಮುಕ್ತೋಽಭೇದ್ಯಂ ರಣೇ ತಸ್ಮೈ ಸುರಾಽಸುರೈಃ ॥ ೨೮ ॥
ತತೋ ಹರಿಃ ಸಮಾಲೋಕ್ಯ ರಥಂ ರತ್ನಪರಿಷ್ಕೃತಂ ।
ದ್ವೀಪಿಚರ್ಮಪರೀಧಾನಂ ವೈಯಾಘ್ರಪರಿವಾರಿತಂ ॥ ೨೯ ॥

---

೨೩. ಸಮುದ್ರರಾಜನ ಅರಮನೆಯಿಂದ ಬಹು ಸುಲಭವಾಗಿ ಅಪಹರಿಸಿ ತಂದು ನುಂಗಿದ್ದ ದಿವ್ಯಶಂಖವನ್ನು ಅವನ ಹೊಟ್ಟೆಯಿಂದ ತೆಗೆದುಕೊಂಡನು.

೨೪. ಆದರೆ ಜನಾರ್ದನನು ಆ ಮೊಸಳೆಯ ಹೊಟ್ಟೆಯಲ್ಲಿ ಗುರುಪುತ್ರನಾದ ಬಾಲಕನನ್ನು ಕಾಣಲಿಲ್ಲ. ಅವನು ಯಮನಗರಿಗೆ ಹೋಗಿರಬಹುದೆಂಬುದಾಗಿ ಚಿಂತಿಸಿ ಶ್ರೀಕೃಷ್ಣನು ವರುಣನನ್ನು ಕುರಿತು ಇಂತೆಂದನು.

೨೫–೨೭. "ಅಯ್ಯಾ ಸಮುದ್ರರಾಜನೆ! ನನಗೊಂದು ಮಹಾರಥವನ್ನು ಕೊಡು. ಹಿಂದೆ ನಾನು ಬಲದಿಂದ ಗರ್ವಿತರಾಗಿದ್ದ ದೈತ್ಯರನ್ನೂ ದಾನವರನ್ನೂ ಯುದ್ಧದಲ್ಲಿ ಯಾವ ರಥದ ಸಹಾಯದಿಂದ ಸಂಹರಿಸಿದೆನೊ ಅದನ್ನು ಇಂದು ನನಗೆ ಕೊಡುವವನಾಗು. ಆಗ ಶತ್ರುಸಂಹಾರವಾದ ಮೇಲೆ ನಾನು ನಿನ್ನಲ್ಲಿ ಭದ್ರವಾಗಿರಲೆಂದು ಹೇಳಿ ರಥವನ್ನಿರಿಸಿದ್ದೆನಷ್ಟೆ. ವರುಣಚಕ್ರವರ್ತಿಯೇ! ಅದನ್ನು ನನಗೆ ಹಿಂದಕ್ಕೆ ಕೊಡುವುದು ನಿನಗೆ ಧರ್ಮವಾಗಿರುವುದು. ಅದರಿಂದ ಯಮನನ್ನು ಯುದ್ಧದಲ್ಲಿ ಜಯಿಸಿ ಆ ಮುನಿಬಾಲಕನನ್ನು ನೋಡುವೆನು."

೨೮–೨೯. ಇದನ್ನು ಕೇಳಿ ಸಮುದ್ರರಾಜನು ಆನಂದತುಂದಿಲನಾಗಿ ಶ್ರೀಹರಿಯು ಕಾರ್ಯಾರ್ಥಿಯಾಗಿರುವುದನ್ನು ಕಂಡು ದೇವಾಸುರರಿಗೂ ಯುದ್ಧದಲ್ಲಿ ಅಭೇದ್ಯವಾಗಿದ್ದ ಆ ರಥವನ್ನು ತಂದುಕೊಟ್ಟನು. ಆಗ ಕೃಷ್ಣನು ನವರತ್ನಗಳಿಂದಲಂಕೃತವಾದ ಆ ರಥವನ್ನು ನೋಡಿದನು. ಆ ರಥವು ಚಿರತೆಗಳ ಚರ್ಮಗಳಿಂದ ಆವೃತವಾಗಿದ್ದಿತು. ಅದರಲ್ಲಿ ಹುಲಿದೊಗಲುಗಳನ್ನು ಹಾಸಿದ್ದಿತು.

ನಾನಾಚಿತ್ರವಿಚಿತ್ರಾಂಗಂ ಗರುಡಧ್ವಜರಾಜಿತಂ ।
ಸಂಯುಕ್ತಂ ಶೈಬ್ಯ ಸುಗ್ರೀವ ಪುಷ್ಪದಂತ ಬಲಾಹಕೈಃ ॥ ೩೦ ॥
ಅಜೇಯಂ ದೇವದೇವೇಂದ್ರದಾನವಾಽಸುರರಾಕ್ಷಸೈಃ ।
ಅನೇಕಾಯುಧಸಂಪೂರ್ಣಂ ಮಣಿವಿದ್ರುಮಭೂಷಿತಂ ॥ ೩೧ ॥
ಸಹಸ್ರಸೂರ್ಯಪ್ರತಿಮಂ ಚಾರುವಕ್ತ್ರಚತುರ್ಯುಗಂ ।
ಕಿಂಕಿಣೀಶತಶೋಭಾಢ್ಯಂ ಘಂಟಾಚಾಮರಚಂದ್ರಿಕಂ ॥ ೩೨ ॥
ಸಂವರ್ತಾಕಾರವಿಷಮಂ ಖಗೇಂದ್ರವರಕೇತನಂ ।
ದೃಷ್ಟ್ವಾ ಕೃಷ್ಣಃ ಸರಾಮಸ್ತು ಮುಮುದೇ ವೀತವಿಸ್ಮಯಾತ್ ॥ ೩೩ ॥
ಪ್ರದಕ್ಷಿಣಮುಪಾಕೃತ್ಯ ದೇವತಾಭ್ಯಃ ಪ್ರಣಮ್ಯ ಚ ।
ಆರುರೋಹ ರಥಂ ವಿಷ್ಣುರ್ವಿಮಾನಂ ಸಾಗ್ರಯೋಜನಂ ॥ ೩೪ ॥

ತತೋ ಜಗಾಮ ತ್ವರಿತೋ ಜನಾರ್ದನೋ
ಜಗನ್ನಿವಾಸೋ ಯಮಲೋಕಮಾಶ್ರಿತಾಂ ।
ದಿಶಂ ಸಹಸ್ರೈಃ ಕಿರಣೈರ್ವೃತಾಂ ಪುರೀಂ
ದಧ್ಮೌ ಚ ಶಂಖಂ ಪರಿಗೃಹ್ಯ ಚಾಽಚ್ಯುತಃ ॥ ೩೫ ॥

---

೩೦. ಚಿತ್ರ ವಿಚಿತ್ರಗಳಾದ ಅನೇಕ ಅಂಗಗಳಿಂದ ಕೂಡಿದ್ದಿತು. ಮೇಲೆ ಗರುಡ ಲಾಂಛನವುಳ್ಳ ಧ್ವಜವು ಶೋಭಿಸುತ್ತಿದ್ದಿತು. ಶೈಬ್ಯ, ಸುಗ್ರೀವ, ಪುಷ್ಪದಂತ ಮತ್ತು ಬಲಾಹಕಗಳೆಂಬ ನಾಲ್ಕು ಕುದುರೆಗಳನ್ನು ಅದಕ್ಕೆ ಕಟ್ಟಿದ್ದರು.

೩೧. ದೇವತೆಗಳು, ಮಹೇಂದ್ರ, ದೈತ್ಯರು, ದಾನವರು ಮತ್ತು ರಾಕ್ಷಸರಿಗೂ ಜಯಿಸಲಸಾಧ್ಯವಾದ ಆ ರಥವು ಸಕಲಾಯುಧಗಳಿಂದ ಸಜ್ಜಿತವಾಗಿ ಮಣಿಗಳಿಂದಲೂ ಹವಳಗಳಿಂದಲೂ ಅಲಂಕೃತವಾದ್ದಿತು.

೩೨. ಸಾವಿರ ಸೂರ್ಯರಕಾಂತಿಯನ್ನು ತಳೆದು ಅದು ಬಹುವಾಗಿ ಹೊಳೆಯುತ್ತಿದ್ದಿತು. ನಾಲ್ಕು ದಿಕ್ಕುಗಳಿಗೂ ನಾಲ್ಕು ಮುಖಗಳನ್ನು ಅದರಲ್ಲಿ ಜೋಡಿಸಿದ್ದರು. ನೂರಾರು ಕಿರುಗೆಜ್ಜೆಗಳಿಂದ ಶೋಭಿಸುತ್ತ ಆ ಭವ್ಯರಥವು ಘಂಟೆ ಚಾಮರಗಳ ಬೆಳದಿಂಗಳಿನಿಂದ ಕೂಡಿದ್ದಿತು.

೩೩–೩೪. ಪ್ರಳಯಕಾಲದ ಯಮನಾಕಾರದಂತೆ ದುಸ್ಸಹವೂ ಪಕ್ಷಿರಾಜನು ತೋರುತ್ತಿರುವ ಬಾವುಟವುಳ್ಳದೂ ಆದ ಆ ರಥವನ್ನು ಕಂಡು ಬಲರಾಮ ಸಹಿತನಾದ ಶ್ರೀಕೃಷ್ಣನು ವಿಸ್ಮಯವನ್ನುಳಿದು ಸಂತೋಷಿಸಿದನು. ತರುವಾಯ ಅವನು ಅದಕ್ಕೆ ಪ್ರದಕ್ಷಿಣೆಯನ್ನು ಮಾಡಿ ದೇವತೆಗಳನ್ನು ನಮಸ್ಕರಿಸಿ ಸಂಪೂರ್ಣವಾಗಿ ಒಂದು ಯೋಜನದ ವಿಸ್ತಾರದ ವಿಮಾನಾಕಾರದ ಆ ರಥವನ್ನು ಏರಿದನು.

೩೫. ರಥಾರೂಢನಾದ ಬಳಿಕ ಜಗನ್ನಿವಾಸನೂ, ನಾಶರಹಿತನೂ ಆದ ಆ ಜನಾರ್ದನನು ವೇಗವಾಗಿ ಯಮಲೋಕವಿರುವ ದಕ್ಷಿಣದಿಕ್ಕಿಗೆ ಪ್ರಯಾಣ

ತತ್ರ ಪ್ರಧ್ಮಾಪಯಾಮಾಸ ಶಂಖಂ ಶಾರ್ಙ್ಗಧನುರ್ಧರಃ ।
ತೇನ ಶಬ್ದೇನ ವಿತ್ರಸ್ತಾಃ ಕೃತಾಂತಾಲಯವಾಸಿನಃ ॥ ೩೬ ॥
ನರಕಾಂತರ್ಗತಾ ಮರ್ತ್ಯಾಃ ಪಾಪಾಚಾರಪರಾಯಣಾಃ ।
ಸುಖಮಾಪುಃ ಪ್ರಸನ್ನಾಶ್ಚ ವಹ್ನಯಃ ಕೃಷ್ಣದರ್ಶನಾತ್ ॥ ೩೭ ॥
ಶಸ್ತ್ರಾಣಿ ಕುಂಠತಾಂ ಪ್ರಾಪುರ್ಯಂತ್ರಾಣಿ ವಿವಿಧಾನಿ ಚ ।
ವಿದೀರ್ಣಾನಿ ತದಾ ವಾಸುದೇವದೇವಸ್ಯ ದರ್ಶನಾತ್ ॥ ೩೮ ॥
ಅಸಿಪತ್ರವನಂ ನಾಮ ಶೀರ್ಣಪರ್ಣಮಜಾಯತ ।
ರೌರವಂ ನಾಮ ನರಕಮಭೈರವಮಭೂತ್ತದಾ ॥ ೩೯ ॥
ಅಭೈರವಂ ಭೈರವಾಖ್ಯಂ ಕುಂಭೀಪಾಕಮವಾಚಿಕಂ ।
ಶೃಂಗಾಟಂ ಶೃಂಗಸದೃಶಂ ಲೋಹಸೂಚ್ಯಪ್ಯಸೂಚಿಕಾ ॥ ೪೦ ॥
ದುಸ್ತರಾ ಸುತರಾ ಜಾತಾ ನದೀ ವೈತರಣೀ ನೃಣಾಂ ।
ನರಕಾಂತೇ ತದಾ ಜಾತೇ ಗತೇ ವಿಶ್ವೇಶ್ವರೇ ವಿಭೌ ॥ ೪೧ ॥

---

ಮಾಡಿ ನವರತ್ನಗಳ ಸಹಸ್ರಕಿರಣಗಳಿಂದ ಹೊಳೆಯುತ್ತಿದ್ದ ಸಂಯಮಿನೀಪುರದ ಬಾಗಿಲಿನಲ್ಲಿ ನಿಂತು ತನ್ನ ಶಂಖವನ್ನು ಹಿಡಿದು ಧ್ವನಿಮಾಡಿದನು.

೩೬. ಶಾರ್ಙ್ಗವೆಂಬ ಧನುಸ್ಸನ್ನು ಕೈಯಲ್ಲಿ ತಾಳಿ ನಿಂತ ಆತನು ಶಂಖ ಧ್ವನಿಯನ್ನು ಮಾಡಲು ಯಮಲೋಕದಲ್ಲಿ ವಾಸಿಸುತ್ತಿದ್ದವರೆಲ್ಲರೂ ಆ ಶಬ್ದಕ್ಕೆ ಹೆದರಿ ನಡುಗಿದರು.

೩೭. ಪಾಪಾಚಾರಗಳಲ್ಲಿಯೇ ನಿರತರಾಗಿದ್ದು ನರಕಯಾತನೆಗಳನ್ನನು ಭವಿಸುತ್ತಿದ್ದ ಜೀವರೆಲ್ಲರೂ ಆ ಧ್ವನಿಯನ್ನು ಕೇಳಿ ಸುಖಭಾಗಿಗಳಾದರು. ಶ್ರೀಕೃಷ್ಣಪರಮಾತ್ಮನ ದರ್ಶನದಿಂದ ಅಲ್ಲಿನ ಅಗ್ನಿಗಳೂ ಪ್ರಸನ್ನಗಳಾದುವು.

೩೮. ದೇವದೇವನ ದರ್ಶನದಿಂದ ಯಮಕಿಂಕರರ ಕೈಗಳಲ್ಲಿದ್ದ ಶಸ್ತ್ರಗಳೆಲ್ಲವೂ ಕೆಲಸಕ್ಕೆ ಬಾರದಾದುವು. ಪಾಪಿಗಳಿಗೆ ಯಾತನೆಗಳನ್ನು ಕೊಡಲು ಸಿದ್ಧಗೊಳಿಸಿದ್ದ ನಾನಾವಿಧಗಳಾದ ಯಂತ್ರಗಳು ಛಿನ್ನಭಿನ್ನಗಳಾದುವು.

೩೯–೪೦. ಅಸಿಪತ್ರವನವೆಂಬ ನರಕವು ತರಗೆಲೆಯಂತಾಯಿತು. ರೌರವ ನರಕವು ಭಯರಹಿತವಾಗಿ ಪರಿಣಮಿಸಿತು. ಭೈರವವು ಪ್ರಶಾಂತವೂ, ಕುಂಭೀಪಾಕವು ನಿಶ್ಶಬ್ದವೂ, ಶೃಂಗಾಟವು ಪರ್ವತದ ಕೋಡುಗಲ್ಲಿಗೆ ಸದೃಶವೂ, ಲೋಹಸೂಚಿಯು ಸೂಚೀರಹಿತವೂ ಆಗಿಹೋದುವು.

೪೧. ಲೋಕೇಶ್ವರನೂ, ಸರ್ವವ್ಯಾಪಿಯೂ ಆದ ಶ್ರೀಕೃಷ್ಣನು ಅಲ್ಲಿಗೆ ಹೋಗಲು ನರಕವೆಂಬುದೇ ಇಲ್ಲವಾಯಿತು. ಜೀವರಿಗೆ ಬಹಳ ದುಸ್ತರವೆಂದು ಹೇಳಲ್ಪಡುವ ವೈತರಣೀನದಿಯೂ ಸಹ ಸುಖವಾಗಿ ದಾಟುವಂತಾಯಿತು.

ಪಾಪಕ್ಷಯಾತ್ತತಃ ಸರ್ವೇ ತೇ ಮುಕ್ತಾ ನಾರಕಾ ನರಾಃ ।
ಪದಮವ್ಯಯಮಾಸಾದ್ಯ ದೃಷ್ಟ್ವಾ ವಿಷ್ಣುಂ ತಮೋಽಪಹಂ ॥ ೪೨ ॥
ವಿಮಾನೇಷು ಸಹಸ್ರೇಷು ಹ್ಯಾರೂಢಾಸ್ತೇ ಸಮಂತತಃ ।
ಸವೀಕ್ಷ್ಯ ಪುಂಡರೀಕಾಕ್ಷಂ ಮುಕ್ತಾಸ್ತೇ ಸರ್ವಪಾತಕಾತ್ ॥ ೪೩ ॥
ತತಃ ಶೂನ್ಯಂ ಮುನೇ ಜಾತಂ ಸರ್ವಂ ನಿರಯಮಂಡಲಂ ।
ದರ್ಶನಾತ್ತಸ್ಯ ದೇವಸ್ಯ ವಿಷ್ಣೋರ್ವಿಶ್ವಸ್ವರೂಪಿಣಃ ॥ ೪೪ ॥
ತತೋ ದೂತಾಃ ಕೃತಾಂತಸ್ಯ ಕೃಷ್ಣಂ ಚ ಯುದ್ಧಕಾರಿಣಂ ।
ವಾರಯಾಮಾಸುರತ್ಯುಗ್ರಾ ವಿಶಂತಂ ನರಕಾನ್ಪ್ರತಿ ॥ ೪೫ ॥

ಕಿಂಕರಾ ಊಚುಃ:—

ಮಾ ವೀರಾಽನೇನ ಮಾರ್ಗೇಣ ರಥಮಾನಯ ಮಾನವನ್ ।
ಪ್ರಯಾಂತ್ಯಧೋಗತಿಂ ಪಾಪಾತ್ಪರಸ್ತ್ರೀಸ್ವಾಪಹಾರಕಾಃ ॥ ೪೬ ॥
ಯಮಾದಿಷ್ಟಾ ನರಾಃ ಪಾಪಾ ಯೇಽಮೋಚ್ಯಾ ವರ್ಷಕೋಟಿಭಿಃ ।
ದೃಷ್ಟ್ವಾ ತ ಏವ ಸದ್ಯಸ್ತ್ವಾಂ ಗತಾಃ ಸ್ವರ್ಗಮಪಾವೃತಾಃ ॥ ೪೭ ॥

---

೪೨. ನರಕದಲ್ಲಿದ್ದ ಮನುಷ್ಯರೆಲ್ಲರೂ ಅಂಧಂತಮಸ್ಸನ್ನು ನಾಶಮಾಡುವ ಆ ಮಹಾವಿಷ್ಣುವನ್ನು ನೋಡಿದ ಮಾತ್ರದಿಂದಲೇ ಪಾಪರಹಿತರಾಗಿ ಸಕಲರೂ ಶಾಶ್ವತವಾದ ಪದವನ್ನು ಪಡೆದು ಮೋಕ್ಷಕ್ಕೆ ಭಾಗಿಗಳಾದರು.

೪೩. ಕಮಲನೇತ್ರನಾದ ಶ್ರೀಕೃಷ್ಣನನ್ನು ಕಂಡ ಮಾತ್ರದಿಂದ ಅವರೆಲ್ಲರೂ ಸಕಲಪಾತಕಗಳಿಂದಲೂ ಮುಕ್ತರಾಗಿ ಸಾವಿರಾರು ದಿವ್ಯವಿಮಾನಗಳನ್ನೇರಿ ಸ್ವರ್ಗ ಲೋಕವನ್ನು ಕುರಿತು ಪ್ರಯಾಣಮಾಡಿದರು.

೪೪. ಅಯ್ಯಾ ವ್ಯಾಸಮುನಿಯೆ! ಮಹಾವಿಷ್ಣುವೂ, ವಿರಾಟ್ಸ್ವರೂಪನೂ ಆದ ಆ ದೇವನ ದರ್ಶನದಿಂದ ಸಕಲವಾದ ನರಕಲೋಕವೂ ಜನಶೂನ್ಯ ವಾಯಿತು.

೪೫. ಶ್ರೀಕೃಷ್ಣನು ನರಕಲೋಕಗಳನ್ನು ಪ್ರವೇಶಿಸುವುದಕ್ಕಾಗಿ ಬಂದು ದನ್ನೂ ಯುದ್ಧಕ್ಕೆ ಸನ್ನದ್ಧನಾಗಿರುವುದನ್ನೂ ಕಂಡು ಮಹಾಭಯಂಕರರಾದ ಯಮಕಿಂಕರರು ಆತನನ್ನು ತಡೆಗಟ್ಟಿದರು.

೪೬. ಕಿಂಕರರು ಹೇಳುತ್ತಾರೆ:—ಅಭಿಮಾನಿಯಾದ ಎಲೈ ವೀರನೆ! ಈ ಮಾರ್ಗದಿಂದ ರಥವನ್ನು ತೆಗೆದುಕೊಂಡು ಹೋಗಬೇಡ. ಪಾಪಿಗಳೂ, ಪರಸ್ತ್ರೀಯ ರನ್ನೂ, ಪರಧನವನ್ನೂ ಆಶಿಸಿದವರೂ ಮಾತ್ರ ಅಧೋಗತಿಯನ್ನು ಹೊಂದುವರು.

೪೭. ಯಮನ ಆದೇಶಕ್ಕೊಳಗಾಗಿ ಕೋಟಿವರ್ಷಗಳಿಗೂ ಮೋಕ್ಷವನ್ನು ಪಡೆಯಲಾರದ ಆ ಪಾಪಿಗಳು ಸಹ ನಿನ್ನನ್ನು ನೋಡಿದುದರಿಂದ ನಿಮಿಷದಲ್ಲಿಯೇ ಸುಲಭವಾಗಿ ಸ್ವರ್ಗಕ್ಕೆ ಹೊರಟುಹೋದರು.

ಏತಚ್ಛ್ರುತ್ವಾ ವಚಸ್ತೇಷಾಂ ಕೃಪಯಾ ಪೀಡಿತೋ ಭೃಶಂ ।
ಪುನಃ ಪ್ರೋವಾಚ ಮಧುಹಾ ಮೋಕ್ಷಾಯಾಽಹಮುಪಾಗತಃ ॥ ೪೮ ॥
ಸರ್ವೇಷಾಂ ಸ್ವರ್ಗದಾತಾಽಹಂ ಯಮಲೋಕನಿವಾರಕಃ ।
ಅಂಜಸಾ ಯಮರಾಡ್ದೂತಾ ಯಮಾಯಾಖ್ಯಾತ ಮೇ ವಚಃ ॥ ೪೯ ॥
ಏತಚ್ಛ್ರುತ್ವಾ ವಚೋ ದೂತಾಃ ಸತ್ವರಾ ಯಮಮಾಗತಾಃ ।
ಸರ್ವಮಾಚಕ್ಷಿರೇ ವೃತ್ತಂ ಯಥಾ ನಾರಕಮೋಕ್ಷಣಂ ॥ ೫೦ ॥
ತತೋ ಯಮೋ ರುಷಾವಿಷ್ಟಃ ಪ್ರಾಹ ತಾನ್ ಯಮಕಿಂಕರಾನ್ ।
ಯಃ ಕಶ್ಚಿದಾಗತೋ ಮರ್ತ್ಯೋ ಮರ್ಯಾದಾಭೇದಕೃನ್ನರಃ ॥ ೫೧ ॥
ತಂ ಗತ್ವಾ ವಾರಯಧ್ವಂ ವೈ ಗೃಹೀತ್ವಾನೀಯತಾಮಿತಿ ।
ಅಯಂ ನರಾಂತಕೋ ಯಾತು ಕಿಂಕರಃ ಸಹ ಕಿಂಕರೈಃ ॥ ೫೨ ॥
ಏವಮುಕ್ತೋ ಯಮೇನಾಽಥ ಕಿಂಕರಃ ಸ ನರಾಂತಕಃ ।
ಗತ್ವಾ ತಂ ವಾರಯಾಮಾಸ ವಾಗ್ಭಿರುಗ್ರಾಭಿರಚ್ಯುತಂ ॥ ೫೩ ॥
ಯದಾ ನ ವಾರಿತಸ್ತಸ್ಥೌ ತದಾ ಕ್ರುದ್ಧೋ ನರಾಽಂತಕಃ ।
ತದಾ ಶರೈರತೀವೋಗ್ರೈಸ್ತಾಡಿತಸ್ತೇನ ಕೇಶವಃ ॥ ೫೪ ॥

---

೪೮. ಯಮಕಿಂಕರರ ಈ ಮಾತುಗಳನ್ನು ಕೇಳಿ ಅಧಿಕವಾದ ಅನುಕಂಪದಿಂದ ಪೀಡಿತನಾದ ಶ್ರೀಕೃಷ್ಣನು ಮತ್ತೆ ಹೇಳಿದನು: "ಮೋಕ್ಷವನ್ನು ಕೊಡುವುದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವೆನು.

೪೯. ಸಕಲ ಜೀವರಿಗೂ ಯಮಲೋಕದ ವಾಸವನ್ನು ದೂರಮಾಡಿ ಸ್ವರ್ಗವನ್ನು ಕೊಡುವವನು ನಾನೇ. ಎಲೈ ಯಮರಾಜದೂತರಿರಾ! ಶೀಘ್ರವಾಗಿ ಹೋಗಿ ನಿಮ್ಮ ಯಮನಿಗೆ ನನ್ನ ಮಾತನ್ನು ತಿಳಿಸಿರಿ."

೫೦. ಇದನ್ನು ಕೇಳಿ ಯಮದೂತರು ಸಂಭ್ರಮದಿಂದ ಬಂದು ಸಕಲ ವೃತ್ತಾಂತವನ್ನೂ, ನರಕದಲ್ಲಿದ್ದವರು ಮೋಕ್ಷವನ್ನು ಪಡೆದುದನ್ನೂ ಯಮಧರ್ಮರಾಜನಿಗೆ ವಿಜ್ಞಾಪಿಸಿದರು.

೫೧. ಆಗ ಯಮನು ಮಹಾಕೋಪಭರಿತನಾಗಿ ತನ್ನ ಕಿಂಕರರನ್ನು ಕುರಿತು ಇಂತೆಂದನು. "ಲೋಕಗಳ ಸ್ಥಿತಿಗತಿಗಳನ್ನು ಕಳಚಿಹಾಕಲೆಳಸುವ ಯಾವನೋ ಒಬ್ಬ ಮನುಷ್ಯನು ಬಂದಿರಬಹುದು.

೫೨. ಹೋಗಿ ಅವನನ್ನು ತಡೆದು ಹಗ್ಗಗಳಿಂದ ಬಿಗಿದು ಇಲ್ಲಿಗೆ ಕರೆದು ತನ್ನಿರಿ. ನಮ್ಮ ಕಿಂಕರನಾದ ಈ ನರಾಂತಕನು ತನ್ನ ಅನುಯಾಯಿಗಳೊಡನೆ ಈ ಕೆಲಸಕ್ಕಾಗಿ ಹೋಗಿಬರಲಿ."

೫೩. ಯಮನ ಈ ಅಪ್ಪಣೆಯನ್ನು ಕೇಳಿ ನರಾಂತಕನು ಹೋಗಿ ಕಠಿನವಾದ ಮಾತುಗಳನ್ನಾಡುತ್ತ ಅಚ್ಯುತನನ್ನು ತಡೆದನು.

೫೪. ಶ್ರೀಕೃಷ್ಣನು ನಿಲ್ಲದೆ ಮುಂದುವರೆಯಲು ನರಾಂತಕನು ಮಹಾ-

**ಬಲದೇವೋಽಪಿ ಸಮರೇ ತಾಡಿತೋ ವಿವಿಧೈಃ ಶರೈಃ ।**
**ತಾವುಭೌ ತಾಡಿತೌ ಘೋರೈಃ ಸಮಂತಾದ್ಯಮಕಿಂಕರೈಃ ॥ ೫೫ ॥**
**ಆದಾಯ ಧನುಷೀ ದಿವ್ಯೇ ಜಘ್ನತುರ್ಯಮಕಿಂಕರಾನ್ ।**
**ಬಾಣೈರನೇಕಸಾಹಸ್ರೈಃ ಕ್ರುದ್ಧೌ ರಾಮಜನಾರ್ದನೌ ॥ ೫೬ ॥**
**ನರಾಂತಕೋಽಪಿ ಸಮರೇ ಬಲೇನ ಬಲಿನಾರ್ದಿತಃ ।**
**ಪಪಾತ ಗದಯಾ ಭಿನ್ನೋ ಮೂರ್ಧ್ನಿ ನಿರ್ಯಾತಲೋಚನಃ ॥ ೫೭ ॥**
**ತತೋ ನರಾಂತಕೇ ವೀರೇ ಪತಿತೇ ಯಮಕಿಂಕರೇ ।**
**ಕಿಂಕರಾಣಾಮಭೂತ್ಸೈನ್ಯಮಾರ್ತಂ ರಣಪರಾಙ್ಮುಖಂ ॥ ೫೮ ॥**
**ರಾಮಕೃಷ್ಣಾಭ್ಯಾಂ ತೇ ದೂತಾ ಹನ್ಯಮಾನಾ ಭಯಾತುರಾಃ ।**
**ಯಮಾಯ ಕಥಯಾಮಾಸುರ್ನರಾಂತಕಸ್ತು ಪಾತಿತಃ ॥ ೫೯ ॥**
**ತತೋ ಯಮೋ ಯಯೌ ಕ್ರುದ್ಧಃ ಸಮಂತಾತ್ಕಿಂಕರೈರ್ವೃತಃ ।**
**ತತೋ ಪ್ರಾಹ ಯಮಃ ಕ್ರುದ್ಧೋ ನೋ ಜಿತೋಽಹಂ ಪುರಾ ಪರೈಃ॥೬೦॥**

---

ಕೋಪದಿಂದ ಅತಿತೀಕ್ಷ್ಣಗಳಾದ ಬಾಣಗಳನ್ನು ತೆಗೆದುಕೊಂಡು ಕೇಶವನನ್ನು ಗುರಿಯಿಟ್ಟು ಹೊಡೆದನು.

೫೫. ಬಲದೇವನೂ ಸಹ ಯುದ್ಧರಂಗದಲ್ಲಿ ಅನೇಕ ಬಾಣಗಳ ಪೆಟ್ಟುಗಳನ್ನು ತಿಂದನು. ಅವರಿಬ್ಬರೂ ಭಯಂಕರರಾದ ಯಮಕಿಂಕರರಿಂದ ಸುತ್ತುವರೆಯಲ್ಪಟ್ಟು ಹೊಡೆತಗಳನ್ನು ತಿಂದರು.

೫೬. ರಾಮಕೃಷ್ಣರಿಗೂ ಅಪಾರವಾದ ಕೋಪವುಂಟಾಗಲು ತಮ್ಮ ದಿವ್ಯ ಧನುಸ್ಸುಗಳನ್ನು ತೆಗೆದುಕೊಂಡು ಸಾವಿರಾರು ಬಾಣಗಳಿಂದ ಆ ಯಮಕಿಂಕರರನ್ನು ಕೊಲ್ಲಲುಪಕ್ರಮಿಸಿದರು.

೫೭. ನರಾಂತಕನನ್ನೂ ಬಲರಾಮನು ಮಹಾವೇಗದಿಂದ ಗದೆಯನ್ನು ಬೀಸಿ ಹೊಡೆದನು. ಹೊಡೆತವು ತಲೆಯಮೇಲೆ ಬಿದ್ದು ತಲೆಯೊಡೆದು ಕಣ್ಣುಗುಡ್ಡೆಗಳು ಹೊರಟುಕೊಂಡು ಅವನು ನೆಲದಲ್ಲಿ ಬಿದ್ದನು.

೫೮. ಮಹಾವೀರನೂ, ಯಮಕಿಂಕರನೂ ಆದ ನರಾಂತಕನು ಹತನಾಗಲು ಯಮಕಿಂಕರರ ಸೈನ್ಯವೆಲ್ಲವೂ ದುಃಖಗೊಂಡು ಯುದ್ಧರಂಗದಿಂದ ಹಿಂದಿರುಗಿತು.

೫೯. ರಾಮಕೃಷ್ಣರಿಂದ ಪೆಟ್ಟುಗಳನ್ನು ತಿನ್ನುತ್ತ ಭಯವಿಹ್ವಲರಾದ ಆ ದೂತರೆಲ್ಲರೂ ಯಮನ ಸಮೀಪಕ್ಕೆ ಓಡಿಬಂದು "ನರಾಂತಕನು ಮಡಿದನು" ಎಂಬ ಸಮಾಚಾರವನ್ನು ತಿಳಿಸಿದರು.

೬೦. ಆಗ ಯಮನು ಕ್ರುದ್ಧನಾಗಿ ಸಕಲ ಸೈನ್ಯವನ್ನೂ ಸುತ್ತಲೂ ನಿಲ್ಲಿಸಿಕೊಂಡು ಯುದ್ಧಕ್ಕೆ ಹೊರಟು, ತನಗೆತಾನೆ, "ಹಿಂದೆ ನಾನೆಂದೂ ಇತರರಿಂದ ಯುದ್ಧದಲ್ಲಿ ಪರಾಜಿತನಾಗಲಿಲ್ಲ" ಎಂದು ಹೇಳಿಕೊಂಡನು.

ತತೋ ವಾದಿತ್ರನಿರ್ಘೋಷೈಸ್ತು ಮುಲಾನಕಗೋಮುಖೈಃ ।
ನಾನಾಡಮರುಕೈಶ್ಚೈವ ಚಿತ್ರಗುಪ್ತೈಶ್ಚ ಗಚ್ಛತಿ ॥ ೬೧ ॥
ದೇವಾ ವಿದ್ಯಾಧರಾಃ ಸಿದ್ಧಾ ದೃಷ್ಟ್ವಾಯಾಂತಂ ಮಹಾಬಲಂ ।
ಕೃತಾಂತಸ್ಯ ರಣೇಽಕ್ಷೋಭ್ಯಂ ರಾಮಪಾಲಂ ಜಗತ್ಪತಿಂ ॥ ೬೨ ॥
ತತಸ್ತೇ ಕಿಂಕರಾಃ ಸರ್ವೇ ಚಿತ್ರಗುಪ್ತೇನ ನೋದಿತಾಃ ।
ರಥಮಾವೃತ್ಯ ಬಾಣೌಘೈಃ ವಿವ್ಯಧುಸ್ತೇ ಸಮಂತತಃ ॥ ೬೩ ॥
ಬಲಂ ಚ ಕೇಶವಂ ಸಂಖ್ಯೇ ಜಘ್ನತುಸ್ತಾವುಭಾವಪಿ ।
ರಣೇ ಚ ವಿವಿಧೈರ್ಬಾಣೈಶ್ಚಿತ್ರಗುಪ್ತಸ್ಯ ಪಶ್ಯತಃ ॥ ೬೪ ॥
ವಿದಾರ್ಯ ಚ ಸಹಸ್ರಾಣಿ ಕಿಂಕರಾಣಾಂ ಸಮಂತತಃ ।
ಕೃತಾಂತಾಽನೀಕಿನೀಮಧ್ಯೇ ಕೃತಾಂತ ಇವ ಕೇಶವಃ ।
ಚಚಾರ ರಣದುರ್ಧರ್ಷಃ ರಾಮಪಾಲೇನ ಪಾಲಿತಃ ॥ ೬೫ ॥
ತತಶ್ಚಿತ್ರಗುಪ್ತೋ ರಣೇ ಕಿಂಕರಾದ್ಯಂ
ವಿದೀರ್ಣಂ ನಿರೀಕ್ಷ್ಯಾರ್ತನಾದಂ ಚಕಾರ ॥ ೬೬ ॥

---

೬೧. ಇಂತೆಂದುಕೊಂಡು, ರಣಭೇರಿಗಳೇ ಮೊದಲಾದ ವಾದ್ಯಗಳ ಘೋಷಣಗಳಿಂದಲೂ, ಸಾವಿರಗಟ್ಟಲೆಯಾಗಿ ಬಾಜಿಸುತ್ತಿರುವ ತಮಟೆ, ಗೋಮುಖ, ಡಮರುಗಗಳಿಂದಲೂ, ಚಿತ್ರಗುಪ್ತನೇ ಮೊದಲಾದ ಪರಿವಾರ ದಿಂದಲೂ ಆ ಯಮನು ಯುದ್ಧಕ್ಕೆ ಹೊರಟನು.

೬೨. ಯುದ್ಧರಂಗದಲ್ಲಿ ದೇವತೆಗಳೂ, ವಿದ್ಯಾಧರರೂ, ಸಿದ್ಧರೂ ಮಹಾ ಬಲಶಾಲಿಯೂ, ಲೋಕನಾಯಕನೂ ಆದ ಬಲರಾಮನು ಯಾವ ಸಂಕಟಕ್ಕೂ ಸಿಕ್ಕದೆ ಯಮನ ಸೈನ್ಯದಲ್ಲಿ ಸ್ವೇಚ್ಛೆಯಾಗಿ ತಿರುಗುತ್ತಿದ್ದುದನ್ನು ಕಂಡರು.

೬೩. ಚಿತ್ರಗುಪ್ತನಿಂದ ಪ್ರಚೋದಿತರಾದ ಯಮಕಿಂಕರರೆಲ್ಲರೂ ರಥವನ್ನು ಬಳಸಿ ಬಾಣವೃಷ್ಟಿಗಳಿಂದ ನಾಲ್ಕು ಕಡೆಗಳಿಂದಲೂ ರಾಮಕೃಷ್ಣರನ್ನು ವ್ಯಥೆ ಗೊಳಿಸಿದರು.

೬೪. ಚಿತ್ರಗುಪ್ತನು ನೋಡುತ್ತಿರುವಂತೆಯೇ ಯುದ್ಧದಲ್ಲಿ ಬಲರಾಮ ನನ್ನೂ ಕೇಶವನನ್ನೂ ಬಹುವಿಧಗಳಾದ ಶಸ್ತ್ರಗಳಿಂದಲೂ, ಬಾಣಗಳಿಂದಲೂ ಹೊಡೆದರು.

೬೫. ಆದರೆ ಸಾವಿರಾರು ಕಿಂಕರರನ್ನು ಸೀಳಿ ಕೆಡವುತ್ತ ಬಲರಾಮನಿಂದ ಪಾಲಿತನಾದ ಶ್ರೀಕೃಷ್ಣನು ಯುದ್ಧದಲ್ಲಿ ಅಜೇಯನಾಗಿ ಯಮಸೈನ್ಯದ ಮಧ್ಯ ದಲ್ಲಿ ತಾನೇ ಮತ್ತೊಬ್ಬ ಯಮನೊ ಎಂಬಂತೆ ಓಡಾಡುತ್ತಿದ್ದನು.

೬೬. ಆಗ ಕಿಂಕರಸೈನ್ಯವೆಲ್ಲವೂ ಛಿನ್ನಭಿನ್ನವಾಗುತ್ತಿರುವುದನ್ನು ಕಂಡು ಚಿತ್ರಗುಪ್ತನು ಆರ್ತನಾದವನ್ನು ಮಾಡಿದನು.

ಶರೈಃ ಪಂಚಭಿಃ ಕೃಷ್ಣಮಾಯಾಂತಮಾಜೌ
ಜಘಾನಾಽಷ್ಟಭಿರ್ವಕ್ತ್ರದೇಶೇ ಸ ಭಿನ್ನಃ ।
ಶರಾರ್ತೋ ರಥೋಪಸ್ಥ ಆಸೀತ್ತದಾರ್ತ
ಸ್ತಮಾಲೋಕ್ಯ ಭಿನ್ನಂ ರಣೇ ನಷ್ಟಸಂಜ್ಞಂ ॥ ೬೭ ॥

ರಥಂ ಸ್ವಂ ಸಮಾದಾಯ ಯಾತಃ ಕೃತಾಂತ
ಸ್ತತಶ್ಚಿತ್ರಗುಪ್ತೇ ಶರಾರ್ತೇ ಪ್ರಸುಪ್ತೇ ।
ರಣೇ ಕೀರ್ತಿಲುಪ್ತೇ ಭಯುಕ್ತೋಽಭಯುಕ್ತಃ
ಸ್ವಸೈನ್ಯೈಶ್ಚ ಯುಕ್ತೋ ಭಯಾರ್ತೋ ನಿಷಣ್ಣಃ ॥ ೬೮ ॥

ಪ್ರಧಾನಾಶ್ಚ ಭಗ್ನಾ ವಿಚಿತ್ರಾಶ್ಚ ಭಗ್ನಾ
ಸ್ತತಶ್ಚಿತ್ರಗುಪ್ತಂ ನಿಶಮ್ಯಾಽಥ ಭಗ್ನಂ ।
ಸಕಾಲಸ್ತಮಾಯಾಂತಮಾಲೋಕ್ಯ ದೂರಾತ್
ವರಂ ಸೈನ್ಯಮಾದಾಯ ದೇವಾಽರಿಶತ್ರುಂ ॥ ೬೯ ॥

ವಿನಾಶಾಯ ಯುದ್ಧ್ಯದ್ಯುಗಾಂತೇ ಪ್ರಜಾನಾಂ
ಯಥಾ ವಾಡವೋ ಜ್ವಾಲವೃದ್ಧಃ ಪ್ರವೃದ್ಧಃ ।
ತಮಾಯಾಂತಮಾಲೋಕ್ಯಕಾಲಂ ಕರಾಲಂ
ಶರೈರಾವೃಣೋದಂತಕಂ ಕಾಲಕಲ್ಪೈಃ ॥ ೭೦ ॥

---

೬೭. ಚಿತ್ರಗುಪ್ತನು ಯುದ್ಧದಲ್ಲಿ ಮುಂದೆ ಬರುತ್ತಿರುವ ಶ್ರೀಕೃಷ್ಣನನ್ನು ಐದು ಬಾಣಗಳಿಂದ ಹೊಡೆದನು. ಆತನೂ ಚಿತ್ರಗುಪ್ತನ ಮುಖಕ್ಕೆ ಎಂಟು ಬಾಣಗಳನ್ನೆಸೆದು ಘಾಯಮಾಡಿದನು. ಈ ಬಾಣಗಳಿಂದ ದುಃಖಗೊಂಡು ಚಿತ್ರಗುಪ್ತನು ರಥದಲ್ಲಿ ಸುಮ್ಮನೆ ಕುಳಿತುಬಿಟ್ಟನು. ಯುದ್ಧರಂಗದಲ್ಲಿ ಪೆಟ್ಟು ತಿಂದು ಮೂರ್ಛೆಗೊಂಡಿದ್ದ ಆತನನ್ನು ಯಮನು ನೋಡಿದನು.

೬೮. ಚಿತ್ರಗುಪ್ತನು ಬಾಣಪೀಡಿತನಾಗಿ ಮೂರ್ಛೆಗೊಂಡಿರಲು ಯಮನು ತನ್ನ ರಥವನ್ನು ತೆಗೆದುಕೊಂಡು ಹೊರಟುಬಂದನು. ಈ ಯುದ್ಧದಲ್ಲಿ ತನ್ನ ಕೀರ್ತಿಯು ಲೋಪವಾಗುವ ಪ್ರಸಂಗವು ಬಂದುದನ್ನು ಕಂಡು ಭಯ, ದುಃಖ ಗಳಿಂದ ಕೂಡಿದವನಾಗಿ ಯಮನು ತನ್ನ ಸೈನ್ಯದಿಂದೊಡಗೂಡಿ ಭಯಾರ್ತನಾಗಿ ಕುಳಿತಿದ್ದನು.

೬೯. ಪ್ರಧಾನರೆಲ್ಲರೂ ಸತ್ತರು. ವಿಚಿತ್ರರಾದ ಸೇನಾನಾಯಕರೂ ಭಗ್ನ ರಾದರು. ಈಗ ಚಿತ್ರಗುಪ್ತನೂ ಭಗ್ನನಾದುದನ್ನು ಕೇಳಿದನು. ದೂರದಿಂದಲೇ ಶ್ರೀಕೃಷ್ಣನು ಬರುತ್ತಿರುವುದನ್ನು ಕಂಡು ಆತನು ಬೇರೆ ಸೈನ್ಯವನ್ನು ತೆಗೆದು ಕೊಂಡು ದೈತ್ಯಮರ್ದನನಾದ ಆತನನ್ನೆದುರಿಸಿದನು.

೭೦. ಶ್ರೀಕೃಷ್ಣನನ್ನು ನಾಶಮಾಡಬೇಕೆಂದು ಯಮನು ಯುದ್ಧಮಾಡ ಲುಪಕ್ರಮಿಸಿದನು. ಅವನ ಸ್ವರೂಪವು ಪ್ರಳಯಕಾಲದಲ್ಲಿ ಪ್ರಜೆಗಳನ್ನು ನಾಶ

ಸ ಕಾಲಃ ಕರಾಲಂ ಸಮಾದಾಯ ದಂಡಂ
ಮುಮೋಚಾಽಚ್ಯುತೇ ಪಶ್ಯತಾಂ ದೇವತಾನಾಂ ।
ತತಃ ಕಾಲದಂಡಃ ಪ್ರಜಾನಾಂ ವಿನಾಶೋ
ಹರೇಃ ಸನ್ನಿಕಾಶಂ ಸಮಭ್ಯಾಜಗಾಮ ॥ ೨೧ ॥
ತತೋ ದೇವಗಂಧರ್ವಯಕ್ಷಾ ಮುನೀಂದ್ರಾಃ
ಪರಂ ವಿಸ್ಮಯಂ ಪ್ರಾಪುರಾವೀಕ್ಷ್ಯ ರಾಮಂ ।
ಜ್ವಲಂತಂ ಚ ಜಗ್ರಾಹ ಕಾಲಸ್ಯದಂಡಂ
ಸ ರಾಮೋ ವರಂ ಲೀಲಯಾಽನಂತಮೂರ್ತಿಃ ॥ ೨೨ ॥
ಗೃಹೀತೇ ಬಲೇನಾಹವೇ ಕಾಲದಂಡೇ
ಮೋಕ್ತುಕಾಮೇ ಪುನಃ ಕಾಲನಾಶಾಯ ವೈ ।
ತೂರ್ಣಮಭ್ಯೇತ್ಯ ತತ್ರಾಂತರೇ ಪದ್ಮಜಸ್ತಂ
ರಣೇ ವಾರಯಾಮಾಸ ಕೃಷ್ಣಂ ತದಾ ॥ ೨೩ ॥
ಮಾ ಮುಂಚೇತ್ಯಬ್ರವೀದ್ವೇಧಾಃ ಕಾಲಂ ಕಾಲಾಯುಧಂ ಬಲ ।
ತ್ವಯಾ ಬಲವತಾ ವೀರ ಚರಾಚರ ಧರಾಧರಾ ॥ ೨೪ ॥

---

ಮಾಡಲು ಮಹಾಜ್ವಾಲೆಗಳಿಂದ ಕೂಡಿದ ಬಡಬಾಗ್ನಿಯೇ ಬಂದಿದೆಯೋ ಎಂಬಂತಿದ್ದಿತು. ಕಪ್ಪುಬಣ್ಣದವನೂ, ಭಯಂಕರನೂ ಆದ ಯಮನು ಮುಂದೆಬರುತ್ತಿರುವುದನ್ನು ಕಂಡು ಕೃಷ್ಣನು ಯಮಸದೃಶಗಳಾದ ಬಾಣಗಳಿಂದಲೇ ಹೊಡೆದನು.

೨೧. ದೇವತೆಗಳೆಲ್ಲರೂ ನೋಡುತ್ತಿರುವಂತೆಯೇ ಯಮನೂ ಭೀಕರವಾದ ತನ್ನ ಕಾಲದಂಡವನ್ನು ತೆಗೆದುಕೊಂಡು ಅಚ್ಯುತನಮೇಲೆ ಪ್ರಯೋಗಿಸಿದನು. ಸಕಲ ಜನರನ್ನೂ ನಾಶಗೊಳಿಸುವ ಶಕ್ತಿಯುಳ್ಳ ಆ ಯಮದಂಡವು ಶ್ರೀ ಹರಿಯ ಸಮೀಪಕ್ಕೆ ಬೇಗನೆ ಬಂದಿತು.

೨೨. ಉರಿಯುತ್ತಿರುವ ಆ ಯಮದಂಡವನ್ನು ಶೇಷಸ್ವರೂಪಿಯಾದ ಬಲರಾಮನು ಅವಲೀಲೆಯಿಂದಲೇ ಅದನ್ನು ಕೈಯಲ್ಲಿ ಹಿಡಿದನು. ಇಂತಹ ಪರಾಕ್ರಮವುಳ್ಳ ಬಲರಾಮನನ್ನು ಕಂಡು ದೇವತೆಗಳೂ, ಗಂಧರ್ವರೂ, ಯಕ್ಷರೂ, ಮಹರ್ಷಿಗಳೂ ಅತಿಶಯವಾದ ಆಶ್ಚರ್ಯವನ್ನು ತಾಳಿದರು.

೨೩. ಬಲದೇವನು ಯುದ್ಧದಲ್ಲಿ ಆ ಕಾಲದಂಡವನ್ನು ಹಿಡಿದುಕೊಂಡು ಮತ್ತೆ ಅದನ್ನು ಯಮನ ನಾಶಕ್ಕಾಗಿಯೇ ಪ್ರಯೋಗಿಸಬೇಕೆಂದು ಉದ್ಯುಕ್ತನಾಗಲು ಬ್ರಹ್ಮದೇವನು ವೇಗದಿಂದ ಅವರಿಬ್ಬರ ನಡುವೆ ಬಂದು ಕೃಷ್ಣನನ್ನೂ ಬಲರಾಮನನ್ನೂ ಯುದ್ಧದಿಂದ ತಡೆದನು.

೨೪–೨೫. ಬ್ರಹ್ಮನು ಹೇಳುತ್ತಾನೆ :—ಓ ಬಲರಾಮನೆ! ಭಯಂಕರವಾದ ಈ ಕಾಲದಂಡವನ್ನು ಪ್ರಯೋಗಿಸಬೇಡ. ಅಯ್ಯಾ ವೀರನೆ! ಮಹಾಬಲಶಾಲಿ

ಧಾರ್ಯತೇ ಶಿರಸಾ ದೇವ ಸಂಸಾರೇ ನಾಸ್ತಿ ತೇ ಸಮಃ ।
ತ್ವಯಾ ವಿಶ್ವಪತಿರ್ವಿಷ್ಣುರುತ್ಸಂಗೇನ ಸದೋಽಹ್ಯತೇ ॥ ೭೫ ॥
ಕೋಽನ್ಯೋಽಸ್ತಿ ತ್ವತ್ಸಮೋ ರಾಮ ಯೋ ಜಗದ್ದಹನೇ ಕ್ಷಮಃ ।
ಜಗತ್ಸ್ರಷ್ಟಾ ಜಗದ್ಗೋಪ್ತಾ ಜಗದ್ಧರ್ತಾ ಜಗತ್ಪತಿಃ ॥ ೭೬ ॥
ಪಾಲ್ಯತೇ ಯತ್ತ್ವಯಾ ಸೋಽಪಿ ವಿಷ್ಣುರ್ವಿಶ್ವೈಕನಾಯಕಃ ।
ಕಸ್ತೇ ಸ್ತುತಿಕರೋಽಸ್ತೀಹ ಕೋ ಗುಣಾನ್ವೇತ್ತುಮರ್ಹತಿ ॥ ೭೭ ॥
ತತೋ ವಯಂ ತ್ವದಂಕಸ್ಥವಿಷ್ಣುನಾಭಿಭವಾ ಯತಃ ।
ಇತ್ಯುಕ್ತ್ವಾ ಬಲದೇವಂ ಚ ವಾಸುದೇವಂ ಪುನರ್ವಚಃ ॥ ೭೮ ॥
ಉವಾಚ ಚತುರಾಸ್ಯಸ್ತು ಸ್ತುತಿಪೂರ್ವಂ ವೃತಃ ಸುರೈಃ ।
ಕೃಷ್ಣಕೃಷ್ಣ ಕರಾಲಸ್ಯ ಕಾಲಸ್ಯಾಸ್ಯ ಕೃಪಾಂ ಕುರು ॥ ೭೯ ॥
ಯತೋ ಭವಂತಮಾಯಾಂತಂ ವಿಷ್ಣುಂ ವಿಶ್ವೈಕನಾಯಕಂ ।
ವೇತ್ತಿ ನಾಽಯಂ ಜಗನ್ನಾಥಂ ನರಕಾರ್ಣವತಾರಕಂ ॥ ೮೦ ॥

---

ಯಾದ ನೀನೇ ಚರಾಚರಾತ್ಮಕವಾದ ಸಕಲ ಬ್ರಹ್ಮಾಂಡವನ್ನೂ ತಲೆಯಮೇಲೆ ಹೊತ್ತಿರುವೆ. ಹದಿನಾಲ್ಕು ಲೋಕಗಳಲ್ಲಿಯೂ ನಿನಗೆ ಸಮಾನನು ಮತ್ತೊಬ್ಬರಿಲ್ಲ. ನೀನೇ ಲೋಕೇಶ್ವರನಾದ ಮಹಾವಿಷ್ಣುವನ್ನು ಯಾವಾಗಲೂ ದೇಹದಮೇಲೆ ಮಲಗಿಸಿಕೊಂಡಿರುವೆ.

೭೬. ಸಕಲ ಜಗತ್ತನ್ನೂ ಭಸ್ಮಮಾಡುವ ಶಕ್ತಿಯುಳ್ಳ ನಿನಗೆ ಸಮರು ಯಾರಿರುವರು? ಎಲೈ ಬಲರಾಮನೆ! ನೀನೇ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಗಳನ್ನು ಮಾಡುವ ಸರ್ವೇಶ್ವರನಾಗಿರುವೆ.

೭೭. ವಿಶ್ವಾಧಿಪತಿಯಾದ ಮಹಾವಿಷ್ಣುವೂ ಸಹ ನಿನ್ನಿಂದಲೇ ಪಾಲಿತ ನಾಗಿರುವನು. ನಿನ್ನನ್ನು ಸ್ತೋತ್ರಮಾಡದವನು ಯಾವನಿರುವನು? ಯಾವನಿಗೆ ನಿನ್ನ ಗುಣಗಳನ್ನೆಲ್ಲ ತಿಳಿಯಲು ಸಾಧ್ಯವಾದೀತು?

೭೮. ನಾನೂ ನಿನಗೆ ಹೊಸಬನಲ್ಲ. ನಿನ್ನಲ್ಲಿ ಪ್ರಸುಪ್ತವಾಗಿರುವ ನಾರಾಯಣನ ನಾಭೀಕಮಲದಲ್ಲಿಯೇ ಜನಿಸಿದವನು.'' ಇಂತೆಂದು ಬಲದೇವ ನನ್ನು ಸಂತವಿಸಿ ಶ್ರೀಕೃಷ್ಣನಿಗೆ ಹೇಳತೊಡಗಿದನು.

೭೯. ತರುವಾಯ, ದೇವತೆಗಳಿಂದ ಪರಿವೃತನಾದ ಆ ಬ್ರಹ್ಮನು ವಾಸು ದೇವನನ್ನು ಸ್ತೋತ್ರಮಾಡಿ ಇಂತೆಂದನು. "ಎಲೈ ಕೃಷ್ಣನೆ! ಕರಾಳನಾದ ಈ ಯಮನಲ್ಲಿ ದಯೆಯನ್ನು ತೋರು.

೮೦. ಸರ್ವಾಂತರ್ಯಾಮಿಯೂ, ಲೋಕೈಕನಾಯಕನೂ, ಜಗದೀ ಶ್ವರನೂ, ನರಕದಿಂದುದ್ಧರಿಸುವವನೂ ಆದ ನೀನು ಬಂದಿರುವೆಯೆಂಬುದನ್ನು ಇವನರಿಯನು.

ತ್ವಯಾ ವೈ ಭಗವನ್ಪೂರ್ವಂ ಯಮಃ ಸಂಸ್ಥಾಪಿತಃ ಪದೇ ।
ನೃಣಾಂ ದುಷ್ಕೃತಕರ್ತೄಣಾಂ ನರಕಾಯ ಯಮಃ ಪ್ರಭೋ ॥ ೮೧ ॥
ತಸ್ಮಾದಸ್ಯ ಜಗನ್ನಾಥ ಕ್ಷಮ್ಯತಾಂ ಪುರುಷೋತ್ತಮ ।
ವಿಭೋ ಕೃಪಾಂ ಕುರುಷ್ವಾಸ್ಯ ಬ್ರೂಹಿ ಯತ್ತೇ ವಿವಕ್ಷಿತಂ ॥ ೮೨ ॥
ಏತಚ್ಛ್ರುತ್ವಾಽಬ್ರವೀತ್ಕೃಷ್ಣೋ ಧಾತಃ ಶೃಣು ಗುರೋರ್ಮಮ ।
ಸಾಂದೀಪನೇಃ ಸಮಾನೀತಃ ಸುತಸ್ತೇನಾಗತಾವಿಹ ॥ ೮೩ ॥
ಸಮರ್ಪ್ಯತಾಂ ಗುರುಶ್ರೇಷ್ಠಶ್ರೇಷ್ಠಾಯ ಗುರುದಕ್ಷಿಣಾ ।
ಆವಾಭ್ಯಾಂ ವೈ ಪ್ರತಿಜ್ಞಾತಾ ತಸ್ಮಾತ್ಸಾ ಪಾಲ್ಯತಾಂ ವಿಭೋ ॥ ೮೪ ॥
ಏತತ್ಪಿತಾಮಹಃ ಶ್ರುತ್ವಾ ಯಮಂ ಸಮರನಿರ್ಜಿತಂ ।
ಸಮಾಹೂಯಾಽಬ್ರವೀದ್ವಿಷ್ಣುರ್ಯದ್ಬ್ರವೀತಿ ಕುರುಷ್ವ ತತ್ ॥ ೮೫ ॥
ತಚ್ಛ್ರುತ್ವಾ ಧರ್ಮರಾಜಸ್ತು ವಿರಿಂಚಿಮಿದಮಬ್ರವೀತ್ ।
ಭಗವನ್ನಿಶ್ವಕೃಲ್ಲೋಕೇ ನೈಷ ಮಾರ್ಗಸ್ತ್ವಯಾ ಕೃತಃ ॥ ೮೬ ॥

---

೮೧. ಎಲೈ ಸ್ವಾಮಿಯೆ! ಪಾಪಗಳನ್ನು ಮಾಡಿದವರ ಶಿಕ್ಷೆಗಾಗಿ ನರಕವನ್ನು ಸೃಜಿಸಿ ಅದರ ಅಧಿಕಾರವನ್ನು ಯಮನಿಗೆ ಕೊಟ್ಟವನು ಭಗವಂತನಾದ ನೀನೇ ಅಲ್ಲವೆ?

೮೨. ಓ ಜಗನ್ನಾಥ! ಪುರುಷೋತ್ತಮ! ವಿಶ್ವವ್ಯಾಪಕಾ! ಇವನ ಅಪರಾಧವನ್ನು ಕ್ಷಮಿಸು. ಇವನಲ್ಲಿ ದಯೆಯನ್ನು ತೋರು. ನಿನಗಾಗಬೇಕಾದ ಕೆಲಸವನ್ನು ಇವನಿಗೆ ಆಜ್ಞಾಪಿಸು.''

೮೩. ಇಂತೆಂದ ಬ್ರಹ್ಮನನ್ನು ಕುರಿತು ಶ್ರೀಕೃಷ್ಣನು ಹೇಳಿದನು: ''ಎಲೈ ಚತುರ್ಮುಖನೆ! ಕೇಳು. ನಮ್ಮ ಗುರುವಾದ ಸಾಂದೀಪನ್ಯಾಚಾರ್ಯರ ಮಗನನ್ನು ಇಲ್ಲಿಗೆ ಕರೆತಂದಿರುವರು. ಆದುದರಿಂದಲೇ ನಾವಿಲ್ಲಿಗೆ ಬಂದಿರುವೆವು.

೮೪. ಓ ಪಿತಾಮಹ! ಶ್ರೇಷ್ಠನಾದ ಆತನಿಗೆ ಗುರುದಕ್ಷಿಣೆಯಾಗಿ ಮಗನನ್ನು ಸಮರ್ಪಿಸಬೇಕು. ಹಾಗೆ ನಾವು ಪ್ರತಿಜ್ಞೆಮಾಡಿರುವೆವು. ನಮ್ಮ ಪ್ರತಿಜ್ಞೆಯನ್ನು ಪಾಲಿಸಬೇಕಾಗಿರುವುದು.''

೮೫. ಇದನ್ನು ಕೇಳಿ ಬ್ರಹ್ಮದೇವನು ಯುದ್ಧದಲ್ಲಿ ಪರಾಜಿತನಾದ ಯಮನನ್ನು ಬಳಿಗೆ ಕರೆದು ''ಮಹಾವಿಷ್ಣುವು ಏನು ಹೇಳುತ್ತಿರುವನೊ, ಅದರಂತೆ ನಡೆದುಕೊ'' ಎಂದು ಹೇಳಿದನು.

೮೬. ಈ ಮಾತನ್ನು ಕೇಳಿ ಧರ್ಮರಾಜನು ಬ್ರಹ್ಮನಿಗೆಂದನು. ''ಇದಕ್ಕೆ ನೀನು ಯಾವ ಉಪಾಯವನ್ನೂ ಮಾಡಲಿಲ್ಲ. ಭಗವಂತನಾದ ಲೋಕಸೃಷ್ಟಿಕಾರಕನೆ! ಇದು ಲೋಕಸಹಜವಲ್ಲದುದು.

ಯಮಲೋಕಮನುಪ್ರಾಪ್ಯ ಕಾಯಹೀನಃ ಶರೀರವಾನ್ ।
ಯತ್ಕಾಯರಹಿತೋ ಯಾತಿ ನೈತದತ್ರ ಪ್ರಪದ್ಯತೇ ॥ ೮೭ ॥
ತಚ್ಛ್ರುತ್ವಾ ಹಿ ಪುನರ್ಬ್ರಹ್ಮಾ ವಿಶ್ವಸ್ಯಾಸ್ಯ ವಿಭುಃ ಸ್ವಯಂ ।
ವಿಶ್ವಕೃದ್ವಿಶ್ವಹೃದ್ಯಸ್ಮಾದ್ಯದಿಚ್ಛತಿ ಕರೋತು ತತ್ ॥ ೮೮ ॥
ತಸ್ಮಾದರ್ಪಯ ಪುತ್ರಂ ತ್ವಂ ಮುನೇಃ ಸಾಂದೀಪನೇಶ್ಚ ಯಃ ।
ನರಕೇ ಯಂ ಪುನಃ ಕೃತ್ವಾ ತಂ ಚಾನಯ ಮಹಾಮತೇ ॥ ೮೯ ॥
ತಚ್ಛ್ರುತ್ವಾ ಧರ್ಮರಾಜಸ್ತು ಪುತ್ರಂ ಸಾಂದೀಪನೇಸ್ತಥಾ ।
ಸಸರ್ಜ ಬಾಲರೂಪಂ ಚ ತದಾತ್ಮಾನಂ ತದುದ್ಭವಂ ॥ ೯೦ ॥
ಅರ್ಪಯಾಮಾಸ ಕೃಷ್ಣಸ್ಯ ಬಾಲಂ ರೂಪಸಮನ್ವಿತಂ ।
ಸ ಸರ್ವ ದೇವತಾನಾಂ ಚ ತದದ್ಭುತಮಿವಾಭವತ್ ॥ ೯೧ ॥
ತತಃ ಪ್ರಾಪ್ಯ ಗುರೋಃ ಪುತ್ರಂ ಪ್ರಭುಃ ಪ್ರೀತಃ ಪ್ರಜಾಪತಿಂ ।
ಪ್ರಾಹ ಪ್ರಾಪ್ತೋ ಮಯಾ ಬ್ರಹ್ಮನ್ ಸ್ವರೂಪೋ ದ್ವಿಜದಾರಕಃ ॥ ೯೨ ॥

---

೮೭. ಯಮಲೋಕಕ್ಕೆ ಹೋದ ಪ್ರತಿಯೊಬ್ಬ ಶರೀರಿಯೂ ಅಶರೀರನಾಗುವನು. ಕಾಯಹೀನನಾದ ಜೀವನು ಹೋಗಿಬರುವುದೆಂಬ ಮಾತು ಸಂಗತವಾದುದಲ್ಲ.''

೮೮. ಇದನ್ನು ಕೇಳಿ ವಿಶ್ವಕ್ಕೆ ಒಡೆಯನಾದ ಬ್ರಹ್ಮನು ಮತ್ತೆ ಹೇಳಿದನು. ''ಈತನೇ ಬ್ರಹ್ಮಾಂಡವನ್ನು ಸೃಜಿಸಿದವನು. ಆ ಬ್ರಹ್ಮಾಂಡದಲ್ಲಿ ಅಂತರ್ಯಾಮಿಯಾಗಿರುವನೂ ಈತನೆ! ಬೇಕಾದುದನ್ನು ಮಾಡಿಕೊಳ್ಳಲಿ.

೮೯. ಮಹಾಪ್ರಾಜ್ಞನೆ! ಆದುದರಿಂದ ಹಿಂದೆ ನೀನು ನರಕದಲ್ಲಿ ತಂದಿರಿಸಿರುವ ಮಹಾಮುನಿಯಾದ ಸಾಂದೀಪನ್ಯಾಚಾರ್ಯನ ಮಗನನ್ನು ಸಮರ್ಪಿಸಬೇಕು. ಅವನನ್ನು ಇಲ್ಲಿಗೆ ಕರೆದುಕೊಂಡು ಬಾ.''

೯೦. ಇದನ್ನು ಕೇಳಿ ಧರ್ಮರಾಜನು ಸಾಂದೀಪನಿಯ ಪುತ್ರನಿಗಾಗಿ ತನ್ನ ಶಕ್ತಿಯಿಂದಲೇ ಹುಟ್ಟಿದ ಬಾಲಕನ ರೂಪದ ದೇಹವೊಂದನ್ನು ಸೃಷ್ಟಿಮಾಡಿದನು.

೯೧. ಸುಂದರರೂಪನಾದ ಆ ಬಾಲಕನನ್ನು ಶ್ರೀಕೃಷ್ಣನ ಬಳಿಗೆ ತಂದು ಸಮರ್ಪಿಸಿದನು. ಸಕಲ ದೇವತೆಗಳಿಗೂ ಇದು ಮಹಾದ್ಭುತವೆನಿಸಿತು.

೯೨. ಇಂತು ಗುರುಪುತ್ರನನ್ನು ಪಡೆದು ಸುಪ್ರೀತನಾದ ನಾರಾಯಣನು ಪ್ರಜಾಪತಿಯನ್ನು ಕುರಿತು, ''ಎಲೈ ಬ್ರಹ್ಮನೆ! ಸ್ವರೂಪಸಹಿತನಾದ ಗುರುಪುತ್ರನು ನನಗೆ ಲಭಿಸಿದನು'' ಎಂದು ಹೇಳಿದನು.

ಶ್ರೀ ಕೃಷ್ಣ ಉವಾಚ :—

ಅದ್ಯ ಪ್ರಭೃತಿ ಲೋಕೇಶ ದೇಶೇ ಮಚ್ಚರಣಾಂಕಿತೇ ।
ಅವಂತ್ಯಾಮಂಕಪಾದಾಖ್ಯೇ ಮೃತಾ ನೇಕ್ಷಂತಿ ತೇ ಯಮಂ ॥ ೯೩ ॥
ಮಹಾಕಾಲಪುರೇ ದೇವಮಾದ್ಯಂ ವೈ ಪುರುಷೋತ್ತಮಂ ।
ವಿಶ್ವರೂಪಂ ಚ ಗೋವಿಂದಂ ಶಂಖೋದ್ಧಾರಂ ಚ ಕೇಶವಂ ॥ ೯೪ ॥
ಯೇ ಪಶ್ಯಂತಿ ಕುಶಸ್ಥಲ್ಯಾಮೇತೇಷಾಂ ಮೂರ್ತಿಪಂಚಕಂ ।
ತೇ ನರಾ ನ ಗಮಿಷ್ಯಂತಿ ವಿರಂಚೇ ನಿರಯಂ ಕ್ವಚಿತ್ ॥ ೯೫ ॥
ತಥೈವಾಗಮನಾದತ್ರ ಮಮ ರಾಮಸ್ಯ ನಾರಕಾಃ ।
ವಿಮುಕ್ತಾಸ್ತೇತ್ವಘಾದ್ಘೋರಾತ್ಪ್ರಾಪ್ನುವಂತ್ಯಖಿಲಾ ದಿವಂ ॥ ೯೬ ॥
ಇತ್ಯುಕ್ತೇ ವಚನೇ ವೇಧಾಃ ಪ್ರೋವಾಚ ಪ್ರೀತಿಮಾನ್ಹರಿಂ ।
ಯತ್ತ್ವಯೋಕ್ತಂ ವಚಃ ಕೃಷ್ಣ ತದಸ್ತು ಸಕಲಂ ಸದಾ ॥ ೯೭ ॥
ಯೇ ಚ ತ್ವಾಮಾದಿಪುರುಷಂ ಪ್ರಥಮಂ ಪುರುಷೋತ್ತಮಂ ।
ಪ್ರಣಮ್ಯ ಪಶ್ಚಾದ್ದ್ರಕ್ಷ್ಯಂತಿ ಸ್ನಾತ್ವಾ ಶಿವಸರಸ್ಯಪಿ ॥ ೯೮ ॥

---

೯೩. ಶ್ರೀಕೃಷ್ಣನು ಹೇಳುತ್ತಾನೆ:—ಎಲೈ ಬ್ರಹ್ಮದೇವನೆ! ಕೇಳು. ಇಂದು ಮೊದಲುಗೊಂಡು ನನ್ನಪಾದಗಳ ಚಿಹ್ನೆಗಳಿರುವ ಅವಂತೀದೇಶದ ಅಂಕಪಾದ ವೆಂಬ ಕ್ಷೇತ್ರದಲ್ಲಿ ಮೃತರಾದವರೆಲ್ಲರೂ ಯಮನನ್ನು ನೋಡುವುದಿಲ್ಲ.

೯೪–೯೫. ಮಹಾಕಾಲವನದ ಕುಶಸ್ಥಲದಲ್ಲಿರುವ ಆದಿದೇವನಾದ ಪುರುಷೋತ್ತಮ, ವಿಶ್ವರೂಪಿ, ಗೋವಿಂದ, ಶಂಖೋದ್ಧಾರ, ಕೇಶವ— ಎಂಬ ಈ ಐದು ದೇವತೆಗಳ ಮೂರ್ತಿಗಳನ್ನು ಯಾರು ನೋಡುವರೊ, ಆ ನರರು ಎಂದಿಗೂ ನರಕಕ್ಕೆ ಭಾಗಿಗಳಾಗುವುದಿಲ್ಲ.

೯೬. ಹಾಗೆಯೇ ಇಲ್ಲಿ ನಾನೂ ಬಲರಾಮನೂ ಬಂದುದರಿಂದ ನರಕದಲ್ಲಿ ಸಂಕಟಪಡುತ್ತಿದ್ದವರೆಲ್ಲರೂ ತಮ್ಮ ಘೋರಪಾತಕಗಳಿಂದ ಮುಕ್ತರಾಗಿ ಸ್ವರ್ಗಕ್ಕೆ ಹೋಗುವರು.''

೯೭. ಇಂತೆಂದ ಮಾತಿಗೆ ಶ್ರೀಹರಿಯನ್ನು ಕುರಿತು ಚತುರ್ಮುಖನು ಹೇಳಿದನು. ''ಕೃಷ್ಣ! ನೀನು ಹೇಳಿದಂತೆಯೇ ಎಲ್ಲವೂ ಯಾವಾಗಲೂ ನಡೆಯಲಿ.

೯೮. ಆದಿಪುರುಷನೂ, ಪ್ರಪ್ರಥಮನೂ, ಪುರುಷೋತ್ತಮನೂ ಆದ ನಿನ್ನನ್ನು ನೋಡಿ ನಮಸ್ಕರಿಸಿ ರುದ್ರಸರೋವರದಲ್ಲಿ ಸ್ನಾನಮಾಡಿ ಕೆಳಕ್ಕೆ ಜ್ವಾಲೆ ಗಳನ್ನುಗುಳುತ್ತಿರುವ ಮಹಾಕಾಲನನ್ನು ಯಾರು ನೋಡುವರೊ, ಅವರಿಗೆ ಅಶ್ವಮೇಧವನ್ನು ಮಾಡಿದ ಫಲವು ಲಭಿಸುವುದು.

**ಅಥೋಜ್ಞಾಲಂ ಮಹಾಕಾಲಂ ಸೋಽಶ್ವಮೇಧಫಲಂ ಲಭೇತ್ ।**
**ಏವಮುಕ್ತ್ವೋ ಹರಿಃ ಪುತ್ರಮಾದಾಯ ಬಲಿನಾ ಸಹ ॥ ೯೯ ॥**
**ಸಂಮಾನ್ಯ ವೇಧಸಂ ಕಾಲಂ ಸಮಾರೋಹದ್ರಥಂ ತತಃ ।**
**ಶಂಖಮಾಪೂರಯಾಮಾಸ ಕೃತಕಾರ್ಯೋ ಜನಾರ್ದನಃ ॥ ೧೦೦ ॥**
**ಮೋಕ್ಷಾಯ ನಿರಯಸ್ಥಾನಾಂ ನೃಣಾಂ ವೈ ಪಾಪಕರ್ಮಣಾಂ ।**
**ತತಸ್ತೇ ಶಂಖಶಬ್ದೇನ ಸ್ಮರಣೇನಾಽಚ್ಯುತಸ್ಯ ಚ ।**
**ದಿವ್ಯಾನ್ವಿಮಾನಾನಾರುಹ್ಯ ದಿವಮೇವಾಽಖಿಲಾ ಗತಾಃ ॥ ೧೦೧ ॥**
**ಶೂನ್ಯಂ ತನ್ಮಂಡಲಂ ಜಾತಂ ನಾರಾಯಣಸಮಾಗಮೇ ॥ ೧೦೨ ॥**
**ಕಾಲೋಽಪಿ ದಂಡಮಾಸಾದ್ಯ ಬಲದೇವಾತ್ಮನಃ ಪುರಂ ।**
**ಪ್ರವಿವೇಶ ತತೋ ಧಾತಾ ತತ್ರೈವಾಽಂತರಧೀಯತ ॥ ೧೦೩ ॥**
**ಕೃಷ್ಣೋಽಪಿ ಬಲವಾನ್ವೀರಃ ಪ್ರಾಪ್ತ ಉಜ್ಜಯಿನೀಂ ಪುರೀಂ ।**
**ಬಲದೇವಸಹಾಯಸ್ತು ಸತ್ವರೇಣಾಶುಗಾಮಿನಾ ॥ ೧೦೪ ॥**
**ತತಃ ಸಾಂದೀಪನೇಃ ಪುತ್ರಮರ್ಪಯಾಮಾಸ ಕೇಶಿಹಾ ।**
**ಗುರವೇ ಯತ್ಪ್ರತಿಜ್ಞಾತಂ ಸ ತಸ್ಮಾದನೃಣೋಽಭವತ್ ॥ ೧೦೫ ॥**

---

೯೯. ಇಂತೆಂದು ಶ್ರೀಕೃಷ್ಣನು ಆ ಗುರುಬಾಲಕನನ್ನು ಕರೆದುಕೊಂಡು, ಬ್ರಹ್ಮನನ್ನೂ, ಯಮಧರ್ಮನನ್ನೂ ಸಮಾಧಾನಗೊಳಿಸಿ ಬಲರಾಮನೊಡನೆ ರಥವನ್ನೇರಿದನು.

೧೦೦. ತನ್ನ ಕಾರ್ಯವು ಸಫಲವಾಗಲು ಜನಾರ್ದನನು ನರಕದಲ್ಲಿರುವ ಪಾಪಕರ್ಮಿಗಳನ್ನುದ್ಧರಿಸಲು ತನ್ನ ಶಂಖವನ್ನು ಧ್ವನಿಗೈದನು.

೧೦೧. ಆಗ ಅವರೆಲ್ಲರೂ ಶಂಖನಾದವನ್ನು ಕೇಳಿದುದರಿಂದಲೂ, ಅಚ್ಯುತ ಸ್ಮರಣೆಯಿಂದಲೂ ನಿಷ್ಕಲ್ಮಷರಾಗಿ ದಿವ್ಯವಿಮಾನಗಳನ್ನೇರಿ ಸ್ವರ್ಗಲೋಕಕ್ಕೆ ಹೊರಟು ಹೋದರು.

೧೦೨. ಇಂತು ನಾರಾಯಣನು ಬಂದುದರಿಂದ ನರಲೋಕವೆಲ್ಲವೂ ಜನಶೂನ್ಯವಾಗಿ ಪರಿಣಮಿಸಿತು.

೧೦೩. ಯಮಧರ್ಮರಾಜನೂ ಬಲದೇವನಿಂದ ತನ್ನ ದಂಡವನ್ನು ಮತ್ತೆ ಪಡೆದು ತನ್ನ ರಾಜಧಾನಿಯನ್ನು ಪ್ರವೇಶಿಸಿದನು. ಬಳಿಕ ಚತುರ್ಮುಖನೂ ಅಂತರ್ಧಾನವನ್ನು ಹೊಂದಿದನು.

೧೦೪. ಬಲಿಷ್ಠನೂ ಮಹಾವೀರನೂ ಆದ ಕೃಷ್ಣನು ಬಲದೇವನ ಸಹಾಯದಿಂದ ವೇಗವಾಗಿ ಚಲಿಸುವ ರಥದಿಂದ ಕ್ಷಿಪ್ರದಲ್ಲಿಯೇ ಉಜ್ಜಯಿನೀಪುರವನ್ನು ಸೇರಿದನು.

೧೦೫. ಆಗಲಾತನು ಹಿಂದೆ ಪ್ರತಿಜ್ಞೆಮಾಡಿದ್ದಂತೆ ಸಾಂದೀಪನ್ಯಾಚಾರ್ಯರಿಗೆ ಪುತ್ರನನ್ನು ಸಮರ್ಪಿಸಿ ಋಣಮುಕ್ತನಾದನು.

ಏವಂ ಸಾಂದೀಪನಿಃ ಪುತ್ರಂ ದೃಷ್ಟ್ವಾ ಚ ಪುನರಾಗತಂ ।
ನಾಗರಾಸ್ತತ್ರ ರಾಜಾ ಚ ವಿಸ್ಮಯಂ ಪರಮಂ ಯಯುಃ ॥ ೧೦೬ ॥
ತೌ ವೀರಾವರ್ಚಯಾಮಾಸುರ್ಮತ್ವಾ ದೇವೋತ್ತಮೋತ್ತಮೌ ।
ಸಾಂದೀಪನಿರುವಾಚೇದಂ ತೌ ಚ ರಾಮಜನಾರ್ದನೌ ॥ ೧೦೭ ॥
ಇಹ ಸ್ಥಾಸ್ಯತಿ ವಾಂ ಕೀರ್ತಿರ್ಯಾವದಾಭೂತಸಂಪ್ಲವಂ ।
ಸ್ಥಾನೇ ಮದೀಯ ಏತಸ್ಮಿಂಸ್ತಿಷ್ಠಂತೌ ಯದುನಂದನೌ ॥ ೧೦೮ ॥
ನ ವಿಜ್ಞಾತೌ ಮಯಾ ವೀರೌ ಯದುವೃಷ್ಣಿಕುಲೋದ್ಭವೌ ।
ನರನಾರಾಯಣೌ ದೇವೌ ದೇವಕಾರ್ಯಾರ್ಥಮಾಗತೌ ॥ ೧೦೯ ॥
ನಾಽಲ್ಪಮೃತ್ಯುರ್ಭವೇತ್ತಸ್ಯ ನ ವ್ಯಾಧಿರ್ನ ಚ ದುರ್ಗತಿಃ ।
ಪ್ರಾಪ್ಯ ಹ್ಯತ್ರಚ ಯಃ ಸ್ನಾತಿ ಸ್ವರ್ಗಲೋಕೇ ಸಮೋದತೇ ॥ ೧೧೦ ॥
ಶಂಖಿನಂ ವಿಶ್ವರೂಪಂ ಚ ಗೋಪಿಂದಂ ಚಕ್ರಿಣಂ ತಥಾ ।
ಚತ್ವಾರಿ ವಿಷ್ಣುಕ್ಷೇತ್ರಾಣಿ ಅಂಕಪಾದಸ್ತು ಪಂಚಮಃ ॥ ೧೧೧ ॥

---

೧೦೬. ಇಂತು ಸತ್ತ ಮಗನು ಹಿಂತಿರುಗಿ ಬಂದುದನ್ನು ಕಂಡು ಸಾಂದಿಪನ್ಯಾಚಾರ್ಯನೂ, ಪುರಜನರೂ, ಆ ದೇಶದ ಅರಸನೂ ಮಹತ್ತರವಾದ ಆಶ್ಚರ್ಯವನ್ನು ಹೊಂದಿದ್ದರು.

೧೦೭. ಆ ಬಲರಾಮಕೃಷ್ಣರನ್ನು ದೇವೋತ್ತಮರೆಂಬುದಾಗಿ ತಿಳಿದು ಸಕಲರೂ ಪೂಜಿಸಿದರು. ಸಾಂದೀಪನಿಯೂ ಅವರನ್ನು ಕುರಿತು ಇಂತೆಂದನು.

೧೦೮. "ಪಂಚಭೂತಗಳ ಮಹಾಪ್ರಳಯವಾಗುವವರೆಗೂ ನಿಮ್ಮಿಬ್ಬರ ಕೀರ್ತಿಯೂ ಇಲ್ಲಿ ನೆಲೆಗೊಂಡಿರುವುದು. ನನ್ನ ಸ್ಥಾನವಾದ ಈ ಪ್ರದೇಶದಲ್ಲಿ ನೀವಿಬ್ಬರೂ ಬಹುಕಾಲದಿಂದಿದ್ದಿರಿ.

೧೦೯. ಆದರೂ ವೀರರಾದ ನೀವಿಬ್ಬರೂ ದೇವಕಾರ್ಯಾರ್ಥವಾಗಿ ಭೂಮಿಯಲ್ಲಿ ಯಾದವವಾರ್ಷ್ಣೇಯರಲ್ಲಿ ಅವತರಿಸಿರುವ ನರನಾರಾಯಣದೇವತೆಗಳೆಂಬುದನ್ನು ಮೊದಲು ನಾನು ತಿಳಿಯಲಿಲ್ಲ.

೧೧೦. ಇಲ್ಲಿಗೆ ಬಂದು ಯಾವನು ತೀರ್ಥಸ್ನಾನವನ್ನು ಮಾಡುವನೊ, ಅವನಿಗೆ ದುರ್ಮರಣವೂ, ವ್ಯಾಧಿಯೂ, ದುರ್ಗತಿಯೂ ಉಂಟಾಗುವುದಿಲ್ಲ. ಸತ್ತಮೇಲೆ ಸ್ವರ್ಗಲೋಕದಲ್ಲಿ ಅವನು ಸುಖಿಸುವನು.

೧೧೧. ಶಂಖೋದ್ಧಾರ, ವಿಶ್ವರೂಪ, ಗೋವಿಂದ ಮತ್ತು ಕೇಶವರ ಸನ್ನಿಧಿಗಳೇ ನಾಲ್ಕು ವಿಷ್ಣು ಕ್ಷೇತ್ರಗಳು. ಐದನೆಯದೇ ಅಂಕಪಾದವೆಂಬುದು.

ಏಷಾಂ ಯಾತ್ರಾಂ ಪ್ರವಕ್ಷ್ಯಾಮಿ ಯಥಾ ಕಾರ್ಯಾ ಮನೀಷಿಭಿಃ ।
ಮಂದಾಕಿನ್ಯಾಂ ಕೃತಸ್ನಾನೋ ದೃಷ್ಟ್ವಾ ರಾಮಜನಾರ್ದನೌ ॥ ೧೧೨ ॥
ಶಂಖೋದ್ಧಾರೇ ತತಃ ಸ್ನಾತ್ವಾ ಪ್ರಪಶ್ಯೇದ್ಬಲಕೇಶವೌ ।
ಸ್ನಾನಂ ಕೃತ್ವಾ ತತಃ ಕುಂಡೇ ಗೋವಿಂದಂ ಚ ಸಮರ್ಚಯೇತ್॥ ೧೧೩ ॥
ಚಕ್ರಿಣಂ ಚ ತತೋ ದೃಷ್ಟ್ವಾ ದೇವದೇವಂ ಚ ಶಂಖಿನಂ ।
ಅಂಕಪಾದೌ ತತೋ ದೃಷ್ಟ್ವಾ ವಿಶ್ವರೂಪಂ ತತೋ ವ್ರಜೇತ್ ॥ ೧೧೪ ॥
ತಸ್ಯಾಗ್ರತಃ ಕರೀಕುಂಡೇ ಸ್ನಾನಂ ಕೃತ್ವಾ ಯಥಾವಿಧಿ ।
ಪುನಸ್ತೇನ ಪ್ರಕಾರೇಣ ಪ್ರಪಶ್ಯೇದ್ಬಲಕೇಶವೌ ॥ ೧೧೫ ॥
ಸ್ನಾನಂ ಕೃತ್ವಾ ತತಃ ಕುಂಡೇ ಗೋವಿಂದಂ ಚ ಸಮರ್ಚಯೇತ್ ।
ತಥೈವ ಚಕ್ರಿಹಲಿನೌ ದೃಷ್ಟ್ವಾ ತಂ ಕೇಶವಂ ವ್ರಜೇತ್ ॥ ೧೧೬ ॥
ಶಿಪ್ರಾಂಭಸಿ ನರಃ ಸ್ನಾತ್ವಾ ಭಕ್ತ್ಯಾ ಸಂಪೂಜ್ಯ ಕೇಶವಂ ।
ಪರಾವೃತ್ಯಾಂಕಪಾದೇ ತು ತಾಂ ರಾತ್ರಿಂ ಗಮಯೇಚ್ಛುಚಿಃ ॥ ೧೧೭ ॥

---

೧೧೨. ಬುದ್ಧಿವಂತರಾದವರು ಈ ಯಾತ್ರೆಯನ್ನು ಹೇಗೆ ಮಾಡಬೇಕೆಂಬುದನ್ನು ವಿವರಿಸುವೆನು. ಮೊದಲು ಮಂದಾಕಿನೀತೀರ್ಥದಲ್ಲಿ ಮಿಂದು ಬಲರಾಮ ಕೇಶವರನ್ನು ನೋಡಬೇಕು.

೧೧೩. ಶಂಖೋದ್ಧಾರತೀರ್ಥದಲ್ಲಿ ಸ್ನಾನಮಾಡಿ ಪುನಃ ಬಲಕೇಶವರನ್ನು ನೋಡಬೇಕು. ಬಳಿಕ ಗೋವಿಂದಕುಂಡದಲ್ಲಿ ಸ್ನಾನವನ್ನು ಮಾಡಿ ಗೋವಿಂದನ ಪೂಜೆಯನ್ನು ಮಾಡಬೇಕು.

೧೧೪. ಬಳಿಕ ಕೇಶವನನ್ನೂ, ದೇವದೇವನಾದ ಶಂಖೋದ್ಧಾರಕನನ್ನೂ, ಕೃಷ್ಣನ ಅಡಿಗಳ ಗುರುತುಗಳಾದ ಅಂಕಪಾದಗಳನ್ನೂ ನೋಡಿಕೊಂಡು ವಿಶ್ವರೂಪನ ಬಳಿಗೆ ಹೋಗಬೇಕು.

೧೧೫. ಆ ದೇವನ ಮುಂದಿರುವ ಕರೀಕುಂಡದಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನವನ್ನು ಮಾಡಿ ಪುನಃ ಅದೇ ಕ್ರಮದಿಂದಲೇ ಬಲಕೇಶವರನ್ನು ಕಾಣಬೇಕು.

೧೧೬. ಬಳಿಕ ತೀರ್ಥದಲ್ಲಿ ಸ್ನಾನವನ್ನು ಮಾಡಿ ಪುನಃ ಗೋವಿಂದನ ಪೂಜೆಯನ್ನು ಮಾಡಬೇಕು. ಮುನ್ನಿನಂತೆಯೇ ಬಲಕೇಶವರನ್ನು ಕಂಡು ಕೇಶವನ ಬಳಿಗೆ ಹೋಗಬೇಕು.

೧೧೭. ಶಿಪ್ರಾನದಿಯಲ್ಲಿ ಸ್ನಾನವನ್ನು ಮಾಡಿ ಭಕ್ತಿಯಿಂದ ಕೇಶವನನ್ನು ಪೂಜಿಸಿ ಹಿಂದಿರುಗಿ ಅಂದಿನ ರಾತ್ರಿಯನ್ನು ಅಂಕಪಾದಕ್ಷೇತ್ರದಲ್ಲಿಯೆ ಕಳೆಯಬೇಕು.

ಪ್ರಾತರ್ವೈ ಭೋಜಯೇತ್ತತ್ರ ಪಂಚವಿಪ್ರಾಂಶ್ಚ ಸುವ್ರತಾನ್ ।
ಗೋದಕ್ಷಿಣಾಂ ಶಂಖಿನೇ ತು ವಿಶ್ವರೂಪಾಯ ವೈ ಹಯಂ ॥ ೧೧೮ ॥
ಗೋವಿಂದಾಯ ಗಜಂ ದದ್ಯಾತ್ಸರ್ವಂ ದದ್ಯಾಚ್ಚ ಕೇಶವೇ ।
ಉಪೋಷ್ಯ ದ್ವಾದಶೀಂ ವಿಪ್ರ ಯೋಽಂಕಪಾದಂ ಸಮರ್ಚಯೇತ್ ॥೧೧೯॥
ಗಂಧಪುಷ್ಪೈಶ್ಚ ಧೂಪೈಶ್ಚ ನೈವೇದ್ಯೈರ್ವಿವಿಧೈಸ್ತಥಾ ।
ಶ್ರಾದ್ಧಂ ಯಃ ಕುರುತೇ ಸರ್ವಂ ತಸ್ಯ ಪುಣ್ಯಫಲಂ ಶೃಣು ॥ ೧೨೦ ॥
ಕುಲಾನಾಂ ಶತಮುದ್ಧೃತ್ಯ ವಿಮಾನೈಃ ಸರ್ವಕಾಮಿಕೈಃ ।
ಗೀತನೃತ್ಯಾದಿಭೋಗೈಶ್ಚ ವೈಕುಂಠೇ ಸುಚಿರಂ ವ್ರಜೇತ್ ॥ ೧೨೧ ॥
ಪುನರ್ಲೋಕಮಿಮಂ ಪ್ರಾಪ್ಯ ಪವಿತ್ರೇ ಜಾಯತೇ ಕುಲೇ ।
ಪ್ರಾಪ್ನೋತ್ಯನಂತಸಂತಾನಂ ವಿಷ್ಣುಲೋಕಂ ಪುನರ್ವ್ರಜೇತ್ ॥ ೧೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅಂಕಪಾದ ಮಾಹಾತ್ಮ್ಯವರ್ಣನಂ" ನಾಮ ಸಪ್ತವಿಂಶೋಽಧ್ಯಾಯಃ

---

೧೧೮. ಮಾರನೆಯ ದಿವಸ ಅಲ್ಲಿಯೇ ವ್ರತನಿಷ್ಠರಾದ ಐದು ಮಂದಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಶಂಖೋದ್ಧಾರನ ಪ್ರತಿನಿಧಿಗೆ ಗೋವನ್ನೂ ವಿಶ್ವರೂಪನಿಗೆ ಕುದುರೆಯನ್ನೂ ದಕ್ಷಿಣೆಯಾಗಿ ಕೊಡಬೇಕು.

೧೧೯-೧೨೦. ಗೋವಿಂದನಿಗೆ ಆನೆಯನ್ನೂ ಕೇಶವನಿಗೆ ತನ್ನ ಸರ್ವಸ್ವವನ್ನೂ ದಾನ ಮಾಡಬೇಕು. ಅಯ್ಯಾ ವ್ಯಾಸಮುನಿಯೇ! ದ್ವಾದಶಿಯ ದಿನ ಉಪವಾಸವನ್ನು ಮಾಡಿ ಯಾವನು ಅಂಕಪಾದವನ್ನು ಗಂಧ, ಪುಷ್ಪ, ಧೂಪಗಳಿಂದಲೂ, ವಿವಿಧಗಳಾದ ನೈವೇದ್ಯಗಳಿಂದಲೂ ಪೂಜಿಸುವನೊ, ಅಲ್ಲಿ ಸಾಂಗವಾಗಿ ಶ್ರಾದ್ಧವನ್ನು ಮಾಡುವನೊ, ಅವನ ಪುಣ್ಯ ಫಲವನ್ನು ಕೇಳು.

೧೨೧. ಅವನು ನೂರು ಕುಲದವರನ್ನು ಸಕಲಭೋಗಗಳಿಂದಲೂ, ಸಂಗೀತ, ನೃತ್ಯಾದಿ ವಿಲಾಸಗಳಿಂದಲೂ ಕೂಡಿದ ವಿಮಾನಗಳಲ್ಲಿ ಉದ್ಧರಿಸಿ ತಾನೂ ಅವರೊಡನೆ ಬಹುಕಾಲದವರೆಗೂ ವೈಕುಂಠದಲ್ಲಿ ವಾಸಮಾಡುವನು.

೧೨೨. ಪುನಃ ಈ ಲೋಕಕ್ಕೆ ಬರಬೇಕಾದರೆ ಉತ್ತಮವಾದ ಕುಲದಲ್ಲಿ ಜನ್ಮವನ್ನು ಪಡೆಯುವನು. ವಿಚ್ಛಿತ್ತಿಯಿಲ್ಲದ ಸಂತಾನವನ್ನು ಭೂಮಿಯಲ್ಲಿ ನೆಲೆಗೊಳಿಸಿ ಮತ್ತೆ ವಿಷ್ಣುಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅಂಕಪಾದಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾವಿಂಶೋಽಧ್ಯಾಯಃ

## ಸೋಮವತೀತೀರ್ಥಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಅಥಾಽನ್ಯಂ ಸಂಪ್ರವಕ್ಷ್ಯಾಮಿ ದೇವಂ ತ್ರೈಲೋಕ್ಯವಿಶ್ರುತಂ ।
ಚಂದ್ರಾದಿತ್ಯಮಿತಿ ಖ್ಯಾತಂ ಚಂದ್ರಾದಿತ್ಯಾರ್ಚಿತಂ ಪುರಾ ॥ ೧ ॥
ಯಸ್ತಂ ಸಮರ್ಚಯೇದ್ದೇವಂ ಸುರಾಸುರನಮಸ್ಕೃತಂ ।
ಗಂಧಪುಷ್ಪೈಸ್ತಥಾ ಧೂಪೈರ್ನೈವೇದ್ಯೈರ್ವಿವಿಧೈಸ್ತಥಾ ॥ ೨ ॥
ಚಂದ್ರಾದಿತ್ಯಾದಿ ಸಾಲೋಕ್ಯಂ ಪ್ರಯಾತಿ ಸರ್ವಕಾಮಿಕಂ ।
ವಿಮಾನೈಃ ಸೂರ್ಯಸಂಕಾಶೈರ್ಯಾವಚ್ಚಂದ್ರದಿವಾಕರೌ ॥ ೩ ॥

॥ ಇತಿ ಚಂದ್ರಾದಿತ್ಯಮಾಹಾತ್ಮ್ಯಂ ॥

ಸನತ್ಕುಮಾರ ಉವಾಚ :—

ಕರಭೇಶಂ ತತೋ ಗಚ್ಛೇದ್ದೇವದೇವಂ ಮಹೇಶ್ವರಂ ।
ಯಸ್ಯ ದರ್ಶನಮಾತ್ರೇಣ ಕುಯೋನೌ ನೈವ ಜಾಯತೇ ॥ ೪ ॥

---

## ಕನ್ನಡದ ಅನುವಾದ

### ಸೋಮವತೀತೀರ್ಥಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿರುವ ಚಂದ್ರಾದಿತ್ಯನೆಂಬ ದೇವತೆಯನ್ನು ಕುರಿತು ಹೇಳುವೆನು. ಹಿಂದೆ ಈ ದೇಶವನ್ನು ಚಂದ್ರ ಸೂರ್ಯರು ಪೂಜಿಸಿದರು.

೨-೩. ದೇವದಾನವರಿಂದ ನಮಸ್ಕಾರಗಳನ್ನು ಪಡೆಯುತ್ತಿರುವ ಈ ದೇವನನ್ನು ಗಂಧ, ಪುಷ್ಪ, ಧೂಪ, ನೈವೇದ್ಯಾದಿ ವಿವಿಧೋಪಚಾರಗಳಿಂದ ಯಾವನು ಪೂಜಿಸುವನೊ, ಅವನು ಸೂರ್ಯಚಂದ್ರರಿರುವವರೆಗೂ ಸೂರ್ಯನಂತೆ ಜ್ವಲಿಸುತ್ತಿರುವ ವಿಮಾನಗಳಲ್ಲಿ ಕುಳಿತು ಆ ಚಂದ್ರ ಸೂರ್ಯರೊಡನೆ ಸಾಲೋಕ್ಯವನ್ನು ಪಡೆಯುವನು.

೪. ಸನತ್ಕುಮಾರನು ಹೇಳುತ್ತಾನೆ:—ಬಳಿಕ ದೇವೋತ್ತಮನೂ, ಮಹಾದೇವನೂ ಆದ ಕರಭೇಶ್ವರನನ್ನು ನೋಡಲು ಹೋಗಬೇಕು. ಆತನ ದರ್ಶನದ ಫಲವಾಗಿ ಮನುಷ್ಯನು ನೀಚಯೋನಿಯಲ್ಲಿ ಜನಿಸುವುದಿಲ್ಲ.

ವ್ಯಾಸ ಉವಾಚ :—

ಶರಭೇಶಮಹಂ ದೇವಂ ಶ್ರೋತುಮಿಚ್ಛಾಮಿ ತತ್ತ್ವತಃ ।
ಕಥಂ ದೇವಃ ಸಮುತ್ಪನ್ನಃ ಶರಭೇಶೇತಿ ಸಂಜ್ಞಿತಃ ॥ ೫ ॥

ಸನತ್ಕುಮಾರ ಉವಾಚ :—

ಪುರಾ ದೇವಗಣೈಃ ಸಾರ್ಧಂ ದೇವದೇವೋ ಮಹೇಶ್ವರಃ ।
ವನೇಽಸ್ಮಿನ್ಕ್ರೀಡಯಾಮಾಸ ಪರಮಾಹ್ಲಾದಸಂಯುತಃ ॥ ೬ ॥
ಕ್ರೀಡನ್ಬಹುತಿಥೇ ಕಾಲೇ ಶಂಕರಃ ಕರಭೋಽಭವತ್ ।
ಜ್ಞಾಯತೇ ಚ ಸ ನೋ ದೇವೈಃ ಶಂಕರಃ ಕರಭಾಕೃತಿಃ ॥ ೭ ॥
ಅನ್ವೇಷಯಂತಿ ತೇ ದೇವಾಸ್ತತೋ ವಿಸ್ಮಯಸಂಯುತಾಃ ।
ನ ಪಶ್ಯಂತಿ ಯದಾ ತತ್ರ ತಂ ದೇವಂ ಶೂಲಪಾಣಿನಂ ॥ ೮ ॥
ದೇವೈಃ ಪೃಷ್ಟಸ್ತತೋ ಬ್ರಹ್ಮಾ ಕ್ವಾಽಸ್ತಿ ದೇವೋ ಮಹೇಶ್ವರಃ ।
ಧ್ಯಾತ್ವಾಽಥ ಬ್ರಹ್ಮಣಾ ದೃಷ್ಟೋ ಗುಪ್ತೋ ಯೋಗಪ್ರಭುರ್ಹರಃ ॥ ೯ ॥
ದೇವೈಃ ಸಾರ್ಧಂ ತತೋ ಬ್ರಹ್ಮಾ ಪಪ್ರಚ್ಛ ಗಣನಾಯಕಂ ।
ನ ದೃಷ್ಟಃ ಶಂಕರೋಽಸ್ಮಾಭಿರ್ಗತಃ ಕುತ್ರ ವಿನಾಯಕ ॥ ೧೦ ॥

---

೫. ವ್ಯಾಸನು ಹೇಳುತ್ತಾನೆ :—ಈ ಕರಭೇಶ್ವರನ ಕಥೆಯನ್ನು ಯಥಾರ್ಥವಾಗಿ ಕೇಳಲಿಚ್ಛಿಸುವೆನು. ಈ ದೇವನು ಹೇಗೆ ಉದ್ಭವಿಸಿದನು? ಈತನಿಗೆ ಕರಭೇಶ್ವರನೆಂಬ ಹೆಸರು ಹೇಗೆ ಬಂದಿತು?

೬. ಸನತ್ಕುಮಾರನು ಹೇಳುತ್ತಾನೆ :—ಒಂದೊಮ್ಮೆ ದೇವೇಶ್ವರನಾದ ಮಹೇಶ್ವರನು ದೇವತಾಗಣಗಳೊಡನೆ ಅತ್ಯಂತ ಸಂತೋಷದಿಂದ ಕೂಡಿದವನಾಗಿ ಈ ವನದಲ್ಲಿಯೆ ವಿಹರಿಸುತ್ತಿದ್ದನು.

೭. ಇಂತು ಬಹಳಕಾಲದವರೆಗೂ ಆಡುತ್ತ ಒಂದುದಿನ ಆನೆಯ ರೂಪವನ್ನು ಸ್ವೀಕರಿಸಿದನು. ಆನೆಯಾಗಿದ್ದ ಮಹಾದೇವನನ್ನು ದೇವತೆಗಳು ಯಾರೂ ತಿಳಿಯಲು ಶಕ್ತರಾಗಲಿಲ್ಲ.

೮–೯. ಆದರಿಂದ ವಿಸ್ಮಯಾವಿಷ್ಟಚಿತ್ತರಾಗಿ ದೇವತೆಗಳೆಲ್ಲರೂ ಹುಡುಕಿದರು. ಆದರೂ ತ್ರಿಶೂಲಪಾಣಿಯಾದ ಆತನನ್ನು ಎಲ್ಲಿಯೂ ಕಾಣದಾದರು. ಆಗ ಅವರು ಬ್ರಹ್ಮದೇವನ ಬಳಿಗೆ ಬಂದು, "ದೇವದೇವನಾದ ಮಹೇಶ್ವರನು ಎಲ್ಲಿರುವನು?" ಎಂದು ಪ್ರಶ್ನೆಮಾಡಿದರು. ಬ್ರಹ್ಮನು ಬಹಳಕಾಲದವರೆಗೂ ಧ್ಯಾನಾಸಕ್ತನಾಗಿದ್ದು ಯೋಗೇಶ್ವರನಾದ ಪರಮಶಿವನು ತನ್ನ ರೂಪವನ್ನು ಮರೆಮಾಚಿಕೊಂಡಿರುವುದನ್ನು ಮಾತ್ರ ತಿಳಿದನು.

೧೦. ಬಳಿಕ ದೇವತೆಗಳೊಡಗೂಡಿ ಚತುರ್ಮುಖನು ಗಣಪತಿಯ ಬಳಿಗೆ ಹೋಗಿ, "ಅಯ್ಯಾ ವಿನಾಯಕನೆ! ನಾವು ಶಂಕರನನ್ನು ಕಾಣಲಿಲ್ಲವಲ್ಲ. ಆತನು ಈಗ ಎಲ್ಲಿಗೆ ಹೋಗಿರುವನು?" ಎಂದು ಪ್ರಶ್ನೆಮಾಡಿದನು.

ಕಥಯಸ್ವ ನಮಸ್ತುಭ್ಯಂ ದಾಸ್ಯಾಮೋ ಲಡ್ಡುಕಾನ್ವಿಭೋ ।
ಏವಮುಕ್ತಸ್ತದಾ ಹೃಷ್ಟಃ ಪ್ರೋವಾಚ ಗಣನಾಯಕಃ ॥ ೧೧ ॥
ಕರಭೋಽಯಂ ಮಹಾದೇವೋ ದೃಶ್ಯತೇ ವಿಬುಧೋತ್ತಮಾಃ ।
ಶ್ರುತ್ವಾ ಚೈವಂ ವಚೋ ದೇವಾಃ ಪ್ರಹೃಷ್ಟಾಃ ಕರಭಂ ಯಯುಃ ॥ ೧೨ ॥
ಜ್ಞಾತೋಽಸ್ಮಾಭಿರ್ಮಹಾದೇವ ಜಲ್ಪಂತ ಇತಿ ತೇ ಸ್ವಯಂ ।
ಗತ್ವಾ ಚೈವ ತತಃ ಸರ್ವೇ ಚತುರ್ದಿಕ್ಷು ಸ್ಥಿತಾಃ ಸ್ವಯಂ ॥ ೧೩ ॥
ವಿಚಿಂತ್ಯೇತಿ ಕಥಂ ಜ್ಞಾತಃ ಶಂಕರೋ ವಿಸ್ಮಯಂ ಗತಃ ।
ತ್ಯಕ್ತ್ವಾಽಥ ಕಾರಭಂ ರೂಪಂ ದೇವದೇವೋ ಮಹೇಶ್ವರಃ ॥ ೧೪ ॥
ಲಿಂಗಮುತ್ಪಾದಯಾಮಾಸ ದಿವ್ಯಂ ಯತ್ಕರಭೇಶ್ವರಂ ।
ತೇ ದೃಷ್ಟ್ವಾಽಥ ಸುರಾಃ ಸರ್ವೇ ಸಾಷ್ಟಾಂಗಪ್ರಣತಿಸ್ಥಿತಾಃ ॥ ೧೫ ॥
ತತಃ ಪ್ರಭೃತಿ ವಿಖ್ಯಾತಃ ಶಂಕರಃ ಕರಭೇಶ್ವರಃ ।
ಕೋಟಿತೀರ್ಥಾದುತ್ತರಸ್ಮಿನ್ ಸ್ಥಾಪಯಾಮಾಸ ವಿಘ್ನಪಂ ॥ ೧೬ ॥
ಸ್ವನಾಮ್ನಾ ಪ್ರಥಿತಂ ಚಕ್ರೇ ಕರಭಂ ಚಾಽತಿಪೂಜಿತಂ ।
ಸ್ನಾತ್ವಾ ತತ್ರ ಶುಚಿರ್ಭೂತ್ವಾ ಯಸ್ತಮರ್ಚಯತೇ ಶಿವಂ ॥ ೧೭ ॥

---

೧೧. "ಓ ಗಣನಾಯಕ! ಈ ವಿಚಾರವನ್ನು ತಿಳಿಸು; ನಿನ್ನನ್ನು ನಮಸ್ಕರಿಸುವೆವು, ಲಡ್ಡುಕಗಳನ್ನೂ ನೈವೇದ್ಯಮಾಡುವೆವು" ಎಂದ ಅವರ ಮಾತನ್ನು ಕೇಳಿ ಸಂತೋಷದಿಂದ ಗಣಪತಿಯು ಹೇಳಿದನು.

೧೨. "ಎಲೈ ದೇವಶ್ರೇಷ್ಠರಿರಾ! ಇಲ್ಲಿರುವ ಈ ಆನೆಯೇ ಮಹಾದೇವನಾಗಿರುವನು." ಇಂತೆಂದ ಮಾತನ್ನು ಕೇಳಿ ಹರ್ಷಗೊಂಡ ದೇವತೆಗಳೆಲ್ಲರೂ ಆನೆಯ ಬಳಿಗೆ ಬಂದರು.

೧೩. "ಎಲೈ ಮಹಾದೇವನೆ! ನಾವೇ ನಿನ್ನನ್ನು ಗುರುತು ಹಿಡಿದೆವು" ಎಂಬುದಾಗಿ ಹರಟುತ್ತ ಅವರೆಲ್ಲರೂ ನಾಲ್ಕು ದಿಕ್ಕುಗಳಿಗೂ ಚೆದುರಿಹೋಗಿ ನಿಂತರು.

೧೪–೧೫. "ನನ್ನನ್ನು ಇವರು ಹೇಗೆ ತಿಳಿದರು?" ಎಂದು ಯೋಚಿಸುತ್ತ ಶಂಕರನು ವಿಸ್ಮಯವನ್ನು ತಾಳಿದನು. ಆನೆಯ ರೂಪವನ್ನು ತ್ಯಜಿಸಿ ದೇವದೇವನಾದ ಆ ಮಹೇಶ್ವರನು ಕರಭೇಶ್ವರನೆಂದು ಪ್ರಸಿದ್ಧವಾದ ದಿವ್ಯಲಿಂಗವನ್ನು ಉದ್ಭವಿಸುವಂತೆ ಮಾಡಿದನು. ಅದನ್ನು ಕಂಡು ದೇವತೆಗಳೆಲ್ಲರೂ ಸಾಷ್ಟಾಂಗ ಪ್ರಣಾಮವನ್ನು ಮಾಡಿ ನಿಂತರು.

೧೬. ಅಂದಿನಿಂದ ಮಹಾದೇವನು ಅಲ್ಲಿ ಕರಭೇಶ್ವರನೆಂದು ಪ್ರಖ್ಯಾತನಾದನು. ಬಳಿಕ ಮಹೇಶ್ವರನೇ ಕೋಟಿತೀರ್ಥದ ಉತ್ತರದಿಕ್ಕಿನಲ್ಲಿ ವಿಘ್ನೇಶ್ವರನನ್ನೂ ಪ್ರತಿಷ್ಠೆಮಾಡಿದನು.

೧೭–೧೯. ಆನೆಯ ಮುಖವುಳ್ಳ ಗಣಪತಿಯನ್ನೂ ಸಹ ಎಲ್ಲರೂ ಪೂಜಿಸು

**ಗಂಧಪುಷ್ಪೈಶ್ಚ ನೈವೇದ್ಯೈಃ ಶೃಣು ತೇಷಾಂ ಚ ಯತ್ಫಲಂ ।**
**ಸರ್ವಮೇಧೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ॥ ೧೮ ॥**
**ತತೋಽಧಿಕಂ ಸ ಲಭತೇ ನಾಽತ್ರ ಕಾರ್ಯಾ ವಿಚಾರಣಾ ।**
**ಮಹಾಕಾಲಂ ತತೋ ಗಚ್ಛನ್ ಸಂಪೂರ್ಣಂ ಫಲಮಾಪ್ನುಯಾತ್॥ ೧೯ ॥**
**ತತಃ ಪ್ರಸಿದ್ಧೋ ಲೋಕೇಽಸ್ಮಿನ್ ಋದ್ಧಿದಃ ಕರಭೇಶ್ವರಃ ॥ ೨೦ ॥**

॥ ಇತಿ ಕರಭೇಶ್ವರಮಾಹಾತ್ಮ್ಯಂ ॥

**ಸನತ್ಕುಮಾರ ಉವಾಚ :—**

**ಲಡ್ಡುಕೈಶ್ಚ ತತೋ ದೇವೈರ್ವಿಘ್ನನಾಥಃ ಸಮರ್ಚಿತಃ ।**
**ತದಾ ಪ್ರಭೃತಿ ವಿಖ್ಯಾತೋ ವಿಘ್ನೇಶೋ ಲಡ್ಡುಕಪ್ರಿಯಃ ॥ ೨೧ ॥**
**ಯಃ ಸಮರ್ಚಯತೇ ಭಕ್ತ್ಯಾ ತಸ್ಯ ವಿಘ್ನೋ ನ ಜಾಯತೇ ।**
**ತಸ್ಮೈ ದದಾತಿ ಸಂತುಷ್ಟಃ ಸರ್ವಾನ್ಕಾಮಾನ್ವಿನಾಯಕಃ ॥ ೨೨ ॥**
**ನಿರಾಹಾರಶ್ಚತುರ್ಥ್ಯಾಂ ಚ ಸ್ನಾತ್ವಾ ಶಿಪ್ರಾಂ ವಿಶೇಷತಃ ।**
**ರಕ್ತಾಂಬರಧರೋ ಭೂತ್ವಾ ರಕ್ತಪುಷ್ಪೈರ್ವಿನಾಯಕಂ ॥ ೨೩ ॥**

---

ವಂತೆ ಮಾಡಿ ತನ್ನ ಹೆಸರಿನಿಂದಲೇ ಆತನಿಗೆ ಪ್ರಖ್ಯಾತಿಯು ಬರುವಂತೆ ಮಾಡಿದನು. ಯಾವನು ಸ್ನಾನವನ್ನು ಮಾಡಿ ಶುಚಿಯಾಗಿ ಆ ಕರಭೇಶ್ವರನನ್ನು ಪೂಜಿಸುವನೊ, ಗಂಧ ಪುಷ್ಪ ನೈವೇದ್ಯಗಳನ್ನರ್ಪಿಸುವನೊ, ಅವನಿಗೆ ಲಭಿಸುವ ಫಲವನ್ನು ಕೇಳು. ಸಮಸ್ತ ಯಜ್ಞಗಳನ್ನೂ ಮಾಡಿದರೆ ಯಾವ ಪುಣ್ಯವುಂಟೊ, ಸಕಲ ದಾನಗಳನ್ನು ಮಾಡಲು ಯಾವ ಫಲವು ಲಭಿಸುವುದೊ, ಅದಕ್ಕಿಂತಲೂ ಹೆಚ್ಚಾದ ಫಲವನ್ನೇ ಕರಭೇಶ್ವರನ ದರ್ಶನದಿಂದ ಪಡೆಯುವನು. ಇದರಲ್ಲಿ ಸಂದೇಹವಿಲ್ಲ. ಬಳಿಕ ಅಲ್ಲಿಂದ ಹೋಗಿ ಮಹಾಕಾಲೇಶ್ವರನನ್ನು ನಮಸ್ಕರಿಸಲು ಸಂಪೂರ್ಣ ಫಲವನ್ನು ಹೊಂದುವನು.

೨೦. ಅಂದಿನಿಂದ ಕರಭೇಶ್ವರನು ಈ ಲೋಕದಲ್ಲಿ ಪ್ರಸಿದ್ಧನಾಗಿ ಭಕ್ತರಿಗೆ ಸಕಲ ಸಮೃದ್ಧಿಗಳನ್ನೂ ಕೊಡುತ್ತಿರುವನು.

೨೧. ಸನತ್ಕುಮಾರನು ಹೇಳುತ್ತಾನೆ:—ಬಳಿಕ ದೇವತೆಗಳು ವಿಘ್ನೇಶ್ವರನನ್ನು ಲಡ್ಡುಕಗಳ ನೈವೇದ್ಯದಿಂದ ಪೂಜಿಸಿದರು. ಅಂದುಮೊದಲು ವಿಘ್ನೇಶ್ವರನು ಲಡ್ಡುಕಪ್ರಿಯನೆಂದು ವಿಖ್ಯಾತನಾಗಿರುವನು.

೨೨. ಯಾವನು ಭಕ್ತಿಯಿಂದ ಆತನನ್ನು ಪೂಜಿಸುವನೊ, ಅವನಿಗೆ ಕಾರ್ಯಗಳಲ್ಲಿ ವಿಘ್ನಗಳುಂಟಾಗುವುದಿಲ್ಲ. ಸಂತುಷ್ಟನಾದ ಆ ವಿನಾಯಕನು ಸಕಲಾಭೀಷ್ಟಗಳನ್ನೂ ಕೊಡುವನು.

೨೩–೨೪. ಚತುರ್ಥಿಯ ದಿನದಲ್ಲಿ ಉಪವಾಸವನ್ನು ಮಾಡಿ ಶಿಪ್ರಾನದಿಯಲ್ಲಿ ನಿಯಮದಿಂದ ಸ್ನಾನವನ್ನು ಮಾಡಿ ಕೆಂಪು ವಸ್ತ್ರವನ್ನುಟ್ಟು ಕೆಂಪು ಹೂವು

ರಕ್ತಚಂದನತೋಯೇನ ಮಂತ್ರೈಃ ಸ್ನಪನಪೂರ್ವಕಂ ।
ಚಂದನೇನಾಽಪಿ ರಕ್ತೇನ ತಂ ವಿಲೇಪ್ಯ ಪ್ರಪೂಜಯೇತ್ ॥ ೨೪ ॥
ಧೂಪಂ ದದ್ಯಾತ್ತಥಾ ದಿವ್ಯಂ ಸುಗಂಧಂ ಲಡ್ಡುಕಪ್ರಿಯೇ ।
ನೈವೇದ್ಯೇ ಲಡ್ಡುಕಾ ದೇಯಾ ಆಜ್ಯಖಂಡಪರಿಪ್ಲುತಾಃ ॥ ೨೫ ॥
ನ ತಸ್ಯ ಜಾಯತೇ ವ್ಯಾಧಿರ್ಭಯಂ ವಿಘ್ನಂ ಕದಾಚನ ।
ಲಭತೇ ಚ ಸದಾಽಭೀಷ್ಟಂ ಮೃತಃ ಶಿವಪುರಂ ವ್ರಜೇತ್ ॥ ೨೬ ॥
ಅವತೀರ್ಣಃ ಪುನರ್ಲೋಕೇ ಜಾಯತೇ ವಸುಧಾಽಧಿಪಃ ।
ಮತಿಮಾನ್ಪುತ್ರವಾಂಛೂರೋ ನಾತ್ರ ಕಾರ್ಯಾ ವಿಚಾರಣಾ ॥ ೨೭ ॥
॥ ಇತಿ ಗಣೇಶಮಾಹಾತ್ಮ್ಯಂ ॥

ಸನತ್ಕುಮಾರ ಉವಾಚ :—
ಕುಸುಮೇಶಂ ಸುರದ್ವಾರೇ ಸುರಾಽಸುರನಮಸ್ಕೃತಂ ।
ಶ್ರದ್ಧಯಾ ಪೂಜಯೇದ್ಯಸ್ತು ಶಿವಲೋಕೇ ಸ ಮೋದತೇ ॥ ೨೮ ॥
ಜಯೇಶ್ವರಂ ತು ಯಃ ಪಶ್ಯೇದ್ದೇವದೇವಂ ಮಹೇಶ್ವರಂ ।
ಜಯೀ ಸ್ಯಾತ್ಸರ್ವಕಾರ್ಯೇಷು ಶಿವಲೋಕಂ ಸ ಗಚ್ಛತಿ ॥ ೨೯ ॥

---

ಗಳಿಂದಲೂ, ಮಂತ್ರಪೂರ್ವಕವಾದ ರಕ್ತಚಂದನ ಮಿಶ್ರಿತವಾದ ನೀರಿನ ಸ್ನಾನದಿಂದಲೂ, ರಕ್ತ ಚಂದನದ ಲೇಪನದಿಂದಲೂ ವಿನಾಯಕನ ಪೂಜೆಯನ್ನು ಮಾಡಬೇಕು.

೨೫. ದಿವ್ಯವೂ, ಸುಗಂಧಾಢ್ಯವೂ ಆದ ಧೂಪವನ್ನಿತ್ತು ಲಡ್ಡುಕಪ್ರಿಯನಾದ ಆತನಿಗೆ ತುಪ್ಪದಲ್ಲಿ ಕರೆದು ಸಕ್ಕರೆ ಬೆರಸಿದ ಲಡ್ಡುಕಗಳನ್ನು ನೈವೇದ್ಯವಾಗಿ ಸಮರ್ಪಿಸಬೇಕು.

೨೬. ಅಂಥವನಿಗೆ ವ್ಯಾಧಿಯಾಗಲಿ, ಭಯವಾಗಲಿ, ಕಾರ್ಯವಿಘ್ನಗಳಾಗಲಿ ಎಂದಿಗೂ ಉಂಟಾಗಲಾರವು. ಯಾವಾಗಲೂ ಮನಸ್ಸಿನ ಇಷ್ಟಾರ್ಥಗಳನ್ನು ಪಡೆಯುವನು. ಮೃತನಾದಮೇಲೆ ಶಿವಪುರವನ್ನೂ ಸೇರುವನು.

೨೭. ಪುನಃ ಭೂಲೋಕದಲ್ಲಿ ಅವತರಿಸಿದರೆ ಬುದ್ಧಿವಂತನೂ, ಸಂತಾನ ಸಹಿತನೂ, ಶೂರನೂ ಆದ ಭೂಪಾಲಕನಾಗುವನು. ಇದರಲ್ಲಿ ಸಂದೇಹವಿಲ್ಲ.

೨೮. ಸುರದ್ವಾರದಲ್ಲಿರುವ ಕುಸುಮೇಶ್ವರನನ್ನು ಯಾವನು ಶ್ರದ್ಧೆಯಿಂದ ಪೂಜಿಸುವನೊ, ಅವನು ಶಿವಲೋಕದಲ್ಲಿ ಆನಂದದಿಂದ ವಾಸಮಾಡುವನು. ಈ ಲಿಂಗವು ದೇವಾಸುರರಿಗೂ ನಮಸ್ಕಾರಾರ್ಹವಾಗಿರುವುದು.

೨೯. ದೇವದೇವನೂ, ಮಹೇಶ್ವರನೂ ಆದ ಜಯೇಶ್ವರನನ್ನು ಯಾವನು ಪೂಜಿಸುವನೊ, ಅವನಿಗೆ ಸಕಲ ಕಾರ್ಯಗಳಲ್ಲಿಯೂ ಜಯವಾಗುವುದು. ಅವನು ಶಿವಲೋಕಕ್ಕೆ ಹೋಗುವನು.

ಶಿವದ್ವಾರೇ ಶಿವಂ ಲಿಂಗಮರ್ಚಯೇನ್ಮಾನವೋ ಯದಿ ।
ತ್ರಿದಿವಂ ಯಾತಿ ಯಾನೇನ ಗಾಣಪತ್ಯಂ ಚ ವಿಂದತಿ ॥ ೩೦ ॥
ಅಥಾಽನ್ಯಂ ಸಂಪ್ರವಕ್ಷ್ಯಾಮಿ ಮಾರ್ಕಂಡೇಶ್ವರಮುತ್ತಮಂ ।
ಮಾರ್ಕಂಡೇಯೋ ಮುನಿರ್ಯತ್ರ ತಪ್ತವಾನ್ ಸುಮಹತ್ತಪಃ ॥ ೩೧ ॥
ದೃಷ್ಟ್ವಾ ತಂ ಶಂಕರಂ ದೇವಂ ವಾಜಪೇಯಫಲಂ ಲಭೇತ್ ।
ಸರ್ವಪಾಪವಿಶುದ್ಧಾತ್ಮಾ ಚಿರಾಯುರ್ಜಾಯತೇ ನರಃ ॥ ೩೨ ॥
ಶೃಣು ವ್ಯಾಸ ಮಹಾಸ್ಥಾನಂ ಯಸ್ಯಾಂ ಪುರ್ಯಾಮನುತ್ತಮಂ ।
ಯತ್ರ ತಿಷ್ಠತಿ ಸಾ ದೇವೀ ಬ್ರಹ್ಮಾಣೀ ಹಂಸವಾಹಿನೀ ॥ ೩೩ ॥
ಭಕ್ತಾನಾಂ ಪೂರಯೇದಾಶಾಂ ಪುತ್ರವತ್ಪರಿಪಾಲಯೇತ್ ।
ಯಥಾ ಮಾತಾ ತಥಾ ದೇವೀ ದೃಷ್ಟಾ ಶಾಂತಿಪರೈರಪಿ ॥ ೩೪ ॥
ಅರ್ಚಿತಾ ಬ್ರಹ್ಮಣಾ ಸಾತು ಸ್ತುತಾ ದೇವೀ ಸುರೋತ್ತಮೈಃ ।
ಅರ್ಚಯೇದ್ಗಂಧಪುಷ್ಪೈಶ್ಚ ನೈವೇದ್ಯೈಃ ಸರ್ವಸಿದ್ಧಿದಾಂ ।
ಅಪಿ ಯಾ ಬ್ರಹ್ಮಣಃ ಪೂರ್ವಮಭೂದೇವ ಸುಸಿದ್ಧಿದಾ ॥ ೩೫ ॥

---

೩೦. ಶಿವದ್ವಾರದಲ್ಲಿ ಲಿಂಗರೂಪಿಯಾದ ಶಿವನನ್ನು ಮಾನವನು ಪೂಜಿಸಿದ್ದೇ ಆದರೆ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುವನು; ಬಳಿಕ ಗಣಾಧಿಪತಿಯಾಗುವನು.

೩೧. ಇನ್ನು ಸರ್ವೋತ್ತಮವಾದ ಮಾರ್ಕಂಡೇಯೇಶ್ವರಲಿಂಗದ ವಿಷಯವನ್ನು ಹೇಳುವೆನು. ಇದರ ಸಮೀಪದಲ್ಲಿಯೇ ಮಾರ್ಕಂಡೇಯ ಮಹಾಮುನಿಯು ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದನು.

೩೨. ಸರ್ವಶ್ರೇಯಸ್ಕರನಾದ ಆ ದೇವನನ್ನು ನೋಡಿದವನು ವಾಜಪೇಯ ಯಾಗವನ್ನು ಮಾಡಿದ ಫಲವನ್ನು ಪಡೆಯುವನು. ಸಮಸ್ತ ಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧನಾಗಿ ದೀರ್ಘಾಯುಷ್ಯವನ್ನೂ ಪಡೆಯುವನು.

೩೩. ಎಲೈ ವ್ಯಾಸನೆ! ಈ ಅವಂತೀಪುರಿಯಲ್ಲಿ ಅತ್ಯುತ್ತಮವಾದ ಮತ್ತೊಂದು ಮಹಾಸ್ಥಾನವಿರುವುದು, ಕೇಳು. ಅಲ್ಲಿ ಹಂಸವಾಹನೆಯಾದ ಬ್ರಹ್ಮಾಣಿಯೆಂಬ ದೇವಿಯು ನೆಲಸಿರುವಳು.

೩೪. ಭಕ್ತರ ಆಶೆಗಳನ್ನು ಆಕೆಯು ಈಡೇರಿಸುವಳು. ಆಕೆಯು ತಾಯಿಯು ಮಕ್ಕಳನ್ನು ಕಾಪಾಡುವಂತೆ ಭಕ್ತರನ್ನು ಕಾಪಾಡುತ್ತಿರುವಳು. ಶಾಂತಿಸಮಾಧಾನಯುಕ್ತರಾಗಿ ಎಲ್ಲರೂ ಆಕೆಯನ್ನು ನೋಡಬೇಕು.

೩೫. ಆ ದೇವಿಯನ್ನು ಚತುರ್ಮುಖನೂ, ಸಕಲ ದೇವತೆಗಳೂ ಪೂಜಿಸಿರುವರು. ಸ್ತೋತ್ರಮಾಡಿರುವರು. ಸರ್ವಾಭೀಷ್ಟದಾಯಕಳಾದ ಆಕೆಯನ್ನು ಗಂಧ, ಪುಷ್ಪ, ನೈವೇದ್ಯಗಳಿಂದ ಪೂಜಿಸಬೇಕು. ಹಿಂದೆ ಆಕೆಯು ಬ್ರಹ್ಮದೇವನಿಗೂ ಕಾರ್ಯಸಮೃದ್ಧಿಯನ್ನುಂಟುಮಾಡಿದವಳಾಗಿರುವಳು.

ಯಃ ಸ್ನಾತ್ವಾ ಬ್ರಹ್ಮಸರಸಿ ಪಶ್ಯೇದ್ಬ್ರಹ್ಮೇಶ್ವರಂ ಶಿವಂ ।
ಭವಬಂಧವಿನಿರ್ಮುಕ್ತೋ ಬ್ರಹ್ಮಲೋಕೇ ಸ ಮೋದತೇ ॥ ೩೬ ॥
ಅಥಾಽನ್ಯಾಂ ಸಂಪ್ರವಕ್ಷ್ಯಾಮಿ ಯಜ್ಞವಾಪೀಮನುತ್ತಮಾಂ ।
ಯತ್ರ ವೈ ಬ್ರಹ್ಮಣಾ ಪೂರ್ವಮಿಷ್ಟೋ ಯಜ್ಞಃ ಸದಕ್ಷಿಣಃ ॥ ೩೭ ॥
ಯಜ್ಞಾರ್ಥಂ ಯತ್ಕೃತಂ ಕುಂಡಂ ಯಜ್ಞವಾಪೀ ಚ ಸಾ ಸ್ಮೃತಾ ।
ಪಶುಶ್ಚ ಪತಿತೋ ಯಸ್ಮಾತ್ತಸ್ಮಾತ್ಪಶುಪತಿಃ ಸ್ಮೃತಃ ॥ ೩೮ ॥
ತಸ್ಯಾಂ ಸ್ನಾತ್ವಾ ಶುಚಿರ್ಭೂತ್ವಾ ಪಶ್ಯೇತ್ಪಶುಪತಿಂ ತು ಯಃ ।
ಉದ್ಧರೇತ್ಸ ಪಿತೄನ್ಸರ್ವಾನ್ಪಶುಯೋನಿಗತಾನಪಿ ॥ ೩೯ ॥
ಸುವರ್ಣಮಣಿಮುಕ್ತಾದ್ಯೈರ್ವಿಮಾನೈಃ ಸರ್ವಕಾಮಗೈಃ ।
ಯಾತಿ ರುದ್ರಪುರಂ ದಿವ್ಯಂ ಯತ್ರ ದೇವೋ ಮಹೇಶ್ವರಃ ॥ ೪೦ ॥
ರೂಪಕುಂಡೇ ನರಃ ಸ್ನಾತ್ವಾ ಸುರೂಪೋ ಜಾಯತೇ ನರಃ ।
ಸ್ವರ್ಗೇ ಸ ದೇವಗಂಧರ್ವೈಃ ಸ್ಪೃಹಣೀಯವಪುರ್ಭವೇತ್ ॥ ೪೧ ॥

---

೩೬. ಬ್ರಹ್ಮಸರಸ್ಸಿನಲ್ಲಿ ಸ್ನಾನಮಾಡಿ ಶುಭಪ್ರದನಾದ ಬ್ರಹ್ಮೇಶ್ವರನನ್ನು ಪೂಜೆಮಾಡಿದವನು ಸಂಸಾರಬಂಧದಿಂದ ಮುಕ್ತನಾಗಿ ಬ್ರಹ್ಮಲೋಕವನ್ನು ಸೇರಿ ಸುಖಿಸುವನು.

೩೭. ಇನ್ನು ಅತಿಶ್ರೇಷ್ಠವೆನಿಸಿದ ಯಜ್ಞವಾಪೀತೀರ್ಥವನ್ನು ಕುರಿತು ಹೇಳುವೆನು. ಅದರ ಸಮೀಪದಲ್ಲಿಯೇ ಬ್ರಹ್ಮದೇವನು ಹಿಂದೆ ಬಹುದಕ್ಷಿಣೆ ಯಿಂದೊಡಗೂಡಿದ ಯಜ್ಞವೊಂದನ್ನು ಮಾಡಿದನು.

೩೮. ಯಜ್ಞೋಪಕರಣವಾಗಿ ಮಾಡಲ್ಪಟ್ಟ ಆ ಕುಂಡಕ್ಕೆ ಯಜ್ಞವಾಪಿ ಯೆಂದೇ ಹೆಸರಾಯಿತು. ಯಜ್ಞಪಶುವು ಅದರಲ್ಲಿ ಆಹುತಿಯಾಗಿ ಬಿದ್ದುದರಿಂದ ಪಶುಪತಿಕೂಪವೆಂದೂ ಅದನ್ನು ಕರೆಯುವರು.

೩೯. ಅದರಲ್ಲಿ ಸ್ನಾನವನ್ನು ಮಾಡಿ ಶುಚಿಯಾಗಿ ಪಶುಪತೀಶ್ವರನನ್ನು ಯಾವನು ನೋಡುವನೊ, ಅವನು ದುಃಕರ್ಮಗಳಿಂದ ಪಶುಯೋನಿಗಳಲ್ಲಿ ಜನಿಸು ತ್ತಿರುವ ಪಿತೃಗಳನ್ನು ಉದ್ಧರಿಸುವನು.

೪೦. ಚಿನ್ನ, ನವರತ್ನಗಳು, ಮುತ್ತುಗಳು ಮುಂತಾದುವುಗಳಿಂದ ಅಲಂಕೃತವೂ, ಸ್ವೇಚ್ಛಾಗಮನವುಳ್ಳುದೂ ಆದ ವಿಮಾನಗಳಲ್ಲಿ ಕುಳಿತು ಆತನು ದಿವ್ಯವಾದ ರುದ್ರಪುರದಲ್ಲಿ ಮಹೇಶ್ವರನ ಸನ್ನಿಧಿಯನ್ನೇ ಸೇರುವನು.

೪೧. ರೂಪಕುಂಡದಲ್ಲಿ ಸ್ನಾನಮಾಡಿದ ಮಾನವನು ಸರ್ವಾಂಗಸುಂದರ ನಾಗುವನು. ಆತನ ದೇಹಸೌಷ್ಠವವನ್ನು ಸ್ವರ್ಗದಲ್ಲಿರುವ ದೇವತೆಗಳೂ ಗಂಧರ್ವರೂ ಅಭಿಲಷಿಸುತ್ತಿರುವರು.

ಕುಂಡೇ ಸ್ನಾತ್ವಾಽಪ್ಯನಂಗೇ ಯಃ ಶುಚಿರ್ಭೂತ್ವಾ ಸಮಾಹಿತಃ ।
ಪಶ್ಯೇಚ್ಚ ದೇವದೇವೇಶಮನಂಗೇನಾಽರ್ಚಿತಂ ಪುರಾ ।
ಕಾಮಂ ಸ ಲಭತೇಽಭೀಷ್ಟಂ ಮೃತೋ ಯಾತಿ ಶಿವಾಲಯಂ ॥ ೪೨ ॥
ಆಷಾಢೇ ತು ಸಿತಾಷ್ಟಮ್ಯಾಂ ಜಾಗರಂ ಯಸ್ತು ಕಾರಯೇತ್ ।
ಕೇದಾರೇ ಯತ್ಫಲಂ ಪ್ರೋಕ್ತಂ ತತ್ಸಮಾನಮವಾಪ್ನುಯಾತ್ ॥ ೪೩ ॥
ಕರೀಕುಂಡೇ ನರಃ ಸ್ನಾತ್ವಾ ವಿಶ್ವರೂಪಂ ತು ಯೋಽರ್ಚಯೇತ್ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೪೪ ॥
ಅಜಾಗಂಧೇ ನರಃ ಸ್ನಾತ್ವಾ ದೃಷ್ಟ್ವಾ ಬ್ರಹ್ಮೇಶ್ವರಂ ಶಿವಂ ।
ಬ್ರಹ್ಮಹತ್ಯಾಸಮಂ ಪಾಪಂ ತತ್ಕ್ಷಣಾತ್ಸಂವ್ಯಪೋಹತಿ ॥ ೪೫ ॥
ಚಕ್ರತೀರ್ಥೇ ನರಃ ಸ್ನಾತ್ವಾ ಚಕ್ರಸ್ವಾಮಿಸಮರ್ಚಯೇತ್ ।
ಜಾಯತೇ ಸ ನರೋ ವ್ಯಾಸ ಚಕ್ರವರ್ತೀ ಸದಾ ಭುವಿ ॥ ೪೬ ॥
ಸಿದ್ಧೇಶ್ವರಂ ಯದಾ ಪಶ್ಯೇತ್ಸ್ನಾತ್ವಾ ಸುವಿಧಿಪೂರ್ವಕಂ ।
ಕಾಮಿಕೇನ ವಿಮಾನೇನ ರುದ್ರಲೋಕಂ ಸ ಗಚ್ಛತಿ ॥ ೪೭ ॥

॥ ಇತಿ ಯಜ್ಞವಾಪೀಮಾಹಾತ್ಮ್ಯಂ ॥

---

೪೨. ಅನಂಗಕುಂಡದಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ ಶಾಂತಮನಸ್ಸಿನಿಂದ ಮನ್ಮಥಪೂಜಿತನಾದ ಅನಂಗೇಶ್ವರನನ್ನು ನೋಡಿದ ಮನುಜನು ಅಭೀಷ್ಟವನ್ನು ಪಡೆಯುವನು. ಮೃತನಾದಮೇಲೆ ಕೈಲಾಸವನ್ನು ಸೇರುವನು.

೪೩. ಆಷಾಢಶುಕ್ಲಾಷ್ಟಮಿಯ ರಾತ್ರಿಯಲ್ಲಿ ಆ ದೇವನ ಸನ್ನಿಧಿಯಲ್ಲಿ ಜಾಗರಣೆಯನ್ನು ಮಾಡಿದವನಿಗೆ ಕೇದಾರದಲ್ಲಿ ಶಿವದರ್ಶನವನ್ನು ಮಾಡಿದವನಿಗೆ ಹೇಳಿರುವುದಕ್ಕೆ ಸಮಾನವಾದ ಫಲವು ಲಭಿಸುವುದು.

೪೪. ಕರೀಕುಂಡದಲ್ಲಿ ಸ್ನಾನಮಾಡಿ ಮನುಷ್ಯನು ವಿಶ್ವರೂಪೇಶ್ವರನನ್ನು ಪೂಜಿಸಲು ಸಕಲಪಾತಕಗಳಿಂದಲೂ ಮುಕ್ತನಾಗಿ ವೈಕುಂಠವನ್ನು ಸೇರುವನು.

೪೫. ಅಜಾಗಂಧತೀರ್ಥದಲ್ಲಿ ಸ್ನಾನವನ್ನು ಮಾಡಿ ಬ್ರಹ್ಮೇಶ್ವರವೆಂಬ ಶಿವಲಿಂಗವನ್ನು ನೋಡಲು ಬ್ರಹ್ಮಹತ್ಯೆಗೆ ಸಮಾನವಾದ ಮಹಾಪಾತಕವನ್ನೂ ಸಹ ಕ್ಷಣಮಾತ್ರದಲ್ಲಿಯೇ ಕಳೆದುಕೊಳ್ಳುವನು.

೪೬. ಚಕ್ರತೀರ್ಥದಲ್ಲಿ ಸ್ನಾನಮಾಡಿಕೊಂಡು ಚಕ್ರಸ್ವಾಮಿಯನ್ನರ್ಚಿಸಬೇಕು. ಎಲೈ ವ್ಯಾಸನೆ! ಅಂತಹ ನರನು ಮುಂದಿನ ಜನ್ಮಗಳಲ್ಲೆಲ್ಲ ಚಕ್ರವರ್ತಿಯಾಗಿಯೇ ಜನಿಸುತ್ತಿರುವನು.

೪೭. ಸಿದ್ಧೇಶ್ವರನ ಬಳಿಯಲ್ಲಿರುವ ತೀರ್ಥದಲ್ಲಿ ವಿಧಿಪೂರ್ವಕವಾಗಿ ಮಿಂದು ಆ ದೇವನನ್ನು ನೋಡಲು ಮಾನವನು ಸಕಲೋಪಭೋಗಸಹಿತವಾದ ವಿಮಾನದಲ್ಲಿ ಕುಳಿತು ರುದ್ರಲೋಕಕ್ಕೆ ಹೋಗುವನು.

ಸೋಮವತ್ಯಾಂ ನರಃ ಸ್ನಾತ್ವಾ ಯಃ ಸೋಮೇಶ್ವರಮರ್ಚಯೇತ್ ।
ಸೋಮವನ್ನಿರ್ಮಲೋ ಭೂತ್ವಾ ಸೋಮಲೋಕೇ ಮಹೀಯತೇ ॥೪೮॥

ವ್ಯಾಸ ಉವಾಚ :—

ತೀರ್ಥಂ ಸೋಮವತೀ ನಾಮ ಲಿಂಗಂ ಸೋಮೇಶ್ವರಂ ತಥಾ ।
ಅಭೂದೇತತ್ಕಥಂ ನಾಮ ಶ್ರೋತುಮಿಚ್ಛಾಮಿ ತತ್ತ್ವತಃ ॥ ೪೯ ॥

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಯಥೋತ್ಪನ್ನಂ ಸೋಮತೀರ್ಥಂ ಸುಶೋಭನಂ ।
ಸೋಮೇಶ್ವರಂ ಯಥಾಲಿಂಗಮೇತತ್ಸತ್ಯಂ ವದಾಮಿ ತೇ ॥ ೫೦ ॥
ಯೋ ದೇವೋ ಭಗವಾನ್ಸೋಮೋ ಲೋಕಸ್ಯಾಪ್ಯಾಯನಂ ಪರಂ ।
ಆಸೀತ್ತಸ್ಯ ಪುರಾ ವ್ಯಾಸ ಪಿತಾ ವಿಪ್ರೋ ಮಹಾತಪಾಃ ॥ ೫೧ ॥
ಅವಂತ್ಯಾಂ ಚ ಮಹಾಭಾಗೋ ಯೋಽತ್ರಿರ್ನಾಮ ತಪೋನಿಧಿಃ ।
ವರ್ಷಾಣಾಂ ತ್ರೀಣಿ ದಿವ್ಯಾನಿ ಸಹಸ್ರಾಣಿ ತಪೋ ಮಹತ್ ॥ ೫೨ ॥
ಊರ್ಧ್ವಬಾಹುಃ ಸ ವೈ ತೇಪೇ ಬ್ರಹ್ಮಧ್ಯಾನಪರಾಯಣಃ ।
ಊರ್ಧ್ವಂ ಗತಂ ತತೋ ವ್ಯಾಸ ಬ್ರಾಹ್ಮ್ಯಂ ತೇಜೋ ಮಹಾತ್ಮನಃ ॥೫೩॥

---

೪೮. ಸೋಮವತಿಯಲ್ಲಿ ಯಾವ ಮನುಷ್ಯನು ಸ್ನಾನಮಾಡಿ ಸೋಮೇಶ್ವರನ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಚಂದ್ರನಂತೆ ನಿರ್ಮಲನಾಗಿ ಚಂದ್ರ ಲೋಕದಲ್ಲಿ ಸೌಖ್ಯಗಳನ್ನನುಭವಿಸುವನು.

೪೯. ವ್ಯಾಸನು ಹೇಳುತ್ತಾನೆ:—ಈ ಸೋಮವತಿಯೆಂಬ ತೀರ್ಥವೂ ಸೋಮೇಶ್ವರನಾಮಕವಾದ ಈ ಲಿಂಗವೂ ಹೇಗೆ ಉದ್ಭವವಾದುವೆಂಬುದನ್ನು ಯಥಾರ್ಥವಾಗಿ ಕೇಳಲಿಚ್ಛಿಸುವೆನು.

೫೦. ಸನತ್ಕುಮಾರನು ಹೇಳುತ್ತಾನೆ:—ಅಯ್ಯಾ ವ್ಯಾಸನೆ! ಪರಮ ಮಂಗಳಕರವಾದ ಈ ಸೋಮತೀರ್ಥವೂ ಸೋಮೇಶ್ವರಮಹಾಲಿಂಗವೂ ಉದ್ಭವಿಸಿದ ಪರಿಯನ್ನು ನಡೆದಂತೆಯೇ ಹೇಳುವೆನು, ಕೇಳು.

೫೧. ರಾತ್ರಿಯಲ್ಲಿ ಪ್ರಪಂಚಕ್ಕೆಲ್ಲ ಮನಸ್ಸಂತೋಷವನ್ನುಂಟುಮಾಡುವ ಚಂದ್ರನೆಂಬ ದೇವತೆಯಿರುವನಷ್ಟೆ. ಹಿಂದೆ ಆತನಿಗೆ ತಂದೆಯಾದ ಬ್ರಾಹ್ಮಣನೊಬ್ಬನಿದ್ದನು.

೫೨–೫೩. ಮಹಾತ್ಮನೂ ತಪಸ್ಸಂಪನ್ನನೂ ಆದ ಆತನೇ ಅತ್ರಿಮಹಾ ಮುನಿಯು. ಆತನು ಅವಂತೀಕ್ಷೇತ್ರದಲ್ಲಿ ವಾಸಮಾಡುತ್ತಿದ್ದನು. ಮೂರು ಸಾವಿರ ದೇವಮಾನದ ವರ್ಷಗಳವರೆಗೂ ಕೈಗಳನ್ನು ಮೇಲಕ್ಕೆತ್ತಿ ಧ್ಯಾನದಲ್ಲಿಯೇ ಮಗ್ನನಾಗಿ ಆತನು ಮಹತ್ತರವಾದ ತಪಸ್ಸನ್ನು ಆಚರಿಸಿದನು. ಆ ಮಹಾತ್ಮನ ಬ್ರಹ್ಮತೇಜವು ದೇಹದಿಂದ ಹೊರಹೊರಟು ಮೇಲಕ್ಕೆ ಹೋಯಿತು.

ನೇತ್ರಾಭ್ಯಾಂ ತೇನ ಸುಸ್ರಾವ ಭಾಸಯಂಚ್ಚ ದಿಶೋ ದಶ ।
ತೇಜಸ್ತತ್ಸಹಸಾ ದೃಷ್ಟ್ವಾ ದಿಶೋ ದಶೋದ್ಧತಂ ಸ್ವತಃ ॥ ೫೪ ॥
ದಿಶಶ್ಚ ತದ್ಯದಾ ವ್ಯಾಸ ಸರ್ವಾ ಧರ್ತುಂ ನ ಚಾಽಶಕನ್ ।
ಅಸುಸ್ರವತ್ತದಾ ದಿಗ್ಭ್ಯಸ್ತದ್ಧಿ ತೇಜೋಽತಿದುಃಸಹಂ ॥ ೫೫ ॥
ಲೋಕಾಂಶ್ಚ ಭಾಸಯತ್ಸರ್ವಾನ್ ಧರಣ್ಯಾಂ ವೈ ಪಪಾತ ಹ ।
ಸೋಮೋ ಜಾತಸ್ತತಸ್ತೇನ ಶೀತಾಂಶುಶ್ಚ ಜನಪ್ರಿಯಃ ॥ ೫೬ ॥
ವಾರಿ ಸೋಮಾತ್ಸಮುತ್ಪನ್ನಂ ವ್ಯಾಸ ತೇನೈವ ತೇಜಸಾ ।
ಪ್ರವಿಷ್ಟಾ ಸಾ ನದೀಂ ಶಿಪ್ರಾಮಮೃತೇನಾಽತಿಪೂರಿತಾ ॥ ೫೭ ॥
ತತಃ ಸೋಮವತೀ ಶಿಪ್ರಾ ವಿಖ್ಯಾತಾ ಸರ್ವಸಿದ್ಧಿದಾ ।
ಸೋಮಯುಕ್ತಾಂ ನದೀಂ ಶಿಪ್ರಾಂ ದೃಷ್ಟ್ವಾ ಪಾಪಂ ವ್ಯಪೋಹಿತಂ ॥೫೮॥
ಖ್ಯಾತಾ ಚ ತ್ರಿಷುಲೋಕೇಷು ಪಾಪಿನಾಂ ಪುಣ್ಯದಾಯಿನೀ ।
ಬ್ರಹ್ಮಹಾ ವಾ ಸುರಾಪೋ ವಾ ಸ್ತೇಯೀ ವಾ ಗುರುತಲ್ಪಗಃ ॥ ೫೯ ॥

---

೫೪-೫೫. ಅದು ಕಣ್ಣುಗಳಿಂದಲೂ ಕೆಳಗೆ ಸುರಿಯುತ್ತ ಹತ್ತು ದಿಕ್ಕು ಗಳನ್ನೂ ಬೆಳಗಿಸುತ್ತಿದ್ದಿತು. ತಾನೇ ತಾನಾಗಿ ವೃದ್ಧಿಯನ್ನು ಹೊಂದುತ್ತ ಆ ತೇಜಸ್ಸನ್ನು ಕಂಡು ಸಂಭ್ರಮಗೊಂಡ ಸಕಲ ದಿಕ್ಕುಗಳೂ ಆ ತೇಜಸ್ಸನ್ನು ಸಹಿಸಲು ಶಕ್ತಿಯುಳ್ಳವುಗಳಾಗಲಿಲ್ಲ. ಆಗ ಅತ್ಯಂತ ದುಸ್ಸಹವಾದ ಆ ತೇಜಸ್ಸು ದಿಕ್ಕುಗಳ ಮುಖಗಳಿಂದಲೂ ಸ್ರವಿಸಿತು.

೫೬. ಸಕಲಲೋಕಗಳನ್ನೂ ಪ್ರಕಾಶಗೊಳಿಸುತ್ತ ಆ ತೇಜಸ್ಸು ಭೂಮಿ ಯಲ್ಲಿ ಬಿದ್ದಿತು. ಅದರಿಂದ ಚಂದ್ರನುಂಟಾದನು. ಆದುದರಿಂದಲೇ ಚಂದ್ರನು ಶೀತರಶ್ಮಿಯೆನಿಸಿ ಜನರಿಗೆ ಪ್ರಿಯನಾಗಿರುವನು.

೫೭. ಎಲೈ ವ್ಯಾಸನೆ! ಸೋಮನಲ್ಲಿರುವ ಆ ತೇಜಸ್ಸಿನಿಂದಲೇ ನೀರು ಉತ್ಪನ್ನವಾಗಿ ಶಿಪ್ರಾನದಿಯನ್ನು ಪ್ರವೇಶಿಸಿತು. ಅದರಿಂದ ಆ ನದಿಯು ಅಮೃತ ಭರಿತವಾಯಿತು.

೫೮. ಅಂದಿನಿಂದ ಶಿಪ್ರಾನದಿಯು ಸೋಮವತಿಯೆಂದು ವಿಖ್ಯಾತವಾಗಿ ರುವುದು. ಈ ನದಿಯು ಸಕಲಾಭೀಷ್ಟಸಿದ್ಧಿಗಳನ್ನು ಕೊಡುವುದು. ಸೋಮ ಸಹಿತವಾದ ಶಿಪ್ರಾನದಿಯನ್ನು ನೋಡುವ ಮಾತ್ರದಿಂದಲೇ ಮನುಷ್ಯನು ತನ್ನ ಪಾತಕಗಳನ್ನು ಕಳೆದುಕೊಳ್ಳುವನು.

೫೯-೬೧. ಪಾಪಿಗಳಿಗೂ ಪುಣ್ಯದಾಯಕವಾದುದೆಂದು ಸೋಮವತಿಯು ಮೂರು ಲೋಕಗಳಲ್ಲಿಯೂ ಖ್ಯಾತಿಯನ್ನು ಪಡೆದಿರುವುದು. ಬ್ರಹ್ಮಹತ್ಯೆಯನ್ನು ಮಾಡಿದವನೂ, ಸುರಾಪಾನಾಸಕ್ತನೂ, ಕಳ್ಳನೂ, ಗುರುಪತ್ನೀಗಾಮಿಯೂ ಈ ನಾಲ್ಕು ಜನರೂ ಈ ತೀರ್ಥದ ದರ್ಶನದಿಂದಲೇ ಪಾಪಗಳಿಂದ ಮುಕ್ತ

ಚತ್ವಾರೋಽಪ್ಯತ್ರ ಪಾಪೇನ ಮುಚ್ಯಂತೇ ದರ್ಶನಾದ್ಧ್ರುವಂ ।
ಅಮಾಸೋಮೌ ಯದಾ ಯುಕ್ತೌ ಸೋಮವತ್ಯಾಂ ತದಾ ಮುನೇ ॥೬೦॥
ಸ್ನಾನಂ ದಾನಂ ಚ ಯೋ ಧೀಮಾಂಜಪಂ ಹೋಮಂ ಸಮಾಚರೇತ್ ।
ಅಕ್ಷಯ್ಯಂ ತಸ್ಯ ತತ್ಸರ್ವಂ ಯಾವಚ್ಚಂದ್ರದಿವಾಕರೌ ॥ ೬೧ ॥
ತಿಲೋದಕಪ್ರದಾನೇನ ಪಿಂಡದಾನೇನ ಕಾರಿತಾ ।
ಅಕಾಲೇ ಕಾಲಿಕೀ ತೃಪ್ತಿಃ ಪಿತೄಣಾಂ ಚ ಯತೋ ಮತಾ ॥ ೬೨ ॥
ಸರ್ವತ್ರ ದುರ್ಲಭಾ ಸಿಪ್ರಾ ಸೋಮಂ ಸೋಮಗ್ರಹಸ್ತಥಾ ।
ಸೋಮೇಶ್ವರಃ ಸೋಮವಾರಃ ಸಕಾರಾಃ ಪಂಚ ದುರ್ಲಭಾಃ ॥ ೬೩ ॥
ಶಿಪ್ರಾಸೋಮಜಲಂ ವ್ಯಾಸ ಕೋಟಿತೀರ್ಥಫಲಪ್ರದಂ ।
ಅಮಾಸೋಮಸಮಾಯೋಗೇ ಪಿತೃತೀರ್ಥಸಮಂ ಸ್ಮೃತಂ ॥ ೬೪ ॥
ಅಮಾಯಾಂ ಸೋಮವಾರಶ್ಚೇದ್ವ್ಯತೀಪಾತೋ ಯದಾ ಭವೇತ್ ।
ಶತಗುಣಂ ಗಯಾಯಾಸ್ತು ಸೋಮವತ್ಯಾಂ ಪ್ರಕೀರ್ತಿತಂ ॥ ೬೫ ॥

---

ರಾಗುವರು. ಇದು ನಿಶ್ಚಯವು. ಎಲೈ ಮುನಿವರ್ಯನೆ! ಅಮಾವಾಸ್ಯೆಯು ಸೋಮವಾರದ ದಿವಸ ಬಂದಲ್ಲಿ ಈ ತೀರ್ಥದಲ್ಲಿ ಸ್ನಾನವನ್ನಾಗಲಿ, ದಾನವನ್ನಾಗಲಿ, ಜಪವನ್ನಾಗಲಿ, ಹೋಮವನ್ನಾಗಲಿ ಯಾವಬುದ್ಧಿಶಾಲಿಯು ಮಾಡುವನೊ, ಅವನ ಕಾರ್ಯವು ಸೂರ್ಯಚಂದ್ರರಿರುವವರೆಗೂ ಶಾಶ್ವತವಾಗಿ ಫಲವನ್ನು ಕೊಡುತ್ತಿರುವುದು.

೬೨. ಪಿತೃದೇವತೆಗಳನ್ನುದ್ದೇಶಿಸಿ ಅಕಾಲದಲ್ಲಿ (ಮೃತತಿಥಿಗಳಲ್ಲದ ದಿವಸಗಳಲ್ಲಿ) ಈ ತೀರ್ಥದ ಬಳಿಯಲ್ಲಿ ತಿಲೋದಕ ಮತ್ತು ಪಿಂಡಗಳ ದಾನಗಳನ್ನು ಮಾಡಿದರೂ, ಅವುಗಳು ಯಥಾಕಾಲದಲ್ಲಿ ಮಾಡಿದ ಕರ್ಮಗಳಂತೆಯೇ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುವೆಂದು ಹೇಳಲ್ಪಟ್ಟಿರುವುದು.

೬೩. ಸಿಪ್ರಾನದಿಯು ಎಲ್ಲರಿಗೂ ಲಭಿಸುವುದಲ್ಲ. ಸಿಪ್ರಾ. ಸೋಮರಸ, ಸೋಮಗ್ರಹ (ಚಂದ್ರಗ್ರಣ), ಸೋಮೇಶ್ವರ ಮತ್ತು ಸೋಮವಾರ—ಸಕಾರವು ಮೊದಲಾಗುವ ಈ ಐದೂ ಮನುಷ್ಯರಿಗೆ ಪರಮದುರ್ಲಭಗಳು.

೬೪. ಎಲೈ ವ್ಯಾಸನೆ! ಸಿಪ್ರಾಸೋಮತೀರ್ಥದ ಜಲವು ಕೋಟಿತೀರ್ಥಗಳ ಉದಕಕ್ಕೆ ಸಮಾನವೆನಿಸಿರುವುದು. ಅಮಾವಾಸ್ಯೆ—ಸೋಮವಾರಗಳು ಕೂಡಿದಂದು ಪಿತೃತೀರ್ಥಕ್ಕೆ ಸಮವೆಂದು ಹೇಳುವರು.

೬೫. ಅಮಾವಾಸ್ಯೆ, ಸೋಮವಾರ, ವ್ಯತೀಪಾತಗಳು ಮೂರೂ ಕೂಡಿದ ದಿನದಲ್ಲಿ ಸೋಮವತೀತೀರ್ಥವು ಗಯೆಗಿಂತಲೂ ನೂರರಷ್ಟು ಹೆಚ್ಚಿನ ಫಲವನ್ನು ಕೊಡುವುದೆಂದು ಪ್ರಖ್ಯಾತಿಯಿರುವುದು.

ಏವಂ ಸೋಮವತೀತೀರ್ಥಂ ಜಾತಮತ್ರ ಮಹಾಮುನೇ ॥ ೬೬ ॥
ಸೋಮಂ ದೃಷ್ಟ್ವಾಽಥ ಪತಿತಂ ಕ್ಷಿತೌ ಬ್ರಹ್ಮಾ ಜಗದ್ಗುರುಃ ।
ರಥೇ ತಂ ಸ್ಥಾಪಯಾಮಾಸ ಲೋಕಾನಾಂ ಹಿತಕಾಮ್ಯಯಾ ॥ ೬೭ ॥
ಸ ತು ವೇದಮಯೋ ವ್ಯಾಸ ಧರ್ಮಾಕ್ಷಃ ಸತ್ಯಸಂಗ್ರಹಃ ।
ಯುಕ್ತೋ ವಾಜಿಸಹಸ್ರೇಣ ಬ್ರಹ್ಮಣಾ ಪ್ರೇರಿತಸ್ತದಾ ॥ ೬೮ ॥
ದೃಷ್ಟ್ವಾ ಸೋಮಂ ತತೋ ದೇವಾ ರಥೇ ತಂ ಬ್ರಹ್ಮಣಾ ಯುತಂ ।
ತುಷ್ಟುವುಃ ಸರ್ವಭಾವೇನ ಹೃಷ್ಟಾಃ ಸರ್ವೇ ಸಮಾಹಿತಾಃ ॥ ೬೯ ॥
ತಸ್ಯ ಸಂಸ್ತೂಯಮಾನಸ್ಯ ತೇಜಃ ಸೋಮಸ್ಯ ಭಾಸ್ವರಂ ।
ಆಪ್ಯಾಯಮಾನಂ ತ್ರೀಂಲ್ಲೋಕಾನ್ಪಪಾತ ಧರಣೀತಲೇ ॥ ೭೦ ॥
ಬ್ರಹ್ಮಾ ತೇನ ರಥೇನಾಥ ಸಾಗರಾಂತಾಂ ವಸುಂಧರಾಂ ।
ತ್ರಿಃಸಪ್ತಕೃತ್ವೋಽತಿಶಯಾಚ್ಚಕಾರಾಽಬ್ಧಿಪ್ರದಕ್ಷಿಣಂ ॥ ೭೧ ॥
ತಸ್ಯ ತತ್ಪತಿತಂ ತೇಜೋ ವ್ಯಾಸ ಸೋಮಸ್ಯ ಶೀತಲಂ ।
ತದೇವೌಷಧಯೋ ದಿವ್ಯಾ ಜಾತಾ ಭುವಿ ಸುನಿರ್ಮಲಾಃ ।
ಯಾಭಿರ್ಧಾರ್ಯೋ ಹ್ಯಯಂ ಲೋಕಃ ಪ್ರಜಾಶ್ಚೈವ ಚತುರ್ವಿಧಾಃ॥ ೭೨ ॥

---

೬೬. ಮುನಿಶ್ರೇಷ್ಠನೆ! ಈ ರೀತಿ ಇಲ್ಲಿ ಸೋಮವತೀತೀರ್ಥವು ಉದ್ಭವವಾಯಿತು.

೬೭. ಸೋಮನು ಭೂಮಿಯಲ್ಲಿ ಬಿದ್ದುದನ್ನು ಕಂಡು ಲೋಕಗುರುವಾದ ಬ್ರಹ್ಮನು ಸಕಲಲೋಕಗಳಿಗೂ ಹಿತವನ್ನುಂಟುಮಾಡಲು ಆತನನನ್ನು ಒಂದು ದಿವ್ಯರಥದಲ್ಲಿ ಕುಳ್ಳಿರಿಸಿದನು.

೬೮. ವ್ಯಾಸನೆ! ಆ ರಥವು ಚತುರ್ವೇದಮಯವಾದುದು. ಧರ್ಮವೇ ಅದಕ್ಕೆ ಚಕ್ರಗಳ ಅಚ್ಚಾಗಿರುವುದು. ಸತ್ಯವೇ ಮೂಕಿಯ ಮರವು. ಸಾವಿರ ಕುದುರೆಗಳನ್ನು ಹೂಡಿದ ಆ ರಥವನ್ನು ಬ್ರಹ್ಮನೇ ನಡೆಸುತ್ತಿದ್ದನು.

೬೯. ಇಂತು ಬ್ರಹ್ಮದೇವನೊಡನೆ ರಥಾರೂಢನಾಗಿದ್ದ ಸೋಮನನ್ನು ಕಂಡು ಸಮಸ್ತದೇವತೆಗಳೂ ಒಟ್ಟುಗೂಡಿ ಸಂತೋಷದಿಂದಲೂ ಅನನ್ಯಭಕ್ತಿಯಿಂದಲೂ ಸ್ತೋತ್ರಮಾಡಿದರು.

೭೦-೭೧. ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟ ಸೋಮನ ಉಜ್ಜ್ವಲವಾದ ತೇಜಸ್ಸು ಮೂರು ಲೋಕಗಳನ್ನೂ ಪ್ರಶಾಂತಗೊಳಿಸುತ್ತ ಭೂಮಿಯಲ್ಲಿ ಬಿದ್ದಿತು. ಬಳಿಕ ಬ್ರಹ್ಮನು ಆ ರಥದಿಂದಲೇ ಸಮುದ್ರಪರ್ಯಂತವಾದ ಸಕಲಭೂಮಂಡಲವನ್ನೂ ಇಪ್ಪತ್ತೊಂದು ಸಲ ಮಹಾವೈಭವದಿಂದ ಪ್ರದಕ್ಷಿಣೆಮಾಡಿದನು.

೭೨. ಅಯ್ಯಾ ವ್ಯಾಸನೆ! ಭೂಮಿಗೆ ಬಿದ್ದ ಸೋಮನ ಶೀತಲವಾದ ತೇಜವೇ ದಿವ್ಯಗುಣ ಭರಿತಗಳೂ ಪರಿಶುದ್ಧಗಳೂ ಆದ ಔಷಧಿಗಳಾಗಿ ಭೂಮಿ

**ತುಷ್ಟೋಽಥ ಭಗವಾನ್ ಸೋಮೋ ಜಗತಃ ಸರ್ವದಾ ಮುನೇ ।**
**ದಶವರ್ಷಸಹಸ್ರಾಣಿ ತೇಪೇಽತಿದುಃಸಹಂ ತಪಃ ॥ ೭೩ ॥**
**ತತಸ್ತಸ್ಮೈ ದದೌ ವಾಕ್ಯಂ ಬ್ರಹ್ಮಾ ಲೋಕಪಿತಾಮಹಃ ।**
**ಬೀಜೌಷಧಾನಿ ವಿಪ್ರಾಣಾಂ ಸೋಮೋ ರಾಜಾ ಬಭೂವ ಹ ॥ ೭೪ ॥**
**ಸಪ್ತವಿಂಶತಿಂ ಸೋಮಾಯ ದಾಕ್ಷಾಯಣೀರ್ಮಹಾವ್ರತಾಃ ।**
**ಪತ್ನೀಃ ಪ್ರಾಚೇತಸೋ ದಕ್ಷೋ ದದೌ ನಕ್ಷತ್ರಸಂಜ್ಞಕಾಃ ॥ ೭೫ ॥**
**ಸ ತತ್ಪ್ರಾಪ್ಯ ಮಹದ್ರಾಜ್ಯಂ ಸೋಮೋ ಭಾರ್ಯಾಯುತಸ್ತದಾ ।**
**ಸಮಾರೇಭೇ ರಾಜಸೂಯಂ ಸಹಸ್ರಶತದಕ್ಷಿಣಂ ॥ ೭೬ ॥**
**ಹೋತಾಚ ಭಗವಾನತ್ರಿರಧ್ವರ್ಯುರ್ಭಗವಾನ್ ಭೃಗುಃ ।**
**ಹಿರಣ್ಯಗರ್ಭಶ್ಚೋದ್ಗಾತಾ ಬ್ರಹ್ಮಾ ಬ್ರಹ್ಮತ್ವಮೇಯಿವಾನ್ ॥ ೭೭ ॥**
**ಸದಸ್ಯೋ ಭಗವಾನ್ವಿಷ್ಣುಃ ಸನಕಾದಿಮುಖ್ಯೈರ್ಯುತಃ ।**
**ದದೌ ಸ ದಕ್ಷಿಣಾಂ ಸೋಮಸ್ತ್ರೀಂಲ್ಲೋಕಾನ್ ಸುಸಮಾಹಿತಃ ॥ ೭೮ ॥**

---

ಯಲ್ಲಿ ಹರಡಿ ಕೊಂಡುವು. ಅವುಗಳಿಂದಲೇ ಈ ಪ್ರಪಂಚವೂ, ನಾಲ್ಕು ವಿಧಗಳಾದ ಸಕಲಪ್ರಾಣಿಗಳೂ ಧರಿಸಲ್ಪಟ್ಟಿರುವುವು.

೭೩. ಮುನಿಯೆ! ಯಾವಾಗಲೂ ಭೂಮಿಯ ವಿಷಯದಲ್ಲಿ ಸಂತುಷ್ಟನಾದ ಭಗವಾನ್ ಸೋಮನು ಹತ್ತು ಸಾವಿರ ವರ್ಷಗಳವರೆಗೂ ಅತ್ಯಂತ ದುಸ್ಸಹವಾದ ತಪಸ್ಸನ್ನು ಮಾಡಿದನು.

೭೪. ಆಗ ಲೋಕಪಿತಾಮಹನೆನಿಸಿದ ಚತುರ್ಮುಖನು ಆತನಿಗೆ ವರವನ್ನು ಕೊಟ್ಟನು. ಅಂದಿನಿಂದ ಸೋಮನು ಬೀಜಗಳಿಗೂ, ಔಷಧಿಗಳಿಗೂ, ಬ್ರಾಹ್ಮಣರಿಗೂ ಅಧಿಪತಿಯಾದನು.

೭೫. ಪ್ರಚೇತಪುತ್ರನಾದ ದಕ್ಷಪ್ರಜಾಪತಿಯು ತನ್ನ ಪುತ್ರಿಯರೂ, ಮಹಾಪತಿವ್ರತೆಯರೂ ಆದ ನಕ್ಷತ್ರಗಳ ಹೆಸರುಗಳುಳ್ಳ ಇಪ್ಪತ್ತೇಳು ಕನ್ಯೆಯರನ್ನು ಸೋಮನಿಗೆ ಧಾರೆಯೆರೆದು ಕೊಟ್ಟನು.

೭೬. ಮಹತ್ತರವಾದ ಆಧಿಪತ್ಯವನ್ನು ಪಡೆದ ಸೋಮನು ಬಳಿಕ ಆ ಪತ್ನಿಯರೊಡಗೂಡಿ ಲಕ್ಷದಕ್ಷಿಣೆಗಳಿಂದ ಉಪಯುಕ್ತವಾದ ರಾಜಸೂಯ ಯಾಗವನ್ನು ಪ್ರಾರಂಭಿಸಿದನು.

೭೭. ಆ ಯಜ್ಞದಲ್ಲಿ ಅತ್ರಿಮಹರ್ಷಿಯೇ ಹೋತೃವು. ಭಗವಂತನಾದ ಭೃಗುವು ಅಧ್ವರ್ಯುವಾದನು. ಹಿರಣ್ಯಗರ್ಭನೇ ಉದ್ಗಾತೃವಾದನು. ಬ್ರಹ್ಮದೇವನು ಬ್ರಹ್ಮತ್ವವನ್ನಲಂಕರಿಸಿದನು.

೭೮. ಸನಕಾದಿಮಹರ್ಷಿಗಳಿಂದ ಪರಿವೃತನಾದ ಶ್ರೀಮನ್ನಾರಾಯಣನೇ ಸದಸ್ಯನಾದನು. ಸೋಮನು ಸಮಾಹಿತಮನಸ್ಸಿನಿಂದ ಮೂರುಲೋಕಗಳನ್ನೂ ಆತನಿಗೆ ದಕ್ಷಿಣೆಯನ್ನಾಗಿ ಸಮರ್ಪಿಸಿದನು.

ಸಿನೀವಾಲೀ ಕುಹೂಶ್ಚೈವ ಧೃತಿಃ ಪುಷ್ಟಿಃ ಪ್ರಭಾ ವಸುಃ ।
ಕೀರ್ತಿರ್ಧೃತಿಶ್ಚ ಲಕ್ಷ್ಮೀಶ್ಚ ತಂ ದೇವ್ಯೋ ದಿವ್ಯಾಃ ಸಿಷೇವಿರೇ ॥ ೨೯ ॥
ಪ್ರಾಪ್ಯಾವಭೃಥಮವ್ಯಗ್ರಃ ಸರ್ವದೇವರ್ಷಿಪೂಜಿತಃ ।
ಅತೀವ ರಾಜತೇ ಚಂದ್ರೋ ದಶಧಾ ಭಾಸಯನ್ದಿಶಃ ॥ ೩೦ ॥
ತಸ್ಯ ತತ್ಪ್ರಾಪ್ಯ ದುಷ್ಪ್ರಾಪ್ಯಮೈಶ್ವರ್ಯಮೃಷಿಸಂಸ್ಕೃತಂ ।
ವಿಬಭ್ರಾಮ ಮತಿರ್ವ್ಯಾಸ ವಿನಯಾದ್ಯಮಪಾಸ್ಯ ಚ ॥ ೩೧ ॥
ಬೃಹಸ್ಪತೇಸ್ತದಾ ಭಾರ್ಯಾಂ ತಾರಾನಾಮ್ನೀಂ ಯಶಸ್ವಿನೀಂ ।
ಜಹಾರ ತಮಸಾ ಸಾಧ್ವೀಮವಮಾನ್ಯಾಂಗಿರಃಸುತಂ ॥ ೩೨ ॥
ವಾಚ್ಯಮಾನಸ್ತದಾ ಸೋಮೋ ದೇವೈರ್ದೇವರ್ಷಿಭಿಸ್ತಥಾ ।
ನೈವ ವ್ಯಸರ್ಜಯತ್ತಾರಾಂ ತಸ್ಮಾ ಆಂಗಿರಸಾಯ ಚ ॥ ೩೩ ॥
ಬೃಹಸ್ಪತೇಸ್ತತಃ ಪಕ್ಷಂ ಶಕ್ರೋ ಜಗ್ರಾಹ ಕೋಪತಃ ।
ಸ ಹಿ ಶಿಷ್ಯೋ ಮಹಾತೇಜಾ ಗುರೋಃ ಪೂರ್ವಂ ಬೃಹಸ್ಪತೇಃ ॥ ೩೪ ॥
ತತೋ ಯುದ್ಧಮಭೂತ್ತತ್ರ ಸುಘೋರಂ ಶಕ್ರಸೋಮಯೋಃ ।
ದೇವಾನಾಂ ದಾನವಾನಾಂ ಚ ವ್ಯಾಸ ತ್ರಾಸಕರಂ ಮಹತ್ ॥ ೩೫ ॥

---

೨೯. ಸಿನೀವಾಲೀ, ಕುಹೂ, ಧೃತಿ, ಪುಷ್ಟಿ, ಪ್ರಭಾ, ವಸು, ಕೀರ್ತಿ, ಲಕ್ಷ್ಮೀ ಮುಂತಾದ ದೇವಿಯರು ಆತನನ್ನು ಸೇವಿಸುತ್ತಿದ್ದರು.

೩೦. ಜಾಗರೂಕನಾಗಿ ಯಾಗವನ್ನು ಮುಗಿಸಿ ಅವಭೃಥಸ್ನಾನವನ್ನು ಮುಗಿಸಿಕೊಂಡು ಸಮಸ್ತದೇವತೆಗಳಿಂದಲೂ, ಮಹರ್ಷಿಗಳಿಂದಲೂ ಪೂಜಿತ ನಾಗಿ ಆ ಚಂದ್ರನು ತನ್ನ ಪ್ರಕಾಶದಿಂದ ಹತ್ತು ದಿಕ್ಕುಗಳನ್ನೂ ಬೆಳಗಿಸುತ್ತಿದ್ದನು.

೩೧. ವ್ಯಾಸನೆ! ಇಂತು ದುಷ್ಪ್ರಾಪ್ಯವೂ ಮಹರ್ಷಿಗಳಿಂದ ಸಂಪಾದಿತವೂ ಆದ ಈ ಐಶ್ವರ್ಯವನ್ನು ಹೊಂದಿದ ಆತನು ವಿನಯಾದಿ ಸದ್ಗುಣಗಳನ್ನು ಕಳೆದುಕೊಂಡು ಕಾಲಾನಂತರದಲ್ಲಿ ಬುದ್ಧಿಭ್ರಂಶವನ್ನೂ ಹೊಂದಿದನು.

೩೨. ತಮೋಗುಣವಿಶಿಷ್ಟನಾಗಿ ಅವನು ಬೃಹಸ್ಪತಿಯನ್ನು ತಿರಸ್ಕರಿಸಿ ಕೀರ್ತಿವಂತಳೂ, ಪತಿವ್ರತೆಯೂ ಆದ ತಾರೆಯೆಂಬ ಹೆಸರುಳ್ಳ ಆತನ ಮಡದಿ ಯನ್ನು ಅಪಹರಿಸಿದನು.

೩೩–೩೪. ದೇವರ್ಷಿಗಳು ದೇವತೆಗಳೂ ಬಹುವಾಗಿ ನಿಂದಿಸಿದರೂ ಸೋಮನು ತಾರೆಯನ್ನು ಬೃಹಸ್ಪತಿಗೆ ಹಿಂದಿರುಗಿ ಕೊಡಲಿಲ್ಲ. ಈ ವ್ಯವಹಾರದಲ್ಲಿ ಇಂದ್ರನು ಕೋಪಗೊಂಡು ಬೃಹಸ್ಪತಿಯ ಪಕ್ಷವನ್ನು ವಹಿಸಿಕೊಂಡನು. ಮಹಾ ಮಹಿಮನಾದ ಆತನು ಹಿಂದೆ ಬೃಹಸ್ಪತ್ಯಾಚಾರ್ಯರ ಶಿಷ್ಯನಾಗಿದ್ದನು.

೩೫. ಆಗ ಮಹೇಂದ್ರನಿಗೂ ಸೋಮನಿಗೂ ಭಯಂಕರವಾದ ಯುದ್ಧವು ಸಂಭವಿಸಿತು. ದೇವತೆಗಳೂ ದಾನವರೂ ಈ ಯುದ್ಧವನ್ನು ಕಂಡು ನಡುಗು ತ್ತಿದ್ದರು.

**ಸರ್ವೇ ಭೀತಾಸ್ತತೋ ದೇವಾ ಬ್ರಹ್ಮಾಣಂ ಶರಣಂ ಗತಾಃ ।**
**ಅಗ್ರತೋ ಬ್ರಹ್ಮಣೋ ಯುದ್ಧಂ ಕಥಿತಂ ಶಕ್ರಸೋಮಯೋಃ ॥ ೮೬ ॥**
**ದೇವಾನಾಂ ವಚನಂ ಶ್ರುತ್ವಾ ಸಾರ್ಧಂ ದೇವೈಃ ಪಿತಾಮಹಃ ।**
**ಆಗತ್ಯ ಯುದ್ಧಭೂಮಿಂ ಸೋಽವಾರಯದ್ದೇವದಾನವಾನ್ ॥ ೮೭ ॥**
**ವಾರಿತಾಸ್ತೇ ಸ್ಥಿತಾಸ್ತತ್ರ ಯುದ್ಧಂ ತ್ಯಕ್ತ್ವಾ ಸುರಾಽಸುರಾಃ ।**
**ತಾರಾಮಾದಾಯ ಸ ತದಾ ದದಾವಾಂಗಿರಸೇ ದ್ವಿಜೇ ॥ ೮೮ ॥**
**ತಾಮಂತಃಪ್ರಸವಾಂ ದೃಷ್ಟ್ವಾ ಪ್ರಾಹ ಭಾರ್ಯಾಂ ಬೃಹಸ್ಪತಿಃ ।**
**ಮದೀಯಾಯಾಂ ನ ತೇ ಯೋನ್ಯಾಂ ಗರ್ಭೋ ಧಾರ್ಯಃ ಕಥಂಚನ ॥**
**ಉತ್ಸಸರ್ಜ ತತಸ್ತಾರಾ ಕುಮಾರಂ ದೇವರೂಪಿಣಂ ।**
**ಇಷೀಕಾಸ್ತ್ರಂ ಸಮಾಸಾದ್ಯ ಜ್ವಲಂತಮಿವ ಪಾವಕಂ ॥ ೯೦ ॥**
**ಸ ತೇಜೋ ಜಾತಮಾತ್ರೋಽಪಿ ದೇವಾನಾಮಾಕ್ಷಿಪಚ್ಛಿಶುಃ ।**
**ತತಃ ಸಂಶಯಮಾಪನ್ನಾ ಊಚುಸ್ತಾರಾಂ ದಿವೌಕಸಃ ॥ ೯೧ ॥**

---

೮೬. ದೇವತೆಗಳೆಲ್ಲರೂ ಭಯಗೊಂಡು ಚತುರ್ಮುಖನನ್ನು ಶರಣು ಹೊಕ್ಕರು. ಆತನಿದಿರಿನಲ್ಲಿ ಇಂದ್ರಚಂದ್ರರಿಗೆ ನಡೆಯುತ್ತಿದ್ದ ಯದ್ಧದ ವೃತ್ತಾಂತವನ್ನು ಆಮೂಲಾಗ್ರವಾಗಿ ತಿಳಿಸಿದರು.

೮೭. ದೇವತೆಗಳ ಮಾತನ್ನು ಕೇಳಿ ಅವರೊಡನೆಯೇ ಕೂಡಿ ಚತುರ್ಮುಖನು ಯುದ್ಧಭೂಮಿಗೆ ಬಂದು ಯುದ್ಧಮಾಡುತ್ತಿದ್ದ ದೇವದಾನವರನ್ನು ತಡೆದು ನಿಲ್ಲಿಸಿದನು.

೮೮. ಬ್ರಹ್ಮನಿಂದ ವಾರಿತರಾದ ದೇವದಾನವರು ಯುದ್ಧವನ್ನು ನಿಲ್ಲಿಸಿ ತಟಸ್ಥರಾಗಿ ನಿಂತರು. ಬ್ರಹ್ಮನು ತಾರೆಯನ್ನು ತಂದು ಬ್ರಾಹ್ಮಣೋತ್ತಮನಾದ ಬೃಹಸ್ಪತಿಗೆ ಒಪ್ಪಿಸಿದನು.

೮೯. ಆಕೆಯು ಗರ್ಭವತಿಯಾಗಿದ್ದುದನ್ನು ಕಂಡು ಬೃಹಸ್ಪತಿಯು "ನನಗೆ ಸೇರಿದ ಈ ಯೋನಿಯಲ್ಲಿ ಗರ್ಭವನ್ನು ನೀನು ಧರಿಸಿಕೂಡದು" ಎಂಬುದಾಗಿ ಹೇಳಿದನು.

೯೦. ಆಗ ತಾರೆಯು ಇಷೀಕಾಸ್ತ್ರ ಸಹಾಯದಿಂದ ಆ ಗರ್ಭವನ್ನು ಹೊರಹಾಕಿದಳು. ಒಡನೆಯೆ ದೇವಸ್ವರೂಪನೂ, ಅಗ್ನಿಯಂತೆ ತೇಜೋವಂತನೂ ಆದ ಕುಮಾರನೊಬ್ಬನು ಉದಿಸಿದನು.

೯೧. ಹುಟ್ಟಿದ ಕ್ಷಣದಲ್ಲಿಯೇ ಆ ಮಗುವು ಸಕಲದೇವತೆಗಳ ತೇಜಸ್ಸನ್ನೂ ಧಿಕ್ಕರಿಸುತ್ತಿತ್ತು. ಅದನ್ನು ಕಂಡು ದೇವತೆಗಳೆಲ್ಲರೂ ಸಂಶಯಾವಿಷ್ಟ ಮನಸ್ಸುಳ್ಳವರಾಗಿ ಪ್ರಶ್ನೆಮಾಡಿದರು.

ಕಸ್ಯಾಽಯಂ ಬ್ರೂಹಿ ಸುಭಗೇ ಸೋಮಸ್ಯಾಽಥ ಬೃಹಸ್ಪತೇಃ ।
ನಾಚಚಕ್ಷೇ ತು ದೇವಾನಾಂ ವೇಧಾಃ ಪಪ್ರಚ್ಛ ತಾಂ ಪುನಃ ॥ ೯೨ ॥
ಯದತ್ರ ಸತ್ಯಂ ತದ್ಬ್ರೂಹಿ ತಾರೇ ಕಸ್ಯ ಸುತೋ ಹ್ಯಯಂ ।
ಸಾ ಪ್ರಾಂಜಲಿರುವಾಚೇದಂ ಬ್ರಹ್ಮಾಣಂ ವರದಂ ವಿಭುಂ ॥ ೯೩ ॥
ಸೋಮಸ್ಯೇತಿ ರಹಃ ಸೋಽಯಂ ಕುಮಾರೋ ದೇವಸನ್ನಿಭಃ ।
ಸೋಮಸ್ಯ ತಂ ಸುತಂ ಜ್ಞಾತ್ವಾ ಪರಿಷ್ವಜ್ಯ ಪಿತಾಮಹಃ ॥ ೯೪ ॥
ಬುಧ ಇತ್ಯಕರೋನ್ನಾಮ ತಸ್ಯ ಪುತ್ರಸ್ಯ ವೈ ತದಾ ।
ಪರದಾರಾಽಪಹಾರಾಚ್ಚ ಯತ್ಪಾಪಂ ತೇನ ದುಃಸಹಂ ॥ ೯೫ ॥
ತೇನ ಸೋಮೋಽಭವತ್ಕುಷ್ಠೀ ಕ್ಷಯರೋಗಯುತಸ್ತದಾ ।
ತತೋ ರಾಜ್ಯೇ ಸ್ವಕಂ ಪುತ್ರಂ ಸ್ಥಾಪಯಿತ್ವಾ ಯಥಾವಿಧಿ ॥ ೯೬ ॥
ಅವಂತೀಮಾಜಗಾಮಾಶು ಸೋಮೋ ದೇವದಿದೃಕ್ಷಯಾ ।
ಸೋಮಾಽಹೇ ಸೋಮವತ್ಯಾಂ ಚ ಅಮಾಯೋಗೇ ಜಿತೇಂದ್ರಿಯಃ॥೯೭॥
ಸ್ನಾತ್ವಾ ಸಂಪೂಜಯಾಮಾಸ ಸೋಮಃ ಸೋಮೇಶ್ವರಂ ತತಃ ।
ತಸ್ಯ ಭಕ್ತ್ಯಾ ಚ ಸಂತುಷ್ಟಃ ಪ್ರಾಹ ಸೋಮಂ ಮಹೇಶ್ವರಃ ॥ ೯೮ ॥

---

೯೨. "ಮಂಗಳಾಂಗಿಯೆ! ಈ ಮಗುವು ಚಂದ್ರನದೊ ಅಥವ ಬೃಹಸ್ಪತಿಯದೊ?" ಎಂದು ಕೇಳಿದ ದೇವತೆಗಳಿಗೆ ಆಕೆಯು ಪ್ರತ್ಯುತ್ತರವನ್ನು ಕೊಡದಿರಲು ಪುನಃ ಬ್ರಹ್ಮದೇವನೇ ಆಕೆಯನ್ನು ಕೇಳಿದನು.

೯೩. "ಎಲೌ ತಾರೆಯೆ! ಈ ವಿಷಯದಲ್ಲಿ ನಿಜವನ್ನು ಹೇಳು. ಇವನು ಯಾರ ಮಗನು?" ವರಪ್ರದನೂ ಲೋಕಪಿತಾಮಹನೂ ಆದ ಬ್ರಹ್ಮದೇವನಿಗೆ ಆಕೆಯು ಕೈಮುಗಿದು ಇಂತೆಂದಳು.

೯೪–೯೮. "ದೇವಸದೃಶನಾದ ಈ ಕುಮಾರನು ಚಂದ್ರನ ಪುತ್ರನೇ" ಎಂದು ಏಕಾಂತದಲ್ಲಿ ಹೇಳಲು ಆ ಮಗುವು ಸೋಮನ ಪುತ್ರನೆಂದು ತಿಳಿದು ಚತುರ್ಮುಖನು ಅದನ್ನು ಅಪ್ಪಿಕೊಂಡು ಅದಕ್ಕೆ ಆಗಲೇ ಬುಧನೆಂಬ ಹೆಸರಿನಿಂದ ನಾಮಕರಣವನ್ನು ಮಾಡಿದನು. ಪರಸ್ತ್ರೀಯರನ್ನು ಅಪಹರಿಸಿದುದರಿಂದ ಸೋಮನಿಗೆ ಮಹತ್ತರವಾದ ಪಾತಕವುಂಟಾಯಿತು. ಅದರ ಫಲವಾಗಿ ಅವನು ಕುಷ್ಠ ಮತ್ತು ಕ್ಷಯ ರೋಗಗಳುಳ್ಳವನಾದನು. ಆಗ ಸೋಮನು ಯಥಾವಿಧಿಯಾಗಿ ಬುಧನಿಗೆ ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿ ಸಿಂಹಾಸನದಲ್ಲಿ ಕುಳ್ಳಿರಿಸಿ ದೇವದೇವನಾದ ಮಹಾಕಾಲನನ್ನು ನೋಡಲು ಅವಂತೀದೇಶಕ್ಕೆ ಬಂದನು. ಸೋಮವಾರವೂ, ಅಮಾವಾಸ್ಯೆಯೂ ಕೂಡಿದ ದಿವಸದಲ್ಲಿ ಜಿತೇಂದ್ರಿಯನಾಗಿ ಸೋಮವತೀತೀರ್ಥದಲ್ಲಿ ಸ್ನಾನವನ್ನು ಮಾಡಿ ಸೋಮನು ಸೋಮೇಶ್ವರವೆಂಬ ಲಿಂಗವನ್ನು ಸ್ಥಾಪಿಸಿ ಪೂಜಿಸಿದನು. ಆತನ ಭಕ್ತಿಗೆ ಸಂತೋಷಗೊಂಡ ಮಹೇಶ್ವರನು ಇಂತೆಂದನು.

ಮತ್ಪ್ರಸಾದಾದ್ವಪುಃ ಕಾಂತಂ ತವ ಸೋಮ ಭವಿಷ್ಯತಿ ।
ಸೋಮೇಶ್ವರಮಿತಿಖ್ಯಾತಂ ಭುಕ್ತಿಮುಕ್ತಿಪ್ರದಾಯಕಂ ॥ ೯೯ ॥
ಏವಂ ವ್ಯಾಸ ತು ತತ್ತೀರ್ಥಂ ಲಿಂಗಂ ಚೈವಾಽತಿದುರ್ಲಭಂ ।
ಕಥಿತಂ ತಥ್ಯಭಾವೇನ ಮಯಾ ತುಷ್ಟೇನ ಸಾಂಪ್ರತಂ ॥ ೧೦೦ ॥
ಶ್ರಾವಣಂ ಪ್ರಾಪ್ಯ ಯೋ ಮಾಸಂ ಸೋಮನಾಥಂ ಜಿತೇಂದ್ರಿಯಃ ।
ನಿತ್ಯಂ ಪಶ್ಯೇನ್ನರೋ ವ್ಯಾಸ ತಸ್ಯ ಪುಣ್ಯಫಲಂ ಶೃಣು ॥ ೧೦೧ ॥
ಸೌರಾಷ್ಟ್ರೇ ಸೋಮನಾಥಸ್ಯ ಪೂಜಾಯಾಃ ಪ್ರತ್ಯಹಂ ಫಲಂ ।
ಲಭತೇ ಸ ನರೋ ವ್ಯಾಸ ನಾಽತ್ರ ಕಾರ್ಯಾ ವಿಚಾರಣಾ ॥ ೧೦೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಸೋಮವತೀ ತೀರ್ಥಮಾಹಾತ್ಮ್ಯವರ್ಣನಂ"ನಾಮಾಷ್ಟಾವಿಂಶೋಽಧ್ಯಾಯಃ

---

೯೯. "ಅಯ್ಯಾ ಸೋಮನೆ! ನನ್ನ ವರಪ್ರಸಾದದಿಂದ ನಿನ್ನ ಶರೀರವು ಕಾಂತಿಯುಕ್ತವಾಗಿರುವುದು. ಈ ಲಿಂಗವು ಸೋಮೇಶ್ವರವೆಂದು ಪ್ರಖ್ಯಾತಿಯನ್ನು ಪಡೆದು ಭಕ್ತರಿಗೆ ಭುಕ್ತಿಮುಕ್ತಿಗಳನ್ನು ಕೊಡುವುದು."

೧೦೦. ವ್ಯಾಸನೆ! ಇಂತು ನಿನಗೆ ಆ ತೀರ್ಥದ ಮತ್ತು ಅತ್ಯಂತ ದುರ್ಲಭವಾದ ಆ ಮಹಾಲಿಂಗದ ಚರಿತ್ರೆಯನ್ನು ಸಂತೋಷದಿಂದಲೂ ಊಹಾಪೋಹವಿಲ್ಲದೆಯೂ ಈಗ ಹೇಳಿರುವೆನು.

೧೦೧. ವ್ಯಾಸಮುನಿಯೆ! ಶ್ರಾವಣಮಾಸವು ಬರಲು ಯಾವನು ಜಿತೇಂದ್ರಿಯನಾಗಿ ನಿತ್ಯವೂ ಸೋಮೇಶ್ವರನ ದರ್ಶನವನ್ನು ತೆಗೆದುಕೊಳ್ಳುವನೊ, ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು.

೧೦೨. ಸೌರಾಷ್ಟ್ರದೇಶದಲ್ಲಿರುವ ಸೋಮನಾಥೇಶ್ವರನನ್ನು ನಿತ್ಯವೂ ಪೂಜಿಸಿದ ಫಲವನ್ನು ಆ ಮಾನವನು ಪಡೆಯುವನು. ಎಲೈ ವ್ಯಾಸನೆ! ಈ ವಿಷಯದಲ್ಲಿ ಸಂದೇಹಪಡಬೇಕಾದುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಸೋಮವತೀತೀರ್ಥಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

# ಅಥೈಕೋನತ್ರಿಂಶೋಽಧ್ಯಾಯಃ

## ನರಕಕಥನಂ

ಸನತ್ಕುಮಾರ ಉವಾಚ :—

ತೀರ್ಥಸ್ಯಾಽನರಕಸ್ಯಾಽಸ್ಯ ಮಾಹಾತ್ಮ್ಯಂ ಶೃಣು ಸಾಂಪ್ರತಂ ।
ತೀರ್ಥೇ ಚಾಽನರಕೇ ಸ್ನಾತ್ವಾ ದೃಷ್ಟ್ವಾ ದೇವಂ ಮಹೇಶ್ವರಂ ।
ನ ಪಶ್ಯೇನ್ನರಕಂ ಕ್ವಾಽಪಿ ಯದ್ಯಪಿ ಬ್ರಹ್ಮಹಾ ಭವೇತ್ ॥ ೧ ॥

ವ್ಯಾಸ ಉವಾಚ :—

ಕಿಯಂತೋ ನರಕಾಸ್ತಾತ ಕಸ್ಮಿನ್ ಸ್ಥಾನೇ ಪ್ರತಿಷ್ಠಿತಾಃ ।
ಪತಂತಿ ಕೇನ ಪಾಪೇನ ಪಾಪಿನಸ್ತೇಷು ದುಃಖಿತಾಃ ॥ ೨ ॥
ತತ್ಕಥಂ ಪ್ರಾಣಿನಸ್ತತ್ರ ಗಚ್ಛಂತಿ ಪಾಪಕಾರಿಣಃ ।
ಏತತ್ಸರ್ವಂ ಸಮಾಖ್ಯಾಹಿ ಯದಿ ತುಷ್ಟೋಽಸಿ ಮೇ ಪ್ರಭೋ ॥ ೩ ॥

ಸನತ್ಕುಮಾರ ಉವಾಚ :—

ಶೃಣುಷ್ವ ನರಕಾನ್ ವ್ಯಾಸ ಯಾವಂತೋ ಯತ್ರ ಸಂಸ್ಥಿತಾಃ ।
ನ ಲಭ್ಯಂತೇ ಯಥಾ ಚೈತೇ ಸತ್ಯಮೇತದ್ವದಾಮಿ ತೇ ॥ ೪ ॥

---

## ಕನ್ನಡದ ಅನುವಾದ

### ನರಕಮಾಹಾತ್ಮ್ಯಕಥನ

೧. ಸನತ್ಕುಮಾರನು ಹೇಳುತ್ತಾನೆ:—ಇನ್ನು ಅನರಕವೆಂಬ ತೀರ್ಥದ ಮಾಹಾತ್ಮ್ಯವನ್ನು ಕೇಳು. ಈ ಅನರಕತೀರ್ಥದಲ್ಲಿ ಮಿಂದು ಮಹೇಶ್ವರನನ್ನು ನೋಡಿದ ಮನುಜನು ಬ್ರಹ್ಮಹತ್ಯೆಯನ್ನು ಮಾಡಿದವನಾಗಿದ್ದರೂ ಎಂದಿಗೂ ನರಕವನ್ನು ನೋಡುವುದಿಲ್ಲ.

೨. ವ್ಯಾಸನು ಹೇಳುತ್ತಾನೆ:—ಮಹಾಮುನಿಯೆ! ಈ ನರಕಗಳೆಷ್ಟಿರುವುವು? ಎಲ್ಲಿ ಪ್ರತಿಷ್ಠಿತಗಳಾಗಿರುವುವು? ಪಾಪಿಗಳಾದವರು ಯಾವ ಪಾತಕಗಳನ್ನು ಮಾಡಿ ಅವುಗಳಲ್ಲಿ ದುಃಖಗಳನ್ನನುಭವಿಸುವರು?

೩. ಪಾಪಿಗಳಾದ ಜೀವರು ನರಕಗಳಿಗೆ ಹೋಗುವುದು ಹೇಗೆ? ಅಯ್ಯಾ ಮುನಿವರ್ಯನೆ! ನನ್ನಲ್ಲಿ ನಿನಗೆ ಪ್ರೀತಿಯಿರುವುದಾದರೆ ಇವುಗಳೆಲ್ಲವನ್ನೂ ಚೆನ್ನಾಗಿ ವಿವರಿಸಿಹೇಳುವವನಾಗು.

೪. ಸನತ್ಕುಮಾರನು ಹೇಳುತ್ತಾನೆ—ವ್ಯಾಸನೆ! ನರಕಗಳು ಎಷ್ಟಿರುವುವೆಂಬುದನ್ನೂ ಎಲ್ಲಿ ನೆಲಸಿರುವುವೆಂಬುದನ್ನೂ ಹೇಳುವೆನು. ಇವುಗಳಲ್ಲಿ ಬೀಳದಿರುವುದಕ್ಕೆ ಮಾಡಬೇಕಾದ ಉಪಾಯವನ್ನೂ ಯಥಾರ್ಥವಾಗಿ ತಿಳಿಸುವೆನು, ಕೇಳು.

ಪಾತಾಲನಿಲಯಾಃ ಸರ್ವೇ ವಿಖ್ಯಾತಾ ದುಃಖದಾಃ ಸದಾ ।
ಪುಣ್ಯಸ್ಲಾವೇನ ತೇ ಸರ್ವೇ ತಿರ್ಯಗ್ಯಾಂತಿ ಸ್ವಕರ್ಮಭಿಃ ॥ ೫ ॥
ರೌರವಃ ಸೂಕರೋ ರೌದ್ರಸ್ತೌಲೋ ವಿನಶಕಸ್ತಥಾ ।
ತಪ್ತಕುಂಭಸ್ತು ತಪ್ತಾಯೋ ಮಹಾಜ್ವಾಲಸ್ತಥೈವ ಚ ॥ ೬ ॥
ಕುಂಭೀಪಾಕಃ ಕ್ರಕಚನಸ್ತಥಾ ದೇವಾಽತಿದಾರುಣಃ ।
ಕೃಮಿಭುಕ್ತಿಶ್ಚ ರಕ್ತಾಖ್ಯೋ ಲಾಲಾಭಕ್ಷಶ್ಚ ಗಂಡಕಃ ॥ ೭ ॥
ಅಧೋಮುಖಶ್ಚಾಽಸ್ಥಿಭಂಗೋ ಯಂತ್ರಪೀಡನಕಸ್ತಥಾ ।
ಸಂದಂಶೋ ರುಧಿರಾಂಗಶ್ಚ ಶ್ವಭೋಜ್ಯಶ್ಚ ಕುಭೋಜನಃ ॥ ೮ ॥
ಇತ್ಯೇವಮಾದಯಃ ಸರ್ವೇ ನರಕಾ ಭೃಶದಾರುಣಾಃ ।
ಯಮಸ್ಯ ವಿಷಯೇ ಸಂತಿ ಸ್ಮೃತಾ ಹಿ ಭಯದಾಯಿನಃ ॥ ೯ ॥
ಪತಂತಿ ಪುರುಷಾಸ್ತೇಷು ಪಾಪಕರ್ಮರತಾಶ್ಚ ಯೇ ।
ಪತಿತಾಶ್ಚ ಪ್ರಪಚ್ಯಂತೇ ನರಾಃ ಕರ್ಮಾಽನುರೂಪತಃ ॥ ೧೦ ॥
ಯಾತನಾಭಿರ್ವಿಚಿತ್ರಾಭೀ ರೌದ್ರಕರ್ಮಕ್ಷಯಾದ್ಭೃಶಂ ।
ಸುಗಾಢಂ ಹಸ್ತಯೋರ್ಬದ್ಧಾಸ್ತಪ್ತಶೃಂಖಲಯಾ ನರಾಃ ॥ ೧೧ ॥

---

೫. ಈ ನರಕಗಳೆಲ್ಲವೂ ಪಾತಾಳಲೋಕದಲ್ಲಿರುವುವು. ಯಾವಾಗಲೂ ದುಃಖದಾಯಕಗಳಾಗಿರುವುವು. ಪುಣ್ಯವು ಕ್ಷೀಣವಾಗಲು ತಮ್ಮ ಕರ್ಮಫಲಗಳನ್ನನುಭವಿಸಲು ಜೀವರೆಲ್ಲರೂ ಅವುಗಳಿಗೆ ಇಳಿದು ಹೋಗುವರು.

೬-೮. ರೌರವ, ಸೂಕರ, ರೌದ್ರ, ತೌಲ, ವಿನಶಕ, ತಪ್ತಕುಂಭ, ತಪ್ತಾಯ, ಮಹಾಜ್ವಾಲ, ಕುಂಭೀಪಾಕ, ಕ್ರಕಚನ, ದೇವಾತಿದಾರುಣ, ಕೃಮಿಭುಕ್ತಿ, ರಕ್ತಾಖ್ಯ, ಲಾಲಾಭಕ್ಷ, ಗಂಡಕ, ಅಧೋಮುಖ, ಅಸ್ಥಿಭಂಗ, ಯಂತ್ರಪೀಡನಕ, ಸಂದಂಶ, ರುಧಿರಾಂಗ, ಶ್ವಭೋಜ್ಯ, ಕುಭೋಜನ;

೯. ಇವೇ ಮೊದಲಾಗಿ ಅತ್ಯಂತ ಭಯಂಕಗಳಾದ ಸಕಲ ನರಕಗಳೂ ಯಮಧರ್ಮನ ರಾಜ್ಯದಲ್ಲಿರುವುವು. ಅವುಗಳ ಹೆಸರುಗಳನ್ನು ಹೇಳುವುದಕ್ಕೂ ಭಯವುಂಟಾಗುವುದು.

೧೦. ಯಾವ ಪುರುಷರು ಪಾಪಕರ್ಮಗಳಲ್ಲಿ ನಿರತರಾಗಿರುವರೊ, ಅವರೆಲ್ಲರೂ ಅವುಗಳಲ್ಲಿ ಬೀಳುವರು. ಪತಿತರಾದ ನರರೂ ತಮ್ಮ ತಮ್ಮ ಕರ್ಮಗಳಿಗನುಗುಣಗಳಾದ ದುಃಖಗಳನ್ನು ಅನುಭವಿಸುವರು.

೧೧. ವಿಚಿತ್ರಯಾತನೆಗಳನ್ನನುಭವಿಸಿ ತಮ್ಮ ಪಾಪಕರ್ಮಗಳನ್ನು ಕಳೆದುಕೊಂಡಮೇಲೆ ಆ ನರರು ಕಾದ ಕಬ್ಬಿಣದ ಸಂಕೋಲೆಗಳಿಂದ ಭದ್ರವಾಗಿ ಕೈಗಳಲ್ಲಿ ಬಂಧಿಸಲ್ಪಡುವರು.

ಮಹಾವೃಕ್ಷಾಗ್ರಶೃಂಗೇಷು ಲಂಬ್ಯಂತೇ ಯಮಕಿಂಕರೈಃ ।
ಶೋಚಂತಃ ಸ್ವಾನಿ ಕರ್ಮಾಣಿ ತೂಷ್ಣೀಂ ತಿಷ್ಠಂತಿ ನಿಶ್ಚಲಾಃ ॥ ೧೨ ॥
ಅಗ್ನಿವರ್ಣೈಃ ಶಂಕುಭಿಶ್ಚ ಲೋಹದಂಡೈಃ ಸಕಂಟಕೈಃ ।
ಹನ್ಯಂತೇ ಕಿಂಕರೈರ್ಘೋರೈಃ ಸಮಂತಾತ್ಪಾಪಕಾರಿಣಃ ॥ ೧೩ ॥
ತತ್ತತ್ಕ್ಷಣಾತ್ಪ್ರದೀಪ್ತೇ ವಹ್ನಿನಾ ಚ ವಿಶೇಷತಃ ।
ಸಮಂತತಃ ಪ್ರಕ್ಷಿಪ್ಯಂತೇ ಕೃತ್ತಾಶ್ಚ ಜರ್ಜರೀಕೃತಾಃ ॥ ೧೪ ॥
ಕೂಟಸಾಕ್ಷೀ ತಥಾऽಸಮ್ಯಕ್ಪಕ್ಷಪಾತೇನ ಯೋ ವದೇತ್ ।
ಯಶ್ಚಾऽನ್ಯದನೃತಂ ಬ್ರೂಯಾತ್ಸ ನರೋ ಯಾತಿ ರೌರವಮ್ ॥ ೧೫ ॥
ಸುರಾಪೋ ಬ್ರಹ್ಮಹಾ ಹರ್ತಾ ಸುವರ್ಣಸ್ಯ ಚ ಸೂಚಕಃ ।
ಪ್ರಯಾಂತಿ ನರಕಾಂಶ್ಚೈವ ತೈಃ ಸಂಸರ್ಗಮುಪೈತಿ ಯಃ ॥ ೧೬ ॥
ಭ್ರೂಣಹಾ ಗುರುಹಂತಾ ಚ ಗೋಘ್ನಶ್ಚ ಮುನಿಸತ್ತಮ ।
ಯಾಂತ್ಯೇತೇ ನರಕಂ ರೌದ್ರಂ ಯೇ ಚ ವಿಶ್ವಾಸಘಾತಕಾಃ ॥ ೧೭ ॥

---

೧೨. ಯಮಕಿಂಕರರು ಕೆಲವರನ್ನು ಎತ್ತರವಾದ ಮರಗಳಿಂದ ತೂಗುಹಾಕುವರು. ಅಲ್ಲಿ ಅವರು ತಮ್ಮ ಕರ್ಮಗಳಿಗೆ ಪಶ್ಚಾತ್ತಾಪಪಡುತ್ತ ಕದಲದೆಯೂ ಮಾತನಾಡದೆಯೂ ಇರುವರು.

೧೩. ಕೆಲವು ಪಾಪಿಗಳನ್ನು ಯಮದೂತರು ಬೆಂಕಿಯಲ್ಲಿ ಕಾದ ಶೂಲಗಳಿಂದಲೂ ಮುಳ್ಳುಗಳುಳ್ಳ ಕಬ್ಬಿಣದ ಬಡಿಗೋಲುಗಳಿಂದಲೂ ಬಹುವಿಧವಾಗಿ ಘೋರವಾಗಿ ಹಿಂಸಿಸುತ್ತಿರುವರು.

೧೪. ಕೆಲವೆಡೆಗಳಲ್ಲಿ ಆಯಾ ಕ್ಷಣಗಳಲ್ಲಿಯೇ ತೀಕ್ಷ್ಣಗಳಾದ ಬೆಂಕಿಗಳುಂಟಾಗುವುವು. ಕೆಲವು ಪಾತಕಿಗಳನ್ನು ಮೈಕತ್ತರಿಸಿ ಜರ್ಜರಿತರನ್ನಾಗಿ ಮಾಡಿ ಆ ಬೆಂಕಿಗಳಲ್ಲಿ ತಳ್ಳುವರು.

೧೫. ಸುಳ್ಳುಸಾಕ್ಷ್ಯವನ್ನು ಹೇಳಿದವನು, ಪಕ್ಷಪಾತದಿಂದ ತೀರ್ಪನ್ನು ಕೊಟ್ಟ ನ್ಯಾಯಾಧಿಪತಿ, ಇತರ ವಿಧವಾದ ಅನೃತವನ್ನಾಡಿದವನು—ಇವರೆಲ್ಲರೂ ರೌರವನರಕಕ್ಕೆ ಹೋಗುವರು.

೧೬. ಸುರಾಪಾನವನ್ನು ಮಾಡಿದವನು, ಬ್ರಹ್ಮಹತ್ಯೆಯನ್ನು ಮಾಡಿದವನು, ಸ್ವರ್ಣವನ್ನು ಕದ್ದವನು, ಗುಟ್ಟನ್ನು ಬಯಲುಗೊಳಿಸಿದವನೂ ನರಕಗಳನ್ನು ಹೊಂದುವರು.

೧೭. ಮುನಿಶ್ರೇಷ್ಠನೆ! ಭ್ರೂಣಹತ್ಯೆಯನ್ನು ಮಾಡಿದವನು, ಗುರುವನ್ನು ಹಿಂಸಿಸಿದವನು, ಗೋವಧೆಯನ್ನು ಮಾಡಿದವನು, ವಿಶ್ವಾಸಘಾತಕನು—ಇವರೆಲ್ಲರೂ ರೌದ್ರವೆಂಬ ನರಕವನ್ನು ಸೇರುವರು.

ತಪ್ತಲೋಷ್ಠೇಷು ಪಚ್ಯಂತೇ ಯಸ್ತು ಭಕ್ತಂ ಪರಿತ್ಯಜೇತ್ ।
ಸ್ನುಷಾಂ ಸುತಾಂ ಚ ಯೋ ಗಚ್ಛೇನ್ಮಹಾಜ್ವಾಲೇ ಸ ಪಾತ್ಯತೇ ॥ ೧೮ ॥
ಕುಂಭೀಪಾಕೇ ಪ್ರಯಾತ್ಯೇವ ಪಾದೈರೂರ್ಧ್ವೈರಧೋಮುಖಃ ।
ಕರೋತಿ ಕರ್ಮ ವೈ ನಿತ್ಯಂ ಯಶ್ಚ ಗಾಂ ಪ್ರತಿಷೇಧಯೇತ್ ॥ ೧೯ ॥
ಸ್ವಾಮಿದ್ರೋಹೀ ಚ ಯೋ ರೌದ್ರಸ್ತಪ್ತಕುಂಭೇ ಸ ಪಾತ್ಯತೇ ।
ದೇವದೂಷಯಿತಾ ಯಶ್ಚ ವೇದವಿಕ್ರಯಿಕಸ್ತಥಾ ॥ ೨೦ ॥
ಪರಸ್ತ್ರೀಗಾಮಿನೋ ಯೇ ಚ ಯಾಂತಿ ಕ್ರಕಚನೇ ತು ತೇ ।
ಚೌರೋಽತಿದಾರುಣೇ ಯಾತಿ ಮರ್ಯಾದಾಭೇದಕಸ್ತಥಾ ॥ ೨೧ ॥
ದೇವದ್ವಿಜಪಿತೃದ್ವೇಷ್ಟಾ ರತ್ನದೂಷಯಿತಾ ಚ ಯಃ ।
ಸ ಯಾತಿ ಕೃಮಿಭಕ್ಷೇ ವೈ ರಕ್ತಾಖ್ಯೇ ಚ ಪತಂತಿ ತೇ ॥ ೨೨ ॥
ಪಿತೃದೇವಗುರೂಣಾಂ ಚ ಸಪರ್ಯಾಂ ನ ಕರೋತಿ ಯಃ ।
ಲಾಲಾಭಕ್ಷೇ ಸ ಯಾತ್ಯುಗ್ರೇ ಕೂಟಕರ್ಮ ಕರೋತಿ ಯಃ ॥ ೨೩ ॥

---

೧೮. ನಂಬಿದ ಭಕ್ತನನ್ನು ತ್ಯಜಿಸಿದವನು ತಪ್ತಲೋಹವೆಂಬ ನರಕದಲ್ಲಿ ತಳ್ಳಲ್ಪಡುವನು. ಸೊಸೆ ಅಥವ ಮಗಳೊಡನೆ ರಮಿಸಿದವನು ಮಹಾಜ್ವಾಲ ನರಕಕ್ಕೆ ಹೋಗಿ ದುಃಖಪಡುವನು.

೧೯. ಯಾವನು ನಿತ್ಯವೂ ದುಷ್ಕರ್ಮವನ್ನು ಮಾಡುತ್ತಿರುವನೊ, ಗೋವುಗಳು ಮೇಯುವುದನ್ನು ತಡೆಯುವನೊ, ಅವನು ಕುಂಭೀಪಾಕ ನರಕದಲ್ಲಿ ಬೀಳುವನು. ಅಲ್ಲಿ ಅವನನ್ನು ತಲೆ ಕೆಳಗೂ, ಕಾಲು ಮೇಲಕ್ಕೂ ಮಾಡಿ ತೂಗಹಾಕುವರು.

೨೦-೨೧. ಸ್ವಾಮಿದ್ರೋಹಿಯೂ, ನಿಷ್ಕಾರಣವಾಗಿ ರೌದ್ರವನ್ನು ತಾಳುವವನೂ ತಪ್ತಕುಂಭದಲ್ಲಿ ತಳ್ಳಲ್ಪಡುವನು. ದೇವರನ್ನು ದೂಷಿಸುವವನೂ, ವೇದಗಳನ್ನು ವಿಕ್ರಯಿಸುವವನೂ, ಪರಸ್ತ್ರೀಕಾಮುಕನೂ ಕ್ರಕಚನವೆಂಬ ನರಕವನ್ನು ಸೇರುವರು. ಕಳ್ಳನೂ, ಮಹಾಕ್ರೂರನೂ, ಲೋಕಮರ್ಯಾದೆಯನ್ನು ಮೀರಿ ನಡೆಯುವವನೂ ಅದೇ ನರಕಕ್ಕೆ ಭಾಗಿಗಳಾಗುವರು.

೨೨. ದೇವತೆಗಳನ್ನೂ, ಬ್ರಾಹ್ಮಣರನ್ನೂ, ಪಿತೃಗಳನ್ನೂ ದ್ವೇಷಿಸುವ ಮನುಜನೂ, ರತ್ನಗಳನ್ನು ದೂಷಿಸುವವನೂ ಕೃಮಿಭಕ್ಷ ಮತ್ತು ರಕ್ತಕವೆಂಬ ನರಕದಲ್ಲಿ ಬೀಳುವರು.

೨೩. ಪಿತೃಗಳು, ದೇವತೆಗಳು, ಗುರು—ಇವರಿಗೆ ಯಾವನು ಪೂಜೆಯನ್ನು ಮಾಡುವುದಿಲ್ಲವೊ, ಯಾವನು ಮೋಸದ ಕೆಲಸವನ್ನು ಮಾಡುವನೊ, ಅವರಿಬ್ಬರೂ ಉಗ್ರವಾದ ಲಾಲಾಭಕ್ಷನರಕಕ್ಕೆ ಬೀಳುವರು.

ಅಂತ್ಯಜೇಭ್ಯೋ ಗ್ರಹೀತಾ ಚ ನರಕೇ ಯಾತ್ಯಧೋ ಮುಖೇ ।
ಅಸ್ಥಿಭಂಗೇ ಪ್ರಯಾತ್ಯೇವ ಏಕೋ ಮಿಷ್ಟಾನ್ನಭುಙ್ನರಃ ॥ ೨೪ ॥
ಕೃತಘ್ನಃ ಪಿಶುನಃ ಕ್ರೂರಃ ಕೂಟಮಾನೀ ವಿಡಂಬಕಃ ।
ಯಂತ್ರಪೀಡನಕೇ ಯಾಂತಿ ಪರಗುಹ್ಯಪ್ರಕಾಶಕಃ ॥ ೨೫ ॥
ಲಾಕ್ಷಾಮಾಂಸರಸಾನಾಂ ಚ ತಿಲಾನಾಂ ರಸಕಸ್ಯ ಚ ।
ವಿಕ್ರಯೀ ಬ್ರಾಹ್ಮಣೋ ಯಾತಿ ಶ್ವದಂಶೇ ನಾಽತ್ರ ಸಂಶಯಃ ॥ ೨೬ ॥
ಮಧುಹಾ ಗ್ರಾಮಹಂತಾ ಚ ಯಾತಿ ವೈತರಣೀಂ ನರಃ ।
ವರ್ಣಾಶ್ರಮವಿರುದ್ಧಂ ಚ ಕರ್ಮ ಕುರ್ವಂತಿ ಯೇ ನರಾಃ ।
ಕರ್ಮಣಾ ಮನಸಾ ವಾಚಾ ಮಹಾನದ್ಯಾಂ ಪ್ರಯಾಂತಿ ತೇ ॥ ೨೭ ॥
ಗುರೂಣಾಮವಮಂತಾ ಚ ಶಾಸ್ತ್ರದೂಷಯಿತಾ ಚ ಯಃ ।
ಅಸಿಪತ್ರೇ ಪ್ರಯಾತ್ಯೇವ ತಥಾ ಪರ್ವವಿಲಂಘಕಃ ॥ ೨೮ ॥
ಧನಯೌವನಮತ್ತಾ ಯೇ ಮರ್ಯಾದಾಭೇದಿನೋ ನರಾಃ ।
ತೇ ಯಾಂತಿ ನರಕೇ ಘೋರೇ ಕೃಷ್ಣಸೂತ್ರೇಽತಿದಾರುಣೇ ॥ ೨೯ ॥

---

೨೪. ಅಂತ್ಯಜರಿಂದ ದಾನವನ್ನು ತೆಗೆದುಕೊಂಡವನು ಅಧೋಮುಖವೆಂಬ ನರಕಕ್ಕೆ ಹೋಗುವನು. ಏಕಾಕಿಯಾಗಿ ಮೃಷ್ಟಾನ್ನವನ್ನು ಭೋಜನಮಾಡುವವನು ಅಸ್ಥಿಭಂಗನರಕಭಾಗಿಯಾಗುವನು.

೨೫. ಉಪಕಾರವನ್ನು ಮರೆಯುವವನು, ಲೋಭಿಯು, ಕ್ರೂರನು, ಮೋಸದ ವೈಭವವನ್ನು ತೋರಿಸುವವನು, ವಿಡಂಬಕನು, ಇತತರರ ಗುಟ್ಟನ್ನು ರಟ್ಟುಮಾಡುವವನು—ಇವರೆಲ್ಲರೂ ಯಂತ್ರಪೀಡನನರಕಕ್ಕೆ ಹೋಗುವರು.

೨೬. ಅರಗು, ಮಾಂಸ, ಪಾದರಸ, ಎಳ್ಳು, ಮದ್ಯಗಳ ವ್ಯಾಪಾರವನ್ನು ಮಾಡುವ ಬ್ರಾಹ್ಮಣನು ಶ್ವದಂಶವೆಂಬ ನರಕದಲ್ಲಿಬಿದ್ದು ಸಂಕಟಪಡುವನು. ಇದರಲ್ಲಿ ಸಂದೇಹವಿಲ್ಲ.

೨೭. ಜೇನುಗೂಡನ್ನಾಗಲಿ, ಗ್ರಾಮವನ್ನಾಗಲಿ ಪೀಡಿಸಿದ ನರನು ವೈತರಣೀ ನದಿಯಲ್ಲಿ ಬೀಳುವನು. ತನ್ನ ವರ್ಣಾಶ್ರಮಗಳಿಗೆ ಉಚಿತವಲ್ಲದ ಕರ್ಮಗಳನ್ನು ದೇಹದಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಯಾವ ಮಾನವರು ಮಾಡುವರೊ, ಅವರು ಮಹಾವೈತರಣೀನದಿಯಲ್ಲಿ ಬಿದ್ದು ಮುಳುಗುವರು.

೨೮. ಗುರುಗಳನ್ನು ಕಡೆಗಾಣುವವನೂ, ಶಾಸ್ತ್ರಗಳನ್ನು ದೂಷಿಸುವವನೂ, ಪರ್ವಕಾಲಗಳಲ್ಲಿ ಮಾಡಬೇಕಾದ ಕೃತ್ಯಗಳನ್ನು ಮಾಡದಿರುವವನೂ ಅಸಿಪತ್ರವೆಂಬ ನರಕಕ್ಕೆ ಹೋಗುವರು.

೨೯. ಧನ ಮತ್ತು ಯೌವನಗಳಿಂದ ಉನ್ಮತ್ತರಾದವರೂ, ಶಾಸ್ತ್ರಮರ್ಯಾದೆ, ಲೋಕಮರ್ಯಾದೆಗಳನ್ನು ಮೀರಿ ನಡೆಯುವವರೂ, ಅತಿಭಯಂಕರವೂ, ಹಿಂಸಾಮಯವೂ ಆದ ಕೃಷ್ಣಸೂತ್ರನರಕದಲ್ಲಿ ಬೀಳುವರು.

ಅಸಂಸ್ಕೃತಶ್ಚ ಯೋ ವಿಪ್ರೋ ವೃಷಲೀಂ ಸೇವತೇ ತು ವೈ ।
ವೃಷಲೀಮಿಥುನೋ ಯಶ್ಚ ಪತತಸ್ತಾವುಭಾವಪಿ ॥ ೩೦ ॥
ಉಚ್ಛಿಷ್ಟಾ ಯೇ ಸ್ಪೃಶಂತೀಹ ಗಾವ್ರೋಽಗ್ನಿಂ ಜನನೀಂ ದ್ವಿಜಾನ್ ।
ತೇ ಪಚ್ಯಂತೇ ಕುಭೋಜ್ಯೇ ಚ ಮಿತ್ರದ್ವೇಷೀ ವಿಶೇಷತಃ ॥ ೩೧ ॥
ಪಂಕ್ತಿಭೇದೇ ದಿವಾಸ್ವಪ್ನೇ ಯೇ ನರೋಽಬ್ರಹ್ಮಚಾರಿಣಃ ।
ಪುತ್ರೈರಧ್ಯಾಪಿತಾ ಯೇ ವೈ ತೇ ಪತಂತಿ ಶ್ವಭೋಜನೇ ॥ ೩೨ ॥
ಏತೇ ಚಾಽನ್ಯೇ ಚ ನರಕಾಃ ಶತಶೋಽಥ ಸಹಸ್ರಶಃ ।
ತತ್ರ ದುಷ್ಕೃತಕರ್ಮಾಣಃ ಪಚ್ಯಂತೇ ಯಾತನಾಗತಾಃ ॥ ೩೩ ॥
ನೃಣಾಂ ಸ್ವರ್ಗಾಶ್ಚ ಯಾವಂತಸ್ತಾವಂತೋ ನಿರಯಾಸ್ತಥಾ ।
ಪಾಪಂ ಕೃತ್ವಾ ತು ಬಹುಲಂ ಪ್ರಾಯಶ್ಚಿತ್ತಪರಾಙ್ಮುಖಾಃ ॥ ೩೪ ॥
ಕೃತೇ ಪಾಪೇ ಚ ವೈ ತಾಪೋ ಯಸ್ಯ ಪುಂಸಃ ಪ್ರಜಾಯತೇ ।
ಪ್ರಾಯಶ್ಚಿತ್ತಂ ತು ತಸ್ಯೈಕಂ ಶಿವಸಂಸ್ಮರಣಂ ಪರಂ ॥ ೩೫ ॥

---

೩೦. ಉಪನಯನಸಂಸ್ಕಾರವಿಲ್ಲದ ಬ್ರಾಹ್ಮಣನೂ, ಮದುವೆಯಿಲ್ಲದೆ ಋತುಮತಿಯಾದ ಕನ್ಯೆಯನ್ನು ಸೇವಿಸುವವನೂ, ಅಂತಹವಳೊಡನೆ ಕೂಡುವವನೂ ನರಕಗಳಿಗೆ ಬೀಳುವರು.

೩೧. ಯಾರು ಶುಚಿರ್ಭೂತರಾಗದೆ ಗೋವನ್ನಾಗಲಿ, ಅಗ್ನಿಯನ್ನಾಗಲಿ, ತಾಯಿಯನ್ನಾಗಲಿ, ಬ್ರಾಹ್ಮಣನನ್ನಾಗಲಿ ಸ್ಪರ್ಶಮಾಡುವರೊ, ಅವರೂ, ವಿಶೇಷವಾಗಿ ಮಿತ್ರದ್ರೋಹವನ್ನು ಮಾಡುವವನೂ ಕುಭೋಜ್ಯವೆಂಬ ನರಕದಲ್ಲಿ ಬೀಳುವರು.

೩೨. ಭೋಜನದಲ್ಲಿ ಪಙ್ಕ್ತಿಭೇದವನ್ನು ಮಾಡಿದವರು, ಹಗಲು ನಿದ್ರೆ ಮಾಡುವವರು, ಬ್ರಹ್ಮಚರ್ಯವನ್ನು ಪಾಲಿಸದವರು, ಮಕ್ಕಳಿಂದ ವೇದಪಾಠವನ್ನು ಕಲಿತುಕೊಂಡವರು—ಇವರೆಲ್ಲರೂ ಶ್ವಭೋಜನ ನರಕದಲ್ಲಿ ಬೀಳುವರು.

೩೩. ಇವುಗಳೂ ಇತರಗಳೂ ಆದ ನೂರಾರು, ಸಾವಿರಾರು ನರಕಗಳು ಯಮಧರ್ಮನ ರಾಜ್ಯದಲ್ಲಿರುವುವು. ಪಾಪಕೃತ್ಯಗಳನ್ನು ಮಾಡಿದವರು ಅನೇಕ ಯಾತನೆಗಳನ್ನನುಭವಿಸುತ್ತ ಅವುಗಳಲ್ಲಿ ಬಳಲುತ್ತಿರುವರು.

೩೪. ಮನುಷ್ಯರಿಗೆ ಪುಣ್ಯಗಳ ಫಲಗಳನ್ನು ಅನುಭವಿಸುವುದಕ್ಕೆ ಎಷ್ಟು ಸ್ವರ್ಗಗಳಿರುವುವೊ, ಪಾಪಗಳನ್ನನುಭವಿಸಲು ಅಷ್ಟೇ ನರಕಗಳಿರುವುವು. ಪಾಪಗಳನ್ನು ವಿಶೇಷವಾಗಿ ಮಾಡಿ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳದಿರುವವರಿಗೆ ನರಕಪ್ರಾಪ್ತಿಯಾಗುವುದು.

೩೫. ಪಾಪವನ್ನು ಮಾಡಿದ ಬಳಿಕಲಾದರೂ ಯಾವ ಮನುಷ್ಯನಿಗೆ ಮನಸ್ಸಿನಲ್ಲಿ ತಾಪವುಂಟಾಗುವುದೊ, ಅವನಿಗೆ ಶಿವಸ್ಮರಣವೆಂಬುದೊಂದೇ ಸರ್ವೋತ್ತಮವಾದ ಪ್ರಾಯಶ್ಚಿತ್ತವು.

ತಸ್ಮಾದಹರ್ನಿಶಂ ಶಂಭುಂ ಸಂಸ್ಮರನ್ ಪುರುಷೋತ್ತಮಃ ।
ನ ಯಾತಿ ನರಕಂ ಶುದ್ಧಃ ಸಂಕ್ಷೀಣಾಽಖಿಲಪಾತಕಃ ॥ ೩೬ ॥
ಕಾರ್ತಿಕಸ್ಯಾಽಸಿತೇ ಪಕ್ಷೇ ಕೃಷ್ಣಾ ಯಾ ಚ ಚತುರ್ದಶೀ ।
ತಸ್ಯಾಂ ದೀಪಃ ಪ್ರದಾತವ್ಯೋ ದೇವದೇವಸ್ಯ ಚಾಽಗ್ರತಃ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ನರಕಕಥನಂ"
ನಾಮೈಕೋನತ್ರಿಂಶೋಽಧ್ಯಾಯಃ

---

೩೬. ಆದುದರಿಂದ ಯಾವ ಪುರುಷಶ್ರೇಷ್ಠನು ಹಗಲು ರಾತ್ರಿಗಳಲ್ಲಿ ಎಡಬಿಡದೆ ಪರಮೇಶ್ವರನನ್ನು ಧ್ಯಾನಿಸುತ್ತ ಸಮಸ್ತ ಪಾತಕಗಳನ್ನು ಕಳೆದುಕೊಂಡು ಪರಿಶುದ್ಧನಾಗಿರುವನೋ ಅವನು ನರಕಕ್ಕೆ ಭಾಗಿಯಾಗುವುದಿಲ್ಲ.

೩೭. ಕಾರ್ತೀಕ ಮಾಸದ ಕೃಷ್ಣಪಕ್ಷದಲ್ಲಿ ಬರುವ ಚತುರ್ದಶಿಯು ದಿನದಲ್ಲಿ ದೇವದೇವನ ಇದಿರಿನಲ್ಲಿ ದೀಪವನ್ನು ಹೊತ್ತಿಸಿಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ
ಮಾಹಾತ್ಮ್ಯದಲ್ಲಿ "ನರಕಕಥನ"ವೆಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

## ಅನರಕೇಶ್ವರದೀಪದಾನಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

ದೀಪೇಽಸ್ಮಿನ್ಯತ್ಫಲಂ ಚಾಽಸ್ತಿ ವಿಧಿನಾ ಯೇನ ದೀಯತೇ ।
ತತ್ಸರ್ವಂ ಬ್ರೂಹಿ ಮೇ ತಾತ ದೀಪೋತ್ಪತ್ತಿಂ ಚ ಶೋಭನಾಂ ॥ ೧ ॥

ಸನತ್ಕುಮಾರ ಉವಾಚ :—

ಪುರಾ ಕೃತಯುಗೇ ವ್ಯಾಸ ಪಾರ್ವತೀಂ ಶಂಕರೋಽಗ್ರತಃ ।
ಅಭಿಪ್ರಯಾಚಿತುಂ ಯಾತಸ್ತಯಾಽಪಿ ಸೋಽಭಿಯಾಚಿತಃ ॥ ೨ ॥

ಪಾರ್ವತ್ಯುವಾಚ :—

ಶರೀರೇ ಕೃಷ್ಣತಾ ಶಂಭೋ ಮಮಾಽಸ್ತಿ ರೂಪಹಾರಿಣೀ ।
ತಸ್ಮಾದ್ಯಾಚೇ ಭೃಶಂ ಶಂಭೋ ಪ್ರಸೀದ ದಿವ್ಯಲೋಚನ ॥ ೩ ॥
ಭವೇನ ವರ್ಣಿತಾ ಸಾ ವೈ ಅತೀವ ಶೋಭನಾ ಮಮ ।
ಲೋಚನೇ ಪಕ್ಷ್ಮಮಾಲಾಯಾಃ ಶೋಭಸೇಽತಿತರಾಂ ಸದಾ ॥ ೪ ॥

---

## ಕನ್ನಡದ ಅನುವಾದ

### ಅನರಕೇಶ್ವರದೀಪದಾನಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:–ಮುನಿಯೇ! ವಿಧ್ಯುಕ್ತರೀತಿಯಿಂದ ದೀಪದಾನವನ್ನು ಮಾಡಲು ಯಾವ ಫಲವುಂಟೆಂಬುದನ್ನೂ, ಈ ದೀಪದಾನವು ಹೇಗೆ ಶುಭಕರವಾದುದೆಂಬ ಇತಿಹಾಸವನ್ನೂ ನನಗೆ ಹೇಳು.

೨. ಸನತ್ಕುಮಾರನು ಹೇಳುತ್ತಾನೆ:—ವ್ಯಾಸನೆ! ಹಿಂದೆ ಕೃತಯುಗದಲ್ಲಿ ಪಾರ್ವತಿಯನ್ನು ಪತ್ನಿಯಾಗೆಂದು ಕೇಳಲು ಶಂಕರನು ಆಕೆಯಬಳಿಗೆ ಹೋದನು. ಆಕೆಯೂ ಆತನನ್ನೇ ವರಿಸಿದಳು.

೩. ಪಾರ್ವತಿಯು ಹೇಳುತ್ತಾಳೆ:—ಶಂಭುವೆ! ನನ್ನ ಶರೀರವು ಕೃಷ್ಣವರ್ಣವುಳ್ಳದ್ದಾಗಿರುವುದು. ಆದುದರಿಂದ ನನ್ನನ್ನು ಸ್ವೀಕರಿಸೆಂದು ನಿನ್ನಲ್ಲಿ ಯಾಚಿಸುತ್ತಿರುವೆನು. ತ್ರಿಲೋಚನನಾದ ನೀನು ನನ್ನಲ್ಲಿ ಪ್ರಸನ್ನನಾಗು.

೪. ಶಿವನೂ ಆಕೆಯನ್ನು ವರ್ಣಿಸಿ ಮೆಚ್ಚಿದನು. "ಆದರೂ ನೀನು ನನಗೆ ಮಾತ್ರ ಅತಿಸುಂದರಿಯಾಗಿ ಕಾಣುತ್ತಿರುವೆ. ಕಣ್ಣುರೆಪ್ಪೆಗಳ ಮಧ್ಯದಲ್ಲಿ. ನಿನ್ನ ನೇತ್ರಗಳು ಬಹುವಾಗಿ ಶೋಭಿಸುತ್ತಿರುವುವು.

ಸಿತಾಬ್ಜ ಸಂಸ್ಥಿತೋ ಭೃಂಗೋ ಯಥಾ ಶೋಭಯತೇ ಚ ತಂ ।
ತಯಾ ತಥಾ ಯಾಚಿತೋಽಸೌ ಧೂರ್ಜಟಿರ್ವೃಷಭಾಸನಃ ॥ ೫ ॥
ವಿರೂಪರೂಪಕರ್ತಾಽಸಿ ನ ಶೃಣೋಷಿ ವಚೋ ಯದಾ ।
ತದಾ ತ್ವಹಂ ಸ ವೈರಾಗ್ಯಾ ಚರೇಯಂ ದುಷ್ಕರಂ ತಪಃ ॥ ೬ ॥
ಭವಸ್ತ್ವಯೇತಿ ಚೋಕ್ತಸ್ತು ತಸ್ಯಾ ವೈ ಪಾಣಿಮುಗ್ರಹೀತ್ ।
ಕದಾಚಿಚ್ಛಂಕರೋ ದೇವೋ ರತಿಂ ಯಾಚಿತವಾನ್ ಪ್ರಿಯಾಂ ॥ ೭ ॥
ರತಿಂ ದತ್ತವತೀ ಸಾ ತು ಜಹಾಸ ನಾಮ ಕೀರ್ತಯನ್ ।
ಸುದುಃಖಿತಾಽಭವತ್ಸಾ ತು ಪರಾಙ್ಮುಖೀ ವಿಹಾಯ ತಂ ॥ ೮ ॥
ಉವಾಚ ರೋಷಸಂಯುಕ್ತಾ ಸಂಸ್ಮೃತ್ಯ ದೇವಭಾಷಿತಂ ।
ತಪೋವನಂ ವ್ರಜಾಮ್ಯದ್ಯ ಸುಗೌರತ್ವೋಪಲಬ್ಧಯೇ ॥ ೯ ॥
ಸುವರ್ಣರೂಪರೂಪಾಚ ಯದಾ ಪುನರ್ಭವಾಮಿ ಚ ।
ತದಾ ತವ ಸಾಽನುರಾಗಾ ಭವಾಮಿ ಚೈವ ನಾಽನ್ಯಥಾ ॥ ೧೦ ॥

---

೫. ಬಿಳಿಯ ಕಮಲದ ಮಧ್ಯದಲ್ಲಿರುವ ದುಂಬಿಗಳಂತೆ ನಿನ್ನ ಕಣ್ಣುಗಳಲ್ಲಿ ಕಪ್ಪಾದ ತಾರೆಗಳು ಕಂಗೊಳಿಸುತ್ತಿರುವುವು. ಇಂತೆಂದು ವರ್ಣಿಸಿ ವೃಷಭ ವಾಹನನಾದ ಪರಮೇಶ್ವರನು ಆಕೆಯನ್ನು ಯಾಚಿಸಿದನು.

೬. ಆಗ ಪಾರ್ವತಿಯು, "ನೀನು ಕುರೂಪಿಗಳನ್ನೂ ಸುಂದರರನ್ನಾಗಿ ಮಾಡುವವನು. ಆದರೆ ನನ್ನ ಮಾತನ್ನು ನೀನು ಯಾವಾಗ ಕೇಳುವುದಿಲ್ಲವೊ, ಆಗ ನಾನು ವೈರಾಗ್ಯವನ್ನು ತಾಳಿ ದುಸ್ತರವಾದ ತಪಸ್ಸನ್ನು ಮಾಡಲು ಹೊರಟು ಹೋಗುವೆನು" ಎಂದಳು.

೭. ಇಂತೆಂದು ಹೇಳುತ್ತಿದ್ದರೂ ಪರಮಶಿವನು ಆಕೆಯ ಪಾಣಿಗ್ರಹಣವನ್ನು ಮಾಡಿದನು. ಒಮ್ಮೆ ಶಂಕರನು ಆಕೆಯೊಡನೆ ಸುರತಸುಖವನ್ನುಪೇಕ್ಷಿಸಿ ಯಾಚನೆಮಾಡಿದನು.

೮. ಕ್ರೀಡೆಯ ಸಮಯದಲ್ಲಿ ಆಕೆಯ ಕಾಳಿಯೆಂಬ ಹೆಸರನ್ನು ಹೇಳಿ ಕೊಂಡು ಪರಮೇಶ್ವರನು ಹಾಸ್ಯಮಾಡಿ ನಕ್ಕನು. ಅದರಿಂದ ಬಹುದುಃಖ ಗೊಂಡು ಪರಾಙ್ಮುಖಳಾಗಿ ಆ ಪಾರ್ವತಿಯು ಆತನನ್ನು ತೊರೆದುಬಿಟ್ಟಳು.

೯. ಹಿಂದೆ ಆತನಾಡಿದ್ದ ಮಾತುಗಳನ್ನು ಸ್ಮರಿಸುತ್ತ ರೋಷದಿಂದ ಇಂತೆಂದಳು. "ದೇಹದಲ್ಲಿ ಚಿನ್ನದ ಬಣ್ಣವನ್ನು ಸಂಪಾದಿಸುವುದಕ್ಕೆ ಈಗಲೇ ನಾನು ತಪೋವನಕ್ಕೆ ತೆರಳುವೆನು.

೧೦. ಸುವರ್ಣಕ್ಕೆ ಸಮಾನವಾದ ದೇಹಕಾಂತಿಯುಳ್ಳವಳಾಗಿ ಯಾವಾಗ ಆಗುವೆನೊ, ಆಗಲೇ ಪುನಃ ನಿನ್ನ ಅನುರಾಗವನ್ನು ಪಡೆಯಲು ಬರುವೆನಲ್ಲದೆ ಮೊದಲು ಬರುವುದಿಲ್ಲ."

ಇತೀದಮೇವ ಜಲ್ಪಂತೀ ಜಗಾಮ ವಿಂಧ್ಯಪರ್ವತಂ ।
ಹರಃ ಶುಶೋಚ ತತಸ್ತಾಂ ಕ್ವ ಗತಾ ಸಾ ವಿಹಾಯ ಮಾಂ ॥ ೧೧ ॥
ಸ್ಮರಂಸ್ತದೇವ ಚೇಷ್ಟಿತಂ ತದೇವ ಪೂರ್ವಭಾಷಿತಂ
ತದೈವ ಮೇ ವೃಥಾಮತಿರ್ಮುದಾ ಯದಾ ನ ಮಾನಿತಾ ।
ಯತೋ ಮಯಾ ಹಿಮಾದ್ರಿಜಾ ಸಮಸ್ತಲೋಕ ಸುಂದರೀ
ಪುರೈವ ನಾಽಭಿನಂದಿತಾ ಗತಾ ವಿಹಾಯ ಮಾಮಿತಿ ॥ ೧೨ ॥
ಇತೀದಮೇವ ಸೋಽವದತ್ ಗತಸ್ತ್ವದರ್ಶನಂ ತತಃ
ಪ್ರಿಯಾವಿಯೋಗಮೀದೃಶಂ ಗುರುಂ ನ ಸೋಢುಮುತ್ಸಹೇ ।
ತತೋ ಜಗದ್ಧಿ ಸಂಕುಲಂ ಮಹಾಭಯೇನ ಸಂಯುತಂ
ಸುರಾಽಸುರಾ ಮಹರ್ಷಯಃ ಪರಂ ವಿಷಾದಮಭ್ಯಗುಃ ॥ ೧೩ ॥
ವಿಹಾಯ ಮಂದಿರಾಣಿ ತೇ ಪರಂ ವಿಷಾದಮಾಗತಾಃ ।
ಹರಸ್ತುತಿಂ ಪರಾಂ ಚ ತೇ ಪ್ರಚಕ್ರುರದ್ಭುತೋಪಮಾಃ ॥ ೧೪ ॥
ಸನತ್ಕುಮಾರ ಉವಾಚ :—
ನ ದೃಶ್ಯತೇ ಯದಾ ದೇವೋ ರುದ್ರೋ ಬಾಲೇಂದುಶೇಖರಃ ।
ನಷ್ಟಲೋಕಂ ಜಗತ್ಸರ್ವಂ ಕಾಂತಾರಮಭವತ್ತದಾ ॥ ೧೫ ॥

---

೧೧. ಇಂತೆಂದು ಮಾತನಾಡುತ್ತಲೇ ಪಾರ್ವತಿಯು ವಿಂಧ್ಯಪರ್ವತದ ಸಮೀಪಕ್ಕೆ ಹೊರಟುಹೋದಳು. ಆಗ ಪರಮಶಿವನು, "ನನ್ನನ್ನಗಲಿ ಪ್ರಿಯೆಯು ಎಲ್ಲಿ ಹೊರಟುಹೋದಳು?" ಎಂಬುದಾಗಿ ದುಃಖಗೊಂಡನು.

೧೨. ಆಕೆಯ ವ್ಯಾಪಾರಗಳನ್ನೂ ಹಿಂದಿನ ಮಾತುಗಳನ್ನೂ ನೆನೆಸಿಕೊಳ್ಳುತ್ತ ಇಂತೆಂದು ಚಿಂತಿಸಿದನು. "ನಾನು ಆಕೆಗೆ ಅವಮಾನವನ್ನು ಮಾಡಿದಾಗಲೇ ನನಗೆ ಬುದ್ಧಿಭ್ರಮಣೆಯಾಗಿರಬೇಕು. ಸಕಲಲೋಕದಲ್ಲಿಯೂ ಅತ್ಯಂತ ಸುಂದರಿಯಾದ ಹಿಮಗಿರಿ ತನಯೆಯು ನನ್ನಿಂದ ಮೊದಲೇ ಅಭಿನಂದಿತಳಾಗಲಿಲ್ಲವಾದುದರಿಂದಲೇ ನನ್ನನ್ನು ಬಿಟ್ಟು ಹೊರಟುಹೋದಳು."

೧೩. ಇಂತೆಂದು ಹೇಳುತ್ತ "ಇಂತಹ ಸಹಿಸಲಸಾಧ್ಯವಾದ ಪತ್ನೀ ವಿಯೋಗವನ್ನು ತಡೆಯಲಾರೆನು" ಎಂದು ಚಿಂತಿಸಿ ಪರಮೇಶ್ವರನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಆಗ ಜಗತ್ತೆಲ್ಲವೂ ವ್ಯಾಕುಲಗೊಂಡಿತು; ಮಹಾಭಯಗ್ರಸ್ತವಾಯಿತು. ದೇವತೆಗಳೂ, ರಾಕ್ಷಸರೂ, ಮಹರ್ಷಿಗಳೂ ಮೇರೆಯಿಲ್ಲದ ದುಃಖವನ್ನನುಭವಿಸಿದರು.

೧೪. ಇಂತು ಪರಮವಿಷಾದವನ್ನು ಹೊಂದಿ ಅವರು ಮನೆಗಳನ್ನು ಬಿಟ್ಟು ಬಂದರು. ಅದ್ಭುತಪರಾಕ್ರಮಿಗಳಾದ ಅವರೆಲ್ಲರೂ ಸರ್ವೋತ್ತಮನಾದ ಶಿವನನ್ನು ಸ್ತೋತ್ರ ಮಾಡತೊಡಗಿದರು.

೧೫. ಸನತ್ಕುಮಾರನು ಹೇಳುತ್ತಾನೆ:—ಬಾಲಚಂದ್ರಶೇಖರನಾದ ಮಹಾ

ತ್ರೀಣಿ ನೇತ್ರಾಣಿ ರುದ್ರಸ್ಯ ಯತಃ ಸೂರ್ಯೇಂದುವಹ್ನಯಃ ।
ಗತೇ ರುದ್ರೇ ನ ತೇ ಭಾಂತಿ ಜಗತ್ಯಸ್ಮಿಂಶ್ಚರಾಚರೇ ॥ ೧೬ ॥
ತತಸ್ತಮಸಿ ದುಸ್ತಾರೇ ಸಂಭೂತೇ ಲೋಮಹರ್ಷಣೇ ।
ಅನ್ಯೋನ್ಯಂ ಹಿ ನ ಪಶ್ಯಂತಿ ಸುರಾಃಸುರಾಸ್ತಮೋ ವೃತಾಃ ॥ ೧೭ ॥
ಏಷಾ ಬುದ್ಧಿಸ್ತತಸ್ತೇಷಾಮುತ್ಪನ್ನಾ ಕಾರ್ಯಸಿದ್ಧಯೇ ।
ಯಯಾ ಬುದ್ಧ್ಯಾ ಜಗನ್ನಾಥೋ ಜ್ಞಾಯತೇ ಪಾರ್ವತೀಪತಿಃ ॥ ೧೮ ॥
ನಹ್ಯಾಲೋಕೋ ವಿನಾ ತೇನ ಶಶಿಸೂರ್ಯಾಗ್ನಿಚಕ್ಷುಷಾ ।
ಪರಸ್ಪರಂ ಬ್ರುವಂತಿಸ್ಮ ದುಃಖಿತಾಸ್ತೇ ವಿಸಂಜ್ಞಯಾ ॥ ೧೯ ॥
ಹೇ ದೇವ ಹೇ ಮುನೇ ಸಿದ್ಧ ಹೇ ಋಷೇ ಹೇ ನಿಶಾಚರ ।
ಹೇ ದೈತ್ಯ ಹೇ ದನುಶ್ರೇಷ್ಠ ಹೇ ಮನುಷ್ಯನಿದೇಶಕ ॥ ೨೦ ॥
ಗತೋಽಸಿ ಕಾಂ ದಿಶಂ ತಾತ ಕೋ ವಾ ಲಬ್ಧಸ್ತ್ವಯಾ ವಿಭೋ ।
ಕ್ವಚಿದ್ವಿಶ್ರಾಮಭೂಮಿಸ್ತೇ ಕ್ವಚಿದಾಲಂಬನೇಽಪಿ ವಾ ॥ ೨೧ ॥

---

ದೇವನು ಅದರ್ಶನವನ್ನು ಪಡೆಯಲು ಸಕಲ ಪ್ರಪಂಚವೂ ಕಣ್ಣುಕಾಣದೆ ಕತ್ತಲೆಯು ಕವಿದಿರುವ ದಟ್ಟಡವಿಯಂತಾಯಿತು.

೧೬. ಮಹಾರುದ್ರನಿಗೆ ಸೂರ್ಯ, ಚಂದ್ರ, ಅಗ್ನಿಗಳು ಮೂರೂ ನೇತ್ರಗಳಾಗಿರುವಷ್ಟೆ. ರುದ್ರನೇ ಕಣ್ಮರೆಯಾಗಲು ಆ ಮೂವರೂ ಚರಾಚರಾತ್ಮಕವಾದ ಜಗತ್ತಿನಲ್ಲಿ ಕಾಣಿಸದಾದರು.

೧೭. ದುಸ್ತರವೂ ರೋಮಾಂಚವನ್ನುಂಟುಮಾಡುವುದೂ ಆದ ಅಂಧಕಾರವುಂಟಾಗಲು ಆ ತಮಸ್ಸಿನಿಂದಾವೃತರಾದ ದೇವದಾನವರೂ ಸಹ ಒಬ್ಬರನ್ನೊಬ್ಬರು ನೋಡಲು ಸಾಧ್ಯವಾಗಲಿಲ್ಲ.

೧೮. ಬಳಿಕ ಕಾರ್ಯಸಿದ್ಧಿಯಾಗುವ ಕಾಲವೊದಗಲು ಲೋಕನಾಥನಾದ ಪಾರ್ವತೀರಮಣನನ್ನು ನೋಡಲು ಬೇಕಾದ ಬುದ್ಧಿಯು ಅವರಿಗುಂಟಾಯಿತು.

೧೯. "ಚಂದ್ರಸೂರ್ಯಾಗ್ನಿನೇತ್ರನಾದ ಆತನಿಲ್ಲದೆ ನೋಡುವ ವ್ಯಾಪಾರವೇ ಇಲ್ಲವಷ್ಟೆ." ಇಂತು ಒಬ್ಬರನೊಬ್ಬರು ಗುರ್ತಿಸಲಾರದೆ ದುಃಖಗೊಂಡು ತಮ್ಮತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು.

೨೦. "ಎಲೈ ದೇವನೆ! ಮುನಿಯೆ! ಸಿದ್ಧನೆ! ಋಷಿಯೆ! ರಾಕ್ಷಸನೆ! ದೈತ್ಯನೆ! ದನುಜವರ್ಯನೆ! ಮನುಷ್ಯನೆಂದು ಕರೆಯಲ್ಪಡುವವನೆ!

೨೧. ಅಪ್ಪಾ! ನೀನು ಯಾವ ದಿಕ್ಕಿಗೆ ಹೋಗಿರುವೆ? ಸ್ವಾಮಿಯೆ! ನಿನಗೆ ಯಾರು ಸಂಧಿಸಿದರು? ಎಲ್ಲಿಯಾದರೂ ವಿಶ್ರಮಿಸಿಕೊಳ್ಳಲು ಸ್ಥಳವು ದೊರಕಿತೆ? ಅಥವ ಯಾವ ಆಲಂಬನವಾದರೂ ಕಂಡಿತೆ?

ಪಾಥೇಯಮಸ್ತಿ ಕಿಂಚಿತ್ತೇ ದಿಶಿ ಕಿಂವಾಽಥ ಕುತ್ರಚಿತ್ ।
ಪ್ರಕಾಶಂ ವಾಹನಂ ಛತ್ರಮಶನಂ ಶಯನಂ ಗೃಹಂ ॥ ೨೨ ॥
ಕ್ವಚಿದ್ವಾಽಸಿ ಕಥಂ ತೋಯಮಥವಾ ಚಿತ್ತನಿರ್ವೃತಿಃ ।
ಬಂಧುಃ ಪುತ್ರೋಽಸಿ ವಾ ತಾತ ವೃಕ್ಷಚ್ಛಾಯಾ ಸುಶೀತಲಾ ॥ ೨೩ ॥
ಏವಂ ಪ್ರಕಾರಂ ಕರುಣಂ ಸಮಾಭಾಷ್ಯ ಪರಸ್ಪರಂ ।
ಭೂಯಶ್ಚಿಂತಾಪರಾಃ ಸರ್ವೇ ದೇವಾಶ್ಚೇಂದ್ರಪುರೋಗಮಾಃ ॥ ೨೪ ॥
ಭೂಮೇರ್ವಿವರಮಾಶ್ರಿತ್ಯ ಪ್ರಾಣಿನೋ ಯೇ ವಸಂತ್ಯಪಿ ।
ರಸಾತಲೇ ಚ ದೈತೇಯಾಃ ಸಂಸ್ಥಿತಾಃ ಪನ್ನಗಾಶ್ಚ ಯೇ ॥ ೨೫ ॥
ನ ತೇಷಾಂ ವಿದ್ಯತೇ ಸೂರ್ಯೋ ನೇಂದುರ್ನಾಽನ್ಯೇ ಮಹಾಗ್ರಹಾಃ ।
ನಾಽಗ್ನಿರ್ದೇವಮುಖಂ ವಿದ್ಯುನ್ನೈವ ತಾರಕಕೋಟಯಃ ॥ ೨೬ ॥
ಕೇನಾಲೋಕೇನ ಪಶ್ಯಂತಿ ಸಮಾನಿ ವಿಷಮಾಣಿ ಚ ।
ನರಕಸ್ಥಾ ನರಾ ಲೋಕೇ ನ ಪಶ್ಯಂತ್ಯನ್ಯಲೋಕಗಾಃ ॥ ೨೭ ॥
ವಿಚರಂತಃ ಸಮಂ ಕೋ ವಾ ಮನೋರಥಶತಪ್ರದಃ ।
ತೃಷ್ಣಾಂಭಃ ಕ್ಷುಧಿತಾನ್ನಂ ಚ ಶ್ರಾಂತಾನಾಮಥವಾಹನಂ ॥ ೨೮ ॥

---

೨೨. ನಿನ್ನಲ್ಲಿ ಏನಾದರೂ ಆಹಾರವಿರುವುದೆ? ದೀಪವಾಗಲಿ, ವಾಹನವಾಗಲಿ, ಛತ್ರಿಯಾಗಲಿ, ಅನ್ನವಾಗಲಿ, ಹಾಸಿಗೆಯಾಗಲಿ, ಮನೆಯಾಗಲಿ—ಯಾವ ದಿಕ್ಕಿನಲ್ಲಿ ಎಲ್ಲಿರುವುದು?

೨೩. ಎಲ್ಲಿಯಾದರೂ ಎಂತಹುದಾದರೂ ನೀರು ದೊರಕುವುದೆ? ಅದರಿಂದ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾದೀತು. ಅಪ್ಪಾ! ನೀನಿರುವಲ್ಲಿ ಬಂಧುವಾಗಲಿ, ಮಗನಾಗಲಿ, ತಂಪಾದ ಮರದ ನೆಳಲಾಗಲಿ ಇರುವುವೆ?''

೨೪–೨೫. ಈ ವಿಧವಾಗಿ ದೈನ್ಯದಿಂದ ತಮ್ಮತಮ್ಮಲ್ಲಿ ಮಾತನಾಡಿಕೊಳ್ಳುತ್ತ ಮಹೇಂದ್ರನೇ ಮೊದಲಾದ ದೇವತೆಗಳೂ, ಭೂಮಿಯ ಬಿಲಗಳಲ್ಲಿ ವಾಸಮಾಡಿಕೊಂಡಿರುವ ಪ್ರಾಣಿಗಳೂ, ರಸಾತಲಲೋಕದಲ್ಲಿ ವಾಸಿಸುತ್ತಿರುವ ದೈತ್ಯರೂ, ನಾಗರೂ ಎಲ್ಲರೂ ಅತಿಯಾಗಿ ಚಿಂತೆಗೊಳಗಾದರು.

೨೬. ಅವರಿಗೆ ಸೂರ್ಯನಾಗಲಿ, ಚಂದ್ರನಾಗಲಿ, ಇತರ ಮಹಾಗ್ರಹಗಳಾಗಲಿ, ದೇವಮುಖನೆನಿಸಿದ ಅಗ್ನಿಯಾಗಲಿ, ಮಿಂಚುಗಳಾಗಲಿ, ಕೋಟಿಗಟ್ಟಲೆಯಾಗಿರುವ ನಕ್ಷತ್ರಗಳಾಗಲಿ ಕಾಣಿಸುತ್ತಿರಲಿಲ್ಲ.

೨೭. ''ಯಾವ ಬೆಳಕಿನ ಸಹಾಯದಿಂದ ಸಮ ಮತ್ತು ವಿಷಮಸ್ಥಳಗಳನ್ನು ಜನರು ನೋಡಬಲ್ಲರು? ಬ್ರಹ್ಮಾಂಡದಲ್ಲಿ ನರಕದಲ್ಲಿರುವವರಾಗಲಿ ಇತರ ಲೋಕಗಳವರಾಗಲಿ ಏನನ್ನೂ ಕಾಣರು.

೨೮. ''ನಮ್ಮ ನೂರಾರು ಮನೋರಥಗಳನ್ನು ಯಾರು ಸರಿಯಾಗಿ

ಸಮೇ ಶಯ್ಯಾ ಜಲೇ ನೌಶ್ಚ ರೋಗೇ ಸತ್ಪರಿಚಾರಕಃ ।
ಶ್ರೇಷ್ಠೌಷಧೀಭಿಃ ಸನ್ಮಂತ್ರೈಃ ಸಂಪದೋ ವ್ಯಾಧಿಸಂಕಟೇ ॥ ೨೯ ॥
ಸುಹೃದ್ವಿದೇಶೇ ಛಾಯೋಷ್ಣೇ ನಿರ್ಧೂಮಃ ಶಿಶಿರೇ ಶಿಖೀ ।
ಮಹಾಭಯೇ ಪರಿತ್ರಾಣಂ ಪ್ರಕಾಶಶ್ಚ ಮಹಾನಿಶಿ ॥ ೩೦ ॥
ಸರ್ವದಶ್ಚೈವ ಸರ್ವೇಷಾಂ ಮನೋರಥಶತಪ್ರದಃ ।
ಏಕ ಏವ ಭವಾನ್ ದ್ಯೋತಸ್ತ್ವಂ ಚ ಜಾನೀಮಹೇ ವಯಂ ॥ ೩೧ ॥
ಬ್ರುವಂತ ಇತಿ ತೇ ವ್ಯಾಸ ಶುಶ್ರುವುರ್ಮಧುರಾಂ ಗಿರಂ ।
ಶ್ರುತಪೂರ್ವಾಂ ತತೋ ಮಧ್ಯಾದ್ವಿಷ್ಣೋರತುಲಕರ್ಮಣಃ ॥ ೩೨ ॥
ನ ಜಾನಂತಿ ಸ್ಥಿತಃ ಕುತ್ರ ಭಾಷತೇ ಕೇಶವೋ ವಿಭುಃ ।
ಶೃಣುಧ್ವಮಿತಿ ಮೇ ವಾಕ್ಯಂ ಸರ್ವೇ ಚೈವ ಸಮಾಹಿತಾಃ ॥ ೩೩ ॥

---

ಕೈಗೂಡಿಸುವವರು?'' ಎಂಬುದಾಗಿ ಚಿಂತಿಸುತ್ತ ಮಾತಾಡುತ್ತಿದ್ದರು. "ಬಾಯಾರಿದ ನಮಗೆ ನೀರನ್ನೂ, ಹಸಿದವರಿಗೆ ಅನ್ನವನ್ನೂ, ಪರಿಶ್ರಾಂತರಾದ ವರಿಗೆ ವಾಹನಗಳನ್ನೂ ಕೊಡುವವರು ಯಾರು?

೨೯. ಸಮಸ್ಥಳದಲ್ಲಿ ಹಾಸಿಗೆಯನ್ನೂ, ಜಲದಲ್ಲಿ ನಾವೆಯನ್ನೂ, ರೋಗಿಗಳಿಗೆ ಪರಿಚರ್ಯೆಯನ್ನೂ, ವ್ಯಾಧಿಗಳಿಗೆ ಉತ್ತಮೌಷಧಿಗಳನ್ನೂ, ಸಂಕಟ ಸಮಯಗಳಲ್ಲಿ ಉತ್ತಮ ಮಂತ್ರಾಲೋಚನೆಗಳೆಂಬ ಸಂಪದಗಳನ್ನೂ ನಮಗೆ ಯಾರು ಒದಗಿಸುವರು?

೩೦. ಪರದೇಶದಲ್ಲಿ ನಮಗೆ ಸ್ನೇಹಿತನು ಯಾರು? ಬಿಸಿಲಿನಲ್ಲಿ ನೆಳಲಾರು? ಚಳಿಗಾಲದಲ್ಲಿ ಹೊಗೆಯಿಲ್ಲದ ಬೆಂಕಿಯಾರು? ಮಹತ್ತರವಾದ ಭಯವೊದಗಿದಾಗ ರಕ್ಷಕನಾರು? ಗಾಢಾಂಧಕಾರದ ರಾತ್ರಿಯಲ್ಲಿ ಜ್ಯೋತಿ ಯಾರು?

೩೧. ಎಲೈ ಸ್ವಾಮಿಯೆ ಸಕಲರಿಗೂ ಸಕಲಾಭೀಷ್ಟಗಳನ್ನೂ ನೂರಾರು ಮನೋಭೀಷ್ಟಗಳನ್ನೂ ಈಡೇರಿಸುವವನೂ ನೀನೇ. ನೀನೊಬ್ಬನೇ ಜಗಜ್ಜ್ಯೋತಿಯೆಂಬುದನ್ನು ನಾವು ಚೆನ್ನಾಗಿ ಬಲ್ಲೆವು!''

೩೨. ವ್ಯಾಸನೆ! ಇಂತು ಪ್ರಾರ್ಥಿಸುತ್ತಿರುವ ಅವರು ಆ ತಮಸ್ಸಿನ ಮಧ್ಯದಿಂದ ಹಿಂದೆ ಕೇಳಿದ ಧ್ವನಿಯನ್ನನುಕರಿಸುತ್ತಿದ್ದ ಅಪ್ರಮೇಯ ಕರ್ಮನಾದ ಮಹಾವಿಷ್ಣುವಿನ ಮಧುರವಾಕ್ಯಗಳನ್ನು ಕೇಳಿದರು.

೩೩. ಆತನು ಎಲ್ಲಿರುವನೆಂಬುದನ್ನು ಮಾತ್ರ ಯಾರೂ ತಿಳಿಯಲಿಲ್ಲ. ಲೋಕೇಶ್ವರನಾದ ಕೇಶವನು ಹೇಳತೊಡಗಿದನು. "ನೀವೆಲ್ಲರೂ ಚಿತ್ತೈಕಾಗ್ರತೆಯುಳ್ಳವರಾಗಿ ನನ್ನ ಮಾತುಗಳನ್ನು ಕೇಳಿರಿ.

ದಾನಮೇಕಂ ಸದಾ ಸಮ್ಯಕ್ಚಿಂತಾಮಣಿಸಮಂ ಸ್ಮೃತಂ ।
ಸರ್ವೇಷಾಮೇವ ದಾನಾನಾಂ ದೀಪದಾನಂ ಪ್ರಶಸ್ಯತೇ ॥ ೩೪ ॥
ತಚ್ಚ ದೇಯಮತಃ ಸರ್ವೈಃ ಶೃಣುಧ್ವಂ ತತ್ತ್ವತೋ ಭೃಶಂ ।
ಮಯಾ ರಸಾತಲೇ ಪೂರ್ವಂ ನಾಗಾನಾಮನುಕಂಪಯಾ ॥ ೩೫ ॥
ಉತ್ಪಾದಿತೋ ದೀಪವರೋ ಯೇನ ಧ್ವಸ್ತಮಿದಂ ತಮಃ ।
ಏವಂ ಭೂತಸ್ತು ವಾಯೂನಾಮಪ್ರಧೃಷ್ಯೋ ಮಹಾಪ್ರಭಃ ॥ ೩೬ ॥
ನಿಷ್ಕಂಪೋ ನಿರ್ಮಲೋ ಹೃದ್ಯಃ ಸುಸ್ಥಿರೋ ಭಾಸ್ಕರಪ್ರಭಃ ।
ನಾಽತ್ಯುಷ್ಣೋ ನಾಽತಿಶೀತಶ್ಚ ದೇವ್ಯಾ ಯೋಗಸಮುದ್ಭವಃ ।
ತೇನ ದೀಪಪ್ರಕಾಶೇನ ಗೋಕರ್ಣೋ ನಿರ್ವೃತಿಂ ಯಯೌ ॥ ೩೭ ॥
ನಾಗಾಃ ಶೇಷಾದಯಃ ಸರ್ವೇ ನೋದ್ಯಮಾನಾಶ್ಚ ಸಂಘಶಃ ।
ದೀಪಾದ್ದೀಪಸಹಸ್ರಾಣಿ ದದುಸ್ತೇ ವೈ ಶಿವಾಽಗ್ರತಃ ॥ ೩೮ ॥
ಪರ್ವತೇಷು ಸಮುದ್ರೇಷು ವನೇಷೂಪವನೇಷು ಚ ।
ನದೀತೀರೇಷು ಸರ್ವತ್ರ ದೀಪಾನ್ ಪ್ರಜ್ವಾಲ್ಯ ರೇಮಿರೇ ॥ ೩೯ ॥

---

೩೪. ಸಕಲ ದಾನಗಳಲ್ಲಿಯೂ ಚಿಂತಾಮಣಿಗೆ ಸಮನಾದ ಒಂದೇ ಒಂದು ದಾನವಿರುವುದೆಂದು ಹೇಳಲ್ಪಟ್ಟಿರುವುದು. ಅದೇ ದೀಪದಾನವು. ಸಮಸ್ತ ದಾನಗಳಲ್ಲಿಯೂ ಈ ದೀಪದಾನವು ಬಹು ಪ್ರಶಸ್ತವಾದುದು.

೩೫-೩೬. ಆದುದರಿಂದ ನೀವೆಲ್ಲರೂ ದೀಪದಾನವನ್ನು ಮಾಡಬೇಕು. ನನ್ನ ಮಾತನ್ನು ಯಥಾರ್ಥವಾದುದೆಂದು ತಿಳಿದು ಕೇಳಿರಿ. ಪೂರ್ವದಲ್ಲಿ ನಾನು ರಸಾತಲಲೋಕದಲ್ಲಿ ವ್ಯಾಪಿಸಿದ್ದ ಅಂಧಕಾರವನ್ನು ಕಂಡು ನಾಗರಲ್ಲಿ ಅನುಕಂಪವುಳ್ಳವನಾಗಿ ಉತ್ತಮದೀಪವನ್ನುಂಟುಮಾಡಿದೆನು. ಅದರಿಂದ ಅಂಧಕಾರವು ದೂರವಾಯಿತು. ಈ ದೀಪವು ಬಿರುಗಾಳಿಗಳಿಗೂ ಆರಿಹೋಗದೆ ಮಹಾಪ್ರಭೆಯನ್ನು ಕೊಡುತ್ತಿದೆ.

೩೭. ಆ ದೀಪವು ನಿಶ್ಚಲವೂ, ಪರಿಶುದ್ಧವೂ, ಮನೋಹರವೂ, ದೃಢವೂ, ಸೂರ್ಯತೇಜೋಯುಕವೂ, ಅತ್ಯುಷ್ಣವನ್ನಾಗಲಿ ಅತಿಶೀತವನ್ನಾಗಲಿ ಮಾಡದಿರುವುದೂ ಆಗಿ ದೇವಿಯ ಯೋಗಮಾಯೆಯಿಂದ ಉಂಟಾಗಿರುವುದು. ಆ ದೀಪದ ಪ್ರಕಾಶದಿಂದಲೇ ಗೋಕರ್ಣನು ಸೌಖ್ಯವನ್ನು ಪಡೆದನು.

೩೮. ಇದರಿಂದ ಚೋದಿತರಾದ ಆದಿಶೇಷನೇ ಮೊದಲಾದ ಸಮಸ್ತ ನಾಗರೂ ಗುಂಪುಗೂಡಿಕೊಂಡು ಶಿವನ ಸನ್ನಿಧಿಯಲ್ಲಿ ಆ ದೀಪದಿಂದ ಸಾವಿರಾರು ದೀಪಗಳನ್ನು ಹೊತ್ತಿಸಿ ದಾನಮಾಡಿದರು.

೩೯. ಪರ್ವತಗಳಲ್ಲಿಯೂ, ಸಮುದ್ರಗಳಲ್ಲಿಯೂ, ಅರಣ್ಯಗಳಲ್ಲಿಯೂ, ಉದ್ಯಾನವನಗಳಲ್ಲಿಯೂ, ನದೀತೀರಗಳಲ್ಲಿಯೂ, ಎಲ್ಲೆಡೆಗಳಲ್ಲಿಯೂ ಅಸಂಖ್ಯಾತಗಳಾದ ದೀಪಗಳನ್ನುಹೊತ್ತಿಸಿ ಆನಂದಿಸಿದರು.

ಭುಂಜಾನಾಃ ಪಂಚಮೂಲಾನಿ ದಿವ್ಯಾನಿ ಕ್ಷೀರಸಂಯುತಂ ।
ಪರಮಾನ್ನಂ ಚ ಮಾಂಸಾನಿ ಮಕರಂದಂ ಘೃತೌದನಂ ॥ ೪೦ ॥
ಚಂದ್ರಶಾಲಿಭವಂ ಭಕ್ತಂ ತಾಂಬೂಲಂ ಸಪ್ತಧಾ ಗತಂ ।
ಮದ್ಯಮಷ್ಟಪ್ರಕಾರಂ ತು ಭಾರ್ಯಾಪೀತಾಽವಶೇಷಕಂ ॥ ೪೧ ॥
ಶಯನೇಷು ಮಹಾರ್ಹೇಷು ಹೃದ್ಯಾಸು ವನರಾಜಿಷು ।
ವೃಕ್ಷಮೂಲೇಷು ಸರ್ವೇಷು ವನಚ್ಛಾಯೋಪಶೋಭಿಷು ॥ ೪೨ ॥
ರಮಂತೇಸ್ಮ ಚ ತೇ ಸರ್ವೇ ಹ್ಯುದ್ವೇಷ್ಟಂತಃ ಪರಸ್ಪರಂ ।
ಕಾಮತಂತ್ರೋಪದಿಷ್ಟೈಸ್ತು ಶಾಸ್ತ್ರೈಶ್ಚ ಚುಂಬನಾದಿಭಿಃ ॥ ೪೩ ॥
ಸೂರ್ಯತಾಪ ಭಯಾನ್ಮುಕ್ತಾಶ್ಚಂದ್ರರಶ್ಮಿಭಯಾಚ್ಚ ತೇ ।
ವಿಮುಕ್ತಾಶ್ಚ ಭಯಾದ್ಘೋರಾತ್ಪಿಪೀಲಿಕೋದ್ಭವಾತ್ತಥಾ ॥ ೪೪ ॥
ಸೂರ್ಯತಾಪೇನ ದಾಹಃ ಸ್ಯಾಚ್ಛೀತಂ ಚಂದ್ರಮರೀಚಿಭಿಃ ।
ಮಯೂರನಕುಲಾದ್ಯೈಶ್ಚ ಪಿಪೀಲೀಮರಣಾದ್ಭಯಂ ॥ ೪೫ ॥
ಸೌವರ್ಣಾನ್ದೀಪಕಾನ್ ಕೃತ್ವಾ ದ್ವಿಜೇಭ್ಯಸ್ತೇ ದದುಃ ಪುನಃ ।
ತೇನ ಪಾತಾಲಮಾಶ್ರಿತ್ಯ ಕೃತ್ವಾ ಭೋಗವತೀಂ ಪುರೀಂ ॥ ೪೬ ॥

---

೪೦. ದಿವ್ಯಗಳಾದ ಐದು ವಿಧದ ಗೆಡ್ಡೆಗೆಣಸುಗಳನ್ನೂ, ಹಾಲಿನಿಂದೊಡಗೂಡಿದ ಪಾಯಸವನ್ನೂ, ಮಾಂಸಗಳನ್ನೂ, ಜೇನುತುಪ್ಪವನ್ನೂ, ತುಪ್ಪದನ್ನವನ್ನೂ ಭೋಜನ ಮಾಡುತ್ತಿದ್ದರು.

೪೧. ಚಂದ್ರಶಾಲಿಯೆಂಬ ಭತ್ತದನ್ನವನ್ನೂ, ಏಳು ಪದಾರ್ಥಗಳುಳ್ಳ ತಾಂಬೂಲವನ್ನೂ, ಎಂಟು ವಿಧವಾದ ಮದ್ಯವನ್ನೂ, ಹೆಂಡತಿಯರು ಕುಡಿದು ಮಿಕ್ಕ ಪಾನೀಯಗಳನ್ನೂ ಸೇವಿಸುತ್ತಿದ್ದರು.

೪೨-೪೩. ಅತ್ಯುತ್ತಮಗಳಾದ ಪರ್ಯಂಕಗಳಲ್ಲಿಯೂ ಮನೋಹರಗಳಾದ ಉಪವನಗಳಲ್ಲಿಯೂ ಸಕಲವೃಕ್ಷಗಳ ಮೂಲಗಳಲ್ಲಿಯೂ, ಮರಗಳ ನೆರಳಿನಿಂದ ಶೋಭಿಸುತ್ತಿರುವ ಪ್ರದೇಶಗಳಲ್ಲಿಯೂ ವಿಹರಿಸುತ್ತಿದ್ದರು. ಸ್ತ್ರೀಪುರುಷರು ಪರಸ್ಪರಾಲಿಂಗನವನ್ನು ಮಾಡಿ ಕಾಮತಂತ್ರಗಳನ್ನುಪದೇಶಿಸುವ ಶಾಸ್ತ್ರಗಳನ್ನನುಸರಿಸಿ ಚುಂಬನಾದಿಗಳಲ್ಲಿ ಪ್ರವೃತ್ತರಾಗಿದ್ದರು.

೪೪. ಅವರು ಸೂರ್ಯನ ಬಿಸಿಲಿನ ಭಯವನ್ನೂ, ಚಂದ್ರ ಕಾಂತಿಯ ಭಯವನ್ನೂ ಕ್ರಿಮಿಕೀಟಗಳ ವೆಸೆಯಿಂದಾಗುವ ಅತ್ಯಂತ ಭಯವನ್ನೂ ತೊರೆದು ಸಂಚರಿಸುತ್ತಿದ್ದರು.

೪೫. ನಾಗಗಳಿಗೆ ಸೂರ್ಯನ ಬೇಗೆಯಿಂದ ಬಾಯಾರಿಕೆಯೂ, ಚಂದ್ರನ ಕಾಂತಿಯಿಂದ ಶೈತ್ಯವೂ ನವಿಲು, ಮುಂಗುಸಿಗಳಿಂದಲೂ, ಕ್ರಿಮಿಕೀಟಗಳಿಂದಲೂ ಮರಣಭಯವೂ ಉಂಟಾಗುವುವಷ್ಟೆ.

೪೬-೪೭. ಚಿನ್ನದಿಂದ ದೀವಿಗೆಗಳನ್ನು ಮಾಡಿಸಿ ಬ್ರಾಹ್ಮಣರಿಗೆ ದಾನ

ವಸಂತಿ ಸುಖಿನಸ್ತತ್ರ ಸ್ವರ್ಗಾದಷ್ಟಗುಣೈಃ ಸುಖೈಃ ।
ಏವಮಂಧಂತಮೋ ದೇವಾಃ ಪಾತಾಲಾದ್ದೀಪತೋಗತಂ ॥ ೪೭ ॥
ಏತದ್ಗುಹ್ಯಂ ಮಯಾಖ್ಯಾತಂ ಭವತಾಂ ಚಾನುಕಂಪಯಾ ।
ದೀಪದಾನಮತೋ ಯೂಯಂ ಕುರುಧ್ವಂ ಸುಸಮಾಹಿತಾಃ ॥ ೪೮ ॥
ದೀಪಾಗ್ನಿನಾ ವಿನಾ ನೈವ ತಮೋದಾರು ಪ್ರದಹ್ಯತೇ ।
ನಾರಾಯಣಪರಾ ದೇವಾ ನಿಶಮ್ಯಾಥ ಸಮಾಹಿತಾಃ ॥ ೪೯ ॥
ಪಪ್ರಚ್ಛುಸ್ತೇ ಪುನಃ ಸರ್ವೇ ಹೃಷ್ಟಾ ದಾಮೋದರಂ ವಿಭುಂ ।
ಬ್ರೂಹಿ ನೋಽಗ್ನಿಂ ಜಗನ್ನಾಥ ಸ ದೀಪೋ ಯೇನ ಜಾಯತೇ ॥ ೫೦ ॥
ಘೋರೇ ತಮಸಿ ವೈ ಮಗ್ನಾ ನಾಽಗ್ನಿಂ ಜಾನೀಮಹೇ ವಯಂ ।
ದೇವಾನಾಂ ಮಾನಸೋ ವಹ್ನಿರಥ ಕೃಷ್ಣೇನ ಕೀರ್ತಿತಃ ॥ ೫೧ ॥
ತೇನ ದೀಪಂ ಪ್ರತಿಜ್ವಾಲ್ಯ ದೇವಾಃ ಶಿವಪರಾಯಣಾಃ ।
ದದುಸ್ತೇ ಶಿವಮುದ್ದಿಶ್ಯ ಸರ್ವಾಭೀಷ್ಟಫಲಪ್ರದಂ ॥ ೫೨ ॥

---

ಗಳನ್ನು ಮಾಡಿದರು. ಅದರಿಂದ ಪಾತಾಳಲೋಕದಲ್ಲಿಯೂ ಭೋಗವತಿಯೆಂಬ ರಾಜಧಾನಿಯನ್ನು ಮಾಡಿಕೊಂಡು ಸ್ವರ್ಗಲೋಕದ ಸುಖಗಳಿಗಿಂತಲೂ ಎಂಟು ಮಡಿ ಮಿಗಿಲಾದ ಭೋಗಗಳನ್ನನುಭವಿಸುತ್ತ ಸುಖದಿಂದ ವಾಸಮಾಡುತ್ತಿರುವರು. ಎಲೈ ದೇವತೆಗಳಿರಾ! ಇಂತು ಪಾತಾಳಲೋಕದ ಗಾಢಾಂಧಕಾರವು ದೀಪದಿಂದ ನಾಶವಾಯಿತು.

೪೮. ನಾನು ಪರಮರಹಸ್ಯವಾದ ಈ ವಿಷಯವನ್ನು ನಿಮ್ಮಲ್ಲಿ ನನಗಿರುವ ಕರುಣೆಯಿಂದ ಹೇಳಿರುವೆನು. ಆದುದರಿಂದ ನೀವೆಲ್ಲರೂ ಸಮಾಧಾನ ಮನಸ್ಸಿನಿಂದ ದೀಪದಾನವನ್ನು ಮಾಡಿರಿ.

೪೯. ದೀಪಾಗ್ನಿಯಿಂದಲ್ಲದೆ ದಾರುಣವಾದ ಈ ತಮಸ್ಸು ನಾಶವಾಗಲಾರದು.'' ನಾರಾಯಣಭಕ್ತರಾದ ದೇವತೆಗಳು ಈ ಮಾತುಗಳೆಲ್ಲವನ್ನೂ ಏಕಾಗ್ರಮನಸ್ಸಿನಿಂದ ಕೇಳಿದರು.

೫೦. ಸಂತೋಷಗೊಂಡು ಪುನಃ ಸ್ವಾಮಿಯಾದ ನಾರಾಯಣನನ್ನು ಕುರಿತು, ''ಜಗನ್ನಾಥನೆ! ಆ ದೀಪವನ್ನುಂಟುಮಾಡಲು ಉಚಿತವಾದ ಅಗ್ನಿಯನ್ನು ನಮಗೆ ತೋರಿಸು'' ಎಂದು ಕೇಳಿಕೊಂಡರು.

೫೧. ''ಘೋರವಾದ ಈ ತಮಸ್ಸಿನಲ್ಲಿ ಮುಳುಗಿರುವ ನಾವು ಯಾವ ಅಗ್ನಿಯನ್ನೂ ಅರಿಯೆವು.'' ಎಂದು ನುಡಿದ ದೇವತೆಗಳಿಗೆ ಮಹಾವಿಷ್ಣುವು ಮಾನಸವಾದ ಅಗ್ನಿಯನ್ನು ಸೂಚಿಸಿದನು.

೫೨. ಅದರಿಂದ ದೀಪವನ್ನು ಹೊತ್ತಿಸಿ ಶಿವೈಕಭಕ್ತರಾದ ಆ ದೇವತೆಗಳೆಲ್ಲರೂ ಸಕಲಾಭೀಷ್ಟಪ್ರದವಾದ ಅದನ್ನು ಶಿವನ ಪ್ರೀತ್ಯರ್ಥವಾಗಿ ದಾನ ಮಾಡಿದರು.

**ದತ್ತೇ ದೀಪೇ ತತೋ ದೇವೈರ್ದೃಷ್ಟೋ ಹೃಷ್ಟೋ ಮಹೇಶ್ವರಃ ।**
**ತಿಮಿರಂ ತದ್ಗತಂ ಚಾಽಪಿ ಜಗದ್ಯೇನ ಜಡೀಕೃತಂ ॥ ೫೩ ॥**
**ತತೋ ದೇವಾಃ ಸುಖಂ ಪ್ರಾಪುಃ ಸ್ವರ್ಗೇ ಸೇಂದ್ರಪುರೋಗಮಾಃ ।**
**ರಾಜ್ಯಂ ಭೋಗಾನ್ವಿತಂ ಪ್ರಾಪ್ಯ ಸಾರ್ಧಂ ಸ್ತ್ರೀಭಿಶ್ಚ ರೇಮಿರೇ ॥ ೫೪ ॥**
**ದೀಪದಾನಫಲಂ ಜ್ಞಾತ್ವಾ ದೈತೇಯಾಶ್ಚಾಽಪಿ ವಿಸ್ಮಿತಾಃ ।**
**ತಥೈವ ತತ್ಫಲಂ ಜ್ಞಾತ್ವಾ ವ್ಯಾಸ ಯಕ್ಷಾಶ್ಚ ವಿಸ್ಮಿತಾಃ ॥ ೫೫ ॥**
**ಪೂಜಯಿತ್ವಾ ಮಹಾದೇವಂ ಪುಷ್ಪೈಶ್ಚ ನಿರ್ಮಲೈರ್ಜಲೈಃ ।**
**ದದುರ್ದೀಪಸಹಸ್ರಾಣಿ ಸರ್ವೇ ಶಿವಪರಾಯಣಾಃ ॥ ೫೬ ॥**
**ಸ್ವಸ್ಥಾನೇ ಚಾಽಭವನ್ ಸರ್ವೇ ದೀಪದಾನಾಚ್ಚ ಶೋಭನಾಃ ।**
**ಸ್ವೇಚ್ಛಯಾ ಭುಂಜತೇ ಭೋಗಾನ್ ಬಂಧುಭೃತ್ಯಾದಿಸಂಯುತಾಃ ॥ ೫೭ ॥**
**ನಿರಾಹಾರಾಸ್ತತೋ ವ್ಯಾಸ ಪಿಶಾಚಾ ವೈ ನಿರಾಶ್ರಯಾಃ ।**
**ದೀಪದಾನಫಲಂ ಜ್ಞಾತ್ವಾ ಸರ್ವೇ ತೇಽತೀವ ವಿಸ್ಮಿತಾಃ ॥ ೫೮ ॥**
**ಚಂಡಾಲಾದಗ್ನಿಮಾನೀಯ ದದುರ್ದೀಪಂ ಶಿವೇ ರತಾಃ ।**
**ದೀಪದಾನಫಲಂ ತೇ ವೈ ಪುತ್ರದಾರಸಮನ್ವಿತಾಃ ॥ ೫೯ ॥**

---

೫೩. ಇಂತು ದೀಪದಾನವನ್ನು ಮಾಡಿದೊಡನೆಯೇ ಸಂತುಷ್ಟನಾದ ಮಹೇಶ್ವರನು ದೇವತೆಗಳಿಗೆ ಕಾಣಿಸಿಕೊಂಡನು. ಆಗ ಜಗತ್ತನ್ನೆಲ್ಲ ನಿಶ್ಚೇಷ್ಟವಾಗಿ ಮಾಡಿದ್ದ ಅಂಧಕಾರವೂ ನಾಶವಾಯಿತು.

೫೪. ಬಳಿಕ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಸ್ವರ್ಗಲೋಕಕ್ಕೆ ಹೋಗಿ ಸುಖವನ್ನು ಪಡೆದರು. ಸಕಲಭೋಗ್ಯವಸ್ತುಗಳಿಂದೊಡಗೂಡಿದ ತಮ್ಮ ರಾಜ್ಯದಲ್ಲಿ ಸ್ತ್ರೀಯರೊಡನೆ ರಮಿಸುತ್ತಿದ್ದರು.

೫೫. ಅಯ್ಯಾ ವ್ಯಾಸನೆ! ದೀಪದಾನದ ಈ ಮಹತ್ಫಲವನ್ನು ಕಂಡು ರಾಕ್ಷಸರೂ ಯಕ್ಷರೂ ವಿಸ್ಮಯವನ್ನು ತಾಳಿದರು.

೫೬. ಅವರೆಲ್ಲರೂ ಶಿವಭಕ್ತಿಪರಾಯಣರಾಗಿ ಮಹಾದೇವನನ್ನು ಪುಷ್ಪಗಳಿಂದಲೂ ನಿರ್ಮಲೋದಕದಿಂದಲೂ ಅರ್ಚಿಸಿ ಸಾವಿರಾರು ದೀಪಗಳನ್ನು ಒಪ್ಪಿಸಿದರು.

೫೭. ಎಲ್ಲರೂ ತಮ್ಮತಮ್ಮ ಲೋಕಗಳಲ್ಲಿಯೇ ದೀಪದಾನದ ಮಹಿಮೆಯಿಂದ ಮಂಗಳವುಳ್ಳವರಾದರು. ಇಂದಿಗೂ ಅವರು ಯಥೇಚ್ಛವಾಗಿ ತಮ್ಮ ಬಂಧು ಭೃತ್ಯರೇ ಮೊದಲಾದವರೊಡನೆ ಭೋಗಗಳನ್ನನುಭವಿಸುತ್ತಿರುವರು.

೫೮–೫೯. ವ್ಯಾಸನೆ! ಅಂದಿನವರೆಗೂ ಅನ್ನವಿಲ್ಲದೆ ನಿರಾಶ್ರಯರಾಗಿದ್ದ ಪಿಶಾಚರೂ ಸಹ ದೀಪದಾನದ ಫಲವನ್ನು ಕಂಡು ಅತ್ಯಂತಾಶ್ಚರ್ಯಭರಿತರಾಗಿ, ಚಂಡಾಲನ ಕಡೆಯಿಂದ ಅಗ್ನಿಯನ್ನು ತರಿಸಿಕೊಂಡು ಶಿವನಿಗೆ ಭಕ್ತಿಯಿಂದ ದೀಪವನ್ನರ್ಪಿಸಿದರು.

ಲೀಢಮನ್ನಂ ಗತರಸಂ ಪೂತಿಪರ್ಯುರ್ಷಿತಂ ತಥಾ ।
ಉಚ್ಛಿಷ್ಟಂ ಸೂತಿಕಾಸ್ಪೃಷ್ಟಂ ನ ಮೇಧ್ಯಂಚಾತಿಲಂಘಿತಂ ॥ ೬೦ ॥
ಭುಂಜಾನಾಸ್ತೇ ಸದಾ ಹೃಷ್ಟಾ ರಮಂತಿ ದುಷ್ಟಭೂಮಿಷು ।
ವಿದ್ಯಾಧರಾಸ್ತಥಾ ಮರ್ತ್ಯಾಃ ಸಿದ್ಧಾಶ್ಚ ಶಿವಮಾನಸಾಃ ॥ ೬೧ ॥
ದೀಪದಾನಫಲಂ ಜ್ಞಾತ್ವಾ ದದುರ್ದೀಪಂ ಶಿವಾಗ್ರತಃ ।
ದೀಪದಾನಾತ್ತತಃ ಸರ್ವೇ ಸರ್ವಭೋಗಸಮನ್ವಿತಾಃ ॥ ೬೨ ॥
ಸ್ಥಾನೇಷು ಮುದಿತಾಸ್ತೇಷು ರಮಂತೇ ಸುಖಿನಸ್ತದಾ ।
ತಿಮಿರಂ ತದ್ಗತಂ ಚೈವ ವ್ಯಾಸ ಲೋಕೇಷು ದೀಪತಃ ॥ ೬೩ ॥
ತತೋ ಘೋರಂ ಸ್ಥಿತಂ ಸಮ್ಯಕ್ಪ್ರೇತಲೋಕೇಷು ಸರ್ವದಾ ।
ಪ್ರೇತಲೋಕಂ ತದಾ ದೃಷ್ಟ್ವಾ ಘೋರೇಣ ತಮಸಾವೃತಾಃ ॥ ೬೪ ॥
ದಾಮೋದರಂ ಜಗನ್ನಾಥಮೂಚುಃ ಸರ್ವೇ ಸುರೋತ್ತಮಾಃ ।
ಘೋರಂ ಚೈವ ತಮೋ ಹತ್ವಾ ಪ್ರಸನ್ನಾಸ್ತೇ ಸದಾ ವಿಭೋ ॥ ೬೫ ॥
ಗಂಧರ್ವಾಶ್ಚ ತಥಾ ಯಕ್ಷಾಃ ಸಿದ್ಧಾ ವಿದ್ಯಾಧರೋರಗಾಃ ।
ವಯಂ ಚೈವ ತಥಾ ಮರ್ತ್ಯಾಃ ಸರ್ವಭೋಗೈಶ್ಚ ಸಂಯುತಾಃ ॥ ೬೬ ॥

---

೬೦–೬೧. ಅವರು ಹೆಂಡಿರು ಮಕ್ಕಳೊಡನೆ ದೀಪದಾನದ ಫಲವನ್ನೂ ಅನುಭವಿಸಿದರು. ರುಚಿನೋಡಲ್ಪಟ್ಟುದು, ನೀರಸವಾದುದು, ದುರ್ಗಂಧಯುಕ್ತವಾದುದು, ಹಿಂದಿನ ದಿನದ ಅನ್ನ, ಎಂಜಲು, ಸೂತಕಾನ್ನ, ನಿಷಿದ್ಧಾನ್ನ, ಬಿಸಿಯಾರಿದುದು—ಈ ಅನ್ನಗಳನ್ನು ಭೋಜನಮಾಡುತ್ತ ನಿತ್ಯವೂ ಸಂತೋಷದಿಂದ ಅಶುದ್ಧಪ್ರದೇಶಗಳಲ್ಲಿ ವಿಹರಿಸುತ್ತಿರುವರು.

೬೨. ದೀಪದಾನದ ಫಲವನ್ನು ತಿಳಿದ ವಿದ್ಯಾಧರರೂ, ಮನುಷ್ಯರೂ, ಸಿದ್ಧರೂ, ಶಿವನಲ್ಲಿಯೇ ನೆಟ್ಟಮನವುಳ್ಳವರಾಗಿ ಶಿವಸನ್ನಿಧಿಯಲ್ಲಿ ದೀಪದಾನವನ್ನು ಮಾಡುವವರಾದರು.

೬೩. ದೀಪದಾನದಿಂದಲೇ ಇವರೆಲ್ಲರೂ ಸಕಲಭೋಗ್ಯಸಾಮಗ್ರಿಗಳಿಂದೊಡಗೂಡಿದವರಾಗಿ ಅವರವರ ಲೋಕಗಳಲ್ಲಿ ಸಂತೋಷದಿಂದಲೂ ಸುಖದಿಂದಲೂ ವಾಸಿಸುತ್ತಿರುವರು.

೬೪. ವ್ಯಾಸನೆ! ಇಂತು ಸಕಲ ಲೋಕಗಳಲ್ಲಿಯೂ ದೀಪದಾನದ ಪ್ರಭಾವದಿಂದ ದೂರಗೊಳಿಸಲ್ಪಟ್ಟ ಅಂಧಕಾರವು ಒಟ್ಟುಗೂಡಿ ಪ್ರೇತಲೋಕಗಳಲ್ಲಿ ಘೋರವಾಗಿ ಕವಿದುಕೊಂಡಿದ್ದಿತು.

೬೫. ಇಂತು ಭಯಂಕರತಮಸ್ಸಿನಿಂದ ಆವೃತವಾದ ಪ್ರೇತಲೋಕವನ್ನು ಕಂಡು ದೇವತೆಗಳೆಲ್ಲರೂ ಕೂಡಿ ಲೋಕನಾಥನಾದ ಮಹಾವಿಷ್ಣುವನ್ನು ಪ್ರಾರ್ಥನೆ ಮಾಡಿದರು.

೬೬. "ಸ್ವಾಮಿಯೆ! ಘೋರವಾದ ತಮಸ್ಸನ್ನು ಕಳೆದು ನಾವು

ಸ್ಥಾನೇಷು ಚ ಸದಾ ಹ್ಯೇಷು ಸುಖಿನಶ್ಚ ರಮಾಮಹೇ ॥ ೬೭ ॥
ಪ್ರೇತಲೋಕೇ ನರಾ ಯೇ ವೈ ಘೋರೇಣ ತಮಸಾ ವೃತಾಃ ।
ವಸಂತಿ ಚ ಜಗನ್ನಾಥ ವರ್ತಂತೇ ತೇಽತಿದುಃಖಿತಾಃ ॥ ೬೮ ॥
ಯೈರ್ನೋ ಕೃತಂ ಹಿ ತತ್ಕರ್ಮ ಕೃಷ್ಣಾಽಲಂ ಪಾಪಮೋಹಿತೈಃ ।
ನ ತೇಷಾಂ ವಿದ್ಯತೇ ಕಿಂಚಿದ್ಯತ್ಪ್ರಕಾಶಂ ಕರೋತಿ ಚ ॥ ೬೯ ॥
ಘೋರೇ ತಮಸಿ ತೇ ಮಗ್ನಾಸ್ತತ್ರ ನಾಽರ್ಕೇಂದುವಹ್ನಯಃ ।
ನ ಸಹಾಯೋ ನ ಜಾಯೇಯಂ ನಾಲಂಬೋ ನ ಚ ದೇಶಿಕಾಃ ।
ನ ವಾಹನಂ ನ ಶಯ್ಯಾ ಚ ಕೇವಲಂ ತು ಮಹತ್ತಮಃ ॥ ೭೦ ॥
ತತ್ರಾಽಷ್ಟಾವಿಶಂತಿಃ ಖ್ಯಾತಾ ಘೋರಾ ನರಕಕೋಟಯಃ ।
ತಮೋಮಯಾಶ್ಚ ತಾಃ ಸರ್ವಾಃ ಪಾಪಿನಾಂ ಭಯದಾಃ ಸದಾ ॥ ೭೧ ॥
ಸುಖಂ ತತ್ರ ಕಥಂ ಕೃಷ್ಣ ಲಭಂತೇ ದುಃಖಿತಾ ನರಾಃ ।
ದಾರಿದ್ರ್ಯದುಃಖರೋಗೈಶ್ಚ ಮಾಯಾಮೋಹೈಶ್ಚ ಸರ್ವದಾ ॥ ೭೨ ॥

---

ಗಂಧರ್ವರೂ, ಯಕ್ಷರೂ, ಸಿದ್ಧರೂ, ವಿದ್ಯಾಧರರೂ, ನಾಗರೂ ಯಾವಾಗಲೂ ನಿನಗೆ ಕೃತಜ್ಞರಾಗಿರುವೆವು.

೬೭. ನಾವೂ ಮನುಷ್ಯರೂ ಸಕಲಭೋಗಗಳಿಂದ ಕೂಡಿದವರಾಗಿ ನಮ್ಮ ಸ್ಥಾನಗಳಲ್ಲಿ ಸುಖದಿಂದ ಆನಂದಪಡುತ್ತಿರುವೆವು.

೬೮. ಆದರೆ ಪ್ರೇತಲೋಕದಲ್ಲಿರುವ ಜೀವರೆಲ್ಲರೂ ಘೋರವಾದ ತಮಸ್ಸಿನಲ್ಲಿ ಸಿಕ್ಕಿಕೊಂಡು ಅತ್ಯಂತ ದುಃಖವನ್ನು ಸಹಿಸುತ್ತ ವಾಸಿಸುತ್ತಿರುವರು.

೬೯. ಎಲೈ ಶ್ರೀಕೃಷ್ಣನೆ! ಪಾಪಗಳಲ್ಲಿಯೇ ಆಸಕ್ತರಾಗಿದ್ದ ಅವರು ದೀಪದಾನವನ್ನು ಮಾಡಿರುವುದಿಲ್ಲ. ಅಂತಹವರಿಗೆ ಪ್ರಕಾಶವನ್ನು ಕೊಡುವುದು ಯಾವುದೂ ಇರುವುದಿಲ್ಲ.

೭೦. ಅವರು ಭಯಂಕರವಾದ ತಮಸ್ಸಿನಲ್ಲಿ ಮಗ್ನರಾಗಿರುವರು. ಅಲ್ಲಿ ಸೂರ್ಯಚಂದ್ರಾಗ್ನಿಗಳಿಲ್ಲ. ಯಾವ ಸಹಾಯವಾಗಲಿ, ಹೆಂಡತಿಯರಾಗಲಿ, ಅವಲಂಬನವಾಗಲಿ, ಆಚಾರ್ಯರಾಗಲಿ ಇರುವುದಿಲ್ಲ. ವಾಹನ ಸೌಕರ್ಯಗಳೂ, ಪರ್ಯಂಕಗಳೂ ಇಲ್ಲದೆ ಕೇವಲ ತಮಸ್ಸಿನಿಂದ ಆ ಲೋಕವು ಆವೃತವಾಗಿರುವುದು.

೭೧. ಅಲ್ಲಿ ಭಯಂಕರಗಳಾದ ಇಪ್ಪತ್ತೆಂಟು ಕೋಟಿ ನರಕಗಳಿರುವುವೆಂದು ಕೇಳಿರುವೆವು. ಅವುಗಳೆಲ್ಲವೂ ಅಂಧಕಾರಮಯಗಳಾಗಿ ಪಾಪಿಗಳಿಗೆ ನಿತ್ಯವೂ ಭಯವನ್ನುಂಟುಮಾಡುತ್ತಿರುವುವು.

೭೨. ದುಃಖಗೊಂಡ ಆ ನರರು ಹೇಗೆ ಸುಖವನ್ನು ಕಾಣುವರು? ಅವರು ಯಾವಾಗಲೂ ದಾರಿದ್ರ್ಯ, ದುಃಖ, ರೋಗಗಳಿಂದಲೂ, ಮಾಯಾಮೋಹಗಳಿಂದಲೂ ವ್ಯಥೆಪಡುತ್ತಿರುವರು.

ಸನತ್ಕುಮಾರ ಉವಾಚ :—

ಇತಿ ಶ್ರುತ್ವಾ ತು ದೇವಾನಾಂ ಪ್ರಾರ್ಥನಾಂ ಗರುಡಧ್ವಜಃ ।
ಉವಾಚ ವಚನಂ ಹೃದ್ಯಂ ಮನೋರಥಫಲಪ್ರದಂ ॥ ೭೩ ॥
ಶೃಣುಧ್ವಂ ತ್ರಿದಶಾಃ ಸರ್ವೇ ಯತ್ಪ್ರವಕ್ಷ್ಯಾಮಿ ವೋ ವಚಃ ॥ ೭೪ ॥
ಅವಂತ್ಯಾಂ ವರ್ತತೇ ತೀರ್ಥಂ ಸದ್ಯಃ ಪಾಪಹರಂ ಪರಂ ।
ಅನರಕಾಖ್ಯಂ ಮಹಾಪುಣ್ಯಂ ಸರ್ವತೀರ್ಥೋತ್ತಮೋತ್ತಮಂ ॥ ೭೫ ॥
ಕಾರ್ತಿಕಸ್ಯಾಽಸಿತೇ ಪಕ್ಷೇ ಚತುರ್ದಶ್ಯಾಂ ಸಮಾಹಿತಃ ।
ತತ್ರ ಸ್ನಾತ್ವಾ ನರೋ ಯಸ್ತು ಯಮಧ್ಯಾನಪರಾಯಣಃ ॥ ೭೬ ॥
ಸಂಗೃಹ್ಯ ವೈ ತಿಲಾನ್ ಕೃಷ್ಣಾನ್ಪಿತೃಭಕ್ತೋ ಜಿತೇಂದ್ರಿಯಃ ।
ದಕ್ಷಿಣಾಭಿಮುಖೋ ಭೂತ್ವಾ ಮಧ್ಯಾಹ್ನೇ ಸುರಸತ್ತಮಾಃ ॥ ೭೭ ॥
ಅಪಸವ್ಯಂ ತಥಾ ಕೃತ್ವಾ ಮಂತ್ರೈಃ ಸಂತರ್ಪಯೇದ್ಯಮಂ ।
ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ॥ ೭೮ ॥
ವೈವಸ್ವತಾಯ ಕಾಲಾಯ ದಕ್ಷಾಯ ಮನವೇ ತಥಾ ।
ಕೃಷ್ಣಾಯ ಕೃಷ್ಣಗುಪ್ತಾಯ ಪ್ರೇತಲೋಕಪರಾಯ ಚ ॥ ೭೯ ॥

---

೭೩. ಸನತ್ಕುಮಾರನು ಹೇಳುತ್ತಾನೆ:—ಇಂತೆಂದ ದೇವತೆಗಳ ಪ್ರಾರ್ಥನೆಯನ್ನು ಕೇಳಿ ಗರುಡಲಾಂಛನನಾದ ಮಹಾವಿಷ್ಣುವು ಹೃದ್ಯವೂ ಮನೋರಥವನ್ನು ಕೊಡುವುದೂ ಆದ ಮಾತನ್ನು ಹೇಳಿದನು.

೭೪. ದೇವತೆಗಳಿರಾ! ನಾನು ಹೇಳುವ ಮಾತನ್ನು ನೀವೆಲ್ಲರೂ ಕೇಳಿರಿ.

೭೫. ಅವಂತೀಕ್ಷೇತ್ರದಲ್ಲಿ ಕ್ಷಣಮಾತ್ರದಿಂದಲೇ ಪಾಪವನ್ನು ಪರಿಹರಿಸುವುದೂ, ಸರ್ವೋತ್ತಮವೂ, ಮಹಾಪುಣ್ಯಪ್ರದವೂ ಆದ ಅನರಕವೆಂಬ ಪ್ರಖ್ಯಾತವಾದ ತೀರ್ಥವಿರುವುದು.

೭೬. ಕಾರ್ತಿಕಮಾಸದ ಕೃಷ್ಣಚತುರ್ದಶಿಯ ದಿನದಲ್ಲಿ ನರನು ಆ ತೀರ್ಥದಲ್ಲಿ ಮಿಂದು ಚಿತ್ತೈಕಾಗ್ರತೆಯಿಂದ ಯಮನನ್ನು ಕುರಿತು ಧ್ಯಾನವನ್ನು ಮಾಡಬೇಕು.

೭೭. ಅಯ್ಯಾ ದೇವೋತ್ತಮರಿರಾ! ಮಧ್ಯಾಹ್ನಕಾಲದಲ್ಲಿ ಪಿತೃಭಕ್ತನಾಗಿಯೂ ಜಿತೇಂದ್ರಿಯನಾಗಿಯೂ ಇದ್ದವನು ಕರಿಯ ಎಳ್ಳನ್ನು ತೆಗೆದುಕೊಂಡು ದಕ್ಷಿಣಾಭಿಮುಖನಾಗಿ ಕುಳಿತುಕೊಳ್ಳಬೇಕು.

• ೭೮-೮೦. ಯಜ್ಞೋಪವೀತವನ್ನು ಅಪಸವ್ಯವಾಗಿ ಧರಿಸಿ ಮುಂದೆ ಹೇಳುವ ಮಂತ್ರಗಳಿಂದ ಯಮಧರ್ಮರಾಜನಿಗೆ ತರ್ಪಣಗಳನ್ನು ಕೊಡಬೇಕು. ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ, ಕಾಲ, ದಕ್ಷ, ಮನು, ಕೃಷ್ಣ,

ಹರಯೇ ರವಿಪುತ್ರಾಯ ಕಾಲಿಂದೀಸೋದರಾಯ ಚ ।
ತಥಾ ವೈ ಶ್ರಾದ್ಧದೇವಾಯ ಪಿತೄಣಾಂ ಪತಯೇ ತಥಾ ॥ ೮೦ ॥
ಮಂತ್ರೈರೇಭಿರ್ನಮಃ ಪ್ರೋಕ್ತೈರೋಂಕಾರಾದ್ಯೈಃ ಸುಶೋಭನೈಃ ।
ಜಲಾಂಜಲಿಂ ಸದರ್ಭಂ ವೈ ದದ್ಯಾಚ್ಚ ತಿಲಸಂಯುತಂ ॥ ೮೧ ॥
ಸಂತರ್ಪಯೇದ್ಯಮಂ ದೇವಂ ತಿಲಪಾತ್ರಂ ಸಮಾಹಿತಃ ।
ಪ್ರಾಜ್ಞೋ ವಿಪ್ರಾಯ ವೈ ದದ್ಯಾದ್ವಿತ್ತಶಾಠ್ಯವಿವರ್ಜಿತಃ ॥ ೮೨ ॥
ಅನೇನ ವಿಧಿನಾ ಯಸ್ತು ಸಂತರ್ಪಯೇದ್ಯಮಂ ವಿಭುಂ ।
ಪಿತರಸ್ತಸ್ಯ ಮುಚ್ಯಂತೇ ನಿರಯೇ ಯೇ ಗತಾ ಅಪಿ ॥ ೮೩ ॥
ರಾತ್ರಿಂ ತತ್ರಾಽಥ ಸಂಪ್ರಾಪ್ಯ ಮಾನವಃ ಕಾಮಸಂಯುತಃ ।
ನಮಃ ಪಿತೃಭ್ಯಃ ಪ್ರೇತೇಭ್ಯೋ ನಮೋ ಧರ್ಮಾಯ ವಿಷ್ಣವೇ ॥ ೮೪ ॥
ನಮಃ ಸೂರ್ಯಾಯ ರುದ್ರಾಯ ಕಾಲಾಂತಪತಯೇ ನಮಃ ।
ಏಭಿರ್ಮಂತ್ರೈರ್ಯಮೋ ದೀಪಂ ಯೋ ದದ್ಯಾದ್ಘೃತಪೂರಿತಂ ॥ ೮೫ ॥

---

ಕೃಷ್ಣಗುಪ್ತ, ಪ್ರೇತಲೋಕಪರ, ಹರಿ, ರವಿಪುತ್ರ, ಕಾಳಿಂದೀಸಹೋದರ, ಶ್ರಾದ್ಧದೇವ, ಪಿತೃಪತಿ—ಎಂಬ ಆತನ ಹೆಸರುಗಳನ್ನು ಹೇಳಬೇಕು.

೮೧. ಈ ನಾಮಗಳನ್ನು ಓಂಕಾರಾದಿಯಾಗಿಯೂ ನಮಶ್ಶಬ್ದಾಂತವಾಗಿಯೂ ಉಚ್ಚರಿಸುತ್ತ ಮಂಗಳಕರವಾಗುವಂತೆ ದರ್ಭೆ, ಎಳ್ಳುಗಳನ್ನು ತೆಗೆದುಕೊಂಡು ಜಲತರ್ಪಣಗಳನ್ನು ಕೊಡಬೇಕು.

೮೨. ದೇವದೇವನಾದ ಯಮನಿಗೆ ತರ್ಪಣವನ್ನಿತ್ತಮೇಲೆ ಸಮಾಧಾನ ಮನಸ್ಸಿನಿಂದ ಜ್ಞಾನಿಯಾದವನು ಧನಲೋಭವನ್ನು ಮಾಡದೆ ಎಳ್ಳು ತುಂಬಿದ ಪಾತ್ರೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೮೩. ಈ ವಿಧವಾದ ಕ್ರಿಯೆಯಿಂದ ಯಾವನು ಪ್ರೇತಪತಿಯಾದ ಯಮನನ್ನು ಸಂತೋಷಗೊಳಿಸುವನೊ, ಅವನ ಪಿತೃಗಳು ನರಕದಲ್ಲಿ ನರಳುತ್ತಿದ್ದರೂ ಮೋಕ್ಷವನ್ನು ಪಡೆಯುವರು.

೮೪–೮೬. ಅಭಿಲಷಿತವನ್ನು ಪಡೆಯಬೇಕೆಂಬ ಮಾನವನು ಅಂದಿನ ರಾತ್ರಿಯಲ್ಲಿ "ಪ್ರೇತರೂಪರಾದ ಪಿತೃಗಳಿಗೆ ನಮಸ್ಕಾರವು; ವಿಷ್ಣುರೂಪಿಯಾದ ಯಮಧರ್ಮನಿಗೆ ನಮಸ್ಕಾರವು. ಸೂರ್ಯನೂ, ಭಯದಾಯಕನೂ, ಪ್ರಳಯಾಧಿಪತಿಯೂ ಆದ ಯಮನಿಗೆ ನಮಸ್ಕಾರವು" ಎಂಬ ಮಂತ್ರಸಹಿತವಾಗಿ ಯಮನಿಗೆ ತುಪ್ಪದಿಂದ ಕೂಡಿದ ದೀಪವನ್ನು ಸಮರ್ಪಿಸಬೇಕು. ಇಂತು ಕಾರ್ತಿಕಮಾಸದಲ್ಲಿ ಪ್ರತಿದಿನವೂ ಮಾಡುವವನಿಗೆ ಸಕಲೈಶ್ವರ್ಯಗಳೂ ಕೈಗೂಡುವುವು. ಈ ಕ್ರಮದಿಂದ ಕಾರ್ತಿಕಮಾಸವು ಸಾಂಗವಾಗಿ ಕಳೆಯಲು

ಕಾರ್ತಿಕಂ ಹಿ ಸಮಗ್ರಂ ತು ವರ್ಧಂತೇ ತಸ್ಯ ಸಂಪದಃ ।
ಸಂಪೂರ್ಣೇ ಕಾರ್ತಿಕೇ ಚೈವ ದೀಪೋದ್ಯಾಪನಮಾಚರೇತ್ ॥ ೮೬ ॥

ದಿವಾಕರಾಽಹ್ನೇಽಸ್ತಮಿತೇ ಚ ಸೂರ್ಯೇ
ದೀಪಸ್ಯ ವರ್ತಿಂ ಪುರುಷಪ್ರಮಾಣಾಂ ।
ಯೂಪಾಕೃತೌ ದಾರುಮಯೇ ಕರೋತಿ
ಯಥಾ ಚ ಧೀಮಾನ್ಯಮಭಕ್ತಿಚಿತ್ತಃ ॥ ೮೭ ॥

ನಿಕ್ಷಿಪ್ಯ ಭೂಮಾವಥ ಹಸ್ತಮಾತ್ರಂ
ಮೂರ್ಧ್ನಿ ದ್ವಿಹಸ್ತಾಷ್ಟದಲಾನ್ವಿತಸ್ಯ ।
ಧಾರ್ಯಾಶ್ಚತಸ್ರಃ ಶುಭಪಟ್ಟಿಕಾಶ್ಚ
ಛಿದ್ರೇಣ ಯುಕ್ತಾಶ್ಚತುರಂಗುಲೇನ ॥ ೮೮ ॥

ತತ್ಕರ್ಣಿಕಾಯಾಂ ತು ಮಹಾಪ್ರಕಾಶೋ
ದೇಯೋಹಿ ದೀಪಃ ಪರಯಾ ಚ ಭಕ್ತ್ಯಾ ।
ಉದಙ್ಮುಖಾನ್ದೀಪವರಾಂಸ್ತಥಾಽಷ್ಟೌ
ದಲೇಷು ತಸ್ಯಾ ಘೃತಪೂರ್ಯಮಾಣಾಃ ॥ ೮೯ ॥

ಅನಂಗಲಗ್ನಂ ಧವಲಂ ಚ ವಸ್ತ್ರಂ
ನವಂ ಸುರಕ್ತಂ ಹ್ಯಥವಾ ಸುಶುಕ್ಲಂ ।
ವರ್ತ್ಯಾರ್ಥಂ ಪ್ರದೇಯಂ ಚ ಸ್ವಕೇ ಚ ದದ್ಯಾತ್
ಸ್ನಿಗ್ಧೇ ತ್ವಖಂಡೇ ಸುಸಮೇ ಪ್ರಶಸ್ತೇ ॥ ೯೦ ॥

---

ಮನುಷ್ಯನು ದೀಪದಾನದ ಮಹಾವ್ರತಕ್ಕೆ ಹೇಳಲ್ಪಟ್ಟಿರುವ ಉದ್ಯಾಪನೆಯನ್ನಾಚರಿಸಬೇಕು.

೮೭–೮೮. ಭಾನುವಾರ ಸೂರ್ಯಾಸ್ತಮಯಸಮಯದಲ್ಲಿ ಈ ಕಾರ್ಯವನ್ನು ಮಾಡಬೇಕು. ಒಂದಾಳಿನ ಪ್ರಮಾಣದ ಬತ್ತಿಯನ್ನು ಮಾಡಬೇಕು. ಯಮಧರ್ಮನಲ್ಲಿ ಭಕ್ತಿಯಿಂದ ಕೂಡಿದ ವಿದ್ವಾಂಸನು ಮರದಿಂದ ಒಂದು ಯೂಪಸ್ತಂಭವನ್ನು ಸಿದ್ಧಗೊಳಿಸಬೇಕು. ಆದರಲ್ಲಿ ಒಂದು ಹಸ್ತಪ್ರಮಾಣವನ್ನು ಭೂಮಿಯಲ್ಲಿ ಸ್ಥಾಪಿಸಲು ಮೇಲೆ ಎರಡು ಹಸ್ತದಷ್ಟಿರಬೇಕು. ಅದರ ತುದಿಯಲ್ಲಿ ಎಂಟುದಳಗಳ ಪದ್ಮವನ್ನು ಬರೆದಿರಬೇಕು. ನಾಲ್ಕಂಗುಲಪ್ರಮಾಣದ ಛಿದ್ರಗಳಿಂದೊಡಗೂಡಿದ ನಾಲ್ಕು ಪಟ್ಟಿಕೆಗಳನ್ನು ಆದಕ್ಕೆ ಕಟ್ಟರಬೇಕು.

೮೯. ಆ ಪದ್ಮದ ಮಧ್ಯದಲ್ಲಿ ಮಹಾಪ್ರಕಾಶವುಳ್ಳ ದೀಪವೊಂದನ್ನು ಅತ್ಯಂತ ಭಕ್ತಿಯಿಂದರ್ಪಿಸಬೇಕು. ಅದರ ದಳಗಳಲ್ಲಿ ತುಪ್ಪದಿಂದ ತುಂಬಿರಿಸಿದ ಉತ್ತರಾಭಿಮುಖಗಳಾದ ಎಂಟು ದೀಪಗಳನ್ನೂ ಹೊತ್ತಿಸಿಡಬೇಕು.

೯೦. ಧರಿಸದಿರುವ ಶುಭ್ರವಾದ ಕೆಂಪು ಅಥವ ಬಿಳಿಯ ಬಣ್ಣದ ಬಟ್ಟೆಯಿಂದ ಬತ್ತಿಗಳನ್ನು ಮಾಡಿರಬೇಕು. ಅದರ ಮುಂದೆ ಅಖಂಡವೂ, ಸಮವೂ, ಪ್ರಶಸ್ತವೂ ಆದ ಎಣ್ಣೆಯ ದೀಪವನ್ನು ತನ್ನದಾಗಿ ಕೊಡಬೇಕು.

ತಚ್ಚಾಲಿಪಿಷ್ಟೋಪರಿ ಸನ್ನಿಧಾಯ
ಯಥಾ ನ ನಿರ್ಯಾತಿ ನ ಕಂಪತೇ ಚ
ಸರ್ವಂ ಪ್ರಕುರ್ಯಾತ್ತ್ರಿಗುಣಪ್ರಮಾಣಂ
ಮಧ್ಯಸ್ಥಿತಸ್ತಸ್ಯ ಚ ದೀಪರಾಜಃ ॥ ೯೧ ॥
ದಲೇಷು ಶೋಭಾರ್ಥಮತೀವ ಕುರ್ಯಾತ್
ಮನೋರಥಪ್ರತ್ಯುಪಲಬ್ಧಯೇ ಚ ।
ಘಂಟಾಷ್ಟಕಂ ಲಂಬಿತಪುಷ್ಪದಾಮ
ಸವಸ್ತ್ರಶೋಭಾನ್ವಿತಮತ್ರ ಕಾರ್ಯಂ ॥ ೯೨ ॥
ಸಂಲಿಪ್ಯ ಭೂಮಿಂ ತ್ವಥ ಗೋಮಯೇನ
ಪುನಃ ಸುಗಂಧೇನ ಜಲೇನ ಲಿಪ್ತ್ವಾ ।
ಕುರ್ಯಾದ್ವಿಚಿತ್ರಂ ತ್ವಥ ಮಂಡಲೇ ಚ
ದಲಾಷ್ಟಕಂ ವೈ ಕಮಲಂ ಚ ರಮ್ಯಂ ॥ ೯೩ ॥
ತತೋ ಜಲಂ ಶೀತಲಮಾನಯಿತ್ವಾ
ಆಪೂರ್ಯ ಚಾಽಷ್ಟೌ ಕಲಶಾಂಸ್ತು ರಮ್ಯಾನ್ ।
ನಿಧಾಯ ಮೂರ್ಧ್ನಿ ಕ್ರಮಶೋ ಹಿ ಧೀಮಾನ್
ಫಲಾನಿ ಮೂಲಾನಿ ತಥೇಕ್ಷುಕಾನಿ ॥ ೯೪ ॥

---

೯೧. ಅದನ್ನು ಅಕ್ಕಿಯ ಹಿಟ್ಟಿನ ಮಂಡಲದ ಮೇಲಿಡಬೇಕು. ದೀಪವು ಆರದಂತೆಯೂ ಅಲ್ಲಾಡದಂತೆಯೂ ನೋಡಿಕೊಳ್ಳಬೇಕು. ಇಲ್ಲಿನ ಪದ್ಮ, ದಳಗಳು, ದೀಪಗಳು ಮುಂತಾದುವುಗಳೆಲ್ಲವನ್ನೂ ಹಿಂದೆ ಹೇಳಿದುದರ ಮೂರರಷ್ಟು ಪ್ರಮಾಣದಿಂದ ಮಾಡಬೇಕು. ಅವರ ಮಧ್ಯದಲ್ಲಿಯೂ ಉತ್ತಮ ದೀಪವು ರಾಜಿಸುತ್ತಿರಬೇಕು.

೯೨. ತನ್ನ ಮನೋರಥಗಳನ್ನು ಪಡೆಯುವುದಕ್ಕಾಗಿಯೂ ದಳಗಳಲ್ಲಿ ಅಲಂಕಾರವಾಗಿರುವಂತೆಯೂ ಪುಷ್ಪಮಾಲೆಗಳಿಂದಲಂಕೃತಗಳಾದ ಎಂಟು ಘಂಟೆಗಳನ್ನಿಟ್ಟಿರಬೇಕು. ಆ ಪ್ರದೇಶವು ಶುಭ್ರವಸ್ತ್ರಗಳ ಕಾಂತಿಯಿಂದ ಕೂಡಿದುದಾಗಿರಬೇಕು.

೯೩. ಅದರ ಮುಂದೆ ಭೂಮಿಯನ್ನು ಮೊದಲು ಗೋಮಯದಿಂದಲೂ ಬಳಿಕ ಸುಗಂಧೋದಕದಿಂದಲೂ ಸಾರಿಸಬೇಕು. ನಾನಾವಿಧಗಳಾದ ರಂಗವಲ್ಲಿಗಳಿಂದಲಂಕರಿಸಿದ ಆ ಸ್ಥಳದಲ್ಲಿ ಮನೋಹರವಾದ ಅಷ್ಟದಳಪದ್ಮವನ್ನು ಬರೆದಿರಬೇಕು.

೯೪–೯೬. ಬಳಿಕ ಶೀತಲೋದಕವನ್ನು ತಂದು ಎಂಟು ಕಳಶಗಳನ್ನು ತುಂಬಿ ಕ್ರಮವಾಗಿ ಎಂಟು ದಳಗಳ ಮೇಲೆಯೂ ಸ್ಥಾಪಿಸಬೇಕು. ಮತ್ತು

ಮಧ್ವಾಜ್ಯಯುಕ್ತಾ ದಧಿದುಗ್ಧಪೂರ್ಣಾ
ನೈರ್ಋತ್ಯಕೋಣಾದಥ ದಕ್ಷಿಣಾಂತಂ ।
ಧರ್ಮಾಯ ದದ್ಯಾದಥ ಶಂಕರಾಯ
ದಾಮೋದರಾಯಾಽಪ್ಯಥ ವೇಧಸೇ ಚ ॥ ೯೫ ॥
ಪ್ರಜಾಪತಿಭ್ಯಃ ಕ್ರಮಶೋಹಿ ಭಕ್ತ್ಯಾ
ಪ್ರೇತೇಭ್ಯ ಇಂದ್ರಾಯ ತಥಾ ಪಿತೃಭ್ಯಃ ।
ಹೋಮಾದಿಪಾತ್ರಂ ತಿಲಚೂರ್ಣಮೇವ
ದದ್ಯಾದ್ದ್ವಿಜಾನಾಂ ಚ ಸದಕ್ಷಿಣಂ ಚ ॥ ೯೬ ॥
ಗಾವೋ ಹಿರಣ್ಯಂ ರಜತಂ ಚ ವಸ್ತ್ರಂ
ಫಲಾನಿ ಮೂಲಾನಿ ಯವಾಶ್ಚ ಧಾನ್ಯಂ ।
ಗೃಹಂ ರಥಂ ಕುಂಜರಮಶ್ವಮೇವ
ಮನೋಜ್ಞಮನ್ಯಂ ಹೃದಯಪ್ರಿಯಂ ಯತ್ ॥ ೯೭ ॥
ವಿದ್ಯಾಧಿಕೇಭ್ಯೋ ದ್ವಿಜಸತ್ತಮೇಭ್ಯಃ
ಪೌರಾಣಿಕೇಭ್ಯಶ್ಚ ತಥಾ ದ್ವಿಜೇಭ್ಯಃ ।
ಏಕೈಕಸುಪ್ರೀಣನಮತ್ರ ಕುರ್ಯಾತ್
ದೀಪೈರ್ದಲಸ್ಥೈಶ್ಚ ಯಮಾದಿಕಾನಾಂ ॥ ೯೮ ॥

---

ಅವುಗಳಲ್ಲಿ ನೈರ್ಋತ್ಯಮೂಲೆಯಿಂದ ಮೊದಲುಮಾಡಿ ದಕ್ಷಿಣಾಂತ್ಯದವರೆಗೂ ಕ್ರಮವಾಗಿ ಫಲಗಳು, ಮೂಲಗಳು, ಕಬ್ಬಿನರಸ, ನೀರು, ಜೇನುತುಪ್ಪ, ತುಪ್ಪ, ಮೊಸರು, ಹಾಲುಗಳನ್ನು ನೈವೇದ್ಯಮಾಡಬೇಕು. ಇದೇ ಕ್ರಮದಿಂದಲೇ ಈ ಕಳಶಗಳನ್ನು ಯಮಧರ್ಮ, ಮಹೇಶ್ವರ, ಮಹಾವಿಷ್ಣು, ಬ್ರಹ್ಮ, ಪ್ರಜೇಶ್ವರರು, ಪ್ರೇತರು, ಮಹೇಂದ್ರ ಮತ್ತು ಪಿತೃದೇವತೆಗಳಿಗೆ ಸಮರ್ಪಣೆಮಾಡಬೇಕು. ಹೋಮಪಾತ್ರೆಗಳನ್ನೂ ತಿಲಚೂರ್ಣವನ್ನೂ ದಕ್ಷಿಣೆಯೊಡನೆ ಬ್ರಾಹ್ಮಣೋತ್ತಮರಿಗೆ ದಾನಮಾಡಬೇಕು.

೯೭. ಅಲ್ಲದೆ ಗೋವುಗಳು, ಚಿನ್ನ, ಬೆಳ್ಳಿ, ವಸ್ತ್ರಗಳು, ಫಲಗಳು, ಕಂದಮೂಲಗಳು, ಅಕ್ಕಿಯೇ ಮುಂತಾದ ಧಾನ್ಯಗಳು, ಮನೆ, ರಥ, ಆನೆ, ಕುದುರೆ, ತನಗೆ ಇಷ್ಟವಾದ ಇತರ ವಸ್ತುಗಳು, ತೆಗೆದುಕೊಳ್ಳುವವರಿಗೆ ಅಪೇಕ್ಷಿತಗಳಾದ ವಸ್ತುಗಳು—ಎಲ್ಲವನ್ನೂ ಕೊಡಬಹುದು.

೯೮. ವಿದ್ಯೆಯಲ್ಲಿ ಉನ್ನತರಾಗಿ, ವರ್ಣಾಶ್ರಮಾಚಾರಸಹಿತರೂ, ಪೌರಾಣಿಕೋತ್ತಮರೂ ಆದ ಬ್ರಾಹ್ಮಣರನ್ನು ಆಹ್ವಾನಿಸಿ ಪದ್ಮದಳಗಳಲ್ಲಿರುವ ಯಮಾರ್ಪಿತವಾದ ಕಳಶವನ್ನು ಮೊದಲುಮಾಡಿ ಒಂದೊಂದು ಕಳಶವನ್ನೂ ಒಬ್ಬೊಬ್ಬರಿಗೆ ದಾನಮಾಡಿ ಸಂತೋಷಗೊಳಿಸಬೇಕು.

ಘರ್ಮಾಯ ದೇಯಸ್ತ್ವಥ ಮಧ್ಯದೀಪ
ಆಜ್ಞಾಂ ಚ ಲಬ್ಧ್ವಾ ವ್ರತದೇಶಿಕಸ್ಯ ।
ನೃತ್ಯೇನ ಗೀತೇನ ಸುಶೋಭನೇನ
ಯುಕ್ತಂ ಸುವಾದ್ಯೇನ ಚ ಕಾರಯೇಚ್ಚ ॥ ೯೯ ॥
ಏತತ್ಸಮಗ್ರಂ ವಿಧಿವಚ್ಚ ಕುರ್ಯಾತ್
ಸ್ವಶಕ್ತಿಮಾದೌ ಸ್ವಧನಂ ಸಮೀಕ್ಷ್ಯ ।
ಆಹೂಯ ವಿಪ್ರಾಂಛುಭಭಾವಯುಕ್ತಾನ್
ವದೇಚ್ಚ ಧೀಮಾನ್ಪರಯಾ ಚ ಭಕ್ತ್ಯಾ ॥ ೧೦೦ ॥
ದೀಪಾನ್ ಸಮುಗ್ರಾನ್ನವ ವರ್ಜಯಿತ್ವಾ
ಸರ್ವಂ ನಯೇಯುಃ ಸ್ಥಿತಮತ್ರ ವಿಪ್ರಾಃ ।
ಪ್ರದಕ್ಷಿಣೀಕೃತ್ಯ ವಿಸೃಜ್ಯ ವಿಪ್ರಾನ್
ತತೋ ಭವೇದ್ವೈ ಸಚ ನಕ್ತಭೋಜೀ ॥ ೧೦೧ ॥
ಏವಂ ಕೃತೇ ನಾಗಲೋಕಾದ್ವಿಶಿಷ್ಟಂ
ಸುಖಂ ಭವೇತ್ಪ್ರೇತಲೋಕೇ ಸ್ಥಿತಾನಾಂ ॥ ೧೦೨ ॥
ಏವಂ ಹ್ಯನರಕೇ ವ್ಯಾಸ ದೀಪದಾನಂ ಕರೋತಿ ಯಃ ।
ತಸ್ಯೈವ ಯತ್ಫಲಂ ಪ್ರೋಕ್ತಂ ತದಿಹೈಕಮನಾಃ ಶೃಣು ॥ ೧೦೩ ॥

---

೯೯. ವ್ರತೋಪದೇಶಕನಾದ ಆಚಾರ್ಯನ ಅನುಜ್ಞೆಯನ್ನು ಪಡೆದು ಮಧ್ಯದ ದೀಪವನ್ನು ಯಮಧರ್ಮಕಳಶವನ್ನು ತೆಗೆದುಕೊಂಡವನಿಗೆ ಕೊಡಬೇಕು. ಈ ಉತ್ಸವವನ್ನು ನೃತ್ಯ, ಗೀತ, ಮಂಗಳವಾದ್ಯಗಳು ಮುಂತಾದುವುಗಳಿಂದ ಮಾಡಿಸಬೇಕು.

೧೦೦–೧೦೧. ಎಲ್ಲಕ್ಕೂ ಮೊದಲು ತನ್ನ ಶಕ್ತಿಯನ್ನೂ ಧನಸಮೃದ್ಧಿಯನ್ನೂ ನೋಡಿಕೊಂಡು ಈ ಎಲ್ಲ ಕೆಲಸಗಳನ್ನೂ ವಿಧಿಲೋಪವಿಲ್ಲದಂತೆ ನಡೆಸಬೇಕು. ಮತ್ತು ಉದಾರಮನಸ್ಕರಾದ ಬ್ರಾಹ್ಮಣೋತ್ತಮರನ್ನು ಕರೆದು ಅತ್ಯಂತ ಭಕ್ತಿಯಿಂದ ಪ್ರಾಜ್ಞನಾದವನು ಅವರಲ್ಲಿ ವಿಜ್ಞಾಪಿಸಿಕೊಳ್ಳಬೇಕು. ಸ್ತಂಭದಲ್ಲಿರುವ ಒಂಬತ್ತು ದೀಪಗಳನ್ನೂ ಬಿಟ್ಟು ಮಿಕ್ಕ ಎಲ್ಲ ಪದಾರ್ಥಗಳನ್ನೂ ಬ್ರಾಹ್ಮಣರು ತೆಗೆದುಕೊಳ್ಳಬಹುದು. ಆ ಬ್ರಾಹ್ಮಣರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನುಮಾಡಿ ಅವರನ್ನು ಬೀಳ್ಕೊಟ್ಟು ಬಳಿಕ ರಾತ್ರಿಯಲ್ಲಿ ಭೋಜನವನ್ನು ಮಾಡಬೇಕು.

೧೦೨. ಈ ವ್ರತವನ್ನಾಚರಿಸಿದವನ ಪಿತೃಗಳು ಪ್ರೇತಲೋಕದಲ್ಲಿದ್ದರೂ ಅವರಿಗೆ ನಾಗಲೋಕದ ವೈಭವಕ್ಕಿಂತಲೂ ಹೆಚ್ಚಿನ ಸೌಖ್ಯವು ಲಭಿಸುವುದು.

೧೦೩. ವ್ಯಾಸಮುನಿವರ್ಯನೆ! ಇಂತು ಅನರಕತೀರ್ಥದಲ್ಲಿ ಯಾವನು ದೀಪದಾನವನ್ನು ಮಾಡುವನೊ, ಅವನಿಗೆ ಯಾವ ಫಲವು ಲಭಿಸುವುದೆಂಬುದನ್ನು ಏಕಾಗ್ರಮನಸ್ಸಿನಿಂದ ಕೇಳು.

**ವಿಮಾನೈಃ ಕಾಮಿಕೈರ್ದಿವ್ಯೈರಪ್ಸರೋಗಣಸೇವಿತೈಃ ।**
**ಉಹ್ಯಮಾನೋ ದಿವಂ ಯಾತಿ ಯಾವಚ್ಚಂದ್ರದಿವಾಕರೌ ॥ ೧೦೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅನರಕೇಶ್ವರದೀಪದಾನ ಮಾಹಾತ್ಮ್ಯವರ್ಣನಂ" ನಾಮ ತ್ರಿಂಶೋಽಧ್ಯಾಯಃ**

---

೧೦೪. ಕಾಮಪ್ರದಗಳೂ, ದಿವ್ಯಗಳೂ, ಅಪ್ಸರೋಗಣಗಳಿಂದ ಕೂಡಿದವುಗಳೂ ಆದ ವಿಮಾನಗಳಲ್ಲಿ ಕುಳಿತು ಆ ವ್ರತಿಯು ಚಂದ್ರಸೂರ್ಯರಿರುವವರೆಗೂ ಸ್ವರ್ಗಲೋಕದಲ್ಲಿ ಸುಖಿಸುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅನರಕೇಶ್ವರದೀಪದಾನಮಾಹಾತ್ಮ್ಯವರ್ಣನ"ವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋಽಧ್ಯಾಯಃ

## ಸೌಭಾಗ್ಯೇಶ್ವರಾದಿ ನಾನಾತೀರ್ಥಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಅಥಾಽನ್ಯತ್ಸಂಪ್ರವಕ್ಷ್ಯಾಮಿ ಕೇದಾರೇಶ್ವರಮುತ್ತಮಂ ।
ಪ್ರವರಂ ಸರ್ವತೀರ್ಥಾನಾಂ ತ್ರಿಷು ಲೋಕೇಷು ವಿಶ್ರುತಂ ॥ ೧ ॥
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಯಃ ಪಶ್ಯತಿ ಮಹೇಶ್ವರಂ ।
ಕೇದಾರೇ ಯತ್ಫಲಂ ಪ್ರೋಕ್ತಂ ತದತ್ರಾಽಪಿ ಲಭೇನ್ನರಃ ॥ ೨ ॥
ಸರ್ವಪಾಪವಿನಿರ್ಮುಕ್ತಃ ಸ್ವಕೀಯಕುಲಸಂಯುತಃ ।
ವಿಮಾನೇನಾಽರ್ಕವರ್ಣೇನ ಶಿವಲೋಕೇ ಸ ಮೋದತೇ ॥ ೩ ॥
ಜಟಾಶೃಂಗೇ ನರಃ ಸ್ನಾತ್ವಾ ಶುಚಿರ್ಭೂತ್ವಾ ಜಿತೇಂದ್ರಿಯಃ ।
ದೃಷ್ಟ್ವಾ ಜಟೇಶ್ವರಂ ದೇವಂ ತತಃ ಪಾಪಾದ್ವಿಮುಚ್ಯತೇ ॥ ೪ ॥
ಮಹಾತಪನಮಾದೌ ಚ ಕೃತ್ವಾ ಗಚ್ಛೇಚ್ಛಿವಂ ಪ್ರತಿ ।
ಮಾತೃಕಂ ಪಿತೃಕಂ ಚೈವ ಕುಲಾನಾಂ ತಾರಯೇಚ್ಛತಂ ॥ ೫ ॥

---

### ಕನ್ನಡದ ಅನುವಾದ

#### ಸೌಭಾಗ್ಯೇಶ್ವರಾದಿ ನಾನಾತೀರ್ಥಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಇನ್ನು ಕೇದಾರೇಶ್ವರವೆಂಬ ಬೇರೊಂದು ತೀರ್ಥವನ್ನು ವಿವರಿಸುವೆನು. ಇದು ಸಕಲ ತೀರ್ಥಗಳಲ್ಲಿಯೂ ಉತ್ತಮೋತ್ತಮವೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿರುವುದು.

೨. ಆ ತೀರ್ಥದಲ್ಲಿ ಮಿಂದು ಶುಚಿರ್ಭೂತನಾಗಿ ಕೇದಾರೇಶ್ವರನನ್ನು ನೋಡಿದ ಮನುಷ್ಯನಿಗೆ ಕೇದಾರಕ್ಷೇತ್ರದಲ್ಲಿ ದರ್ಶನದ ಫಲವೇ ಇಲ್ಲಿಯೂ ಲಭಿಸುವುದು.

೩. ಅವನು ಸಕಲ ಪಾತಕಗಳನ್ನೂ ಕಳೆದುಕೊಂಡು ತನ್ನ ಕುಲದವರೊಡನೆ ಸೂರ್ಯನಂತೆ ಪ್ರಜ್ವಲಿಸುತ್ತಿರುವ ವಿಮಾನದಲ್ಲಿ ಕುಳಿತು ಶಿವಲೋಕದಲ್ಲಿ ಆನಂದಿಸುವನು.

೪. ಮಾನವನು ಜಟಾಶೃಂಗತೀರ್ಥದಲ್ಲಿ ಸ್ನಾನವನ್ನುಮಾಡಿ ಶುಚಿಯೂ ಜಿತೇಂದ್ರಿಯನೂ ಆಗಿ ಜಟೇಶ್ವರಲಿಂಗದ ದರ್ಶನವನ್ನುಮಾಡಲು ಸಕಲಪಾಪಗಳನ್ನೂ ಕಳೆದುಕೊಳ್ಳುವನು.

೫. ಉತ್ತಮವಾದ ಪಂಚಾಗ್ನಿತಪಸ್ಸನ್ನುಮಾಡಿ ಬಳಿಕ ಆ ಲಿಂಗವನ್ನು ನೋಡಿದವನು ತಾಯಿಯ ಮತ್ತು ತಂದೆಯ ಎರಡು ಕುಲಗಳಲ್ಲಿಯೂ ಒಂದು ನೂರು ಜನರನ್ನುದ್ಧರಿಸುವನು.

ಇಂದ್ರತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಚೇಂದ್ರೇಶ್ವರಂ ಶಿವಂ ।
ವಿಮುಕ್ತಃ ಸರ್ವಪಾಪೇಭ್ಯಃ ಶಕ್ರಲೋಕೇ ಮಹೀಯತೇ ॥ ೬ ॥
ಕುಂಡೇಶ್ವರಂ ತು ಯಃ ಪಶ್ಯೇಚ್ಛಿವಧ್ಯಾನಪರಾಯಣಃ ।
ಲಭತೇ ಸ ನರೋ ವ್ಯಾಸ ಶಿವದೀಕ್ಷಾಫಲಂ ಶಿವಂ ॥ ೭ ॥
ಗೋಪತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಗೋಪೇಶ್ವರಂ ಶಿವಂ ।
ಶಿವಲೋಕಂ ನರೋ ಯಾತಿ ಹ್ಯಮೃತಾದಮರೋ ಯಥಾ ॥ ೮ ॥
ಸ್ನಾತ್ವಾ ತು ಚಿಪಿಟಾತೀರ್ಥೇ ಶಿವಂ ದೇವಂ ಪ್ರಣಮ್ಯ ಚ ।
ತಿರ್ಯಗ್ಯೋನಿಂ ನರೋ ನೈವ ಪ್ರಯಾತಿ ಮುನಿಪುಂಗವ ॥ ೯ ॥
ವಿಜಯೇ ಚ ನರಃ ಸ್ನಾತ್ವಾ ಆನಂದೇಶ್ವರಪೂಜನಾತ್ ।
ವಿಮುಕ್ತಃ ಸರ್ವಪಾಪೇಭ್ಯಃ ಸ್ವರ್ಲೋಕೇ ವಿಜಯೀ ಭವೇತ್ ॥ ೧೦ ॥
ಅಥಾಽನ್ಯಂ ಸಂಪ್ರವಕ್ಷ್ಯಾಮಿ ಕುಶಸ್ಥಲ್ಯಾಂ ವಿನಿರ್ಮಿತಂ ।
ದೇವಂ ರಾಮೇಶ್ವರಂ ವ್ಯಾಸ ಭುಕ್ತಿಮುಕ್ತಿಪ್ರದಾಯಕಂ ॥ ೧೧ ॥

---

೬. ಇಂದ್ರತೀರ್ಥದಲ್ಲಿ ಸ್ನಾನವನ್ನುಮಾಡಿ ಇಂದ್ರೇಶ್ವರಸ್ವಾಮಿಯನ್ನು ನೋಡಲು ಮನುಜನು ಸಮಸ್ತಪಾಪಮುಕ್ತನಾಗುವುದಲ್ಲದೆ ಇಂದ್ರಲೋಕದಲ್ಲಿಯೂ ಸುಖಿಸುವನು.

೭. ಎಲೈ ವ್ಯಾಸನೆ! ಶಿವನ ಧ್ಯಾನದಲ್ಲಿಯೇ ಆಸಕ್ತನಾಗಿ ಯಾವ ನರನು ಕುಂಡೇಶ್ವರನನ್ನು ನೋಡುವನೊ, ಅವನು ಶಿವದೀಕ್ಷೆಗೆ ಫಲರೂಪಿಯಾದ ಶಿವನನ್ನೇ ಪಡೆಯುವನು.

೮. ಗೋಪತೀರ್ಥದಲ್ಲಿ ಸ್ನಾನಮಾಡಿ ಗೋಪೇಶ್ವರನೆಂಬ ಶಿವಲಿಂಗವನ್ನು ನೋಡಲು ಮನುಷ್ಯನು ಅಮೃತವನ್ನು ಪಾನಮಾಡಿದ ದೇವತೆಯಂತೆ ಶಿವಲೋಕದಲ್ಲಿಯೇ ವಾಸಮಾಡುತ್ತಿರುವನು.

೯. ಅಯ್ಯಾ ಮುನಿಶ್ರೇಷ್ಠನೆ! ಚಿಪಿಟಾತೀರ್ಥದಲ್ಲಿ ಸ್ನಾನಮಾಡಿ ಅಲ್ಲಿರುವ ಶಿವನನ್ನು ನಮಸ್ಕರಿಸಬೇಕು. ಆ ಮಾನವನು ಪುನಃ ಎಂದಿಗೂ ನೀಚ ಯೋನಿಗಳಲ್ಲಿ ಜನ್ಮಗಳನ್ನು ತಾಳುವುದಿಲ್ಲ.

೧೦. ವಿಜಯತೀರ್ಥದಲ್ಲಿ ಸ್ನಾನಮಾಡಿ ಆನಂದೇಶ್ವರನನ್ನು ಪೂಜಿಸುವುದರಿಂದ ಮಾನವನು ಸಕಲಪಾತಕಗಳಿಂದಲೂ ಮುಕ್ತನಾಗುವನು; ಸ್ವರ್ಗಲೋಕದಲ್ಲಿಯೂ ವಿಜಯವುಳ್ಳವನಾಗುವನು.

೧೧. ಈಗ ಕುಶಸ್ಥಳಿಯಲ್ಲಿ ಪ್ರತಿಷ್ಠಿತವಾಗಿರುವ ರಾಮೇಶ್ವರವೆಂಬ ಬೇರೊಂದು ದೇವತೆಯನ್ನು ಕುರಿತುಹೇಳುವೆನು. ಆ ಲಿಂಗವು ಇಹಪರಲೋಕಗಳೆರಡರಲ್ಲಿಯೂ ಸೌಖ್ಯವನ್ನು ಕೊಡುವುದು.

ಚಿತ್ರಕೂಟಾತ್ಪುರಾ ರಾಮೋ ಮೈಥಿಲ್ಯಾ ಲಕ್ಷ್ಮಣೇನ ಚ ।
ಸಮನ್ವಿತಃ ಸಮಾಗತ್ಯ ಪಪ್ರಚ್ಛ ಮುನಿಸತ್ತಮಂ ॥ ೧೨ ॥

ರಾಮ ಉವಾಚ :—

ಕಾನಿ ತೀರ್ಥಾನಿ ಪುಣ್ಯಾನಿ ಕಿಂ ವಾ ಕ್ಷೇತ್ರಂ ಮಹಾಮುನೇ ।
ಯತ್ರ ಗತ್ವಾ ನ ಚಾಪ್ನೋತಿ ವಿಯೋಗಂ ಸಹ ಬಾಂಧವೈಃ ॥ ೧೩ ॥
ಅನೇನ ವನವಾಸೇನ ಮರಣೇನ ಪಿತುಃ ಪ್ರಭೋ ।
ಭರತಸ್ಯ ವಿಯೋಗೇನ ಪ್ರತಪ್ಯೇಽಹಂ ತ್ರಿಭಿರ್ಮುನೇ ॥ ೧೪ ॥
ತದ್ವಾಕ್ಯಂ ರಾಘವೇಣೋಕ್ತಂ ಶ್ರುತ್ವಾ ವಿಪ್ರರ್ಷಭಸ್ತದಾ ।
ಧ್ಯಾತ್ವಾ ತು ಸುಚಿರಂ ಕಾಲಮಿದಂ ವಚನಮಬ್ರವೀತ್ ॥ ೧೫ ॥
ಸಾಧು ಪೃಷ್ಟಂ ತ್ವಯಾ ವೀರ ರಘೂಣಾಂ ವಂಶವರ್ಧನ ।
ಮಮ ಪಿತ್ರಾ ಕೃತಂ ಕ್ಷೇತ್ರಂ ಪ್ರಯಾಚ್ಯ ಶಿವಮಾದರಾತ್ ॥ ೧೬ ॥
ಅವಂತೀವಿಷಯೇ ರಾಮ ಪುರೀ ತಸ್ಮಿನ್ಕುಶಸ್ಥಲೀ ।
ಉಜ್ಜಯಿನೀತಿ ವೈ ನಾಮ್ನಾ ಖ್ಯಾತಿಂ ಲೋಕೇ ಗತಾ ವಿಭೋ ॥ ೧೭ ॥

---

೧೨. ಹಿಂದೊಮ್ಮೆ ಶ್ರೀ ರಾಮಚಂದ್ರನು ಚಿತ್ರಕೂಟಪರ್ವತವನ್ನು ಬಿಟ್ಟು ಸೀತಾಲಕ್ಷ್ಮಣಸಮೇತನಾಗಿ ನಡೆದು ಬರುತ್ತ ದಾರಿಯಲ್ಲಿ ಮುನಿ ಶ್ರೇಷ್ಠನಾದ ನಾರದನನ್ನು ಕಂಡು ಪ್ರಶ್ನೆಮಾಡಿದನು.

೧೩. ರಾಮನು ಹೇಳುತ್ತಾನೆ:—ಮಹಾಮುನಿಯೆ! ಯಾವ ತೀರ್ಥಗಳನ್ನೂ ಕ್ಷೇತ್ರವನ್ನೂ ಸೇವಿಸಿದರೆ ಬಂಧುಗಳ ವಿಯೋಗವು ಸಂಭವಿಸುವುದಿಲ್ಲ?

೧೪. ಮಹರ್ಷಿಯೆ! ಈ ವನವಾಸವೂ, ತಂದೆಯ ಮರಣವೂ, ಭರತನಿಂದ ವಿಯೋಗವೂ ಮೂರೂ ಕೂಡಿ ನನ್ನ ಪರಿತಾಪಕ್ಕೆ ಕಾರಣಗಳಾಗಿರುವುವು.

೧೫. ಇಂತೆಂದ ರಾಘವನ ವಾಕ್ಯವನ್ನು ಕೇಳಿ ಮುನಿವರ್ಯನಾದ ನಾರದನು ಬಹಳಕಾಲದವರೆಗೂ ಚಿಂತಿಸಿದ ಮೇಲೆ ರಾಮನನ್ನು ಕುರಿತು ಇಂತೆಂದನು.

೧೬. "ವೀರನೆ! ರಘುವಂಶವರ್ಧನನೆ! ಉತ್ತಮಪ್ರಶ್ನೆಯನ್ನು ಮಾಡಿರುವೆ. ಹಿಂದೆ ನನ್ನ ತಂದೆಯು ಪರಮೇಶ್ವರನನ್ನು ಭಕ್ತಿಯಿಂದ ಪ್ರಾರ್ಥಿಸಿಕೊಂಡು ಒಂದು ಕ್ಷೇತ್ರವನ್ನು ನಿರ್ಮಿಸಿರುವನು.

೧೭. ಎಲೈ ರಾಮಸ್ವಾಮಿಯೆ! ಅವಂತೀದೇಶದಲ್ಲಿರುವ ಆ ಪಟ್ಟಣಕ್ಕೆ ಕುಶಸ್ಥಲಿಯೆಂದು ಹೆಸರು. ಅದು ಉಜ್ಜಯಿನಿಯೆಂಬ ಹೆಸರಿನಿಂದಲೂ ಲೋಕದಲ್ಲಿ ಪ್ರಖ್ಯಾತವಾಗಿರುವುದು.

ತಸ್ಯಾಂ ಗತ್ವಾ ದಶರಥಂ ಪಿಂಡದಾನೇನ ತರ್ಪಯ ।
ಸುರಾಽಸುರಗುರುಸ್ತತ್ರ ಮಹಾಕಾಲೋ ವ್ಯವಸ್ಥಿತಃ ॥ ೧೮ ॥
ದೇವಃ ಸ ವೈ ಸದಾ ರಾಜನ್ ವಾಂಛಿತಾರ್ಥಫಲಪ್ರದಃ ।
ದೃಷ್ಟೇ ತಸ್ಮಿಂಜಗನ್ನಾಥೇ ವಿಯೋಗೋ ನೈವ ಜಾಯತೇ ॥ ೧೯ ॥
ತತ್ರ ಗಚ್ಛಂತಿ ಯೇ ವಿಪ್ರಾ ರಾಜಾ ಚೈವ ಮಹಾಬಲಃ ।
ಲಭಂತೇ ಪರಮಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥ ೨೦ ॥
ತೀರ್ಥಾನಾಮಪಿ ತತ್ತೀರ್ಥಂ ಪ್ರವಿಷ್ಟೋಽವಂತಿಮಂಡಲೇ ।
ಆಜಗಾಮ ತತೋಽವಂತೀಂ ಸಾ ಶಿಪ್ರಾ ಯತ್ರ ಪುಣ್ಯದಾ ॥ ೨೧ ॥
ತಸ್ಯಾಂ ಸ್ನಾತ್ವಾ ತತೋ ರಾಮಸ್ತರ್ಪಯಾಮಾಸ ಪೂರ್ವಜಾನ್ ।
ಮಹಾಕಾಲಂ ಯದಾ ದ್ರಷ್ಟುಂ ಪ್ರತಸ್ಥೇ ರಘುನಂದನಃ ॥ ೨೨ ॥
ನಾಣ್ಯಾ ತತೋಽಶರೀರಿಣ್ಯಾ ದೇವದೇವೇನ ಭಾಷಿತಂ ।
ಭೋ ಭೋ ರಾಘವ ಭದ್ರಂ ತೇ ಸ್ವನಾಮ್ನಾ ಸ್ಥಾಪಯಸ್ವ ಮಾಂ ॥ ೨೩ ॥

---

೧೮. ಆ ಕ್ಷೇತ್ರಕ್ಕೆ ಹೋಗಿ ನೀನು ತಂದೆಯಾದ ದಶರಥನಿಗೆ ಪಿಂಡದಾನದಿಂದ ತೃಪ್ತಿಯನ್ನುಂಟುಮಾಡು. ಸಮಸ್ತ ದೇವದಾನವರಿಗೂ ಪೂಜ್ಯನಾದ ಮಹಾಕಾಳನೇ ಅಲ್ಲಿ ಸನ್ನಿಹಿತನಾಗಿರುವನು.

೧೯. ಓ ರಾಜೇಶ್ವರನೆ! ಆ ದೇವನು ಯಾವಾಗಲೂ ಭಕ್ತರ ಮನೋಭೀಷ್ಟಗಳನ್ನು ನಡೆಸಿಕೊಡುತ್ತಿರುವನು. ಜಗನ್ನಾಥನಾದ ಆತನನ್ನು ನೋಡಿದವರಿಗೆ ಪ್ರಿಯವಿಯೋಗವುಂಟಾಗುವುದಿಲ್ಲ.

೨೦. ಅಲ್ಲಿಗೆ ಹೋಗುವ ಬ್ರಾಹ್ಮಣರಾಗಲಿ, ಮಹಾವೀರನಾದ ರಾಜನಾಗಲಿ ಎಲ್ಲರೂ ದೇವೋತ್ತಮನಾದ ಮಹೇಶ್ವರನಿರುವ ಪರಮಸ್ಥಾನವೆನಿಸಿದ ಕೈಲಾಸಕ್ಕೆ ಹೋಗುವರು."

೨೧. ಬಳಿಕ ರಾಮನು ಅವಂತೀಮಂಡಲದಲ್ಲಿರುವ ಸಕಲ ತೀರ್ಥೋತ್ತಮವೆನಿಸಿದ ಆ ತೀರ್ಥವೂ, ಪುಣ್ಯಪ್ರದೆಯಾದ ಶಿಪ್ರಾನದಿಯೂ ಇರುವಂತಹ ಪ್ರದೇಶವನ್ನು ಸೇರಿದನು.

೨೨. ಆ ನದಿಯಲ್ಲಿ ಸ್ನಾನಮಾಡಿಕೊಂಡು ರಾಮನು ಪಿತೃಗಳಿಗೆಲ್ಲರಿಗೂ ತರ್ಪಣವನ್ನಿತ್ತನು. ಬಳಿಕ ರಘುನಂದನನು ಮಹಾಕಾಳೇಶ್ವರನ ದರ್ಶನವನ್ನು ಮಾಡಲು ಹೊರಟನು.

೨೩. ಆಗ ದೇವದೇವನು ಅಶರೀರವಾಣಿಯಮೂಲಕ ರಾಮನಿಗೆ ಹೇಳಿದನು. "ರಾಮಚಂದ್ರ! ನಿನಗೆ ಉತ್ತರೋತ್ತರ ಮಂಗಳವಾಗುವುದು. ನಿನ್ನ ಹೆಸರಿನಿಂದ ನನ್ನ ಮೂರ್ತಿಯೊಂದನ್ನು ಪ್ರತಿಷ್ಠಿಸು.

ಅತ್ರ ಸ್ಥಾನಂ ಮಯಾ ದತ್ತಂ ಮಾ ವಿಚಾರಯ ರಾಘವ ।
ತತೋ ಹೃಷ್ಟಮನಾ ರಾಮೋ ಲಕ್ಷ್ಮಣಂ ವಾಕ್ಯಮಬ್ರವೀತ್ ॥ ೨೪ ॥
ಅನುಗೃಹೀತಾಃ ಸೌಮಿತ್ರೇ ದೇವದೇವೇನ ಶಂಭುನಾ ।
ತಸ್ಮಾತ್ಸ್ಥಾಪಯ ತೀರ್ಥೇಽಸ್ಮಿನ್ ಲಿಂಗಂ ರಾಮೇಶ್ವರಂ ಶುಭಂ ॥ ೨೫ ॥
ವಾಕ್ಯಂ ತಲ್ಲಕ್ಷ್ಮಣಃ ಶ್ರುತ್ವಾ ಸ್ಥಾಪಯಾಮಾಸ ಶಂಕರಂ ।
ದೃಷ್ಟ್ವಾ ದೇವಂ ಪುರಾ ರಾಮೋ ಲಕ್ಷ್ಮಣಂ ವಾಕ್ಯಮಬ್ರವೀತ್ ॥ ೨೬ ॥
ಏಹಿ ಲಕ್ಷ್ಮಣ ಶೀಘ್ರಂ ತ್ವಂ ಶಿಪ್ರಾಯಾ ಜಲಮಾನಯ ।
ಕರಿಷ್ಯಾಮಿ ಯತೋಽತ್ರಾಹಂ ದೇವಸ್ಯ ಸ್ನಪನಂ ಶುಭಂ ॥ ೨೭ ॥
ಲಕ್ಷ್ಮಣಸ್ತ್ವಬ್ರವೀದ್ವಾಕ್ಯಂ ಸೀತಯಾ ಕಿಂ ಕರಿಷ್ಯಸಿ ।
ರಾಮ ನಾಽಹಂ ಸರ್ವಕಾಲಂ ದಾಸಭಾವಂ ಕರೋಮಿ ತೇ ॥ ೨೮ ॥
ಇಯಂ ಚ ಪುಷ್ಟಾ ಸುದೃಢಾ ಪೀವರಾ ಚ ಮಮಾಗ್ರತಃ ।
ವದ ರಾಘವ ಸತ್ಯೇನ ಅನಯಾ ಕಿಂಕರಿಷ್ಯಸಿ ॥ ೨೯ ॥

---

೨೪. ರಾಘವ! ನೀನು ವಿಚಾರಮಾಡಬೇಡ. ಅದಕ್ಕಾಗಿ ಇಲ್ಲಿ ನಿನಗೆ ನಾನೇ ಸ್ಥಳವನ್ನು ಕೊಡುವೆನು." ಈ ಮಾತುಗಳಿಂದ ಆನಂದಗೊಂಡ ಮನಸ್ಸುಳ್ಳವನಾಗಿ ರಾಮನು ಲಕ್ಷ್ಮಣನಿಗೆ ಹೇಳಿದನು.

೨೫. "ಸೌಮಿತ್ರಿ! ದೇವದೇವನಾದ ಪರಮೇಶ್ವರನು ನಮ್ಮಲ್ಲಿ ಅನುಗ್ರಹವನ್ನು ತೋರಿಸಿರುವನು. ಆದುದರಿಂದ ಈ ತೀರ್ಥದಲ್ಲಿ ಶುಭಪ್ರದನಾದ ರಾಮೇಶ್ವರನೆಂಬ ಹೆಸರಿನಿಂದ ಒಂದು ಲಿಂಗವನ್ನು ಸ್ಥಾಪಿಸು."

೨೬. ಈ ವಾಕ್ಯವನ್ನು ಕೇಳಿ ಲಕ್ಷ್ಮಣನು ಉತ್ತಮವಾದ ಶಂಕರಲಿಂಗವನ್ನು ಪ್ರತಿಷ್ಠೆಮಾಡಿದನು. ತನ್ನ ಮುಂದೆ ಸ್ಥಾಪಿತವಾದ ಆ ಲಿಂಗವನ್ನು ನೋಡಿ ರಾಮನು ಲಕ್ಷ್ಮಣನಿಗೆಂದನು.

೨೭. "ಲಕ್ಷ್ಮಣ! ಇಲ್ಲ ಬಾ. ಬೇಗಹೋಗಿ ಶಿಪ್ರಾನದಿಯಿಂದ ಶುದ್ಧೋದಕವನ್ನು ತೆಗೆದುಕೊಂಡು ಬಾ. ಈಗಲೇ ನಾನು ಈ ಲಿಂಗಕ್ಕೆ ಉತ್ತಮರೀತಿಯಿಂದ ಅಭಿಷೇಕವನ್ನು ಮಾಡಲೆಳಸುವೆನು."

೨೮. ಲಕ್ಷ್ಮಣನು ಇಂತೆಂದನು. "ಸೀತೆಯು ಕೈಯಿಂದ ನೀನು ಮಾಡಿಸುವುದೇನು? ರಾಮ! ಸರ್ವಕಾಲವೂ ನಾನು ನಿನಗೆ ದಾಸ್ಯವೃತ್ತಿಯಲ್ಲಿರುವವನೆಂದು ತಿಳಿಯಬೇಡ.

೨೯. ಪುಷ್ಟಾಂಗಳೂ, ಬಲಿಷ್ಠಳೂ ಆದ ಈಕೆಯು ನನ್ನೆದುರಿನಲ್ಲಿ ನಿಂತಿರುವಳಲ್ಲವೆ. ನಿಜವಾಗಿ ಹೇಳು. ಈಕೆಯ ಕೈಯಲ್ಲಿ ಯಾವ ಕೆಲಸವನ್ನು ಮಾಡಿಸುತ್ತಿರುವೆ?"

ಶ್ರುತ್ವಾ ರಾಮೋ ಹಿ ತದ್ವಾಕ್ಯಂ ಲಕ್ಷ್ಮಣೇನ ಪ್ರಭಾಷಿತಂ ।
ವಿಮನಾ ರಾಘವಸ್ತಸ್ಥೌ ಸೀತಾ ಚಾಽಪಿ ವರಾನನಾ ॥ ೩೦ ॥
ಯದುಕ್ತಂ ಲಕ್ಷ್ಮಣೇನಾಽಥ ತಚ್ಚ ಸೀತಾ ಚಕಾರ ಹ ।
ಸ್ನಾತ್ವಾ ಭುಕ್ತ್ವಾ ಚ ತೌ ವೀರೌ ಮಹಾಕಾಲಮುಪಾಗತೌ ॥ ೩೧ ॥
ನೀತ್ವಾ ವಿಭಾವರೀಂ ತತ್ರ ಗಮನಾಯ ಮನೋ ದಧೇ ।
ಉತ್ತಿಷ್ಠ ವತ್ಸ ಸೌಮಿತ್ರೇ ವ್ರಜಾಮೋ ದಕ್ಷಿಣಾಂ ದಿಶಂ ॥ ೩೨ ॥
ಸೌಮಿತ್ರಿರಬ್ರವೀದ್ವಾಕ್ಯಂ ನಾಽಹಂ ಗಂತಾ ಕಥಂಚನ ।
ವ್ರಜ ತ್ವಮನಯಾ ಸಾರ್ಧಂ ಭಾರ್ಯಯಾ ಕಮಲೇಕ್ಷಣ ॥ ೩೩ ॥
ನಾಽಹಮಗ್ರೇ ವನಂ ಯಾಮಿ ನ ವಾಽಯೋಧ್ಯಾಂ ಕಥಂಚನ ।
ಏವಂ ಬ್ರುವಾಣಂ ಸೌಮಿತ್ರಿಮುವಾಚ ರಘುನಂದನಃ ॥ ೩೪ ॥
ಕಥಂ ಪೂರ್ವಮಯೋಧ್ಯಾಯಾ ನಿರ್ಗತೋಽಸಿ ಮಯಾ ಸಹ ।
ವನೇ ವಸಾಮ್ಯಹಂ ರಾಮ ನವ ವರ್ಷಾಣಿ ಪಂಚ ಚ ॥ ೩೫ ॥

---

೩೦. ಲಕ್ಷ್ಮಣನಾಡಿದ ಈ ಮಾತುಗಳನ್ನು ಕೇಳಿ ರಘುವಂಶತಿಲಕನಾದ ರಾಮನೂ, ಸುಂದರಿಯಾದ ಸೀತೆಯೂ ಬಹಳ ದುಃಖಗೊಂಡರು.

೩೧. ಲಕ್ಷ್ಮಣನು ಹೇಳಿದಂತೆ ಸೀತೆಯೇ ನದೀಜಲವನ್ನು ತಂದು ಕೊಟ್ಟಳು. ಬಳಿಕ ಆ ವೀರರಿಬ್ಬರೂ ಸ್ನಾನಗಳನ್ನೂ, ಭೋಜನವನ್ನೂ ಮಾಡಿಕೊಂಡು ಮಹಾಕಾಲೇಶ್ವರನ ಬಳಿಗೆ ಬಂದರು.

೩೨. ಆ ರಾತ್ರಿಯನ್ನು ಅಲ್ಲಿಯೇ ಕಳೆದರು. ಬೆಳಗಾಗಲು ರಾಮನು ಪ್ರಯಾಣಮಾಡಲೆಳಸಿ, "ತಮ್ಮ! ಸೌಮಿತ್ರಿ! ಏಳು; ದಕ್ಷಿಣದಿಕ್ಕಿಗೆ ಹೊರಡೋಣ" ಎಂದು ಹೇಳಿದನು.

೩೩. ಸೌಮಿತ್ರಿಯು "ಖಂಡಿತವಾಗಿಯೂ ನಾನು ನಿನ್ನೊಡನೆ ಬರುವವನಲ್ಲ. ಕಮಲನೇತ್ರನೆ! ನೀನೇ ನಿನ್ನ ಹೆಂಡತಿಯೊಡನೆ ಕಾಡಿಗೆ ಹೊರಟುಹೋಗು.

೩೪. ನಾನು ನಿನಗೆ ಮೊದಲು ಕಾಡಿಗೂ ಹೊರಡುವುದಿಲ್ಲ. ಅಯೋಧ್ಯೆಗೂ ಹಿಂದಿರುಗುವುದಿಲ್ಲ" ಎಂದನು. ಇಂತು ಹೇಳುತ್ತಿರುವ ಲಕ್ಷ್ಮಣನಿಗೆ ಶ್ರೀ ರಾಮನು ಪುನಃ ಹೇಳಿದನು.

೩೫–೩೬. ಶತ್ರುಸಂಹಾರಕನಾದ ಸೌಮಿತ್ರಿಯೆ! ನೀನು ಮೊದಲೇ ಅಯೋಧ್ಯೆಯಿಂದ ನನ್ನೊಡನೆ ಹೊರಟುಬಂದುದೇಕೆ? 'ರಾಮ! ನಾನೂ ನಿನ್ನೊಡನೆ ಅರಣ್ಯದಲ್ಲಿ ಹದಿನಾಲ್ಕು ವರ್ಷಗಳು ವಾಸಮಾಡುವೆನು; ನನ್ನಲ್ಲಿ ಅನುಗ್ರಹವನ್ನು ಮಾಡು; ನನ್ನನ್ನೂ ಕರೆದುಕೊಂಡು ಹೋಗು' ಎಂದು ಹೇಳಿದೆ

ಪ್ರಸಾದಃ ಕ್ರಿಯತಾಂ ಮಹ್ಯಂ ನಯ ಮಾಮಪಿ ರಾಘವ ।
ಇದಾನೀಂ ತ್ವಮರ್ಧಪಥೇ ಕಥಂ ಸ್ಥಿತೋಽಸಿ ಶತ್ರುಹನ್ ॥ ೩೬ ॥
ಲಕ್ಷ್ಮಣಸ್ತ್ವಬ್ರವೀದ್ರಾಮ ನಾಽಹಂ ಗಂತಾ ವನಂ ಪುನಃ ।
ಲಕ್ಷ್ಮಣಂ ವಿಕೃತಂ ಜ್ಞಾತ್ವಾ ರಾಮೋ ವಚನಮಬ್ರವೀತ್ ॥ ೩೭ ॥
ಮಾ ಮಾಮನುವ್ರಜ ಸೌಮಿತ್ರೇ ಹ್ಯೇಕೋ ಯಾಸ್ಯಾಮಿ ಕಾನನಂ ।
ದ್ವಿತೀಯಾಽಪಿ ತ್ವಿಯಂ ಸೀತಾ ಉಕ್ತೋ ರಾಮೇಣ ಲಕ್ಷ್ಮಣಃ ॥ ೩೮ ॥
ಧನುಃ ಸಂಗೃಹ್ಯ ವಿಮನಾ ಉತ್ತಸ್ಥೌ ಲಕ್ಷ್ಮಣಸ್ತದಾ ।
ಪ್ರಾಪ್ತೌ ಪ್ರಾಕಾರಮರ್ಯಾದಾಂ ಕ್ಷೇತ್ರಸೀಮಾಂ ಪರಂತಪೌ ॥ ೩೯ ॥
ಕ್ಷೇತ್ರಸೀಮಾಂ ಸಮುಲ್ಲಂಘ್ಯ ರಾಮೋ ಲಕ್ಷ್ಮಣಮಬ್ರವೀತ್ ॥
ನಿವರ್ತಯಸ್ವ ಸೌಮಿತ್ರೇ ಸಮರ್ಪಯ ಚ ಮೇ ಧನುಃ ।
ರಾಮವಾಕ್ಯಮುಪಶ್ರುತ್ಯ ಸೀತಾಂ ವೈ ಲಕ್ಷ್ಮಣೋಽಬ್ರವೀತ್ ॥ ೪೧ ॥
ಕಿಮರ್ಥಂ ಹಿ ಪರಿತ್ಯಕ್ತಃ ಕೋಽಪರಾಧಃ ಕೃತೋ ಮಯಾ ।
ರಾಮೇಣ ಹಿ ಪರಿತ್ಯಕ್ತಃ ಪ್ರಾಣಾಂಸ್ತ್ಯಕ್ಷ್ಯಾಮ್ಯಸಂಶಯಂ ॥ ೪೨ ॥

---

ಯಲ್ಲವೆ. ಈಗ ಮಾತ್ರ ಅರ್ಧದಾರಿಗೆ ಬಂದು ನಿಂತುಬಿಡಲು ಕಾರಣವಾದರೂ ಏನು?''

೩೭. ಆದರೂ ಲಕ್ಷ್ಮಣನು ''ಅಣ್ಣಾ! ನಿನ್ನೊಡನೆ ನಾನು ಖಂಡಿತ ವಾಗಿಯೂ ವನಕ್ಕೆ ಬರುವುದಿಲ್ಲ,'' ಎಂದನು. ಇಂತು ಮನೋವಿಕಾರದಿಂದ ಕೂಡಿದ ಲಕ್ಷ್ಮಣನಿಗೆ ರಾಮನು ಮತ್ತೆ ಹೇಳಿದನು.

೩೮. ''ಒಳ್ಳೆಯದು. ಸೌಮಿತ್ರಿಯೆ! ನನ್ನನ್ನು ಹಿಂಬಾಲಿಸಬೇಡ. ನಾನೊಬ್ಬನೇ ಕಾಡಿಗೆ ತೆರಳುವೆನು. ಈ ಸೀತೆಯೊಬ್ಬಳೇ ನನ್ನ ಸಂಗಡ ಬರಲಿ,'' ಇಂತೆಂದು ರಾಮನು ಲಕ್ಷ್ಮಣನಿಗೆ ಹೇಳಿದನು.

೩೯. ಆಗ ಲಕ್ಷ್ಮಣನು ಅರ್ಧಮನಸ್ಸಿನಿಂದಲೇ ಧನುಸ್ಸನ್ನು ತೆಗೆದು ಕೊಂಡು ಮೇಲಕ್ಕೆದ್ದನು. ಇಂತು ಮಹಾವೀರರಾದ ಅವರಿಬ್ಬರೂ ದೇವಾಲಯದ ಹೆಬ್ಬಾಗಿಲನ್ನೂ, ಕ್ಷೇತ್ರದ ಎಲ್ಲೆಯನ್ನೂ ದಾಟಿದರು.

೪೦. ಕ್ಷೇತ್ರವನ್ನು ಕಳೆದು ಬಂದಮೇಲೆ ರಾಮನು ಲಕ್ಷ್ಮಣನನ್ನು ಕುರಿತು ಇಂತೆಂದನು.

೪೧ ''ಸೌಮಿತ್ರಿ! ಇನ್ನು ನೀನು ಹಿಂದಿರುಗು; ನನ್ನ ಧನುಸ್ಸನ್ನು ನನಗೆ ಕೊಡು'' ಎಂದನು. ರಾಮನ ಮಾತನ್ನು ಕೇಳಿ ಲಕ್ಷ್ಮಣನು ಸೀತೆಗೆ ವಿಜ್ಞಾಪಿಸಿ ಕೊಂಡನು.

೪೨. ''ನನ್ನನ್ನು ಅಣ್ಣನು ಏಕೆ ತ್ಯಜಿಸುತ್ತಿರುವನು? ನಾನು ಯಾವ ಅಪರಾಧವನ್ನು ಮಾಡಿದೆನು? ರಾಮನಿಂದ ವಿರಹಿತನಾದರೆ ನಾನು ನಿಶ್ಚಯ ವಾಗಿಯೂ ಪ್ರಾಣಗಳನ್ನು ಬಿಡುವೆನು.''

ರಾಮಂ ತತೋಽಬ್ರವೀತ್ಸೀತಾ ಕಿಮರ್ಥಂ ಲಕ್ಷ್ಮಣಸ್ತ್ವಯಾ ।
ದೇವ ಸಂತ್ಯಜ್ಯತೇ ವೀರಃ ಸುಮಿತ್ರಾನಂದವರ್ಧನಃ ॥ ೪೩ ॥
ರಾಘವಸ್ತ್ವಬ್ರವೀತ್ಸೀತಾಂ ನಾಽಹಂ ತ್ಯಕ್ಷ್ಯಾಮಿ ಲಕ್ಷ್ಮಣಂ ।
ನ ಕದಾಚಿದಪಿ ಸ್ವಪ್ನೇ ಲಕ್ಷ್ಮಣಸದೃಶಂ ಪ್ರಿಯಂ ॥ ೪೪ ॥
ಶ್ರುತಪೂರ್ವಂ ತು ಸುಶ್ರೋಣಿ ಕ್ಷೇತ್ರಸ್ಯಾಽಸ್ಯ ವಿಚೇಷ್ಟಿತಂ ।
ಅಸ್ಮಿನ್ಕ್ಷೇತ್ರೇ ನ ಸೌಭ್ರಾತ್ರಂ ಸರ್ವೋಽಪಿ ಸ್ವಾರ್ಥತತ್ಪರಃ ॥ ೪೫ ॥
ಪರಸ್ಪರಂ ನ ಮನ್ಯಂತೇ ಸ್ವಾರ್ಥನಿಷ್ಠೈಕಹೇತವಃ ।
ನ ಶೃಣ್ವಂತಿ ಪಿತುಃ ಪುತ್ರಾಃ ಪುತ್ರಾಣಾಂ ವಾ ತಥಾ ಪಿತಾ ॥ ೪೬ ॥
ನ ಚ ಶಿಷ್ಯೋ ಗುರೋರ್ವಾಕ್ಯಂ ಗುರುರ್ವಾ ಶಿಷ್ಯಕರ್ಮ ಚ ।
ಅರ್ಥಾನುಬಂಧಿನೀ ಪ್ರೀತಿರ್ನ ಕಶ್ಚಿತ್ಕಸ್ಯಚಿತ್ಪ್ರಿಯಃ ॥ ೪೭ ॥
ಏವಮುಕ್ತ್ವಾ ಯಯೌ ರಾಮೋ ಲಕ್ಷ್ಮಣೋ ಜಾನಕೀ ತಥಾ ।
ಲಿಂಗಂ ತತ್ರ ಪ್ರತಿಷ್ಠಾಪ್ಯ ಸ್ವನಾಮ್ನಾ ರಘುನಂದನಃ ॥ ೪೮ ॥

---

೪೩. ಆಗ ಸೀತೆಯು ರಾಮನನ್ನು ಕುರಿತು, "ನಾಥ! ವೀರನೂ, ಸುಮಿತ್ರಾನಂದವರ್ಧನನೂ ಆದ ಲಕ್ಷ್ಮಣನನ್ನು ನೀನು ಯಾವ ಕಾರಣದಿಂದ ತಿರಸ್ಕರಿಸುತ್ತಿರುವೆ?" ಎಂದು ಪ್ರಶ್ನೆಮಾಡಿದಳು.

೪೪. ರಾಘವನು ಸೀತೆಗೆ ಹೇಳಿದನು. "ನಾನೆಂದಿಗೂ ಲಕ್ಷ್ಮಣನನ್ನು ತ್ಯಾಗಮಾಡುವುದಿಲ್ಲ. ಅವನಂತಹ ಪ್ರಿಯನಾದವನನ್ನು ಯಾವಾಗಲೂ ಸ್ವಪ್ನದಲ್ಲಿಯೂ ಬಿಟ್ಟಿರಲಾರೆನು.

೪೫. ಮಂಗಳಾಂಗಿ! ಈ ಕ್ಷೇತ್ರದ ಪ್ರಭಾವದಿಂದ ಹಿಂದೆ ನಡೆದುದೆಲ್ಲವನ್ನೂ ನೀನೇ ಕೇಳಿರುವೆಯಷ್ಟೆ. ಈ ಕ್ಷೇತ್ರದಲ್ಲಿ ಅಣ್ಣತಮ್ಮಂದಿರ ಪ್ರೀತಿಯೆಂಬುದಿರುವುದಿಲ್ಲ. ಸಕಲರೂ ಸ್ವಾರ್ಥತತ್ಪರರಾಗಿರುವರು.

೪೬. ಸ್ವಾರ್ಥಸಾಧನೆಯಲ್ಲಿಯೇ ನಿರತರಾಗಿರುವುದರಿಂದ ಪರಸ್ಪರ ಗೌರವವಿರುವುದಿಲ್ಲ. ತಂದೆಯ ಮಾತನ್ನು ಮಕ್ಕಳಾಗಲಿ, ಮಕ್ಕಳ ವಿಜ್ಞಾಪನೆಯನ್ನು ತಂದೆಯಾಗಲಿ ಕೇಳುವುದಿಲ್ಲ.

೪೭. ಗುರುವಿನ ಮಾತನ್ನು ಶಿಷ್ಯನು ಕೇಳುವುದಿಲ್ಲ. ಶಿಷ್ಯನ ಯೋಗಕ್ಷೇಮವನ್ನು ಗುರುವೂ ನೋಡಿಕೊಳ್ಳುವುದಿಲ್ಲ. ಪ್ರೀತಿಯೆಂಬುದು ಧನ ವ್ಯವಹಾರವನ್ನನುಸರಿಸಿಯೇ ಇರುವುದು. ಯಾರಿಗೆ ಯಾರೂ ಪ್ರಿಯರಾಗಿರುವುದಿಲ್ಲ."

೪೮. ಇಂತೆಂದು ರಾಘವರಾಮನು ತನ್ನ ಹೆಸರಿನಿಂದ ಒಂದು ಲಿಂಗವನ್ನು ಅಲ್ಲಿ ಪ್ರತಿಷ್ಠೆಮಾಡಿ ಲಕ್ಷ್ಮಣ ಮತ್ತು ಜಾನಕಿಯರೊಡನೆ ಮುಂದೆ ಪ್ರಯಾಣಮಾಡಿದನು.

ರಾಮತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ರಾಮೇಶ್ವರಂ ಶಿವಂ ।
ವಿಮುಕ್ತಃ ಸರ್ವಪಾಪೇಭ್ಯಃ ಶಿವಲೋಕಂ ಸ ಗಚ್ಛತಿ ॥ ೪೯ ॥

॥ ಇತಿ ರಾಮೇಶ್ವರಮಾಹಾತ್ಮ್ಯಂ ॥

ಸನತ್ಕುಮಾರ ಉವಾಚ :—
ತೀರ್ಥೇ ಸೌಭಾಗ್ಯಕೇ ಸ್ನಾತ್ವಾ ದೃಷ್ಟ್ವಾ ಸೌಭಾಗ್ಯಮೀಶ್ವರಂ ।
ಸರ್ವಪಾಪವಿನಿರ್ಮುಕ್ತಃ ಸೌಭಾಗ್ಯಂ ಪರಮಂ ಲಭೇತ್ ॥ ೫೦ ॥
ಘೃತತೀರ್ಥೇ ನರಃ ಸ್ನಾತ್ವಾ ಘೃತೇನ ಸ್ನಾಪಯೇಚ್ಛಿವಂ ।
ಘೃತಮಗ್ನಾವಥೋ ಹುತ್ವಾ ರುದ್ರಲೋಕೇ ಮಹೀಯತೇ ॥ ೫೧ ॥
ದೇವೀಂ ಯೋಗೀಶ್ವರೀಂ ಪೂಜ್ಯ ಸುರಾಸುರನಮಸ್ಕೃತಾಂ ।
ಸರ್ವಪಾಪವಿನಿರ್ಮುಕ್ತಃ ಪರಂ ಯೋಗಮವಾಪ್ನುಯಾತ್ ॥ ೫೨ ॥
ಶಂಖಾವರ್ತೇ ನರಃ ಸ್ನಾತ್ವಾ ಸರ್ವಪಾಪವಿವರ್ಜಿತಃ ।
ಧನಧಾನ್ಯಸಮಾಯುಕ್ತೋ ಜಾಯತೇ ನಿರ್ಮಲೇ ಕುಲೇ ॥ ೫೩ ॥

---

೪೯. ರಾಮತೀರ್ಥದಲ್ಲಿ ಸ್ನಾನವನ್ನು ಮಾಡಿ ರಾಮೇಶ್ವರವೆಂಬ ಮಹಾಲಿಂಗದ ದರ್ಶನವನ್ನು ತೆಗೆದುಕೊಂಡ ಮಾನವನು ಸಮಸ್ತ ಪಾತಕಗಳಿಂದಲೂ ಮುಕ್ತನಾಗುವನು; ದೇಹಾವಸಾನವಾದ ಮೇಲೆ ಶಿವಲೋಕವನ್ನು ಹೋಗಿ ಸೇರುವನು.

೫೦. ಸನತ್ಕುಮಾರನು ಹೇಳುತ್ತಾನೆ:—ಸೌಭಾಗ್ಯತೀರ್ಥದಲ್ಲಿ ಮಿಂದು ಸೌಭಾಗ್ಯೇಶ್ವರಲಿಂಗವನ್ನು ನೋಡಿದವನು ಸಮಸ್ತ ಪಾಪಮುಕ್ತನಾಗಿ ಉತ್ತಮವಾದ ಸೌಭಾಗ್ಯಕ್ಕೆ ಭಾಗಿಯಾಗುವನು.

೫೧. ಘೃತ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಶಿವನಿಗೆ ಘೃತಾಭಿಷೇಕವನ್ನು ಮಾಡಿಸಬೇಕು. ಬಳಿಕ ಆಜ್ಯದಿಂದ ಅಗ್ನಿಯಲ್ಲಿ ಹೋಮವನ್ನು ಮಾಡಲು ರುದ್ರಲೋಕದಲ್ಲಿ ಮರ್ಯಾದೆಯನ್ನು ಪಡೆಯುವನು.

೫೨. ದೇವಾಸುರರಿಂದಲೂ ನಮಸ್ಕೃತಳಾದ ಯೋಗೀಶ್ವರೀದೇವಿಗೆ ಪೂಜೆಯನ್ನು ಮಾಡಿದವನು ಸಮಸ್ತ ಪಾಪಮುಕ್ತನಾಗಿ ಉತ್ತಮವಾದ ಯೋಗಸಿದ್ಧಿಯನ್ನು ಪಡೆಯುವನು.

೫೩. ಶಂಖಾವರ್ತವೆಂಬ ತೀರ್ಥದಲ್ಲಿ ಸ್ನಾನವನ್ನು ಮಾಡಿ ಸಕಲ ಪಾಪಗಳನ್ನೂ ಕಳೆದುಕೊಂಡವನು ಉತ್ತಮಕುಲದಲ್ಲಿ ಜನ್ಮವನ್ನು ತಳೆದು ಧನಧಾನ್ಯಸಮೃದ್ಧಿಯುಳ್ಳವನಾಗುವನು.

ಸುಧೋದಕೇ ಚತುರ್ದಶ್ಯಾಂ ಮುಕ್ತ್ಯರ್ಥಂ ಸ್ನಾಪಯೇನ್ನರಃ ।
ಶಿವಂ ಸುಧೇಶ್ವರಂ ದೃಷ್ಟ್ವಾ ತತೋ ಮೋಕ್ಷಗತಿರ್ಭವೇತ್ ॥ ೫೪ ॥
ತಥಾಽನ್ಯತ್ಸಂಪ್ರವಕ್ಷ್ಯಾಮಿ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಕಿಂಪುನೇತಿ ಚ ವಿಖ್ಯಾತಂ ಬ್ರಹ್ಮಹತ್ಯಾವಿಮೋಚನಂ ॥ ೫೫ ॥
ಪೂರ್ವಂ ತ್ರೇತಾಯುಗೇ ವ್ಯಾಸ ಸುನೇತ್ರೋ ನಾಮ ವೈ ದ್ವಿಜಃ ।
ತಸ್ಯ ಪುತ್ರಃ ಸಮುತ್ಪನ್ನೋ ವಿಶ್ವಾವಸುರಿತಿ ಸ್ಮೃತಃ ॥ ೫೬ ॥
ಯುವಕ್ರೀತಸ್ಯ ಶಾಪೇನ ಸ್ವಪಿತಾ ತೇನ ಘಾತಿತಃ ।
ಬ್ರಹ್ಮಹತ್ಯಾನ್ವಿತೋ ವ್ಯಾಸ ತೀರ್ಥಾತ್ತೀರ್ಥಂ ಪರಿಭ್ರಮನ್ ॥ ೫೭ ॥
ತೀರ್ಥೇ ಕಿಂಪುನಕೇ ಸ್ನಾತ್ವಾ ಧಾರಾತೀರ್ಥೇ ಗತೋ ದ್ವಿಜಃ ।
ತತಃ ಕಪಿಲಧಾರಾಯಾಂ ಚಿಂತಯತ್ಯಾತ್ಮನಾ ಸ್ವಯಂ ॥ ೫೮ ॥
ಕಥಂ ಮೇ ಪತಿತಾ ಧಾರಾ ಅನೃತಾ ವಾ ಶ್ರುತಿಸ್ತಥಾ ।
ಏವಂ ಹ್ಯಚಿಂತಯತ್ಸೋಽಥ ಪುನರಾಯಾದವಂತಿಕಾಂ ॥ ೫೯ ॥

---

೫೪. ಮೋಕ್ಷಾಪೇಕ್ಷಿಯಾದ ನರನು ಸುಧೋದಕತೀರ್ಥದಲ್ಲಿ ಚತುರ್ದಶಿಯ ದಿನ ಸ್ನಾನವನ್ನು ಮಾಡಬೇಕು. ಬಳಿಕ ಸುಧೇಶ್ವರನ ದರ್ಶನವನ್ನು ಮಾಡಲು ಮೋಕ್ಷಪದವಿಯನ್ನೈದುವನು.

೫೫. ಇನ್ನು ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವ ಮತ್ತೊಂದು ತೀರ್ಥದ ವಿಷಯವನ್ನು ಹೇಳುವೆನು. ಕಿಂಪುನಕವೆಂಬ ಈ ತೀರ್ಥವು ಬ್ರಹ್ಮಹತ್ಯೆಯನ್ನೂ ಕಳೆಯುವುದು.

೫೬. ಎಲೈ ವ್ಯಾಸನೆ! ಹಿಂದೆ ತ್ರೇತಾಯುಗದಲ್ಲಿ ಸುನೇತ್ರನೆಂಬ ಬ್ರಾಹ್ಮಣನೊಬ್ಬನಿದ್ದನು. ಆತನಿಗೆ ವಿಶ್ವಾವಸುವೆಂಬ ಹೆಸರಿನ ಒಬ್ಬ ಮಗನು ಜನಿಸಿದನು.

೫೭. ಯುವಕ್ರೀತನೆಂಬ ಮಹರ್ಷಿಯ ಶಾಪವನ್ನನುಸರಿಸಿ ಆ ವಿಶ್ವಾವಸುವು ತನ್ನ ತಂದೆಯನ್ನು ಕೊಂದನು. ಅವನಿಂತು ಬ್ರಹ್ಮಹತ್ಯೆಯನ್ನು ಕಟ್ಟಿಕೊಂಡು ತೀರ್ಥದಿಂದ ತೀರ್ಥಕ್ಕೆ ತಿರುಗುತ್ತಿದ್ದನು.

೫೮. ಆಗ ಆ ಬ್ರಾಹ್ಮಣನು ಕಿಂಪುನಕತೀರ್ಥದಲ್ಲಿ ಸ್ನಾನಮಾಡಿ ಧಾರಾತೀರ್ಥಕ್ಕೆ ಹೋದನು. ಬಳಿಕ ಕಪಿಲಧಾರೆಯ ಬಳಿಯಲ್ಲಿ ನಿಂತು ತನ್ನಲ್ಲಿ ತಾನೇ ಯೋಚಿಸತೊಡಗಿದನು.

೫೯. "ಮಹತ್ತರವಾದ ನನ್ನ ಪಾತಕವು ಹೇಗೆ ಕಳೆದುಹೋಯಿತು? ಅಥವಾ ಆ ಬ್ರಾಹ್ಮಣನ ಶಾಪವನ್ನು ನಾನು ಕೇಳಿದುದೂ ಸುಳ್ಳಾಯಿತೆ?" ಇಂತೆಂದು ವಿಶ್ವಾವಸುವು ಚಿಂತಿಸುತ್ತ ಮತ್ತೆ ಅವಂತೀಕ್ಷೇತ್ರಕ್ಕೆ ಬಂದನು.

ಅತ್ರ ತೀರ್ಥೇ ಪುನಃ ಸ್ನಾತಿ ಯಾವದ್ವಾಣೀಂ ತತೋಽಶೃಣೋತ್ ।
ಕಿಂ ಪುನರ್ಧ್ಯಾಯಸಿ ಬ್ರಹ್ಮನ್ ಯೇನ ಜಾತೋ ದ್ವಿಜೋತ್ತಮಃ ॥ ೬೦ ॥
ನ ತೇಽಸ್ತಿ ಬ್ರಹ್ಮಹತ್ಯಾ ವೈ ತೀರ್ಥಸ್ನಾನೇನ ನಾಶಿತಾ ।
ಗಚ್ಛ ಶೀಘ್ರಂ ಗೃಹಂ ವಿಪ್ರ ಪಾಪಹೀನೋ ಯಥಾಸುಖಂ ॥ ೬೧ ॥

॥ ಇತಿ ಕಿಂಪುನಾಮಾಹಾತ್ಮ್ಯಂ ॥

ಸನತ್ಕುಮಾರ ಉವಾಚ :—
ಪುನರನ್ಯತ್ಪ್ರವಕ್ಷ್ಯಾಮಿ ಪತ್ತನೇಶ್ವರಮುತ್ತಮಂ ।
ತತ್ರ ಸ್ಥಿತ್ವಾ ಮಹೇಶೇನ ಪುನಃ ಪತ್ತನಮೀಕ್ಷಿತಂ ॥ ೬೨ ॥
ಪತ್ತನೇಶ್ವರ ಇತ್ಯಾಖ್ಯೋ ದೇವದೇವೋ ಮಹೇಶ್ವರಃ ।
ಯಸ್ತು ಗಂಧೈಶ್ಚ ಪುಷ್ಪೈಶ್ಚ ಧೂಪೈರ್ದೀಪೈರ್ಮನೋರಮೈಃ ॥ ೬೩ ॥
ಭಾವಯುಕ್ತೋ ನರೋ ವ್ಯಾಸ ಪೂಜಯೇದ್ವಿಧಿವತ್ಸದಾ ।
ಯಥಾವತ್ತಿಷ್ಠತೇ ಲಿಂಗಂ ವಂಶಚ್ಛೇದೋ ನ ಜಾಯತೇ ॥ ೬೪ ॥
ಹಂಸಯುಕ್ತೇನ ಯಾನೇನ ಶಿವಲೋಕಂ ಸ ಗಚ್ಛತಿ ।
ತಥಾಽನ್ಯತ್ಸಂಪ್ರವಕ್ಷ್ಯಾಮಿ ತೀರ್ಥಂ ತ್ರೈಲೋಕ್ಯವಿಶ್ರುತಂ ॥ ೬೫ ॥

---

೬೦. ಆ ತೀರ್ಥದಲ್ಲಿ ಪುನಃ ಸ್ನಾನಮಾಡುತ್ತಿರುವಂತೆಯೇ ಒಂದು ಅಶರೀರ ವಾಣಿಯನ್ನು ಕೇಳಿದನು. "ಎಲೈ ಬ್ರಾಹ್ಮಣನೆ! ಇನ್ನೂ ಏನನ್ನು ಕುರಿತು ಯೋಚಿಸುತ್ತಿರುವೆ? ನೀನು ಮತ್ತೆ ಬ್ರಾಹ್ಮಣೋತ್ತಮನಾದೆ.

೬೧. ನಿನಗೆ ಬ್ರಹ್ಮಹತ್ಯೆಯು ಇಲ್ಲವೇ ಇಲ್ಲ. ತೀರ್ಥಸ್ನಾನದಿಂದ ಅದು ನಾಶವಾಯಿತು. ಎಲೈ ವಿಪ್ರೋತ್ತಮನೆ! ಬೇಗ ನಿನ್ನ ಮನೆಗೆ ಹೋಗು. ಪಾಪ ರಹಿತನಾಗಿ ಯಥಾಸುಖದಿಂದ ಜೀವಿಸುತ್ತಿರು."

೬೨. ಸನತ್ಕುಮಾರನು ಹೇಳುತ್ತಾನೆ:—ಇನ್ನು ಪತ್ತನೇಶ್ವರವೆಂಬ ಲಿಂಗ ವನ್ನು ಕುರಿತು ಹೇಳುತ್ತೇನೆ. ಉತ್ತಮವಾದ ಈ ಲಿಂಗವಿರುವ ಸ್ಥಳದಲ್ಲಿಯೇ ಮಹೇಶ್ವರನು ನಿಂತು ಉಜ್ಜಯಿನೀನಗರವೆಲ್ಲವನ್ನೂ ನೋಡಿದನು.

೬೩–೬೪. ಆದುದರಿಂದ ದೇವದೇವನಾದ ಮಹೇಶ್ವರನು ಅಲ್ಲಿ ಪತ್ತನೇಶ್ವರ ನೆಂಬ ಹೆಸರಿನಿಂದ ಪ್ರತಿಷ್ಠಿತನಾಗಿರುವನು. ವ್ಯಾಸನೆ! ಯಾವ ಮಾನವನು ಭಕ್ತಿಯಿಂದಲೂ, ವಿಧಿಪ್ರಕಾರವಾಗಿಯೂ ನಿತ್ಯವೂ ಈ ಲಿಂಗವನ್ನು ಗಂಧ, ಪುಷ್ಪ, ಧೂಪ, ಚಿತ್ರದೀಪಗಳಿಂದ ಪೂಜೆಮಾಡುವನೊ, ಅವನಿಗೆ ಆ ಲಿಂಗವು ಭೂಲೋಕದಲ್ಲಿ ನೆಲಸಿರುವವರೆಗೂ ಸಂತತಿಯು ವಿಚ್ಛೇದವಾಗುವುದಿಲ್ಲ.

೬೫. ಆತನು ಹಂಸಗಳನ್ನು ಹೂಡಿದ ರಥದಲ್ಲಿ ಕುಳಿತು ಶಿವಲೋಕಕ್ಕೆ ಹೋಗುವನು. ಈಗ ತ್ರಿಲೋಕಗಳಲ್ಲಿ ಪ್ರಖ್ಯಾತವಾದ ಮತ್ತೊಂದು ತೀರ್ಥ ವನ್ನು ವಿವರಿಸಿ ಹೇಳುವೆನು.

ದುರ್ಧರ್ಷಮಿತಿ ವಿಖ್ಯಾತಂ ಬ್ರಹ್ಮಹತ್ಯಾವಿಮೋಚನಂ ।
ಪುರಾ ದಿವಾಕರೋ ವ್ಯಾಸ ಚಕ್ರೇ ದುರ್ಧರ್ಷನಾಮತಃ ॥ ೬೬ ॥
ತೀರ್ಥಮಾಶಿಪ್ರನದೀತೀರೇ ವಿಖ್ಯಾತಂ ಸೂರ್ಯಸಂಸ್ಕೃತಂ ।
ತೇಜಃಪುಂಜಂ ಭವೇಲ್ಲಿಂಗಂ ಗಣಗಂಧರ್ವಪೂಜಿತಂ ॥ ೬೭ ॥
ಸಪ್ತಮ್ಯಾಮಥವಾಽಷ್ಟಮ್ಯಾಂ ಸಂಕ್ರಾಂತೌ ರವಿವಾಸರೇ ।
ತತ್ರ ಸ್ನಾತ್ವಾ ಶುಚಿರ್ಭೂತ್ವಾ ದಿನಮೇಕಮುಪೋಷಿತಃ ॥ ೬೮ ॥
ದೃಷ್ಟ್ವಾ ಮಹೇಶ್ವರಂ ತತ್ರ ಶಿಪ್ರಾಕೂಲೇ ವ್ಯವಸ್ಥಿತಂ ।
ಪೂಜಯಿತ್ವಾ ತು ಭಾವೇನ ಯತ್ಫಲಂ ತಚ್ಛೃಣುಷ್ವ ಮೇ ॥ ೬೯ ॥
ಪಿತೃಮಾತೃಕುಲಂ ಸರ್ವಂ ಸಮುದ್ಧೃತ್ಯ ಶಿವಂ ವ್ರಜೇತ್ ।
ತತ್ರ ಯಚ್ಛತಿ ಯೋ ದಾನಂ ಗೋಹೇಮಾದಿ ವಿಶೇಷತಃ ॥ ೭೦ ॥
ತಾವತ್ತದಕ್ಷಯಂ ಲೋಕೇ ಯಾವಚ್ಚಂದ್ರದಿವಾಕರೌ ।
ತಥಾಽನ್ಯತ್ಸಂಪ್ರವಕ್ಷ್ಯಾಮಿ ಗೋಪೀಂದ್ರಂ ತೀರ್ಥಮುತ್ತಮಂ ॥ ೭೧ ॥

---

೬೬. ದುರ್ಧರ್ಷವೆಂಬ ಹೆಸರಿನ ಈ ಪ್ರಖ್ಯಾತತೀರ್ಥವು ಬ್ರಹ್ಮಹತ್ಯೆಯನ್ನೂ ಹೋಗಲಾಡಿಸುವುದು. ವ್ಯಾಸನೆ! ಹಿಂದೆ ಸೂರ್ಯದೇವನೇ ದುರ್ಧರ್ಷೇಶ್ವರನೆಂಬ ಈ ಲಿಂಗವನ್ನು ಪ್ರತಿಷ್ಠಿಸಿದನು.

೬೭. ಆ ಸೂರ್ಯನಿಂದಲೇ ಪರಿಷ್ಕರಿಸಲ್ಪಟ್ಟ ತೀರ್ಥವೂ ಶಿಪ್ರಾನದಿಯ ತೀರದಲ್ಲಿಯೇ ವಿಖ್ಯಾತವಾಯಿತು. ತೇಜಃಪುಂಜವಾದ ಆ ಲಿಂಗವನ್ನು ಶಿವಗಣಗಳೂ ಗಂಧರ್ವರೂ ಪೂಜಿಸುತ್ತಿರುವರು.

೬೮. ಸಪ್ತಮಿ, ಅಷ್ಟಮಿ, ಸಂಕ್ರಮಣದ ದಿನಗಳು, ಅಥವ ಭಾನುವಾರಗಳಲ್ಲಿ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಶುಚಿರ್ಭೂತನಾಗಿ ಆ ದಿನವನ್ನು ಉಪವಾಸದಿಂದ ಕಳೆಯಬೇಕು.

೬೯. ಆ ಶಿಪ್ರಾತೀರದಲ್ಲಿ ನೆಲಸಿರುವ ಮಾಹೇಶ್ವರಲಿಂಗದ ದರ್ಶನವನ್ನು ಮಾಡಲು ಮತ್ತು ಭಕ್ತಿಯುಕ್ತನಾಗಿ ಪೂಜೆಯನ್ನು ಮಾಡಲು ಲಭಿಸುವ ಫಲವನ್ನು ಹೇಳುವೆನು, ಕೇಳು.

೭೦. ಆ ಭಕ್ತನು ತನ್ನ ತಂದೆತಾಯಂದಿರ ಕುಲಗಳೆಲ್ಲವನ್ನೂ ಉದ್ಧಾರ ಮಾಡುವುದಲ್ಲದೆ ತಾನೂ ಶಿವನನ್ನು ಸೇರುವನು. ಅಲ್ಲಿ ವಿಶೇಷವಾಗಿ ಗೋದಾನ, ಸುವರ್ಣದಾನ ಮೊದಲಾದ ದಶಮಹಾದಾನಗಳನ್ನು ಮಾಡಬೇಕು.

೭೧. ಚಂದ್ರಸೂರ್ಯರಿರುವವರೆಗೂ ಆ ದಾನಗಳ ಫಲವು ಲೋಕದಲ್ಲಿ ಅಕ್ಷಯವಾಗಿರುವುದು. ಈಗ ಗೋಪೀಂದ್ರವೆಂಬ ಹೆಸರಿನ ಮತ್ತೊಂದು ಉತ್ತಮತೀರ್ಥವನ್ನು ಕುರಿತು ಹೇಳುವೆನು.

ಗೌತಮೇನ ಪುರಾ ಯತ್ರ ಇಂದ್ರಃ ಶಾಪಾದ್ಭಗೀಕೃತಃ ।
ಭಗವ್ರೀಡಾಯುತಃ ಶಕ್ರಃ ಪ್ರವಿಶ್ಯ ವನಮುತ್ತಮಂ ॥ ೭೨ ॥
ಅತೋಷಯತ್ತದೋಗ್ರೇಣ ತಪಸಾ ಶಂಕರಂ ಪುರಾ ।
ತುಷ್ಟೇನ ಶಂಭುನಾ ವಿಪ್ರ ಯೇ ಭಗಾಸ್ತಚ್ಛರೀರಗಾಃ ॥ ೭೩ ॥
ಗೋಸಹಸ್ರೀಕೃತಾಸ್ತೇನ ಗೋಪೀಂದ್ರಸ್ತೇನ ಕಥ್ಯತೇ ।
ತತ್ರ ಸ್ನಾತ್ವಾ ದಿವಂ ಯಾತಿ ಶಕ್ರತುಲ್ಯಪರಾಕ್ರಮಃ ॥ ೭೪ ॥
ಯೇ ಮೃತಾಸ್ತೇ ಪುನರ್ಜನ್ಮ ನಾಪ್ನುವಂತಿ ಮಹೀತಲೇ ।
ಗಂಗಾತೀರ್ಥೇ ನರಃ ಸ್ನಾತ್ವಾ ಪುಣ್ಯಮಾಪ್ನೋತಿ ಪುಷ್ಕಲಂ ॥ ೭೫ ॥
ಜ್ಯೇಷ್ಠಶುಕ್ಲದಶಮ್ಯಾಂ ತು ಗಂಗಾಯಾಂ ಫಲಮಾದಿಶೇತ್ ॥ ೭೬ ॥
ಸ್ನಾತ್ವಾ ಪುಷ್ಪಕರಂಡೇ ಚ ದೃಷ್ಟ್ವಾ ಪುಷ್ಪಕರಂಡಕಂ ।
ಪುಷ್ಪಕೇನ ವಿಮಾನೇನ ಪ್ರಯಾತೋ ದಿವಿ ಮೋದತೇ ॥ ೭೭ ॥
ನರಕಾದುದ್ಧರತ್ಯಾಶು ನರಃ ಸ್ನಾತ್ವೋತ್ತರೇಶ್ವರೇ ।
ಇಷ್ಟಭೋಗಸಮಾಪನ್ನೋ ಯಾತಿ ಸ್ವರ್ಗಂ ನ ಸಂಶಯಃ ॥ ೭೮ ॥

---

೭೨. ಈ ಸ್ಥಳದಲ್ಲಿಯೇ ಹಿಂದೆ ಗೌತಮಮಹರ್ಷಿಯು ಇಂದ್ರನ ದೇಹವನ್ನು ಭಗಮಯವನ್ನಾಗಿ ಮಾಡಿದನು. ಇದರಿಂದ ಅತ್ಯಂತಲಜ್ಜಿತನಾದ ಮಹೇಂದ್ರನು ಘೋರಾರಣ್ಯವನ್ನು ಪ್ರವೇಶಿಸಿದನು.

೭೩-೭೪. ಮತ್ತು ಉಗ್ರವಾದ ತಪಸ್ಸನ್ನು ಮಾಡಿ ಶಂಕರನನ್ನು ಸಂತೋಷಗೊಳಿಸಿದನು. ಪರಿತುಷ್ಟನಾದ ಮಹೇಶ್ವರನು ಆತನ ದೇಹದಲ್ಲಿದ್ದ ಸಹಸ್ರಭಗಗಳನ್ನೂ ನೇತ್ರಗಳನ್ನಾಗಿ ಮಾಡಿದನು. ಆದುದರಿಂದ ಇಲ್ಲಿ ನೆಲಸಿರುವ ಇಂದ್ರಪೂಜಿತವಾದ ಲಿಂಗಕ್ಕೆ ಗೋಪೀಂದ್ರವೆಂದು ಹೆಸರಾಯಿತು. ಆ ತೀರ್ಥದಲ್ಲಿ ಸ್ನಾನಮಾಡಿದವನು ಮಹೇಂದ್ರಸಮಪರಾಕ್ರಮವುಳ್ಳವನಾಗಿ ಸ್ವರ್ಗಲೋಕವನ್ನು ಸೇರುವನು.

೭೫. ಅಲ್ಲಿ ಮೃತರಾದವರು ಪುನಃ ಭೂಲೋಕದಲ್ಲಿ ಜನ್ಮವನ್ನು ಪಡೆಯುವುದಿಲ್ಲ. ಗಂಗಾತೀರ್ಥದಲ್ಲಿ ಸ್ನಾನಮಾಡಿದ ನರನು ಅನಂತವಾದ ಪುಣ್ಯವನ್ನು ಪಡೆಯುವನು.

೭೬. ಜ್ಯೇಷ್ಠಶುಕ್ಲ ದಶಮಿಯ ದಿನದಲ್ಲಿ ಗಂಗಾತೀರ್ಥದ ಬಳಿಯಲ್ಲಿ ಫಲದಾನವನ್ನು ಮಾಡಬೇಕು.

೭೭. ಪುಷ್ಪಕರಂಡತೀರ್ಥದಲ್ಲಿ ಸ್ನಾನಮಾಡಿ ಪುಷ್ಪಕರಂಡಕ ಸ್ವಾಮಿಯನ್ನು ನೋಡಿದವನು ಪುಷ್ಪಕವಿಮಾನದಲ್ಲಿ ಪ್ರಯಾಣಮಾಡುತ್ತ ಸ್ವರ್ಗಸೌಖ್ಯಗಳನ್ನನುಭವಿಸುವನು.

೭೮. ಉತ್ತರೇಶ್ವರತೀರ್ಥದಲ್ಲಿ ಸ್ನಾನವನ್ನು ಮಾಡಿದವನು ತನ್ನ ಪಿತೃ

ಭೂತೇಶ್ವರೇ ನರಃ ಸ್ನಾತ್ವಾ ಭೂತೇಶ್ವರಮಥಾಽರ್ಚಯೇತ್ ।
ಗಂಧಪುಷ್ಪಾದಿನೈವೇದ್ಯೈರ್ಮೃತೋ ರುದ್ರಪುರಂ ವ್ರಜೇತ್ ॥ ೭೯ ॥
ಶಿಪ್ರಾಯಾಂ ತು ನರಃ ಸ್ನಾತ್ವಾ ಕೈಲಾಸಂ ತು ನಮಸ್ಯತಿ ।
ಸೂರ್ಯಾಽಽಹತಂ ತಮೋ ಯದ್ವತ್ತದ್ವತ್ಪಾಪಂ ಪ್ರಣಶ್ಯತಿ ॥ ೮೦ ॥
ಅಂಬಾಲಿಕಾಂ ಚ ಯಃ ಪಶ್ಯೇತ್ಸಮಾಧಿನಿಯಮೇನ ಚ ।
ಸ ಮುಕ್ತಃ ಸರ್ವಪಾಪೇಭ್ಯಃ ಕಂಚುಕೇನ ಫಣೀ ಯಥಾ ॥ ೮೧ ॥
ಘಂಟೇಶ್ವರಂ ಪ್ರವಕ್ಷ್ಯಾಮಿ ಯತ್ಸುರೈರಪಿ ಪೂಜಿತಂ ।
ಯತ್ರ ಕೂಪೋದಕಂ ಪೀತ್ವಾ ಸೌಭಾಗ್ಯಮತುಲಂ ಲಭೇತ್ ॥ ೮೨ ॥
ಅರ್ಚಯೇದ್ಯಸ್ತು ದೇವೇಶಂ ಗಂಧಪುಷ್ಪೈರನುಕ್ರಮಾತ್ ।
ಶಿವಲೋಕೇ ವಸೇತ್ತಾವದ್ಯಾವದಿಂದ್ರಾಶ್ಚತುರ್ದಶ ॥ ೮೩ ॥
ಪುಣ್ಯೇಶ್ವರಂ ತು ಯಃ ಪಶ್ಯೇಚ್ಛುಚಿಃ ಸ್ನಾತೋ ಜಿತೇಂದ್ರಿಯಃ ।
ಸ ಗಾಣಪತ್ಯಮಾಪ್ನೋತಿ ಯತ್ಸುರೈರಪಿ ದುರ್ಲಭಂ ॥ ೮೪ ॥

---

ದೇವತೆಗಳನ್ನುದ್ಧರಿಸುವನಲ್ಲದೆ ಸಕಲಾಭೀಷ್ಟಗಳನ್ನೂ ಪಡೆದು ಸ್ವರ್ಗಕ್ಕೆ ಹೋಗುವುದರಲ್ಲಿ ಸಂದೇಹವಿಲ್ಲ.

೭೯. ಭೂತೇಶ್ವರತೀರ್ಥದಲ್ಲಿ ಮಿಂದ ಮಾನವನು ಭೂತೇಶ್ವರನನ್ನು ಗಂಧ, ಪುಷ್ಪ, ನೈವೇದ್ಯ ಮುಂತಾದುವುಗಳಿಂದ ಪೂಜಿಸಬೇಕು. ಅವನು ದೇಹವನ್ನು ಬಿಡಲು ರುದ್ರಲೋಕಕ್ಕೆ ಹೋಗುವನು.

೮೦. ಶಿಪ್ರಾನದಿಯಲ್ಲಿ ಸ್ನಾನಮಾಡಿ ಕೈಲಾಸೇಶ್ವರನಿಗೆ ಯಾರು ನಮಸ್ಕರಿಸುವರೊ, ಅವರ ಪಾತಕಗಳೆಲ್ಲವೂ ಸೂರ್ಯನಿಂದ ಧ್ವಂಸವನ್ನು ಹೊಂದಿದ ಕತ್ತಲೆಯಂತೆ ನಾಶವಾಗುವುವು.

೮೧. ಚಿತ್ತೈಕಾಗ್ರತೆಯ ನಿಯಮವನ್ನು ಅನುಸರಿಸಿ ಯಾವನು ಅಂಬಾಲಿಕಾ ದೇವಿಯನ್ನು ನೋಡುವನೊ, ಅವನು ಪೊರೆಯನ್ನು ಕಳೆದ ಹಾವಿನಂತೆ ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೮೨. ಇನ್ನು ಘಂಟೇಶ್ವರಮಾಹಾತ್ಮ್ಯವನ್ನು ಹೇಳುವೆನು. ಈ ದೇವನನ್ನು ದೇವತೆಗಳೂ ಪೂಜಿಸುವರು. ಅಲ್ಲಿರುವ ಭಾವಿಯ ನೀರನ್ನು ಕುಡಿಯಲು ಅಪರಿಮಿತವಾದ ಸೌಭಾಗ್ಯವು ಲಭಿಸುವುದು.

೮೩. ಗಂಧಪುಷ್ಪಾದಿಗಳಿಂದ ಕ್ರಮವರಿತು ಈ ಘಂಟೇಶ್ವರನನ್ನು ಪೂಜಿಸಿದವನು ಹದಿನಾಲ್ಕು ಮಹೇಂದ್ರ ಕಲ್ಪಗಳು ಕಳೆಯುವವರೆಗೂ ಶಿವಲೋಕದಲ್ಲಿ ವಾಸಿಸುವನು.

೮೪. ಸ್ನಾನಮಾಡಿಕೊಂಡು ಶುಚಿಯಾಗಿ ಇಂದ್ರಿಯಗಳನ್ನು ನಿಗ್ರಹಿಸಿ ಯಾವ ನರನು ಪುಣ್ಯೇಶ್ವರನ ದರ್ಶನವನ್ನು ತೆಗೆದುಕೊಳ್ಳುವನೊ, ಅವನು

ಲಂಪೇಶ್ವರೇ ನರಃ ಸ್ನಾತ್ವಾ ಸಮಭ್ಯರ್ಚ್ಯ ಮಹೇಶ್ವರಂ ।
ನ ಯಾತಿ ನರಕಂ ಮರ್ತ್ಯಃ ಸ್ವರ್ಗಲೋಕೇ ಮಹೀಯತೇ ॥ ೮೫ ॥
ತಥಾಽನ್ಯತ್ಸಂಪ್ರವಕ್ಷ್ಯಾಮಿ ಯತ್ಸುರೈರಪಿ ದುರ್ಲಭಂ ।
ಪೂಜಿತಂ ಬ್ರಹ್ಮಣಾ ಪೂರ್ವಂ ಸ್ಥವಿರಾಖ್ಯಂ ವಿನಾಯಕಂ ॥ ೮೬ ॥
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಪೂಜಯೇದ್ಯೋ ವಿನಾಯಕಂ ।
ಗಂಧೈರ್ಧೂಪೈಶ್ಚ ನೈವೇದ್ಯೈರ್ಭಕ್ಷ್ಯೈರ್ಭೋಜ್ಯೈಃ ಫಲಂ ಶೃಣು ।
ಸಮೀಹಿತಾ ಭವೇತ್ಸಿದ್ಧಿರ್ಮೃತಃ ಶಿವಪುರಂ ವ್ರಜೇತ್ ॥ ೮೭ ॥
ನವನದ್ಯಾಃ ಸಮೀಪೇ ತು ಪಾರ್ವತೀಂ ಪೂಜಯೇದ್ಬುಧಃ ।
ಗಂಧಪುಷ್ಪೈಶ್ಚ ಧೂಪೈಶ್ಚ ಸೌಭಾಗ್ಯಮತುಲಂ ಲಭೇತ್ ॥ ೮೮ ॥
ಕಾಮೋದಕೇ ನರಃ ಸ್ನಾತ್ವಾ ದೃಷ್ಟ್ವಾ ಕಾಮಂ ರತಿಪ್ರಿಯಂ ।
ಸ್ವರ್ಗೇ ಚ ದೇವಗಂಧರ್ವಸ್ಪೃಹಣೀಯವಪುರ್ಭವೇತ್ ॥ ೮೯ ॥

---

ದೇವತೆಗಳಿಗೂ ದುರ್ಲಭವೆನಿಸಿದ ಗಣನಾಯಕನ ಪದವಿಯನ್ನು ಪಡೆಯುವನು.

೮೫. ಲಂಪೇಶ್ವರತೀರ್ಥದಲ್ಲಿ ಸ್ನಾನವನ್ನು ಮುಗಿಸಿ ಆ ಹೆಸರಿನ ಮಹೇಶ್ವರನನ್ನು ಪೂಜಿಸಲು ಮನುಷ್ಯನು ಪುನಃ ಭೂಲೋಕಕ್ಕೆ ಬರುವುದಿಲ್ಲ. ಸ್ವರ್ಗಲೋಕದಲ್ಲಿಯೇ ಪೂಜ್ಯನಾಗಿರುವನು.

೮೬. ಬಳಿಕ ದೇವತೆಗಳಿಗೂ ಸುಲಭಲಭ್ಯವಲ್ಲದ ಸ್ಥವಿರವಿನಾಯಕನೆಂಬ ದೇವತೆಯನ್ನು ಕುರಿತು ಹೇಳುವೆನು. ಈ ವಿನಾಯಕನನ್ನು ಬ್ರಹ್ಮದೇವನೇ ಹಿಂದೆ ಪೂಜಿಸಿರುವನು.

೮೭. ಆ ಮೂರ್ತಿಯ ಬಳಿಯಲ್ಲಿರುವ ತೀರ್ಥದಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ಗಂಧ, ಧೂಪ, ಭಕ್ಷ್ಯಭೋಜ್ಯಗಳಿಂದೊಡಗೂಡಿದ ನೈವೇದ್ಯಗಳಿಂದ ವಿನಾಯಕನನ್ನು ಪೂಜಿಸುವವನಿಗೆ ಲಭಿಸುವ ಫಲವನ್ನು ಕೇಳು. ಅವನಿಗೆ ಸಕಲಸಿದ್ಧಿಗಳೂ ಪ್ರಾಪ್ತಗಳಾಗುವುವಲ್ಲದೆ ಮೃತನಾದಾಗ ಶಿವಪುರವನ್ನು ಹೋಗಿ ಸೇರುವನು.

೮೮. ನವನದಿಯ ಸಮೀಪದಲ್ಲಿರುವ ಪಾರ್ವತೀದೇವಿಯನ್ನು ಗಂಧ, ಪುಷ್ಪ, ಧೂಪಗಳಿಂದ ಪೂಜಿಸಿದ ಪ್ರಾಜ್ಞನು ಅಪರಿಮಿತೈಶ್ವರ್ಯಕ್ಕೆ ಒಡೆಯನಾಗುವನು.

೮೯. ಕಾಮೋದಕ ತೀರ್ಥದಲ್ಲಿ ಮಿಂದು ಅಲ್ಲಿರುವ ರತಿಪತಿಯಾದ ಕಾಮದೇವನನ್ನು ನೋಡಲು ಸ್ವರ್ಗದಲ್ಲಿರುವ ದೇವಗಂಧರ್ವರೇ ಮೊದಲಾದವರಿಗೂ ಅಪೇಕ್ಷಿತವೆನಿಸುವ ಸುಂದರದೇಹವುಳ್ಳವನಾಗುವನು.

**ಪ್ರಯಾಗೇ ತು ನರಃ ಸ್ನಾತ್ವಾ ಪ್ರಯಾಗೇಶಂ ತು ಪಶ್ಯತಿ ।**
**ಸರ್ವಲೋಕಾನತಿಕ್ರಮ್ಯ ಶಿವಲೋಕೇ ಮಹೀಯತೇ ॥ ೯೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಸೌಭಾಗ್ಯೇಶ್ವರಾದಿ ನಾನಾತೀರ್ಥಮಾಹಾತ್ಮ್ಯವರ್ಣನಂ" ನಾಮೈಕತ್ರಿಂಶೋಽಧ್ಯಾಯಃ**

---

೯೦. ಪ್ರಯಾಗತೀರ್ಥದಲ್ಲಿ ಸ್ನಾನಮಾಡಿ ಪ್ರಯಾಗೇಶ್ವರನನ್ನು ನೋಡಿದ ಮಾನವನು ಸಮಸ್ತ ಲೋಕಗಳನ್ನೂ ದಾಟಿಹೋಗಿ ಶಿವಲೋಕದಲ್ಲಿ ಉತ್ತಮ ಸ್ಥಾನವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಸೌಭಾಗ್ಯೇಶ್ವರಾದಿ ನಾನಾತೀರ್ಥಮಾಹಾತ್ಮ್ಯವರ್ಣನ" ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾತ್ರಿಂಶೋಽಧ್ಯಾಯಃ

## ನರಾದಿತ್ಯಮಾಹಾತ್ಮ್ಯೇಽರ್ಜುನಸ್ತುತಿವರ್ಣನಂ

**ಸನತ್ಕುಮಾರ ಉವಾಚ :—**

**ಅಥಾಽನ್ಯತ್ಸಂಪ್ರವಕ್ಷ್ಯಾಮಿ ನರಾದಿತ್ಯಂ ದಿವಾಕರಂ ।**
**ಯಸ್ಯ ದರ್ಶನಮಾತ್ರೇಣ ಸರ್ವರೋಗೈರ್ವಿಮುಚ್ಯತೇ ॥ ೧ ॥**
**ಸ್ಥಾಪನಾಂ ತೇ ಪ್ರವಕ್ಷ್ಯಾಮಿ ನರಾದಿತ್ಯಸ್ಯ ಯಾದೃಶೀ ।**
**ಯುದ್ಧೇ ನಿವಾರಿತೇ ತಸ್ಮಿನ್ ರಕ್ತಸ್ವೇದಜಯೋಃ ಪುರಾ ॥ ೨ ॥**
**ನರನಾರಾಯಣೌ ದೇವಾವವತೀರ್ಣೌ ಧರಾತಲೇ ।**
**ಕುಂತ್ಯಾಂ ದೇವ್ಯಾಂ ಚ ದೇವಕ್ಯಾಂ ಮಧುರಾಯಾಮಜಾಯತಾಂ ॥ ೩ ॥**
**ಏವಂ ತೌ ವರ್ತಿತೌ ಲೋಕೇ ಕಾಂತೌ ವೃದ್ಧಿಂ ಪರಾಂಗತೌ ।**
**ಅನ್ಯಸ್ಮಾತ್ಕಾರಣಾತ್ಕೃಷ್ಣೋಽನ್ಯಸ್ಮಾಜ್ಜಾತೋ ಧನಂಜಯಃ ॥ ೪ ॥**
**ಕಂಸಾದೀನ್ದಾನವಾನ್ ಸರ್ವಾನ್ನಿಜಘಾನ ರಣೇ ಹಿ ಸಃ ।**
**ಸ್ವರ್ಗಂ ಗತಸ್ತತಃ ಪಾರ್ಥೋ ವಾಸವಾದಸ್ತ್ರಸಿದ್ಧಯೇ ॥ ೫ ॥**

---

## ಕನ್ನಡದ ಅನುವಾದ

### ನರಾದಿತ್ಯಮಾಹಾತ್ಮ್ಯ—ಅರ್ಜುನಸ್ತುತಿವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಈಗ ನರಾದಿತ್ಯನೆಂಬ ಸೂರ್ಯದೇವನನ್ನು ಕುರಿತ ಚರಿತ್ರೆಯನ್ನು ಹೇಳುತ್ತೇನೆ. ಆತನನ್ನು ನೋಡುವ ಮಾತ್ರದಿಂದಲೇ ಸಕಲ ರೋಗಗಳೂ ನಾಶವಾಗುವುವು.

೨–೩. ಈ ನರಾದಿತ್ಯನು ಹೇಗೆ ಪ್ರತಿಷ್ಠಿತನಾದನೆಂಬುವನ್ನು ವಿವರಿಸುವೆನು. ಹಿಂದೆ (ಮೂರನೆಯ ಅಧ್ಯಾಯದಲ್ಲಿ) ಹೇಳಿದ ವಿಷ್ಣುಬ್ರಹ್ಮರ ರಕ್ತಸ್ವೇದಗಳಿಂದ ಹುಟ್ಟಿದ ನರರ ಯುದ್ಧವು ಕೊನೆಗಾಣಲು ನರನಾರಾಯಣರು ಭೂಲೋಕದಲ್ಲಿ ಅವತಾರಗಳನ್ನೆತ್ತಿದರು. ಕುಂತೀದೇವಿಯ ಗರ್ಭದಲ್ಲಿ ನರನೂ ಮಧುರಾನಗರದಲ್ಲಿದ್ದ ದೇವಕಿಯ ಉದರದಲ್ಲಿ ನಾರಾಯಣನೂ ಜನಿಸಿದರು.

೪. ಇಂತು ಅವರಿಬ್ಬರೂ ದಿವ್ಯಸುಂದರದೇಹಗಳಿಂದೊಪ್ಪುತ್ತ ಲೋಕದಲ್ಲಿ ದಿನದಿನಕ್ಕೂ ಪ್ರವರ್ಧಮಾನರಾಗುತ್ತಿದ್ದರು. ಕೃಷ್ಣನ ಅವತಾರಕ್ಕೆ ಕಾರಣವೇ ಬೇರೆ. ನರರ ಅವತಾರಕ್ಕೆ ಕಾರಣವು ಬೇರೆ.

೫. ಬಾಲ್ಯದಲ್ಲಿಯೇ ಕೃಷ್ಣನು ಕಂಸನೇ ಮೊದಲಾದ ಅನೇಕ ರಾಕ್ಷಸರನ್ನು ಯುದ್ಧದಲ್ಲಿ ನಿಗ್ರಹಿಸಿದನು. ಅರ್ಜುನನಾದರೊ ಮಹೇಂದ್ರನಿಂದ ಅಸ್ತ್ರಗಳನ್ನು ಪಡೆಯಲು ಸ್ವರ್ಗಲೋಕಕ್ಕೆ ಹೋದನು.

ಕೃತಾಽಸ್ತ್ರೇಣ ತು ವೀರೇಣ ದೇವರಾಜಸ್ಯ ದಕ್ಷಿಣಾ ।
ಸಂಸ್ತುತಾ ದೇವರಾಜಸ್ತು ಯಯಾಚೇ ತಾಂ ಹಿ ದಕ್ಷಿಣಾಂ ॥ ೬ ॥
ನಿವಾತಕವಚಾ ಹ್ಯುಗ್ರಾ ಹಿರಣ್ಯಪುರವಾಸಿನಃ ।
ವಧ್ಯಂತಾಮರ್ಜುನ ಕ್ಷಿಪ್ರಮೇಷಾ ಮೇ ಗುರುದಕ್ಷಿಣಾ ॥ ೭ ॥
ಅರ್ಜುನೇನ ಪ್ರತಿಜ್ಞಾತೋ ವಧಸ್ತೇಷಾಂ ದುರಾತ್ಮನಾಂ ।
ಐಂದ್ರಂ ಸ ರಥಮಾಸ್ಥಾಯ ಗೃಹೀತ್ವಾ ಸಶರಂ ಧನುಃ ॥ ೮ ॥
ನಿಹತ್ಯ ತಾಂಸ್ತತಃ ಪಾರ್ಥಃ ಕೃತ್ವಾ ಕರ್ಮ ಸುದುಷ್ಕರಂ ।
ಪ್ರೀತಿಮುತ್ಪಾದಯಾಮಾಸ ಸರ್ವೇಷಾಂ ಚ ದಿವೌಕಸಾಂ ॥ ೯ ॥
ಕೃತಕಾರ್ಯಂ ತದಾ ಶಕ್ರಸ್ತ್ವರ್ಜುನಂ ವಾಕ್ಯಮಬ್ರವೀತ್ ।
ಯತ್ತೇಽಭಿರುಚಿತಂ ವೀರ ಮೃತ್ಯುಲೋಕೇ ಸುದುರ್ಲಭಂ ॥ ೧೦ ॥
ಮನಸಾ ಕಾಂಕ್ಷಿತಂ ಪಾರ್ಥ ವರಂ ತ್ವಂ ವರಯೋತ್ತಮಂ ॥ ೧೧ ॥
ಸ ವವ್ರೇ ಪ್ರತಿಮೇ ದ್ವೇ ತು ಯೇಽರ್ಚಿತೇ ಬ್ರಹ್ಮಣಾ ಸ್ವಯಂ ।
ಬ್ರಹ್ಮಣಾ ಪ್ರೀತಿಯುಕ್ತೇನ ದಕ್ಷಾಯ ಪ್ರತಿಪಾದಿತೇ ॥ ೧೨ ॥

---

೬. ಅಸ್ತ್ರಾಭ್ಯಾಸದಲ್ಲಿ ನಿಪುಣನಾದಮೇಲೆ ವೀರನಾದ ಅರ್ಜುನನು ಮಹೇಂದ್ರನಿಗೆ ಗುರುದಕ್ಷಿಣೆಯನ್ನು ಕೊಡಲೆಳಸಿದನು. ದೇವರಾಜನು ಮುಂದೆ ಹೇಳುವಂತೆ ದಕ್ಷಿಣೆಯನ್ನು ಕೇಳಿದನು.

೭. "ಎಲೈ ಅರ್ಜುನನೆ! ನಿವಾತಕವಚರೆಂಬ ಉಗ್ರರಾದ ರಾಕ್ಷಸರು ಹಿರಣ್ಯಪುರದಲ್ಲಿ ವಾಸಮಾಡುತ್ತಿರುವರು. ಅವರನ್ನು ನಿಗ್ರಹಿಸು. ಇದೇ ನನಗೆ ನೀನು ಕೊಡಬೇಕಾದ ಗುರುದಕ್ಷಿಣೆಯಾಗಲಿ."

೮–೯. ಅರ್ಜುನನೂ ಆ ದುರಾತ್ಮರನ್ನು ನಿಗ್ರಹಿಸುವೆನೆಂದು ಪ್ರತಿಜ್ಞೆಯನ್ನು ಮಾಡಿದನು. ಅವನು ಮಹೇಂದ್ರನ ರಥವನ್ನೇ ಏರಿ ಧನುರ್ಬಾಣಗಳನ್ನು ತೆಗೆದುಕೊಂಡವನಾಗಿ ಅವರೆಲ್ಲರನ್ನೂ ಸಂಹಾರಮಾಡಿ ಅತ್ಯಂತ ದುಸ್ಸಾಧ್ಯವಾದ ಕಾರ್ಯವನ್ನು ನೆರವೇರಿಸಿದನು. ಸಕಲ ದೇವತೆಗಳಿಗೂ ಸಂತೋಷವನ್ನುಂಟು ಮಾಡಿದನು.

೧೦–೧೧. ಇಂತು ಕೃತಕಾರ್ಯನಾಗಿ ಹಿಂದಿರುಗಿದ ಅರ್ಜುನನ್ನು ಕಂಡು ಮಹೇಂದ್ರನು ಮತ್ತೆ ಹೇಳಿದನು. ವೀರಶಿಖಾಮಣಿಯೆ! ನಿನಗೆ ಇಷ್ಟವಾದುದೂ, ಮರ್ತ್ಯಲೋಕದಲ್ಲಿ ಅತ್ಯಂತ ದುರ್ಲಭವಾದುದೂ ಆದ ಯಾವ ವರವನ್ನಾದರೂ ಮನಃಪೂರ್ವಕವಾಗಿ ಕೇಳು.

೧೨. ಆಗ ಅರ್ಜುನನು ಬ್ರಹ್ಮನು ಹಿಂದೆ ತಾನೇ ಪೂಜಿಸುತ್ತಿದ್ದ ಎರಡು ಪ್ರತಿಮೆಗಳನ್ನು ಇಂದ್ರನಲ್ಲಿ ಯಾಚಿಸಿದನು. ಇವುಗಳನ್ನು ಬ್ರಹ್ಮದೇವನು ಅಭಿಮಾನದಿಂದ ದಕ್ಷಪ್ರಜಾಪತಿಗೆ ಕೊಟ್ಟನು.

ದಕ್ಷೇಣಾಽಪಿ ಯುಗಂ ಸಾಗ್ರಂ ಪೂಜಿತೇ ತಿಮಿರಾಽಪಹೇ ।
ಸುರಾಣಾಮಸುರಾಣಾಂ ಚ ವಿಗ್ರಹೇ ಸಮುಪಸ್ಥಿತೇ ॥ ೧೩ ॥
ದಾನವೈರ್ನಿರ್ಜಿತಃ ಶಕ್ರೋ ಹೃತರಾಜ್ಯೋ ವನಂ ಗತಃ ।
ತಪಶ್ಚಚಾರ ದುರ್ಧರ್ಷಮೇಕಪಾದಃ ಶತಕ್ರತುಃ ॥ ೧೪ ॥
ದಿವ್ಯವರ್ಷಸಹಸ್ರಂ ತು ಧಿಷಣಸ್ತಂ ದದರ್ಶ ಹ ।
ದೃಷ್ಟ್ವಾ ತು ದೇವರಾಜಂ ತಂ ಬೃಹಸ್ಪತಿರುವಾಚ ಹ ॥ ೧೫ ॥
ಹಿತ್ವಾ ತ್ರಿದಿವಮಾಯಾತಃ ಕಥಂ ಶಕ್ರ ತ್ವಿದಂ ವನಂ ।
ಏಕಾಕಿನಾ ವನಸ್ಥೇನ ನ ಸಾಧ್ಯಾಃ ಶತ್ರವಸ್ತ್ವಯಾ ॥ ೧೬ ॥
ಜ್ಞಾತ್ವೈವಂ ದೇವರಾಜ ತ್ವಂ ಶೀಘ್ರಂ ದಕ್ಷಾಶ್ರಮಂ ವ್ರಜ ।
ಪೂಜಾರ್ಥೇ ಬ್ರಹ್ಮಣಾ ದತ್ತೇ ಪಾರಿಜಾತಸಮುದ್ಭವೇ ॥ ೧೭ ॥
ಚಕಾರ ವಿಶ್ವಕರ್ಮಾ ಯೇ ತೇ ಯಾಚಸ್ವ ಪ್ರಜಾಪತಿಂ ।
ಶತ್ರೂಣಾಂ ಚ ಕ್ಷಯೋ ಭಾವೀ ಪ್ರಸಾದಾದರ್ಚಯೋಸ್ತಯೋಃ ॥೧೮॥

---

೧೩. ತಮ್ಮ ಪ್ರಭೆಯಿಂದ ಗಾಢಾಂಧಕಾರವನ್ನು ದೂರಮಾಡುತ್ತಿರುವ ಆ ಮೂರ್ತಿಗಳನ್ನು ದಕ್ಷನು ಒಂದು ಯುಗ ಸಂಪೂರ್ಣವಾಗಿ ಪೂಜಿಸಿದನು. ಆಗ ದೇವತೆಗಳಿಗೂ, ದಾನವರಿಗೂ ಮಹಾಯುದ್ಧವು ಸಂಭವಿಸಿತು.

೧೪. ದಾನವರಿಂದ ಸೋಲಿಸಲ್ಪಟ್ಟ ಮಹೇಂದ್ರನು ತನ್ನ ರಾಜ್ಯವನ್ನು ಕಳೆದುಕೊಂಡು ಕಾಡಿಗೆ ಹೊರಟು ಒಂದು ಕಾಲಿನಮೇಲೆ ನಿಂತು ಅತಿ ದುಸ್ಸಹವಾದ ತಪಸ್ಸನ್ನು ಮಾಡಿದನು.

೧೫. ಒಂದು ಸಾವಿರ ದೇವಮಾನದ ವರ್ಷಗಳವರೆಗೂ ತಪಸ್ಸನ್ನು ಮಾಡಿದ ಮೇಲೆ ಬೃಹಸ್ಪತ್ಯಾಚಾರ್ಯರು ಪ್ರಸನ್ನರಾಗಿ ದೇವರಾಜನ ತಪಸ್ಸನ್ನು ಕಂಡು ಇಂತೆಂದರು.

೧೬. "ಅಯ್ಯಾ ಇಂದ್ರನೆ! ಸ್ವರ್ಗಲೋಕವನ್ನು ಬಿಟ್ಟು ಈ ಅರಣ್ಯಕ್ಕೆ ನೀನು ಬರಲು ಕಾರಣವಾದರೂ ಏನು? ನೀನು ಏಕಾಂಗಿಯಾಗಿ ಕಾಡಿನಲ್ಲಿದ್ದರೆ ಶತ್ರುಗಳನ್ನು ಜಯಿಸಲು ಸಾಧ್ಯವಾಗುವುದಿಲ್ಲ.

೧೭. ದೇವರಾಜ! ಇದನ್ನು ಆಲೋಚಿಸಿ ನೀನು ಕ್ಷಿಪ್ರವಾಗಿ ದಕ್ಷನ ಆಶ್ರಮವನ್ನು ಸೇರು. ಪಾರಿಜಾತವೃಕ್ಷದಿಂದ ಮಾಡಿದ ಎರಡು ಪ್ರತಿಮೆಗಳನ್ನು ಬ್ರಹ್ಮದೇವನು ಆತನಿಗೆ ಪೂಜೆಗಾಗಿ ಕೊಟ್ಟಿರುವನು.

೧೮. ವಿಶ್ವಕರ್ಮನಿಂದ ನಿರ್ಮಿತಗಳಾದ ಅವುಗಳನ್ನು ದಕ್ಷಪ್ರಜಾಪತಿಯಲ್ಲಿ ಯಾಚಿಸಿ ತೆಗೆದುಕೊ. ಆ ಎರಡು ಮೂರ್ತಿಗಳ ಅನುಗ್ರಹದಿಂದ ಮುಂದೆ ನಿನಗೆ ಶತ್ರುಗಳ ನಾಶವಾಗುವುದು."

ಗುರೋಸ್ತು ತೇನ ವಾಕ್ಯೇನ ಹೃಷ್ಟೋ ದೇವಃ ಶತಕ್ರತುಃ
ಜಗಾಮ ಸತ್ವರಸ್ತತ್ರ ಯತ್ರ ದಕ್ಷಃ ಪ್ರಜಾಪತಿಃ ।
ವಿನಯಾವನತೋ ಭೂತ್ವಾ ಯಯಾಚೇ ಪ್ರತಿಮೇ ಶುಭೇ
ದದೌ ತಸ್ಮೈ ತತೋ ದಕ್ಷಃ ಶಕ್ರಾಯ ಪ್ರತಿಮೇ ಶುಭೇ ॥ ೧೯ ॥
ಪೂಜಿತೇ ಪ್ರತಿಮೇ ವ್ಯಾಸ ಶಕ್ರೇಣ ಶರದಾಂ ಶತಂ ।
ತಯೋಸ್ತು ತೇಜಸಾ ಸರ್ವೇ ವಿನಾಶಂ ದಾನವಾ ಗತಾಃ ॥ ೨೦ ॥
ಪ್ರತಿಮೇ ಚೋಚತುಃ ಶಕ್ರಂ ವರಯಸ್ವ ವರೋತ್ತಮಂ ।
ಭಕ್ತ್ಯಾಽನಯಾ ಪರಂ ತುಷ್ಟಾವಾವಾಂ ಜಾನೀಹಿ ವಾಸವ ॥ ೨೧ ॥
ವರಂ ವವ್ರೇ ತದಾ ಶಕ್ರಃ ಪ್ರಸನ್ನಾತ್ಮಾ ದ್ವಿಜೋತ್ತಮ ।
ಅಸ್ಮಾಕಂ ಪ್ರತಿಪಕ್ಷಾ ಯೇ ದಾನವಾಃ ಪಾಪಚೇತಸಃ ॥ ೨೨ ॥
ಸರ್ವೇ ತೇ ನಾಶಮೃಚ್ಛಂತು ವರ ಏಷ ಮತೋ ಮಮ ।
ಯುವಾಂ ಪೂಜಿತುಮಿಚ್ಛಾಮಿ ಯಾವದಿಂದ್ರೋ ಭವಾಮ್ಯಹಂ ॥ ೨೩ ॥
ತಥೇತಿ ಚೋಕ್ತ್ವಾ ಪ್ರತಿಮೇ ತೇ ನಾಕಂ ಪ್ರತಿ ಜಗ್ಮತುಃ ।
ತತ್ತು ಯಾಚೇ ಹ್ಯವಶ್ಯಾರ್ಥೇ ವರಾರ್ಥೇ ಪ್ರತಿಮಾದ್ವಯಂ ॥ ೨೪ ॥

---

೧೯. ಗುರುವು ಹೇಳಿದ ಈ ವಾಕ್ಯದಿಂದ ಅತ್ಯಂತ ಸಂತುಷ್ಟನಾದ ಮಹೇಂದ್ರನು ತ್ವರೆಯಿಂದ ದಕ್ಷಪ್ರಜಾಪತಿಯಿದ್ದೆಡೆಗೆ ಹೋದನು. ಮತ್ತು ಅತ್ಯಂತವಿನಯವುಳ್ಳವನಾಗಿ ಆ ಎರಡು ಮೂರ್ತಿಗಳನ್ನು ಯಾಚಿಸಲು ದಕ್ಷನೂ ಇಂದ್ರನಿಗೆ ಮಂಗಳಪ್ರದಗಳಾದ ಆ ವಿಗ್ರಹಗಳನ್ನಿತ್ತನು.

೨೦. ವ್ಯಾಸನೆ! ಮಹೇಂದ್ರನು ನೂರುವರ್ಷಕಾಲ ಆ ಪ್ರತಿಮೆಗಳನ್ನು ಪೂಜಿಸಿದನು. ಅವುಗಳ ತೇಜಸ್ಸಿನಿಂದ ಸಕಲ ದಾನವರೂ ನಾಶವನ್ನು ಹೊಂದಿದವರಾದರು.

೨೧. ಆ ಪ್ರತಿಮೆಗಳು ಇಂದ್ರನಿಗೆ ಇಂತೆಂದು ಹೇಳಿದುವು. "ವಾಸವನೆ! ನಿನಗೆ ಬೇಕಾದ ಉತ್ತಮವರವನ್ನು ಕೇಳಿಕೊ. ನಿನ್ನ ಈ ಭಕ್ತಿಯಿಂದ ನಾವು ಅತ್ಯಂತ ಸಂತುಷ್ಟರಾಗಿರುವೆವೆಂದು ತಿಳಿ."

೨೨–೨೩. ಬ್ರಾಹ್ಮಣೋತ್ತಮನೆ! ಅವುಗಳ ಮಾತುಗಳಿಂದ ಸಂತುಷ್ಟ ಮಾನಸನಾದ ಇಂದ್ರನು ವರವನ್ನು ಬೇಡಿದನು. "ನಮಗೆ ಶತ್ರುಪಕ್ಷದಲ್ಲಿರುವ ಪಾಪಬುದ್ಧಿಗಳಾದ ದಾನವರೆಲ್ಲರೂ ನಾಶವನ್ನು ಹೊಂದಲಿ. ಇದೇ ನನಗೆ ಅತಿ ಪ್ರಿಯವಾದ ವರವು. ಅಲ್ಲದೆ, ನಾನು ಇಂದ್ರಪದವಿಯಲ್ಲಿರುವವರೆಗೂ ನಿಮ್ಮಿಬ್ಬರನ್ನೂ ಪೂಜಿಸುತ್ತಿರಬೇಕೆಂಬ ಅಭಿಲಾಷೆಯಿರುವುದು."

೨೪. ಹಾಗೆಯೇ ಆಗಲೆಂದು ಅಂಗೀಕರಿಸಿ ಆ ಮೂರ್ತಿಗಳೆರಡೂ ಸ್ವರ್ಗ ಲೋಕಕ್ಕೆ ಹೊರಟುಹೋದುವು. ಅರ್ಜುನನು ಅವಶ್ಯಕವಾದ ಕೆಲಸದ ನಿಮಿತ್ತವಾಗಿ ಆ ಎರಡು ಪ್ರತಿಮೆಗಳನ್ನೇ ವರವನ್ನಾಗಿ ಕೇಳಿದನು.

ಇಂದ್ರ ಉವಾಚ :—

ಸಾಧು ಪಾರ್ಥ ಪುನಃ ಸಾಧು ಯತ್ರೇತ್ಥಂ ಪ್ರತಿತಿಷ್ಠತಃ ।
ಇಮೇ ಚ ಪ್ರತಿಮೇ ಪಾರ್ಥ ಶಂಕರೇಣ ಮಹಾತ್ಮನಾ ।
ಸುರಕ್ತೈಃ ಶತಪತ್ರೈಶ್ಚ ಪೂಜಿತೇ ಬ್ರಹ್ಮಣೋ ದಿನಂ ॥ ೨೫ ॥
ತ್ರೈಲೋಕ್ಯಪಾಲನಾರ್ಥಾಯ ಪೂಜಿತೇ ವಿಷ್ಣುನಾ ಪುರಾ ।
ನೀಲೋತ್ಪಲೈಃ ಸುಗಂಧೈಶ್ಚ ಸಹಸ್ರಪರಿವತ್ಸರಾನ್ ॥ ೨೬ ॥
ತತಃ ಪ್ರಜಾಪತಿಃ ಸೃಷ್ಟಿಂ ಕರ್ತುಕಾಮಃ ಸಮಾಹಿತಃ ।
ಪೂಜಯಾಮಾಸ ಪ್ರತಿಮೇ ಪದ್ಮೈ ರಕ್ತೋತ್ಪಲೈಃ ಶುಭೈಃ ॥ ೨೭ ॥
ತ್ವಮೇವ ಹಿ ಕಥಂ ಪಾರ್ಥ ಮೃತ್ಯುಲೋಕೇ ನಯಿಷ್ಯಸಿ ।
ಏತಾಭ್ಯಾಂ ರಹಿತಃ ಸ್ವರ್ಗೋ ಮೃತ್ಯುತುಲ್ಯೋ ಭವಿಷ್ಯತಿ ॥ ೨೮ ॥
ಅದಾತುಕಾಮಂ ದೇವೇಂದ್ರಂ ಪ್ರಣಿಪತ್ಯ ತಮರ್ಜುನಃ ।
ಉವಾಚ ನಾಽಹಮರ್ಥ್ಯಸ್ಮಿನ್ವರೇಣಾಽನೇನ ವೈ ಪ್ರಭೋ ॥ ೨೯ ॥
ತತಃ ಶಕ್ರಃ ಪುನಃ ಪಾರ್ಥಮುವಾಚ ಮುನಿಪುಂಗವ ।
ಗೃಹೀತ್ವಾ ತ್ವಮಿಮೇ ವೀರ ಕುಶಸ್ಥಲ್ಯಾಂ ನಿವೇಶಯ ॥ ೩೦ ॥

---

೨೫. ಇಂದ್ರನು ಹೇಳುತ್ತಾನೆ:—ಪಾರ್ಥನೆ! ಸಾಧು, ಸಾಧು. ಇಲ್ಲಿ ಬಂದು ನೆಲಸಿರುವ ಈ ಎರಡು ಪ್ರತಿಮೆಗಳನ್ನು ಮಹಾತ್ಮನಾದ ಶಂಕರನೂ ಬ್ರಹ್ಮದೇವನ ಆಯುಃಪ್ರಮಾಣದಲ್ಲಿ ಒಂದು ದಿನದ ಕಾಲ ಕೆಂಪು ಬಣ್ಣದ ಕಮಲಗಳಿಂದ ಪೂಜಿಸಿರುವನು.

೨೬. ಮೂರು ಲೋಕಗಳನ್ನು ಪಾಲಿಸಲು ಶಕ್ತಿಯನ್ನು ಪಡೆಯುವುದಕ್ಕಾಗಿ ಮಹಾವಿಷ್ಣುವು ಹಿಂದೆ ಒಂದು ಸಾವಿರ ವರ್ಷಗಳವರೆಗೂ ಸುಗಂಧಯುಕ್ತಗಳಾದ ನೀಲೋತ್ಪಲಗಳಿಂದ ಪೂಜಿಸಿದನು.

೨೭. ಲೋಕಗಳನ್ನು ಸೃಷ್ಟಿಮಾಡಲೆಳಸಿದ ಬ್ರಹ್ಮದೇವನು ಏಕಾಗ್ರಮನಸ್ಸಿನಿಂದ ಶುಭ್ರಗಳಾದ ರಕ್ತೋತ್ಪಲಗಳಿಂದಲೂ ಕಮಲಗಳಿಂದಲೂ ಈ ಪ್ರತಿಮೆಗಳನ್ನು ಪೂಜಿಸಿದನು.

೨೮. ಪಾರ್ಥನೆ! ಈ ವಿಗ್ರಹಗಳನ್ನು ನೀನು ಮನುಷ್ಯಲೋಕಕ್ಕೆ ಹೇಗೆ ತೆಗೆದುಕೊಂಡು ಹೋಗುವೆ? ಇವುಗಳಿಲ್ಲದೆ ಸ್ವರ್ಗಲೋಕವು ಮೃತ್ಯುಸಹಿತವಾದಂತೆಯೇ ಸರಿ.

೨೯. ಮೂರ್ತಿಗಳನ್ನು ಕೊಡಲಾರದೆ ಹಿಂದೆಗೆಯುತ್ತಿದ್ದ ದೇವೇಂದ್ರನನ್ನು ಕಂಡು ನಮಸ್ಕರಿಸಿ, "ನಾನು ಈ ವರದಾನಮಾತ್ರಕ್ಕಾಗಿ ಈ ವಿಷಯದಲ್ಲಿ ಅಭಿಲಾಷೆಯುಳ್ಳವನಲ್ಲ" ಎಂದು ಹೇಳಿದನು.

೩೦. ಮುನಿಶ್ರೇಷ್ಠನೆ! ಆಗ ಮಹೇಂದ್ರನು ಪುನಃ ಪಾರ್ಥನಿಗೆ

ಶಿಪ್ರಾಯಾ ಉತ್ತರೇ ತೀರೇ ಕೇಶವಾರ್ಕಂ ತು ಕೇಶವಃ ।
ಪ್ರತಿಷ್ಠಾಪಯಿತಿ ವೈ ಯತ್ರ ಸರ್ವಪಾಪಪ್ರಣಾಶನಃ ॥ ೩೧ ॥
ಸಂಸ್ಥಾಪಯಸ್ವ ವೈ ತತ್ರ ಸರ್ವಪಾಪಪ್ರಣಾಶನೇ ।
ಭವಿಷ್ಯತಿ ತದಾ ಯಾತ್ರಾ ಆಷಾಢೀ ಚಾಽಥ ಕೌಮುದೀ ॥ ೩೨ ॥
ಆಗಮಿಷ್ಯಾಮ್ಯಹಂ ತತ್ರ ಸಹಿತೋಽಪ್ಸರಸಾಂ ಗಣೈಃ ।
ಮರುತಶ್ಚಾಗಮಿಷ್ಯಂತಿ ಮೇಘಾಶ್ಚೈವ ಸವಿದ್ಯುತಃ ॥ ೩೩ ॥
ಮೇಘಖಂಡೇ ಸಮುದ್ಭೂತೇ ಮಯಿ ತತ್ರ ಪ್ರವರ್ಷತಿ ।
ಪ್ರವದಿಷ್ಯಂತಿ ವೈ ಲೋಕಾಃ ಪ್ರಾಪ್ತೋ ದೇವಃ ಪುರಂದರಃ ॥ ೩೪ ॥
ಭಾಸ್ಕರಂ ಚ ನಮಸ್ಕೃತ್ಯ ಬ್ರಹ್ಮಾದ್ಯೈಃ ಪೂಜಿತಂ ವಿಭುಂ ।
ಪ್ರತಿಯಾಮಿ ತು ಬೀಭತ್ಸೋ ಪುನರೇವ ಯಥಾಗತಂ ॥ ೩೫ ॥
ಏವಂ ಮೂರ್ತಿದ್ವಯಂ ವ್ಯಾಸ ದತ್ವಾ ಪಾರ್ಥಾಯ ವಾಸವಃ ।
ಭೂಲೋಕಂ ಪ್ರೇಷಯಾಮಾಸ ಸುತೇನ ಸಹ ಪಾಂಡವಂ ॥ ೩೬ ॥

---

ಇಂತೆಂದನು. "ವೀರನೆ! ನೀನು ಈ ವಿಗ್ರಹಗಳನ್ನು ತೆಗೆದುಕೊಂಡು ಹೋಗಿ ಕುಶಸ್ಥಲಿಯಲ್ಲಿ ಪ್ರತಿಷ್ಠೆಮಾಡು."

೩೧. ಶಿಪ್ರಾನದಿಯ ಉತ್ತರದಡದಲ್ಲಿ ಶ್ರೀಕೃಷ್ಣನು ಸಕಲಪಾಪಪ್ರಣಾಶಕವಾದ ಒಂದು ವಿಗ್ರಹವನ್ನು ಕೇಶವಾರ್ಕನೆಂಬ ಹೆಸರಿನಿಂದ ಪ್ರತಿಷ್ಠಿಸುವನು.

೩೨. ನೀನೂ ಅಲ್ಲಿ ಒಂದು ಮೂರ್ತಿಯನ್ನು ಸ್ಥಾಪಿಸು. ಸಕಲಕಲ್ಮಷಗಳನ್ನೂ ನಾಶಮಾಡುವ ಎರಡು ವಿಗ್ರಹಗಳೂ ಪ್ರತಿಷ್ಠಿಸಲ್ಪಡಲು ಆಷಾಢಮಾಸದ ಹುಣ್ಣಿಮೆಯ ದಿನದಲ್ಲಿ ಮಹಾಯಾತ್ರೆಯು ನಡೆಯುವುದು.

೩೩. ಆ ಮುಹೂರ್ತದಲ್ಲಿ ನಾನೂ ಅಪ್ಸರಸ್ತ್ರೀಯರೊಡನೆ ಅಲ್ಲಿಗೆ ಬರುವೆನು. ಮರುತ್ತುಗಳೂ ಮಿಂಚುಗಳನ್ನೊಳಕೊಂಡ ಮೇಘಗಳೂ ಸಹ ಅಲ್ಲಿ ಬಂದು ಸೇರುವುವು.

೩೪. ಮೇಘಜಾಲವು ಕವಿದು ನಾನು ಮಳೆಯನ್ನು ಸುರಿಸುತ್ತಿರಲು ಎಲ್ಲ ಜನರೂ "ಮಹೇಂದ್ರನು ಈಗ ಇಲ್ಲಿ ಸನ್ನಿಹಿತನಾಗಿರುವನು" ಎಂದು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುವರು.

೩೫. ಓ ಅರ್ಜುನ! ಬ್ರಹ್ಮಾದಿಗಳಿಗೂ ಪೂಜ್ಯದೈವವೂ, ಲೋಕೇಶ್ವರನೂ ಆದ ಸೂರ್ಯನಿಗೆ ನಮಸ್ಕಾರವನ್ನು ಮಾಡಿ ಪುನಃ ನಾನು ಬಂದಂತೆಯೇ ಹಿಂದಿರುಗುವೆನು."

೩೬. ವ್ಯಾಸಮುನಿಯೆ! ಇಂತು ನುಡಿದು ಆ ಮಹೇಂದ್ರನು ಅರ್ಜುನನಿಗೆ ಎರಡು ಮೂರ್ತಿಗಳನ್ನೂ ಕೊಟ್ಟು ತನ್ನ ಮಗನಾದ ಜಯಂತನನ್ನು ಜೊತೆಮಾಡಿ ಭೂಲೋಕಕ್ಕೆ ಕಳುಹಿಸಿಕೊಟ್ಟನು.

ನಾರದೋ ದ್ವಾರಕಾಯಾಂ ತು ಕೃಷ್ಣಸ್ಯಾಹ್ವಾನಕಾರಣಾತ್ ।
ದೇವರಾಜಸ್ಯ ತದ್ವಾಕ್ಯಂ ಸರಹಸ್ಯಂ ಚ ಕೇಶವಂ ॥ ೩೭ ॥
ಶ್ರಾವಯಾಮಾಸ ವಿಪ್ರೇಂದ್ರ ಏಹಿ ಕೃಷ್ಣ ಕುಶಸ್ಥಲೀಂ ।
ಅರ್ಚೇ ಹಿ ಪಾರಿಜಾತಸ್ಯ ವಿಶ್ವಕರ್ಮಸುಕಾರಿತೇ ॥ ೩೮ ॥
ಇಂದ್ರೇಣಾऽಥ ಪ್ರದತ್ತೇ ವೈ ತೇ ತುಭ್ಯಂ ಪಾಂಡವಾಯ ಚ ।
ಶ್ರುತ್ವಾ ಶೌರಿಸ್ತು ತದ್ವಾಕ್ಯಂ ಪ್ರತಸ್ಥೇऽವಂತಿನೀಂ ಪುರೀಂ ॥ ೩೯ ॥
ಅವಾತರಚ್ಚ ಆಕಾಶಾತ್ತಮಾಲಿಂಗ್ಯ ಚ ಪಾಂಡವಂ ।
ಪ್ರೀತಃ ಪ್ರೋವಾಚ ವಚನಂ ಪರಿಷ್ವಜ್ಯ ಚ ಫಾಲ್ಗುನಂ ॥ ೪೦ ॥
ಜನ್ಮ ಮೇ ಸಫಲಂ ಜಾತಂ ಪ್ರೀತಿರ್ಮೇ ಜನಿತಾऽರ್ಜುನ ।
ಯತೋ ಮೇ ಪ್ರೀತಿರತುಲಾ ಕ್ರಿಯತಾಂ ಕಾರ್ಯಮುತ್ತಮಂ ॥ ೪೧ ॥
ಇತ್ಯುಕ್ತ್ವಾ ತೌ ತದಾ ವ್ಯಾಸ ಸಮಾಯಾತೌ ಕುಶಸ್ಥಲೀಂ ।
ಪಾರ್ಥಂ ಪ್ರಾಹ ತದಾ ಕೃಷ್ಣಃ ಸುಸಂಪೂರ್ಣಮನೋರಥಃ ॥ ೪೨ ॥

---

೩೭. ನಾರದನೂ ಕೃಷ್ಣನನ್ನು ಕರೆಯಲು ದ್ವಾರಕಾನಗರಿಗೆ ಬಂದನು. ದೇವರಾಜನಾಡಿದ ಮಾತುಗಳನ್ನೆಲ್ಲ ಏಕಾಂತದಲ್ಲಿ ಕೇಶವನಿಗೆ ವಿಶದವಾಗಿ ಹೇಳಿದನು.

೩೮. ವಿಪ್ರಶ್ರೇಷ್ಠನೆ! ಆ ವಿಚಾರವನ್ನು ಅವನ ಕಿವಿಗೆಹಾಕಿ ಇಂತೆಂದನು. "ಕೃಷ್ಣ! ಈ ಕ್ಷಣವೇ ಕುಶಸ್ಥಲಿಗೆ ಹೊರಡು. ಪಾರಿಜಾತವೃಕ್ಷದಿಂದ ವಿಶ್ವಕರ್ಮನು ಎರಡು ಪ್ರತಿಮೆಗಳನ್ನು ಮಾಡಿರುವನಷ್ಟೆ.

೩೯. ಮಹೇಂದ್ರನು ಅವುಗಳನ್ನು ನಿನಗೂ ಅರ್ಜುನನಿಗೂ ಕೊಟ್ಟು ಕಳುಹಿಸಿರುವನು." ಈ ಮಾತನ್ನು ಕೇಳಿ ಶ್ರೀಕೃಷ್ಣನೂ ಅವಂತೀಕ್ಷೇತ್ರವನ್ನು ಬಂದು ಸೇರಿದನು.

೪೦. ಮತ್ತು ಆಕಾಶಮಾರ್ಗದಿಂದಲೇ ಬಂದು ಕ್ಷೇತ್ರದಲ್ಲಿಳಿದು ಅಭಿಮಾನದಿಂದ ಅರ್ಜುನನನ್ನು ಬಿಗಿದಪ್ಪಿಕೊಂಡು ಸಂತೋಷದಿಂದ ಹೇಳ ತೊಡಗಿದನು.

೪೧. "ಅರ್ಜುನನೆ! ಇಂದಿಗೆ ನನ್ನ ಜನ್ಮವು ಸಾರ್ಥಕವಾಯಿತು. ನನಗೆ ಅತ್ಯಂತ ಸಂತೋಷವಾಗಿರುವುದು. ನನಗೆ ಅಮಿತಾನಂದವನ್ನುಂಟುಮಾಡಿರುವ ಈ ಕ್ಷೇತ್ರದಲ್ಲಿ ಒಂದು ಉತ್ತಮಕಾರ್ಯವನ್ನು ಮಾಡೋಣ."

೪೨. ವ್ಯಾಸನೆ! ಇಂತೆಂದು ಮಾತನಾಡುತ್ತ ಅವರಿಬ್ಬರೂ ಜೊತೆ ಯಾಗಿಯೇ ಕುಶಸ್ಥಲಿಗೆ ಬಂದು ಸೇರಿದರು. ಆಗ ಆಪ್ತಕಾಮನೆನಿಸಿದ ಕೃಷ್ಣ ಮೂರ್ತಿಯು ಪಾರ್ಥನನ್ನು ಕುರಿತು ಇಂತೆಂದನು.

ಗತ್ವಾಽರ್ಜುನ ದಿಶಂ ಪ್ರಾಚೀಂ ಮೂರ್ತಿಮೇಕಾಂ ನಿವೇಶಯ ।
ಪೂರ್ವಾಹ್ಣೇ ಹಿ ಶುಭಂ ಲಗ್ನಂ ಭವಿಷ್ಯತಿ ಮನೋರಮಂ ॥ ೪೩ ॥
ಅಹಮಪ್ಯುತ್ತರಾಂ ಯಾಮಿ ಸ್ಥಾಪನಾರ್ಥಂ ನದೀಂ ಮುನೇ ।
ಮಮ ಶಂಖಸ್ಯ ನಾದೇನ ಪ್ರತಿಷ್ಠ ರವಿಂ ಪ್ರಭುಂ ॥ ೪೪ ॥
ಪೂರ್ವಾಂ ಗತ್ವಾ ತತಃ ಪಾರ್ಥಃ ಶುಭಂ ಸ್ಥಾನಂ ವ್ಯಲೋಕಯತ್ ।
ನ್ಯಾಸ ಸಂಸ್ಥಾಪಯಾಮಾಸ ದಿನನಾಥಂ ಚ ಸುಸ್ಥಿರಂ ॥ ೪೫ ॥
ಅರ್ಕಂ ದೇವಂ ಸ್ಥಾಪಯಾಮಿ ಯಾವದ್ಧ್ಯೌ ಚ ಪಾಂಡವಃ ।
ತಾವತ್ಸ ಚಾಽಬ್ರವೀದೇನಂ ಸ್ಥಾನಂ ಕಾರಯ ಶೋಭನಂ ॥ ೪೬ ॥
ಕಥಯಾಮಾಸ ಪಾರ್ಥಾಯ ತೇಜಸಾ ತೇನ ದುಃಸಹಂ ।
ಸವ್ಯಸಾಚೀ ತತೋ ಭೀತೋ ದೃಷ್ಟ್ವಾಽರ್ಚಾಂ ತಾಂ ಪ್ರಜಲ್ಪತೀಂ ॥ ೪೭ ॥
ತೇಜಸ್ತ್ವಸಹಮಾನೋ ವೈ ದೇವಂ ವಚನಮಬ್ರವೀತ್ ।
ಕ್ವ ದೇವ ತ್ವಾಂ ಸ್ಥಾಪಯಾಮಿ ಕಿಂ ಸ್ಥಾನಂ ತವ ರೋಚತೇ ॥ ೪೮ ॥

---

೪೩. ಅರ್ಜುನ! ನೀನು ಪೂರ್ವದಿಕ್ಕಿಗೆ ಹೋಗಿ ಒಂದು ಮೂರ್ತಿಯ ಪ್ರತಿಷ್ಠೆಯನ್ನು ಮಾಡು. ಪೂರ್ವಾಹ್ನದಲ್ಲಿ ಶುಭವೂ ಮನೋಭೀಷ್ಟಪ್ರದವೂ ಆದ ಲಗ್ನವೊಂದಿರುವುದು.

೪೪. ನಾನೂ ನದೀತೀರದಲ್ಲಿ ಮತ್ತೊಂದು ಮೂರ್ತಿಯನ್ನು ಸ್ಥಾಪಿಸಲು ಉತ್ತರದಿಕ್ಕಿಗೆ ಹೋಗುವೆನು. ನನ್ನ ಶಂಖದ ಧ್ವನಿಯನ್ನು ಕೇಳಿದ ಕ್ಷಣದಲ್ಲಿಯೇ ಸೂರ್ಯಪ್ರತಿಮೆಯನ್ನು ಪ್ರತಿಷ್ಠಿಸು.

೪೫. ಆಗ ಪಾರ್ಥನು ಪೂರ್ವಕ್ಕೆ ಹೋಗಿ ಪ್ರತಿಷ್ಠೆಗಾಗಿ ಉತ್ತಮವಾದ ಸ್ಥಳವನ್ನು ಹುಡುಕಿದನು. ಸೂರ್ಯನ ಮೂರ್ತಿಯನ್ನು ಭದ್ರವಾಗಿ ಪ್ರತಿಷ್ಠೆ ಮಾಡಿದನು.

೪೬. "ಈ ವಿಗ್ರಹವನ್ನು ಇಲ್ಲಿ ಸ್ಥಾಪನೆಮಾಡುವೆನು" ಎಂದು ಅರ್ಜುನನು ಮನಸ್ಸಿನಲ್ಲಿ ಯೋಚಿಸುತ್ತಿರುವಾಗಲೇ ಆ ಮೂರ್ತಿಯು "ಮೊದಲು ಸ್ಥಳವನ್ನು ಶುದ್ಧಿಮಾಡು" ಎಂದು ಆತನಿಗೆ ಹೇಳಿತು.

೪೭. ಹೀಗೆ ಹೇಳುತ್ತಿರಲು ಸಹಿಸಲಶಕ್ಯವಾದ ತೇಜಸ್ಸಿನಿಂದ ಕೂಡಿ ಮಾತನಾಡುತ್ತಿರುವ ಆ ವಿಗ್ರಹವನ್ನು ನೋಡಿ ಸವ್ಯಸಾಚಿಯೂ ಬಹುವಾಗಿ ಭಯಗೊಂಡನು.

೪೮. ಆ ದೇವನ ಅಪಾರತೇಜಸ್ಸನ್ನು ಸಹಿಸಲಾರದವನಾಗಿ "ದೇವೋತ್ತಮನೆ! ನಿನ್ನನ್ನು ಎಲ್ಲಿ ಪ್ರತಿಷ್ಠೆಮಾಡಲಿ? ನಿನಗೆ ಯಾವ ಸ್ಥಾನವು ಅಪೇಕ್ಷಿತವಾಗಿರುವುದು?" ಎಂದು ಕೇಳಿದನು.

ಸೌಮ್ಯರೂಪಃ ಸುದರ್ಶಶ್ಚ ಪ್ರಜಾಭ್ಯೋ ಭವ ಗೋಪತೇ ।
ದಿವಿ ಸಂಸ್ಥಾಶ್ಚ ಯೇ ದೇವಾ ನಾಗಾಃ ಪಾತಾಲಸಂಶ್ರಯಾಃ ॥ ೪೯ ॥
ಭುವಿಸ್ಥಾ ಮಾನವಾಃ ಪೂತಾ ಭವಂತು ತವ ದರ್ಶನಾತ್ ।
ಸೋಽರ್ಜುನಮಬ್ರವೀದ್ದೇವೋ ಮಾಭೈಸ್ತ್ವಂ ಮಮ ದರ್ಶನಾತ್ ॥ ೫೦ ॥
ದಕ್ಷಿಣೇನ ಕರೇಣಾಽಥ ಹ್ಯಭಯೇನಾಽಭಯಪ್ರದಃ ।
ಸಮಾಶ್ವಾಸ್ಯಾಽಥ ತಂ ಶಾಂತಂ ಸೌಮ್ಯಮೂರ್ತಿರ್ಬಭೂವ ಹ ॥ ೫೧ ॥
ಪ್ರಭಾಕರೇಣ ದೇವೇನ ನಿಜಂ ತೇಜಃ ಪ್ರದರ್ಶಿತಂ ।
ತತಃ ಸೂರ್ಯೋಽಬ್ರವೀತ್ ಸ್ಥಾನಮೇತದೇವಾಽಚಲಂ ಮಮ ॥ ೫೨ ॥
ಪ್ರಾಪ್ತೇ ಲಗ್ನೇ ಚ ಹರಿಣಾ ಶಂಖಶ್ಚಾಪೂರಿತೋ ಮಹಾನ್ ।
ನರೇಣ ಚ ಸ ವೈ ಸೂರ್ಯಃ ಸ್ಥಾಪಿತೋಽಮರಸಂಸ್ತುತಃ ॥ ೫೩ ॥

ಅರ್ಜುನ ಉವಾಚ :—

ಜಯತಿ ಕಿರಣಮಾಲೀ ಭಾಸುರಃ ಶ್ರಾಂತಸಪ್ತಿಃ
ಸಕಲಭುವನಧಾಮಾ ಪ್ರಾಗ್ದಿಗಂತಾಟ್ಟಹಾಸಃ ।
ಭವತಿ ವಿಗತಪಾಪಂ ಕೀರ್ತನಾದೇವ ಯಸ್ಯ
ಪ್ರಚುರಕಲುಷದೋಷೈರ್ಗ್ರಸ್ತಮಂಗಂ ನರಾಣಾಂ ॥ ೫೪ ॥

---

೪೯–೫೦. ಅಲ್ಲದೆ ಆ ಪಾರ್ಥನು "ಎಲೈ ಸೂರ್ಯನೆ! ನೀನು ಸಕಲ ಜನರಿಗೂ ಪ್ರಸನ್ನರೂಪನೂ, ದರ್ಶನೀಯತಮನೂ ಆಗಿರು ; ಸ್ವರ್ಗಲೋಕದಲ್ಲಿರುವ ದೇವತೆಗಳೂ, ಪಾತಾಳವನ್ನಾಶ್ರಯಿಸಿರುವ ನಾಗರೂ, ಭೂಲೋಕದಲ್ಲಿರುವ ಮನುಷ್ಯರೂ ನಿನ್ನ ದರ್ಶನವನ್ನು ತೆಗೆದುಕೊಂಡು ಪುನೀತರಾಗಲಿ" ಎಂದನು. ಆಗ ಸೂರ್ಯದೇವನು ಅರ್ಜುನನಿಗಿಂತೆಂದನು. "ನನ್ನ ಈ ರೂಪವನ್ನು ನೋಡಿ ನೀನು ಭಯವನ್ನು ತಾಳಬೇಡ.

೫೧–೫೨. ಬಲಗೈಯಲ್ಲಿ ಅಭಯಮುದ್ರೆಯನ್ನು ಧರಿಸಿ ನಾನು ಯಾವಾಗಲೂ ಭಕ್ತರಿಗೆ ಅಭಯವನ್ನೇ ನೀಡುತ್ತಿರುವೆನು." ಇಂತು ಆ ದಿನಮಣಿಯು ಅರ್ಜುನನಿಗೆ ಸಮಾಧಾನವನ್ನಿತ್ತು ಶಾಂತನನ್ನಾಗಿ ಮಾಡಿ ತಾನೂ ಸೌಮ್ಯಮೂರ್ತಿಯಾದನು. ದೇವದೇವನಾದ ಸೂರ್ಯನು ತನ್ನ ತೇಜಸ್ಸನ್ನು ಈ ವಿಧವಾಗಿ ಪ್ರಕಟಿಸಿ ಪುನಃ, "ಈ ಸ್ಥಾನವೇ ನನಗೆ ಶಾಶ್ವತವಾದ ನೆಲೆಯಾಗಿರಲಿ" ಎಂದು ಅರ್ಜುನನಿಗೆ ಹೇಳಿದನು.

೫೩. ನಿರೀಕ್ಷಿಸಿದ ಲಗ್ನಕಾಲವು ಪ್ರಾಪ್ತವಾಗಲು ಶ್ರೀಕೃಷ್ಣನು ತನ್ನ ಮಹಾಶಂಖವನ್ನು ಧ್ವನಿಗೈದನು. ಆ ಕಾಲದಲ್ಲಿಯೇ ಪಾರ್ಥನೂ ಸೂರ್ಯನ ಮೂರ್ತಿಯನ್ನು ಪ್ರತಿಷ್ಠಿಸಿ ದೇವತೆಗಳ ಸ್ತೋತ್ರಕ್ಕೆ ಪಾತ್ರನಾದನು.

೫೪. ಅರ್ಜುನನು ಹೇಳುತ್ತಾನೆ:—ಸಹಸ್ರಕಿರಣನೂ, ತೇಜಸ್ಸಂಪನ್ನನೂ, ಆಯಾಸಗೊಂಡ ಏಳುಕುದುರೆಗಳ ರಥದಲ್ಲಿರುವವನೂ, ಹದಿನಾಲ್ಕು ಲೋಕ

ಬ್ರಹ್ಮಾದ್ಯೈರ್ಮುನಿಭಿರಭಿಷ್ಟುತಂ ಪತಂಗಂ
ಕಃ ಸ್ತೋತುಂ ಕವಿರಭಿವಾಂಛತೇ ಪ್ರಕಾಮಂ ।
ಸ್ತೋಷ್ಯೇಽಹಂ ತದಪಿ ಸುವಿಸ್ತರಾತ್ಸ್ವಬುದ್ಧೇ
ಕಿಂ ದೀಪೋ ಜ್ವಲತಿ ಹಿ ನೋದಿತೇ ಶಶಾಂಕೇ ॥ ೫೫ ॥
ಶಾಸ್ತ್ರಾರ್ಥಜ್ಞಾನನಿಪುಣೈರ್ಮುನಿಭಿಃ ಸ್ತುತಸ್ಯ
ಕಿಂ ವಸ್ತು ಯನ್ನರಚಿತಂ ವಿವಿಧೈಃ ಪ್ರಯೋಗೈಃ ।
ದ್ವೈಪಾಯನಪ್ರಭೃತಿಭಿರ್ಮುನಿಭಿಃ ಪುರಾಣೈ
ರಾಪೀತಸಾರಮಿಹ ಭಾತಿ ಜಗತ್ಸಮಸ್ತಂ ॥ ೫೬ ॥
ಕಾಮಂ ತಥಾಽಪ್ಯಹಮತೀವ ವಿಚಾರ್ಯ ಬುದ್ಧ್ಯಾ
ಭಾನೋಸ್ತ್ರಿಲೋಕಗುರುಪೂಜಿತಪಾದಯುಗ್ಮಂ ।
ವೃತ್ತೈಃ ಸ್ಫುಟಾರ್ಥಮಧುರಾಕ್ಷರ ಸಂಧಿಯುಕ್ತೈ
ಸ್ತ್ವಾಂ ವೈ ವಿಚಿತ್ರಗತಿಭಿಃ ಪರಿಕೀರ್ತಯಿಷ್ಯೇ ॥ ೫೭ ॥

---

ಗಳಲ್ಲಿ ಸಚರಿಸುವವನೂ, ಪೂರ್ವದಿಗಂತದಲ್ಲಿ ಅಟ್ಟಹಾಸದಿಂದ ಮೆರೆಯು ವವನೂ ಆದ ಸೂರ್ಯನಿಗೆ ಜಯವಿರಲಿ; ಆತನ ನಾಮವನ್ನು ಸಂಕೀರ್ತನ ಮಾಡುವುದರಿಂದಲೇ ಅನೇಕ ಕಲ್ಮಷಗಳಿಂದಲೂ ದೋಷಗಳಿಂದಲೂ ಕೂಡಿದ ಮನುಷ್ಯರ ದೇಹಗಳು ಪಾಪರಹಿತಗಳಾಗುವುವು.

೫೫. ಚತುರ್ಮುಖನೇ ಮೊದಲಾದ ಮಹರ್ಷಿಗಳಿಂದಲೂ ಸ್ತೋತ್ರ ಮಾಡಲ್ಪಟ್ಟ ಸೂರ್ಯನನ್ನು ಯಾವ ಕವಿಯು ತಾನೆ ಸಂಪೂರ್ಣವಾಗಿ ಸ್ತುತಿಸಿ ಮುಗಿಸಲಿಷ್ಟವುಳ್ಳವನಾಗಬಹುದು? ಆದರೂ ನಾನೂ ನನ್ನ ಯೋಗ್ಯತೆ ಯನ್ನನುಸರಿಸಿ ವಿಸ್ತಾರವಾಗಿಯೇ ಸ್ತೋತ್ರಮಾಡುವೆನು. ಚಂದ್ರನು ಲೋಕ ವನ್ನೆಲ್ಲ ಬೆಳಗಿಸುತ್ತ ಮೂಡಿದರೆ ದೀಪವೂ ಬೆಳಗುತ್ತಿರುವುದಷ್ಟೆ.

೫೬. ಸಕಲಶಾಸ್ತ್ರಾರ್ಥಜ್ಞಾನಗಳಲ್ಲಿಯೂ ನಿಪುಣರಾದ ಮಹಾಮುನಿ ಗಳಿಂದ ಸಂಸ್ತುತನಾದವನಲ್ಲಿ ಅವರ ಅನೇಕವಿಧ ಸ್ತೋತ್ರಗಳಲ್ಲಿ ಸೇರಿಲ್ಲದ ಯಾವ ಹೊಸ ವಸ್ತುವನ್ನು ನಾನು ಕಂಡು ವರ್ಣಿಸಲಿ? ಈ ಜಗತ್ತೆಲ್ಲವೂ ಕೃಷ್ಣದ್ವೈಪಾಯನರೇ ಮೊದಲಾದ ಪುರಾತನಮಹರ್ಷಿಗಳು ಸಾರವನ್ನೆಲ್ಲ ಕುಡಿದು ಉಗುಳಿದಂತೆ ನನಗೆ ಕಾಣುತ್ತಿರುವುದು.

೫೭. ಹಾಗಿದ್ದರೂ ನಾನು ಬಹಳವಾಗಿ ಬುದ್ಧಿಯಿಂದ ವಿಚಾರಮಾಡಿ ನನ್ನ ಅಭಿಲಾಷೆಯನ್ನು ಮಾತ್ರ ತೀರಿಸಿಕೊಳ್ಳುತ್ತೇನೆ. ಮೂರುಲೋಕಗಳಿಗೂ ಪೂಜ್ಯವಾದ ಸೂರ್ಯನ ಪಾದಯುಗಳವನ್ನು ಸ್ಫುಟಾರ್ಥಯುಕ್ತಗಳೂ, ಸುಂದರಪದಗಳೂ, ಸಂಧಿಸಮಾಸಗಳೂ, ವಿಚಿತ್ರಗಳಾದ ವೃತ್ತಗತಿಗಳೂ ಉಳ್ಳ ಪದ್ಯಗಳಿಂದ ಸ್ತೋತ್ರಮಾಡುತ್ತೇನೆ.

ತಾವಜ್ಜಗದ್ಭವತಿ ನಿಶ್ಚಲಮೇವ ಸರ್ವಂ
ತಾವತ್ಕ್ರಿಯಾಶ್ಚ ವಿವಿಧಾ ನ ಚ ಯಾಂತಿ ಸಿದ್ಧಿಂ ।
ಯಾವಚ್ಚ ನಾಥ ಕಮಲಾಽಮಲಮಂಡಲ ತ್ವ
ಮುತ್ತಿಷ್ಠಸೇ ವ್ಯಪನಯನ್ಕಿರಣೈಸ್ತಮಾಂಸಿ ॥ ೫೮ ॥
ತಾವನ್ನ ಭಾಂತಿ ಶಿಖರಾಣಿ ಮಹೀರುಹಾಣಾಂ
ಗುಚ್ಛೈಸ್ತು ಫುಲ್ಲವನಮೀಲಿತಲೋಚನಾನಿ ।
ಸುಪ್ತಾನಿ ಬೋಧಯಸಿ ಷಟ್ಚರಣಾಕುಲಾನಿ
ಯಾವನ್ನ ಭಾಭಿರಮಲಾಭಿರನುತ್ತಮಾಭಿಃ ॥ ೫೯ ॥
ಉದ್ಯಂತಮಂಬರತಲೇ ಸುರಸಿದ್ಧಸಂಘಾಃ
ಸ ಬ್ರಹ್ಮ ದೈತ್ಯ ಮುನಿಕಿನ್ನರ ನಾಗಯಕ್ಷಾಃ ।
ತ್ವಾಮರ್ಚಯಂತಿ ವಿಬುಧಾಃ ಪ್ರಣತೈಃ ಶಿರೋಭಿ
ಶ್ಚಂಚತ್ಕಿರೀಟಮಣಿಭಾಭಿರನುತ್ತಮಾಭಿಃ ॥ ೬೦ ॥
ಅಸ್ತಂಗತೇ ತ್ವಯಿ ಜಗದ್ಭವತಿ ಪ್ರಸುಪ್ತಂ
ಭೂಯಸ್ತ್ವಯಿ ಪ್ರತಪತಿ ಪ್ರತಿಬೋಧಮೇತಿ ।
ಏವಂ ಸದಾ ವರದ ಲೋಕಹಿತಾರ್ಥಹೇತೋ
ರೇಕಸ್ತ್ವಮೇವ ಭಗವಂಸ್ತಿಮಿರಸ್ಯ ಹಂತಾ ॥ ೬೧ ॥

---

೫೮. ಎಲೈ ದಿನನಾಥನೆ! ಕಮಲಮಂಡಲಗಳನ್ನು ನಿರ್ಮಲಗೊಳಿಸುವ ನೀನು ನಿನ್ನ ಕಿರಣಸಮೂಹಗಳಿಂದ ಕತ್ತಲೆಯನ್ನು ಕಳೆಯುತ್ತ ಪೂರ್ವದಿಕ್ಕಿನಲ್ಲಿ ಮೂಡುವವರೆಗೂ ಸಕಲಜಗತ್ತೂ ನಿಶ್ಚಲವಾಗಿ ಬಿದ್ದಿರುವುದು. ಆ ಸಮಯದಲ್ಲಿ ಬಹುವಿಧಗಳಾದ ಯಾವ ಕಾರ್ಯಗಳನ್ನು ಮಾಡಿದರೂ ಯಾವುವೂ ಸಿದ್ಧಿಯನ್ನು ಹೊಂದುವುದಿಲ್ಲ.

೫೯. ನಿರ್ಮಲಗಳೂ ಸರ್ವೋತ್ತಮಗಳೂ ಆದ ನಿನ್ನ ಕಿರಣಗಳಿಂದ, ಮಲಗಿರುವ ದುಂಬಿಗಳನ್ನು ನೀನು ಎಲ್ಲಿಯವರೆಗೆ ಎಚ್ಚರಿಸುವುದಿಲ್ಲವೊ, ಅಲ್ಲಿಯವರೆಗೂ ಉದ್ಯಾನವನಗಳಲ್ಲಿ ಕಣ್ಣುಗಳನ್ನು ಮುಚ್ಚಿದಂತೆ ಅರೆಬಿರಿದ ಹೂವಿನ ಗೊಂಚಲುಗಳಿಂದ ಕೂಡಿದ ಮಹಾವೃಕ್ಷಗಳ ಶಿಖರಗಳು ಕಣ್ಣಿಗೆ ಕಾಣಿಸುವುದಿಲ್ಲ.

೬೦. ನಿನ್ನ ಮಹಿಮೆಯನ್ನರಿತು ಪೂರ್ವಾಕಾಶದಲ್ಲಿ ಉದಯಿಸುತ್ತಿರುವ ನಿನ್ನನ್ನು ದೇವತೆಗಳೂ, ಸಿದ್ಧ ಸಮೂಹಗಳೂ, ಬ್ರಹ್ಮದೇವನೂ, ದೈತ್ಯರೂ, ಮುನಿಗಳೂ, ಕಿನ್ನರರೂ, ನಾಗರೂ, ಯಕ್ಷರೂ, ಮಿಂಚುತ್ತಿರುವ ತಮ್ಮ ಕಿರೀಟಗಳಲ್ಲಿ ಕೆತ್ತಿರುವ ನವರತ್ನಗಳ ಅಪ್ರತಿಮ ಕಾಂತಿಗಳಿಂದ ಕೂಡಿದ ತಲೆಗಳನ್ನು ಬಾಗಿಸಿ ನಿನ್ನ ಪೂಜೆಯನ್ನು ಮಾಡುತ್ತಿರುವರು.

೬೧. ನೀನು ಅಸ್ತಂಗತನಾಗಲು ಸಕಲ ಪ್ರಪಂಚವೂ ನಿದ್ರಾವಸ್ಥೆಯನ್ನು

ಉತ್ಸಾಹಶಕ್ತಿನಯಶೌರ್ಯಸಮನ್ವಿತಾನಾಂ
ಸೇವಾಪ್ರಯೋಗರಚನಾ ವಿಧಿತತ್ಪರಾಣಾಂ ।
ಕಾರ್ಯಾಣಿ ಯನ್ನ ಫಲದಾನಿ ಭವಂತಿ ಪುಂಸಾಂ
ಹೇತುಸ್ತ್ವಭಕ್ತಿರಿಹ ನಾಥ ತವೇತಿ ನೂನಂ ॥ ೬೨ ॥
ಯತ್ಸಂಯುಗೇಷು ರಥಕುಂಜರಕುಂತಶಕ್ತಿ
ನಾರಾಚ ಚಕ್ರಶರತೋಮರಭೀಮಖಡ್ಗೈಃ ।
ಕ್ಷಿಪ್ರಂ ನರಾಃ ಸಮುಪಯಾಂತಿ ವಿಜಿತ್ಯ ಶತ್ರೂನ್
ಸರ್ವಂ ಸದಾ ಪ್ರಣತವತ್ಸಲ ಚೇಷ್ಟಿತಂ ತೇ ॥ ೬೩ ॥
ಕಾಂತಾರದುರ್ಗವಿಷಮೇಷ್ವಪಿ ವರ್ತಮಾನಾ
ಋಕ್ಷೇಭಸಿಂಹಬಹುಕಂಟಕತಸ್ಕರೇಷು ।
ತೃಷ್ಣಾನ್ವಿತಾಶ್ಚ ಬಹುಶೋಕವಿಮೂಢಚಿತ್ತಾ
ಸ್ತ್ವತ್ಕೀರ್ತನಾದ್ಧಿ ಗತಮೃತ್ಯುಭಯಾ ಭವಂತಿ ॥ ೬೪ ॥

---

ಹೊಂದುವುದು. ಮತ್ತೆ ನೀನು ಉದಯಿಸಲು ಜಾಗ್ರತವಾಗುವುದು. ವರಪ್ರದನಾದ ಭಗವಂತನೆ! ಇಂತು ನೀನೊಬ್ಬನೇ ಯಾವಾಗಲೂ ಲೋಕಗಳಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಅಂಧಕಾರವನ್ನು ನಾಶಗೊಳಿಸುವೆ.

೬೨. ಓ ಲೋಕನಾಥ! ಉತ್ಸಾಹ, ಶಕ್ತಿ, ನಯ, ಶೌರ್ಯ ಮುಂತಾದ ಗುಣಗಳಿಂದ ಕೂಡಿದವರೂ, ಸೇವೆಗಳನ್ನು ಸಲ್ಲಿಸುವುದರಲ್ಲಿ ಅನೇಕ ಪ್ರಕಾರಗಳನ್ನರಿತವರೂ ಆದರೂ, ಯಾವ ಮಾನವರಿಗೆ ತಮ್ಮ ಕಾರ್ಯಗಳಲ್ಲಿ ಈಪ್ಸಿತಫಲಗಳು ದೊರೆಯುವುದಿಲ್ಲವೊ, ಅದಕ್ಕೆ ನಿಜವಾಗಿಯೂ ನಿನ್ನಲ್ಲಿ ಭಕ್ತಿಯಿಲ್ಲದಿರುವುದೇ ಕಾರಣವಾಗಿರುವುದು.

೬೩. ಪ್ರಣತರಲ್ಲಿ ವಾತ್ಸಲ್ಯವುಳ್ಳವನೆ! ಯುದ್ಧಭೂಮಿಗಳಲ್ಲಿ ರಥ, ಆನೆ, ಕೊಡಲಿ, ಶಕ್ತಿ, ಅಸ್ತ್ರ, ಚಕ್ರ, ಬಾಣ, ತೋಮರ, ಭಯಂಕರವಾದ ಖಡ್ಗ ಮುಂತಾದುವುಗಳಿಂದ ವೇಗವಾಗಿ ಮುಂದುವರಿದು ಜನರು ಶತ್ರುಗಳನ್ನು ಜಯಿಸಿಬರುವ ಸಕಲ ವ್ಯಾಪಾರವೂ ಯಾವಾಗಲೂ ನಿನ್ನ ಲೀಲಾಚೇಷ್ಟಿತವೇ ಆಗಿರುವುದು.

೬೪. ಕರಡಿ, ಆನೆ, ಸಿಂಹ ಮುಂತಾದ ದುಷ್ಟಮೃಗಗಳಿಂದಲೂ, ಅನೇಕ ಮುಳ್ಳುಗಿಡಗಳಿಂದಲೂ, ಚೋರರಿಂದಲೂ, ವ್ಯಾಪ್ತಗಳಾಗಿ ದುರ್ಗಮಗಳಾದ ಅರಣ್ಯಪ್ರದೇಶಗಳಲ್ಲಿ ಸಂಚರಿಸುತ್ತ, ಹಸಿವು ಬಾಯಾರಿಕೆಗಳನ್ನು ಸಹಿಸಿ, ಅನೇಕ ದುಃಖಗಳಿಂದ ಜಡೀಭೂತವಾದ ಚಿತ್ತವುಳ್ಳವರೂ, ಸಹ ನಿನ್ನನ್ನು ಸ್ತೋತ್ರಮಾಡುವುದರಿಂದ ಮರಣಭಯವನ್ನು ಕಳೆದುಕೊಳ್ಳುವರು.

ತೇಜೋರಾಶಿಸ್ತ್ವಮಿಹ ಶರಣಂ ಸರ್ವತೋ ದುಃಖಿತಾನಾಂ
ತ್ವತ್ತುಲ್ಯೋಽನ್ಯೋ ಜಗತಿ ಸಕಲೇ ನಾಸ್ತಿ ಕಶ್ಚಿದ್ದಯಾಲುಃ ।
ತ್ವಯ್ಯೇಕಸ್ಮಿನ್ಭವತಿ ಸಕಲಾ ಭಕ್ತಿರನ್ವಿಷ್ಯಮಾಣಾ
ತ್ವಾಮಾಸಾದ್ಯ ಪ್ರಭವತಿ ಕುತೋ ವ್ಯಾಧಿದುಃಖಂ ನರಾಣಾಂ ॥೬೫॥
ಕಃ ಕುಷ್ಟಾಽಭಿಹತಃ ಕ್ವಚಾಽರಿಭಿರಥೋ ಕೋ ವ್ಯಾಧಿಭಿಃ ಪೀಡಿತಃ
ಕೇ ಪಂಗ್ವಂಧಜಡಾಃ ಕ್ವ ಶೀರ್ಣಚರಣಃ ಕೋ ವಾ ವಿಪನ್ನಕ್ರಿಯಃ ।
ಇತ್ಯೇವಂ ಪ್ರಸಮೀಕ್ಷ್ಯ ದೇವ ಕೃಪಯಾ ದೋಷಾತ್ಪರಿತ್ರಾಯಸೇ
ಕಸ್ಯಾಽನ್ಯಸ್ಯ ಪರೋಪಕಾರನಿರತಾ ಚೇಷ್ಟಾ ಯಥೈಷಾ ತವ ॥೬೬॥
ಧರ್ಮಃ ಪರತ್ರ ಕಿಲ ತಿಷ್ಠತಿ ಸೇವಿತೋಽಸೌ
ಕಾಲಾಂತರೇಣ ವಿಬುಧಾ ವರದಾ ಭವಂತಿ ।
ತ್ವಂ ಸೇವಿತಃ ಪ್ರಣತವತ್ಸಲ ಭೂತಿಕಾಮ್ಯೈಃ
ಸದ್ಯಃ ಪ್ರಯಚ್ಛಸಿ ಫಲಂ ಯದಭೀಪ್ಸಿತಂ ತೈಃ ॥ ೬೭ ॥

---

೬೫. ಬ್ರಹ್ಮಾಂಡದಲ್ಲೆಲ್ಲ ದುಃಖಗೊಂಡವರಿಗೆ ತೇಜೋರಾಶಿಯಾದ ನೀನೊಬ್ಬನೇ ಶರಣ್ಯನಾಗಿರುವೆ. ನಿನಗೆ ಸಮಾನವಾದ ದಯಾಳುವಾದವನು ಸಮಸ್ತ ಜಗತ್ತಿನಲ್ಲಿಯೂ ಮತ್ತೊಬ್ಬನು ಕಾಣುವುದಿಲ್ಲ. ಸಮಸ್ತಭಕ್ತಿಯೂ ನಿನ್ನೊಬ್ಬನಲ್ಲಿಯೇ ಸೇರುವುದಾಗಿರುವುದು. ನಿನ್ನನ್ನು ಮರೆಹೊಕ್ಕ ನರರಿಗೆ ರೋಗಗಳಿಂದ ದುಃಖವು ಹೇಗೆ ಸಂಭವಿಸುವುದು?

೬೬. ಕಷ್ಟಗಳಲ್ಲಿ ಸಿಕ್ಕಿರುವವನು ಯಾರು? ಶತ್ರುಗಳಿಂದಾಗಲಿ, ರೋಗಗಳಿಂದಾಗಲಿ ಪೀಡಿತನಾದವನು ಯಾರು? ಕುಂಟರೂ, ಕುರುಡರೂ, ಜಡರೂ ಆಗಿರುವರು ಯಾರು? ಯಾವನು ಪಾದಹೀನನಾಗಿರುವನು? ಯಾವನಿಗೆ ಕಾರ್ಯಗಳಲ್ಲಿ ವಿಘ್ನವೊದಗುತ್ತಿರುವುದು? ಎಂಬುದಾಗಿ ಹುಡುಕಿಕೊಂಡು ನೀನು ಎಲ್ಲರನ್ನೂ ದೋಷಗಳಿಂದ ಕಾಪಾಡುತ್ತಿರುವೆ ದೇವದೇವನೆ! ನಿನಗಿರುವಂತೆ ಬೇರೆ ಯಾವ ದೇವತೆಗೆ ಪರೋಪಕಾರವನ್ನು ಮಾಡುವ ವ್ಯಾಪಾರವು ಸಹಜವಾಗಿರುವುದು?

೬೭. ಧರ್ಮವನ್ನು ಅನುಷ್ಠಾನಮಾಡಲು ಪರಲೋಕದಲ್ಲಿ ಫಲದಾಯಕವಾಗುವುದು. ದೇವತೆಗಳೂ ಬಹುಕಾಲದ ಮೇಲೆ ವರಪ್ರದರಾಗುವರು. ಭಕ್ತವತ್ಸಲನೆ! ನಿನ್ನನ್ನು ಮಾತ್ರ ಐಶ್ವರ್ಯಾಪೇಕ್ಷೆಯಿಂದ ಸೇವಿಸಿದವರಿಗೆ ನೀನು ಅವರವರ ಅಭಿಲಾಷೆಗಳನ್ನು ತತ್‌ಕ್ಷಣದಲ್ಲಿಯೇ ಈಡೇರಿಸಿಕೊಡುತ್ತಿರುವೆ.

ವಿಭ್ರಾಂತಕಾಂತಹರಿಣೀಸದೃಶೇಕ್ಷಣಾಭಿಃ
ಕಾಂತೋರುಹಾರಮಣಿಕುಂಡಲಮೇಖಲಾಭಿಃ ।
ತೇಷಾಂ ಭವಂತಿ ಭವನಾನಿ ವಿಲಾಸಿನೀಭಿ
ರ್ಯೇಷಾಂ ನೃಣಾಂ ತ್ವಮಸಿ ವೈ ವರದಃ ಪ್ರಸನ್ನಃ ॥ ೬೮ ॥
ಯೈಸ್ತ್ವಂ ನರೈಃ ಸಕೃದಪಿ ಪ್ರಣತಃ ಕಥಂಚಿ
ದ್ಧ್ಯಾತೋಽಥವಾ ಭುವನನಾಥ ತಥಾಂತಕಾಲೇ ।
ನಿಷ್ಕಲ್ಮಷಾ ಜಗತಿ ದುಷ್ಕೃತಿನೋ ಭವಂತಿ
ತೇ ನಿರ್ಮಲಾಃ ಸುಕೃತಿನೋ ಗತಿಮಾಪ್ನುವಂತಿ ॥ ೬೯ ॥
ಯೇ ತ್ವಾಂ ಕುತರ್ಕಮತಿಭಿರ್ನ ನಮಂತಿ ಭಕ್ತ್ಯಾ
ರೋಮಾಂಚಕಂಚುಕಶತಾಕುಲಿತೈಃ ಶರೀರೈಃ ।
ತೇ ನಿರ್ಧನಾಃ ಪರಗೃಹೇಷ್ವವಭೂತಮನ್ನಂ
ಕ್ಷುತ್ಕ್ಷಾಮಕಂಠವದನಾಃ ಪರಿಕೀರ್ತಯಂತಿ ॥ ೭೦ ॥
ಉದಧಿಜಲತರಂಗಕ್ಷೋಭಲೋಲಾಕ್ಷಿಯುಗ್ಮೈಃ
ಸಫಣಿಮಣಿಮಯೂಖೋದ್ಭಾಸಿತೈರ್ಲೇಲಿಹದ್ಭಿಃ ।
ಪ್ರಣಿಪತಿತ ಶಿರೋಭಿರ್ನಾಗಮುಖ್ಯೈರಜಸ್ರಂ
ಶ್ರುತಿಭಿರಸುಪಮಾಭಿಃ ಸ್ತೂಯಸೇ ಪುಷ್ಕಲಾಭಿಃ ॥ ೭೧ ॥

---

೬೮. ನೀನು ಯಾವ ಮಾನವರಿಗೆ ಪ್ರಸನ್ನನಾಗಿ ವರಗಳನ್ನು ಕೊಡುವೆಯೊ, ಅವರ ಮನೆಗಳು ಚಂಚಲಗಳೂ, ಮನೋಹರಗಳೂ ಆದ ಜಿಂಕೆಯ ಕಣ್ಣುಗಳುಳ್ಳ, ಝುಗಝುಗಿಸುತ್ತಿರುವ ಹಾರಗಳು, ರತ್ನಕುಂಡಲಗಳು, ಒಡ್ಯಾಣಗಳು ಮುಂತಾದ ಒಡವೆಗಳಿಂದೊಪ್ಪುತ್ತಿರುವ ವಿಲಾಸಿನಿಯರಿಂದ ತುಂಬಿರುವುವು.

೬೯. ಲೋಕನಾಥನೆ! ನಿನಗೆ ಯಾವ ನರರು ಒಮ್ಮೆಯಾದರೂ ಯಾವ ಕಾರಣದಿಂದಲಾದರೂ ನಮಸ್ಕರಿಸುವರೊ, ಅಥವಾ ಅಂತ್ಯಕಾಲದಲ್ಲಿ ನಿನ್ನ ರೂಪವನ್ನು ಧ್ಯಾನಮಾಡುವರೊ, ಅವರು ಈ ಲೋಕದಲ್ಲಿಯೇ ಅತ್ಯಂತ ದುಷ್ಕೃತ್ಯಗಳನ್ನು ಮಾಡಿದವರಾದರೂ ಪಾಪರಹಿತರೆನಿಸಿ ಪರಿಶುದ್ಧರೂ ಪುಣ್ಯವಂತರೂ ಆಗಿ ಸದ್ಗತಿಯನ್ನು ಪಡೆಯುವರು.

೭೦. ಯಾರು ಕುತರ್ಕಗಳಿಗೆ ಮನಸ್ಸನ್ನಿತ್ತು, ಶರೀರದಲ್ಲೆಲ್ಲ ರೋಮಾಂಚವೆಂಬ ಕಂಚುಕವನ್ನು ಧರಿಸಿ ಭಕ್ತಿಯಿಂದ ನಿನಗೆ ನಮಸ್ಕಾರಗಳನ್ನು ಮಾಡುವುದಿಲ್ಲವೊ, ಅವರು ದರಿದ್ರರಾಗುವರು. ಅಲ್ಲದೆ ಇತರ ಮನೆಗಳ ಅನ್ನಗಳಿಗೆ ಬಾಯಿಬಿಡುತ್ತ ಹಸಿವಿನಿಂದ ಕೃಶವಾದ ದೇಹವುಳ್ಳವರಾಗಿ ಬಹುವಾಗಿ ವ್ಯಥೆಗೊಳ್ಳುವರು.

೭೧. ಸಮುದ್ರದ ಅಲೆಗಳನ್ನೂ ಕ್ಷೋಭೆಗೊಳಿಸುವ ಕ್ರೂರನೇತ್ರಗಳುಳ್ಳವರೂ, ಫಣಾಮಣಿಗಳ ಕಾಂತಿಗಳಿಂದ ಶೋಭಿಸುತ್ತಿರುವವರೂ, ತಲೆಗಳನ್ನು

ತವ ಸುರವರ ಗಚ್ಛತೋಽನುಸರಂತಿ
ತ್ರಿದಶನದೀಕಮಲೋದ್ಗತಾನಿ ವಾತ್ಯೈಃ ।
ಕನಕಕಮಲರೇಣುಪಿಂಜರಿತಾನಿ
ಭ್ರಮರಕುಲಾನಿ ಪತಂಗಚಾಮರಾಣಿ ॥ ೭೨ ॥
ತತ್ವಧ್ಯಾಸಂ ಜಲನಿಧಿನಿವಹೇ
ಸ್ಥಿತ್ವಾ ಸ್ಥಿತ್ವಾ ಚರಣನಿವಹೈಃ ।
ಆಜೀವಾರ್ಥಂ ಪ್ರತಪಸಿ ಭಗವನ್
ಕಸ್ತೇ ತುಲ್ಯಸ್ತ್ರಿಭುವನ ಸಮಯೇ ॥ ೭೩ ॥
ಉದಯಾದ್ರಿ ನಿತಂಬ ಸಂಸ್ಥಿತಸ್ಯ
ಹೃದಯೇಷ್ವಸ್ತಮಯೇಷು ಚಾವೃತಸ್ಯ ।
ಕಿರಣಾಸ್ತಪನೀಯಸಪ್ರಭಾಸ್ತೇ
ವಿಲಸಂತಸ್ತಡಿತೋ ವಿಡಂಬಯಂತಿ ॥ ೭೪ ॥
ಯಥಾ ಯಥಾ ವ್ರಜತಿ ರಥಸ್ತವಾಂಬರೇ
ವಿಪಾಟಯನ್ ಘನತಿಮಿರೌಘ ಸಂಚಯಾನ್ ।
ತಥಾ ತಥಾ ಕ್ಷುಭಿತಮಹಾಽನಿಲಾಸ್ಕೃತಂ
ಪ್ರತೀಯತೇ ಮುಹುರಿವ ದುಂದುಭಿರ್ಯಥಾ ॥ ೭೫ ॥

---

ನೆಲಕ್ಕೆ ಬಾಗಿಸಿರುವವರೂ ಆದ ನಾಗಮುಖ್ಯರೂ, ಸಹ ನಿನ್ನನ್ನು ಅಸದೃಶಗಳೂ, ಅನಂತಗಳೂ ಆದ ಸ್ತೋತ್ರಗಳಿಂದ ನಿತ್ಯವೂ ಸ್ತುತಿಸುತ್ತಿರುವರು.

೭೨. ದೇವೋತ್ತಮನಾದ ಸೂರ್ಯನೆ! ಆಕಾಶದಲ್ಲಿ ನೀನು ಸಂಚರಿಸುತ್ತಿರಲು ದೇವನದಿಯ ಕಮಲಗಳಿಂದೆದ್ದು ಆ ಸ್ವರ್ಣಕಮಲಗಳ ಧೂಳಿಧೂಸರಿತವಾದ ಮೈಯುಳ್ಳ ದುಂಬಿವಿಂಡುಗಳೂ ನಿನ್ನನ್ನು ಹಿಂಬಾಲಿಸುತ್ತ ಚಾಮರಗಳಂತೆ ಕಾಣುತ್ತಿರುವುವು.

೭೩. ಈ ತತ್ತ್ವವೇ ಧ್ಯಾನಯೋಗ್ಯವಾದುದು. ಪೂರ್ವಸಮುದ್ರದ ಅಪಾರವಾದ ಅವಕಾಶದಲ್ಲಿ ನಿತ್ಯವೂ ನಿಂತು ನೀನು ಲೋಕಜೀವನಕ್ಕಾಗಿ ಅನೇಕ ಕಿರಣಗಳಿಂದ ಪ್ರಕಾಶಿಸುತ್ತಿರುವೆ. ಸ್ವಾಮಿಯೆ! ಮೂರು ಲೋಕಗಳಲ್ಲಿಯೂ ನಿನಗೆ ಸಮಾನನಾದವನಾರು?

೭೪. ಉಪಯಕಾಲದಲ್ಲಿ ಉದಯಪರ್ವತದ ತಪ್ಪಲಿನಲ್ಲಿ ಶೋಭಿಸುವವನೂ, ಅಸ್ತಮಾನ ಸಮಯದಲ್ಲಿ ಕಿರಣಗಳನ್ನುಪಸಂಹರಿಸುವವನೂ ಆದ ನಿನ್ನ ಚಿನ್ನದ ಬಣ್ಣದ ಕಿರಣಗಳನ್ನು ಮಿಂಚುಗಳು ಲೇಶಮಾತ್ರ ಅನುಕರಿಸುತ್ತಿರುವುವು.

೭೫. ದಟ್ಟವಾದ ಕತ್ತಲೆಯ ಸಮೂಹಗಳನ್ನು ದೂರಮಾಡುತ್ತ ನಿನ್ನ ದಿವ್ಯರಥವು ಆಕಾಶದಲ್ಲಿ ಸಂಚರಿಸಿದಂತೆಲ್ಲ ವಾಯುಮಂಡಲವೂ ಕ್ಷೋಭಗೊಂಡು

ಚಾರುಪದ್ಮವಿನಿಮೀಲಿತೇಕ್ಷಣಾಂ
ಚಕ್ರವಾಕ ಕಲಹಂಸಮೇಖಲಾಂ ।
ಕಾಮಿನೀಮಿವ ರತಿಶ್ರಮಾಲಸಾಂ
ತಾಂ ವಿಬೋಧಯಸಿ ಪದ್ಮಿನೀಂ ಕರೈಃ ॥ ೭೬ ॥

ನೀಲಲೋಲಮತಿಕಾಂತಮುತ್ಪಲಂ
ಭೃಂಗತುಂಗ ಚರಣಾಕುಲೀಕೃತಂ ।
ತ್ವತ್ಪ್ರಭಾಭಿರನುರಾಗರಂಜಿತಂ
ಪದ್ಮರಾಗಮಿವ ಶೋಭತೇ ಭೃಶಂ ॥ ೭೭ ॥

ಸ್ಫುರಚ್ಛಶಾಂಕಹಾರನಿರ್ಮಲಂ
ಖಗ ತ್ವದಂಕೇಷ್ವಚಂಚಲಂ ।
ವಿಭಾತ್ಯತೀವ ಕಾಂತಮಂಬರಂ
ಸಮಂ ಬೃಹಚ್ಚೈಕ ಪಾಟಲಂ ॥ ೭೮ ॥

ಹರಿತಿ ಚ ತಾವನ್ಮುಹುರ್ನಿಷೇವಿತತಮಸ್ಯಶುಭಂ
ಭವತಿ ಚ ಯಾವದೇವ ಕರಣೈಸ್ತವ ಪೂಜಿತತರಂ ।
ಋಷಿಭಿರ್ಮುನಿಭಿರುದಾರಧೀಭಿಃ ಶಾಶ್ವತಮಾರ್ಗಪರೈ
ರ್ವರದ ನ ಶಕ್ಯತೇ ತವಗುಣಸ್ತುತಿರಾಶ್ರಯಿತುಂ ॥ ೭೯ ॥

---

ಬೀಸುತ್ತಿರುವ ಗಾಳಿಯ ಧ್ವನಿಯು ನಿನ್ನ ವಿಜಯದುಂದುಭಿಯ ನಾದದಂತೆ ತೋರುತ್ತಿರುವುದು.

೭೬. ಸುಂದರಪದ್ಮಗಳೆಂಬ ಅರೆಮುಚ್ಚಿದ ಕಣ್ಣುಗಳುಳ್ಳವಳೂ, ಚಕ್ರವಾಕ ರಾಜಹಂಸಗಳ ಪಙ್ತಿಯೆಂಬ ಒಡ್ಯಾಣದಿಂದಲಂಕೃತಳೂ, ಆಗಿ ಸುರತಸುಖ ದಿಂದ ಆಲಸ್ಯಗೊಂಡ ಸ್ತ್ರೀಯಂತಿರುವ ಸರೋವರಕನ್ಯೆಯನ್ನು ನೀನು ನಿನ್ನ ಕಿರಣಗಳಿಂದ ಎಚ್ಚರಗೊಳಿಸುವೆ.

೭೭. ನೀಲಿಯ ತೆರೆಗಳಿಂದಲೂ, ಕಾಂತಿಯುಕ್ತಗಳಾದ ಕನ್ನೈದಿಲೆ ಗಳಿಂದಲೂ, ಮದಿಸಿದ ದುಂಬಿಗಳ ಪಾದಗಳ ಧ್ವನಿಯಿಂದಲೂ, ನಿನ್ನ ಕಿರಣಗಳ ಸಂಧ್ಯಾರಾಗದಿಂದಲೂ, ರಂಜಿತವಾದ ಪದ್ಮರಾಗಮಣಿಯಂತೆ ಸರೋವರವು ಕಂಗೊಳಿಸುತ್ತಿರುವುದು.

೭೮. ಎಲೈ ಸೂರ್ಯನೆ! ಚಂದ್ರಮಂಡಲವೆಂಬ ಹಾರಮಣಿಯಿಂದ ಶೋಭಿಸುತ್ತಿರುವುದೂ, ನಿಶ್ಚಲವೂ, ಸರ್ವಸಮವೂ, ಸರ್ವವ್ಯಾಪಕವೂ ಆದ ಆಕಾಶವೆಲ್ಲವೂ ನಿನ್ನ ಕಿರಣಗಳ ವ್ಯಾಪ್ತಿಯಿಂದ ಹಳದಿಯ ಬಣ್ಣದಿಂದ ಕೂಡಿ ಬಹುಸುಂದರವಾಗಿ ತೋರುತ್ತಿರುವುದು.

೭೯. ವರಪ್ರದನೆ! ಯಾವ ದಿಗ್ಭಾಗವಾದರೂ ನಿನ್ನ ಕಿರಣಗಳಿಂದ ವ್ಯಾಪ್ತ

ತ್ವಂ ವಿಷ್ಣುಸ್ತ್ವಂ ಶಶಾಂಕಸ್ತ್ವಮಸುರಮಥನಃ ಷಣ್ಮುಖಸ್ತ್ವಂ ಧನೇಶ
ಸ್ತ್ವಂ ಕಾಲಸ್ತ್ವಂ ಚ ಧಾತಾ ಕ್ಷಿತಿಧರಮಲಯಾಪಾಶ್ರಯಸ್ತ್ವಂ ಹುತಾಶಃ।
ಓಂಕಾರಸ್ತ್ವಂ ದ್ವಿಜಾನಾಂ ತ್ವಮಿಹ ಜಲನಿಧಿಸ್ತ್ವಂ ಶರಸ್ತ್ವಂ ಚ ರುದ್ರ
ಸ್ತ್ವಂ ಮುಖ್ಯಸ್ತ್ವಂ ಪಯೋದೋ ವ್ರತಯಮನಿಯಮಾಸ್ತ್ವಂ ಜಗತ್ಸರ್ವ
ತ್ವಮನಿಂದ್ಯಗೋಪತೇ ತ್ರಿಪುರಮಥನ ಮನ್ಮಥದಾಹಕರ [ಮೇವ ॥
ಸ್ತ್ವಮಸುರಭೀಮದರ್ಪಹಾ ಪಾಹಿ ಮಾಂ ।
ತ್ರಿದಶಾಧಿಪ ಕಮಲವರಾನನಸ್ತ್ವಮಿಹ ದೇವಗುರು
ರ್ಭಗವಾಂಸ್ತ್ರಿಭುವನಮಂಡಲೇಽಸ್ತಿ ಕತಮಸ್ತವ ತುಲ್ಯಗುಣಃ॥೮೧॥
ಆದಿತ್ಯಭಾಸ್ಕರ ದಿವಾಕರ ಸಪ್ತಸಪ್ತೇ
ಮಾರ್ತಂಡ ಸೂರ್ಯ ಹರಿದಶ್ವಪತೇ ಚ ಭಾನೋ ।
ಅಶ್ರಾಂತವಾಹನ ಖರೂಪ ಗಭಸ್ತಿಮಾಲಿಂ
ಸ್ತ್ವಾಂ ಲೋಕನಾಥ ಶರಣಂ ಪ್ರತಿಪದ್ಯತೇಽಸೌ ॥ ೮೨ ॥

---

ವಾಗದಿರುವವರೆಗೆ ಮಾತ್ರ ಮೋಹಕ್ಕೆ ಕಾರಣವಾದ ತಮಸ್ಸನ್ನೊಡಗೊಂಡು ಅಶುಭವಾಗಿರುವುದು. ಅಸಂಖ್ಯಾತಗಳಾದ ನಿನ್ನ ಗುಣಗಳನ್ನು ಸ್ತೋತ್ರ ಮಾಡಲು ಮಹರ್ಷಿಗಳಿಗಾಗಲಿ, ಉದಾರಬುದ್ಧಿಗಳೂ, ಶಾಶ್ವತಮೋಕ್ಷೈಕ ನಿಷ್ಠರೂ ಆದ ಮುನಿಗಳಿಗಾಗಲಿ ಶಕ್ಯವಾಗಲಾರದು.

೮೦. ನೀನೇ ಮಹಾವಿಷ್ಣುವು. ಚಂದ್ರನೂ ನೀನೇ. ರಾಕ್ಷಸರನ್ನು ನಿಗ್ರಹಿಸಿದ ಷಣ್ಮುಖಸ್ವಾಮಿಯೂ ನೀನೇ ಆಗಿರುವೆ. ನೀನೇ ಕುಬೇರನು. ಕಾಲನು. ಬ್ರಹ್ಮದೇವನು ಭೂಮಿಯಲ್ಲಿ ಧರಿಸಿರುವ ಆದಿಶೇಷನು ; ಮಲಯ ಪರ್ವತವು ; ಅಗ್ನಿಯು ; ಬ್ರಾಹ್ಮಣರು ಉಪಾಸಿಸುವ ಪ್ರಣವವು ; ಸಮುದ್ರವು ; ಸಮುದ್ರದ ದಡದ ಜೊಂಡುಹುಲ್ಲು ; ಮಹಾರುದ್ರನು, ಪ್ರಮುಖನು, ಮೇಘವು, ವ್ರತಗಳು, ಯಮಗಳು, ನಿಯಮಗಳು ಮುಂತಾದುವುಗಳನ್ನೊಳಕೊಂಡ ಸಕಲ ಪ್ರಪಂಚವೂ ನೀನೇ ಆಗಿರುವೆ.

೮೧. ಎಲೈ ಸಹಸ್ರರಶ್ಮಿಯೆ ! ನೀನು ಪರಿಶುದ್ಧನಾದವನು. ತ್ರಿಪುರ ಧ್ವಂಸಿಯೂ, ಮನ್ಮಥವೈರಿಯೂ ಆದ ಮಹೇಶ್ವರನೂ ನೀನೇ. ರಾಕ್ಷಸರ ಭಯಂಕರದರ್ಪವನ್ನು ನಿರ್ಮೂಲಮಾಡಿದವನೂ ನೀನೇ. ನನ್ನನ್ನು ಕಾಪಾಡ ಬೇಕು. ಮಹೇಂದ್ರನ ಮುಖಕಮಲವನ್ನರಳಿಸುವ ದೇವಗುರುವೂ ನೀನೇ ಆಗಿರುವೆ. ಭಗವಂತನಾದ ನಿನಗೆ ಸಮಾನಗುಣವುಳ್ಳವರು ಮೂರು ಲೋಕ ಗಳಲ್ಲಿ ಯಾರಿರುವರು ?

೮೨. ಎಲೈ ಅದಿತಿಪುತ್ರನೆ ! ತೇಜೋರಾಶಿಯೆ ! ಹಗಲನ್ನುಂಟುಮಾಡು ವವನೆ ! ಸಪ್ತಾಶ್ವನೆ ! ಮೃಕಂಡುತನಯನೆ ! ಸದಾ ಸಂಚಾರಶೀಲನೆ ! ಹಳದಿಯ

ಪ್ರಾಗ್ದಿಗ್ವಧೂತಿಲಕಭಾಸುರಕರ್ಣಪೂರ
ಮಂದಾಕಿನೀದಯಿತ ನಾಥ ಜಗತ್ತ್ರಿದೀಪ ।
ಹೇಮಾದ್ರಿತಾಪನ ನಭಸ್ತಲಹಾರಿರತ್ನ
ಸಂಧ್ಯಾಂಗನಾವದನರಾಗ ನಮೋನಮಸ್ತೇ ॥ ೮೩ ॥
ಬ್ರಹ್ಮೈವ ಸತ್ಯಶುಭಮಂಗಲ ಲೋಕನಾಥ
ವ್ಯೋಮಾಂಗಣೇಶ ಮುನಿಸಂಸ್ತುತವಿಶ್ವಮೂರ್ತೇ ।
ಆರ್ತಸ್ಯ ಶೋಕಹರ ಕಿಂಕರಪಾಲಕಶ್ಚ
ತ್ವಂ ಮೇ ಪ್ರಸೀದ ಭಗವಂಛರಣಾಗತಸ್ಯ ॥ ೮೪ ॥
ಕೃತ್ವಾಂಜಲಿಂ ಶಿರಸಿ ಪಂಕಜಕುಡ್ಮಲಾಭಂ
ಯತ್ಸಂಸ್ತುತಸ್ತ್ವಮಿಹ ದೇವಮಯಾಽದ್ಯ ಭಕ್ತ್ಯಾ ।
ತೇನ ಪ್ರಭೋ ಭವ ಮಮೋಪರಿ ಸೌಮ್ಯಮೂರ್ತಿ
ರ್ಧರ್ಮೇ ಮತಿಂ ಕುರು ಸದಾ ಶ್ರಿಯಮೂರ್ಜಿತಾಂ ಚ ॥೮೫॥

---

ಬಣ್ಣದ ಕುದುರೆಗಳ ರಥವನ್ನೇರಿದವನೆ! ಪ್ರಕಾಶವಂತನೆ! ಆಯಾಸಗೊಳ್ಳದ ವಾಹನವುಳ್ಳವನೆ! ಆಕಾಶವನ್ನು ಬೆಳಗುವವನೆ! ರಶ್ಮಿಮಾಲೆಯೆ! ಲೋಕನಾಥ ನಾದ ನಿನ್ನನ್ನು ಈ ದೀನನು ಶರಣುಹೊಕ್ಕಿರುವನು.

೮೩. ಪೂರ್ವದಿಕ್ಕಾಮಿನಿಯ ಮುಖವನ್ನು ಬೆಳಗಿಸುವ ಕಿವಿಯೋಲೆ ಯಂತಿರುವವನೂ, ದೇವಗಂಗೆಯ ಪ್ರಿಯನೂ, ಲೋಕೈಕದೀಪನೂ, ಮೇರು ಪರ್ವತವನ್ನು ಸುತ್ತುವವನೂ, ಆಕಾಶಕಟಾಹಕ್ಕೆ ರತ್ನಪ್ರಾಯನೂ, ಸಂಧ್ಯಾ ವಧುವಿನ ಮುಖಕ್ಕೆ ಕೆಂಪನ್ನುಂಟುಮಾಡುವವನೂ ಆದ ನಿನ್ನನ್ನು ಮತ್ತೆ ಮತ್ತೆ ನಮಸ್ಕರಿಸುವೆನು.

೮೪. ನೀನೇ ಬ್ರಹ್ಮನು. ಸತ್ಯಸ್ವರೂಪನು. ಶುಭ, ಶ್ರೇಯಸ್ಸುಗಳ ನ್ನುಂಟುಮಾಡುವವನು. ಲೋಕೇಶ್ವರನು. ಆಕಾಶದ ಸಕಲಕ್ಕೂ ಅಧಿಪತಿಯು. ಮಹರ್ಷಿಗಳಿಂದ ಸಂಸ್ತುತನಾದವನು. ವಿಶ್ವವೇ ನಿನ್ನ ಸ್ವರೂಪವಾಗಿರುವುದು. ದಾಸರನ್ನು ಕಾಪಾಡುವ ಭಗವಂತನೆ! ಲೋಕದುಃಖವನ್ನು ಪರಿಹರಿಸುವ ನೀನು, ಆರ್ತನಾಗಿ ಶರಣುಹೊಂದಿರುವ ನನ್ನನ್ನು ಸಂರಕ್ಷಿಸು.

೮೫. ಓ ದೇವದೇವನೆ! ಪ್ರಭುವೆ! ಕಮಲದ ಮೊಗ್ಗಿನಂತೆ ತಲೆಯಲ್ಲಿ ಕೈಗಳನ್ನು ಜೋಡಿಸಿ ನಾನು ಇದುವರೆಗೂ ಭಕ್ತಿಯಿಂದ ನಿನ್ನನ್ನು ಸ್ತೋತ್ರ ಮಾಡಿರುವೆನಷ್ಟೆ. ಆದರಿಂದ ನೀನು ನನ್ನಲ್ಲಿ ಪ್ರಸನ್ನನಾಗಿ ನನಗೆ ಧರ್ಮ ದಲ್ಲಿಯೇ ಬುದ್ಧಿಯುಂಟಾಗುವಂತೆ ಮಾಡು. ನನ್ನ ಐಶ್ವರ್ಯವು ಯಾವಾಗಲೂ ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದುತ್ತಿರಲಿ.

ನಮಃ ಸವಿತ್ರೇ ಜಗದೇಕ ಚಕ್ಷುಷೇ
ಜಗತ್ಪ್ರಸೂತಿಸ್ಥಿತಿನಾಶಹೇತವೇ ।
ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ
ವಿರಿಂಚಿನಾರಾಯಣಶಂಕರಾತ್ಮನೇ ॥ ೮೬ ॥

ಸೂರ್ಯ ಉವಾಚ :—

ತುಷ್ಟೋಽಹಮಧುನಾ ಪಾರ್ಥ ಸ್ತೋತ್ರೇಣಾನೇನ ಸುವ್ರತ ।
ವರಂ ದಾಸ್ಯಾಮಿ ಯತ್ನೇನ ಯತ್ತೇ ಮನಸಿ ವರ್ತತೇ ॥ ೮೭ ॥
ಮದ್ದರ್ಶನಂ ಹಿ ವಿಫಲಂ ನ ಕದಾಚಿತ್ಪ್ರಜಾಯತೇ ।
ಶೂರಾಣಾಂ ಚ ವಿಶೇಷೇಣ ಹ್ಯದೇಯಂ ನಾಸ್ತಿ ಯತ್ನತಃ ॥ ೮೮ ॥

ಅರ್ಜುನ ಉವಾಚ :—

ಏಷ ಏವ ವರೋ ಮಹ್ಯಂ ವರಾಣಾಮುತ್ತಮೋತ್ತಮಃ ।
ಅತ್ರ ಸನ್ನಿಹಿತೋ ದೇವ ಸರ್ವಕಾಲಂ ಭವ ಪ್ರಭೋ ॥ ೮೯ ॥
ಯೇ ಚ ತ್ವಾಂ ಮಾನವಾ ಭಕ್ತ್ಯಾ ಸ್ತೋಷ್ಯಂತಿ ಪ್ರಣತಾಃ ಸದಾ ।
ತೇಷಾಂ ಧನಂ ಚ ಧಾನ್ಯಂ ಚ ಪುತ್ರದಾರಾದಿಕಂ ವಸು ॥ ೯೦ ॥

---

೮೬. ಮಲಗಿದವರನ್ನೆಬ್ಬಿಸುವವನೂ, ಲೋಕಸಾಕ್ಷಿಯೂ, ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ನಾಶಗಳಿಗೆ ಕಾರಣನೂ, ವೇದಮಯನೂ, ತ್ರಿಗುಣಗಳಿಂದೊಪ್ಪುತ್ತಿರುವ ಸ್ವರೂಪವುಳ್ಳವನೂ, ಬ್ರಹ್ಮ ವಿಷ್ಣು ಮಹೇಶ್ವರರ ಅಂತರ್ಯಾಮಿಯಾಗಿರುವವನೂ ಆದ ನಿನಗೆ ನಮಸ್ಕಾರವು.

೮೭. ಸೂರ್ಯನು ಹೇಳುತ್ತಾನೆ:—ಮಹಾವ್ರತಧಾರಿಯಾದ ಅರ್ಜುನನೆ! ನೀನು ಮಾಡಿರುವ ಈ ಸ್ತೋತ್ರದಿಂದ ನಾನು ಸಂತುಷ್ಟನಾಗಿರುವೆನು. ಕಷ್ಟದಿಂದಲಾದರೂ ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯನ್ನು ನೆರವೇರಿಸಿ ಕೊಡುವೆನು.

೮೮. ನನ್ನ ದರ್ಶನವು ಎಂದಿಗೂ ನಿಷ್ಫಲವಾಗಲಾರದು. ವಿಶೇಷವಾಗಿ ಶೂರರಿಗೆ ಪ್ರಯತ್ನಪೂರ್ವಕವಾಗಿಯಾದರೂ ಕೊಡದಿರುವ ಪದಾರ್ಥವು ಯಾವುದೂ ಇಲ್ಲವಷ್ಟೆ.

೮೯. ಅರ್ಜುನನು ಹೇಳುತ್ತಾನೆ:—ಸಮಸ್ತ ವರಗಳಲ್ಲಿಯೂ ಉತ್ತಮೋತ್ತಮವೆನಿಸಿದ ಈ ವರವೊಂದೇ ನನಗಿರಲಿ. ನಾಥ! ದೇವದೇವನಾದ ನೀನು ಯಾವಾಗಲೂ ಇಲ್ಲಿ ಸನ್ನಿಹಿತನಾಗಿರಬೇಕು.

೯೦–೯೧. ಯಾವ ಮಾನವರು ಭಕ್ತಿಯಿಂದ ನಿನ್ನನ್ನು ನಮಸ್ಕರಿಸುವರೊ, ಮತ್ತು ಸ್ತೋತ್ರಮಾಡುವರೊ, ಅವರಿಗೆ ಐಶ್ವರ್ಯ, ಧಾನ್ಯ, ಪತ್ನೀಪುತ್ರರು, ಹಣವೇ ಮುಂತಾಗಿ ಅವರು ಮನಸ್ಸಿನಲ್ಲಿ ಅಪೇಕ್ಷಿಸುವ ಸಕಲವನ್ನೂ ನೀನು ಅವರಿಗೆ ಕೊಡಬೇಕು. ಇದೇ ನಾನು ಕೇಳುವ ವರವು. ಸನತ್ಕುಮಾರನು

ಮನಸಶ್ಚೇಪ್ಸಿತಂ ಸರ್ವಂ ದಾತವ್ಯಂ ಹಿ ವರೋ ಮಮ ।

ಸನತ್ಕುಮಾರ ಉವಾಚ :—

ಆದಿತ್ಯೋಽಸ್ಮೈ ವರಂ ದತ್ವಾ ಹ್ಯುವಾಚ ವಚನಂ ಶುಭಂ ॥ ೯೧ ॥
ಯಸ್ತ್ವತ್ಕೃತೇನ ಸ್ತೋತ್ರೇಣ ಮಾಂ ಸ್ತೋಷ್ಯತಿ ನರೋತ್ತಮಃ ।
ಶ್ರಿಯಾ ನ ವಿಚ್ಯುತಿಸ್ತಸ್ಯ ಭವೇದೇಷ ವರೋ ಮಮ ॥ ೯೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ನರಾದಿತ್ಯ ಮಾಹಾತ್ಮ್ಯೇಽರ್ಜುನ ಸ್ತುತಿವರ್ಣನಂ"ನಾಮ ದ್ವಾತ್ರಿಂಶೋಽಧ್ಯಾಯಃ

---

ಹೇಳುತ್ತಾನೆ:—ಸೂರ್ಯನು ಅರ್ಜುನನಿಗೆ ವರವನ್ನಿತ್ತು ಮತ್ತೆ ಮಂಗಳಕರವಾದ ಈ ಮಾತನ್ನಾಡಿದನು.

೯೨. ಎಲೈ ಅರ್ಜುನನೆ! ಯಾವ ಮನುಷ್ಯೋತ್ತಮನು ನೀನು ಹೇಳಿರುವ ಈ ಸ್ತೋತ್ರದಿಂದ ನನ್ನನ್ನು ಸ್ತುತಿಸುವನೊ, ಅವನ ಐಶ್ವರ್ಯಕ್ಕೆಂದಿಗೂ ಹಾನಿಯಾಗುವುದಿಲ್ಲ, ಇದೂ ನನ್ನ ವರವಾಗಿರಲಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ನರಾದಿತ್ಯಮಾಹಾತ್ಮ್ಯವರ್ಣನ"ವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ಕೇಶವಾದಿತ್ಯಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ನಾರಾಯಣೋಽಪಿ ಸಂಸ್ಥಾಪ್ಯ ಶಂಖಂ ದಧ್ಮೌ ಪ್ರಯತ್ನತಃ ।
ತುಷ್ಟಾವ ಪ್ರಯತೋ ಭೂತ್ವಾ ಸ್ತೋತ್ರೇಣಾನೇನ ಭಾಸ್ಕರಂ ॥ ೧ ॥

ಶ್ರೀ ಕೃಷ್ಣ ಉವಾಚ :—

ಆದಿತ್ಯಂ ಭಾಸ್ಕರಂ ಭಾನುಂ ರವಿಂ ಸೂರ್ಯಂ ದಿವಾಕರಂ ।
ದಿವಾಕರಂ ದಿವಾನಾಥಂ ತಪನಂ ತಪತಾಂ ವರಂ ॥ ೨ ॥
ವರೇಣ್ಯಂ ವರದಂ ವಿಷ್ಣುಮನಘಂ ವಾಸವಾನುಜಂ ।
ಬಲವೀರ್ಯಂ ಸಹಸ್ರಾಂಶುಂ ಸಹಸ್ರಕಿರಣದ್ಯುತಿಂ ॥ ೩ ॥
ಮಯೂಖಮಾಲಿನಂ ವಿಶ್ವಂ ಮಾರ್ತಂಡಂ ಚಂಡರೋಚಿಷಂ ।
ಸದಾಗತಿಂ ಸುಭಾಸ್ವಂತಂ ಸಪ್ತಸಪ್ತಿಂ ಸುಖೋದಯಂ ॥ ೪ ॥
ದೇವದೇವಮಹಿರ್ಬುಧ್ನ್ಯಂ ಧಾಮ್ನಾಂ ನಿಧಿಮನುತ್ತಮಂ ।
ತಪೋ ಬ್ರಹ್ಮಮಯಾಲೋಕಂ ಲೋಕಪಾಲಮಪಾಂಪತಿಂ ॥ ೫ ॥
ಜಗತ್ಪ್ರಬೋಧಜನಕಂ ಜಗದ್ಬೀಜಂ ಜಗತ್ಪ್ರಭುಂ ।
ಅರ್ಕಂ ನಿಃಶ್ರೇಯಸಪರಂ ಕಾರಣಂ ಶ್ರೇಯಸಾಂ ಪರಂ ॥ ೬ ॥

---

## ಕನ್ನಡದ ಅನುವಾದ

### ಕೇಶವಾದಿತ್ಯಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ :—ಶ್ರೀಮನ್ನಾರಾಯಣನೂ ಭಾಸ್ಕರನ ಮೂರ್ತಿಯೊಂದನ್ನು ಸ್ಥಾಪಿಸಿ ತನ್ನ ಶಂಖವನ್ನು ಧ್ವನಿಗೈದನು. ಅಲ್ಲದೆ ಆ ಸ್ವಾಮಿಯು ನಿಯತವ್ರತನಾಗಿ ಸೂರ್ಯನನ್ನು ಈ ಸ್ತೋತ್ರದಿಂದ ಸ್ತುತಿಸಿದನು.

೨–೧೩. ಶ್ರೀಕೃಷ್ಣನು ಹೇಳುತ್ತಾನೆ:—ಆದಿತ್ಯ, ಭಾಸ್ಕರ, ಭಾನು, ರವಿ, ಸೂರ್ಯ, ದಿವಾಕರ, ದಿವಾಕರ, ದಿವಾನಾಥ, ತಪನ, ತಪಶ್ಶ್ರೇಷ್ಠ, ವರೇಣ್ಯ, ವರದ, ವಿಷ್ಣು, ಅನಘ, ಉಪೇಂದ್ರ, ಬಲವೀರ್ಯ, ಸಹಸ್ರಾಂಶು, ಸಹಸ್ರಕಿರಣ ದ್ಯುತಿ, ರಶ್ಮಿಮಾಲಿ, ವಿಶ್ವ, ಮಾರ್ತಂಡ, ಚಂಡರೋಚಿ, ಸದಾಗತಿ, ಭಾಸ್ವಾನ್, ಸಪ್ತಸಪ್ತಿ, ಸುಖೋದಯ, ದೇವದೇವ, ಅಹಿರ್ಬುಧ್ನ್ಯ, ಧಾಮನಿಧಿ, ಅನುತ್ತಮ, ತಪೋಬ್ರಹ್ಮಮಯ, ಲೋಕಪಾಲಕ, ಅಪಾಂಪತಿ, ಜಗದುಜ್ಜೀವಕ, ಜಗದ್ಬೀಜ, ಜಗತ್ಪ್ರಭು, ಅರ್ಕ, ಮೋಕ್ಷಪರ, ಶ್ರೇಯಃಕಾರಣ, ಶ್ರೇಯಸ್ಕಾರಕ, ಇನ, ಪ್ರಭಾವಂತ, ಪುಣ್ಯ, ಪತಂಗ, ಪತಗೇಶ್ವರ, ವಾಂಛಿತ

ಇನಂ ಪ್ರಭಾವಿಣಂ ಪುಣ್ಯಂ ಪತಂಗಂ ಪತಗೇಶ್ವರಂ ।
ದಾತಾರಂ ವಾಂಛಿತಾರ್ಥಾನಾಂ ದೃಷ್ಟಾಽದೃಷ್ಟಫಲಪ್ರದಂ ॥ ೭ ॥
ಗೃಹಂ ಗೃಹಕರಂ ಹಂಸಂ ಹರಿದಶ್ವಂ ಹುತಾಶನಂ ।
ಮಂಗಲ್ಯಂ ಮಂಗಲಂ ಮೇಧ್ಯಂ ಧ್ರುವಂ ಧರ್ಮಪ್ರಬೋಧನಂ ॥ ೮ ॥
ಭವಸಂಭಾವಿತಂ ಭಾವಂ ಭೂತಭವ್ಯಭವಾತ್ಮಕಂ ।
ದುರ್ಗಮಂ ದುರ್ಗತಿಹರಂ ಹರನೇತ್ರಂ ತ್ರಯಿಾಮಯಂ ॥ ೯ ॥
ತ್ರೈಲೋಕ್ಯತಿಲಕಂ ತೀರ್ಥಂ ತರಣಿಂ ಸರ್ವತೋಮುಖಂ ।
ತೇಜೋರಾಶಿಂ ಸುನಿರ್ವಾಣಂ ವಿಶ್ವೇಶಂ ಧಾಮ ಸಾಂಪ್ರತಂ ॥ ೧೦ ॥
ಕಲ್ಪಂ ಕಲ್ಪಾಽನಲಂ ಕಾಲಂ ಕಾಲಚಕ್ರಂ ಕ್ರತುಪ್ರಿಯಂ ।
ಭೂಷಣಂ ಮರುತಂ ಸೂರ್ಯಂ ಮಣಿರತ್ನಂ ಸುಲೋಚನಂ ॥ ೧೧ ॥
ತ್ವಷ್ಟಾರಂ ವಿಷ್ಟರಂ ವಿಶ್ವಂ ಸದಸತ್ಕರ್ಮಸಾಕ್ಷಿಕಂ ।
ಸವಿತಾರಂ ಸಹಸ್ರಾಕ್ಷಂ ಪ್ರಜಾಪಾಲಮಧೋಕ್ಷಜಂ ॥ ೧೨ ॥
ಬ್ರಹ್ಮಾಣಂ ವಾಸರಾರಂಭೇ ರಕ್ತವರ್ಣಂ ಮಹಾದ್ಯುತಿಂ ।
ಶುಕ್ಲಂ ಮಧ್ಯಂದಿನೇ ರುದ್ರಂ ಶ್ಯಾಮಂ ವಿಷ್ಣುಂ ದಿನಕ್ಷಯೇ ॥ ೧೩ ॥
ನಾಮ್ನಾಮಷ್ಟಶತಂ ದಿವ್ಯಂ ವಿಷ್ಣುನಾ ಸಮುದಾಹೃತಂ ।
ಯ ಇದಂ ಪ್ರಯತೋ ಭೂತ್ವಾ ಪಠೇದ್ಭಕ್ತ್ಯಾ ಸಮಾಹಿತಃ ॥ ೧೪ ॥

---

ಪ್ರದ, ದೃಷ್ಟಾದೃಷ್ಟಫಲಪ್ರದ, ಗೃಹ, ಗೃಹಕರ, ಹಂಸ, ಹರಿದಶ್ವ, ಹುತಾಶನ, ಮಂಗಳಪ್ರದ, ಮಂಗಳ, ಮೇಧ್ಯ, ಧ್ರುವ, ಧರ್ಮಪ್ರಭೋಧಕ, ಭವಸಂಭಾವಿತ, ಭಾವ, ಭೂತಭವ್ಯಭವಿಷ್ಯಾತ್ಮಕ, ದುರ್ಗಮ, ದುರ್ಗತಿಹರ, ಹರನೇತ್ರ, ವೇದಮಯ, ತ್ರೈಲೋಕ್ಯತಿಲಕ, ತೀರ್ಥ, ತರಣಿ, ಸರ್ವತೋಮುಖ, ತೇಜೋರಾಶಿ, ಸುನಿರ್ವಾಣ, ವಿಶ್ವೇಶ್ವರ, ವಿಶ್ವಧಾಮ, ಕಲ್ಪ, ಕಲ್ಪಾನಲ, ಕಾಲ, ಕಾಲಚಕ್ರ, ಕ್ರತುಪ್ರಿಯ, ಭೂಷಣ, ಮರುತ್, ಸೂರ್ಯ, ಮಣಿರತ್ನ, ಸುಲೋಚನ, ತ್ವಷ್ಟೃ, ವಿಷ್ಟರ, ವಿಶ್ವ, ಸದಸತ್ಕರ್ಮಸಾಕ್ಷಿ, ಸವಿತೃ, ಸಹಸ್ರಾಕ್ಷ, ಪ್ರಜಾಪಾಲಕ, ಅಧೋಕ್ಷಜ, ದಿವಸೋದಯದಲ್ಲಿ ಕೆಂಪುಬಣ್ಣದವನೂ, ಮಹಾಪ್ರಕಾಶನೂ ಆದ ಬ್ರಹ್ಮದೇವನಾಗಿಯೂ, ಮಧ್ಯಾಹ್ನದಲ್ಲಿ ಬೆಳ್ಳಗಿರುವ ಮಹೇಶ್ವರನಾಗಿಯೂ, ಸಾಯಂಕಾಲದಲ್ಲಿ ನೀಲವರ್ಣವಿಶಿಷ್ಟನಾದ ಮಹಾವಿಷ್ಣುವಾಗಿಯೂ ಇರುವ ಓ ಭಾಸ್ಕರ, ನಿನಗೆ ನಮಸ್ಕಾರವು !

೧೪-೧೫. ಶ್ರೀಕೃಷ್ಣನೇ ಸ್ತೋತ್ರಮಾಡಿದ ಅಷ್ಟೋತ್ತರಶತನಾಮಾವಳಿಯ ಈ ದಿವ್ಯನಾಮಗಳನ್ನು ಯಾವನು ಪ್ರಯತ್ನಪೂರ್ವಕವಾಗಿಯೂ, ಭಕ್ತಿಯಿಂದಲೂ, ಸಾವಧಾನಚಿತ್ತದಿಂದಲೂ ಪಠಿಸುವನೋ, ಅವನಿಗೆಲ್ಲಿಯೂ ವಿಪತ್ತು

ನ ತಸ್ಯ ವಿಪದಃ ಕ್ವಾಽಪಿ ಸರ್ವತ್ರಾಽಪಿ ಶುಭಾ ಗತಿಃ ।
ಧನಧಾನ್ಯಸುಖಾಽವಾಪ್ತಿಃ ಪುತ್ರಲಾಭಶ್ಚ ಜಾಯತೇ ॥ ೧೫ ॥
ತೇಜಃ ಪ್ರಜ್ಞಾಂ ಪರಂ ಲಾಭಂ ಜ್ಞಾನಂ ಚ ಲಭತೇ ಗತಿಂ ।
ಏತತ್ಸ್ತುತ್ವಾ ಜಗನ್ನಾಥೋ ಜಗಾಮಾದರ್ಶನಂ ತತಃ ॥ ೧೬ ॥
ಕೇಶವಾರ್ಕಮುಖಂ ದೃಷ್ಟ್ವಾ ಪದ್ಮರಾಗಸಮಪ್ರಭಂ ।
ವಿಮುಕ್ತಃ ಸರ್ವಪಾಪೇಭ್ಯಃ ಸೂರ್ಯಲೋಕೇ ಮಹೀಯತೇ ॥ ೧೭ ॥
ಕೇಶವಾರ್ಕಸಮೀಪೇ ತು ರೇಣುತೀರ್ಥಂ ಪ್ರಚಕ್ಷತೇ ।
ತದ್ದೃಷ್ಟ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾಽತ್ರ ಸಂಶಯಃ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕೇಶವಾದಿತ್ಯ ಮಾಹಾತ್ಮ್ಯವರ್ಣನಂ" ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ಗಳು ಸಂಭವಿಸಲಾರವು, ಎಲ್ಲೆಲ್ಲಿಯೂ ಅವನ ಕೆಲಸಗಳು ಸುಗಮವಾಗುವುವು. ಅವನಿಗೆ ಧನಧಾನ್ಯ ಪುತ್ರಾದಿ ಸಕಲೈಶ್ವರ್ಯಗಳೂ ಸುಲಭವಾಗಿ ಕೈಗೂಡುವುವು.

೧೬. ಈ ಸ್ತೋತ್ರವನ್ನು ಪಠಿಸಿದವನು ಬ್ರಹ್ಮತೇಜಸ್ಸು, ಮೇಧಾಶಕ್ತಿ, ಮಹಾಲಾಭ, ಜ್ಞಾನ ಮತ್ತು ಸದ್ಗತಿ—ಇವುಗಳನ್ನು ಪಡೆಯುವನು. ಹೀಗೆ ಸ್ತೋತ್ರಮಾಡಿದ ಬಳಿಕ ಶ್ರೀಕೃಷ್ಣನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೧೭. ಪದ್ಮರಾಗಮಣಿಗೆ ಸಮಾನವಾದ ಕೇಶವಾರ್ಕನ ಮುಖವನ್ನು ನೋಡಿದವನು ಸಮಸ್ತ ಪಾತಕಗಳಿಂದಲೂ ಬಿಡುಗಡೆಯನ್ನು ಹೊಂದಿ ಸೂರ್ಯಲೋಕದಲ್ಲಿ ಮನ್ನಣೆಯನ್ನು ಪಡೆಯುವನು.

೧೮. ಈ ಕೇಶವಾದಿತ್ಯನ ಸಮೀಪದಲ್ಲಿಯೇ ರೇಣುತೀರ್ಥವಿರುವುದೆಂದು ಹೇಳುವರು. ಅದನ್ನು ನೋಡಿದ ಮಾತ್ರದಿಂದಲೇ ಮನುಷ್ಯನ ಸಕಲ ಪಾಪಗಳೂ ಕಳೆಯುವುದರಲ್ಲಿ ಸಂದೇಹವಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕೇಶವಾದಿತ್ಯಮಾಹಾತ್ಮ್ಯವರ್ಣನ"ವೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು

*

★

॥ ಶ್ರೀಃ ॥

# ಅಥ ಚತುಸ್ತ್ರಿಂಶೋಽಧ್ಯಾಯಃ

## ಶಕ್ತಿಭೇದತೀರ್ಥಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

**ತೀರ್ಥಮನ್ಯತ್ತಥಾ ವಕ್ಷ್ಯೇ ಶಕ್ತಿಭೇದಮಿತಿ ಸ್ಮೃತಂ ।**
**ಸ್ಕಂದಸ್ಯ ಚ ಜಟಾಭದ್ರಂ ಚಕ್ರೇ ಯತ್ರ ಪುರಾ ಶಿವಃ ॥ ೧ ॥**
**ತಾರಕಂ ಚ ತಥಾ ದೈತ್ಯಂ ಹತ್ವಾ ಯತ್ರ ಸುರದ್ವಿಷಂ ।**
**ಶಕ್ತಿಂ ಸ್ಕಂದಃ ಸ್ವಯಂ ಕ್ರುದ್ಧೋ ನಿಚಿಕ್ಷೇಪ ಮಹೀತಲೇ ॥ ೨ ॥**

ವ್ಯಾಸ ಉವಾಚ :—

**ಭಗವನ್ ಬ್ರೂಹಿ ಯತ್ನೇನ ಸಂಶಯೋ ಮೇ ಮಹಾಮುನೇ ।**
**ಕಥಂ ಸ್ಕಂದಃ ಸಮುತ್ಪನ್ನ ಏತದಿಚ್ಛಾಮಿ ವೇದಿತುಂ ॥ ೩ ॥**

ಸನತ್ಕುಮಾರ ಉವಾಚ :—

**ಪುರಾ ದೇವಾಸುರೇ ಯುದ್ಧೇ ನಿರ್ಜಿತಾ ದಾನವೈಃ ಸುರಾಃ ।**
**ದಿವಂ ತ್ಯಕ್ತ್ವಾ ದಿಶೋ ಯಾತಾಃ ಶಕ್ರಾದ್ಯಾ ಭಯವಿಹ್ವಲಾಃ ॥ ೪ ॥**

---

## ಕನ್ನಡದ ಅನುವಾದ

### ಶಕ್ತಿಭೇದತೀರ್ಥಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಇನ್ನು ಶಕ್ತಿಭೇದವೆಂದು ಪ್ರಖ್ಯಾತವಾದ ಮತ್ತೊಂದು ತೀರ್ಥವನ್ನು ವಿವರಿಸುವೆನು. ಆ ಸ್ಥಳದಲ್ಲಿಯೇ ಹಿಂದೆ ಪರಮಶಿವನು ಷಣ್ಮುಖಸ್ವಾಮಿಗೆ ಜಡೆಗಳ ಕಿರೀಟವನ್ನು ಅಲಂಕಾರವಾಡಿದನು.

೨. ಅಲ್ಲಿಯೇ ಷಣ್ಮುಖನೂ ಕೋಪಗೊಂಡು ದೇವದ್ವೇಷಿಯಾದ ತಾರಕಾಸುರನನ್ನು ಕೊಂದು ಶಕ್ತ್ಯಾಯುಧವನ್ನು ನೆಲಕ್ಕೆ ಬಿಸುಟನು.

೩. ವ್ಯಾಸನು ಹೇಳುತ್ತಾನೆ:—ಮಹರ್ಷಿಯೆ! ಈ ಕಥೆಯನ್ನು ವಿಸ್ತಾರವಾಗಿ ತಿಳಿಸು. ಇದರಲ್ಲಿ ನನಗೆ ಸಂಶಯವಾಗುತ್ತಿರುವುದು. ಸ್ಕಂದನು ಹೇಗೆ ಉದ್ಭವಿಸಿದನೆಂಬುದನ್ನು ತಿಳಿಯಲು ಕುತೂಹಲಿಯಾಗಿರುವೆನು.

೪. ಸನತ್ಕುಮಾರನು ಹೇಳುತ್ತಾನೆ:—ಹಿಂದೆ ದೇವತೆಗಳಿಗೂ ರಾಕ್ಷಸರಿಗೂ ಭಯಂಕರವಾದ ಯುದ್ಧವಾಯಿತು. ರಾಕ್ಷಸರು ದೇವತೆಗಳನ್ನು ಗೆಲ್ಲಲು ಇಂದ್ರನೇ ಮೊದಲಾದವರೆಲ್ಲರೂ ಭಯಕಾತರರಾಗಿ ಸ್ವರ್ಗವನ್ನು ತ್ಯಜಿಸಿ ದಿಕ್ಕುಪಾಲಾಗಿ ಚೆದರಿಹೋದರು.

ತತ್ರ ತು ದೇವರಾಜೇನ ತಪಸೋಗ್ರೇಣ ವೈ ಮುನೇ ।
ಆರಾಧಿತೋ ಮಹಾದೇವಸ್ತ್ರ್ಯಂಬಕಸ್ತ್ರಿಪುರಾಂತಕಃ ॥ ೫ ॥
ತತಸ್ತುಷ್ಟೋ ಮಹಾದೇವಃ ಶಕ್ರಸ್ಯಾಭಿಮುಖಃ ಸ್ಥಿತಃ ।
ಉವಾಚ ವಚನಂ ಶ್ಲಕ್ಷ್ಣಂ ವರಮಿಷ್ಟಂ ದದಾಮಿ ತೇ ॥ ೬ ॥

ಶಕ್ರ ಉವಾಚ :—

ಯದಿ ತುಷ್ಟೋಽಸಿ ಭಗವನ್ ಕಾರುಣ್ಯಾನ್ಮಮ ಶಂಕರ ।
ಮಹಾಸೇನಾಪತಿಂ ದೇವ ಪ್ರಯಚ್ಛ ಪರಮೇಶ್ವರ ॥ ೭ ॥

ಹರ ಉವಾಚ :—

ಉತ್ಪಾದಯಾಮಿ ದೇವೇಂದ್ರ ಸ್ವವೀರ್ಯಾದೂರ್ಜಿತಂ ಸುತಂ ।
ಸೇನಾನ್ಯಂ ಚ ಮಹಾಸೇನಂ ಸುರಾಣಾಂ ಭಯಹಾರಕಂ ॥ ೮ ॥

ಸನತ್ಕುಮಾರ ಉವಾಚ :—

ಇತ್ಯುಕ್ತ್ವಾಽಂತರ್ದಧೇ ದೇವಃ ಸರ್ವಭೂತಪತಿರ್ಹರಃ ।
ಸುತಚಿಂತಾಪರೋ ದೇವೋ ಜಗಾಮ ಚ ಹಿಮಾಲಯಂ ॥ ೯ ॥

---

೫. ಆಗ ದೇವರಾಜನಾದ ಮಹೇಂದ್ರನು ಉಗ್ರವಾದ ತಪಸ್ಸನ್ನು ಕೈಕೊಂಡು ತ್ರಿನೇತ್ರನೂ, ತ್ರಿಪುರಧ್ವಂಸಕರನೂ ಆದ ಮಹಾದೇವನನ್ನು ಆರಾಧನೆಮಾಡುತ್ತಿದ್ದನು.

೬. ಅದರಿಂದ ಸಂತುಷ್ಟನಾದ ಮಹಾದೇವನು ಇಂದ್ರನ ಇದಿರಿನಲ್ಲಿ ಬಂದು ನಿಂತನು. ಮೃದುಮಧುರವಾದ ಧ್ವನಿಯಿಂದ "ನಿನಗೆ ಬೇಕಾದ ವರವನ್ನು ನೀಡುವೆನು" ಎಂದು ಹೇಳಿದನು.

೭. ಇಂದ್ರನು ಹೇಳುತ್ತಾನೆ:—ಮಹದೈಶ್ವರ್ಯಭರಿತನೂ, ಸುಖಪ್ರದನೂ ಆದ ಪರಮೇಶ್ವರನೆ! ನನ್ನಲ್ಲಿ ನೀನು ಸಂತುಷ್ಟನಾಗಿ ಕರುಣೆಯುಳ್ಳವನಾಗಿದ್ದರೆ ನಮಗೆ ಸರ್ವೋತ್ತಮನಾದ ಒಬ್ಬ ಸೇನಾನಾಯಕನನ್ನು ದಯೆಪಾಲಿಸುವವನಾಗು.

೮. ಈಶ್ವರನು ಹೇಳುತ್ತಾನೆ:—ದೇವೇಂದ್ರ! ಸೇನಾನಾಯಕನಾಗಿ ನಿಂತು ಮಹಾಸೇನನೆನಿಸಿ ದೇವತೆಗಳ ಭಯವನ್ನು ಪರಿಹರಿಸುವಂತಹ ಮಗನನ್ನು ನಾನೇ ನನ್ನ ವೀರ್ಯದಿಂದುಂಟುಮಾಡುವೆನು. ಅವನು ಮಹಾ ಪರಾಕ್ರಮಿಯಾಗುವನು.

೯. ಸನತ್ಕುಮಾರನು ಹೇಳುತ್ತಾನೆ:—ಇಂತೆಂದು ವರವನ್ನಿತ್ತು ಸಕಲ ಪ್ರಮಥರಿಗೂ ಒಡೆಯನಾದ ಹರನು ಅಂತರ್ಹಿತನಾದನು. ಈ ಆಲೋಚನೆಯಲ್ಲಿಯೇ ಆ ಸ್ವಾಮಿಯು ಹಿಮವತ್ಪರ್ವತದ ಕಡೆಗೆ ನಡೆದನು.

**ದೇವದಾರುವನೇ ತಸ್ಥೌ ಜ್ಞಾನಧ್ಯಾನಪರೋಽಭವತ್ ।**
**ಬ್ರಹ್ಮಾದಯೋಽಪಿ ಯಂ ದೇವಂ ಯೋಗಿನೋ ಧ್ಯಾನಚಿಂತಕಾಃ ।**
**ಧ್ಯಾಯಂತಿ ನಿಯತಾತ್ಮಾನಃ ಪ್ರಾಣಾಯಾಮಪರಾ ಮುನೇ ॥ ೧೦ ॥**
**ಲಿಂಗಮೂರ್ತಿಶ್ಚ ಯೋ ನಿತ್ಯಂ ಪೂಜ್ಯತೇ ಸರ್ವಜಂತುಭಿಃ ।**
**ಸ ಧ್ಯಾಯತಿ ಕಿಮರ್ಥಂ ತನ್ನ ವಿದ್ಮಃ ಪರಮಾರ್ಥಿನಃ ॥ ೧೧ ॥**
**ಏವಂ ಧ್ಯಾನಪರೇ ದೇವೇ ದೇವೀ ಹಿಮವತೋ ಗೃಹೇ ।**
**ಮಧ್ಯೇವಯಸಿ ವರ್ತಂತೀ ಯಾಽಽಸೀದ್ದಾಕ್ಷಾಯಣೀ ಸತೀ ॥ ೧೨ ॥**
**ಪಿತುರ್ಗೇಹೇ ನಿಜೋ ದೇಹೋ ಯಯಾ ಯೋಗಾದ್ವಿಸರ್ಜಿತಃ ।**
**ನಿಮಂತ್ರಿತೋ ನ ಮೇ ಭರ್ತಾ ಇತಿ ಕೋಪಂ ಚಕಾರ ಯಾ ॥ ೧೩ ॥**
**ತಾಂ ದೇವೀಂ ಹಿಮವಾನ್ ಪೂರ್ವಂ ಶ್ರುತ್ವಾ ದೇವರ್ಷಿನಾರದಾತ್ ।**
**ಭವಭಾರ್ಯಾ ಭವಿತ್ರೀತಿ ನಾಽನ್ಯಂ ವರಮಚಿಂತಯತ್ ॥ ೧೪ ॥**
**ತಪಸ್ಯತಿ ಚ ರುದ್ರಾಯ ಸಾ ಸಖೀಭ್ಯಾಂ ಸಮನ್ವಿತಾ ।**
**ಕಥಂ ಹಿ ಶಂಕರೋ ದೇವೋ ಮಮ ಭರ್ತಾ ಭವಿಷ್ಯತಿ ॥ ೧೫ ॥**

---

೧೦–೧೧. ದೇವದಾರುವೃಕ್ಷಗಳ ವನದಲ್ಲಿ ನೆಲಸಿ ತಪೋಧ್ಯಾನಗಳಲ್ಲಿ ನಿರತನಾಗಿದ್ದನು. ಮುನಿವರ್ಯನೆ! ಬ್ರಹ್ಮಾದಿದೇವತೆಗಳೂ, ಮಹಾಯೋಗಿಗಳೂ ಧ್ಯಾನಾಸಕ್ತರಾಗಿ ಸಂಯಮದಿಂದ ಪ್ರಾಣಾಯಾಮಗಳನ್ನು ಮಾಡುತ್ತ ಆ ದೇವನನ್ನು ಧ್ಯಾನಿಸುತ್ತಿರುವರಲ್ಲವೆ. ಯಾವನು ಲಿಂಗರೂಪದಿಂದ ಸಕಲ ಜೀವರ ಪೂಜೆಗೂ ಅರ್ಹನಾಗಿರುವನೊ, ಪರಮಾರ್ಥಸ್ವರೂಪನಾದ ಆತನು ಯಾವುದನ್ನು ಕುರಿತು ಧ್ಯಾನಿಸುತ್ತಿರುವನೆಂಬುದನ್ನು ನಾವರಿಯೆವು.

೧೨. ಇಂತು ಮಹೇಶ್ವರನು ಧ್ಯಾನಪರನಾಗಿರಲು ಪಾರ್ವತೀದೇವಿಯು ಹಿಮವಂತನ ಮನೆಯಲ್ಲಿ ಜನಿಸಿ ವಿವಾಹಯೋಗ್ಯವಾದ ವಯಸ್ಸುಳ್ಳವಳಾದಳು. ಆಕೆಯು ಪೂರ್ವಜನ್ಮದಲ್ಲಿ ದಕ್ಷಪ್ರಜೇಶ್ವರನ ಮಗಳಾಗಿ ಸತಿಯೆಂದು ಕರೆಯಲ್ಪಡುತ್ತಿದ್ದಳು.

೧೩. ಆಕೆಯು ತನ್ನ ಪತಿಯನ್ನು ಯಜ್ಞಕ್ಕೆ ಕರೆಯಲಿಲ್ಲವೆಂಬ ಕೋಪದಿಂದ ತಂದೆಯ ಮನೆಯಲ್ಲಿಯೇ ಯೋಗಾಭ್ಯಾಸಕ್ರಮದಿಂದ ತನ್ನ ದೇಹವನ್ನು ತ್ಯಜಿಸಿದ್ದಳು.

೧೪. ಆ ದೇವಿಯೇ ತನ್ನ ಮಗಳೆಂದೂ ಆಕೆಗೆ ಮಹೇಶ್ವರನೇ ಪತಿಯಾಗುವನೆಂದೂ ನಾರದಮುನಿಯ ವಾಕ್ಯವನ್ನು ಮೊದಲೇ ಕೇಳಿದ್ದ ಹಿಮಗಿರಿರಾಜನು ಬೇರೆ ವರನನ್ನು ಕುರಿತು ಯೋಚಿಸಲಿಲ್ಲ.

೧೫. ಆಕೆಯೂ ತನ್ನ ಸಖಿಯರೊಡಗೂಡಿ "ದೇವದೇವನಾದ ಶಂಕರನು ನನಗೆ ಹೇಗೆ ಪತಿಯಾದಾನು?" ಎಂದೇ ಮಹೇಶ್ವರನನ್ನು ಕುರಿತು ತಪಸ್ಸನ್ನು ಮಾಡುತ್ತಿದ್ದಳು.

ಯಾವದೇವಂಗತೋ ದೇವೋ ದೇವೀ ಹಿಮವತಃ ಸುತಾ ।
ತತಃ ಸಮಾಗತಾ ದೇವಾಃ ಕೃತ್ವಾಽಗ್ರೇ ಬಲಸೂದನಂ ॥ ೧೬ ॥
ಜಗ್ಮುರ್ಬ್ರಹ್ಮಸದಃ ಪುಣ್ಯಂ ದ್ರಷ್ಟುಂ ಬ್ರಹ್ಮಾಣಮವ್ಯಯಂ ।
ತೇ ಸುರಾಸ್ತತ್ಸ್ತುತಿಂ ಕೃತ್ವಾ ವಾಕ್ಯಮೇತತ್ಸಮೈರಯನ್ ॥ ೧೭ ॥
ಶರಣಂ ಭವ ದೇವಾನಾಂ ದಾನವೈರ್ವಿಜಿತಾತ್ಮನಾಂ ।
ತತೋಽವೋಚತ್ಸುರಾನ್ ಬ್ರಹ್ಮಾ ಜ್ಞಾತಂ ಕಾರ್ಯಂ ಸಮಾಹಿತಂ ॥೧೮॥
ನೈತಚ್ಛಂಭೋರ್ವಿನಾ ವೀರ್ಯಾತ್ಕಾರ್ಯಸಿದ್ಧಿರ್ಭವಿಷ್ಯತಿ ।
ತಥಾ ಯತಧ್ವಂ ದೇವೇಶಂ ಯಥಾ ವಾಂಛತಿ ಪಾರ್ವತೀಂ ॥ ೧೯ ॥
ಇತ್ಯುಕ್ತ್ವಾಽಂತರ್ದಧೇ ಬ್ರಹ್ಮಾ ಸ್ವಪ್ನೇ ಲಬ್ಧಂ ಧನಂ ಯಥಾ ।
ತತೋ ಮೇರುಂ ಸಮಾಗತ್ಯ ಪುನರ್ಮಂತ್ರಂ ಪ್ರಚಕ್ರಿರೇ ॥ ೨೦ ॥
ತೇಷಾಮಾಹೇದೃಶಂ ಶಕ್ರಸ್ತುಷ್ಟಃ ಶಂಭುಃ ಪುರಾ ಮಮ ।
ಪ್ರತಿಪನ್ನಂ ಚ ದೇವೇನ ಸ್ವಾಂಗಾತ್ಸೇನಾಪತಿಂ ಪ್ರತಿ ॥ ೨೧ ॥

---

೧೬. ಇಂತು ಮಹಾದೇವನೂ, ಹಿಮವತ್ಪುತ್ರಿಯೂ ತಪಸ್ಸಿನಲ್ಲಿ ನಿರತರಾಗಿರಲು ದೇವತೆಗಳೆಲ್ಲರೂ ಗುಂಪುಗೂಡಿ ಮಹೇಂದ್ರನನ್ನು ಮುಂದುಮಾಡಿಕೊಂಡು ಹೊರಟರು.

೧೭. ಅವರೆಲ್ಲರೂ ನಾಶರಹಿತನಾದ ಚತುರ್ಮುಖನನ್ನು ನೋಡಲು ಸತ್ಯಲೋಕಕ್ಕೆ ಹೋಗಿ ಆತನನ್ನು ಬಹುವಿಧವಾಗಿ ಸ್ತೋತ್ರಮಾಡಿ ಇಂತೆಂದು ಬಿನ್ನವಿಸತೊಡಗಿದರು.

೧೮. "ಎಲೈ ಬ್ರಹ್ಮನೇ! ರಾಕ್ಷಸರಿಂದ ಜಯಿಸಲ್ಪಟ್ಟ ದೇವತೆಗಳಿಗೆ ಇಂದು ನೀನು ಶರಣ್ಯನಾಗಬೇಕು." ಆಗ ಬ್ರಹ್ಮದೇವನು ದೇವತೆಗಳನ್ನು ಕುರಿತು ಹೇಳಿದನು. "ನೀವು ಬಂದ ಕಾರ್ಯವನ್ನು ಸಮಗ್ರವಾಗಿ ತಿಳಿದೆನು.

೧೯. ನಮ್ಮೆಲ್ಲರ ಕಾರ್ಯವನ್ನು ಸಾಧಿಸಲು ಬೇಕಾದ ದೇಹವು ಪರಮೇಶ್ವರನ ವೀರ್ಯದಿಂದಲ್ಲದೆ ಉಂಟಾಗಲಾರದು. ಆದುದರಿಂದ ಆತನು ಪಾರ್ವತಿಯಲ್ಲಿ ಅಭಿಲಾಷೆಯುಳ್ಳವನಾಗುವುದಕ್ಕೆ ಬೇಕಾದ ಪ್ರಯತ್ನವನ್ನು ಮಾಡಿರಿ."

೨೦. ಇಂತೆಂದು ನುಡಿದು ಆ ಬ್ರಹ್ಮದೇವನು ಸ್ವಪ್ನದಲ್ಲಿ ಕಂಡ ಧನದಂತೆ ನಿಮಿಷಮಾತ್ರದಲ್ಲಿಯೇ ಅದೃಶ್ಯನಾದನು. ಆಗ ದೇವತೆಗಳು ಮೇರುಪರ್ವತಕ್ಕೆ ಬಂದು ಪುನಃ ಮಂತ್ರಾಲೋಚನೆಯನ್ನು ಮಾಡಿದರು.

೨೧. ಆಗ ಮಹೇಂದ್ರನು ಅವರಿಗಿಂತೆಂದನು. "ಪೂರ್ವದಲ್ಲಿ ಮಹೇಶ್ವರನು ನನ್ನ ತಪಸ್ಸಿನಿಂದ ಸಂತುಷ್ಟನಾಗಿ ತನ್ನ ಶರೀರದಿಂದಲೇ ನಮಗೆ ಸೇನಾಪತಿಯೊಬ್ಬನುದಯಿಸುವನೆಂದು ಹೇಳಿದ್ದನು.

ತಸ್ಮಾದೇವಂಗತೇ ಕಾರ್ಯೇ ಕಾರಣಂ ಮಕರಧ್ವಜಃ ॥ ೨೨ ॥
ಇತಿ ಸಂಚಿಂತ್ಯ ದೇವೇಶಃ ಕಾಮಮಾಹೂಯ ಸತ್ವರಂ ।
ಉವಾಚ ವಚನಂ ಹೃದ್ಯಂ ದೇವಾನಾಮನುಕಂಪಯಾ ॥ ೨೩ ॥
ಯಥಾ ದೇವೋ ಭಜೇದ್ದೇವೀಂ ತಥಾ ಕಾಮ ವಿಧೀಯತಾಂ ।
ಕಾರಣಂ ಮಹದೇತದ್ಧಿ ದೇವಾನಾಂ ಸಮುಪಸ್ಥಿತಂ ॥ ೨೪ ॥
ಕಾಮೋ ವಾಕ್ಯಂ ಹರೇಃ ಶ್ರುತ್ವಾ ಪ್ರಹಸ್ಯೇದಮುವಾಚ ಹ ।
ಕರಿಷ್ಯೇ ಸರ್ವಮೇವಂ ಹಿ ಸಖಾ ಮೇ ಚೇದ್ಭವೇನ್ಮಧುಃ ॥ ೨೫ ॥
ತಸ್ಮಿನ್ ಕ್ಷಣೇಽಥ ಶಕ್ರೇಣ ಕಾಮವಾಕ್ಯಾದನಂತರಂ ।
ಸಮಾದಿಷ್ಟೋ ಮಧುಃ ಕ್ಷಿಪ್ರಂ ಕಾಮಸ್ಯಾಽನುಚರೋ ಭವ ॥ ೨೬ ॥
ಲಬ್ಧ್ವಾ ಕಾಮೋ ಮಧುಂ ಮಿತ್ರಂ ಪ್ರತಸ್ಥೇ ಭಾರ್ಯಯಾ ಸಹ ।
ಕೃತ್ವಾ ಸಜ್ಯಂ ಧನುರ್ಬಾಣಂ ಪೌಷ್ಪಂ ಪಾಣೌ ಸಮಾಹಿತಃ ॥ ೨೭ ॥
ಯತ್ರ ದೇವಾಧಿದೇವೇಶೋ ದೇವದಾರುವನೇ ಸ್ಥಿತಃ ।
ನಂದೀಶ್ವರಃ ಪ್ರತೀಹಾರಃ ಕೃತಧ್ಯಾನೋಽವತಿಷ್ಠತಿ ॥ ೨೮ ॥

---

೨೨. ಆದುದರಿಂದ ನಮ್ಮ ಕೆಲಸವು ಈ ಪರಿಸ್ಥಿತಿಗೆ ಬಂದಿರುವಾಗ ಮನ್ಮಥನೇ ನಮ್ಮ ಮುಂದಿನ ಅಭ್ಯುದಯಕ್ಕೆ ಕಾರಣನಾಗಬೇಕು.''

೨೩. ಇಂತೆಂದು ಮನಸ್ಸಿನಲ್ಲಿ ಯೋಚಿಸಿ ಮಹೇಂದ್ರನು ದೇವತೆಗಳಲ್ಲಿರುವ ಅನುಕಂಪದಿಂದ ಮನ್ಮಥನನ್ನು ಬೇಗ ಕರೆಸಿ ಸವಿನುಡಿಗಳಿಂದ ಆತನಿಗೆ ಹೇಳಲುಪಕ್ರಮಿಸಿದನು.

೨೪. ''ಕಾಮದೇವ! ಮಹಾದೇವನು ಪಾರ್ವತಿಯನ್ನು ಸೇರುವುದಕ್ಕೆ ಉಪಾಯವನ್ನು ಮಾಡಬೇಕು. ಈಗ ದೇವತೆಗಳಿಗೆ ಮಹತ್ತರವಾದ ಕಷ್ಟ ಸಮಯವೊದಗಿರುವುದಷ್ಟೆ.''

೨೫. ಮನ್ಮಥನು ಇಂದ್ರನ ಈ ಮಾತನ್ನು ಕೇಳಿ ಗಟ್ಟಿಯಾಗಿ ನಗುತ್ತ ''ನನ್ನ ಕಾರ್ಯದಲ್ಲಿ ವಸಂತನು ಸಹಾಯಕನಾಗುವನಾದರೆ ನಿಮ್ಮ ಕಾರ್ಯವನ್ನೆಲ್ಲ ಸಾಂಗವಾಗಿ ಮಾಡಿಕೊಡುವೆನು'' ಎಂದನು.

೨೬. ಮನ್ಮಥನು ಈ ಮಾತನ್ನು ಹೇಳಿ ಮುಗಿಸಿದ ಕ್ಷಣದಲ್ಲಿಯೇ ಮಹೇಂದ್ರನು, ''ನೀನು ಕಾಮನಿಗೆ ಈ ಕಾರ್ಯದಲ್ಲಿ ಅನುಚರನಾಗು'' ಎಂದು ವಸಂತನಿಗೆ ಆಜ್ಞಾಪಿಸಿದನು.

೨೭. ಇಂತು ವಸಂತನ ಸಹಾಯವನ್ನು ಪಡೆದು ಭಾರ್ಯಾದ್ವಿತೀಯನಾಗಿ ಆ ಮನ್ಮಥನು ಧನುಸ್ಸನ್ನೂ ಪುಷ್ಪಬಾಣಗಳನ್ನೂ ಸಜ್ಜುಗೊಳಿಸಿಕೊಂಡು ಸಾವಧಾನಮನಸ್ಸಿನಿಂದ ಹೊರಟನು.

೨೮. ದೇವತೆಗಳಿಗೆ ಉತ್ತಮದೈವನೆನಿಸಿದ ಮಹೇಶ್ವರನು ನೆಲಸಿದ್ದ

ಚೂತವೃಕ್ಷಾಶ್ರಿತಃ ಕಾಮೋ ಯಾವದ್ಬಾಣಂ ಸುಮೋಹನಂ ।
ಸಂದಧಾತ್ಯಂತರೇ ಚಾಽಸ್ಮಿನ್ ದೇವೀ ಪ್ರಾಪ ಭವಾಶ್ರಯಂ ॥ ೨೯ ॥
ತ್ಯಕ್ತಧ್ಯಾನವ್ರತೋ ದೇವೋ ಹೃಷ್ಟಶ್ಚಾಹ್ಲಾದಚೇತನಃ ।
ತತೋ ವಿಲೋಕಯಾಮಾಸ ದಿಶಃ ಸರ್ವಾಃ ಪ್ರಯತ್ನತಃ ॥ ೩೦ ॥
ಚೂತವೃಕ್ಷಾಶ್ರಿತಂ ಕಾಮಮಪಶ್ಯಚ್ಚ ರುಷಾನ್ವಿತಃ ।
ಭಸ್ಮೀಕೃತಸ್ತೃತೀಯಾಕ್ಷ್ಣಾ ವಹ್ನಿಜ್ವಾಲಾವತಾ ತತಃ ॥ ೩೧ ॥
ದೇವೋಽಪ್ಯಂತರ್ದಧೇ ತಸ್ಮಾತ್ಸ್ಥಾನಾದಾಶು ಗಣೈಃ ಸಹ ।
ಪಾರ್ವತೀ ವಿಸ್ಮಿತಾ ಸಾಧ್ವೀ ಲಜ್ಜಿತಾ ದುಃಖಿತಾಽಭವತ್ ॥ ೩೨ ॥
ಹಿಮವಾಂಸ್ತಾಂ ಸಮುತ್ಥಾಪ್ಯ ನಿನಾಯಾಶು ನಿಜಂ ಗೃಹಂ ।
ಗತೇ ದೇವೇ ಚ ದೇವ್ಯಾಂ ಚ ಕಾಮಪತ್ನೀ ಸುದುಃಖಿತಾ ॥ ೩೩ ॥
ಭಸ್ಮೀಕೃತಂ ಪತಿಂ ದೃಷ್ಟ್ವಾ ವಿಲಲಾಪ ಸುದುಃಖಿತಾ ।
ದೃಷ್ಟ್ವಾ ರತಿಂ ಸುದುಃಖಾರ್ತಾಂ ವಾಗುವಾಚಾಽಶರೀರಿಣೀ ॥ ೩೪ ॥

---

ದೇವದಾರುವನಕ್ಕೆ ಬಂದನು. ಅಲ್ಲಿ ನಂದೀಶ್ವರನು ದ್ವಾರಪಾಲಕನಾಗಿ ಧ್ಯಾನಾಸಕ್ತನಾಗಿ ನಿಂತಿದ್ದನು.

೨೯. ಮನ್ಮಥನು ಒಂದು ಮಾವಿನಮರವನ್ನಾಶ್ರಯಿಸಿ ಲೋಕಮೋಹಕವಾದ ತನ್ನ ಬಾಣವನ್ನು ಬಿಡಲು ಸಂಧಾನಮಾಡುತ್ತಿರುವ ಸಮಯಕ್ಕೆ ಸರಿಯಾಗಿ ಪಾರ್ವತಿಯೂ ಪರಮೇಶ್ವರನ ಆಶ್ರಮವನ್ನು ಪ್ರವೇಶಿಸಿದಳು.

೩೦. ಮಹಾದೇವನು ತನ್ನ ಧ್ಯಾನವನ್ನು ಕೊನೆಗೊಳಿಸಿ ಹರ್ಷದಿಂದಲೂ, ಸಂಭ್ರಮಗೊಂಡ ಮನಸ್ಸಿನಿಂದಲೂ ಒಂದುಸಲ ಎಲ್ಲ ದಿಕ್ಕುಗಳನ್ನೂ ನೋಡಿದನು.

೩೧. ಆಗ ಮಾವಿನ ಮರವನ್ನಾಶ್ರಯಿಸಿದ್ದ ಮನ್ಮಥನನ್ನು ಕಂಡು ಕೋಪದಿಂದ ಕೂಡಿದವನಾಗಿ ತನ್ನ ಮೂರನೆಯ ಕಣ್ಣಿನಿಂದ ಬೆಂಕಿಯ ಜ್ವಾಲೆಗಳನ್ನುಗುಳಿ ಆತನನ್ನು ಸುಟ್ಟು ಬೂದಿಮಾಡಿದನು.

೩೨. ತರುವಾಯ ತನ್ನ ಗಣಗಳೊಡನೆ ಶೀಘ್ರವಾಗಿ ಆ ಪ್ರದೇಶದಿಂದ ಅಂತರ್ಧಾನವನ್ನು ಹೊಂದಿದನು. ಆಗ ಸಾಧ್ವಿಯಾದ ಪಾರ್ವತಿಯಾದರೊ ಏಕಕಾಲದಲ್ಲಿಯೆ ವಿಸ್ಮಯವನ್ನೂ, ಲಜ್ಜೆಯನ್ನೂ, ದುಃಖವನ್ನೂ ತಾಳಿದಳು.

೩೩. ಹಿಮವಂತನು ಬೇಗ ಅವಳನ್ನೆಬ್ಬಿಸಿ ತನ್ನ ಮನೆಗೆ ಕರೆದೊಯ್ದನು. ಮಹಾದೇವನೂ ಗಿರಿಜೆಯೂ ಅಲ್ಲಿಂದ ಹೊರಟುಹೋಗಲು ಮನ್ಮಥನ ಪತ್ನಿಯಾದ ರತಿಯು ಬಹುವಾಗಿ ದುಃಖಗೊಂಡಳು.

೩೪. ದೇಹವನ್ನು ಕಳೆದುಕೊಂಡ ಪತಿಯನ್ನು ಕುರಿತು ಆಕೆಯು ಬಹುವಾಗಿ ಪ್ರಲಾಪಮಾಡುತ್ತಿದ್ದಳು. ದುಃಖಾರ್ತಳಾದ ರತಿಗೆ ಆಗ ಅಶರೀರವಾಣಿಯಿಂತೆಂದಿತು.

**ಆಶ್ವಾಸಯಂತೀಂ ಕೃಪಯಾ ಸಖೀಮಿವ ಸುದುಃಖಿತಾಂ ।**
**ಮಾ ರೋದೀಸ್ತ್ವಂ ಶುಭಾಪಾಂಗಿ ತವ ಭರ್ತಾ ಕರಿಷ್ಯತಿ ॥ ೩೫ ॥**
**ಸರ್ವಕಾರ್ಯಾಣ್ಯನಂಗೋಽಪಿ ಮಿತ್ರಕಾರ್ಯಂ ವಿಧಾನತಃ ।**
**ಯದಾ ಚಾಽಯಂ ಮಹಾದೇವಃ ಪರಿಣೇಷ್ಯತಿ ಪಾರ್ವತೀಂ ॥ ೩೬ ॥**
**ತತಃ ಶಂಭೋರನುಧ್ಯಾನಾದುತ್ಥಾಸ್ಯತಿ ನ ಸಂಶಯಃ ।**
**ದ್ವಾಪರಾಂತೇ ಯದಾ ಕೃಷ್ಣೋ ದ್ವಾರಕಾಯಾಂ ನಿವತ್ಸ್ಯತಿ ॥ ೩೭ ॥**
**ತತ್ಪುತ್ರೋ ಭವಿತಾ ದೇಹೀ ಪ್ರದ್ಯುಮ್ನೋ ನಾಮ ತೇ ಪತಿಃ ।**
**ಇತ್ಯುಕ್ತ್ವಾ ಸಾಽಜಹಾಚ್ಛೋಕಮಾಕಾಶಾಜ್ಞಾತಯಾ ಗಿರಾ ॥ ೩೮ ॥**
**ಅಚಿಂತಯತ್ತದಾ ದೇವೀ ಉಮಾಽಪಿ ಹಿಮವದ್ಗೃಹೇ ।**
**ಕಾಮಸ್ಯ ದಹನಂ ತೇಜಃ ಶಂಭೋರ್ಯತ್ತದನುತ್ತಮಂ ॥ ೩೯ ॥**
**ಕಥಂ ಭರ್ತಾ ಭವೇದ್ದೇವಃ ಕಾಮಸ್ಯೋತ್ಥಾಪನಂ ಕಥಂ ।**
**ನೈತತ್ತಪೋ ವಿನಾ ಕಾರ್ಯಂ ಕ್ವಚಿತ್ಕಸ್ಯಾಽಪಿ ಸಿದ್ಧ್ಯತಿ ॥ ೪೦ ॥**
**ಏವಂ ಸಂಚಿಂತಯಿತ್ವಾಽಥ ಸಖೀಭಿಃ ಸಹಿತಾ ತತಃ ।**
**ತಪಶ್ಚಕಾರ ಸುಮಹತ್ಪಿತ್ರಾದೇಶಾಚ್ಛುಭವ್ರತಾ ॥ ೪೧ ॥**

---

೩೫–೩೮. ಬಹಳ ದುಃಖದಲ್ಲಿರುವ ಸಖಿಯನ್ನು ಸಮಾಧಾನಗೊಳಿಸುವಂತೆ ಆ ವಾಣಿಯು ಹೇಳಿತು. "ಮಂಗಳಾಂಗಿಯೆ! ನೀನು ಅಳಬೇಡ. ದೇಹವಿಲ್ಲದವನಾದರೂ ನಿನ್ನ ಪತಿಯು ಸಕಲಕಾರ್ಯಗಳನ್ನೂ ಮುನ್ನಿನಂತೆಯೇ ಮಾಡುತ್ತಿರುವನು. ಮಿತ್ರರಾದ ದೇವತೆಗಳ ಕಾರ್ಯವನ್ನೂ ಆಗಮಾಡುವನು. ಈ ಮಹಾದೇವನು ಪಾರ್ವತೀದೇವಿಯನ್ನು ಯಾವಾಗ ಮದುವೆಯಾಗುವನೊ, ಆಗ ಮಹೇಶ್ವರನ ಸಂಕಲ್ಪದಿಂದ ಪುನಃ ಎದ್ದು ಬರುವನು. ಸಂದೇಹವಿಲ್ಲ. ದ್ವಾಪರಯುಗದ ಅಂತ್ಯಭಾಗದಲ್ಲಿ ಶ್ರೀಮನ್ನಾರಾಯಣನು ಕೃಷ್ಣನಾಗಿ ಅವತರಿಸಿ ದ್ವಾರಕೆಯಲ್ಲಿ ವಾಸಮಾಡುವನು. ನಿನ್ನ ಪತಿಯು ಆತನಿಗೆ ಮಗನಾಗಿ ಜನಿಸಿ ದೇಹಸಹಿತನಾಗಿ ಪ್ರದ್ಯುಮ್ನನೆಂಬ ಹೆಸರುಳ್ಳವನಾಗುವನು." ಇಂತೆಂದು ಆಕಾಶಮಧ್ಯದಿಂದ ಹೊರಟ ವಾಣಿಯನ್ನು ಕೇಳಿ ರತೀದೇವಿಯು ತನ್ನ ಶೋಕವನ್ನು ತ್ಯಜಿಸಿದಳು.

೩೯. ಉಮಾದೇವಿಯೂ ಹಿಮವಂತನ ಮನೆಯಲ್ಲಿ ಕುಳಿತು ಮನ್ಮಥನು ಸುಟ್ಟುಹೋದುದನ್ನೂ ಪರಮೇಶ್ವರನ ಅಪ್ರಧೃಷ್ಯವಾದ ತೇಜಸ್ಸನ್ನೂ ಕುರಿತು ಚಿಂತಿಸುತ್ತಿದ್ದಳು.

೪೦–೪೧. "ಆ ಮಹಾದೇವನು ಹೇಗೆ ನನಗೆ ಪತಿಯಾಗುವನು? ಮನ್ಮಥನು ಪುನಃ ಹೇಗೆ ಉಜ್ಜೀವಿತನಾಗುವನು? ಈ ಕಾರ್ಯವು ಎಲ್ಲಿಯೂ ಯಾರಿಗೂ ತಪಸ್ಸನ್ನು ಮಾಡಿದಲ್ಲದೆ ಸಿದ್ಧಿಸಲಾರದು." ಇಂತೆಂದು ಚಿಂತಿಸಿ ಪಾರ್ವತಿಯು ತಂದೆಯ ಅನುಜ್ಞೆಯನ್ನು ಪಡೆದುಕೊಂಡು ಉತ್ತಮವ್ರತವನ್ನು ಮಾಡಲೆಳಸಿ ಸಖಿಯರೊಡಗೂಡಿ ಬಹಳ ಘೋರವಾದ ತಪಸ್ಸನ್ನಾಚರಿಸತೊಡಗಿದಳು.

ವರ್ಷಾಸ್ವಭ್ರಾವಕಾಶಸ್ಥಾ ಹೇಮಂತೇ ಜಲಶಾಯಿನೀ ।
ಗ್ರೀಷ್ಮೇ ಪಂಚಾಗ್ನಿತಪ್ತಾಂಗೀ ತಪಸ್ಯುಗ್ರೇ ಸಮಾಸ್ಥಿತಾ ॥ ೪೨ ॥
ತಾಂ ದೃಷ್ಟ್ವಾ ತಪಸೋಪೇತಾಂ ಬ್ರಹ್ಮಚಾರಿವಯಾ ಹರಃ ।
ಆಜಗಾಮಾಶ್ರಮಂ ದೇವ್ಯಾಃ ಕೃತಾಽತಿಥ್ಯೋಽಬ್ರವೀದಿದಂ ॥ ೪೩ ॥
ಕೃಶಮಧ್ಯೇ ಕೃಶಾಽಪಾಂಗಿ ಕಿಮರ್ಥಂ ನವಯೌವನೇ ।
ತಪಃ ಕರೋಷಿ ಕಲ್ಯಾಣಿ ಕಸ್ಯಾರ್ಥೇ ಕಾರಣಂ ವದ ॥ ೪೪ ॥
ಉವಾಚ ಚೋತ್ತರಂ ಸಾ ವೈ ಸತ್ಯಂ ಚ ಮಧುರಂ ತಥಾ ।
ವಟೋ ತಪಃ ಸಮಾರಂಭಃ ಕ್ರಿಯತೇ ಶಂಕರಾಪ್ತಯೇ ॥ ೪೫ ॥
ವಿಚಾರ್ಯ ಚ ಹರಃ ಶ್ರುತ್ವಾಽನಂದಯುಕ್ತಾಕಾರ್ಯಮಾತ್ಮನಃ ।
ಉಮಾಭಕ್ತಿಪರೀಕ್ಷಾರ್ಥಂ ಶಿವಂ ವಾಚಾ ನಿನಿಂದ ವೈ ॥ ೪೬ ॥
ತಸ್ಯ ತದ್ವಚನಂ ಶ್ರುತ್ವಾ ನ ಸೇಹೇ ಸಾ ಗಿರೇಃ ಸುತಾ ।
ಗಂತು ಕಾಮಾಮುಮಾಂ ಮತ್ವಾ ತಸ್ಮಾತ್ಸ್ಥಾನಾನ್ಮಹೇಶ್ವರಃ ।
ಸ್ವಂ ವಪುರ್ದರ್ಶಯಾಮಾಸ ತ್ರಿನೇತ್ರಂ ಶೂಲಪಾಣಿನಂ ॥ ೪೭ ॥

---

೪೨. ವರ್ಷಾಕಾಲದಲ್ಲಿ ಆಕಾಶದ ಕೆಳಗೆ ವಾಸಿಸುತ್ತ, ಹೇಮಂತಋತುವಿನಲ್ಲಿ ನೀರಿನಲ್ಲಿ ನಿಂತಿರುತ್ತ, ಗ್ರೀಷ್ಮಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ದೇಹವನ್ನು ದಂಡಿಸುತ್ತ ಉಗ್ರವಾದ ತಪಸ್ಸಿನಲ್ಲಿದ್ದಳು.

೪೩. ಆಕೆಯು ಇಂತು ತಪಸ್ಸಂಪನ್ನಳಾಗಲು ಮಹೇಶ್ವರನು ಬ್ರಹ್ಮಚಾರಿಯಾಗಿ ಬಂದು ಆ ದೇವಿಯ ಆಶ್ರಮವನ್ನು ಪ್ರವೇಶಿಸಿದನು. ಆಕೆಯಿಂದ ಅತಿಥಿಸತ್ಕಾರವನ್ನು ಕೈಕೊಂಡು ಹೇಳಿದನು.

೪೪. "ಬಡನಡುವಿನವಳೆ! ದೀರ್ಘಾಪಾಂಗಳೆ! ಇಂತಹ ತುಂಬುಜವ್ವನದಲ್ಲಿ ಏತಕ್ಕಾಗಿ ತಪಸ್ಸನ್ನು ಮಾಡುತ್ತಿರುವೆ? ಮಂಗಳಗಾತ್ರಿಯೆ! ನಿನ್ನ ತಪಸ್ಸಿಗೆ ಕಾರಣವನ್ನು ತಿಳಿಸು."

೪೫. ಆಕೆಯು ಸತ್ಯವೂ ಮಧುರವೂ ಆದ ಮಾತಿನಿಂದಲೇ "ಅಯ್ಯಾ, ಬ್ರಹ್ಮಚಾರಿಯೆ! ನಾನು ಶಂಕರನನ್ನು ಪಡೆಯಲು ಈ ತಪಸ್ಸನ್ನಾರಂಭಿಸಿರುವೆನು" ಎಂದು ಹೇಳಿದಳು.

೪೬. ಹರನು ಈ ಮಾತನ್ನು ಕೇಳಿ ಮನಸ್ಸಿನಲ್ಲಿಯೇ ವಿಚಾರಿಸಿ ತನ್ನ ಕಾರ್ಯವು ಸಫಲವಾಗುವುದೆಂದು ಆನಂದಿಸಿದನು. ಮತ್ತು ಪಾರ್ವತಿಯ ಮನೋದಾರ್ಢ್ಯವನ್ನು ಪರೀಕ್ಷಿಸುವುದಕ್ಕಾಗಿ ಪರಮೇಶ್ವರನನ್ನು ಅನೇಕ ವಿಧವಾಗಿ ನಿಂದಿಸಿದನು.

೪೭. ಆ ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ಗಿರಿಪುತ್ರಿಯು ಸಹಿಸಲಾರದಾದಳು. ಆ ಸ್ಥಳವನ್ನು ಬಿಟ್ಟು ಹೊರಡಲಿಚ್ಛಿಸುತ್ತಿರುವ ಆಕೆಯನ್ನು ಕಂಡು

**ಲಜ್ಜಿತಾಽಭೂದ್ಭವಾನೀಶಂ ದೃಷ್ಟ್ವಾ ತಸ್ಥಾವಧೋಮುಖೀ ।**
**ವಿಜಯಾಽಥಾಹ ಯೋಗೀಂದ್ರಂ ಪ್ರಾರ್ಥ್ಯಾ ಚಾಭಿಜನೇ ತ್ವಿಯಂ ।**
**ಪಾರ್ವತೀವರಣಾರ್ಥಾಯ ಯತ್ನಂ ಚ ಪ್ರಕರೋಮ್ಯಹಂ ॥ ೪೮ ॥**
**ಇತ್ಯುಕ್ತ್ವಾಂತರ್ದಧೇ ದೇವೋ ದೇವ್ಯಗಾಚ್ಚ ಪಿತುರ್ಗೃಹಂ ।**
**ದೇವೀಲಾಭಾಯ ಸಪ್ತರ್ಷೀನ್ಸಸ್ಮಾರ ಸ್ಮರಶಾಸನಃ ॥ ೪೯ ॥**
**ಪ್ರಣೇಮುಸ್ತೇಽಪ್ಯಥಾಽಽಗಮ್ಯ ಸಂಸ್ಮೃತಾಃ ಪರಮೇಶ್ವರಂ ।**
**ಊಚುಶ್ಚ ಪ್ರಾಂಜಲಿಪುಟಾಃ ಕುರ್ಮ ಕಿಂ ಶಾಧಿ ನೋ ಭೃಶಂ ॥ ೫೦ ॥**
**ತತೋಽಬ್ರವೀನ್ಮುನೀನೀಶಃ ಸಮುಸ್ತಾಂಶ್ಚ ಗಿರೇರ್ಗೃಹಂ ।**
**ಗತ್ವಾ ತಥಾ ಕುರುಧ್ವಂ ಮೇ ಪಾರ್ವತೀ ಸ್ಯಾದ್ಯಥಾ ಪ್ರಿಯಾ ॥ ೫೧ ॥**
**ತಥೇತಿ ತೇ ಪ್ರತಿಜ್ಞಾಯ ಸಂಕೇತಂ ಶಂಭುನಾ ಸಮಂ ।**
**ಕೃತ್ವಾ ಜಗ್ಮುಃ ಸಪತ್ನೀಕಾ ಗಿರೀಂದ್ರಸ್ಯ ನಿವೇಶನಂ ॥ ೫೨ ॥**

---

ಶಂಕರನು ತ್ರಿನೇತ್ರಗಳಿಂದಲೂ, ತ್ರಿಶೂಲಹಸ್ತದಿಂದಲೂ ಒಪ್ಪುತ್ತಿರುವ ತನ್ನ ನಿಜರೂಪವನ್ನು ತೋರಿದನು.

೪೮. ಆ ಮಹಾದೇವನನ್ನು ಕಂಡು ಆಕೆಯು ಲಜ್ಜೆಯಿಂದ ಅಧೋಮುಖಿಯಾಗಿ ನಿಂತಿದ್ದಳು. ವಿಜಯೆಯೆಂಬ ಆಕೆಯ ಸಖಿಯು ಆ ಯೋಗೀಂದ್ರನನ್ನು ಕುರಿತು, "ದೇವಾ! ಈಕೆಯನ್ನು ತಂದೆ ಮೊದಲಾದ ಹಿರಿಯರಲ್ಲಿ ಯಾಚಿಸು" ಎಂದಳು.

೪೯–೫೦. "ಪಾರ್ವತಿಯ ಪಾಣಿಗ್ರಹಣಕ್ಕಾಗಿ ನಾನು ತಕ್ಕ ಪ್ರಯತ್ನವನ್ನು ಮಾಡುತ್ತೇನೆ" ಎಂದು ಹೇಳಿ ಮಹೇಶ್ವರನು ಅಂತರ್ಹಿತನಾಗಲು ದೇವಿಯು ತಂದೆಯ ಮನೆಗೆ ಹಿಂದಿರುಗಿದಳು. ದೇವಿಯನ್ನು ಸಂಪಾದಿಸಲು ಮನ್ಮಥವೈರಿಯು ಸಪ್ತರ್ಷಿಗಳನ್ನು ಸ್ಮರಿಸಲು ಆ ಕ್ಷಣದಲ್ಲಿಯೇ ಅವರು ಪ್ರಾಪ್ತರಾಗಿ ಮಹೇಶ್ವರನಿಗೆ ಪ್ರಣಾಮಗಳನ್ನು ಮಾಡಿದರು. ಮತ್ತು ಕೈಗಳನ್ನು ಮುಗಿದು, "ಈಗ ನಮಗೆ ಯಾವ ಕೆಲಸವನ್ನು ಮಾಡಬೇಕೆಂಬುದನ್ನು ಅಪ್ಪಣೆ ಮಾಡು" ಎಂದು ಬಿನ್ನವಿಸಿದರು.

೫೧. ಈಶ್ವರನು ಮುನಿಗಳೆಲ್ಲರನ್ನೂ ಕುರಿತು "ಗಿರಿರಾಜನ ಮನೆಗೆ ನೀವೆಲ್ಲರೂ ಹೋಗಿ ಆತನ ಕನ್ಯೆಯಾದ ಪಾರ್ವತಿಯು ನನಗೆ ಪ್ರಿಯಪತ್ನಿಯಾಗುವುದಕ್ಕೆ ತಕ್ಕ ಪ್ರಯತ್ನವನ್ನು ಮಾಡಿರಿ" ಎಂದನು.

೫೨. ಹಾಗೆಯೇ ಆಗಲೆಂದು ಪ್ರತಿಜ್ಞೆಯನ್ನು ಮಾಡಿ ಮಹಾದೇವನೊಡನೆ ಸಂಕೇತವನ್ನು ಮಾಡಿಕೊಂಡು ಆ ಸಪ್ತರ್ಷಿಗಳು ಪತ್ನೀಸಮೇತರಾಗಿ ಗಿರಿರಾಜನ ಅರಮನೆಗೆ ಹೊರಟುಬಂದರು.

ದತ್ತ್ವಾಽರ್ಘ್ಯಂ ಭೂಧರೇಂದ್ರೇಣ ಕೃತಾಸನಪರಿಗ್ರಹಾಃ ।
ಊಚುರದ್ರಿಮುಮಾಂ ಯಚ್ಛ ಶಂಕರಾಯಾರ್ಥಿನೇ ಪ್ರಿಯಾಂ ॥ ೫೩ ॥
ದತ್ತೇತ್ಯುಕ್ತಾ ಗಿರೀಂದ್ರೇಣ ನಿರೂಪ್ಯೋದ್ವಾಹವಾಸರಂ ।
ಲಬ್ಧ್ವಾಽನುಜ್ಞಾಂ ಸಮಾಯಾತಾ ಯತ್ರಾಸ್ತೇ ಸ ಮಹೇಶ್ವರಃ ॥ ೫೪ ॥
ಊಚುಸ್ತೇ ಶಂಕರಂ ಸರ್ವೇ ದತ್ತಾ ಹಿಮವತಾ ಶಿವಾ ।
ಕೃತಕಾರ್ಯಾಶ್ಚ ಸರ್ವೇಽಪಿ ವವ್ರಜುಸ್ತೇ ಯಥಾಗತಂ ॥ ೫೫ ॥
ಚಕ್ರುರ್ವಿವಾಹಸಾಮಗ್ರೀಂ ಬ್ರಹ್ಮೇಂದ್ರಾದಿ ಸುರಾಸ್ತದಾ ।
ವೃಷಾಸನೋ ಜಗಾಮಾಽಥ ನಂದೀಶಪ್ರಮುಖೈರ್ಗಣೈಃ ॥ ೫೬ ॥
ಶಂಖದುಂದುಭಿನಾದೈಶ್ಚ ಬ್ರಹ್ಮಾದ್ಯೈರಮರೈಃ ಸಹ ।
ಪ್ರಾಪ್ಯಾಗೇಂದ್ರಾಲಯಂ ಹೀಶಃ ಕೃತಕೌತುಕಮಂಗಲಃ ॥ ೫೭ ॥
ವಿವಾಹ್ಯೇವಮುಮಾಂ ವಿಧಾನೇನ ಜಗಾಮ ಸ್ವಾಲಯಂ ಪುನಃ ।
ತತ್ರೈಕಾಂತರತಿರ್ದೇವೋ ಯಾವತ್ತಿಷ್ಠತಿ ಕಾಮವಾನ್ ॥ ೫೮ ॥

---

೫೩. ಪರ್ವತರಾಜನು ಅವರನ್ನು ಅರ್ಘ್ಯಾದಿಗಳಿಂದ ಸತ್ಕರಿಸಿ ಉಚಿತಾಸನಗಳಲ್ಲಿ ಕುಳ್ಳಿರಿಸಿದನು. ಅವರು "ನಿನ್ನ ಮಗಳಾದ ಉಮೆಯನ್ನು ಯಾಚಿಸುತ್ತಿರುವ ಶಂಕರನಿಗೆ ಮದುವೆಮಾಡಿಕೊಡು" ಎಂದು ಆತನಿಗೆ ಹೇಳಿದರು.

೫೪. ಗಿರಿರಾಜನು "ನಿಮ್ಮ ಮಾತಿನಂತೆ ಗಿರಿಜೆಯನ್ನು ಆ ಶಿವನಿಗೇ ಕೊಟ್ಟಿರುವೆನು" ಎಂದು ವಾಗ್ದಾನವನ್ನು ಮಾಡಲು ಮದುವೆಯ ಲಗ್ನವನ್ನು ನಿಶ್ಚಯಮಾಡಿಕೊಂಡು ಆತನ ಅಪ್ಪಣೆಯನ್ನು ಪಡೆದು ಸಪ್ತರ್ಷಿಗಳು ಪುನಃ ಮಹಾದೇವನಿದ್ದಲ್ಲಿಗೆ ಬಂದರು.

೫೫. ಮತ್ತು "ಹಿಮವಂತನು ಸರ್ವಮಂಗಳೆಯನ್ನು ನಿನಗೆ ಕೊಡುವನು" ಎಂದು ಹೇಳಿ ತಮ್ಮ ಕಾರ್ಯವು ಸಂಪೂರ್ಣವಾಗಲು ತಾವು ಬಂದಂತೆಯೇ ತಮ್ಮ ಸ್ಥಾನಗಳಿಗೆ ಹೊರಟುಹೋದರು.

೫೬. ಬ್ರಹ್ಮ ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಮದುವೆಯ ಸಾಮಗ್ರಿಗಳನ್ನೆಲ್ಲ ಅಣಿಮಾಡತೊಡಗಿದರು. ಮಹೇಶ್ವರನು ವೃಷಭವನ್ನೇರಿ ನಂದಿಯೇ ಮುಂತಾದ ಪ್ರಮಥಗಣಗಳಿಂದ ಪರಿವಾರಿತನಾಗಿ ಕಲ್ಯಾಣ ಮಂಟಪಕ್ಕೆ ಹೊರಟನು.

೫೭. ಶಂಖದುಂದುಭಿಗಳೇ ಮುಂತಾದ ಮಂಗಳವಾದ್ಯಗಳು ಮೊಳಗುತ್ತಿರಲು ಬ್ರಹ್ಮಾದಿದೇವತೆಗಳೊಡನೆ ಮಹೇಶ್ವರನು ಹಿಮವಂತರಾಜನ ಅರಮನೆಯನ್ನು ಸೇರಿದನು. ಆತನಿಗೆ ಅಭ್ಯಂಜನಾದಿ ಮಂಗಳಕಾರ್ಯಗಳು ನಡೆದುವು.

೫೮. ಬಳಿಕ ಆ ಶಂಕರನು ಯಥಾಕ್ರಮವಾಗಿ ಉಮೆಯನ್ನು ಮದುವೆಯಾಗಿ ತನ್ನ ಮನೆಗೆ ಹಿಂದಿರುಗಿದನು. ಒಮ್ಮೆ ಮಹಾದೇವನು ಮಡದಿಯೊಡನೆ ಕಾಮಪೀಡಿತನಾಗಿ ಏಕಾಂತದಲ್ಲಿ ರತಿಸುಖವನ್ನನುಭವಿಸುತ್ತಿದ್ದನು.

ತಾವತ್ತ್ರಸ್ತೈಃ ಸುರೈರಗ್ನಿಃ ಪ್ರೇಷಿತೋಽಗಾನ್ಮಹೇಶ್ವರಂ ।
ಅಗ್ನೌ ತತ್ರ ಗತೇ ದೇವೋ ರತಿಂ ಕೃತ್ವಾ ಮಹೇಶ್ವರಃ ॥ ೫೯ ॥
ನಿಚಿಕ್ಷೇಪ ಮುಖೇ ವಹ್ನೇಃ ಸ್ವರೇತೋ ವ್ರೀಡಿತೋ ಭೃಶಂ ।
ರೇತಸಾ ತೇನ ತಪ್ತೋಽಗ್ನಿರ್ಗಂಗಾತೋಯೇ ನಿಕ್ಷಿಪ್ತವಾನ್ ॥ ೬೦ ॥
ಹರರೇತೋಽಗ್ನಿನೋದ್ಗೀರ್ಣಂ ಗಂಗಾಮಧ್ಯೇ ಪಪಾತ ಹ ।
ತಯಾ ತು ಸ್ವತಟೇ ನ್ಯಸ್ತಂ ದಗ್ಧಯಾ ರುದ್ರರೇತಸಾ ॥ ೬೧ ॥
ಸಪ್ತರ್ಷೀಣಾಂ ಚ ಷಟ್ಪತ್ನ್ಯಃ ಸ್ನಾನಾರ್ಥಂ ಜಾಹ್ನವೀಂ ಯಯುಃ ।
ಶೀತಾರ್ತಾಸ್ತಾಃ ಕೃತಸ್ನಾನಾ ದೃಷ್ಟ್ವಾ ತೇಜಸ್ತಟೇ ಜ್ವಲತ್ ॥ ೬೨ ॥
ಮತ್ವಾಽಗ್ನಿಮಿತಿ ತಾಃ ಸರ್ವಾಸ್ತಪಂತಿಸ್ಮ ಯಥೇಚ್ಛಯಾ ।
ತಪಂತೀನಾಂ ಚ ವೈ ತಾಸಾಂ ತದ್ಬೀಜಸಂಭವಂ ಮುನೇ ॥ ೬೩ ॥
ಷಡಾನನಂ ಸಮಾರೂಢಂ ಶ್ರೋಣಿದ್ವಾರೇಣ ಸತ್ವರಂ ।
ಯದಾಽನ್ಯೋನ್ಯಮುತ್ಪತಿತುಂ ಶಕ್ತಾ ನಾಽಗ್ನಿಪುರೋಗಮಾತ್ ॥ ೬೪ ॥

---

೫೯. ಆಗ ತಾರಕನಿಂದ ಭಯಗೊಂಡ ದೇವತೆಗಳು ಅಗ್ನಿಯನ್ನು ಆತನ ಬಳಿಗೆ ಕಳುಹಿಸಿಕೊಟ್ಟರು. ಸುರತಾಸಕ್ತನಾಗಿದ್ದ ಮಹೇಶ್ವರನು ಅಲ್ಲಿಗೆ ಬಂದ ಅಗ್ನಿಯನ್ನು ಕಂಡನು.

೬೦. ಅತ್ಯಂತ ಲಜ್ಜಿತನಾಗಿ ಮಹೇಶ್ವರನು ತನ್ನ ರೇತಸ್ಸನ್ನು ಆ ಅಗ್ನಿಯ ಮುಖದಲ್ಲಿ ಹಾಕಿದನು. ಆ ರೇತಸ್ಸಿನ ಶಕ್ತಿಯಿಂದ ತಪ್ತನಾದ ಅಗ್ನಿಯು ಅದನ್ನು ಗಂಗಾನದಿಯಲ್ಲಿ ಬಿಸುಟನು.

೬೧. ಇಂತು ಅಗ್ನಿಯು ಉಗುಳಿದ ವೀರ್ಯವು ಗಂಗೆಯಲ್ಲಿ ಬಿದ್ದಿತು. ರುದ್ರವೀರ್ಯದ ತೇಜಸ್ಸನ್ನು ತಡೆಯಲಾರದೆ ದಗ್ಧಳಾದ ಗಂಗೆಯೂ ಅದನ್ನು ತನ್ನ ದಡಕ್ಕೆ ತಳ್ಳಿಬಿಟ್ಟಳು.

೬೨. ಒಂದು ದಿನ ಸಪ್ತರ್ಷಿಗಳ ಆರುಮಂದಿ ಪತ್ನಿಯರು ಗಂಗಾಸ್ನಾನಕ್ಕಾಗಿ ಅಲ್ಲಿಗೆ ಬಂದು ಸ್ನಾನಗಳನ್ನು ಮಾಡಿ ಚಳಿಯಿಂದ ಖತಿಗೊಂಡು ದಡದಲ್ಲಿ ಪ್ರಕಾಶಿಸುತ್ತಿರುವ ಆ ವೀರ್ಯವನ್ನು ನೋಡಿದರು.

೬೩. ಅದನ್ನು ಅಗ್ನಿಯೆಂದೇ ತಿಳಿದು ಅವರು ಅದರ ಸುತ್ತಲೂ ಕುಳಿತು ಸ್ವೇಚ್ಛೆಯಾಗಿ ಕಾಯಿಸಿಕೊಳ್ಳುತ್ತಿದ್ದರು. ಮುನಿವರ್ಯನೆ! ಆ ವೀರ್ಯವು ಅವರಲ್ಲಿ ಸೇರಿತು.

೬೪–೬೫. ಆರು ಮುಖಗಳುಳ್ಳ ಭಾಗಗಳಾಗಿ ಅದು ಒಬ್ಬೊಬ್ಬರ ನಿತಂಬ ದ್ವಾರದಿಂದ 'ಎಲ್ಲರಲ್ಲಿಯೂ ಪ್ರವೇಶಿಸಿತು. ಆ ಅಗ್ನಿಯ ಸಾನ್ನಿಧ್ಯದಿಂದ ಒಬ್ಬೊಬ್ಬರಾಗಿ ಎದ್ದು ಬರಲು ಸಾಧ್ಯವಾಗದಿದ್ದುದನ್ನು ಕಂಡು ಅವರೆಲ್ಲರೂ ತಮ್ಮ

ಚಿಂತಾಂ ಜಗ್ಮುಸ್ತದಾ ಸರ್ವಾ ಮುನಿತ್ರಾಸಾತ್ತತೋ ಭಯಾತ್ ।
ತತಶ್ಚ ತಪಸೋ ವೀರ್ಯಾನ್ನಿಷ್ಕೃಷ್ಯ ಸ್ವೋದರಾತ್ತತಃ ॥ ೬೫ ॥
ಷಡ್ಭಿರೇಕತ್ವಮಾಪದ್ಯ ಶ್ವೇತಪರ್ವತಮಸ್ತಕೇ ।
ಮಧ್ಯೇ ಶರಾಣಾಂ ವೈ ಕೃತ್ಯ ನಿಕ್ಷಿಪ್ತಂ ವೀರ್ಯಮುತ್ತಮಂ ॥ ೬೬ ॥
ಶುಕ್ಲಾಯಾಂ ಪ್ರತಿಪದ್ಯಾಸೀದ್ದ್ವಿತೀಯಾಯಾಂ ಸಮಾಕೃತಃ ।
ತೃತೀಯಾಯಾಂ ಚ ಸಾಕಾರಃ ಸರ್ವಲಕ್ಷಣಲಕ್ಷಿತಃ ॥ ೬೭ ॥
ಚತುರ್ಥ್ಯಾಂ ಪರಿಪೂರ್ಣಾಂಗಃ ಷಣ್ಮುಖೋ ದ್ವಾದಶೇಕ್ಷಣಃ ।
ಅಲಂಕೃತಸ್ತು ಪಂಚಮ್ಯಾಂ ಷಷ್ಠ್ಯಾಂ ಚ ಸ ಸಮುತ್ಥಿತಃ ॥ ೬೮ ॥
ತೇಜಸಾ ಶ್ವೇತತಾಮ್ರೇಣ ತತಾಪ ಸ ಜಗತ್ತ್ರಯಂ ।
ಜಾತಮಿತ್ಥಂ ಸಮಾಕರ್ಣ್ಯ ಸರ್ವೇ ಶಕ್ರಮುಖಾಃ ಸುರಾಃ ॥ ೬೯ ॥
ಸಮಾಗತ್ಯಾಽಸ್ಯ ಸಂಸ್ಕಾರಂ ಬ್ರಹ್ಮಾ ಚಕ್ರೇ ಯಥಾ ವಿಧಿ ।
ತುಷ್ಟೇನ ಪಾರ್ವತೀಶೇನ ಶಕ್ತಿರ್ದತ್ತಾ ದೃಢಾ ಶುಭಾ ॥ ೭೦ ॥

---

ಪತಿಗಳಾದ ಮಹರ್ಷಿಗಳ ಭಯದಿಂದ ನಡುಗುತ್ತ ಅಗಾಧವಾದ ಚಿಂತೆಗೊಳಗಾದರು. ಬಳಿಕ ಅವರು ತಮ್ಮ ತಪಸ್ಸಿನ ಸಾಮರ್ಥ್ಯದಿಂದ ತಮ್ಮ ಗರ್ಭಗಳಲ್ಲಿದ್ದ ಆ ವೀರ್ಯವನ್ನು ಹೊರಕ್ಕೆ ತೆಗೆದರು.

೬೬. ಆ ಆರು ಗರ್ಭಗಳನ್ನೂ ಒಂದುಮಾಡಿ ಶ್ವೇತಪರ್ವತದ ಶಿಖರ ಪ್ರದೇಶದಲ್ಲಿದ್ದ ಜೊಂಡುಹುಲ್ಲಿನ ಒಂದು ಪೊದೆಯಲ್ಲಿ ಆ ಉತ್ತಮ ವೀರ್ಯವನ್ನು ಬಿಟ್ಟುಹೋದರು.

೬೭. ಶುಕ್ಲಪಕ್ಷದ ಪಾಡ್ಯಮಿಯ ದಿನ ಈ ಕೆಲಸವು ನಡೆಯಿತು. ಬಿದಿಗೆಯ ದಿನ ಪಿಂಡರೂಪವಾದ ಆ ವೀರ್ಯವು ತದಿಗೆಯಲ್ಲಿ ಸಕಲ ಲಕ್ಷಣಗಳಿಂದೊಡಗೂಡಿದ ಆಕಾರವಾಗಿ ಪರಿಣಮಿಸಿತು.

೬೮. ಚೌತಿಯ ದಿನದಲ್ಲಿ ಸರ್ವಾವಯವಸಮೇತನಾಗಿ ಆರು ಮುಖಗಳೂ, ಹನ್ನೆರಡು ನೇತ್ರಗಳೂ ಉಳ್ಳ ಮಗುವಾದನು. ಪಂಚಮಿಯಲ್ಲಿ ಸರ್ವಾಲಂಕಾರ ಭೂಷಿತನಾಗಿ ಷಷ್ಠಿಯ ದಿವಸ ಎದ್ದು ವಿಜಯ ಯಾತ್ರೆಗೆ ಹೊರಟನು.

೬೯. ಆ ಬಾಲನು ಬಿಳುಪು, ಕೆಂಪು ಮಿಶ್ರವಾದ ತನ್ನ ತೇಜಸ್ಸಿನಿಂದ ಮೂರು ಲೋಕಗಳನ್ನೂ ಸುಡುತ್ತಿದ್ದನು. ಇಂತು ಹುಟ್ಟಿದ ಮಗುವಿನ ಸುದ್ದಿಯನ್ನು ಇಂದ್ರಾದಿ ಸಕಲದೇವತೆಗಳೂ ಕೇಳಿದರು.

೭೦. ಬ್ರಹ್ಮದೇವನು ಬಂದು ಆ ವಟುವಿಗೆ ಯಥಾವಿಧಿಯಾಗಿ ಉಪನಯನಾದಿ ಸಂಸ್ಕಾರಗಳನ್ನು ಮಾಡಿದನು. ಸಂತುಷ್ಟನಾದ ಮಹಾದೇವನು ದೃಢವೂ, ಜಯಪ್ರದವೂ ಆದ ಶಕ್ತ್ಯಾಯುಧವನ್ನು ಅವನಿಗೆ ಕೊಟ್ಟನು.

ತತೋ ಗೌರ್ಯಾ ಮಯೂರಶ್ಚ ವಾಹನೇ ಪರಿಕಲ್ಪಿತಃ ।
ಛಾಗಶ್ಚೈವಾಽಗ್ನಿನಾ ದತ್ತಃ ಕುಕ್ಕುಟಂ ಸರಿತಾಂ ಪತಿಃ ॥ ೭೧ ॥
ಶೂಲೇನ ಕೃತ್ತಿಕಾಭಿಶ್ಚ ವರ್ಧಿತಃ ಪುತ್ರಕಾಮ್ಯಯಾ ।
ತತಸ್ತು ಪ್ರಾಪ್ತಸಂಸ್ಕಾರೋ ಬ್ರಹ್ಮಾದ್ಯೈರಭಿನಂದಿತಃ ॥ ೭೨ ॥
ಶಕ್ತಿಹಸ್ತೋಽಭಿಷಿಕ್ತಸ್ತು ದೇವಸೇನಾಸಮಾವೃತಃ ।
ವಿತ್ತಾಽಧಿಪೇನ ಸಾಹ್ಯೇನ ಪಾವಕಿಃ ಷಣ್ಮುಖೋಽಂಶತಃ ॥ ೭೩ ॥
ಗಾಂಗೇಯಃ ಕಾರ್ತಿಕೇಯಶ್ಚ ಗುಹಃ ಸ್ಕಂದ ಉಮಾಸುತಃ ।
ದೇವಸೇನಾಪತಿಃ ಸ್ವಾಮೀ ಸೇನಾನೀಶ್ಚ ಶಿಖಿಧ್ವಜಃ ॥ ೭೪ ॥
ಕುಮಾರಃ ಶಕ್ತಿಧಾರೀ ಚ ತಸ್ಯ ನಾಮಾನಿ ಷೋಡಶ ।
ಯಃ ಪಠೇನ್ಮಾನವೋ ಭಕ್ತ್ಯಾ ಬಾಧಾ ತಸ್ಯ ನ ಜಾಯತೇ ॥ ೭೫ ॥
ಏವಂ ಜಾತೋ ಮಹಾಸೇನೋ ದಾನವಾನಾಂ ಕ್ಷಯಂಕರಃ ।
ಕುಶಸ್ಥಲ್ಯಾಂ ಸಮಾನೀತಃ ಶಂಭುನಾ ಸ್ಥಾನಕಾರಣಾತ್ ॥ ೭೬ ॥
ಅಭಿಷಿಕ್ತಃ ಸ ತೇನಾಽಸೌ ಭದ್ರಿತಃ ಸ ಜಟಾಃ ಪುರಾ ।
ತೇನ ಭದ್ರಜಟಂ ನಾಮ ದೇವತೀರ್ಥಂ ಚ ಕಥ್ಯತೇ ॥ ೭೭ ॥

---

೭೧. ಗೌರಿದೇವಿಯು ವಾಹನಕ್ಕಾಗಿ ಒಂದು ನವಿಲನ್ನು ಕೊಟ್ಟಳು. ಅಗ್ನಿಯು ಮೇಕೆಯನ್ನೂ ಸಮುದ್ರಾಧಿಪತಿಯಾದ ವರುಣನು ಕೋಳಿಯನ್ನೂ ಅತನಿಗೆ ಸಮರ್ಪಿಸಿದರು.

೭೨. ಪುತ್ರವಾತ್ಸಲ್ಯದಿಂದ ಕೃತ್ತಿಕೆಯರು ಶೂಲವನ್ನಿತ್ತು ಆತನನ್ನು ಹರಸಿದರು. ಇಂತು ಸಕಲಸಂಸ್ಕಾರಸಹಿತನಾದ ಆ ಸುಬ್ರಹ್ಮಣ್ಯಸ್ವಾಮಿಯು ಬ್ರಹ್ಮಾದಿದೇವತೆಗಳಿಂದ ಸಂಸ್ತುತನಾದನು.

೭೩–೭೫. ಸೇನಾಧಿಪತ್ಯದಲ್ಲಿ ಅಭಿಷಿಕ್ತನಾದ ಈತನಿಗೆ ಶಕ್ತಿಹಸ್ತ, ದೇವಸೇನಾಪರಿವೃತ, ಕುಬೇರಸಖ, ಪಾವಕಿ, ಷಣ್ಮುಖ, ಗಾಂಗೇಯ, ಕಾರ್ತಿಕೇಯ, ಗುಹ, ಸ್ಕಂದ, ಉಮಾಸುತ, ದೇವಸೇನಾಪತಿ, ಸ್ವಾಮಿ, ಸೇನಾನಿ, ಶಿಖಿಧ್ವಜ, ಕುಮಾರ, ಶಕ್ತಿಧಾರಿ ಎಂದು ಹದಿನಾರು ನಾಮಗಳಿರುವುವು. ಇವುಗಳನ್ನು ಯಾವ ಮಾನವನು ಭಕ್ತಿಯಿಂದ ಜಪಿಸುವನೊ, ಅವನಿಗೆ ಯಾವ ಬಾಧೆಯೂ ಉಂಟಾಗುವುದಿಲ್ಲ.

೭೬. ಇಂತು ರಾಕ್ಷಸಕುಲನಾಶಕನಾದ ಮಹಾಸೇನನು ಜನಿಸಿದನು. ಸ್ಥಾನವನ್ನು ಕಲ್ಪಿಸುವ ನೆಪದಿಂದ ಪರಮೇಶ್ವರನು ಆತನನ್ನು ಕುಶಸ್ಥಳಿಗೆ ಕರೆದುಕೊಂಡು ಹೋದನು.

೭೭. ಅಲ್ಲಿ ಆತನಿಗೆ ಸೈನ್ಯಾಭಿಷೇಕವನ್ನು ಮಾಡಿ ಜಡೆಯನ್ನು ತಾನೇ ಭದ್ರಮಾಡಿದನು. ಅಂದಿನಿಂದ ಆ ತೀರ್ಥವು ಭದ್ರಜಟವೆಂದು ಕರೆಯಲ್ಪಡುತ್ತ ದೇವತೀರ್ಥವೆಂದು ಪ್ರಖ್ಯಾತವಾಗಿರುವುದು.

ಕೃತಾಽಭಿಷೇಕಂ ಲಬ್ಧಾಽಸ್ತ್ರಂ ಮಹಾಸೇನಂ ಮಹೇಶ್ವರಃ ।
ತಮುವಾಚ ಸಮಧುರಂ ಸರ್ವದೇವಸಮಾಗಮೇ ॥ ೭೮ ॥
ರಕ್ಷಾ ಕಾರ್ಯಾ ತ್ವಯಾ ಪುತ್ರ ಸಾಽಮರಸ್ಯ ಶತಕ್ರತೋಃ ।
ದೇವಾನಾಂ ಬಾಧಕಾಃ ಸರ್ವೇ ನಿಹಂತವ್ಯಾಃ ಸುರದ್ವಿಷಃ ॥ ೭೯ ॥
ಇತ್ಥಂ ಮಹೋತ್ಸವೇ ಜಾತೇ ದೃಪ್ತಪ್ರಮಥಸಾಗರೇ ।
ಮಾತರೋಽನ್ಯಾಗತಾಃ ಸರ್ವಾಃ ಪಾತಾಲತಲಸಂಸ್ಥಿತಾಃ ॥ ೮೦ ॥
ತಾಸಾಮಾಹಾರಸಂಜ್ಞಾಭಿಶ್ಚಕ್ರೇ ನಾಮಾನಿ ಶಂಕರಃ ।
ಯಾನಿ ತಾನಿ ಪ್ರವಕ್ಷ್ಯಾಮಿ ಶೃಣು ತ್ವಂ ಮುನಿಪುಂಗವ ॥ ೮೧ ॥
ವಟಭೋಜನಕಾಮಾ ಯಾ ಜ್ಞೇಯಾಸ್ತಾ ವಟಮಾತರಃ ।
ಭುಂಜತೇ ಚರ್ಪಟಾನ್ಯಾಸ್ತು ತಾ ವೈ ಚರ್ಪಟಮಾತರಃ ॥ ೮೨ ॥
ಕ್ರೀಡಾರ್ಥಂ ಶಂಭುನಾ ಚಾಽಥ ಪ್ರಾಪ್ತಾ ಯಾಃ ಪೌಲಭೋಜನೇ ।
ಷಣ್ಣವತಿಮಾತರಃ ಸತ್ಯಾಃ ಸರ್ವಾಸ್ತಾಃ ಪೌಲಮಾತರಃ ॥ ೮೩ ॥

---

೭೮. ಇಂತು ಅಭಿಷಿಕ್ತನಾಗಿ ಸಕಾಲಾಸ್ತ್ರಸಂಪನ್ನನಾದ ಮಹಾಸೇನನನ್ನು ಕುರಿತು ಸಕಲದೇವತೆಗಳ ಸಮ್ಮುಖದಲ್ಲಿ ಮಹೇಶ್ವರನು ಮಧುರವಾಕ್ಯಗಳಿಂದ ಹೇಳತೊಡಗಿದನು.

೭೯. "ಎಲೈ ಪುತ್ರನೆ! ದೇವತೆಗಳೊಡಗೂಡಿದ ಮಹೇಂದ್ರನನ್ನು ನೀನು ಸಂರಕ್ಷಿಸುವ ಕಾರ್ಯವನ್ನು ಕೈಗೊಳ್ಳಬೇಕು. ದೇವತೆಗಳಿಗೆ ಹಿಂಸೆಯನ್ನುಂಟು ಮಾಡುತ್ತಿರುವ ಸಕಲರಾಕ್ಷಸರನ್ನೂ ಸಂಹರಿಸಬೇಕು."

೮೦. ಇಂತು ಮಹೋತ್ಸವವುಂಟಾಗಿ ಪ್ರಮಥಸೈನ್ಯಸಮೂಹವು ದರ್ಪದಿಂದ ಓಡಾಡುತ್ತಿರಲು ಪಾತಾಳಲೋಕದಲ್ಲಿ ವಾಸಮಾಡುತ್ತಿದ್ದ ಮಾತೃಗಳು ಅಲ್ಲಿಗೆ ಬಂದು ಸೇರಿದರು.

೮೧. ಅವರಿಗೆಲ್ಲ ಅವರವರ ಆಹಾರಗಳನ್ನನುಸರಿಸಿ ಮಹಾದೇವನು ಹೆಸರುಗಳನ್ನಿಟ್ಟನು. ಮುನಿಪುಂಗವನೆ! ಯಾವ ಯಾವ ಹೆಸರುಗಳಿಟ್ಟನೆಂಬುದನ್ನು ಹೇಳುವೆನು, ಕೇಳು.

೮೨. ಅತ್ತಿಯ ಹಣ್ಣುಗಳನ್ನು ತಿನ್ನಲೆಳಸುವವರಿಗೆ ವಟಮಾತೃಗಳೆಂದು ಹೆಸರು. ಚರ್ಪಟಗಳೆಂಬ ಸಣ್ಣ ದೋಸೆಗಳನ್ನು ತಿನ್ನುತ್ತಿದ್ದವರೇ ಚರ್ಪಟ ಮಾತೃಗಳಾದರು.

೮೩. ಕ್ರೀಡಾಭೋಜನಕ್ಕಾಗಿ ಪರಮೇಶ್ವರನು ಮಾಡಿಸಿದ್ದ ಹೋಳಿಗೆಗಳನ್ನು ತಿನ್ನಲು ಬಂದ ತೊಂಬತ್ತಾರು ಮಾತೃಗಳೇ ನಿಜವಾಗಿಯೂ ಪೌಲ ಮಾತೃಗಳೆನಿಸಿದರು.

ಸರ್ವಾಸಾಂ ದರ್ಶನಂ ಪುಣ್ಯಂ ಗ್ರಹಭೂತವಿನಾಶನಂ ।
ಪ್ರಯತ್ನತಃ ಸದಾ ದೇವ್ಯೋ ದ್ರಷ್ಟವ್ಯಾ ಮಾನವೈರ್ಮುನೇ ॥ ೮೪ ॥
ಲಬ್ಧ್ವಾ ಶಕ್ತಿಂ ಮಹಾಸೇನೋ ದೇವಸೇನೋ ಮಹಾವ್ರತಃ ।
ಜಘಾನ ದಾನವೇಂದ್ರಂ ತಂ ತಾರಕಂ ತರಸಾ ತದಾ ॥ ೮೫ ॥
ದತ್ವಾ ರಾಜ್ಯಂ ತಥೇಂದ್ರಾಯ ಸ್ಫೀತಂ ನಿಹತಕಂಟಕಂ ।
ಕುಶಸ್ಥಲೀಂ ಸಮಾಗಮ್ಯ ತತ್ರ ವಾಸಂ ಸಮಾಚರತ್ ॥ ೮೬ ॥
ಏವಂ ನಿಹತ್ಯ ದೈತ್ಯೇಂದ್ರಂ ಸ ಗಾಂಗೇಯೋ ಮಹಾಬಲಃ ।
ಶಕ್ತಿಂ ಶಿಪ್ರಾಜಲೇ ಮುಕ್ತ್ವಾ ಪಾತಾಲಂ ಚ ಬಿಭೇದ ಸಾ ॥ ೮೭ ॥
ತತೋ ಭೋಗವತೀ ವ್ಯಾಸ ಶಕ್ತಿಭೇದೇನ ನಿರ್ಗತಾ ।
ವಂದಿತಾ ಸರ್ವದೇವೈಶ್ಚ ಮುನಿಭಿಶ್ಚ ತಪೋಧನೈಃ ॥ ೮೮ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಸಮುದ್ರಾದಿಗತಾನಿ ಚ ।
ಶಕ್ತಿಭೇದೇತು ನ್ಯಸ್ತಾನಿ ಶತಕೋಟಿಸಹಸ್ರಶಃ ॥ ೮೯ ॥

---

೮೪. ಮುನಿವರ್ಯನೆ! ಇವರೆಲ್ಲರ ದರ್ಶನವೂ ಪುಣ್ಯಪ್ರದವು; ಗ್ರಹ, ಭೂತಗಳ ಪೀಡೆಯನ್ನು ನಾಶಗೊಳಿಸುವುದು. ಮಾನವರು ಈ ದೇವಿಯರನ್ನು ನಿತ್ಯವೂ ಪ್ರಯತ್ನದಿಂದಾರೂ ದರ್ಶನಮಾಡಬೇಕು.

೮೫. ಶಕ್ತ್ಯಾಯುಧವನ್ನು ಪಡೆದು ದೇವತೆಗಳ ಸೈನ್ಯದಿಂದ ಪರಿವಾರಿತನಾಗಿ ಯುದ್ಧದೀಕ್ಷೆಯನ್ನು ಕೈಕೊಂಡ ಆ ಮಹಾಸೇನನಾದರೊ, ಶೀಘ್ರವಾಗಿಯೇ ರಾಕ್ಷಸೇಂದ್ರನಾದ ತಾರಕನನ್ನು ನಿಗ್ರಹಿಸಿದನು.

೮೬. ಇಂದ್ರನಿಗೆ ನಿಷ್ಕಲ್ಮಷವೂ, ಶತ್ರುರಹಿತವೂ ಆದ ಸ್ವರ್ಗರಾಜ್ಯವನ್ನೊಪ್ಪಿಸಿ ಆ ಕಾರ್ತಿಕೇಯನು ಕುಶಸ್ಥಳಿಗೆ ಬಂದು ಅಲ್ಲಿಯೇ ವಾಸಮಾಡುತ್ತಿದ್ದನು.

೮೭. ಇಂತು ಆ ರಾಕ್ಷಸಶ್ರೇಷ್ಠನನ್ನು ಸಂಹರಿಸಿದ ಮಹಾಬಲಶಾಲಿಯಾದ ಷಣ್ಮುಖಸ್ವಾಮಿಯು ತನ್ನ ಶಕ್ತ್ಯಾಯುಧವನ್ನು ಶಿಪ್ರಾನದಿಯ ಜಲದಲ್ಲಿ ಬಿಸುಡಲು ಅದು ಪಾತಾಳವನ್ನೂ ಭೇದಿಸಿತು.

೮೮. ವ್ಯಾಸಮಹರ್ಷಿಯೆ! ಶಕ್ತ್ಯಾಯುಧವು ಮಾಡಿದ ಬಿಲದಿಂದ ಪಾತಾಳಗಂಗೆಯು ಹೊರಹೊಮ್ಮಿತು. ಸಕಲದೇವತೆಗಳೂ, ತಪೋನಿರತರಾದ ಮುನಿಗಳೂ ಅದನ್ನು ವಂದಿಸಿದರು.

೮೯. ಸಮುದ್ರವೇ ಮೊದಲಾದ ನೂರು, ಸಾವಿರ, ಕೋಟಿ ಸಂಖ್ಯಾಕಗಳಾದ ಎಷ್ಟು ತೀರ್ಥಗಳಿರುವುವೊ, ಅವುಗಳೆಲ್ಲವೂ ಶಕ್ತಿಭೇದತೀರ್ಥದಲ್ಲಿ ಸನ್ನಿಹಿತಗಳಾದುವು.

ಅತೋಽತಿಪುಣ್ಯಂ ತ್ರೈಲೋಕ್ಯೇ ಕೋಟಿತೀರ್ಥಮುದಾಹೃತಂ ।
ಬ್ರಹ್ಮಣಾ ಸ್ಥಾಪಿತಸ್ತತ್ರ ಕೋಟಿತೀರ್ಥೇಶ್ವರಃ ಶಿವಃ ॥ ೯೦ ॥
ಕೋಟಿತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಕೋಟೀಶ್ವರಂ ಶಿವಂ ।
ಮುಚ್ಯತೇ ಸರ್ವಪಾಪೇಭ್ಯೋ ನಿರ್ಮೋಕಾದಿವ ಪನ್ನಗಃ ॥ ೯೧ ॥
ಶ್ರಾದ್ಧಂ ಕರೋತಿ ಯಸ್ತತ್ರ ಪಿತೃಭಕ್ತೋ ನರೋ ಮುನೇ ।
ದಶಾನಾಮಶ್ವಮೇಧಾನಾಂ ಪ್ರಾಪ್ನೋತಿ ಸಕಲಂ ಫಲಂ ॥ ೯೨ ॥
ಪಿತೄನುದ್ದಿಶ್ಯ ಯತ್ಕಿಂಚಿತ್ಕೋಟಿತೀರ್ಥೇ ಪ್ರದೀಯತೇ ।
ತತ್ಸರ್ವಂ ಕೋಟಿಗುಣಿತಂ ಜಾಯತೇ ನಾಽತ್ರ ಸಂಶಯಃ ॥ ೯೩ ॥
ತತ್ರ ತೀರ್ಥೇ ನರೋ ಯಸ್ತು ಗಾಂ ದದಾತಿ ಪಯಸ್ವಿನೀಂ ।
ಸರ್ವಲೋಕಾನತಿಕ್ರಮ್ಯ ಸ ಗಚ್ಛೇತ್ಪರಮಾಂ ಗತಿಂ ॥ ೯೪ ॥
ಯಾವಂತ್ಯಂಗೇಷು ರೋಮಾಣಿ ತತ್ಪ್ರಸೂತಿ ಕುಲೇಷು ಚ ।
ತಾವದ್ಯುಗಸಹಸ್ರಾಣಿ ಶಿವಲೋಕೇ ಮಹೀಯತೇ ॥ ೯೫ ॥

---

೯೦. ಆದುದರಿಂದ ಕೋಟಿತೀರ್ಥವು ಮೂರು ಲೋಕಗಳಲ್ಲಿಯೂ ಅತಿ ಪುಣ್ಯಪ್ರದವಾದುದೆಂದು ಹೇಳಲ್ಪಡುವುದು. ಅದರ ಬಳಿಯಲ್ಲಿಯೇ ಚತುರ್ಮುಖನು ಕೋಟಿತೀರ್ಥೇಶ್ವರನೆಂಬ ಶಿವಲಿಂಗವನ್ನು ಪ್ರತಿಷ್ಠೆಮಾಡಿರುವನು.

೯೧. ಕೋಟಿತೀರ್ಥದಲ್ಲಿ ಮಿಂದು ಕೋಟೀಶ್ವರಲಿಂಗದ ದರ್ಶನವನ್ನು ಮಾಡಲು ಮಾನವನು ಪೊರೆಯನ್ನು ಕಳಚಿದ ಹಾವಿನಂತೆ ಪಾತಕಗಳೆಲ್ಲವನ್ನೂ ಕಳೆದುಕೊಳ್ಳುವನು.

೯೨. ಮಹಾಮುನಿಯೆ! ಪಿತೃಭಕ್ತನಾದ ನರನು ಆ ತೀರ್ಥದಲ್ಲಿ ಶ್ರಾದ್ಧಕರ್ಮವನ್ನು ಮಾಡಲು ಹತ್ತು ಅಶ್ವಮೇಧಯಜ್ಞಗಳನ್ನು ಮಾಡಿದ ಸಮಗ್ರಫಲವನ್ನು ಪಡೆಯುವನು.

೯೩. ಕೋಟಿತೀರ್ಥದಲ್ಲಿ ಪಿತೃಗಳನ್ನುದ್ದೇಶಿಸಿ ಎಷ್ಟೇ ಅಲ್ಪವನ್ನು ದಾನ ಮಾಡಿದರೂ, ಅದು ಕೋಟಿಗುಣಿತವಾದ ಫಲವನ್ನೀಯುವುದರಲ್ಲಿ ಸಂದೇಹವಿಲ್ಲ.

೯೪. ಆ ತೀರ್ಥದಲ್ಲಿ ಯಾವನು ಹಾಲುಕರೆಯುತ್ತಿರುವ ಆಕಳನ್ನು ದಾನ ಮಾಡುವನೊ, ಅವನು ಸಕಲ ಲೋಕಗಳನ್ನೂ ಅತಿಕ್ರಮಿಸಿ ಉತ್ತಮ ಪದವಿಯನ್ನು ಪಡೆಯುವನು.

೯೫. ಆ ಆಕಳಿನ ಕರುಗಳ ದೇಹಗಳಲ್ಲಿ ಎಷ್ಟು ರೋಮಗಳಿರುವುವೊ, ಅಷ್ಟು ಸಾವಿರವರ್ಷಗಳವರೆಗೂ ದಾನಮಾಡಿದವನು ಶಿವಲೋಕದಲ್ಲಿ ಪೂಜಿತನಾಗುವನು.

ಪೌರ್ಣಮಾಸ್ಯಾಮಮಾವಾಸ್ಯಾಂ ಪಶ್ಯೇಚ್ಛಕ್ತಿಧರಂ ತು ಯಃ ।
ನಾಽಪುತ್ರೋ ನಾಽಧನೋ ರೋಗೀ ಸಪ್ತಜನ್ಮಸು ಜಾಯತೇ ॥ ೯೬ ॥
ಜಲಪ್ರವೇಶಂ ಯಃ ಕುರ್ಯಾತ್ತತ್ರ ತೀರ್ಥೇ ನರೋತ್ತಮಃ ।
ಸೋಽಕ್ಷಯಂ ಲಭತೇ ಲೋಕಂ ಯಾವಚ್ಚಂದ್ರದಿವಾಕರೌ ॥ ೯೭ ॥
ವೃಷೋತ್ಸರ್ಗಂ ತು ಯಃ ಕುರ್ಯಾತ್ಪಿತೃಭಕ್ತೋ ನರೋ ಮುನೇ ।
ಸೋಽಕ್ಷಯಂ ಲಭತೇ ಸ್ಥಾನಂ ಯತ್ಸುರೈರಪಿ ದುರ್ಲಭಂ ॥ ೯೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶಕ್ತಿಭೇದತೀರ್ಥಮಾಹಾತ್ಮ್ಯವರ್ಣನಂ" ನಾಮ ಚತುಸ್ತ್ರಿಂಶೋಽಧ್ಯಾಯಃ

---

೯೬. ಹುಣ್ಣಿಮೆ, ಅಮಾವಾಸ್ಯೆಗಳಲ್ಲಿ ಶಕ್ತಿಧರನದರ್ಶನವನ್ನು ಮಾಡಿದ ಮಾನವನು ಏಳುಜನ್ಮಗಳವರೆಗೂ ಸಂತಾನಹೀನನಾಗಲಿ, ದರಿದ್ರನಾಗಲಿ, ರೋಗಿಯಾಗಲಿ ಆಗುವುದಿಲ್ಲ.

೯೭. ಯಾವ ಮನುಷ್ಯೋತ್ತಮನು ಆ ತೀರ್ಥದಲ್ಲಿ ಮುಳುಗಿ ದೇಹವನ್ನು ತ್ಯಜಿಸುವನೊ, ಅವನು ಸೂರ್ಯಚಂದ್ರರಿರುವವರೆಗೂ ಅಕ್ಷಯಲೋಕಗಳ ಸೌಖ್ಯಗಳನ್ನನುಭವಿಸುವನು.

೯೮. ಮುನಿಯೆ! ಪಿತೃಭಕ್ತನಾದ ನರನು ಆ ತೀರ್ಥದ ಬಳಿಯಲ್ಲಿ ವೃಷೋತ್ಸರ್ಗವನ್ನು ಮಾಡಲು ದೇವತೆಗಳಿಗೂ ದುರ್ಲಭವೆನಿಸಿದ ಶಾಶ್ವತ ಪದವಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಶಕ್ತಿಭೇದತೀರ್ಥಮಾಹಾತ್ಮ್ಯವರ್ಣನ"ವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚತ್ರಿಂಶೋಽಧ್ಯಾಯಃ

## ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಸ್ವರ್ಣಕ್ಷುರೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಮಹೇಶ್ವರಂ ।
ಕಪಿಲಾಶತದಾನಸ್ಯ ಫಲಮಪ್ಯಧಿಕಂ ಭವೇತ್ ॥ ೧ ॥
ವಾಪ್ಯಾಂ ಪಿತಾಮಹಸ್ಯಾಽಪಿ ಯಃ ಸ್ನಾಯಾದ್ವಿಜಿತೇಂದ್ರಿಯಃ ।
ಹಂಸಯುಕ್ತೇನ ಯಾನೇನ ಬ್ರಹ್ಮಲೋಕಂ ಸ ಗಚ್ಛತಿ ॥ ೨ ॥
ತೈಲಾಽಭಿಧಾನಮಾತೄಣಾಂ ರಾತ್ರೌ ಯಚ್ಛತಿ ಯೋ ಬಲಿಂ ।
ತಸ್ಯ ಸಿದ್ಧಿರ್ಭವೇತ್ಸದ್ಯೋ ಮೃತಃ ಶಿವಪುರಂ ವ್ರಜೇತ್ ॥ ೩ ॥
ವಿಷ್ಣುವಾಪ್ಯಾಂ ನರಃ ಸ್ನಾತ್ವಾ ಚೈತ್ರೇ ವಾ ಫಾಲ್ಗುನೇಽಥವಾ ।
ಜಾಗರಂ ಯಸ್ತು ಕುರ್ವೀತ ಸೋಪವಾಸೋ ಜಿತೇಂದ್ರಿಯಃ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೪ ॥

---

## ಕನ್ನಡದ ಅನುವಾದ

### ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಸ್ವರ್ಣಕ್ಷುರತೀರ್ಥದಲ್ಲಿ ಸ್ನಾನ ಮಾಡಿ ಅಲ್ಲಿರುವ ಮಹೇಶ್ವರನನ್ನು ನೋಡಲು ನೂರು ಕಪಿಲೆಯಾಕಳುಗಳನ್ನು ದಾನಮಾಡಿದ ಉತ್ತಮ ಫಲವು ಲಭಿಸುವುದು.

೨. ಬ್ರಹ್ಮವಾಪಿಯಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿರುವ ನರನು ಹಂಸಪಕ್ಷಿಗಳನ್ನು ಹೂಡಿರುವ ವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೋಗುವನು.

೩. ತೈಲಮಾತೃಕೆಯರೆಂದು ಕರೆಯಲ್ಪಡುವ ಮಾತೃದೇವತೆಗಳಿಗೆ ಯಾವನು ರಾತ್ರಿಕಾಲದಲ್ಲಿ ನೈವೇದ್ಯವನ್ನು ಸಮರ್ಪಿಸುವನೊ, ಅವನಿಗೆ ಶೀಘ್ರವಾಗಿಯೇ ಕಾರ್ಯಸಿದ್ಧಿಯಾಗುವುದಲ್ಲದೆ, ಮೃತನಾದ ಬಳಿಕ ಕೈಲಾಸವನ್ನೂ ಸೇರುವನು.

೪. ಚೈತ್ರ ಮತ್ತು ಫಾಲ್ಗುನ ಮಾಸಗಳಲ್ಲಿ ನರನು ವಿಷ್ಣುವಾಪಿಯಲ್ಲಿ ಸ್ನಾನವನ್ನು ಮಾಡಬೇಕು; ಉಪವಾಸದಿಂದ ಇಂದ್ರಿಯಸಂಯಮಸಹಿತವಾಗಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಲು ಸಮಸ್ತಪಾತಕಗಳಿಂದಲೂ ಮುಕ್ತನಾಗಿ ವಿಷ್ಣುಲೋಕಕ್ಕೂ ಹೋಗುವನು.

ಅಭಯೇಶ್ವರದೇವಸ್ಯ ಭಕ್ತ್ಯಾ ನಿಯತಮಾನಸಃ ।
ಪೂಜಾಬಂಧಮಥೋ ದೃಷ್ಟ್ವಾ ರುದ್ರಲೋಕಂ ಸ ಗಚ್ಛತಿ ॥ ೫ ॥
ಲೋಕೇ ತು ಜಾಯತೇ ದಾತಾ ಸಾರ್ವಭೌಮೋ ಮಹೀಪತಿಃ ।
ಯಸ್ತ್ವಗಸ್ತ್ಯೇಶ್ವರಂ ಗಚ್ಛೇದೇಕಚಿತ್ತೋ ನರೋ ಮುನೇ ॥ ೬ ॥
ದೃಷ್ಟ್ವಾಽಗಸ್ತ್ಯೇಶ್ವರಂ ದೇವಂ ಸೋಪವಾಸೋ ಜಿತೇಂದ್ರಿಯಃ ।
ಅಗಸ್ತ್ಯೋದಯವೇಲಾಯಾಂ ಮುಚ್ಯತೇ ಸರ್ವಪಾತಕೈಃ ॥ ೭ ॥
ಕೃತ್ವಾಽಗಸ್ತ್ಯಂ ಚ ಸೌವರ್ಣಂ ರೌಪ್ಯಂ ವಾಽಥ ಸ್ವಶಕ್ತಿತಃ ।
ಪಂಚರತ್ನಸಮಾಯುಕ್ತಂ ವಸ್ತ್ರೇಣ ಚ ಸಮನ್ವಿತಂ ॥ ೮ ॥
ತತ್ಕಾಲೀನೈಃ ಫಲೈಃ ಪುಷ್ಪೈಃ ಪೂಜನೀಯೋ ವಿಧಾನತಃ ।
ವಿಧಾನಂ ತಸ್ಯ ವಕ್ಷ್ಯಾಮಿ ಚಾತುರ್ವರ್ಣ್ಯೇ ದ್ವಿಜೋತ್ತಮ ॥ ೯ ॥
ಸಪ್ತಧಾನ್ಯಾನಿ ಮುಖ್ಯಾನಿ ತಾವಂತ್ಯೇವ ಫಲಾನಿ ಚ ।
ಏಕಂ ಧಾನ್ಯಂ ಫಲಂ ಚೈಕಮಗ್ರೇ ತ್ಯಾಜ್ಯಂ ಭವೇನ್ಮುನೇ ॥ ೧೦ ॥
ಯಾವದ್ವೈ ಸಪ್ತವರ್ಷಾಣಿ ವ್ರತಮೇವಂ ಸಮಾಚರೇತ್ ॥ ೧೧ ॥

---

೫. ಭಕ್ತಿಯಿಂದಲೂ ಏಕಾಗ್ರಚಿತ್ತದಿಂದಲೂ ಅಭಯೇಶ್ವರದೇವನಿಗೆ ನಡೆಯುವ ಪೂಜೆಯನ್ನು ನೋಡುತ್ತಿರಲು ಮನುಜನು ರುದ್ರಲೋಕಕ್ಕೆ ಹೋಗುವನು.

೬. ವ್ಯಾಸನೆ! ಯಾವನು ಅನನ್ಯಭಕ್ತಿಯಿಂದ ಅಗಸ್ತ್ಯೇಶ್ವರನನ್ನು ದರ್ಶನಮಾಡುವನೊ, ಅವನು ಮಹಾದಾನಶೀಲನೂ, ಸಾರ್ವಭೌಮನೂ, ಮಹಾರಾಜನೂ ಆಗಿ ಜನಿಸುವನು.

೭. ಹಸ್ತಾನಕ್ಷತ್ರೋದಯದ ಸಮಯದಲ್ಲಿ ಉಪವಾಸವನ್ನು ಮಾಡಿ ಜಿತೇಂದ್ರಿಯನಾಗಿರುವನು ಅಗಸ್ತ್ಯೇಶ್ವರನನ್ನು ನೋಡಲು ಸಕಲಪಾಪಗಳಿಂದಲೂ ಮುಕ್ತನಾಗುವನು.

೮–೯. ಚಿನ್ನದಲ್ಲಿಯಾಗಲಿ, ಬೆಳ್ಳಿಯಲ್ಲಾಗಲಿ ಅಗಸ್ತ್ಯಮುನಿಯ ಪ್ರತಿಮೆಯನ್ನು ಯಥಾಶಕ್ತಿಯಾಗಿ ಮಾಡಿಸಿ ಪಂಚರತ್ನಗಳಿಂದಲಂಕರಿಸಿ ದಿವ್ಯವಸ್ತ್ರವನ್ನುಡಿಸಿ ಆ ಕಾಲದಲ್ಲಿ ಸಿಕ್ಕುವ ಪುಷ್ಪಗಳಿಂದ ವಿಧ್ಯುಕ್ತವಿಧಾನದಿಂದ ಪೂಜೆಯನ್ನು ಮಾಡಬೇಕು. ಓ ಬ್ರಾಹ್ಮಣೋತ್ತಮನೆ! ನಾಲ್ಕು ವರ್ಣದವರೂ ಮಾಡಬಹುದಾದ ಈ ವ್ರತದ ಕ್ರಮವನ್ನು ಹೇಳುವೆನು.

೧೦. ಏಳು ಮುಖ್ಯಧಾನ್ಯಗಳನ್ನೂ, ಏಳು ಮುಖ್ಯಫಲಗಳನ್ನೂ ಶೇಖರಿಸಿ ಒಂದು ವರ್ಷಕಾಲ ಒಂದು ಧಾನ್ಯವನ್ನೂ, ಒಂದು ಫಲವನ್ನೂ ದಾನಮಾಡುತ್ತಿರಬೇಕು.

೧೧. ಇಂತು ಏಳುವರ್ಷಗಳು ಕಳೆಯುವವರೆಗೂ ಈ ವ್ರತವನ್ನು ನಡೆಸಬೇಕು.

॥ ಅರ್ಘ್ಯಮಂತ್ರಃ ॥

ಕಾಶಪುಷ್ಪಪ್ರತೀಕಾಶ ವಹ್ನಿಮಾರುತ ಸಂಭವ ।
ಮಿತ್ರಾವರುಣಯೋಃ ಪುತ್ರ ಕುಂಭಯೋನೇ ನಮೋಽಸ್ತು ತೇ ॥ ೧೨ ॥
ದತ್ತೇಽರ್ಘೇ ಯತ್ಫಲಂ ವ್ಯಾಸ ತದ್ವೈ ಹ್ಯೇಕಮನಾಃ ಶೃಣು ।
ಪುತ್ರವಾನ್ಧನವಾಂಶ್ಚೈವ ಜಾಯತೇ ನಾಽತ್ರ ಸಂಶಯಃ ॥ ೧೩ ॥
ಮೃತಃ ಸ್ವರ್ಗಮವಾಪ್ನೋತಿ ಸಂಪನ್ನೇ ಜಾಯತೇ ಕುಲೇ ।
ಮರ್ತ್ಯಲೋಕಂ ಪುನಃ ಪ್ರಾಪ್ಯ ಮಹಾಯೋಗೀಶ್ವರೋ ಭವೇತ್॥ ೧೪ ॥
ಯಶ್ಚೈತಚ್ಛೃಣುಯಾನ್ನಿತ್ಯಂ ಪಠೇದ್ವಾ ಸುಸಮಾಹಿತಃ ।
ಸರ್ವಪಾಪವಿನಿರ್ಮುಕ್ತೋ ಮುನಿಲೋಕೇ ಸ ಮೋದತೇ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅಗಸ್ತ್ಯೇಶ್ವರ ಮಾಹಾತ್ಮ್ಯವರ್ಣನಂ" ನಾಮ ಪಂಚತ್ರಿಂಶೋಽಧ್ಯಾಯಃ

---

೧೨. ಅರ್ಘ್ಯಕ್ಕೆ ಈ ಮಂತ್ರವನ್ನು ಹೇಳಬೇಕು. "ಕಾಶಪುಷ್ಪದಂತೆ ಬೆಳ್ಳಗಿರುವವನೂ, ಅಗ್ನಿವಾಯುಗಳ ಪುತ್ರನೂ, ಮಿತ್ರಾವರುಣರ ಸುತನೂ, ಕುಂಭಜನ್ಮನೂ ಆದ ನಿನ್ನನ್ನು ನಮಸ್ಕರಿಸುವೆನು."

೧೩. ವ್ಯಾಸಮುನಿಯೆ! ಈ ಮಂತ್ರದಿಂದ ಅರ್ಘ್ಯವನ್ನು ಕೊಡಲು ಪಡೆಯುವ ಫಲವನ್ನು ತದೇಕಚಿತ್ತದಿಂದ ಕೇಳು. ಹಾಗೆ ಅರ್ಘ್ಯವಿತ್ತಾತನು ಪುತ್ರವಂತನೂ, ಧನಾಢ್ಯನೂ ಆಗುವುದರಲ್ಲಿ ಸಂದೇಹವಿಲ್ಲ;

೧೪. ಮೃತನಾಗಲು ಸ್ವರ್ಗಲೋಕಕ್ಕೆ ಹೋಗುವನು: ಪುನಃ ಮರ್ತ್ಯಲೋಕವನ್ನು ಸೇರಲು ಸರ್ವೈಶ್ವರ್ಯಸಮನ್ವಿತವಾದ ಕುಲದಲ್ಲಿ ಜನಿಸುವನು; ಅಥವಾ ಮಹಾಯೋಗಿಶ್ರೇಷ್ಠನಾಗುವನು.

೧೫. ಈ ಅಗಸ್ತ್ಯೇಶ್ವರಮಾಹಾತ್ಮ್ಯವನ್ನು ನಿತ್ಯವೂ ಸಮಾಹಿತಚಿತ್ತದಿಂದ ಯಾವನು ಕೇಳುವನೊ, ಅಥವ ಓದುವನೊ ಅವನು ಸಮಸ್ತ ಪಾತಕಗಳಿಂದ ಮುಕ್ತನಾಗಿ ಮುನಿಲೋಕದಲ್ಲಿ ಸುಖಪಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನ"ವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ತ್ರಿಂಶೋಽಧ್ಯಾಯಃ

### ನರದೀಪವಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

ಮಹಾಕಾಲಂ ಕಿಮರ್ಥಂ ತು ಕಿಂ ವಾ ಶಿವಪದಂ ಸ್ಮೃತಂ ।
ಕೋಟೀಶ್ವರಂ ಕಿಮರ್ಥಂ ತು ಪಾವಕಂ ತತ್ಕಿಮುಚ್ಯತೇ ॥ ೧ ॥
ನರದೀಪಂ ಕಿಮರ್ಥಂ ತು ದ್ವಿತೀಯಾ ವಟಮಾತರಃ ।
ಅಭಯೇಶ್ವರಂ ಕಿಮರ್ಥಂ ತು ಶಂಖೋದ್ಧಾರಣಮೇವ ಚ ॥ ೨ ॥
ಶೂಲೇಶ್ವರಂ ಕಿಮರ್ಥಂ ತು ಕಿಮೋಂಕಾರಸ್ತು ಕಥ್ಯತೇ ।
ಧೂತಪಾಪಂ ಕಿಮರ್ಥಂ ತು ಕಿಮಂಗಾರೇಶ್ವರಂ ತಥಾ ॥ ೩ ॥
ಪುರೀಚೋಜ್ಜಯಿನೀ ದಿವ್ಯಾ ಸಪ್ತಕಲ್ಪಾ ಕಥಂ ಸ್ಮೃತಾ ।
ಕಥಯಸ್ವ ಮುನಿಶ್ರೇಷ್ಠ ತಸ್ಯಾ ನಾಮಾನಿ ಯಾನಿ ಚ ॥ ೪ ॥

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಯಥಾ ಖ್ಯಾತಾ ಪುರೀ ದಿವ್ಯಾ ಕುಶಸ್ಥಲೀ ।
ನಾಮತಃ ಕರ್ಮತಃ ಶ್ರೇಷ್ಠಾ ಸಪ್ತಕಲ್ಪಾಽನುವಾಸಿನೀ ॥ ೫ ॥

---

### ಕನ್ನಡದ ಅನುವಾದ

#### ನರದೀಪವಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಮಹಾಕಾಲವನಕ್ಕೆ ಶಿವಪದವೆಂದೂ, ಕೋಟೇಶ್ವರವೆಂದೂ ಏಕೆ ಹೆಸರಾಯಿತು? ಪಾವಕಕ್ಷೇತ್ರವೆಂದು ಅದನ್ನೇಕೆ ಕರೆಯುವರು?

೨. ನರದೀಪವೆಂಬುದೇಕೆ? ವಟಮಾತೃಕ್ಷೇತ್ರವೆಂದೂ, ಅಭಯೇಶ್ವರವೆಂದೂ, ಶಂಖೋದ್ಧಾರಕ್ಷೇತ್ರವೆಂದೂ ಏಕೆ ಕರೆಯುವರು?

೩. ಶೂಲೇಶ್ವರ, ಓಂಕಾರೇಶ್ವರ, ಧೂತಪಾಪೇಶ್ವರ ಮತ್ತು ಅಂಗಾರೇಶ್ವರರು ಇಲ್ಲಿ ಹೇಗೆ ನೆಲಸಿದರು?

೪. ದಿವ್ಯವಾದ ಈ ಉಜ್ಜಯಿನೀನಗರಿಯು ಏಳುಕಲ್ಪಗಳವರೆಗೂ ಇರುವುದೆಂದು ಹೇಳಿರುವುದು ಹೇಗೆ? ಎಲೈ ಮುನಿಶ್ರೇಷ್ಠನೆ! ಆ ಕ್ಷೇತ್ರಕ್ಕೆ ಮತ್ತಾವ ಹೆಸರುಗಳಿರುವುವೆಂಬುದನ್ನೂ ನನಗೆ ವಿಸ್ತರಿಸಿ ಹೇಳು.

೫. ಸನತ್ಕುಮಾರನು ಹೇಳುತ್ತಾನೆ:—ಅಯ್ಯಾ ವ್ಯಾಸನೆ! ಕೇಳು. ದಿವ್ಯವಾದ ಕುಶಸ್ಥಲಿಯು ಪ್ರಖ್ಯಾತವಾಗಿ ಹೆಸರಿನಿಂದಲೂ, ಮಹಿಮೆಯಿಂದಲೂ ಶ್ರೇಷ್ಠವೆನಿಸಿ ಏಳು ಕಲ್ಪಗಳವರೆಗೂ ನಿಂತಿರುವ ವಿಷಯವನ್ನು ಹೇಳುವೆನು.

ಪ್ರಾಕ್ಕಲ್ಪೇ ಸ್ವರ್ಣಶೃಂಗಾಖ್ಯಾ ದ್ವಿತೀಯೇ ತು ಕುಶಸ್ಥಲೀ ।
ತೃತೀಯೇಽವಂತಿಕಾ ಪ್ರೋಕ್ತಾ ಚತುರ್ಥೇತ್ವಮರಾವತೀ ॥ ೬ ॥
ವಿಖ್ಯಾತಾ ಪಂಚಮೇ ಕಲ್ಪೇ ಪುರೀ ಚೂಡಾಮಣೀತಿ ಚ ।
ಷಷ್ಠೇ ಪದ್ಮಾವತೀ ಜ್ಞೇಯಾ ಸಪ್ತಮೇ ಚೋಜ್ಜಯಿನೀಪುರೀ ॥ ೭ ॥
ಪುನರಂತೇ ತು ಕಲ್ಪಸ್ಯ ಸ್ವರ್ಣಶೃಂಗಾದಿಕಾ ಸ್ಮೃತಾ ॥ ೮ ॥
ಏತಾನಿ ಸಪ್ತನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೯ ॥
ಉಜ್ಜಯಿನ್ಯಾಂ ಪುರಾ ರಾಜಾ ಬಭೂವ ಕಿಲಚಾಽಂಧಕಃ ।
ತಸ್ಯ ಪುತ್ರೋ ಮಹಾವೀರ್ಯೋ ನಾಮ್ನಾ ಕನಕದಾನವಃ ॥ ೧೦ ॥
ಯುದ್ಧಾರ್ಥಂ ಸ ಮಹಾವೀರ್ಯಃ ಶಕ್ರಂ ಯುದ್ಧೇ ಸಮಾಹ್ವಯತ್ ।
ಕ್ರೋಧಾದಿಂದ್ರೇಣ ಸಂಗ್ರಾಮೇ ಯುಧ್ಯಮಾನೋ ನಿಪಾತಿತಃ ॥ ೧೧ ॥
ನಿಹತ್ಯ ದಾನವಂ ಶಕ್ರೋ ಭಯಾದಂಧಾಽಸುರಸ್ಯ ತು ।
ಜಗಾಮ ಶಂಕರಾಽನ್ವೇಷೀ ಕೈಲಾಸಂ ಶಂಕರಾಲಯಂ ॥ ೧೨ ॥

---

೬. ಮೊದಲನೆಯ ಕಲ್ಪದಲ್ಲಿ ಸ್ವರ್ಣಶೃಂಗವೆಂದೂ, ಎರಡನೆಯದರಲ್ಲಿ ಕುಶಸ್ಥಲಿಯೆಂದೂ, ಮೂರನೆಯದರಲ್ಲಿ ಅವಂತಿಯೆಂದೂ, ನಾಲ್ಕನೆಯದರಲ್ಲಿ ಅಮರಾವತಿಯೆಂದೂ ಕರೆಯಲ್ಪಡುವುದು.

೭. ಐದನೆಯ ಕಲ್ಪದಲ್ಲಿ ಚೂಡಾಮಣಿಯೆಂಬ ಹೆಸರಿನಿಂದ ಪ್ರಖ್ಯಾತವಾಗಿ, ಆರನೆಯದರಲ್ಲಿ ಪದ್ಮಾವತಿಯೆಂದೂ, ಏಳನೆಯದರಲ್ಲಿ ಉಜ್ಜಯಿನಿಯೆಂದೂ ಹೆಸರುಳ್ಳದ್ದಾಗುವುದು.

೮. ಪುನಃಕಲ್ಪಾಂತ್ಯದಲ್ಲಿ ಸ್ವರ್ಣಶೃಂಗವೆಂದೇ ಕರೆಯಲ್ಪಡುವುದು.

೯. ಪ್ರಾತಃಕಾಲದಲ್ಲಿ ಎದ್ದಕೂಡಲೆ ಯಾವನು ಕ್ಷೇತ್ರದ ಈ ಏಳು ಹೆಸರುಗಳನ್ನು ಪಠಿಸುವನೊ, ಅವನು ಏಳು ಜನ್ಮಗಳಲ್ಲಿ ಮಾಡಿದ ಪಾತಕಗಳಿಂದ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

೧೦. ಉಜ್ಜಯಿನೀನಗರದಲ್ಲಿ ಹಿಂದೆ ಅಂಧಕನೆಂಬ ರಾಕ್ಷಸನು ರಾಜನಾಗಿದ್ದನು. ಅವನಿಗೆ ಮಹಾಪರಾಕ್ರಮಿಯಾದ ಕನಕದಾನವನೆಂಬುವನು ಮಗನಾಗಿದ್ದನು.

೧೧. ತನ್ನ ಬಲದಿಂದ ಗರ್ವಿಷ್ಠನಾದ ಆ ಕನಕನು ಇಂದ್ರನನ್ನು ಯುದ್ಧಕ್ಕೆ ಕರೆಯಲು ಇಂದ್ರನು ಕೋಪಗೊಂಡು ರಣರಂಗದಲ್ಲಿ ಅವನನ್ನು ಹೊಡೆದು ಕೆಡಪಿದನು.

೧೨–೧೩. ಆ ರಾಕ್ಷಸನನ್ನು ಸಂಹರಿಸಿದ ಬಳಿಕ ಇಂದ್ರನು ಆ ದಾನವನ ತಂದೆಯಾದ ಅಂಧಕಾಸುರನಿಗೆ ಭಯಗೊಂಡು ಶಂಕರನನ್ನು ಹುಡುಕುತ್ತ ಆತನ

ದೃಷ್ಟ್ವಾ ಪ್ರಣಮ್ಯ ದೇವೇಶಂ ಚಂದ್ರಾರ್ಧಕೃತಶೇಖರಂ ।
ಭೀತೋ ವಿಜ್ಞಾಪಯಾಮಾಸ ಸ ಚಾಶ್ರ್ವಾಕುಲಲೋಚನಃ ॥ ೧೩ ॥
ಅಭಯಂ ದೇಹಿ ಮೇ ದೇವ ದಾನವಾದಂಧಕಾಚ್ಚ ವೈ ।
ಶಕ್ರಸ್ಯೇತ್ಥಂ ವಚಃ ಶ್ರುತ್ವಾ ಶರಣಾಗತವತ್ಸಲಃ ।
ದದಾವಭಯಮೇವಾಽಸೌ ಮಾ ಭೈಸ್ತ್ವಮಂಧಕಾದ್ಧಿ ವೈ ॥ ೧೪ ॥
ಕೃತ್ವಾ ರೂಪಂ ಮಹಾದೇವೋ ವಿಶ್ವರೂಪಂ ಸುಭೈರವಂ ।
ಸರ್ಪೈರ್ಲಲದ್ಭಿರತ್ಯುಗ್ರೈಸ್ತೀಕ್ಷ್ಣದಂಷ್ಟ್ರೈರ್ವಿಷೋಲ್ಬಣೈಃ ॥ ೧೫ ॥
ಪಾತಾಲೋದರರೂಪೈಶ್ಚ ಭೈರವಾರಾವನಾದಿಭಿಃ ।
ಭುಜೈರನೇಕಸಾಹಸ್ರೈರ್ಬಹುಶಸ್ತ್ರಧೃತೈಸ್ತಥಾ ॥ ೧೬ ॥
ಸಿಂಹಚರ್ಮಪರೀಧಾನಂ ವ್ಯಾಘ್ರತ್ವಗುತ್ತರೀಯಕಂ ।
ಗಜಾಽಜಿನಕೃತಾಽಽಟೋಪಂ ಚಂದ್ರಾಽಗ್ನಿರವಿಲೋಚನಂ ॥ ೧೭ ॥
ಮಹಾಮಹೀಧ್ರತುಲ್ಯಾಭ್ಯಾಂ ಜಂಘಾಭ್ಯಾಂ ಭೂಷಿತಂ ಸದಾ ।
ಕ್ಷೋಭಯಂಶ್ಚಾಲಯನ್ಸರ್ವಾನ್ಪಾತಾಲಸ್ಯ ತಲಾಽವಧಿ ॥ ೧೮ ॥

---

ನಿವಾಸವಾದ ಕೈಲಾಸವನ್ನು ಸೇರಿದನು. ತರುವಾಯ ಅವನು ಅರ್ಧಚಂದ್ರನನ್ನು ಜಟಾಜೂಟದಲ್ಲಿ ಧರಿಸಿದ ಆತನನ್ನು ಕಂಡು ನಮಸ್ಕರಿಸಿ ಭಯದಿಂದ ಕಣ್ಣೀರು ಸುರಿಸುತ್ತ ಇಂತೆಂದು ವಿಜ್ಞಾಪಿಸಿಕೊಂಡನು.

೧೪. "ಪರಮೇಶ್ವರಾ! ಅಂಧಕದಾನವನ ಉಪಟಳದಿಂದ ನನಗೆ ಅಭಯ ವನ್ನು ಕೊಡು". ಹೀಗೆ ಬೇಡುತ್ತಿರುವ ಇಂದ್ರನ ಮಾತುಗಳನ್ನು ಕೇಳಿ ಶರಣಾಗತ ವತ್ಸಲನಾದ ಮಹಾದೇವನು "ನೀನು ಅಂಧಕನಿಗೆ ಹೆದರಬೇಡ" ಎಂದು ಅಭಯವನ್ನಿತ್ತನು.

೧೫–೧೮. ಆಗ ಮಹೇಶ್ವರನು ತನ್ನ ವಿಶ್ವರೂಪವನ್ನು ಸ್ವೀಕರಿಸಿದನು. ಭಯಂಕರವಾದ ಆ ರೂಪವನ್ನಲಂಕರಿಸಿದ್ದ ಕಾಲಸರ್ಪಗಳು ನಾಲಿಗೆಗಳನ್ನು ಚಾಚಿ, ವಿಷಪೂರಿತಗಳಾದ ತೀಕ್ಷ್ಣದಂಷ್ಟ್ರಗಳನ್ನು ತೋರುತ್ತಿದ್ದುವು. ಒಂದೊಂದು ಸರ್ಪದ ದೇಹವೂ ಪಾತಾಳಲೋಕದ ಬಾಯಂತಿದ್ದು ಎಲ್ಲವುಗಳೂ ಭೀಕರವಾಗಿ ಧ್ವನಿಗೈಯುತ್ತಿದ್ದುವು. ಅನೇಕಸಾವಿರ ಕೈಗಳಲ್ಲಿ ಅಸಂಖ್ಯಾತ ಗಳಾದ ಆಯುಧಗಳನ್ನು ಆ ಪರಮಶಿವನು ಧರಿಸಿದ್ದನು. ಸಿಂಹದ ಚರ್ಮ ವನ್ನುಟ್ಟು, ಹುಲಿಯ ಚರ್ಮದ ಉತ್ತರೀಯಕವನ್ನು ಹೊದೆದಿದ್ದನು. ಗಜ ಚರ್ಮದ ಮೇಲುಹೊದಿಕೆಯಿಂದ ಕೂಡಿದ್ದನು. ಚಂದ್ರ, ಅಗ್ನಿ, ಸೂರ್ಯರೇ ಆತನ ಮೂರು ಕಣ್ಣುಗಳಾಗಿದ್ದರು. ಇಂತಿರುವ ಆ ಶಿವನು ಮಹಾಪರ್ವತ ಗಳಂತಿರುವ ಕೆಳಗಾಲುಗಳಿಂದೊಪ್ಪುತ್ತ ಪಾತಾಳಲೋಕದವರೆಗೂ ಸಕಲ ಬ್ರಹ್ಮಾಂಡವನ್ನೂ ಕ್ಷೋಭೆಗೊಳಿಸುತ್ತ ಕಂಪನಗೊಳ್ಳುವಂತೆ ಮಾಡುತ್ತಿದ್ದನು.

ಈದೃಗ್ರೂಪಂ ವಿಧಾಯೇಶೋ ದನುದೈತ್ಯಭಯಾವಹಂ ।
ಅವಾತರನ್ಮಹೀಂ ಭೀಮಃ ಪಾದೇನೈಕೇನ ಶಂಕರಃ ॥ ೧೯ ॥
ತತ್ರೈವಹಿ ಹ್ರದೋ ಜಾತಃ ಸರ್ವದೈವತವಂದಿತಃ ।
ಖ್ಯಾತಂ ಶಿವಪದಂ ತದ್ಧಿ ಯತ್ಪದಾಽಽಕ್ರಾಂತವಾನ್ವಿಭುಃ ॥ ೨೦ ॥
ಪಾಪಾನಾಂ ಚ ಪುರಾ ಕೋಟಿಃ ಪಾದಾಂಗುಷ್ಠೇನ ದಾರಿತಾ ।
ಕೋಟಿತೀರ್ಥಮತಃ ಖ್ಯಾತಂ ಸರ್ವಪಾಪಪ್ರಣಾಶನಂ ॥ ೨೧ ॥
ಅಗಸ್ತ್ಯೇನ ತಥಾ ಕೋಟಿಸ್ತೀರ್ಥಾನಾಮುಪಧಾರಿತಾ ।
ಅತೋಽಪೀದಂ ಶುಭಂ ಲೋಕೇ ಕೋಟಿತೀರ್ಥಂ ಸದಾ ಸ್ಮೃತಂ ॥ ೨೨ ॥
ದೃಷ್ಟ್ವಾ ತು ತ್ರಿದಶಾಃ ಸರ್ವೇ ಸ್ನಾತಾ ವೈ ಹಿತಕಾಮ್ಯಯಾ ।
ಮಹಾಕಾಲಕೃತಂ ರೂಪಂ ಮಹಾಕಾಲಸ್ತತಃ ಸ್ಮೃತಃ ॥ ೨೩ ॥
ಅಂಧಾಽಸುರೋಽಪಿ ದನುಜಃ ಪುತ್ರಂ ಶ್ರುತ್ವಾ ಹತಂ ಯುಧಿ ।
ಕ್ರೋಧೇನ ತಮಸಾವಿಷ್ಟೋ ರಣತೂರ್ಯಾಣ್ಯವಾದಯತ್ ॥ ೨೪ ॥

---

೧೯. ಮಹಾದೇವನು ಇಂತಹರೂಪವನ್ನು ಸ್ವೀಕರಿಸಿ ದೈತ್ಯದಾನವರಿಗೆ ಭಯವನ್ನುಂಟುಮಾಡುತ್ತ ಭಯಂಕರವಾಗಿ ಒಂದುಕಾಲಿನಮೇಲೆಯೆ ಭೂಮಿಗೆ ಬಂದಿಳಿದನು.

೨೦. ಯಾವ ಪ್ರದೇಶವು ಶಿವನ ಹೆಜ್ಜೆಯಿಂದ ತುಳಿಯಲ್ಪಟ್ಟಿತೊ, ಅಲ್ಲಿಯೇ ಒಂದು ಸರೋವರವುಂಟಾಗಿ ಸರ್ವದೇವತಾವಂದ್ಯವಾಯಿತು ; ಶಿವಪದವೆಂಬ ಹೆಸರಿನಿಂದ ಪ್ರಖ್ಯಾತವಾಯಿತು.

೨೧. ಆತನ ಪಾದಾಂಗುಷ್ಠವು ಪಾಪಕೋಟಿಗಳನ್ನು ನಿರ್ಮೂಲವಮಾಡಿದ ಸ್ಥಳದಲ್ಲಿ ಕೋಟಿತೀರ್ಥವು ಪ್ರಖ್ಯಾತವಾಗಿ ಇಂದಿಗೂ ಸ್ನಾನಮಾಡಿದವರ ಸಕಲ ಪಾಪಗಳನ್ನು ನಾಶಗೊಳಿಸುತ್ತಿರುವುದು.

೨೨. ಅಲ್ಲದೆ ಅಗಸ್ತ್ಯಮುನಿಯೂ ಒಂದು ಕೋಟಿ ತೀರ್ಥಗಳನ್ನು ಇದರಲ್ಲಿ ಸನ್ನಿಹಿತಗಳನ್ನಾಗಿ ಮಾಡಿದನು. ಆದುದರಿಂದಲೂ ಈ ಪವಿತ್ರತೀರ್ಥವನ್ನು ಲೋಕದಲ್ಲಿ ಯಾವಾಗಲೂ ಕೋಟಿತೀರ್ಥವೆಂದು ಕರೆಯುವರು.

೨೩. ಇದನ್ನು ಕಂಡು ಸಕಲ ದೇವತೆಗಳೂ ತಮ್ಮ ಹಿತವನ್ನು ಕೋರಿದವರಾಗಿ ಅದರಲ್ಲಿ ಸ್ನಾನಮಾಡಿದರು. ಶಿವನು ಇಲ್ಲಿ ಮಹಾಕಾಲರೂಪವನ್ನು ಧರಿಸಿದ್ದನಾದುದರಿಂದ ಈ ಕ್ಷೇತ್ರಕ್ಕೆ ಮಹಾಕಾಲವೆಂದೂ ಹೆಸರಾಯಿತು.

೨೪. ಇತ್ತ, ಮಗನು ಯುದ್ಧದಲ್ಲಿ ಹತನಾದನೆಂಬ ವಾರ್ತೆಯನ್ನು ಕೇಳಿ ಅಂಧಕಾಸುರನು ಕೋಪಗೊಂಡು ತಮೋಗುಣದಿಂದ ಕೂಡಿದವನಾಗಿ ಯುದ್ಧ ಸನ್ನಾಹದ ವಾದ್ಯಗಳನ್ನು ಧ್ವನಿಗೈಸಿದನು.

ಸಸೈನ್ಯೋ ನಿರ್ಗತಃ ಪ್ರಾಪ್ತೋ ಯತ್ರ ತೇ ತ್ರಿದಶಾಃ ಸ್ಥಿತಾಃ ।
ಮಹತ್ಯಾ ಸೇನಯಾ ಸಾರ್ಧಂ ರಥವಾರಣಯುಕ್ತಯಾ ॥ ೨೫ ॥
ತದೈವ ದಾನವಾನ್ ವೀಕ್ಷ್ಯ ಮಹಾಹವಕೃತೋದ್ಯಮಾನ್ ।
ವೇಪಂತಸ್ತೇ ಸುಸನ್ನದ್ಧಾಃ ಶಂಭುಂ ಶರಣಮಾಯಯುಃ ॥ ೨೬ ॥
ಮಾ ಭೈರಿತಿ ಮಹಾಕಾಲೋ ದೇವಾನುಕ್ತ್ವಾ ತ್ರಿಲೋಚನಃ ।
ಗೃಹೀತ್ವಾ ಶೂಲಮಾತಿಷ್ಠದ್ದಷ್ಟದಂಷ್ಟ್ರಾಧರೋ ರುಷಾ ॥ ೨೭ ॥
ಕೋಪಯುಕ್ತೇ ವಿರೂಪಾಕ್ಷೇ ಜ್ವಾಲಾಭಿಃ ಪೂರಿತಂ ನಭಃ ।
ಅಂಧಕೇನಾಽಥ ರುಷ್ಟೇನ ಶರಕೋಟಿಸ್ತು ದುಃಸಹಾ ।
ಮುಕ್ತಾ ಜಗಾಮ ದೇವಾನಾಂ ನನಾಶ ಶಲಭಾಕೃತಿ ॥ ೨೮ ॥
ವಿಸ್ಫುಲಿಂಗಾಽರ್ಚಿಷಂ ವಹ್ನಿಂ ಮುಂಚಮಾನಃ ಪಿನಾಕಧೃಕ್ ।
ಶತಶಃ ಶಕಲೀ ಚಕ್ರೇ ತಂ ಚ ಬಾಣೈರತಾಡಯತ್ ॥ ೨೯ ॥
ಅಂಧಕೋಽಪಿ ಹಿ ಯುದ್ಧಸ್ಥಃ ಶಿಥಿಲಃ ಶಿಥಿಲಾಯುಧಃ ।
ನಿರುದ್ಧಃ ಶಂಭುನಾ ಬಾಣೈರಲಿಭಿಃ ಪಂಕಜಂ ಯಥಾ ॥ ೩೦ ॥

---

೨೫. ಮತ್ತು ರಥಗಳು ಆನೆಗಳು ಮುಂತಾದ ಪರಿಕರಗಳಿಂದೊಡಗೂಡಿದ ಅಸಂಖ್ಯಾತವಾದ ಸೈನ್ಯವನ್ನು ಕೂಡಿಸಿ ತನ್ನ ಪಟ್ಟಣದಿಂದ ಹೊರಟು ದೇವತೆಗಳು ನೆರೆದಿದ್ದಲ್ಲಿಗೆ ಬಂದು ಸೇರಿದನು.

೨೬. ಮಹಾಯುದ್ಧಕ್ಕೆ ಸನ್ನದ್ಧರಾಗಿ ಬಂದಿರುವ ದಾನವರನ್ನು ಕಂಡು ದೇವತೆಗಳೆಲ್ಲರೂ ತಮ್ಮ ಆಯುಧಗಳನ್ನು ಹಿಡಿದು ನಡುಗುತ್ತ ಪರಮೇಶ್ವರನನ್ನು ಶರಣುಹೊಕ್ಕರು.

೨೭. ಆ ದೇವತೆಗಳಿಗೆ ಹೆದರಬೇಡಿರೆಂದು ಅಭಯವನ್ನಿತ್ತು ಮಹಾ ಭಯಂಕರನಾದ ತ್ರಿನೇತ್ರನು ರೋಷದಿಂದ ತುಟಿಗಳನ್ನು ಕಚ್ಚುತ್ತ ತ್ರಿಶೂಲ ವನ್ನು ಕೈಗೆತೆಗೆದುಕೊಂಡಿದ್ದನು.

೨೮. ವಿರೂಪಾಕ್ಷನ ಕೋಪವಹ್ನಿಯ ಜ್ವಾಲೆಗಳಿಂದ ಆಕಾಶವೆಲ್ಲವೂ ತುಂಬಿತು. ಕುಪಿತನಾದ ಅಂಧಕಾಸುರನಾದರೊ ಸಹಿಸಲಸಾಧ್ಯವಾದ ಕೋಟಿ ಗಟ್ಟಳೆಯ ಬಾಣಗಳ ಮಳೆಯಿಂದ ದೇವತೆಗಳ ಸೈನ್ಯವನ್ನು ಪತಂಗದ ಹುಳು ಗಳಂತೆ ನಾಶಗೊಳಿಸುತ್ತಿದ್ದನು.

೨೯. ತನ್ನ ಮೂರನೆಯ ಕಣ್ಣಿನಿಂದ ಕಿಡಿ, ಜ್ವಾಲೆಗಳಿಂದ ಕೂಡಿದ ಬೆಂಕಿ ಯನ್ನುಗುಳುತ್ತ ಪಿನಾಕಪಾಣಿಯಾದ ಆ ಶಿವನೂ ಆ ಬಾಣವೃಷ್ಟಿಯನ್ನು ನೂರಾರು ಭಾಗಗಳಾಗಿ ಕತ್ತರಿಸಿ ಅಂಧಕಾಸುರನನ್ನೂ ಬಾಣಗಳಿಂದ ಹೊಡೆದನು.

೩೦. ಯುದ್ಧರಂಗದಲ್ಲಿ ಅಂಧಕಾಸುರನು ಮೈಯೆಲ್ಲ ಜರ್ಝರಿತನಾಗಿ ಆಯುಧಗಳನ್ನೆಲ್ಲ ಕಳೆದುಕೊಂಡು ಶಿವನ ಬಾಣಗಳಿಂದ ಸುತ್ತುವರೆಯಲ್ಪಟ್ಟು ದುಂಬಿಗಳ ಮಧ್ಯದಲ್ಲಿರುವ ಕಮಲದಂತೆ ಕಾಣುತ್ತಿದ್ದನು.

ತಸ್ಯ ಸೈನ್ಯಂ ಪ್ರವಿದ್ಧಂ ಚ ತದ್ಗಣೈರ್ಯುಧಿ ಯೋಧಿಭಿಃ ।
ಯೋಧವರ್ಯೈರ್ಹತಾ ದಿವ್ಯೈಃ ಸ್ಥಾಣುಸಾನ್ನಿಧ್ಯಮಾಶ್ರಿತೈಃ ॥ ೩೧ ॥
ತತೋಽಂಧಕೇನ ಸೈನ್ಯಂ ಸ್ವಂ ಭಿನ್ನಂ ದೃಷ್ಟ್ವಾ ತಥಾ ಸುರೈಃ ।
ಆತ್ಮಾನಂ ಚ ಮಹೇಶೇನ ವಿದ್ಧಂ ಚ ಬಾಣಕೋಟಿಭಿಃ ॥ ೩೨ ॥
ವಿದಲೀಕೃತದೇಹೋಽಸೌ ಭಯಮಾಶ್ರಿತ್ಯ ವೈ ಗತಃ ।
ಚಕಾರ ತಾಮಸೀಂ ಮಾಯಾಂ ಮಾಯಾಶತವಿಶಾರದಃ ॥ ೩೩ ॥
ತಯಾಂತರ್ಹಿತದೇವೇಶೋ ಜಗಾಮ ದಿಶಮುತ್ತರಾಂ ।
ಶಂಭುರ್ಭೀತಿಭರಂ ಬಿಭ್ರದ್ಬಭ್ರಾಮ ಭುವಿ ಭಿನ್ನಹೃತ್ ॥ ೩೪ ॥
ಯಸ್ಮಿನ್ಮಾರ್ಗೇ ಗತೋ ದೇವಸ್ತೇನ ದೈತ್ಯೋ ಜಗಾಮ ಹ ।
ವದನ್ನ ದೃಶ್ಯತೇ ಕ್ವಾಽಸೌ ಗತೋ ದುಷ್ಟಃ ಪುನಃ ಪುನಃ ॥ ೩೫ ॥
ಉವಾಚ ಚಾಽಂಧಕಃ ಶಬ್ದಂ ತಥೋವಾಚ ಮಹೇಶ್ವರಃ ।
ತತ್ರ ತೀರ್ಥಮಭೂತ್ಪನ್ನಂ ವಾಗಂಧಕಮಭಿಶ್ರುತಂ ॥ ೩೬ ॥

---

೩೧. ಅವನ ಸೈನ್ಯವೆಲ್ಲವೂ ಅವನಂತೆಯೇ ದೇವತೆಗಳ ಸೈನ್ಯದಿಂದ ಬಹುವಾಗಿ ಪೀಡಿಸಲ್ಪಟ್ಟಿತು. ಪರಮೇಶ್ವರನ ಸಾನ್ನಿಧ್ಯವನ್ನಾಶ್ರಯಿಸಿದ್ದ ದೇವಸೈನ್ಯವು ರಾಕ್ಷಸದಳವನ್ನೂ ನಿಗ್ರಹಿಸಿತು.

೩೨. ಇಂತು ಸುರರಿಂದ ತನ್ನ ಸೈನ್ಯವು ಭಿನ್ನವಾಗುತ್ತಿರುವುದನ್ನು ಕಂಡು ಅಂಧಕಾಸುರನು ತಾನೂ ಮಹೇಶ್ವರನಿಂದ ಬಾಣಕೋಟಿಗಳ ಪೆಟ್ಟನ್ನು ತಿಂದುದನ್ನು ಕುರಿತು ಯೋಚಿಸಿದನು.

೩೩. ನೂರಾರು ಮಾಯೆಗಳಲ್ಲಿ ವಿಶಾರದನಾದ ಆ ರಾಕ್ಷಸನು ತನ್ನ ದೇಹವು ನುಗ್ಗುನುಚ್ಚಾಗಲು ಭಯಗೊಂಡು ಓಡಿಹೋಗಿ ಒಂದು ತಾಮಸ ಮಾಯೆಯನ್ನು ಉಂಟುಮಾಡಿದನು.

೩೪. ಅದರಿಂದಾವೃತನಾದ ಮಹೇಶ್ವರನು ಉತ್ತರದಿಕ್ಕಿಗೆ ಹೊರಟು ಹೋದನು. ಮತ್ತು ಭಯಭಾರದಿಂದ ಎದೆಯೊಡೆದು ದಿಕ್ಕುಗಾಣದೆ ಭೂಮಿಯಲ್ಲಿ ಅಲೆದಾಡುತ್ತಿದ್ದನು.

೩೫. ಶಿವನು ಹೋದ ಮಾರ್ಗದಲ್ಲಿಯೇ ಆ ರಾಕ್ಷಸನೂ ಹೊರಟನು. ಮತ್ತೆ ಮತ್ತೆ ಮಾತನಾಡುತ್ತಿದ್ದರೂ ಆ ದುಷ್ಟನು ಎಲ್ಲಿಗೆ ಹೋದನೆಂಬುದನ್ನು ಮಾತ್ರ ಆ ಶಿವನು ಕಾಣಲಿಲ್ಲ.

೩೬. ಅಂಧಕನೂ ಶಬ್ದಮಾಡುತ್ತಿದ್ದನು. ಮಹೇಶ್ವರನೂ ಉತ್ತರವನ್ನು ಕೊಡುತ್ತಿದ್ದನು. ಆ ಸ್ಥಳದಲ್ಲಿಯೇ ವಾಗಂಧಕವೆಂದು ಪ್ರಖ್ಯಾತವಾದ ಒಂದು ತೀರ್ಥವುದ್ಭವಿಸಿತು.

ತತ್ರ ಸ್ನಾತ್ವಾ ಶುಚಿರ್ಭೂತ್ವಾ ಯೋ ವೈ ದದ್ಯಾತ್ಸಶರ್ಕರಂ ॥ ೩೭ ॥
ನವಮ್ಯಾಂ ಮಾರ್ಗಶೀರ್ಷಸ್ಯ ಶುಕ್ಲಾಯಾಂ ಶ್ರದ್ಧಯಾನ್ವಿತಃ ।
ಅಕ್ಷಯಂ ತದ್ಭವೇದ್ದತ್ತಂ ದಾತಾ ಶಿವಪುರಂ ವ್ರಜೇತ್ ॥ ೩೮ ॥
ಪಿತ್ರೂನುದ್ದಿಶ್ಯ ಯತ್ಕಿಂಚಿದ್ದೀಯತೇ ಭಕ್ತಿತಃ ಶಿವೇ ।
ತೃಪ್ತಾಸ್ತಿಷ್ಠಂತಿ ತೇ ತಾವದ್ಯಾವದಾಭೂತಸಂಪ್ಲವಂ ॥ ೩೯ ॥
ತಮಸಾ ಛಾದಿತಾ ದೇವಾಃ ಸಂಬಭೂವುಃ ಸಮಾಕುಲಾಃ ।
ಸಂಭ್ರಾಂತಮನಸಃ ಸರ್ವೇ ನ ಕಿಂಚಿದಪಿ ಮೇನಿರೇ ॥ ೪೦ ॥
ಏತಸ್ಮಿನ್ನಂತರೇ ವ್ಯಾಸ ನರಾದಿತ್ಯಃ ಸ್ವತೇಜಸಾ ।
ಉತ್ತಸ್ಥೌ ನರರೂಪೇಣ ಕುರ್ವನ್ವಿತಿಮಿರಾ ದಿಶಃ ॥ ೪೧ ॥
ನಷ್ಟೇ ತಮಸಿ ದೈತ್ಯೇಽಪಿ ಪ್ರಕಾಶೇ ಪ್ರಕಟೇ ಸತಿ ।
ದೇವಾ ಮುದಮವಾಪುಸ್ತೇ ದೃಷ್ಟ್ವಾ ನರಂ ವಿಲೋಚನೈಃ ॥ ೪೨ ॥
ಸ್ತುವಂತೋ ವಿವಿಧೈಃ ಸ್ತೋತ್ರೈರ್ನರರೂಪಂ ದಿವಾಕರಂ ॥ ೪೩ ॥

---

೩೭–೩೮. ಅದರಲ್ಲಿ ಸ್ನಾನಮಾಡಿ ಶುಚಿಯಾಗಿ ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ನವಮಿಯ ದಿನದಲ್ಲಿ ಸಕ್ಕರೆಯನ್ನಾದರೂ ಯಾವನು ದಾನಮಾಡುವನೊ, ಅವನ ದಾನವು ಅಕ್ಷಯವಾಗುವುದು. ದಾನಮಾಡಿದವನೂ ಶಿವಲೋಕವನ್ನು ಸೇರುವನು.

೩೯. ಪಿತೃಗಳನ್ನುದ್ದೇಶಿಸಿ ಅಲ್ಲಿ ಭಕ್ತಿಯಿಂದ ಅಲ್ಪಪದಾರ್ಥವನ್ನಾದರೂ ದಾನಮಾಡಬೇಕು. ಅದರಿಂದ ಪಿತೃದೇವತೆಗಳು ಮಹಾಪ್ರಳಯದವರೆಗೂ ಸಂತೃಪ್ತರಾಗಿರುವರು.

೪೦. ಅಂಧಕಾಸುರನ ಮಾಯೆಯ ತಮಸ್ಸಿನಿಂದ ಆವೃತರಾದ ದೇವತೆಗಳು ಬಹಳವಾಗಿ ವ್ಯಾಕುಲಗೊಂಡರು; ಸಂಭ್ರಮದಿಂದ ಕೂಡಿದವರಾಗಿ ಏನನ್ನೂ ತಿಳಿಯಲಾರದಾದರು.

೪೧. ಎಲೈ ವ್ಯಾಸನೆ! ಈ ಸಮಯದಲ್ಲಿ ನರಾದಿತ್ಯನು ನರರೂಪದಿಂದ ಮೇಲಕ್ಕೆದ್ದು ತನ್ನ ದಿವ್ಯತೇಜಸ್ಸಿನಿಂದ ಹತ್ತು ದಿಕ್ಕುಗಳನ್ನೂ ಬೆಳಗಿಸುತ್ತಿದ್ದನು.

೪೨. ಅಂಧಕಾರವು ನಾಶವಾಗಲು ಬೆಳಕಿನಲ್ಲಿ ಆ ದೈತ್ಯನು ಸ್ಪಷ್ಟವಾಗಿ ಕಾಣಿಸತೊಡಗಿದನು. ನರಾದಿತ್ಯನನ್ನು ಕಂಡು ದೇವತೆಗಳೆಲ್ಲರೂ ಅತ್ಯಂತ ಸಂತೋಷಭರಿತರಾದರು.

೪೩. ಅವರೆಲ್ಲರೂ ನರರೂಪಿಯಾದ ಆ ಸೂರ್ಯದೇವನನ್ನು ಬಹುವಿಧ ಸ್ತೋತ್ರಗಳಿಂದ ಸ್ತುತಿಸುತ್ತಿದ್ದರು.

ಉತ್ತಸ್ಥೌ ನರರೂಪೇಣ ದೀಪ್ತೋ ಯಸ್ಮಾದ್ದಿವಾಕರಃ ।
ತೇನಾಽಸ್ಯ ನಾಮ ತೇ ಚಕ್ರುರ್ನರದೀಪ ಇತೀಶ್ವರಾಃ ॥ ೪೪ ॥
ಯಃ ಪಶ್ಯತಿ ನರೋ ಭಕ್ತ್ಯಾ ನರದೀಪಂ ದಿವಾಕರಂ ।
ಮುಚ್ಯತೇ ಸರ್ವಪಾಪೇಭ್ಯೋ ಯದ್ಯಪಿ ಬ್ರಹ್ಮಹಾ ಭವೇತ್ ॥ ೪೫ ॥
ಷಷ್ಠ್ಯಾಮರ್ಕದಿನೇ ವಿಪ್ರ ಸಪ್ತಮ್ಯಾಮುಪವಾಸಯೇತ್ ।
ದಿನಚ್ಛಿದ್ರೇಽಥ ಸಂಕ್ರಾಂತೌ ಗ್ರಹಣೇ ವಿಷುವತ್ಯಥ ॥ ೪೬ ॥
ಕುಂಡೇ ಸ್ನಾತ್ವಾ ಶುಚಿರ್ಭೂತ್ವಾ ಜಪನ್ನಿಯತಮಾನಸಃ ।
ನರದೀಪಂ ನರಃ ಪಶ್ಯೇತ್ಸ್ತೋತ್ರವಾದಿತ್ರಮಂಗಲೈಃ ॥ ೪೭ ॥
ಗಂಧೈರ್ಧೂಪೈಸ್ತಥಾ ದೀಪೈರ್ನೈವೇದ್ಯೈಃ ಪೂಜಯೇತ್ತಥಾ ।
ಗೀತಂ ವಾದ್ಯಂ ಪುರಸ್ಕೃತ್ಯ ಪ್ರಣಮ್ಯಾಷ್ಟಾಂಗಮೇವ ಚ ॥ ೪೮ ॥
ಪ್ರಾತರ್ಮಧ್ಯಾಽಪರಾಹ್ನೇ ವಾ ಕೃತ್ವಾಽರ್ಕಸ್ಯ ಪ್ರದಕ್ಷಿಣಾಂ ।
ಸ ಮುಕ್ತಃ ಸರ್ವಪಾಪೈಸ್ತು ಸಪ್ತಜನ್ಮಕೃತೈರಪಿ ॥ ೪೯ ॥

---

೪೪. ಸೂರ್ಯನು ನರರೂಪದಿಂದ ತೇಜೋಮಯವಿಗ್ರಹನಾಗಿ ಹೊರಟು ಬಂದುದರಿಂದ ದೇವತೆಗಳೆಲ್ಲರೂ ಆ ಮೂರ್ತಿಗೆ ನರದೀಪವೆಂಬುದಾಗಿ ಹೆಸರನ್ನು ಇಟ್ಟರು.

೪೫. ನರದೀಪನೆಂಬ ಸೂರ್ಯನನ್ನು ಭಕ್ತಿಯಿಂದ ನೋಡಿದ ಮನುಷ್ಯನು ಬ್ರಹ್ಮಹತ್ಯವನ್ನು ಮಾಡಿದವನಾದರೂ ಸಮಸ್ತ ಪಾತಕಗಳಿಂದಲೂ ಮುಕ್ತನಾಗುವನು.

೪೬. ಬ್ರಾಹ್ಮಣೋತ್ತಮನೆ! ಭಾನುವಾರದ ದಿನದಲ್ಲಿ ಷಷ್ಠಿ, ಸಪ್ತಮಿ, ಅವಮಾಹ, ಸಂಕ್ರಮಣ, ಗ್ರಹಣ, ಅಥವಾ ವಿಷುವತ್ಪುಣ್ಯಕಾಲಗಳು ಬರಲು ಅಂದು ಉಪವಾಸವನ್ನು ಮಾಡಬೇಕು.

೪೭. ಆ ಕುಂಡದಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ಏಕಾಗ್ರಚಿತ್ತದಿಂದ ಜಪಮಾಡುತ್ತ ಸ್ತೋತ್ರ, ವಾದ್ಯ, ಮಂಗಳಗೀತಗಳೊಡನೆ ನರದೀಪನ ದರ್ಶನವನ್ನು ಮಾಡಬೇಕು.

೪೮. ಸುಗಂಧ, ಧೂಪ, ದೀಪ, ನೈವೇದ್ಯಗಳಿಂದ ಪೂಜಿಸಬೇಕು. ಗೀತ, ವಾದ್ಯಗಳನ್ನು ಮುಂದುಮಾಡಿಕೊಂಡು ಸಾಷ್ಟಾಂಗಪ್ರಣಾಮವನ್ನು ಮಾಡಬೇಕು.

೪೯. ಪ್ರಾತಃಕಾಲ, ಮಧ್ಯಾಹ್ನ, ಅಪರಾಹ್ಣಗಳಲ್ಲಿ ನರಾರ್ಕನಿಗೆ ಪ್ರದಕ್ಷಿಣೆಯನ್ನು ಮಾಡಿದವನು ಏಳು ಜನ್ಮಗಳಲ್ಲಿ ಮಾಡಿದ ಸಕಲ ಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧನಾಗುವನು.

ಸೂರ್ಯಕೋಟಿಪ್ರತೀಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।
ಸೂರ್ಯಲೋಕಂ ಪ್ರಯಾತ್ಯಾಶು ಯತ್ಸುರೈರಪಿ ದುರ್ಲಭಂ ॥ ೫೦ ॥
ಶಕ್ರಾತ್ಪ್ರಾಪ್ಯ ಪುರಾ ಯಸ್ಮಾದ್ಭಾನುರತ್ರ ಪ್ರತಿಷ್ಠಿತಃ ।
ನರೇಣೈವ ಪ್ರಸಾದೇನ ನರದೀಪಸ್ತತೋ ಹ್ಯಯಂ ॥ ೫೧ ॥
ತದೈವಾಽಸ್ಯ ಪುರಾ ವ್ಯಾಸ ಯಾತ್ರಾ ಶಕ್ರೇಣ ನಿರ್ಮಿತಾ ।
ಆಗಮಿಷ್ಯಾಮ್ಯಹಂ ಪಾರ್ಥ ಸಾರ್ಧಂ ದೇವೈಃ ಸಮಾಹಿತಃ ।
ಜ್ಯೇಷ್ಠೇ ಸಿತೇ ತೃತೀಯಾಯಾಂ ನರದೀಪೇ ತು ಸರ್ವದಾ ॥ ೫೨ ॥
ತತ್ರಾಽಹಮಾಗತೋ ಜ್ಞೇಯೋ ಲೋಕೇ ದೇವಸ್ಯ ವರ್ಷಣಾತ್ ।
ತತೋಽನಂತರಮಾಗತ್ಯ ದೇವಾ ಯೇ ತ್ರಿದಶಾಲಯಾತ್ ॥ ೫೩ ॥
ದೃಷ್ಟ್ವಾ ದೇವಂ ರಥಾರೂಢಂ ನರದೀಪಂ ಸುದೀಪಿತಂ ।
ಕೃತ್ವಾ ಯಾತ್ರಾಂ ಚ ತೇ ಯಾಂತಿ ದೇವಯಾನೈರಿತಸ್ತತಃ ॥ ೫೪ ॥
ಯಃ ಪಶ್ಯೇನ್ಮಾನವೋ ಭಕ್ತ್ಯಾ ನರದೀಪಂ ರಥಸ್ಥಿತಂ ।
ಸರ್ವಪಾಪವಿನಿರ್ಮುಕ್ತಃ ಸೂರ್ಯಲೋಕೇ ಮಹೀಯತೇ ॥ ೫೫ ॥

---

೫೦. ಅವನು ಕೋಟಿಸೂರ್ಯರ ಪ್ರಕಾಶದಿಂದ ಕೂಡಿದವುಗಳೂ, ಸಕಲ ಭೋಗಸಹಿತಗಳೂ ಆದ ವಿಮಾನಗಳಲ್ಲಿ ಕುಳಿತು ದೇವತೆಗಳಿಗೂ ದುರ್ಲಭವಾದ ಸೂರ್ಯಲೋಕವನ್ನು ಸೇರುವನು.

೫೧. ಮಹೇಂದ್ರನು ಪ್ರಸನ್ನನಾಗಿ ಅನುಗ್ರಹಿಸಿ ಅರ್ಜುನನಿಂದ ಇಲ್ಲಿ ಪ್ರತಿಷ್ಠಿಸಲ್ಪಟ್ಟುದಾದುದರಿಂದ ಈ ಸೂರ್ಯದೇವನಿಗೆ ನರದೀಪನೆಂಬ ಹೆಸರು ಉಂಟಾಗಿರುವುದು.

೫೨. ಎಲೈ ವ್ಯಾಸನೆ! ಪ್ರತಿಷ್ಠೆಯಕಾಲದಲ್ಲಿ ಮಹೇಂದ್ರನು ಈ ದೇವತೆಯ ಯಾತ್ರೆಗೆ ಕಾಲವನ್ನು ನಿರ್ಣಯಿಸಿರುವನು. "ಅರ್ಜುನ! ಪ್ರತಿವರ್ಷದಲ್ಲಿಯೂ ಜ್ಯೇಷ್ಠಮಾಸದ ಶುಕ್ಲದ್ವಿತೀಯೆಯ ದಿನದಲ್ಲಿ ನಾನು ಸಕಲದೇವತೆಗಳಿಂದೊಡಗೂಡಿ ನರದೀಪನಿರುವಲ್ಲಿಗೆ ಬರುವೆನು.

೫೩–೫೪. ಆ ಸಮಯದಲ್ಲಿ ಭೂಮಿಯಲ್ಲಿ ಮಳೆಯು ಬೀಳುವುದರಿಂದಲೇ ನಾನು ಬಂದಿರುವೆನೆಂಬುದನ್ನು ತಿಳಿಯಬೇಕು. ಅನಂತರದಲ್ಲಿ ದೇವತೆಗಳು ಸ್ವರ್ಗಲೋಕದಿಂದ ಅಲ್ಲಿಗೆ ಬಂದು ತೇಜೋಮಯನಾಗಿ ರಥದಲ್ಲಿ ಕುಳಿತಿರುವ ನರದೀಪನನ್ನು ಕಂಡು ಮಹೋತ್ಸವವನ್ನುಮಾಡಿ ತಮ್ಮ ದಿವ್ಯವಿಮಾನದಲ್ಲಿ ಕುಳಿತು ಹೊರಟು ಹೋಗುವರು.

೫೫. ಭಕ್ತಿಯುಕ್ತನಾದ ಯಾವ ನರನು ರಥಾರೂಢನಾದ ನರಾದಿತ್ಯನ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಸಕಲಪಾತಕಗಳನ್ನೂ ಕಳೆದುಕೊಂಡು ಸೂರ್ಯಲೋಕದಲ್ಲಿ ಪೂಜೆಗೊಳ್ಳುವನು."

ರಥಯಾತ್ರಾಮಥೋ ವಕ್ಷ್ಯೇ ನರದೀಪಸ್ಯ ಯಾ ಮುನೇ ।
ತಾಂ ಕೃತ್ವಾ ಚೈವ ಯತ್ಪುಣ್ಯಂ ಮುನಿಭಿಃ ಪರಿಕೀರ್ತಿತಂ ॥ ೫೬ ॥
ಜ್ಯೇಷ್ಠೇ ಸಿತೇ ದ್ವಿತೀಯಾಯಾಂ ರಥಸ್ಥೋ ಹಿ ದಿವಾಕರಃ ।
ಕುಶಸ್ಥಲ್ಯಾಂ ದ್ವಿಜೈಃ ಶ್ರೇಷ್ಠೈರ್ಬಾಹುಕ್ಷೇಪೈಃ ಪ್ರಣೀಯತೇ ॥ ೫೭ ॥
ಉತ್ತರಾಂ ದಿಶಮಾಯಾಂತಂ ಯಃ ಪಶ್ಯತಿ ದಿವಸ್ಪತಿಂ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಲಭತೇ ಸೋಽಖಿಲಂ ಫಲಂ ॥ ೫೮ ॥
ನಿವೃತ್ಯ ಕೇಶವಾರ್ಕಾದ್ಯೋ ರಥಂ ಪಶ್ಯತಿ ಮಾನವಃ ।
ಶುಂಡೀರಸ್ವಾಮಿನೋ ಯಾತ್ರಾ ಕೃತಾ ತೇನ ನ ಸಂಶಯಃ ॥ ೫೯ ॥
ರಥಮಾಕರ್ಷತೇ ಯಸ್ತು ರಜ್ಜ್ವಾಕರ್ಷೇಣ ವೈ ಮುನೇ ।
ಕುಲಮುದ್ಧರತೇ ಸೋಽಪಿ ಪೂರ್ವಾನ್ಪಿತೃಪಿತಾಮಹಾನ್ ॥ ೬೦ ॥
ದಕ್ಷಿಣಾಭಿಮುಖಂ ಯಾಂತಂ ನರದೀಪಂ ದ್ವಿಜೋತ್ತಮ ।
ಯೇ ಸಂಯತಾಃ ಪ್ರಪಶ್ಯಂತಿ ತೇ ಯಾಂತಿ ಚ ತ್ರಿವಿಷ್ಟಪಂ ॥ ೬೧ ॥

---

೫೬. ಮುನಿಶ್ರೇಷ್ಠನೆ! ಇನ್ನು ನರದೀಪನಿಗೆ ಮಾಡಬೇಕಾದ ರಥಯಾತ್ರೆಯ ಕ್ರಮವನ್ನೂ, ಅದನ್ನು ಮಾಡುವುದರಿಂದ ಯಾವ ಫಲವು ಲಭಿಸುವುದೆಂದು ಮುನಿಗಳು ಹೇಳಿರುವರೆಂಬುದನ್ನೂ ನಿನಗೆ ತಿಳಿಸುವೆನು.

೫೭. ಕುಶಸ್ಥಲಿಯಲ್ಲಿ ನರಾದಿತ್ಯನು ಜ್ಯೇಷ್ಠಶುದ್ಧಬಿದಿಗೆಯ ದಿನ ರಥವನ್ನು ಆರೋಹಿಸುವನು. ಆ ರಥವನ್ನು ಬ್ರಾಹ್ಮಣಶ್ರೇಷ್ಠರು ತಮ್ಮ ಕೈಗಳಿಂದಲೇ ಎಳೆಯುತ್ತಿರುವರು.

೫೮. ಸೂರ್ಯನು ಉತ್ತರದಿಕ್ಕಿಗೆ ಯಾತ್ರೆ ಬರುತ್ತಿರುವುದನ್ನು ಯಾವನು ನೋಡುವನೊ, ಅವನು ಅಗ್ನಿಷ್ಟೋಮವನ್ನು ಮಾಡಿದ ಸಮಗ್ರಫಲವನ್ನು ಪಡೆಯುವನು.

೫೯. ಯಾವನು ಕೇಶವಾರ್ಕನ ದರ್ಶನದಿಂದ ಹಿಂದಿರುಗುತ್ತ ನರಾದಿತ್ಯನ ರಥವನ್ನು ನೋಡುವನೊ, ಅವನು ಸುಬ್ರಹ್ಮಣ್ಯಕ್ಷೇತ್ರದ ಮಹಾ ಯಾತ್ರೆಯನ್ನು ಮಾಡಿದವನೆಂಬುದರಲ್ಲಿ ಸಂಶಯವಿಲ್ಲ.

೬೦. ಯಾವನು ರಥಕ್ಕೆ ಕಟ್ಟಿರುವ ಹಗ್ಗಗಳಿಂದ ರಥವನ್ನು ಹಿಡಿದೆಳೆಯುತ್ತಿರುವನೊ, ಅವನು ಪಿತೃ ಪಿತಾಮಹರೇ ಮೊದಲಾಗಿ ತನ್ನ ಕುಲದಲ್ಲಿ ಜನಿಸಿದ ಸಕಲರನ್ನೂ ಉದ್ಧರಿಸುವನು.

೬೧. ಎಲೈ ದ್ವಿಜೋತ್ತಮನೆ! ನರದೀಪನು ದಕ್ಷಿಣಾಭಿಮುಖನಾಗಿ ಹಿಂದಿರುಗುತ್ತಿರುವುದನ್ನು ಯಾರು ಸಮಾಹಿತಚಿತ್ತದಿಂದ ನೋಡುವರೊ, ಅವರು ಸ್ವರ್ಗಲೋಕಕ್ಕೆ ಹೋಗುವರು.

**ಸೂತ್ರೇಣ ವೇಷ್ಟಯೇತ್ ಕ್ಷೇತ್ರಂ ರಥಂ ದೇವಮಥಾಽಪಿ ವಾ ।**
**ಸರ್ವಾನ್ಕಾಮಾನವಾಪ್ನೋತಿ ಕೃತಪುಣ್ಯಶ್ಚ ಜಾಯತೇ ॥ ೬೨ ॥**
**ಪ್ರದಕ್ಷಿಣಾಂ ತು ಸೂರ್ಯಸ್ಯ ಭಕ್ತ್ಯಾ ಕುರ್ವಂತಿ ಯೇ ನರಾಃ ।**
**ಪ್ರದಕ್ಷಿಣೀಕೃತಾ ತೈಸ್ತು ಸಪ್ತದ್ವೀಪಾ ವಸುಂಧರಾ ॥ ೬೩ ॥**
**ಪ್ರಾತರುತ್ಥಾಯ ಯೋ ಭಕ್ತ್ಯಾ ಮೌನೀ ಯಾತಿ ದಿವಾಕರಂ ।**
**ದೃಷ್ಟ್ವಾ ತು ಪೂರ್ವದ್ವಾರೇಣ ನಮಸ್ಕೃತ್ಯ ದ್ವಿಜೋತ್ತಮ ॥ ೬೪ ॥**
**ಪ್ರವಿಶ್ಯ ದಕ್ಷಿಣೇನೈವ ರಥಚಕ್ರಂ ಪ್ರಪೂಜಯೇತ್ ।**
**ತೇನ ದ್ವಾರೇಣ ನಿಷ್ಕ್ರಮ್ಯ ಪ್ರಣಿಪತ್ಯ ವ್ರಜೇತ್ತತಃ ॥ ೬೫ ॥**
**ಪಶ್ಚಿಮಂ ದ್ವಾರಮಾಶ್ರಿತ್ಯ ರಥಸ್ಥಂ ಸೂರ್ಯಮರ್ಚಯೇತ್ ।**
**ಚಾಮರಂ ಚ ವಿತಾನಂ ಚ ಘಂಟಾದೀನಿ ನಿವೇದಯೇತ್ ॥ ೬೬ ॥**
**ಪೂರ್ವದ್ವಾರೇ ತು ಗೌರ್ದೇಯಾ ತಥಾಽಶ್ವಶ್ಚೈವ ದಕ್ಷಿಣೇ ।**
**ಪಶ್ಚಿಮೇ ಚ ಗಜಃ ಪ್ರೋಕ್ತ ಉತ್ತರೇ ರಥ ಏವ ಚ ॥ ೬೭ ॥**

---

೬೨. ಹಸಿಯ ನೂಲಿನಿಂದ ಕ್ಷೇತ್ರವನ್ನೊ, ರಥವನ್ನೊ, ದೇವನನ್ನೊ ಸುತ್ತುಗೊಳಿಸಿದವನು ಸಮಸ್ತಾಭೀಷ್ಟಗಳನ್ನೂ ಪಡೆಯುವನಲ್ಲದೆ ಮಹಾಪುಣ್ಯವಂತನೆನಿಸುವನು.

೬೩. ಭಕ್ತಿಯಿಂದ ಯಾವ ಮಾನವರು ಸೂರ್ಯನಿಗೆ ಪ್ರದಕ್ಷಿಣೆಯನ್ನು ಮಾಡುವರೊ, ಅವರು ಸಪ್ತದ್ವೀಪಗಳನ್ನೊಳಗೊಂಡ ಸಮಸ್ತಭೂಮಂಡಲವನ್ನೂ ಪ್ರದಕ್ಷಿಣೆ ಮಾಡಿದವರೆಂದು ತಿಳಿಯಬೇಕು.

೬೪. ಉದಯಕಾಲದಲ್ಲಿ ಎದ್ದು ಮೌನದಿಂದ ಸೂರ್ಯನ ದೇವಾಲಯಕ್ಕೆ ಹೋಗಿ ಪೂರ್ವದ್ವಾರದ ಬಳಿಯಲ್ಲಿ ನಿಂದು ಹೊರಗಿನಿಂದಲೇ ಆ ಸ್ವಾಮಿಗೆ ನಮಸ್ಕಾರವನ್ನು ಮಾಡಬೇಕು.

೬೫. ಬಳಿಕ ದಕ್ಷಿಣದ್ವಾರದಿಂದ ಒಳಗೆ ಪ್ರವೇಶಮಾಡಿ ಸೂರ್ಯರಥದ ಚಕ್ರಕ್ಕೆ ಪೂಜೆಯನ್ನುಮಾಡಿ ಆದ್ವಾರದಿಂದಲೇ ಹೊರಕ್ಕೆ ಬಂದು ನಮಸ್ಕರಿಸಿ ಮುಂದಕ್ಕೆ ಹೋಗಬೇಕು.

೬೬. ಪಶ್ಚಿಮದ ಬಾಗಿಲಿನಲ್ಲಿ ಒಳಗೆ ಪ್ರವೇಶಿಸಿ ರಥಾರೂಢನಾಗಿರುವ ಸೂರ್ಯದೇವನನ್ನು ಪೂಜಿಸಬೇಕು. ಆತನಿಗೆ ಚಾಮರಗಳು, ಧ್ವಜಪತಾಕೆಗಳು, ಘಂಟೆ, ಮುಂತಾದುವುಗಳನ್ನು ಸಮರ್ಪಿಸಬೇಕು.

೬೭. ಪೂರ್ವದ್ವಾರದಲ್ಲಿ ಆಕಳನ್ನೂ, ದಕ್ಷಿಣದ್ವಾರದಲ್ಲಿ ಕುದುರೆಯನ್ನೂ, ಪಶ್ಚಿಮದ್ವಾರದಲ್ಲಿ ಆನೆಯನ್ನೂ, ಉತ್ತರದ ಬಾಗಿಲಿನಲ್ಲಿ ರಥವನ್ನೂ ದಾನಮಾಡಬೇಕೆಂದು ಹೇಳಲ್ಪಟ್ಟಿರುವುದು.

ಕುರ್ಯಾದೇವಂ ತು ಯೋ ಯಾತ್ರಾಂ ನರದೀಪಸ್ಯ ಮಾನವಃ ।
ಸರ್ವಾನ್ಕಾಮಾನವಾಪ್ನೋತಿ ಕೃತಪುಣ್ಯಶ್ಚ ಜಾಯತೇ ॥ ೧೮ ॥
ಗೋಸೂರ್ಯಶಿವಶಕ್ರಾಣಾಂ ಸ್ವರ್ಲೋಕಂ ಲಭತೇ ಶುಭಂ ।
ಪ್ರದಕ್ಷಿಣಾ ಮಹಾಮೇರೋಃ ಕೃತಾ ತೇನ ಭವೇನ್ಮುನೇ ॥ ೧೯ ॥
ದದ್ಯಾದ್ಗವಾಂ ಸಹಸ್ರಂ ಯೋ ವ್ಯತೀಪಾತಶತೇ ನರಃ ।
ಅಶ್ವಾನಾಂ ಚ ಸಹಸ್ರೇಣ ಯದ್ಯಾಯಾತ್ತತ್ಫಲಂ ಲಭೇತ್ ॥ ೨೦ ॥
ನರದೀಪೇ ರಥಾರೂಢೇ ವಪನಂ ಕಾರಯೇತ್ತು ಯಃ ।
ಶ್ರಿಯಾ ನ ವಿಚ್ಯುತಿಸ್ತಸ್ಯ ಸೂರ್ಯಲೋಕೇ ಮಹೀಯತೇ ॥ ೨೧ ॥
ಸೂರ್ಯಸ್ಯ ಪುರತೋ ವಾಪ್ಯಾಂ ಮಾಸಂ ನಿತ್ಯಂ ಸರಸ್ವತೀ ।
ಯಸ್ತಾಮಾಲೋಕತೇ ಮರ್ತ್ಯೋ ದುಃಸ್ವಪ್ನಂ ತಸ್ಯ ನಶ್ಯತಿ ॥ ೨೨ ॥
ಭಕ್ತ್ಯಾ ಯೋಽನುದಿನಂ ವ್ಯಾಸ ನರದೀಪಂ ಪ್ರಪಶ್ಯತಿ ।
ಉತ್ತಮಂ ಸ್ಥಾನಮಾಸಾದ್ಯ ಪುತ್ರಪೌತ್ರಸಮನ್ವಿತಃ ॥ ೨೩ ॥

---

೧೮. ಇಂತು ಸಾಂಗವಾಗಿ ನರದೀಪಯಾತ್ರೆಯನ್ನು ಯಾವ ಮಾನವನು ಮಾಡುವನೊ, ಆತನು ಸಕಲಾಭೀಷ್ಟಗಳನ್ನೂ ಪಡೆಯುವನು. ಪುಣ್ಯವನ್ನು ಮಾಡಿದವನಾಗುವನು.

೧೯. ಗೋಲೋಕ, ಸೂರ್ಯಲೋಕ, ಶಿವಲೋಕ, ಇಂದ್ರಲೋಕಗಳನ್ನೂ ಪುಣ್ಯತಮವಾದ ಸ್ವರ್ಗಲೋಕವನ್ನೂ ಆತನು ಪಡೆಯುವನು. ಮುನಿವರ್ಯನೆ! ಅವನು ಮಹಾ ಮೇರುಪರ್ವತವನ್ನೇ ಪ್ರದಕ್ಷಿಣೆಮಾಡಿದವನೆಂದು ತಿಳಿಯ ಬೇಕು.

೨೦. ಇಲ್ಲಿ ವ್ಯತೀಪಾತ ಸಮಯಗಳಲ್ಲಿ ಸಾವಿರ ಆಕಳುಗಳನ್ನು ದಾನ ಮಾಡಿದವನು ಒಂದು ನೂರು ಸಲ ಒಂದು ಸಾವಿರ ಅಶ್ವಗಳನ್ನು ದಾನಮಾಡಿದ ಫಲವನ್ನು ಪಡೆಯುವನು.

೨೧. ನರದೀಪನು ರಥಾರೂಢನಾಗಲು ಯಾವನು ಕ್ಷೇತ್ರವಪನವನ್ನು ಮಾಡಿಸಿಕೊಳ್ಳುವನೊ, ಅವನ ಐಶ್ವರ್ಯವೆಂದಿಗೂ ಚ್ಯುತಿಯನ್ನು ಹೊಂದುವು ದಿಲ್ಲ. ಅವನು ಸೂರ್ಯಲೋಕದಲ್ಲಿಯೂ ಪೂಜ್ಯನಾಗುವನು.

೨೨. ಸೂರ್ಯನ ಮುಂದಿರುವ ತೀರ್ಥದಲ್ಲಿ ಜ್ಯೇಷ್ಠಮಾಸದಲ್ಲಿ ನಿತ್ಯವೂ ಸರಸ್ವತಿಯ ಸಾನ್ನಿಧ್ಯವಿರುವುದು. ಆಗ ಅವನ್ನು ನೋಡಿದ ಮಾನವನಿಗೆ ದುಸ್ಸ್ವಪ್ನಗಳು ನಾಶವಾಗುವುವು.

೨೩. ಅಯ್ಯಾ ವ್ಯಾಸಮುನಿಯೆ! ಯಾವನು ನಿತ್ಯವೂ ಭಕ್ತಿಯಿಂದ ನರದೀಪನದರ್ಶನವನ್ನು ತೆಗೆದುಕೊಳ್ಳುತ್ತಿರುವನೊ, ಅವನು ಉನ್ನತಪದವಿ ಯನ್ನು ಹೊಂದಿ ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿ ಸುಖದಿಂದಿರುವನು.

ಪ್ರಕ್ರೀಡ್ಯ ಬಂಧುಭಿಃ ಸಾರ್ಧಂ ಮೃತಃ ಸೂರ್ಯಪುರಂ ವ್ರಜೇತ್ ।
ಪ್ರನಷ್ಟೇ ತಿಮಿರೇ ವಿಪ್ರ ಜಾತೇ ಸರ್ವತ್ರ ಸುಪ್ರಭೇ ॥ ೭೪ ॥
ಹತೇಽಂಧಕೇ ಮಹೇಶೇನ ಶೂಲೇನ ತ್ರಿಶಿಖೇನ ವೈ ।
ಪ್ರಹೃಷ್ಟಾಶ್ಚ ಸುರಾಃ ಸರ್ವೇ ಬ್ರಹ್ಮೇಂದ್ರಪ್ರಮುಖಾಸ್ತದಾ ॥ ೭೫ ॥
ಶಂಖಂ ದಧ್ಮೌ ತದಾ ವಿಷ್ಣುಃ ಸುರಾಣಾಂ ಹಿತಕಾಮ್ಯಯಾ ।
ತತ್ರ ತೀರ್ಥಮಭೂತ್ಪನ್ನಂ ಶಂಖೋದ್ಧಾರಣಸಂಜ್ಞಕಂ ॥ ೭೬ ॥
ತತ್ರ ಸನ್ನಿಹಿತೋ ವಿಷ್ಣುರ್ಲಿಂಗಂ ಚೈವ ಚತುರ್ಮುಖಂ ॥ ೭೭ ॥
ಅನಾದ್ಯಂ ಚೈವ ವಿಪ್ರೇಂದ್ರ ಲಿಂಗಸ್ಯೈವ ಸಮೀಪತಃ ।
ದೇವಸ್ಯ ದಕ್ಷಿಣೇ ಭಾಗೇ ಶೂಲೇನಾಽಧಿಷ್ಠಿತಃ ಸ್ಥಿತಃ ॥ ೭೮ ॥
ಚತುರ್ದಶ್ಯಾಂ ತಥಾಽಷ್ಟಮ್ಯಾಂ ಯೇ ಪಶ್ಯಂತಿ ಜಿತೇಂದ್ರಿಯಾಃ ।
ತೇ ಕ್ಷೀಣಾಽಶೇಷಪಾಪೌಘಾಃ ಪ್ರಾಪ್ಸ್ಯಂತಿ ಪರಮಾಂ ಗತಿಂ ॥ ೭೯ ॥
ಯೋಗಿನೀನಾಂ ಬಲಿಂ ಯಸ್ತು ಯಥಾವತ್ಸಂಪ್ರದಾಸ್ಯತಿ ।
ಭೂತಪ್ರೇತಪಿಶಾಚಾದ್ಯೈರ್ನಾಽಸೌ ಕೇನಾಽಪಿ ಬಾಧ್ಯತೇ ॥ ೮೦ ॥

---

೭೪–೭೫. ಆತನು ಬಹುಕಾಲದವರೆಗೂ ಬಂಧುಗಳೊಡನೆ ಸುಖಪಡುತ್ತಿದ್ದು ಮೃತನಾದ ಬಳಿಕ ಸೂರ್ಯಲೋಕವನ್ನು ಸೇರುವನು. ವ್ಯಾಸನೆ! ಇಂತು ನರಾದಿತ್ಯನಿಂದ ಅಂಧಕಾರವು ನಷ್ಟವಾಗಲು ಎಲ್ಲೆಲ್ಲಿಯೂ ಸುಪ್ರಭಾತವಾದಂತಾಯಿತು. ಆಗ ಮಹೇಶ್ವರನು ತನ್ನ ಮೂರು ಮುಳ್ಳುಗಳುಳ್ಳ ಶೂಲಾಯುಧದಿಂದ ಅಂಧಕಾಸುರನನ್ನು ಸಂಹರಿಸಲು ಬ್ರಹ್ಮಮಹೇಂದ್ರರೇ ಮೊದಲಾದ ಸಕಲದೇವತೆಗಳೂ ಹರ್ಷಗೊಂಡರು.

೭೬–೭೭. ಆಗ ವಿಷ್ಣುವು ದೇವತೆಗಳಿಗೆ ಹಿತವನ್ನು ಮಾಡಲೆಳಸಿ ತನ್ನ ಶಂಖವನ್ನು ಧ್ವನಿಗೈದನು. ಆ ಸ್ಥಳದಲ್ಲಿಯೇ ಶಂಖೋದ್ಧಾರವೆಂಬ ಹೆಸರಿನ ತೀರ್ಥವೊಂದು ಉತ್ಪನ್ನವಾಯಿತು. ಅಲ್ಲಿಯೇ ಮಹಾವಿಷ್ಣುವೂ ನಾಲ್ಕು ಮುಖಗಳಿಂದ ಕೂಡಿದ ಲಿಂಗವೂ ಸಹ ಪ್ರತಿಷ್ಠಿತಗಳಾಗಿರುವುವು.

೭೮. ವಿಪ್ರೇಂದ್ರನೆ! ಅನಾದಿಕಾಲದಿಂದಲೂ ನೆಲಸಿರುವ ಈ ಲಿಂಗದ ಸಮೀಪದಲ್ಲಿಯೇ, ಮಹಾದೇವನ ದಕ್ಷಿಣಭಾಗದಲ್ಲಿರುವ ತ್ರಿಶೂಲವನ್ನು ಅಧಿಷ್ಠಿಸಿ ವಿಷ್ಣುವು ನೆಲಸಿರುವನು.

೭೯. ಯಾರು ಜಿತೇಂದ್ರಿಯರಾಗಿ ಅಷ್ಟಮಿ ಮತ್ತು ಚತುರ್ದಶೀತಿಥಿಗಳಲ್ಲಿ ಈ ದೇವನನ್ನು ನೋಡುವರೊ, ಅವರು ಸಮಸ್ತ ಪಾಪಸಮೂಹಗಳನ್ನೂ ಕಳೆದುಕೊಂಡು ಉತ್ತಮಗತಿಯನ್ನು ಹೊಂದುವರು.

೮೦. ಯಾವನು ವಿಧ್ಯುಕ್ತರೀತಿಯಿಂದ ಯೋಗಿನಿಯರಿಗೆ ಬಲಿಯನ್ನು ನಿವೇದಿಸುವನೊ; ಅವನು ಯಾವ ವಿಧವಾದ ಭೂತ, ಪ್ರೇತ, ಪಿಶಾಚಾದಿಗಳಿಂದಲೂ ಪೀಡಿತನಾಗುವುದಿಲ್ಲ.

**ದ್ವಾದಶೀಂ ಸಮುಪೋಷ್ಯೈವ ಸ್ನಾತ್ವಾ ದೇವಂ ಜನಾರ್ದನಂ ।**
**ಯಃ ಪಶ್ಯೇಚ್ಛಂಖಿನಂ ದೇವಂ ಸೋಽಚ್ಯುತಂ ಸ್ಥಾನಮಾಪ್ನುಯಾತ್॥೮೧॥**
**ಯಃ ಸ್ಥೂಲಸೂಕ್ಷ್ಮಪ್ರಕಟಪ್ರಕಾಶೋ**
**ಯಃ ಸರ್ವಭೂತೋ ನ ಚ ಸರ್ವಭೂತಃ ।**
**ವಿಶ್ವಂ ಯತಶ್ಚೈವ ಹಿ ವಿಶ್ವಹೇತು**
**ರ್ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥ ೮೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ನರದೀಪ ಮಾಹಾತ್ಮ್ಯವರ್ಣನಂ"ನಾಮ ಷಟ್ತ್ರಿಂಶೋಽಧ್ಯಾಯಃ**

---

೮೧. ಯಾವನು ದ್ವಾದಶಿಯ ದಿನದಲ್ಲಿ ಉಪವಾಸವನ್ನು ಮಾಡಿ ಸುಸ್ನಾತನಾಗಿ ದೇವದೇವನೂ ಶಂಖಚಕ್ರಾಂಕಿತನೂ ಆದ ಮಹಾವಿಷ್ಣುವನ್ನು ನೋಡುವನೊ, ಅವನಿಗೆ ಶಾಶ್ವತವಾದ ಸ್ಥಾನವು ಲಭಿಸುವುದು.

೮೨. ಸ್ಥೂಲಸೂಕ್ಷ್ಮಗಳಾದ ಸಕಲಪದಾರ್ಥಗಳಲ್ಲಿಯೂ ಚೈತನ್ಯವಾಗಿ ಪ್ರಕಾಶಿಸುತ್ತಿರುವವನೂ, ಸರ್ವವೂ ತಾನೇ ಆಗಿರುವವನೂ, ಸಕಲ ಪ್ರಾಣಿಗಳನ್ನೂ ಮೀರಿಸಿದ ಅಪ್ರಮೇಯನೂ, ಬ್ರಹ್ಮಾಂಡಕ್ಕೆ ಕಾರಣನಾದವನೂ ಆದ ಪುರುಷೋತ್ತಮನಿಗೆ ನಮಸ್ಕಾರವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ನರದೀಪಮಾಹಾತ್ಮ್ಯವರ್ಣನ"ವೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ರಿಂಶೋಽಧ್ಯಾಯಃ

### ಅಂಗಾರಕಚತುರ್ಥೀವ್ರತಮಾಹಾತ್ಮ್ಯವರ್ಣನಂ

**ಸನತ್ಕುಮಾರ ಉವಾಚ :—**

**ಭಿನ್ನೇಽಂಧಕೇ ತ್ರಿಶೂಲೇನ ಧ್ವನೀ ರುದ್ರಸ್ಯ ನಿರ್ಗತಃ ।**
**ತತೋಽಂಕಾರಃ ಸಮುತ್ಪನ್ನೋ ದೇವದೇವೋ ಮಹೇಶ್ವರಃ ॥ ೧ ॥**
**ತತ್ರ ಸ್ನಾತ್ವಾ ಶುಚಿರ್ಭೂತ್ವಾ ಸಮಾಧಿನಿಯಮೇನ ಚ ।**
**ದೃಷ್ಟ್ವೋಂಕಾರಂ ಮಹಾದೇವಂ ಮುಚ್ಯತೇ ಸರ್ವಪಾತಕೈಃ ॥ ೨ ॥**
**ಹತ್ವಾಂಧಕೇ ತ್ರಿಶೂಲಶ್ಚ ಭೋಗವತ್ಯಾ ಜಲೇ ಯಯೌ ।**
**ದೃಷ್ಟ್ವಾ ಶೂಲಂ ಸುತೇಜಸ್ಕಂ ಹಾಟಕೋ ವಿಸ್ಮಯಂ ಗತಃ ।**
**ಪಪ್ರಚ್ಛ ಕೇನ ಕಾರ್ಯೇಣ ಭವಾನಿಹ ಸಮಾಗತಃ ॥ ೩ ॥**
**ಕಥಯಾಮಾಸ ಶೂಲೋಽಸೌ ಶಂಕರೇಣಾಽಹಮೀರಿತಃ ।**
**ಅಂಧಕಸ್ಯ ವಧಾರ್ಥಾಯ ಪಾಪವೃತ್ತೇಃ ಸುದುರ್ಮತೇಃ ॥ ೪ ॥**

---

### ಕನ್ನಡದ ಅನುವಾದ

#### ಅಂಗಾರಕಚತುರ್ಥೀವ್ರತಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ :—ಅಂಧಕಾಸುರನನ್ನು ನಿಗ್ರಹಿಸಿ ರುದ್ರನ ತ್ರಿಶೂಲವು ಧ್ವನಿಗೈಯುತ್ತ ಮುಂದಕ್ಕೆ ಹೊರಟಿತು. ಅಲ್ಲಿಯೇ ದೇವದೇವನಾದ ಮಹಾದೇವನು ಓಂಕಾರೇಶ್ವರನೆಂಬ ಹೆಸರಿನಿಂದ ನಿಂತನು.

೨. ಆ ತೀರ್ಥದಲ್ಲಿ ಸ್ನಾನಮಾಡಿ ಶುಚಿಯಾಗಿ ಸಮಾಹಿತಮನಸ್ಸಿನಿಂದ ನಿಯಮಗಳನ್ನು ಪಾಲಿಸುತ್ತ ಓಂಕಾರೇಶ್ವರನನ್ನು ನೋಡಿದವನು ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೩. ಅಂಧಕಾಸುರನನ್ನು ಸಂಹರಿಸಿ ತ್ರಿಶೂಲವು ಭೂಮಿಯನ್ನು ಹೊಕ್ಕು ಪಾತಾಳದಲ್ಲಿರುವ ಭೋಗವತೀನಗರಿಯವರೆಗೂ ಹೋಯಿತು. ಅಗಾಧವಾದ ಜಲದಲ್ಲಿ ತೇಲಿಬಂದ ಮಹಾತೇಜೋಯುಕ್ತವಾದ ಆ ತ್ರಿಶೂಲವನ್ನು ಕಂಡು ಹಾಟಕೇಶ್ವರನು ವಿಸ್ಮಯವನ್ನು ತಾಳಿದನು. "ನೀನು ಯಾವ ಕಾರ್ಯಕ್ಕಾಗಿ ಇಲ್ಲಿಗೆ ಪ್ರವೇಶಮಾಡಿರುವೆ?" ಎಂದು ಪ್ರಶ್ನೆಮಾಡಿದನು.

೪. ತ್ರಿಶೂಲವು ಇಂತೆಂದಿತು : "ಪಾಪಾಚಾರವುಳ್ಳವನೂ, ದುರ್ಬುದ್ಧಿಯೂ ಆದ ಅಂಧಕಾಸುರನನ್ನು ಸಂಹರಿಸಲು ಶಂಕರನು ನನ್ನನ್ನು ಬೀಸಿದನು.

ಭಿತ್ವಾ ತಮುಹಮಾಯಾತೋ ಭೋಗವತ್ಯಾ ಜಲೇ ಶುಭೇ ।
ಗಮಿಷ್ಯಾಮಿ ಪುನಸ್ತತ್ರ ಯತ್ರ ತಿಷ್ಠತಿ ಶಂಕರಃ ॥ ೫ ॥
ಶೂಲೋಕ್ತಂ ವಚನಂ ಶ್ರುತ್ವಾ ಪರಮೇಶದಿದೃಕ್ಷಯಾ ।
ಹಾಟಕಃ ಶೂಲಮಾರ್ಗೇಣ ನಿರ್ಜಗಾಮ ಜವೇನ ಸಃ ॥ ೬ ॥
ಬಹುವಕ್ತ್ರಸಮಾಕೀರ್ಣಂ ಸುಪ್ರಭಂ ಸುಮನೋರಮಂ ।
ತಂ ದೃಷ್ಟ್ವಾ ತ್ರಿದಶಾಃ ಸರ್ವೇ ಶೂಲೇಶಂ ಹಾಟಕೇಶ್ವರಂ ॥ ೭ ॥
ಪ್ರಣಮ್ಯ ಹೃಷ್ಟರೋಮಾಣೋ ಯಥಾ ಪ್ರೋತ್ಫುಲ್ಲಪಂಕಜಂ ।
ತುಷ್ಟುವುರ್ವಿವಿಧೈಃ ಸ್ತೋತ್ರೈರ್ಬ್ರಹ್ಮವಿಷ್ಣುಪುರೋಗಮಾಃ ॥ ೮ ॥
ಹಾಟಕೇಶ್ವರನಾಮಾಽಽಸೀತ್ಪಾತಾಲೇ ಯೋ ವ್ಯವಸ್ಥಿತಃ ।
ನಿರ್ಗತಃ ಶೂಲಮಾರ್ಗೇಣ ತೇನ ಶೂಲೇಶ್ವರಃ ಸ್ಮೃತಃ ॥ ೯ ॥
ಧೂತಪಾಪಂ ಚ ಯತ್ತೀರ್ಥಂ ದೇವದೇವಸ್ಯ ಚೋತ್ತರೇ ।
ತತ್ರ ಪಾಪಃ ಸ ದೈತ್ಯೇಂದ್ರೋ ಧೂತಃ ಶೂಲೇನ ವೀರ್ಯವಾನ್ ॥ ೧೦ ॥

---

೫. ನಾನು ಅವನ ಶರೀರವನ್ನು ಛೇದಿಸಿಕೊಂಡು ಆ ವೇಗದಿಂದಲೇ ಜಲವನ್ನು ಹೊಕ್ಕು ಭೋಗವತಿಗೆ ಬಂದಿರುವೆನು. ಈಗ ಪುನಃ ಶಂಕರನಿರುವಲ್ಲಿಗೆ ಹಿಂದಿರುಗಿ ಹೋಗುವೆನು.''

೬. ತ್ರಿಶೂಲವಾಡಿದ ಈ ಮಾತುಗಳನ್ನು ಕೇಳಿ ಪರಮೇಶ್ವರನನ್ನು ನೋಡಬೇಕೆಂಬ ಕುತೂಹಲದಿಂದ ಹಾಟಕನು ತ್ರಿಶೂಲವು ಮೂಡಿಬಂದ ಮಾರ್ಗದಿಂದಲೇ ವೇಗವಾಗಿ ಮೇಲಕ್ಕೆ ಬಂದನು.

೭. ಅನೇಕ ಮುಖಗಳುಳ್ಳವನೂ, ಮಹಾಕಾಂತಿಯುಕ್ತನೂ, ಮನೋಹರನೂ, ತ್ರಿಶೂಲಧಾರಿಯೂ ಆದ ಹಾಟಕೇಶ್ವರನನ್ನು ಸಕಲ ದೇವತೆಗಳೂ ಕಂಡರು.

೮. ಅರಳಿದ ಕೆಂದಾವರೆಯಂತಿರುವ ಆ ದೇವನಿಗೆ ಪ್ರಣಾಮವನ್ನು ಮಾಡಿ ಪುಳಕಾಂಕಿತ ಶರೀರರಾಗಿ ಬ್ರಹ್ಮವಿಷ್ಣುಗಳೇ ಮೊದಲಾದವರೆಲ್ಲರೂ ವಿವಿಧ ಸ್ತೋತ್ರಗಳಿಂದ ಆತನನ್ನು ಸ್ತುತಿಸಿದರು.

೯. ಹಾಟಕೇಶ್ವರನೆಂಬ ಹೆಸರಿನಿಂದ ಪಾತಾಳಲೋಕದಲ್ಲಿ ಯಾವನು ನೆಲಸಿದ್ದನೊ, ಆ ಮಹಾದೇವನೇ ತ್ರಿಶೂಲದ ಮಾರ್ಗದಿಂದ ಮೇಲಕ್ಕೆ ಬಂದುದರಿಂದ ಶೂಲೇಶ್ವರನೆಂದು ಪ್ರಖ್ಯಾತನಾದನು.

೧೦. ದೇವದೇವನಿಗೆ ಉತ್ತರದಿಕ್ಕಿನಲ್ಲಿರುವ ಧೂತಪಾಪವೆಂಬ ತೀರ್ಥದ ಬಳಿಯಲ್ಲಿಯೇ ಪಾಪಿಯೂ, ಬಲಶಾಲಿಯೂ ಆದ ಆ ದೈತ್ಯಶ್ರೇಷ್ಠನು ತ್ರಿಶೂಲದ ಏಟಿನಿಂದ ಭ್ರಮೆಗೊಂಡು ಬಿದ್ದನು.

**ತೇನ ತೀರ್ಥಮಿದಂ ವ್ಯಾಸ ಧೂತಪಾಪಂ ನಿಗದ್ಯತೇ ।**
**ಅಷ್ಟಮ್ಯಾಂ ವಾ ಪೌರ್ಣಮಾಸ್ಯಾಂ ಚತುರ್ದಶ್ಯಾಂ ಶನೌ ತಥಾ ।**
**ಉಪೋಷ್ಯ ರಜನೀಮೇಕಾಂ ಶಿವಭಕ್ತೋ ಜಿತೇಂದ್ರಿಯಃ ॥ ೧೧ ॥**
**ಧೂತಪಾಪಂ ತು ಯಃ ಪಶ್ಯೇದ್ದೇವದೇವಂ ಮಹೇಶ್ವರಂ ।**
**ವಿಮುಕ್ತಃ ಸರ್ವಪಾಪೈಃ ಸ ಸಪ್ತಜನ್ಮಕೃತೈರಪಿ ॥ ೧೨ ॥**
**ಕುಲಾನಾಂ ಶತಮುದ್ಧೃತ್ಯ ಶಿವಲೋಕಂ ಚ ಗಚ್ಛತಿ ।**
**ಕೃತಾಽಭಿಷೇಕಂ ಯಃ ಪಶ್ಯೇತ್ಪೌಷೇ ಮಾಸಿ ಸ ವೈ ನರಃ ॥ ೧೩ ॥**
**ಶೂಲೇಶ್ವರಪ್ರಭಾವೇಣ ಮುಚ್ಯತೇ ಬ್ರಹ್ಮಹತ್ಯಯಾ ।**
**ವಿಮಾನಾನಾಂ ಸಹಸ್ರೇಣ ಮೃತೋ ಯಾತಿ ಪರಂ ಪದಂ ॥ ೧೪ ॥**
**ಇತಿ ಚಾಽಂಧಕಶೂಲೋಽಯಂ ಯಾವದ್ಭೋಗವತೀಂ ಗತಃ ।**
**ತಾವತ್ಸಮುತ್ಥಿತಾ ಘೋರಾ ಅಸುರಾ ರುಧಿರೋದ್ಭವಾಃ ॥ ೧೫ ॥**
**ಖಡ್ಗಹಸ್ತಾ ಮಹಾವೀರ್ಯಾ ಅನೇಕಶತಸಂಖ್ಯಯಾ ।**
**ಚತುರ್ದಿಕ್ಷು ಸ್ಥಿತೈರ್ಘೋರೈರ್ಹನ್ಯಮಾನೋ ಮಹೇಶ್ವರಃ ।**
**ಸಿಂಹನಾದಂ ಮುಮೋಚಾಽಥ ಪೀಡಿತಸ್ತೈರ್ದುರಾತ್ಮಭಿಃ ॥ ೧೬ ॥**

---

೧೧-೧೪. ಅಯ್ಯಾ ವ್ಯಾಸನೆ! ಆ ಕಾರಣದಿಂದ ಈ ತೀರ್ಥವನ್ನು ಧೂತ ಪಾಪ ತೀರ್ಥವೆಂದು ಕರೆಯುವರು. ಶನಿವಾರದಲ್ಲಿ ಅಷ್ಟಮಿ, ಚತುರ್ದಶಿ, ಹುಣ್ಣಿಮೆಗಳು ಬರಲು ಶಿವಭಕ್ತನಾದವನು ಜಿತೇಂದ್ರಿಯನಾಗಿ ಆ ರಾತ್ರಿಯಲ್ಲಿ ಉಪವಾಸವನ್ನು ಮಾಡಿ ದೇವಾಧಿದೇವನೂ, ಮಹೇಶ್ವರನೂ ಆದ ಧೂತ ಪಾಪೇಶ್ವರನನ್ನು ನೋಡಬೇಕು. ಅವನು ಏಳು ಜನ್ಮಗಳಲ್ಲಿ ಮಾಡಿದ ಸಕಲ ಪಾಪಗಳಿಂದಲೂ ಮುಕ್ತನಾಗಿ ಒಂದು ನೂರು ಕುಲದವರನ್ನುದ್ಧರಿಸಿ ತಾನೂ ಶಿವಲೋಕಕ್ಕೆ ಹೋಗುವನು. ಪುಷ್ಯಮಾಸದಲ್ಲಿ ಧೂತಪಾಪೇಶ್ವರನಿಗೆ ಮಾಡುವ ಅಭಿಷೇಕ ಸೇವೆಯನ್ನು ಯಾವ ನರನು ನೋಡುವನೊ, ಅವನು ಶೂಲೇಶ್ವರನ ಮಹಿಮೆಯಿಂದ ಬ್ರಹ್ಮಹತ್ಯೆಯನ್ನೂ ಕಳೆದುಕೊಳ್ಳುವನು; ಮೃತನಾಗಲು ಸಾವಿರಾರು ವಿಮಾನಗಳಿಂದ ಸೇವಿತನಾಗಿ ಪರಮಪದವನ್ನೂ ಸೇರುವನು.

೧೫. ಮೇಲೆ ನಿರೂಪಿಸಿದಂತೆ ಅಂಧಕಾಸುರನನ್ನು ಸಂಹರಿಸಿದ ತ್ರಿಶೂಲವು ಭೋಗವತಿಗೆ ಹೋಗಿರುವ ವೇಳೆಯಲ್ಲಿಯೇ ಆ ರಾಕ್ಷಸನ ರಕ್ತಬಿಂದುಗಳಿಂದ ಭಯಂಕರರಾದ ರಾಕ್ಷಸರು ಉದ್ಭವಿಸಿದರು.

೧೬. ಮಹಾಪರಾಕ್ರಮಿಗಳೂ, ಖಡ್ಗಗಳನ್ನು ಕೈಗಳಲ್ಲಿ ಹಿಡಿದಿರುವವರೂ ಆದ ಆ ನೂರಾರು ರಾಕ್ಷಸರಿಂದ ನಾಲ್ಕು ಕಡೆಗಳಲ್ಲಿಯೂ ಸುತ್ತುವರೆಯಲ್ಪಟ್ಟು ದುರಾತ್ಮರಾದ ಅವರ ಹೊಡೆತಗಳಿಂದ ಪೀಡಿತನಾಗಿ ಮಹೇಶ್ವರನು ಸಿಂಹನಾದ ವನ್ನು ಮಾಡಿದನು.

ಸಿಂಹನಾದೇನ ತೇ ಪಾಪಾ ಮೂರ್ಛಿತಾಃ ಪತಿತಾ ಭುವಿ ।
ಪುನಃ ಸಮುತ್ಥಿತಾ ಜಗ್ಮುರ್ದೇವದೇವಂ ಮಹೇಶ್ವರಂ ॥ ೧೭ ॥
ವಿತ್ರಸ್ತಾಶ್ಚ ತತೋ ದೇವಾ ಬ್ರಹ್ಮವಿಷ್ಣುಪುರೋಗಮಾಃ ।
ಅಸಾಧ್ಯಾಂಸ್ತಾಂಸ್ತಥಾ ಮತ್ವಾ ಮಂತ್ರಂ ಕೃತ್ವಾ ಹಿತೈಷಿಣಃ ।
ತತೋ ದೇವಾ ವಿಚಾರ್ಯಾರ್ಥ ಸ್ತ್ರೀಂ ಸೃಜಾಮ ಇತಿ ಸ್ವಯಂ ॥ ೧೮ ॥
ಇತ್ಯುಕ್ತ್ವೋತ್ಪಾದಯಾಮಾಸ ಬ್ರಹ್ಮಾ ಹಂಸಾಸನಾಂ ಶುಭಾಂ ।
ಚತುರ್ವಕ್ತ್ರಾಂ ಚತುರ್ಹಸ್ತಾಂ ಬ್ರಹ್ಮಾಣೀಂ ರೂಪಧಾರಿಣೀಂ ॥ ೧೯ ॥
ಕುಮಾರಶ್ಚೈವ ಕೌಮಾರೀಂ ಮಯೂರವರವಾಹನಾಂ ।
ರಕ್ತಮಾಲ್ಯಾಂಬರಧರಾಂ ಶಕ್ತಿಕುಕ್ಕುಟಧಾರಿಣೀಂ ॥ ೨೦ ॥
ಪುನಃ ಕುಮಾರಃ ಕೌಮಾರೀಂ ಪಕ್ಷೀಂದ್ರವರವಾಹನಾಂ ।
ಕೃಷ್ಣಾಂ ಕರಾಲದಶನಾಂ ಧರ್ಮರಾಜಸ್ಯ ವಾಹನೀಂ ॥ ೨೧ ॥
ದೈತ್ಯದೇಹಪ್ರಮಥನೀಂ ದಂಡಮುದ್ಗರಧಾರಿಣೀಂ ।
ಲಲಾಟಲೋಚನಾಂ ನೀಲಾಂ ಕಪಾಲಕರಭೂಷಿತಾಂ ॥ ೨೨ ॥

---

೧೭. ಆ ಧ್ವನಿಗೆ ಆ ಪಾಪಿಗಳೆಲ್ಲರೂ ಮೂರ್ಛೆಗೊಂಡು ನೆಲದಲ್ಲಿ ಬಿದ್ದರು. ಪುನಃ ಮೇಲಕ್ಕೆದ್ದು ದೇವೋತ್ತಮನಾದ ಮಹೇಶ್ವರನ ಮೇಲೆರಗಿ ಯುದ್ಧ ಮಾಡಲು ಕೂಡಿ ಬಂದರು.

೧೮. ಆಗ ಬ್ರಹ್ಮ ನಾರಾಯಣರೇ ಮುಂತಾದ ದೇವತೆಗಳು, ಆ ರಾಕ್ಷಸರನ್ನು ಗೆಲ್ಲುವುದು ಅಸಾಧ್ಯವೆಂದು ಚಿಂತಿಸಿ ಪರಮೇಶ್ವರನಿಗೆ ಸಹಾಯವನ್ನು ಮಾಡಲು ಮಂತ್ರಾಲೋಚನೆಯನ್ನು ಮಾಡಿ "ನಾವು ಕೆಲವು ಸ್ತ್ರೀಯರನ್ನು ಸೃಷ್ಟಿಮಾಡೋಣ" ಎಂದು ನಿಶ್ಚಯಿಸಿದರು.

೧೯. ಅಂತೆಯೇ ಚತುರ್ಮುಖನು ಹಂಸವಾಹನೆಯೂ, ಮಂಗಳಕರೆಯೂ, ನಾಲ್ಕು ಮುಖಗಳುಳ್ಳವಳೂ, ನಾಲ್ಕು ಕೈಗಳುಳ್ಳವಳೂ, ದಿವ್ಯರೂಪಾನ್ವಿತಳೂ ಆದ ಬ್ರಹ್ಮಾಣಿಯನ್ನು ಸೃಷ್ಟಿಮಾಡಿದನು.

೨೦. ಷಣ್ಮುಖಸ್ವಾಮಿಯು ಮಯೂರವಾಹನೆಯೂ, ಕೆಂಪು ಹೂವುಗಳನ್ನೂ, ವಸ್ತ್ರಗಳನ್ನೂ ಧರಿಸಿದವಳೂ, ಶಕ್ತ್ಯಾಯುಧ ಕುಕ್ಕುಟಗಳನ್ನು ಧರಿಸಿದವಳೂ ಆದ ಕೌಮಾರಿಯನ್ನು ಸೃಜಿಸಿದನು.

೨೧–೨೨. ಪುನಃ ಆ ಕುಮಾರಸ್ವಾಮಿಯೇ ಗರುಡವಾಹನೆಯೂ, ಕಪ್ಪು ಬಣ್ಣದವಳೂ, ಭಯಂಕರಗಳಾದ ಕೋರೆದಾಡೆಗಳುಳ್ಳವಳೂ, ಯಮಧರ್ಮರಾಜನಿಗೆ ಸಹಾಯಕಳೂ, ರಾಕ್ಷಸರ ಶರೀರಗಳನ್ನು ಮರ್ದಿಸುವವಳೂ, ದಂಡ ಮತ್ತು ಮುದ್ಗರಗಳನ್ನು ಧರಿಸಿರುವವಳೂ, ಹಣೆಗಣ್ಣಿನವಳೂ, ನೀಲಳೂ,

ಸಿಂಹಾಽಜಿನಧರಾಂ ಕೃಷ್ಣಾಂ ಸರ್ವಭೂಷಣಭೂಷಿತಾಂ ।
ಕರ್ತ್ರೀಹಸ್ತಾಂ ಖಡ್ಗಹಸ್ತಾಂ ಖೇಟಖಟ್ವಾಂಗಧಾರಿಣೀಂ ।
ಚರ್ಮಾಽಸ್ಥಿಕೇಶವಪುಷಂ ಚಾಮುಂಡಾಮಸೃಜತ್ಪ್ರಭುಃ ॥ ೨೩ ॥
ವಟಸ್ಯ ನಿಕಟೇ ಪೂರ್ವಂ ನಿರ್ಮಿತಾ ಲೋಕಮಾತರಃ ।
ತತೋ ಲೋಕೇ ಸುವಿಖ್ಯಾತಾಃ ಪ್ರತ್ಯಕ್ಷಾ ವಟಮಾತರಃ ॥ ೨೪ ॥
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಮಾತೄಃ ಪಶ್ಯತಿ ಯೋ ನರಃ ।
ಸ ಮುಕ್ತಃ ಸರ್ವಪಾಪೇಭ್ಯೋ ಮಾತೃಲೋಕೇ ಮಹೀಯತೇ ॥ ೨೫ ॥
ಸಿಂಹನಾದೋಽಪಿ ದೇವೇನ ಕೃತೋ ಯತ್ರ ಮಹಾಮುನೇ ।
ತತ್ರ ಸಿಂಹೇಶ್ವರೋ ದೇವಃ ಸರ್ವದುಷ್ಕೃತನಾಶನಃ ॥ ೨೬ ॥
ದರ್ಶನಾತ್ತಸ್ಯ ದೇವಸ್ಯ ಸಿಂಹವತ್ಸ ಬಲೀ ಭವೇತ್ ॥ ೨೭ ॥
ಸಿಂಹನಾದೇ ಕೃತೇ ಯತ್ರ ಜಾತಂ ಕಂಟಕಿತಂ ವಪುಃ ।
ತತ್ರ ಕಂಟೇಶ್ವರೋ ದೇವೋ ಭಕ್ತಾನಾಂ ಸರ್ವದಃ ಸದಾ ॥ ೨೮ ॥

---

ಕಪಾಲವನ್ನು ಕೈಯಲ್ಲಿ ಹಿಡಿದಿರುವವಳೂ, ಸಿಂಹದ ಚರ್ಮವನ್ನು ಹೊದೆದಿರುವಳೂ, ಸರ್ವಾಭರಣಗಳಿಂದಲಂಕೃತಳೂ, ಕೈಗಳಲ್ಲಿ ಕತ್ತರಿ, ಕತ್ತಿ, ಖೇಟ, ಖಟ್ವಾಂಗಗಳೆಂಬ ಆಯುಧಗಳುಳ್ಳವಳೂ, ಚರ್ಮ, ಮೂಳೆ, ಕೂದಲುಗಳಿಂದ ತುಂಬಿದ ದೇಹವುಳ್ಳವಳೂ ಆದ ಚಾಮುಂಡಿಯನ್ನು ಸೃಜಿಸಿದನು.

೨೪. ಪೂರ್ವದಲ್ಲಿ ವಟವೃಕ್ಷದ ಮೂಲದಲ್ಲಿಯೇ ಈ ಲೋಕಮಾತೆಯರೆಲ್ಲರ ಸೃಷ್ಟಿಯು ನಡೆಯಿತು. ಆದುದರಿಂದಲೇ ಅಲ್ಲಿ ಪ್ರತ್ಯಕ್ಷರಾಗಿರುವ ಇವರು ವಟಮಾತೆಯರೆಂದು ಪ್ರಖ್ಯಾತರಾಗಿರುವರು.

೨೫. ಅವರ ತೀರ್ಥದಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ ಯಾವ ನರನು ಈ ವಟಮಾತೆಯರನ್ನು ನೋಡುವನೋ, ಅವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಮಾತೃಲೋಕದಲ್ಲಿ ನೆಲಸಿರುವನು.

೨೬. ಮಹಾಮುನಿಯೆ! ಪರಮೇಶ್ವರನು ಸಿಂಹನಾದವನ್ನು ಮಾಡಿದ ಸ್ಥಳದಲ್ಲಿಯೇ ಸಿಂಹೇಶ್ವರನು ಪ್ರತಿಷ್ಠಿತನಾಗಿರುವನು. ಇವನು ಸಕಲ ಪಾತಕಗಳನ್ನೂ ನಾಶಮಾಡುವನು.

೨೭. ಆ ದೇವನ ದರ್ಶನದಿಂದಲೇ ಮನುಷ್ಯನು ಸಿಂಹದಂತೆ ಮಹಾಬಲಶಾಲಿಯಾಗುವನು.

೨೮. ಪರಮೇಶ್ವರನು ಸಿಂಹನಾದವನ್ನು ಮಾಡಲು ದೇವತೆಗಳ ಶರೀರಗಳು ಪುಳಕಿತಗಳಾದ ಸ್ಥಳದಲ್ಲಿ ಕಂಟೇಶ್ವರನುದ್ಭವಿಸಿದನು. ಅವನು ಭಕ್ತರಿಗೆ ಸರ್ವಕಾಲದಲ್ಲಿಯೂ ಸರ್ವಾಭೀಷ್ಟಗಳನ್ನೂ ಕೊಡುವನು.

ತತ್ರ ತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಕಂಟೇಶ್ವರಂ ಶಿವಂ ।
ಗ್ರಹಭೂತಪಿಶಾಚೇಭ್ಯೋ ನ ಭಯಂ ಪ್ರಾಪ್ನುಯಾತ್ ಕ್ವಚಿತ್ ॥ ೨೯ ॥
ತತಸ್ತಾ ಮಾತರಃ ಸರ್ವಾ ಆದಿಷ್ಟಾಸ್ತು ಹರೇಣ ವೈ ।
ಅಂಧಾಸುರಸ್ಯ ರೌದ್ರಸ್ಯ ಪಿಬಧ್ವಂ ರುಧಿರಂ ದ್ರುತಂ ॥ ೩೦ ॥
ಏತಸ್ಮಿನ್ನಂತರೇ ವ್ಯಾಸ ಪ್ರಜ್ವಲಜ್ಜ್ವಲನೋಪಮಃ ।
ಅಭಯಂ ಶಕ್ರ ಮಾಭೈಸ್ತ್ವಂ ಯತ್ರೋವಾಚೇತಿ ಶಂಕರಃ ॥ ೩೧ ॥
ತತ್ರ ಲಿಂಗಂ ಸಮುದ್ಭೂತಮಭಯೇಶ್ವರಮುತ್ತಮಂ ।
ವಂದಿತಂ ದೇವಗಂಧರ್ವೈಃ ಸಿದ್ಧವಿದ್ಯಾಧರೋರಗೈಃ ॥ ೩೨ ॥
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಸೋಪವಾಸೋ ಜಿತೇಂದ್ರಿಯಃ ।
ಅರ್ಚಯೇದ್ದೇವದೇವೇಶಮಶ್ವಮೇಧಫಲಂ ಲಭೇತ್ ॥ ೩೩ ॥
ಭೂತಪ್ರೇತಪಿಶಾಚೇಭ್ಯೋ ಭಯಂ ತಸ್ಯ ನ ವಿದ್ಯತೇ ।
ಸಿಂಹಯುಕ್ತೇನ ಯಾನೇನ ಶಿವಲೋಕಂ ಸ ಗಚ್ಛತಿ ॥ ೩೪ ॥
ಅಂಧಕಸ್ಯ ತು ಯಾ ಮಾಯಾ ರಕ್ತಾಸುರಸಮುದ್ಭವಾ ।
ಮಾತೃಭಿರ್ಯುಧ್ಯಮಾನಾಭಿಃ ಕ್ಷಯಮಾಶು ಜಗಾಮ ಸಾ ॥ ೩೫ ॥

---

೨೯. ಅಲ್ಲಿರುವ ತೀರ್ಥದಲ್ಲಿ ನರನು ಸ್ನಾನಮಾಡಿ ಕಂಟೇಶ್ವರಲಿಂಗದ ದರ್ಶನವನ್ನು ತೆಗೆದುಕೊಳ್ಳಲು ಗ್ರಹ, ಭೂತ, ಪಿಶಾಚಗಳ ದೆಸೆಯಿಂದ ಎಂದಿಗೂ ಭಯವನ್ನು ಹೊಂದುವುದಿಲ್ಲ.

೩೦. ಬಳಿಕ ಮಹಾದೇವನು ಮಾತೆಯರನ್ನು ಕುರಿತು "ನೀವೆಲ್ಲರೂ ಕ್ರೂರಿಯಾದ ಆ ಅಂಧಕಾಸುರನ ವಿಪುಲವಾದ ರಕ್ತಪ್ರವಾಹವನ್ನು ಕುಡಿಯಿರಿ" ಎಂದು ಅಪ್ಪಣೆಮಾಡಿದನು.

೩೧–೩೨. ವ್ಯಾಸನೆ! ಈ ಸಮಯದಲ್ಲಿಯೇ ಉರಿಯುತ್ತಿರುವ ಬೆಂಕಿಯಂತಿರುವ ಶಂಕರನು, "ಎಲೈ ಇಂದ್ರನೆ! ನೀನು ಭಯಗೊಳ್ಳಬೇಡ" ಎಂದು ಅಭಯವಚನವನ್ನಿತ್ತ ಸ್ಥಳದಲ್ಲಿ ಅಭಯೇಶ್ವರನೆಂಬ ಉತ್ತಮನಾದ ಲಿಂಗವೊಂದುದ್ಭವಿಸಿತು. ದೇವತೆಗಳು, ಗಂಧರ್ವರು, ಸಿದ್ಧರು, ವಿದ್ಯಾಧರರು, ನಾಗರು ಮುಂತಾದವರಿಗೆಲ್ಲ ಅದು ಪರಮವಂದ್ಯವಾಗಿರುವುದು.

೩೩–೩೪. ಉಪವಾಸವನ್ನು ಮಾಡಿ ಜಿತೇಂದ್ರಿಯನಾಗಿ ಆ ತೀರ್ಥದಲ್ಲಿ ಮಿಂದು ಶುಚಿರ್ಭೂತನಾಗಿ ಆ ದೇವದೇವೇಶ್ವರನನ್ನು ಪೂಜಿಸಿದವನಿಗೆ ಅಶ್ವಮೇಧ ಯಜ್ಞವನ್ನು ಮಾಡಿದ ಫಲವು ಲಭಿಸುವುದು. ಭೂತ, ಪ್ರೇತ, ಪಿಶಾಚಗಳೇ ಮುಂತಾದುವುಗಳಿಂದ ಅವನಿಗೆ ಭಯವೊದಗುವುದಿಲ್ಲ. ಸಿಂಹಗಳನ್ನು ಹೂಡಿರುವ ವಿಮಾನದಲ್ಲಿ ಕುಳಿತು ಅವನು ಶಿವಲೋಕಕ್ಕೆ ತೆರಳುವನು.

೩೫–೩೬. ರಕ್ತಬಿಂದುಗಳಿಂದ ಅಸುರರನ್ನು ಹುಟ್ಟಿಸುತ್ತಿರುವ ಅಂಧಕಾಸುರನ ಮಾಯೆಯು ಯುದ್ಧಸನ್ನದ್ಧರಾದ ಸಪ್ತಮಾತೃಗಳಿಂದ ಕ್ಷಣಮಾತ್ರದಲ್ಲಿ

**ದೇವ್ಯಃ ಪಿಬಂತ್ಯೋ ರಕ್ತೌಘಂ ದೈತೇಯತನುತಶ್ಚ್ಯುತಂ ।**
**ಷಟ್ತೃಪ್ತಿಂ ಪರಮಾಂ ಜಗ್ಮುರ್ನ ತು ತೃಪ್ತಾ ಲಲಾಟಜಾ ॥ ೩೬ ॥**
**ಹತಮಾಯಃ ಶಿಷ್ಟಕಸ್ತು ಭಿನ್ನಶೂಲತನುಚ್ಛದಃ ।**
**ಉತ್ತರಾಭಿಮುಖಂ ಶೂಲಮಂಧಕೋಽಕರ್ಷಯದ್ಬಲೀ ॥ ೩೭ ॥**
**ಸನ್ನಿರುದ್ಧೋ ಮಹಾದೇಹೋ ವಾರಿತೋ ಗಣಪೇನ ಸಃ ।**
**ಮಹಾವಿನಾಯಕಃ ಖ್ಯಾತಸ್ತಸ್ಮಾಲ್ಲೋಕೇಽಭವನ್ಮುನೇ ॥ ೩೮ ॥**
**ದರ್ಶನಾತ್ತಸ್ಯ ದೇವಸ್ಯ ನ ವಿಘ್ನೈಃ ಪೀಡ್ಯತೇ ನರಃ ।**
**ಮಾಸೇ ಮಾಸೇ ಚತುರ್ಥ್ಯಾಂ ಯೋ ಗಣೇಶಂ ಪೂಜಯೇದ್ದ್ವಿಜ ॥ ೩೯ ॥**
**ನ ತಸ್ಯ ವಿಘ್ನಂ ಜಾಯೇತ ಇಹಲೋಕೇ ಪರತ್ರ ಚ ।**
**ಸ್ವೇದಬಿಂದುರಥೋ ತಸ್ಯ ಲಲಾಟಾದಪತದ್ಭುವಿ ॥ ೪೦ ॥**
**ತಸ್ಮಾದಂಗಾರಕೋ ಜಾತೋ ರಕ್ತಮಾಲ್ಯಾನುಲೇಪನಃ ।**
**ಆವಂತ್ಯೇ ವಿಷಯೇ ಜಾತೋ ಲೋಹಿತಾಂಗೋ ಧರಾಸುತಃ ॥ ೪೧ ॥**

---

ನಾಶವನ್ನು ಹೊಂದಿತು. ಆ ರಾಕ್ಷಸನ ದೇಹದಿಂದ ಸುರಿಯುತ್ತಿರುವ ರಕ್ತಧಾರೆಗಳನ್ನು ಕುಡಿಯುತ್ತಿದ್ದ ದೇವಿಯರಲ್ಲಿ ಆರು ಜನರು ತೃಪ್ತಿಗೊಂಡರು. ಏಳನೆಯ ಲಲಾಟಜನ್ಯೆಯಾದ ಮಾಹೇಶ್ವರಿಗೆ ತೃಪ್ತಿಯಾಗಲಿಲ್ಲ.

೩೭. ಅಂಧಕಾಸುರನು ಏಕಾಂಗಿಯಾದನು. ಅವನ ಮಾಯೆಯೂ ನಷ್ಟವಾಯಿತು. ತ್ರಿಶೂಲದಿಂದ ಅವನ ಕವಚವೆಲ್ಲವೂ ಭಿನ್ನವಾಯಿತು. ಆದರೂ ಬಲಿಷ್ಠನಾದ ಅವನು ಉತ್ತರಾಭಿಮುಖನಾಗಿ ಓಡುತ್ತ ತನ್ನ ಮೈಯೊಳಗಿನಿಂದ ಶೂಲವನ್ನು ಕೀಳಲನುವಾದನು.

೩೮. ಯುದ್ಧರಂಗದಿಂದ ಓಡುತ್ತಿರುವ ಆ ಮಹಾಕಾಯನನ್ನು ಗಣಪತಿಯು ತಡೆದು ನಿಲ್ಲಿಸಿದನು. ಮುನಿಯೆ! ಅಂದಿನಿಂದ ವಿಘ್ನೇಶ್ವರನಿಗೆ ಲೋಕದಲ್ಲಿ ಮಹಾವಿನಾಯಕನೆಂಬ ಹೆಸರಾಯಿತು.

೩೯. ಆ ದೇವನ ದರ್ಶನದ ಫಲವಾಗಿ ನರನು ವಿಘ್ನಗಳಿಗೆ ಸಿಕ್ಕುವುದಿಲ್ಲ. ದ್ವಿಜವರ್ಯನೆ! ಪ್ರತಿಮಾಸದ ಚತುರ್ಥಿಗಳಲ್ಲಿಯೂ ಆ ಗಣೇಶನ ಪೂಜೆಯನ್ನು ಮಾಡಬೇಕು.

೪೦. ಹಾಗೆ ಪೂಜಿಸಿದವನಿಗೆ ಇಹದಲ್ಲಿಯಾಗಲಿ, ಪರದಲ್ಲಿಯಾಗಲಿ ವಿಘ್ನಗಳುಂಟಾಗುವುದಿಲ್ಲ. ಅಂಧಕಾಸುರನ ಸಂಹಾರವಾದಾಬಳಿಕ ಪರಮೇಶ್ವರನ ಹಣೆಯಿಂದ ಒಂದು ಬೆವರಿನ ಹನಿಯು ನೆಲದಲ್ಲಿ ಬಿದ್ದಿತು.

೪೧. ಅದರಿಂದ ಕೆಂಪು ಹೂವುಗಳ ಹಾರವನ್ನೂ, ಚಂದನವನ್ನೂ ಧರಿಸಿರುವ ಕುಜನು ಜನಿಸಿದನು. ಇಂತು ಅವನು ರಕ್ತಾಂಗನೂ, ಭೂಮಿಪುತ್ರನೂ ಆಗಿ ಅವಂತೀದೇಶದಲ್ಲಿ ಉದ್ಭವಿಸಿದನು.

ಅಂಗಾರಕಸ್ತು ರಕ್ತಾಕ್ಷೋ ಮಹಾದೇವಸುತಸ್ತಥಾ ।
ನಾಮಭಿರ್ಬ್ರಹ್ಮಣಾ ಸ್ತುತ್ವಾ ಗ್ರಹಮಧ್ಯೇಽಧಿರೋಪಿತಃ ॥ ೪೨ ॥
ತತ್ರ ತೀರ್ಥಮಥೋತ್ಪನ್ನಮಂಗಾರೇಶ್ವರಮುತ್ತಮಂ ।
ಬ್ರಹ್ಮಣಾ ಸ್ಥಾಪಿತಂ ಲಿಂಗಂ ಗಣಗಂಧರ್ವಸೇವಿತಂ ॥ ೪೩ ॥
ಶುಚಿಸ್ತತ್ರ ಚ ಯಃ ಸ್ನಾತಿ ನರೋಽಹ್ಯಂಗಾರವಾಸರೇ ।
ದೃಷ್ಟ್ವಾಽಂಗಾರೇಶ್ವರಂ ಸೋಽಥ ಮುಚ್ಯತೇ ಸರ್ವಪಾತಕೈಃ ॥ ೪೪ ॥
ಚತುರ್ಥ್ಯಾಂ ಮಂಗಲದಿನೇ ನಕ್ತೇ ಚಾಽರ್ಘ್ಯಂ ನಿವೇದಯೇತ್ ।
ಯಾವತ್ಪೂರ್ಣಾಶ್ಚತಸ್ರಃ ಸ್ಯುಸ್ತಾವತ್ಕಾರ್ಯಾಃ ಪ್ರಯತ್ನತಃ ॥ ೪೫ ॥
ಪಂಚ ವೈ ಕರಕಾಃ ಕಾರ್ಯಾಸ್ತಾಮ್ರಪಾತ್ರೇಣ ಸಂಯುತಾಃ ।
ಗುಡಪೀಠಮಯಾಃ ಕಾರ್ಯಾ ರಕ್ತವಸ್ತ್ರಸಮನ್ವಿತಾಃ ॥ ೪೬ ॥
ರಕ್ತಚಂದನಸಂಯುಕ್ತಾ ರಕ್ತಪುಷ್ಪೈಶ್ಚ ಪೂಜಿತಾಃ ।
ತಿಲತಂಡುಲಸಂಪೂರ್ಣಮೇಕಂ ತತ್ರೈವ ಕಾರಯೇತ್ ॥ ೪೭ ॥

---

೪೨. ಕೆಂಪಾದ ಕಣ್ಣುಗಳುಳ್ಳ ಅಂಗಾರಕನನ್ನು ಮಹಾದೇವನ ಮಗನೆಂದೂ ಕರೆಯುವರು. ಅವನನ್ನು ಬ್ರಹ್ಮನು ಅನೇಕ ಹೆಸರುಗಳಿಂದ ಸ್ತೋತ್ರ ಮಾಡಿ ನವಗ್ರಹಗಳಲ್ಲಿ ಒಬ್ಬನನ್ನಾಗಿ ಮಾಡಿದನು.

೪೩. ಅವನ ಜನ್ಮಸ್ಥಳದಲ್ಲಿ ಅಂಗಾರೇಶ್ವರವೆಂಬ ಉತ್ತಮ ತೀರ್ಥವುಂಟಾಯಿತು. ಬ್ರಹ್ಮನೂ ಅಲ್ಲಿಯೇ ಗಣಗಂಧರ್ವರಿಂದ ಪೂಜಿತವಾದ ಉತ್ತಮ ಲಿಂಗವೊಂದನ್ನು ಸ್ಥಾಪಿಸಿದನು.

೪೪. ಯಾವ ನರನು ಮಂಗಳವಾರದದಿನ ಆ ತೀರ್ಥದಲ್ಲಿ ಸ್ನಾನಮಾಡಿ ಶುಚಿಯಾಗಿ ಅಂಗಾರೇಶ್ವರನನ್ನು ನೋಡುವನೊ, ಅವನು ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೪೫. ಮಂಗಳವಾರ ಚೌತಿಯು ಬರಲು ಆ ರಾತ್ರಿಯಲ್ಲಿ ಅಂಗಾರಕನಿಗೆ ಅರ್ಘ್ಯಪ್ರದಾನವನ್ನು ಮಾಡಬೇಕು. ಇಂತಹ ನಾಲ್ಕು ಮಂಗಳವಾರಗಳಾವರೂ ಈ ವ್ರತವನ್ನು ಮಾಡಬೇಕು.

೪೬. ತಾಮ್ರದಲ್ಲಿ ಮಾಡಿದ ಐದು ಪಾತ್ರೆಗಳನ್ನು ಕಳಶಗಳಾಗಿಟ್ಟುಕೊಂಡು ಬೆಲ್ಲವನ್ನು ಹರಡಿರುವ ಪೀಠದ ಮೇಲೆ ಅವುಗಳನ್ನಿರಿಸಿ ಕೆಂಪುವಸ್ತ್ರಗಳಿಂದ ಅವುಗಳನ್ನು ಆಚ್ಛಾದಿಸಬೇಕು.

೪೭. ಕೆಂಪು ಗಂಧದಿಂದ ಅವುಗಳನ್ನಲಂಕರಿಸಿ ಕೆಂಪು ಹೂವುಗಳಿಂದಲೇ ಪೂಜೆಯನ್ನು ಮಾಡಬೇಕು. ಒಂದು ಕಳಶವನ್ನು ಎಳ್ಳಿನೊಡನೆ ಕೂಡಿದ ಅಕ್ಕಿಯಿಂದ ತುಂಬಿರಬೇಕು.

ದ್ವಿತೀಯಂ ಲಡ್ಡುಕೈಶ್ಚೈವ ತೃತೀಯಂ ಪಯಸಾ ತಥಾ ।
ಉತ್ತರೀಭಿಶ್ಚತುರ್ಥಂ ಚ ಪಂಚಮಂ ಮೂಲಕೈಸ್ತಥಾ ॥ ೪೮ ॥
ಕೃತ್ವಾ ಹ್ಯೇವಂ ವಿಧಾನೇನ ಮಂತ್ರೇಣಾಽರ್ಘ್ಯಂ ನಿವೇದಯೇತ್ ।
ಕುಜಾಯ ಲೋಹಿತಾಂಗಾಯ ಗ್ರಹಮಧ್ಯಸ್ಥಿತಾಯ ಚ ।
ಕಾರ್ತಿಕೇಯಾಽನುರೂಪಾಯ ಸುರೂಪಾಯ ನಮೋನಮಃ ॥ ೪೯ ॥
ಶಿವಲಾಲಾಟಸಂಭೂತ ಧರಣೀಗರ್ಭಸಂಭವ ।
ರೂಪಾರ್ಥಂ ತ್ವಾಂ ಪ್ರಪನ್ನೋಽಸ್ಮಿ ಗೃಹಾಣಾಽರ್ಘ್ಯಂ ನಮೋಽಸ್ತುತೇ ॥
ಜ್ವಲಿತಾಂಗಾರವರ್ಣಾಽಽಭ ಸ್ನಿಗ್ಧವಿದ್ರುಮಭಾಸುರ ।
ಪುತ್ರಾರ್ಥೀ ತ್ವಾಂ ಪ್ರಪನ್ನೋಽಸ್ಮಿ ಗೃಹಾಣಾರ್ಘ್ಯಂ ಧರಾತ್ಮಜ ॥ ೫೧ ॥
ಅವಂತ್ಯಮಂಡಲೇ ಜಾತೋ ಧರಣ್ಯಾಂ ಚ ಶಿವೇನ ವೈ ।
ಪುತ್ರಂ ದೇಹಿ ಧನಂ ದೇಹಿ ಯಶೋ ದೇಹಿ ನಮೋಽಸ್ತುತೇ ॥ ೫೨ ॥
ಏವಂ ಸಂಪೂಜಿತೋ ಭೌಮಶ್ಚತುರ್ಥ್ಯಾಂ ಮುನಿಸತ್ತಮ ।
ಭುಕ್ತ್ವಾ ಭೋಗಾಂಸ್ತಥಾ ಪುತ್ರಾನ್ಪ್ರಾಪ್ಯ ವೈ ಕ್ಷಿತಿಮಂಡಲೇ ॥ ೫೩ ॥

---

೪೮. ಎರಡನೆಯದನ್ನು ಲಡ್ಡುಕಗಳಿಂದಲೂ, ಮೂರನೆಯದನ್ನು ಹಾಲಿನಿಂದಲೂ, ನಾಲ್ಕನೆಯದನ್ನು ಫಲಗಳಿಂದಲೂ, ಐದನೆಯ ಕಳಶವನ್ನು ಕಂದಮೂಲಗಳಿಂದಲೂ ತುಂಬಿರಬೇಕು.

೪೯. ಆ ಬಳಿಕ ವಿಧಿಪೂರ್ವಕವಾಗಿ ಮಂತ್ರಸಹಿತವಾಗಿ ಅರ್ಘ್ಯವನ್ನು ಕೊಡಬೇಕು. ಭೂಮಿಪುತ್ರನೂ, ಕೆಂಪಾದ ದೇಹವುಳ್ಳವನೂ, ಗ್ರಹಗಳ ಮಧ್ಯದಲ್ಲಿರುವವನೂ ಷಣ್ಮುಖನಿಗೆ ಸಮಾನನಾದವನೂ, ಸುಂದರರೂಪನೂ ಆದ ನಿನಗೆ ನಮಸ್ಕಾರವು.

೫೦. ಶಿವನ ಹಣೆಯಿಂದಲೂ, ಭೂದೇವಿಯ ಗರ್ಭದಿಂದಲೂ ಹುಟ್ಟಿದ ನಿನ್ನನ್ನು ಸೌಂದರ್ಯಕಾಮನಾದ ನಾನು ಮರೆಹೊಕ್ಕಿರುವೆನು. ಈ ಅರ್ಘ್ಯವನ್ನು ತೆಗೆದುಕೊ. ನಿನ್ನನ್ನು ನಮಸ್ಕರಿಸುವೆನು.

೫೧. ಕಾದ ಕೆಂಡದ ಮೈಬಣ್ಣವುಳ್ಳವನೂ, ದಟ್ಟವಾದ ಹವಳದ ಬಳ್ಳಿಯಂತಿರುವವನೂ, ಭೂಮಿಕುಮಾರನೂ ಆದ ನಿನ್ನನ್ನು ಸಂತಾನಕಾಮನಾದ ನಾನು ಶರಣು ಹೊಕ್ಕಿರುವೆನು. ಈ ಅರ್ಘ್ಯವನ್ನು ಸ್ವೀಕರಿಸು.

೫೨. ನೀನು ಶಿವನ ಅನುಗ್ರಹದಿಂದ ಭೂದೇವಿಯ ಮಗನಾಗಿ ಅವಂತೀ ಕ್ಷೇತ್ರದಲ್ಲಿ ಜನಿಸಿದವನು. ನನಗೆ ಪುತ್ರಸಂತಾನವನ್ನೂ, ಧನವನ್ನೂ, ಕೀರ್ತಿಯನ್ನೂ ಕೊಡು, ನಿನಗೆ ನಮಸ್ಕರಿಸುವೆನು.

೫೩–೫೪. ಎಲೈ ಮುನಿಸತ್ತಮನೆ! ಇಂತು ಚತುರ್ಥಿಯ ದಿನದಲ್ಲಿ ಅಂಗಾರಕನ ಪೂಜೆಯನ್ನು ಮಾಡಿದವನು ಭೂಲೋಕದಲ್ಲಿ ಅನೇಕ ಭೋಗಗಳನ್ನು

**ಮೃತಃ ಸ್ವರ್ಗಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ॥ ೫೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅಂಗಾರಕಚತುರ್ಥೀವ್ರತಮಾಹಾತ್ಮ್ಯವರ್ಣನಂ"ನಾಮ ಸಪ್ತತ್ರಿಂಶೋಽಧ್ಯಾಯಃ**

---

ಅನುಭವಿಸುವನಲ್ಲದೆ ಪುತ್ರರನ್ನೂ ಪಡೆಯುವನು. ಮೃತನಾಗಲು ಹದಿನಾಲ್ಕು ಇಂದ್ರಕಲ್ಪಗಳವರೆಗೂ ಸ್ವರ್ಗವಾಸದಲ್ಲಿರುವನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅಂಗಾರಕಚತುರ್ಥೀಮಾಹಾತ್ಮ್ಯವರ್ಣನ"ವೆಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥಾಷ್ಟತ್ರಿಂಶೋಽಧ್ಯಾಯಃ

## ಅಂಧಕವೃತ್ತಾಂತವರ್ಣನಂ

ಸನತ್ಕುಮಾರ ಉವಾಚ :—

ನಾಽಸ್ತಿ ಶೇಷಂ ಯದಾ ರಕ್ತಂ ಪೀಯಮಾನಂ ಚ ರಕ್ಷಸಃ ।
ಚಾಮುಂಡಾಯಾಸ್ತತೋ ರಕ್ತಮಭೂದಾಸ್ಯಂ ಚ ಭಾಸುರಂ ॥ ೧ ॥
ಕೃಷ್ಣಂ ಕೃತಾಂತಕಲ್ಪಾಂತಂ ಕರಾಲದಶನಾಽಧರಂ ।
ಪ್ರಜ್ವಲತ್ಯಂಧಕೇ ಶಾಂತಂ ಜ್ವಲತ್ಕೇಸರಲೋಚನಂ ॥ ೨ ॥
ಘೋರಘುರ್ಘುರನಿರ್ಘೋಷ ಸ್ಫೀತಫೇತ್ಕಾರವಿಸ್ವರಂ ।
ತಾರ್ಕ್ಷ್ಯಪಕ್ಷಕೃತಾಪೀಡಂ ತೀಕ್ಷ್ಣದಂಷ್ಟ್ರಾಂಕುರೋಜ್ಜ್ವಲಂ ॥ ೩ ॥
ತಸ್ಮಿನ್ಮುಖೇ ಕಪಾಲಾಗ್ರಂ ನಿಧಾಯ ರುಷಿತಾನನಾ ।
ಅಪಿಬದ್ರುಧಿರಂ ಚಂಡೀ ಚಂಡದೋರ್ದಂಡಮಂಡಿತಾ ॥ ೪ ॥
ತಯಾ ಪಿಬಂತ್ಯಾ ದೈತ್ಯೇಂದ್ರಃ ಶರೀರೇ ಕೃಶತಾಂ ಗತಃ ।
ಕ್ಷಯಂ ನಿನ್ಯೇಽಥ ಸಂಕ್ಷೀಣೇ ಕ್ಷುತ್ರಕ್ಷುಭಿತವೀಕ್ಷಣಃ ॥ ೫ ॥

---

### ಕನ್ನಡದ ಅನುವಾದ

#### ಅಂಧಕವೃತ್ತಾಂತವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಹೀಗೆ ಚಾಮುಂಡಿಯು ಅಂಧಕ ರಾಕ್ಷಸನ ರಕ್ತವನ್ನು ಕುಡಿದು ನಿಶ್ಶೇಷವಾಗಿ ಮಾಡಲು ಆಕೆಯ ಮುಖವು ರಕ್ತ ವರ್ಣದಿಂದ ಶೋಭಿಸುತ್ತಿದ್ದಿತು.

೨—೩. ಆಕೆಯ ಮುಖವು ಕಪ್ಪಗೂ, ಕಲ್ಪಾವಸಾನದ ಯಮನ ಮುಖವನ್ನು ಹೋಲುವುದೂ, ಕರಾಳವಾದ ದಂತಪಜ್ಕ್ತಿ ಮತ್ತು ತುಟಿಗಳುಳ್ಳದೂ, ಪ್ರಶಾಂತವಾದರೂ ಅಂಧಕನ ವಿಷಯದಲ್ಲಿ ಬೆಂಕಿಯಂತೆ ಜ್ವಲಿಸುತ್ತಿರುವುದೂ, ಉರಿಯುತ್ತಿರುವ ಹಳದಿಯ ನೇತ್ರಗಳಿಂದ ಕೂಡಿದುದೂ, ಭೀಕರವಾದ ಘುರ್ಘುರನಾದವನ್ನು ಮಾಡುತ್ತಿರುವುದೂ, ರಕ್ತಪಾನದ ಫೇತ್ಕಾರದ ವಿಕೃತಸ್ವರವುಳ್ಳದುದೂ, ಚಿನ್ನದ ಕಪೋಲಗಳಿಂದ ರಂಜಿಸುವುದೂ, ತೀಕ್ಷ್ಣ ದಂಷ್ಟ್ರಗಳೆಂಬ ಅಂಕುರಗಳಿಂದ ಜ್ವಲಿಸುತ್ತಿರುವುದೂ ಆಗಿದ್ದಿತು.

೪. ಪ್ರಚಂಡಬಾಹುಗಳಿಂದ ಶೋಭಿಸುತ್ತಿರುವ ಆ ಚಾಮುಂಡಿಯು ರೋಷಗೊಂಡವಳಾಗಿ ಆ ರಾಕ್ಷಸನ ತಲೆಯನ್ನು ತನ್ನ ಬಾಯಲ್ಲಿಟ್ಟುಕೊಂಡು ದೇಹದಲ್ಲಿದ್ದ ರಕ್ತವೆಲ್ಲವನ್ನೂ ಪಾನಮಾಡಿದಳು.

೫. ಆಕೆಯು ಅವನ ರಕ್ತವನ್ನು ಶೋಷಿಸಲು ರಾಕ್ಷಸೇಂದ್ರನು ಕೃಶನಾಗ ತೊಡಗಿದನು. ಶರೀರವು ಕ್ಷಯಿಸಲು ದೃಷ್ಟಿಶಕ್ತಿಯೂ ಕ್ಷೋಭಗೊಂಡು ಮಂದವಾಯಿತು.

ಇತ್ಥಂ ನಿರ್ವೀರ್ಯದೇಹೋಽಸೌ ಬಭೂವಾಽಂಧಕದಾನವಃ ।
ಸರ್ವಾಂ ಸಂಹೃತ್ಯ ಮಾಯಾಂ ಯೋ ಬಲಂ ಕ್ಷೀಣಮಥಾಕರೋತ್॥ ೬ ॥
ತೀವ್ರಂ ಭಯಂ ಸಮಾಸಾದ್ಯ ಪ್ರಾಣತ್ರಾಣಪರಾಯಣಃ ।
ದೃಷ್ಟ್ವಾ ನಾಽನ್ಯಾಂ ಗತಿಂ ಲೋಕೇ ದೈತ್ಯಸ್ತುಷ್ಟಾವ ಶಂಕರಂ ॥ ೭ ॥
ಕೃತಾಂಜಲಿಪುಟೋ ಭೂತ್ವಾ ರೋಮಾಂಚಿತಶರೀರಕಃ ।
ಸಾತ್ವಿಕಂ ಭಾವಮಾಪನ್ನಸ್ತ್ಯಕ್ತ್ವಾ ಚೈವ ರಜಸ್ತಮಃ ॥ ೮ ॥
ಲೋಕಾನಾಂ ಕಾರಣಂ ದೇವಂ ವಿಬುಧಾಽಧಿಪತಿಂ ಪ್ರಭುಂ ।
ಶಶ್ವದ್ಬುದ್ಧ್ಯಾಽನ್ವಿತೋ ಭಕ್ತ್ಯಾ ನಿರ್ಮಲೇನಾಽಂತರಾತ್ಮನಾ ॥ ೯ ॥
ಶ್ಲಾಘ್ಯಂ ಶಿವಂ ಚ ತುಷ್ಟಾವ ದೇವಂ ಚಂದ್ರಾರ್ಧಶೇಖರಂ ॥ ೧೦ ॥

ಅಂಧಕ ಉವಾಚ :—

ಕೃತ್ಸ್ನಸ್ಯ ಯೋಽಸ್ಯ ಜಗತಃ ಸ ಚರಾಚರಸ್ಯ
ಕರ್ತಾ ಕೃತಸ್ಯ ಚ ತಥಾ ಸುಖದುಃಖದಾತಾ ।
ಸಂಸಾರಹೇತುರಪಿ ಯಃ ಪುನರಂತಕಾಲೇ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೧ ॥

---

೬–೭. ಇಂತು ದೇವತೆಗಳ ಸೈನ್ಯವನ್ನೆಲ್ಲ ಕ್ಷೀಣಮಾಡಿದ್ದ ಅಂಧಕಾಸುರನು ತನ್ನ ಮಾಯೆಯನ್ನೆಲ್ಲ ಉಪಸಂಹರಿಸಿಕೊಂಡು ನಿರ್ವೀರ್ಯವಾದ ದೇಹವುಳ್ಳವನಾದನು. ತೀವ್ರವಾದ ಭಯವುಂಟಾಗಲು ತನ್ನ ಪ್ರಾಣಗಳನ್ನು ಕಾಪಾಡಿಕೊಳ್ಳುವುದರಲ್ಲಿಯೇ ಉದ್ಯುಕ್ತನಾಗಿ ಲೋಕದಲ್ಲೆಲ್ಲಿಯೂ ಬೇರೆ ದಿಕ್ಕನ್ನು ಕಾಣದೆ ಆ ದೈತ್ಯನು ಶಂಕರನನ್ನು ಸ್ತೋತ್ರಮಾಡಲು ಪಕ್ರಮಿಸಿದನು.

೮. ಎರಡು ಕೈಗಳನ್ನೂ ಮುಗಿದುಕೊಂಡು ಮೈಯಲ್ಲೆಲ್ಲ ಪುಳಕಗಳೇಳಲು ರಜೋಗುಣ, ತಮೋಗುಣಗಳನ್ನು ದೂರಮಾಡಿ ಶುದ್ಧವಾದ ಸಾತ್ವಿಕಭಾವದಲ್ಲಿಯೇ ನೆಲಸಿದ್ದನು.

೯. ಹದಿನಾಲ್ಕು ಲೋಕಗಳಿಗೆ ಆದಿಕಾರಣನೂ, ದೇವದೇವನೂ, ದೇವತೆಗಳಿಗೊಡೆಯನೂ, ಸರ್ವೇಶ್ವರನೂ, ಆದ ಶಿವನನ್ನು ನಿಶ್ಚಲವಾದ ಬುದ್ಧಿಯಿಂದಲೂ ಪರಿಶುದ್ಧವಾದ ಅಂತಃಕರಣದಿಂದಲೂ ಸ್ತೋತ್ರಮಾಡಿದನು.

೧೦. ಸಕಲಲೋಕವಂದ್ಯನೂ, ಮಂಗಳಪ್ರದನೂ, ಚಂದ್ರಖಂಡವನ್ನು ತಲೆಯಲ್ಲಿ ಧರಿಸಿದವನೂ ಆದ ದೇವನನ್ನು ಇಂತು ಸ್ತುತಿಸಿದನು :

೧೧. ಅಂಧಕನು ಹೇಳುತ್ತಾನೆ:—ಚರಾಚರಗಳನ್ನೊಳಕೊಂಡ ಈ ಸಮಸ್ತ ಜಗತ್ತಿಗೂ ಯಾವನು ಸೃಷ್ಟಿಕರ್ತನೊ, ಸೃಷ್ಟವಾದ ಬ್ರಹ್ಮಾಂಡಕ್ಕೆ ಯಾವನು ಸುಖದುಃಖಗಳನ್ನೀಯುತ್ತಿರುವನೊ, ಅಂತ್ಯಕಾಲದಲ್ಲಿ ಯಾವನು ಕರ್ಮಬೀಜಗಳನ್ನು ತನ್ನಲ್ಲಿ ಅಡಗಿಸಿಕೊಂಡು ಪುನಃ ಸಂಸಾರಕ್ಕೆ ಕಾರಣನಾಗುವನೊ, ಯಾವನು ಶರಣಪ್ರದನೊ, ಅಂತಹ ಶಂಕರನನ್ನು ಶರಣುಹೋಗುವೆನು.

ಯಂ ಯೋಗಿನೋ ವಿಗತಮೋಹತಮೋರಜಸ್ಕಾ
ಭಕ್ತ್ಯೈಕತಾನಮನಸೋ ವಿನಿವೃತ್ತಕಾಮಾಃ ।
ಧ್ಯಾಯಂತಿ ಯೇಽಖಿಲಧಿಯೋಽಮಿತದಿವ್ಯಭೂತಿಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೨ ॥

ಯಶ್ಚಂದ್ರಖಂಡಮಮಲಂ ವಿಲಸನ್ಮಯೂಖಂ
ಬದ್ಧ್ವಾ ಸದಾ ಸುರಸರಿಚ್ಛಿರಸಾ ಬಿಭರ್ತಿ ।
ಯಸ್ಯಾರ್ಧದೇಹಮಭಜದ್ಗಿರಿರಾಜಪುತ್ರೀ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೩ ॥

ಯಃ ಸಿದ್ಧಚಾರಣನಿಷೇವಿತಪಾದಪದ್ಮೋ
ಗಂಗಾಂ ಮಹೋರ್ಮಿವಿಷಮಾಂ ಗಗನಾತ್ಪತಂತೀಂ ।
ಮೂರ್ಧ್ನಾ ದಧೇ ಸ್ರಜಮಿವ ತ್ರಿಜಗತ್ಪುನಂತೀಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೪ ॥

ಕೈಲಾಸಶೈಲಶಿಖರಂ ಪ್ರವಿಕಂಪ್ಯಮಾನಂ
ಕೈಲಾಸ ಶೃಂಗಸದೃಶೇನ ದಶಾನನೇನ ।
ಯಃ ಪಾದಪದ್ಮಪರಿಪೀಡನ ಸೇವ್ಯಮಾನ
ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೫ ॥

---

೧೨. ಮೋಹ, ರಜಸ್ತಮೋಗುಣಗಳನ್ನು ಕಳೆದುಕೊಂಡವರೂ, ಭಕ್ತಿಯ ಆಧಿಕ್ಯದಿಂದ ಚಿತ್ತೈಕಾಗ್ರತೆಯನ್ನು ಪಡೆದವರೂ, ಈಷಣತ್ರಯರಹಿತರೂ ಆದ ಯೋಗಿವರ್ಯರು ಯಾವನನ್ನು ಧ್ಯಾನಮಾಡುವರೊ, ಸರ್ವಜ್ಞರು ಯಾವನನ್ನು ಅಪ್ರಮೇಯನೆಂದೂ ದಿವ್ಯೈಶ್ವರ್ಯಸಮನ್ವಿತನೆಂದೂ ಉಪಾಸಿಸುವರೊ, ಅಂತಹ ಶಂಕರನನ್ನು ಶರಣುಹೋಗುವೆನು.

೧೩. ದೇವನದಿಯಿರುವ ಜಟಾಮಂಡಲದಲ್ಲಿ ಕಿರಣಯುಕ್ತವೂ, ಪರಿಶುದ್ಧವೂ ಆದ ಚಂದ್ರಖಂಡವನ್ನು ಯಾವನು ಕಟ್ಟಿಹಾಕಿರುವನೊ, ಯಾವನ ಅರ್ಧದೇಹವನ್ನು ಗಿರಿರಾಜಕನ್ಯೆಯು ಸೇವೆಯಿಂದ ಸ್ವಾಧೀನಪಡಿಸಿಕೊಂಡಳೊ, ಆ ಶಂಕರನಿಗೆ ಶರಣಾಗತನಾಗುವೆನು.

೧೪. ಸಿದ್ಧರು ಮತ್ತು ಚಾರಣರು ಯಾವನ ಪಾದಪದ್ಮಗಳನ್ನು ಸೇವಿಸುತ್ತಿರುವರೊ, ಮಹತ್ತರಗಳಾದ ಅಲೆಗಳಿಂದ ಕೂಡಿ ಆಕಾಶದಿಂದ ಬೀಳುತ್ತಿರುವುದೂ, ಮೂರುಲೋಕಗಳನ್ನು ಪಾವನಗೊಳಿಸುವುದೂ ಆದ ಗಂಗಾಪ್ರವಾಹವನ್ನು ಯಾವನು ಕುಸುಮದಾಮದಂತೆ ಮೌಳಿಯಲ್ಲಿ ಧರಿಸಿದನೊ, ಅಂತಹ ಅಭಯಪ್ರದನಾದ ಶಂಕರನನ್ನು ಮರೆಹೋಗುವೆನು.

೧೫. ಕೈಲಾಸಶೃಂಗಸದೃಶನಾದ ರಾವಣಾಸುರನು ಕೈಲಾಸಪರ್ವತವನ್ನು ಅಲ್ಲಾಡಿಸುತ್ತಿರಲು ಯಾವನು ಶಿಖರದಲ್ಲಿ ಕುಳಿತು ಪಾದಾಂಗುಷ್ಠದಿಂದ ಒತ್ತಿ

ದಕ್ಷಾಧ್ವರೇ ಚ ನಯನೇ ಚ ತಥಾ ಭಗಸ್ಯ
ಪೂಷ್ಣಸ್ತಥಾ ದಶನಪಂಕ್ತಿಮಶಾತಯದ್ಯಃ ।
ವ್ಯಷ್ಟಂಭಯತ್ಕುಲಿಶಹಸ್ತಮಥೇಂದ್ರಮೀಶಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬ ॥
ಯೇನಾಽಸಕೃದ್ದಿತಿಸುತಾಶ್ಚ ದನೋಃ ಸುತಾಶ್ಚ
ವಿದ್ಯಾಧರೋರಗಗಣಾಶ್ಚ ವರೈಃ ಸಮಗ್ರೈಃ ।
ಸಂಯೋಜಿತಾ ಮುನಿವರಾಃ ಫಲಮೂಲಭಕ್ಷಾ
ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೭ ॥
ಏವಂ ಕೃತೇಽಪಿ ವಿಷಯೇಷ್ವಪಿ ಸಕ್ತಭಾವಾ
ಜ್ಞಾನೇನ ಚ ಶ್ರುತಗುಣೈರಪಿ ತೇನ ಯುಕ್ತಾಃ ।
ಯಂ ಸಂಶ್ರಿತಾಃ ಸುಖಭುಜಃ ಪುರುಷಾ ಭವಂತಿ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೮ ॥
ಬ್ರಹ್ಮೇಂದ್ರವಿಷ್ಣುಮರುತಾಂ ಚ ಸ ಷಣ್ಮುಖಾನಾಂ
ಯೋಽದಾದ್ವರಾನ್ಸುಬಹುಶೋ ಭಗವಾನ್ ಮಹೇಶಃ ।
ಸೂತಂ ಚ ಮೃತ್ಯುವದನಾತ್ಪುನರುಜ್ಜಹಾರ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೯ ॥

---

ಅವನನ್ನು ಪೀಡಿಸಿ ಅವನಿಂದಲೆ ಸೇವಿಸಲ್ಪಟ್ಟನೊ, ಅಂತಹ ಶರಣ್ಯನಾದ ಶಂಕರನನ್ನು ಶರಣುಹೋಗುವೆನು.

೧೬. ದಕ್ಷಬ್ರಹ್ಮನ ಯಾಗಶಾಲೆಯಲ್ಲಿ ಯಾವನು ಭಗನ ನೇತ್ರಗಳನ್ನೂ ಸೂರ್ಯನ ಹಲ್ಲುಗಳನ್ನೂ ಕಿತ್ತು ಬಿಸುಟು ದೇವೇಶ್ವರನೆನಿಸಿ ವಜ್ರಹಸ್ತನಾಗಿ ಕಾದಲು ಬಂದ ಇಂದ್ರನ ಕೈಯನ್ನು ಸ್ತಂಭನಗೊಳಿಸಿದನೊ, ಅಂತಹ ಶಂಕರನಿಗೆ ಶರಣಾಗತನಾಗುವೆನು.

೧೭. ಯಾವನಿಂದ ದೈತೇಯರೂ, ದಾನವರೂ, ವಿದ್ಯಾಧರರೂ, ನಾಗರೂ, ಅನೇಕವೇಳೆ ಫಲಮೂಲಾಹಾರಿಗಳಾದ ಮುನಿಶ್ರೇಷ್ಠರೂ ತಮಗೆ ಬೇಕಾದ ವರಗಳನ್ನೆಲ್ಲ ಪಡೆದುಕೊಂಡರೊ, ಅಂತಹ ಶರಣ್ಯವರೇಣ್ಯನಾದ ಶಂಕರನನ್ನು ಶರಣುಹೋಗುವೆನು.

೧೮. ವಿಷಯಗಳ ಉಪಭೋಗಗಳಲ್ಲಿ ಆಸಕ್ತವಾದ ಮನಸ್ಸುಳ್ಳವರಾದರೂ, ಪ್ರಖ್ಯಾತಗಳಾದ ಗುಣಗಳಿಂದಲೂ ಜ್ಞಾನದಿಂದಲೂ ಕೂಡಿದವರಾದರೂ ಯಾವನನ್ನಾಶ್ರಯಿಸಿ ಪುರುಷರು ಸೌಖ್ಯಕ್ಕೆ ಭಾಗಿಗಳಾಗುವರೊ, ಅಂತಹ ಶರಣಪ್ರದನಾದ ಶಂಕರನಿಗೆ ಶರಣಾಗತನಾಗುವೆನು.

೧೯. ಬ್ರಹ್ಮ, ಮಹೇಂದ್ರ, ವಿಷ್ಣು, ವಾಯು, ಷಣ್ಮುಖ ಮುಂತಾದ

ಆರಾಧಿತಸ್ತು ತಪಸಾ ಹಿಮವನ್ನಿಕುಂಜೇ
ಧೂಮ್ರವ್ರತೇನ ತಪಸಾ ಚ ಪರೈರಗಮ್ಯಃ ।
ಸಂಜೀವನೀಂ ಸಮುದದಾದ್ಭೃಗವೇ ಮಹಾತ್ಮಾ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೨೦ ॥
ಕ್ರೀಡಾರ್ಥಮೇವ ಭಗವಾನ್ ಭುವನಾನಿ ಸಪ್ತ
ನಾನಾ ನದೀವಿಹಗಪಾದಪಮಂಡಿತಾನಿ ।
ಸ ಬ್ರಹ್ಮಕಾನಿ ಸಸೃಜೇ ಸುಕೃತಾಭಿಧಾನಿ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೨೧ ॥
ಯಃ ಸವ್ಯಪಾಣಿಕಮಲಾಗ್ರನಖೇನ ದೇವ
ಸ್ತತ್ಪಂಚಮಂ ಪ್ರಸಭಮೇವ ಕರಾಲರಂಧ್ರಂ ।
ಬ್ರಾಹ್ಮ್ಯಂ ಶಿರಸ್ತರಣಿಪದ್ಮನಿಭಂ ಚಕರ್ತ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೨೨ ॥

---

ವರಿಗೆ ಯಾವ ಷಡ್ಗುಣೈಶ್ವರ್ಯಭರಿತನಾದ ಮಹೇಶ್ವರನು ಅಸಂಖ್ಯಾತಗಳಾದ ವರಗಳನ್ನು ಕೊಟ್ಟನೊ, ಯಾವನು ಮಾರ್ಕಂಡೇಯನನ್ನು ಮೃತ್ಯುವಿನ ಮುಖದಿಂದ ಉದ್ಧಾರಮಾಡಿದನೊ, ಅಂತಹ ಶರಣಾಗತರಕ್ಷಕನನ್ನು ಶರಣು ಹೋಗುವೆನು.

೨೦. ಧೂಮ್ರವ್ರತನಾಗಿ ಹಿಮವತ್ಪರ್ವತದ ತಪ್ಪಲಿನ ಲತಾಗೃಹದಲ್ಲಿ ಕುಳಿತು ಅತ್ಯುಗ್ರವಾದ ತಪಸ್ಸಿನಿಂದ ತನ್ನನ್ನು ಆರಾಧಿಸಿದ ಭೃಗುಮುನಿಗೆ ಸಂಜೀವನಿಯನ್ನು ಯಾವನು ಕೊಟ್ಟನೊ, ಇತರರಿಗೆ ಯಾವನು ಹೊಂದಲ ಸಾಧ್ಯನೊ, ಅಂತಹ ಶಂಕರನಲ್ಲಿಗೆ ಶರಣುಹೋಗುವೆನು.

೨೧. ಕೇವಲ ಲೀಲೆಗಾಗಿಯೇ ಏಳು ಲೋಕಗಳನ್ನೂ ಅವುಗಳಲ್ಲಿರುವ ಅನೇಕ ನದಿಗಳು, ಪಕ್ಷಿಗಳು, ವೃಕ್ಷಗಳು, ಮುಂತಾದ ಸುಕೃತಗಳೆಂದು ಕರೆಯಲ್ಪಡುವ ಪದಾರ್ಥಗಳನ್ನೂ, ಇವುಗಳೆಲ್ಲವನ್ನೂ ವ್ಯಾಪಾರಗೊಳಿಸುವ ಚತುರ್ಮುಖನನ್ನೂ ಯಾವನು ಸೃಷ್ಟಿಮಾಡಿದನೊ, ಅಂತಹ ಶರಣದನಾದ ಶಂಕರನಿಗೆ ಶರಣುಹೋಗುವೆನು.

೨೨. ಯಾವನು ಬಲಗೈಯ ಬೆರಳಿನ ಕೊನೆಯುಗುರಿನಿಂದಲೇ ಸೂರ್ಯ ಕಿರಣಗಳಿಗೆ ವಿಕಸಿತವಾದ ಕಮಲದಂತಿರುವ ಬ್ರಹ್ಮದೇವನ ಐದನೆಯ ತಲೆಯನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ ಹಾಕಿದನೊ, ಅಂತಹ ಶಂಕರನಲ್ಲಿಗೆ ಕಾಪಾಡೆಂದು ಶರಣುಹೋಗುವೆನು.

ಯೇ ತ್ವಾಂ ಸುರೋತ್ತಮಗುರುಂ ಪುರುಷಾ ವಿಮೂಢಾ
ಜಾನಂತಿ ನಾಽಸ್ಯ ಜಗತಃ ಸಚರಾಚರಸ್ಯ ।
ಐಶ್ವರ್ಯಮಾನವಿಗಮೇಽಸುಶಯೇನ ಪಶ್ಚಾ
ತ್ತೇ ಯಾತನಾಮನುಭವಂತಿ ಯಥಾಽಹಮೇವ ॥ ೨೩ ॥
ಯಃ ಪಠೇತ್ಸ್ತುತಿಮಿಮಾಂ ಶ್ರುತಿಕರ್ಮಾ
ಯಃ ಶೃಣೋತಿ ಸತತಂ ಶಿವಭಕ್ತಃ ।
ವಿಪ್ರಸಂಸದಿ ಸದಾ ಶುಭಕರ್ಮಾ
ಸ ಪ್ರಯಾತಿ ಶಿವಲೋಕಮಖಂಡಂ ॥ ೨೪ ॥

ಸನತ್ಕುಮಾರ ಉವಾಚ :—

ತಸ್ಯೈವಂ ಸ್ತುವತೋ ದೇವಃ ಶೂಲಪಾಣಿರ್ವೃಷಧ್ವಜಃ ।
ಪೂರ್ಣೇ ವರ್ಷಶತಸ್ಯಾಂತೇ ಪ್ರೀತಃ ಪ್ರೋವಾಚ ಶಂಕರಃ ॥ ೨೫ ॥
ಪುತ್ರ ತುಷ್ಟೋಽಸ್ಮಿ ಭದ್ರಂ ತೇ ಜಾತಸ್ತ್ವಂ ನಿರ್ಮಲೋಽಧುನಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮಾಂ ವಿಗತಜ್ವರಃ ॥ ೨೬ ॥
ಯಚ್ಚ ತೇ ಮನಸಾ ವಾಽಪಿ ಕಿಂಚಿಚ್ಚ ಕಾಂಕ್ಷಿತಂ ಫಲಂ ।
ತತ್ತತ್ಸರ್ವಂ ಪ್ರದಾಸ್ಯಾಮಿ ಬ್ರೂಹಿ ದಾನವಸತ್ತಮ ॥ ೨೭ ॥

---

೨೩. ಯಾವ ಮೂಢಮಾನವರು ಚರಾಚರಾತ್ಮಕವಾದ ಈ ಜಗತ್ತಿಗೆ ಕಾರಣನೂ, ದೇವತೆಗಳಿಗೆ ಗುರುವೂ ಆಗಿರುವ ನಿನ್ನನ್ನು ತಿಳಿಯದೆ ಇರುವರೊ, ತಮ್ಮ ಐಶ್ವರ್ಯ ಮರ್ಯಾದೆಗಳು ಕಳೆದುಹೋದಮೇಲೆ ಪಶ್ಚಾತ್ತಾಪಪಡುವರೊ, ಅವರೆಲ್ಲರೂ ನನ್ನಂತೆಯೇ ಅನೇಕ ಯಾತನೆಗಳನ್ನನುಭವಿಸುವರು.

೨೪. ಯಾವ ಪುಣ್ಯವಂತನು ಈ ಸ್ತೋತ್ರವನ್ನು ಪಠನಮಾಡುವನೊ, ಯಾವ ಶಿವಭಕ್ತನು ಇದನ್ನು ನಿತ್ಯವೂ ಕೇಳುತ್ತಿರುವನೊ, ಬ್ರಾಹ್ಮಣ ಸಮೂಹದಲ್ಲಿ ಯಾವನು ಸರ್ವಕಾಲದಲ್ಲಿಯೂ ಶುಭಕರ್ಮಗಳನ್ನಾಚರಿಸುತ್ತಿರುವನೊ ಅವನು ಶಾಶ್ವತವಾದ ಶಿವಲೋಕಕ್ಕೆ ತೆರಳುವನು.

೨೫. ಸನತ್ಕುಮಾರನು ಹೇಳುತ್ತಾನೆ :—ಅಂಧಕಾಸುರನು ಈ ವಿಧವಾಗಿ ಸ್ತೋತ್ರಮಾಡುತ್ತಿದ್ದಂತೆಯೆ ಪೂರ್ತಿಯಾಗಿ ಒಂದು ನೂರು ವರ್ಷಗಳು ಕಳೆಯಿತು. ಆ ತರುವಾಯ ದೇವದೇವನೂ, ತ್ರಿಶೂಲಹಸ್ತನೂ, ವೃಷಭವಾಹನನೂ ಆದ ಶಂಕರನು ಪ್ರಸನ್ನನಾಗಿ ಇಂತೆಂದನು.

೨೬. "ಪುತ್ರನೆ! ನಿನ್ನ ವಿಷಯದಲ್ಲಿ ಸಂತೋಷಗೊಂಡಿರುವೆನು. ನಿನಗೆ ಮಂಗಳವಾಗಲಿ. ಈಗ ನೀನು ಪರಿಶುದ್ಧನಾಗಿರುವೆ. ನಿನಗೆ ದಿವ್ಯದೃಷ್ಟಿಯನ್ನನುಗ್ರಹಿಸಿರುವೆನು. ನಿರ್ಭಯನಾಗಿ ನನ್ನ ನಿಜರೂಪವನ್ನು ನೋಡು.

೨೭. ಎಲೈ ರಾಕ್ಷಸಶ್ರೇಷ್ಠನೆ! ನಿನ್ನ ಮನಸ್ಸಿನಲ್ಲಿ ಎಷ್ಟೇ ಅಲ್ಪವಾದ ಅಭಿಲಾಷೆಯಿದ್ದರೂ ನನಗೆ ಹೇಳು. ನಿನ್ನ ಕೋರಿಕೆಗಳೆಲ್ಲವನ್ನೂ ಈಡೇರಿಸುವೆನು.

ದಾನವ ಉವಾಚ :—

ಬ್ರಾಹ್ಮ್ಯಂ ವೈಷ್ಣವಮೈಂದ್ರಂ ವಾ ಪದಮಾವೃತ್ತಿಲಕ್ಷಣಂ ।
ವಿದಿತಂ ಮಮ ತತ್ಸರ್ವಂ ಮನಾಗಪಿ ನ ಕಾಂಕ್ಷಯೇ ॥ ೨೮ ॥
ಯದಿ ತುಷ್ಟೋಽಸಿ ದೇವೇಶ ಗಾಣಪತ್ಯಂ ದದಸ್ವ ಮೇ ।
ಸವಿಶೇಷಂ ವಿಶುದ್ಧಂ ಚ ತದಕ್ಷಯ್ಯಂ ಚ ಸರ್ವದಾ ॥ ೨೯ ॥

ಮಹಾದೇವ ಉವಾಚ :—

ಅಮರೋ ಜರಯಾ ತ್ಯಕ್ತಃ ಸರ್ವದುಃಖವಿವರ್ಜಿತಃ ।
ಭವಿಷ್ಯಸಿ ಗಣಾಧ್ಯಕ್ಷಃ ಸರ್ವಲೋಕನಮಸ್ಕೃತಃ ॥ ೩೦ ॥
ಕಾಮರೂಪೋ ಮಹಾಯೋಗೀ ಮಹಾಸತ್ತ್ವೋ ಮಹಾಬಲಃ ।
ಅಣಿಮಾದಿಗುಣೈರ್ಯುಕ್ತಃ ಪ್ರಿಯಶ್ಚ ಮಮ ಸರ್ವದಾ ॥ ೩೧ ॥

ಸನತ್ಕುಮಾರ ಉವಾಚ :—

ತತಶ್ಚ ಸೋಽಂಧಕಃ ಶ್ರೀಮಾನ್ ವರಾಂಲ್ಲಬ್ಧ್ವಾ ಸುದುರ್ಲಭಾನ್ ।
ಮಹಾದೇವಗಣೋ ಭೂತ್ವಾ ತತ್ರೈವಾಽಂತರಧೀಯತ ॥ ೩೨ ॥
ಗತೇಽಂಧಕೇ ತತೋ ದೇವ್ಯೋ ಬ್ರಹ್ಮಾಣ್ಯಾದ್ಯಾಃ ಸಮಾಗತಾಃ ।
ಸ ದೇವೋ ಯತ್ರ ಭಗವಾನಂಧಕಸ್ಯ ವರಪ್ರದಃ ॥ ೩೩ ॥

---

೨೮. ರಾಕ್ಷಸನು ಹೇಳುತ್ತಾನೆ:—ಬ್ರಹ್ಮ, ವಿಷ್ಣು, ಮಹೇಂದ್ರರ ಸ್ಥಾನಗಳೂ ಪುನರಾವೃತ್ತಿಸಹಿತಗಳಾಗಿರುವುವು. ಇದೆಲ್ಲವನ್ನೂ ನಾನು ಚೆನ್ನಾಗಿ ಬಲ್ಲೆ. ನಾನು ಯಾವುದನ್ನೂ ಸ್ವಲ್ಪವೂ ಅಪೇಕ್ಷಿಸುವುದಿಲ್ಲ.

೨೯. ಓ ದೇವೇಶ್ವರ! ನೀನು ಸಂತುಷ್ಟನಾಗಿದ್ದರೆ ನನಗೆ ಗಣಗಳ ಮೇಲಿನ ಅಧಿಕಾರವನ್ನು ಕೊಡು. ಆ ಪದವಿಯು ಹೆಚ್ಚಿನದೂ, ಪರಿಶುದ್ಧವೂ. ನಾಶ ರಹಿತವೂ ಆಗಿರುವುದಷ್ಟೆ.

೩೦. ಮಹಾದೇವನು ಹೇಳುತ್ತಾನೆ:—ನೀನು ಮರಣವಿಲ್ಲದೆ, ಮುಪ್ಪಿಲ್ಲದೆ, ಸಕಲದುಃಖರಹಿತನಾಗಿರುವೆ. ಮತ್ತು ಸಕಲ ಲೋಕಗಳ ನಿವಾಸಿಗಳಿಂದ ನಮಸ್ಕೃತನಾಗಿ ಗಣಾಧ್ಯಕ್ಷಸ್ಥಾನವನ್ನಲಂಕರಿಸಿರುವೆ.

೩೧. ಸ್ವೇಚ್ಛಾರೂಪಿಯೂ, ಯೋಗಿವರ್ಯನೂ, ಸತ್ತ್ವಶಾಲಿಯೂ, ಮಹಾಪರಾಕ್ರಮಿಯೂ, ಅಣಿಮಾದಿ ಅಷ್ಟೈಶ್ವರ್ಯಸಹಿತನೂ, ಯಾವಾಗಲೂ ನನಗೆ ಅತ್ಯಂತ ಪ್ರಿಯನೂ ಆಗಿರುವೆ.

೩೨. ಸನತ್ಕುಮಾರನು ಹೇಳುತ್ತಾನೆ:—ಸರ್ವೈಶ್ವರ್ಯಸಮನ್ವಿತನಾದ ಅಂಧಕಾಸುರನು ಇಂತು ಅತಿ ದುರ್ಲಭಗಳಾದ ವರಗಳನ್ನು ಪಡೆದು ಮಹಾದೇವನ ಗಣಪರಿವಾರದಲ್ಲಿ ಸೇರಿ ಆ ಕ್ಷೇತ್ರದಿಂದ ಅಂತರ್ಧಾನವನ್ನು ಹೊಂದಿದನು.

೩೩. ಅಂಧಕನು ಹೊರಟುಹೋಗಲು ಬ್ರಹ್ಮಾಣಿಯೇ ಮೊದಲಾದ ಮಾತೆಯರೆಲ್ಲರೂ ಭಗವಂತನು ಅಂಧಕಾಸುರನಿಗೆ ವರಗಳನ್ನಿತ್ತ ಆ ಪ್ರದೇಶಕ್ಕೆ ಬಂದರು.

ತಾಸ್ತುಷ್ಟುವುರ್ಮಹಾದೇವಮಥ ತುಷ್ಟೋ ಮಹೇಶ್ವರಃ ।
ಚಾಮುಂಡಾ ಚ ಮಹೇಶೇನ ಸಮಾಶ್ವಸ್ತಾ ಶಿವಾಽಭವತ್ ॥ ೩೪ ॥
ಶಂಕರಂ ಪ್ರಣತಂ ದೃಷ್ಟ್ವಾ ತಾಸಾಮುಗ್ರೇ ವ್ಯವಸ್ಥಿತಂ ।
ಬ್ರಹ್ಮಾದಯೋಽಪಿ ತೇ ಹೃಷ್ಟಾಸ್ತುಷ್ಟುವುರ್ವಿವಿಧೈಃ ಸ್ತವೈಃ ॥ ೩೫ ॥
ಪ್ರಶಾಂತಾಸ್ತಾ ಯದಾ ಹೃಷ್ಟಾಃ ಶಂಭುನಾ ರುಧಿರಾಽಶನಾಃ ।
ತದಾಽವೋಚದಿದಂ ವಾಕ್ಯಂ ತಾಸಾಂ ಸ್ಥಿತ್ಯರ್ಥಮುತ್ತಮಂ ॥ ೩೬ ॥
ಅವಂತ್ಯೇ ವಿಷಯೇ ಸರ್ವಾ ಯುಸ್ಮಾಜ್ಜಾತಾ ಮಹಾಬಲಾಃ ।
ಅವಂತ್ಯಮಾತರಸ್ತಸ್ಮಾತ್ ಖ್ಯಾತಾ ಲೋಕೇ ಭವಿಷ್ಯಥ ॥ ೩೭ ॥
ಅವಂತ್ಯಾಂ ಪ್ರೀತಿಸಂಪನ್ನಾಃ ಸರ್ವಪಾಪಪ್ರಣಾಶಿನೀಃ ।
ಸ್ಥಿರಾ ವಸಂತ್ಯೋ ಲೋಕಾನಾಂ ವರದಾಶ್ಚ ಭವಿಷ್ಯಥ ॥ ೩೮ ॥
ಶ್ರಾವಣಸ್ಯ ತು ಮಾಸಸ್ಯ ಅಮಾವಾಸ್ಯಾಂ ಸಮಾಹಿತಾಃ ।
ಯೇ ದ್ರಕ್ಷ್ಯಂತಿ ಸದಾ ಭಕ್ತ್ಯಾ ತೇಷಾಂ ಲೋಕಾ ಮಹೋದಯಾಃ ॥ ೩೯ ॥

---

೩೪. ಅವರೆಲ್ಲರೂ ಮಹಾದೇವನನ್ನು ಸ್ತೋತ್ರಮಾಡಲು ಆತನೂ ಅವರ ವಿಷಯದಲ್ಲಿ ಸಂತೋಷಗೊಂಡನು. ಅವರಲ್ಲಿಯೂ ಚಾಮುಂಡಿಯು ಮಹೇಶ್ವರನಿಂದ ಪರಿಸಾಂತ್ವನವನ್ನು ಹೊಂದಿ ಸುಪ್ರಸನ್ನಳೂ, ಮಂಗಳಕರಳೂ ಆದಳು.

೩೫. ಅವರ ಇದಿರಿನಲ್ಲಿ ಪ್ರಣಾಮವನ್ನು ಮಾಡಿ ನಿಂತಿರುವ ಶಂಕರನನ್ನು ಕಂಡು ಬ್ರಹ್ಮಾದಿ ದೇವತೆಗಳೂ ಅವರನ್ನು ಬಹುವಿಧ ಸ್ತೋತ್ರಗಳಿಂದ ಹೊಗಳಿ ಸಂತೋಷಗೊಂಡರು.

೩೬. ರಕ್ತಪಾನದಿಂದ ಉಗ್ರರಾಗಿದ್ದ ಅವರು ಪ್ರಶಾಂತರಾಗಿ ಸಂತೋಷ ದಿಂದಿರಲು ಪರಮೇಶ್ವರನು ಅವರಿಗೆ ಒಂದು ಉತ್ತಮವಾದ ನೆಲೆಯನ್ನುಂಟು ಮಾಡಲೆಳಸಿ ಹೀಗೆಂದನು.

೩೭. ಮಹಾಪರಾಕ್ರಮಿಗಳಾದ ನೀವೆಲ್ಲರೂ ಅವಂತೀದೇಶದಲ್ಲಿ ಅವತಾರ ಗಳನ್ನು ಪಡೆದಿರುವಿರಿ. ಆದುದರಿಂದ ಅವಂತಿಮಾತೆಯರೆಂದೇ ನೀವು ಲೋಕ ದಲ್ಲಿ ಪ್ರಖ್ಯಾತರಾಗುವಿರಿ.

೩೮. ಅವಂತಿದೇಶದಲ್ಲಿಯೇ ನೀವು ಶಾಶ್ವತವಾಗಿ ನೆಲಸಿ ಪ್ರೀತಿಯುಕ್ತ ರಾಗಿ, ಸಮಸ್ತಪಾತಕಗಳನ್ನೂ ನಾಶಗೊಳಿಸುತ್ತ ಲೋಕದ ಜನರಿಗೆಲ್ಲ ವರಗಳನ್ನು ಕೊಡುತ್ತ ನೆಲಸಿರಿ.

೩೯. ಶ್ರಾವಣಮಾಸದ ಕೊನೆಯ ಅಮಾವಾಸ್ಯೆಯ ದಿನ ಪ್ರಶಾಂತ ಮನಸ್ಸಿನಿಂದ ಯಾವ ಮಾನವರು ಭಕ್ತಿಯುಕ್ತರಾಗಿ ನಿಮ್ಮನ್ನು ನೋಡುವರೊ, ಅವರಿಗೆ ಉತ್ತಮಲೋಕಗಳಲ್ಲಿ ಸುಖವು ಲಭಿಸುವುದು.

ಅಪುತ್ರೋ ಲಭತೇ ಪುತ್ರಾನ್ಧನಾರ್ಥೀ ಲಭತೇ ಧನಂ ।
ರೂಪವಾನ್ ಸುಭಗೋ ಭೋಗೀ ಸರ್ವಶಾಸ್ತ್ರವಿಶಾರದಃ ॥ ೪೦ ॥
ಹಂಸಯುಕ್ತೇನ ಯಾನೇನ ಪಿತೃಲೋಕೇ ಮಹೀಯತೇ ।
ಪುರೀಮಿಮಾಂ ಚ ರಕ್ಷಧ್ವಂ ಕಲ್ಪೇ ಕಲ್ಪೇ ಕ್ರಮೇಣ ತು ॥ ೪೧ ॥
ಏವಮುಕ್ತ್ವಾ ತು ದೇವೇಶೋ ಗತಃ ಕೈಲಾಸಪರ್ವತಂ ।
ಸ್ತೂಯಮಾನೋ ಗಣೈ ರೌದ್ರೈರ್ದೈತ್ಯಾಮರಗಣೇಶ್ವರೈಃ ॥ ೪೨ ॥
ಅಸುರಸುರಗಣಾನಾಂ ನಾಯಕಸ್ಯಾನುಕೀರ್ತಿಂ
ಕಥಯತಿ ಕಥನೀಯಾಂ ಶ್ರದ್ಧಯಾ ಯಃ ಶೃಣೋತಿ ।
ಸಕಲಸುಖನಿಧಾನಂ ರುದ್ರಲೋಕಂ ಸ ಕಾಂತಂ
ಸುರಗಣದನುನಾಥೈರರ್ಚಿತಂ ಯಾತ್ಯನಂತಂ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅಂಧಕವೃತ್ತಾಂತ ವರ್ಣನಂ"ನಾಮಾಷ್ಟತ್ರಿಂಶೋಽಧ್ಯಾಯಃ

---

೪೦. ಅಂತಹ ಭಕ್ತನು ಪುತ್ರಹೀನನಾದರೆ ಪುತ್ರರನ್ನೂ, ದರಿದ್ರನಾಗಿದ್ದರೆ ಐಶ್ವರ್ಯವನ್ನೂ ಪಡೆಯುವನು. ಅಲ್ಲದೆ ಅವನು ಸುಂದರನೂ, ಸೌಭಾಗ್ಯ ವಂತನೂ, ಸಕಲಭೋಗಸಹಿತನೂ, ಸರ್ವಶಾಸ್ತ್ರವಿಶಾರದನೂ ಆಗುವನು.

೪೧. ಅವನು ಹಂಸಯುಕ್ತವಾದ ವಿಮಾನದಲ್ಲಿ ಕುಳಿತು ಪಿತೃಲೋಕದಲ್ಲಿ ವಿಹರಿಸುವನು. ನಿಮ್ಮಲ್ಲಿ ಒಬ್ಬೊಬ್ಬರು ಒಂದೊಂದು ಕಲ್ಪದಲ್ಲಿ ಕ್ರಮವಾಗಿ ಈ ಪಟ್ಟಣವನ್ನು ಸಂರಕ್ಷಿಸುತ್ತಿರಿ.

೪೨. ಇಂತೆಂದು ಅಪ್ಪಣೆಯನ್ನು ಮಾಡಿ, ತನ್ನ ಅನುಚರರಾದ ಗಣ ಗಳಿಂದಲೂ, ದೈತ್ಯರಿಂದಲೂ, ದೇವಗಣಾಧಿಪತಿಗಳಿಂದಲೂ ಸ್ತೋತ್ರಗಳನ್ನು ಕೇಳುತ್ತ ಕೈಲಾಸಪರ್ವತಕ್ಕೆ ಹೊರಟುಹೋದನು.

೪೩. ದೇವದಾನವರಿಗೆ ನಾಯಕನಾದ ಮಹೇಶ್ವರನ ಪರಮಸ್ತೋತ್ರಾರ್ಹ ವಾದ ಈ ಚರಿತ್ರೆಯನ್ನು ಯಾವನು ಶ್ರದ್ಧೆಯಿಂದ ಕೇಳುವನೊ, ಅವನು ಸಕಲ ಸದ್ಗುಣಗಳ ನೆಲೆಯೂ, ತೇಜೋಮಯವೂ, ಸುರಾಸುರರಿಂದ ಪೂಜ್ಯವೂ, ನಾಶರಹಿತವೂ ಆದ ರುದ್ರಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅಂಧಕವೃತ್ತಾಂತವರ್ಣನ" ವೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಚತ್ವಾರಿಂಶೋಽಧ್ಯಾಯಃ

### ಮಹಾಕಾಲವನಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

**ಭಗವನ್ ಕ್ಷೇತ್ರಮಾಹಾತ್ಮ್ಯಂ ಕಥಿತಂ ಚ ಯಥಾತಥಂ ।**
**ತೀರ್ಥಾನಾಮುತ್ತಮಂ ತೀರ್ಥಂ ಪುಣ್ಯಾನಾಂ ಪುಣ್ಯವರ್ಧನಂ ॥ ೧ ॥**
**ಕತಿ ಸಂತ್ಯತ್ರ ತೀರ್ಥಾನಿ ಲಿಂಗಾನಿ ಚ ತಥಾ ಕತಿ ।**
**ಕಥಯಸ್ವ ಪ್ರಸಾದೇನ ಪೃಚ್ಛತೋ ಮಮ ಸಾಂಪ್ರತಂ ॥ ೨ ॥**

ಸನತ್ಕುಮಾರ ಉವಾಚ :—

**ಷಷ್ಟಿಕೋಟಿಸಹಸ್ರಾಣಿ ಷಷ್ಟಿಕೋಟಿಶತಾನಿ ಚ ।**
**ಮಹಾಕಾಲವನೇ ವ್ಯಾಸ ಲಿಂಗಸಂಖ್ಯಾ ನ ವಿದ್ಯತೇ ॥ ೩ ॥**
**ಅಕಾಮೋ ವಾ ಸಕಾಮೋ ವಾ ಜಾಯತೇ ಯೋಽತ್ರ ಮಾನವಃ ।**
**ಮಹಾಕಾಲವನೇ ರಮ್ಯೇ ಶಿವಲೋಕೇ ಮಹೀಯತೇ ॥ ೪ ॥**
**ಕೃತಕಾಮಾನಿ ತೀರ್ಥಾನಿ ಪ್ರಾಸಾದಾಯತನಾನಿ ಚ ।**
**ತೇಷು ಸ್ನಾತ್ವಾ ಶುಚಿರ್ಭೂತ್ವಾ ಶಿವಲೋಕೇ ಮಹೀಯತೇ ॥ ೫ ॥**

---

### ಕನ್ನಡದ ಅನುವಾದ

#### ಮಹಾಕಾಲವನಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಮುನಿವರ್ಯನೆ! ನೀನು ಈ ಕ್ಷೇತ್ರ ಮಾಹಾತ್ಮ್ಯವನ್ನೆಲ್ಲ ಯಥಾವತ್ತಾಗಿ ವರ್ಣಿಸಿರುವೆ. ಹಾಗೆಯೇ ಪುಣ್ಯಪ್ರದ ಗಳಾದ ತೀರ್ಥಗಳಲ್ಲಿ ಉತ್ತಮವೂ, ಪುಣ್ಯವರ್ಧಕವೂ ಆದುದನ್ನೂ ತಿಳಿಸಿರುವೆ.

೨. ಅಲ್ಲಿ ತೀರ್ಥಗಳೆಷ್ಟಿರುವುವು? ಅಲ್ಲಿರುವ ಲಿಂಗಗಳ ಸಂಖ್ಯೆಯೇನು? ಪ್ರಶ್ನೆಮಾಡುತ್ತಿರುವ ನನ್ನಲ್ಲಿ ಅನುಗ್ರಹವಿಟ್ಟು ಈಗ ಎಲ್ಲವನ್ನೂ ವಿಸ್ತರಿಸಿ ಹೇಳು.

೩. ಸನತ್ಕುಮಾರನು ಹೇಳುತ್ತಾನೆ:—ವ್ಯಾಸನೆ! ಮಹಾಕಾಲವನದಲ್ಲಿ ಅರುವತ್ತಾರು ಸಾವಿರ ಕೋಟಿ ತೀರ್ಥಗಳಿರುವುವು. ಆದರೆ ಲಿಂಗಗಳ ಸಂಖ್ಯೆ ಯಂತು ತಿಳಿಯಲಸಾಧ್ಯವಾಗಿರುವುದು.

೪. ನಿಷ್ಕಾಮನಾಗಿಯಾಗಲಿ, ಸಕಾಮನಾಗಿಯಾಗಲಿ ರಮ್ಯವಾದ ಈ ಮಹಾಕಾಲವನದಲ್ಲಿ ಜನಿಸಿದವನು ದೇಹವನ್ನು ಬಿಡಲು ಶಿವಲೋಕದಲ್ಲಿ ಪೂಜೆಗೆ ಅರ್ಹನಾಗುವನು.

೫. ಇಲ್ಲಿರುವ ತೀರ್ಥಗಳೂ, ಪ್ರಾಸಾದಗಳೂ, ದೇವತಾಯತನಗಳೂ ಸರ್ವಕಾಮಪ್ರದಗಳಾಗಿರುವುವು. ಅವುಗಳಲ್ಲಿ ಸ್ನಾನಮಾಡಿ ಪರಿಶುದ್ಧನಾದವನು ಶಿವಲೋಕದಲ್ಲಿ ಪೂಜಿತನಾಗುವನು.

ಪುಣ್ಯಾನಿ ಸರ್ವತೀರ್ಥಾನಿ ಸಿದ್ಧಿಕ್ಷೇತ್ರಾಣಿ ಸರ್ವತಃ ।
ತೇಷಾಂ ಮುಖ್ಯತಮಂ ವಿದ್ಧಿ ಕ್ಷೇತ್ರಂ ತೀರ್ಥಂ ತಥೋತ್ತಮಂ ॥ ೬ ॥
ಯಃ ಶೃಣೋತಿ ಮಹಾಭಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಮಹಾಕಾಲವನಮಾಹಾತ್ಮ್ಯವರ್ಣನಂ" ನಾಮೈಕೋನಚತ್ವಾರಿಂಶೋಽಧ್ಯಾಯಃ

---

೬. ಸಕಲ ತೀರ್ಥಗಳೂ ಪುಣ್ಯಪ್ರದಗಳೇ. ಎಲ್ಲೆಲ್ಲಿಯೂ ಸಿದ್ಧಿಪ್ರದಗಳಾದ ಕ್ಷೇತ್ರಗಳೇ ಇರುವುವು. ಆದರೆ ಮಹಾಕಾಲವನವು ಮಾತ್ರ ಒಮ್ಮೆಯೇ ಪರಮಮುಖ್ಯವಾದ ಕ್ಷೇತ್ರವೂ, ಸರ್ವೋತ್ತಮವಾದ ತೀರ್ಥವೂ ಆಗಿರುವುದು.

೭. ಇದನ್ನು ಯಾವನು ಮಹಾಭಕ್ತಿಯಿಂದ ಕೇಳುವನೊ, ಅವನು ಉತ್ತಮ ಸದ್ಗತಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಮಹಾಕಾಲವನಮಾಹಾತ್ಮ್ಯವರ್ಣನ"ವೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತ್ವಾರಿಂಶೋಽಧ್ಯಾಯಃ

### ಕನಕಶೃಂಗವೃತ್ತಾಂತವರ್ಣನಂ

ವ್ಯಾಸ ಉವಾಚ :—

**ಭಗವನ್ ಭವತಾ ಸರ್ವಂ ಭವಭೀತಿವಿನಾಶಕಂ ।**
**ಈಶ್ವರಸ್ಥಾನಮಾಖ್ಯಾತಂ ಸಮಂತಾತ್ಸಾಗ್ರಯೋಜನಂ ॥ ೧ ॥**
**ಯತ್ರ ಕ್ಷೇತ್ರೇ ಮೃತಾ ಮರ್ತ್ಯಾಃ ಸದಾಚಾರಾಸ್ತಥೋತ್ತಮಾಃ ।**
**ವಿಮಾನಸ್ಥಾಃ ಪುರೇ ನೂನಮೈಶ್ವರೇ ತೇ ವಸಂತಿ ಚ ॥ ೨ ॥**
**ಯತ್ರ ಕೀಟಪತಂಗಾದ್ಯಾ ಮೃತಾ ಯಾಂತಿ ಪರಾಂ ಗತಿಂ ।**
**ಕಿಂ ತೀರ್ಥಂ ಪುಣ್ಯಮನ್ಯಚ್ಚ ಮಹಾಕಾಲವನಾದೃತೇ ॥ ೩ ॥**
**ತಸ್ಮಾದ್ಬ್ರೂಹಿ ಮಮೈಕಂ ತು ಪ್ರಶ್ನಂ ತಥ್ಯೇನ ಸಾಂಪ್ರತಂ ।**
**ಕಥಂ ಕನಕಶೃಂಗೇತಿ ಖ್ಯಾತಾ ಹ್ಯೇಷಾ ಪುರಾ ಮುನೇ ॥ ೪ ॥**
**ಕುಶಸ್ಥಲೀ ಕಥಂ ನಾಮ ತಥಾಽವಂತೀ ಕಥಂ ಸ್ಮೃತಾ ।**
**ಪದ್ಮಾವತೀ ಕಥಂ ಸಾಧೋ ಕಥಮುಜ್ಜಯಿನೀ ತಥಾ ॥ ೫ ॥**

---

## ಕನ್ನಡದ ಅನುವಾದ

### ಕನಕಶೃಂಗವೃತ್ತಾಂತವರ್ಣನ

೧. ವ್ಯಾಸನು ಹೇಳುತ್ತಾನೆ:—ಮುನಿವರ್ಯನೆ! ಸುತ್ತಲೂ ಒಂದು ಯೋಜನದವರೆಗೆ ವ್ಯಾಪಿಸಿರುವುದೂ, ಸಂಸಾರಭಯವನ್ನು ನಾಶಗೊಳಿಸುವುದೂ, ಆದ ಮಹೇಶ್ವರನ ಸ್ಥಾನದ ಮಹಿಮೆಯನ್ನು ಸಮಗ್ರವಾಗಿ ಹೇಳಿರುವೆ.

೨. ಈ ಕ್ಷೇತ್ರದಲ್ಲಿ ಸದಾಚಾರನಿರತರೂ, ಉತ್ತಮರೂ ಆದ ಮಾನವರು ಮೃತರಾದಬಳಿಕ ವಿಮಾನಗಳಲ್ಲಿ ಕುಳಿತುಕೊಂಡು ನಿಜವಾಗಿಯೂ ಈಶ್ವರಲೋಕ ದಲ್ಲಿ ವಾಸಮಾಡುವರು.

೩. ಇಲ್ಲಿ ದೇಹತ್ಯಾಗವನ್ನು ಮಾಡುವ ಕೀಟ, ಪತಂಗಗಳೂ ಉತ್ತಮ ಗತಿಯನ್ನೇ ಪಡೆಯುವುವು. ಇಂತಹ ಮಹಾಕಾಲವನವನ್ನು ಬಿಟ್ಟರೆ ಬೇರೆ ಯಾವ ತೀರ್ಥವನ್ನು ಪುಣ್ಯಪ್ರದವೆನ್ನಬಹುದು?

೪. ಮುನಿಯೆ! ಆದುದರಿಂದ ನಾನು ಕೇಳುವ ಪ್ರಶ್ನೆಗೆ ಈಗ ಯಥಾರ್ಥ ವಾದ ಉತ್ತರವನ್ನು ಹೇಳು. ಈ ಪಟ್ಟಣಕ್ಕೆ ಕನಕಶೃಂಗವೆಂಬ ಹೆಸರು ಹೇಗೆ ಬಂದಿತು?

೫. ಇದನ್ನು ಕುಶಸ್ಥಳಿಯೆಂದೂ, ಅವಂತಿಯೆಂದೂ, ಪದ್ಮಾವತಿಯೆಂದೂ, ಉಜ್ಜಯಿನಿಯೆಂದೂ ಕರೆಯಲು ಕಾರಣವೇನು?

ನಾಮ್ನಾಂ ಹೇತುಮಥೋ ತೇಷಾಂ ಬ್ರೂಹಿ ತ್ವಂ ಮುನಿಸತ್ತಮ ॥ ೬ ॥

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಪ್ರವಕ್ಷ್ಯಾಮಿ ಯಥಾ ಪೂರ್ವಂ ವಿರಿಂಚಿನಾ ।
ಕಥಿತಂ ವಾಮದೇವಾಯ ಗೌರಕಲ್ಪೇ ಪುರಾತನೇ ॥ ೭ ॥
ಮಹೇಶೇನ ಭಗವತಾ ವಿಧಿಶ್ಚೈವಾಽತ್ರ ಹೇತುತಃ ।
ಪೃಷ್ಟಸ್ತು ಸ್ವಶ್ಚ್ಯುತಾನಾಂ ಚ ಕುತೋ ನಿವಸತಾಂ ಸುಖಂ ॥ ೮ ॥
ಸ್ವರ್ಗಪ್ರಾಪ್ತಿಶ್ಚ ಭವತಿ ಸ್ವೇಚ್ಛಾಚಾರವಿಹಾರಿಣಾಂ ।
ಕೋಽತಿಪುಣ್ಯತಮಃ ಶ್ರೇಷ್ಠಃ ಪ್ರದೇಶಃ ಪಾಪದಾರಕಃ ॥ ೯ ॥
ಕುತೋ ನಿವರ್ತಿತಂ ಚಿತ್ತಂ ಜಾಯತೇ ವಸತಾಂ ಕ್ವಚಿತ್ ।
ವಸತಾಮಪಿ ಲೋಕೇಶನ್ಯೈಹಿಕಂ ಪಾರಲೌಕಿಕಂ ।
ಏತನ್ಮೇ ಭಗವನ್ ಬ್ರೂಹಿ ಹಿತಾರ್ಥಂ ಸರ್ವದೇಹಿನಾಂ ॥ ೧೦ ॥

ಸನತ್ಕುಮಾರ ಉವಾಚ :—

ಏವಮಾದೌ ಪುರಾ ಕಲ್ಪೇ ಪ್ರೋಕ್ತಃ ಶ್ರೇಷ್ಠಃ ಸ ಶಂಭುನಾ ।
ಪ್ರೋವಾಚ ಪಾರ್ವತೀಕಾಂತಂ ಪ್ರಭುಃ ಪ್ರೀತಃ ಪಿತಾಮಹಃ ॥ ೧೧ ॥

---

೬. ಮುನಿವರ್ಯನೆ! ಈ ಹೆಸರುಗಳು ಬರಲು ಕಾರಣಗಳನ್ನು ದಯೆಯಿಂದ ನನಗೆ ಹೇಳುವವನಾಗು.

೭. ಸನತ್ಕುಮಾರನು ಹೇಳುತ್ತಾನೆ:—ವ್ಯಾಸನೆ! ಕೇಳು. ಬಹಳ ಹಿಂದಿನ ಕಾಲದಲ್ಲಿ ಗೌರಕಲ್ಪದಲ್ಲಿ ಚತುರ್ಮುಖನು ವಾಮದೇವಮಹರ್ಷಿಗೆ ಹೇಳಿದ ವಿಷಯವನ್ನು ನಿನಗೆ ಹೇಳುವೆನು.

೮. ಒಮ್ಮೆ ಸರ್ವಜ್ಞನಾದ ಮಹಾದೇವನು ಕಾರಣಾಂತರದಿಂದ ಬ್ರಹ್ಮದೇವನನ್ನು ಕುರಿತು ಪ್ರಶ್ನೆಮಾಡಿದನು. "ಬ್ರಹ್ಮನೆ! ತಮ್ಮ ಪುಣ್ಯಕ್ಷಯದಿಂದ ಸ್ವರ್ಗದಿಂದ ಚ್ಯುತರಾದವರಿಗೆ ಭೂಮಂಡಲದಲ್ಲಿ ಯಾವ ಸ್ಥಾನವು ವಾಸಕ್ಕೆ ಸುಖಮಯವಾಗಿರುವುದು?

೯. ಸ್ವೇಚ್ಛಾಚಾರದಿಂದ ವಿಹರಿಸುವವರಿಗೂ ಪುನಃ ಸ್ವರ್ಗಲೋಕವಾಸವು ಎಲ್ಲಿ ಪ್ರಾಪ್ತವಾಗುವುದು? ಪರಮಪುಣ್ಯಪ್ರದವೂ, ಸರ್ವೋತ್ತಮವೂ, ಪಾಪವಿನಾಶಕವೂ ಆದ ಪ್ರದೇಶವು ಯಾವುದು?

೧೦. ಎಲ್ಲಿ ವಾಸಮಾಡಿದರೆ ಮಾನವನ ಮನಸ್ಸು ಒಮ್ಮೆಯಾದರೂ ನಿವೃತ್ತಿಮಾರ್ಗದಲ್ಲಿ ಪ್ರವರ್ತಿಸುವುದು? ಎಲ್ಲಿ ವಾಸಮಾಡುವವರಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸೌಖ್ಯವುಂಟಾಗುವುದು? ಸ್ವಾಮಿಯೆ! ಸಕಲಪ್ರಾಣಿಗಳ ಹಿತಕ್ಕಾಗಿ ಕೇಳುತ್ತಿರುವ ಈ ವಿಷಯಗಳನ್ನು ನನಗೆ ವಿಶದವಾಗಿ ತಿಳಿಸುವವನಾಗು."

೧೧. ಸನತ್ಕುಮಾರನು ಹೇಳುತ್ತಾನೆ:—ಇಂತು ಮೊದಲನೆಯ ಕಲ್ಪದಲ್ಲಿ

ಭಗವನ್ ಸರ್ವಕರ್ತಾ ತ್ವಂ ಸರ್ವದರ್ಶೀ ಸದಾಶಿವಃ ।
ಅಜಾನನ್ನಿವ ತ್ವಂ ಸರ್ವಂ ಮಾಂ ಪೃಚ್ಛಸಿ ಸನಾತನ ॥ ೧೨ ॥
ಯತ್ರ ಕಲ್ಪಾಂತಕೋ ವಹ್ನಿರಧಿಜ್ವಾಲಃ ಪ್ರತಿಷ್ಠಿತಃ ।
ತ್ವಮೇವ ಚ ಮಹಾಕಾಲಃ ಸರ್ವಂ ವೈ ಜ್ಞಾಯತೇ ತ್ವಯಾ ॥ ೧೩ ॥
ನಾಥ ಯೇ ಮಾನವಾಸ್ತತ್ರ ಸದಾಚಾರಾಸ್ತಥಾಽಪರೇ ।
ನಿವಸಂತಿ ನ ತೇ ಮರ್ತ್ಯಾಃ ಸುರಾಸ್ತೇ ವೈ ನ ಸಂಶಯಃ ॥ ೧೪ ॥
ಲಭಂತೇ ಚ ಪುನಃ ಸ್ವರ್ಗಂ ಮೃತಾ ವೈ ಕಾಲಪರ್ಯಯೇ ।
ವರ್ತತೇ ಚ ಪುರೀ ತತ್ರ ರಮ್ಯಹರ್ಮ್ಯಾ ಸುಶೋಭನಾ ॥ ೧೫ ॥
ಯಸ್ಯಾಂ ಭಾಂತಿ ವಿಚಿತ್ರಾಣಿ ಹರ್ಮ್ಯಾಣಿ ವಿವಿಧಾನಿ ಚ ।
ಸ್ವರ್ಣಶೃಂಗಾಶ್ಚ ಪ್ರಾಸಾದಾ ವಿಹಿತಾ ವಿಶ್ವಕರ್ಮಣಾ ॥ ೧೬ ॥
ದೇವಾಃ ಸಂತಿ ಸದಾ ತತ್ರ ತೀರ್ಥಾನಿ ವಿವಿಧಾನಿ ಚ ।
ಪೂರ್ವಕಲ್ಪೇ ಸ್ಥಿತೋಽಹಂ ಚ ಯತ್ರ ತ್ವಂ ಕೇಶವಸ್ತಥಾ ॥ ೧೭ ॥

---

ಒಮ್ಮೆ ಪರಮೇಷ್ಠಿಯು ಈಶ್ವರನಿಂದ ಪ್ರಶ್ನಿಸಲ್ಪಟ್ಟನು. ಲೋಕಕರ್ತನಾದ ಪಿತಾಮಹನು ಸುಪ್ರೀತನಾಗಿ ಆ ಪಾರ್ವತೀಕಾಂತನಿಗೆ ಇಂತೆಂದನು.

೧೨. ಎಲೈ ನಾಥನೆ! ನೀನೇ ಸಕಲ ಲೋಕಗಳ ಸೃಷ್ಟಿಮಾಡುವವನೂ ಸರ್ವಜ್ಞನೂ ಸದಾಶಿವನೂ ಆಗಿರುವೆ. ಅನಾದಿನಿಧನನಾದ ನೀನೇ ಏನನ್ನೂ ತಿಳಿಯದವನಂತೆ ನನ್ನನ್ನು ಪ್ರಶ್ನೆಮಾಡುತ್ತಿರುವೆಯಲ್ಲವೆ.

೧೩. ಕಲ್ಪಾಂತ್ಯದಲ್ಲಿ ಮಹಾಜ್ವಾಲೆಗಳಿಂದ ಲೋಕವನ್ನಾವರಿಸುವ ಪ್ರಳಯಾಗ್ನಿಯೂ ನಿನ್ನಲ್ಲಿಯೇ ನೆಲಸಿರುವುದರಿಂದ ನೀನೇ ಮಹಾಕಾಲನಾಗಿರುವೆ. ನಿನಗೆ ಸಕಲವೂ ತಿಳಿದೇ ಇರುವುದು.

೧೪. ನಿನ್ನ ಅಪರಶರೀರವೆನಿಸಿದ ಆ ಮಹಾಕಾಲಕ್ಷೇತ್ರದಲ್ಲಿ ವಾಸಮಾಡುವ ಸದಾಚಾರಿಗಳಾಗಲಿ, ಇತರರಾಗಲಿ, ಎಲ್ಲ ಮಾನವರೂ ದೇವತೆಗಳೇ ಆಗಿರುವರೆಂಬುದರಲ್ಲಿ ಸಂದೇಹವಿಲ್ಲ.

೧೫. ಕಾಲಾನುಕ್ರಮದಲ್ಲಿ ಮರಣವನ್ನು ಹೊಂದಿದವರು ಪುನಃ ಸ್ವರ್ಗವನ್ನು ಸೇರುವರು. ಆ ಕ್ಷೇತ್ರದಲ್ಲಿ ಮನೋಹರಗಳಾದ ಹರ್ಮ್ಯಗಳಿಂದ ಶೋಭಿಸುತ್ತಿರುವ ಪಟ್ಟಣವೊಂದಿರುವುದು.

೧೬. ಆ ನಗರಿಯಲ್ಲಿ ವಿಚಿತ್ರಗಳೂ, ಅನೇಕ ವಿಧಗಳೂ ಆದ ಉಪ್ಪರಿಗೆಗಳು ಕಂಗೊಳಿಸುತ್ತಿರುವುವು. ಅಲ್ಲಿ ಚಿನ್ನದ ಕಳಶಗಳುಳ್ಳ ಅನೇಕ ಪ್ರಾಸಾದಗಳು ವಿಶ್ವಕರ್ಮನಿಂದ ನಿರ್ಮಿತವಾಗಿರುವುವು.

೧೭. ಅಲ್ಲಿ ಯಾವಾಗಲೂ ದೇವತೆಗಳು ನೆಲಸಿರುವರಲ್ಲದೆ ಅನೇಕ ವಿಧಗಳಾದ ತೀರ್ಥಗಳೂ ಸನ್ನಿಹಿತಗಳಾಗಿರುವುವು. ಹಿಂದಿನ ಕಲ್ಪದಲ್ಲಿ ನಾನೂ, ನೀನೂ, ನಾರಾಯಣನೂ ಅಲ್ಲಿಯೇ ನೆಲೆಸಿದ್ದೆವು.

ತಾಮೇವ ಚ ಪುರೀಂ ದ್ರಷ್ಟುಂ ಸರ್ವೇ ಲೋಕಾ ಹ್ಯವಂತಿಕಾಂ ।
ತಥಾ ದೇವರ್ಷಯಃ ಸಿದ್ಧಾ ಯಕ್ಷಕಿನ್ನರದಾನವಾಃ ॥ ೧೮ ॥
ಆಜಗ್ಮುಃ ಸ್ಥಾಣುನಾ ಸಾರ್ಧಂ ವೇಧಸಾ ಬ್ರಹ್ಮಯೋನಿನಾ ॥ ೧೯ ॥
ತಥೈವ ಚ ವರಾ ನಾರ್ಯೋ ದೇವಾನಾಮತಿವಲ್ಲಭಾಃ ।
ಸಮಾಪೇತುಃ ಸಹಸ್ರಾಣಿ ದ್ರಷ್ಟುಮತ್ಯದ್ಭುತಾಂ ಪುರೀಂ ॥ ೨೦ ॥
ಆಗತ್ಯ ಚ ಯದಾ ದೇವಃ ಸಹ ದೇವೈರ್ಮಹೇಶ್ವರಃ ।
ವೀಕ್ಷತೇ ನಗರೀಂ ರಮ್ಯಾಮಪಶ್ಯದಾವೃತಾಂ ತಥಾ ॥ ೨೧ ॥
ಪ್ರಾಸಾದೈಃ ಸ್ವರ್ಣಶೃಂಗಾಢ್ಯೈರ್ಮಣಿರತ್ನವಿಭೂಷಿತೈಃ ।
ವಿಶ್ವರೂಪೋ ಹಿ ಭಗವಾನ್ರಾಜಾ ವಿಶ್ವೈಕನಾಯಕಃ ॥ ೨೨ ॥
ತತ್ರಾಸ್ತೇ ಶೋಭನೇ ದಿವ್ಯೇ ಪ್ರಾಸಾದೇ ಮಣಿಭೂಷಿತೇ ।
ಸೇವ್ಯಮಾನಃ ಸುರೈಃ ಸಿದ್ಧೈರ್ಮುನಿವಿದ್ಯಾಧರೋರಗೈಃ ॥ ೨೩ ॥

ತತೋ ಮಹೇಶಶ್ಚ ಪಿತಾಮಹಶ್ಚ
ಸಮೇತ್ಯ ತಂ ವಿಶ್ವಪತಿಂ ನನಂದುಃ ।
ಸಮರ್ಚಿತೌ ತೇನ ಯಥಾರ್ಹಮಾದರಾತ್
ಸಹಾನುಗಾವಾಗಮನಂ ತ್ವಪೃಚ್ಛತ್ ॥ ೨೪ ॥

---

೧೮–೧೯. ಆ ಪುರಿಯನ್ನು ನೋಡುವುದಕ್ಕಾಗಿಯೇ ಸಕಲ ಲೋಕಗಳ ನಿವಾಸಿಗಳೂ, ದೇವರ್ಷಿಗಳೂ, ಸಿದ್ಧರೂ, ಯಕ್ಷರೂ, ಕಿನ್ನರರೂ, ದಾನವರೂ, ಶಿವಬ್ರಹ್ಮನಾರಾಯಣರೊಡನೆ ಅವಂತೀಕ್ಷೇತ್ರಕ್ಕೆ ಬಂದರು.

೨೦–೨೧. ಹಾಗೆಯೇ ಅತ್ಯದ್ಭುತವಾದ ಈ ನಗರವನ್ನು ನೋಡಲು ದೇವತೆಗಳಿಗೆ ಪರಮಪ್ರಿಯರಾದ ಉತ್ತಮಸ್ತ್ರೀಯರೂ ಸಹ ಸಾವಿರಗಟ್ಟಳೆಯಾಗಿ ಭೂಲೋಕಕ್ಕೆ ಇಳಿದುಬಂದರು. ಆಗ ದೇವೋತ್ತಮನಾದ ಮಹೇಶ್ವರನು ಇತರ ದೇವತೆಗಳೊಡನೆ ಬಂದು ರಮ್ಯವೂ, ಜನನಿಬಿಡವೂ ಆದ ಆ ನಗರವನ್ನು ನೋಡಿದನು. ಅದು ಚಿನ್ನದ ಕಳಶಗಳಿಂದ ಕೂಡಿದುವೂ, ಮಣಿರತ್ನಗಳಿಂದಲಂಕೃತವೂ ಆದ ಅನೇಕ ಪ್ರಾಸಾದಗಳಿಂದ ತುಂಬಿದ್ದಿತು.

೨೨–೨೩. ಲೋಕೈಕನಾಯನೂ, ವಿಶ್ವರೂಪಿಯೂ ಆದ ಶ್ರೀಮನ್ನಾರಾಯಣನು ಸುಶೋಭಿತವೂ, ದಿವ್ಯವೂ, ಮಣಿಗಣಖಚಿತವೂ ಆದ ಪ್ರಾಸಾದದಲ್ಲಿ ನೆಲಸಿದ್ದನು. ಆತನನ್ನು ದೇವತೆಗಳೂ, ಸಿದ್ಧರೂ, ಮುನಿಗಳೂ, ವಿದ್ಯಾಧರರೂ, ನಾಗರೂ ಸೇವಿಸುತ್ತಿದ್ದರು.

೨೪. ಆಗ ಮಹೇಶ್ವರನೂ, ಬ್ರಹ್ಮದೇವನೂ ಲೋಕೇಶ್ವರನಾದ ನಾರಾಯಣನ ಬಳಿಗೆ ಬಂದು ಆತನನ್ನು ಕಂಡು ಸಂತೋಷಗೊಂಡರು. ಆತನೂ ಅವರನ್ನು ಆದರದಿಂದ ಬರಮಾಡಿಕೊಂಡು ಯಥಾವಿಧಿಯಾಗಿ ಅತಿಥಿಪೂಜೆಯನ್ನು ಮಾಡಿ ಇಬ್ಬರನ್ನೂ ಕುರಿತು ಸುಖಾಗಮನವನ್ನು ಪ್ರಶ್ನೆಮಾಡಿದನು.

ಕಿಮಾಗತೌ ವಾ ತ್ರಿದಿವಾನ್ಮಹೀತಲಂ
ಸಹಾನುಗಾವಾಶಯಯಕಶ್ಚ ಕಥ್ಯತಾಂ ।
ತತಸ್ತು ತಾವೂಚತುರಬ್ಜಜೇಶ್ವರೌ
ಭವಾನ್ ಹರೇ ಯತ್ರ ಚ ತತ್ರ ನೌ ರತಿಃ ॥ ೨೫ ॥
ತ್ವಯಾ ವಿನಾ ನೈವ ಸುರಾಲಯೇ ಸುಖಂ
ಮಹೀತಲೇ ವಾಽಥ ರಸಾತಲೇಽಸ್ತಿ ನಃ ।
ಕದಾ ತ್ವಯಾ ಕಾಂಚನಶೇಖರಾ ಪುರೀ
ನಿವೇಶಿತಾ ವೇಶ್ಮವತೀ ವಿಚಿತ್ರಿತಾ ॥ ೨೬ ॥
ಹರಿರುವಾಚ :—
ತ್ವದರ್ಥಮೇವೇಶ ವಿಶೇಷಶಾಲಿನೀ
ಸೃಷ್ಟಾ ಹಿ ವೈ ಸರ್ವಗುಣಾಕರಾ ಮಯಾ ।
ಪ್ರಯಚ್ಛ ವಿಶ್ವೇಶ್ವರ ಚಾವಯೋರಿಹ
ಸ್ಥಾನಂ ಚ ತೀರ್ಥಂ ಪ್ರಲಯೇಽಕ್ಷಯಂ ಚ ॥ ೨೭ ॥
ದದಾಮ್ಯಭೀಷ್ಟಂ ಯುವಯೋರಿಹಾಲಯಂ
ಪ್ರಜಾಪತೇ ಹ್ಯುತ್ತರತಸ್ತವ ಸ್ಥಿತಿಃ ।
ಮಹೇಶ್ವರ ತ್ವಂ ವ್ರಜ ದಕ್ಷಿಣಾಲಯಂ
ಸ್ಥಾನಂ ಸುದತ್ತಂ ಯುವಯೋಃ ಸುಶೋಭನಂ ॥ ೨೮ ॥

---

೨೫. "ನೀವಿಬ್ಬರೂ ಜೊತೆಯಲ್ಲಿಯೇ ಸ್ವರ್ಗಲೋಕವನ್ನು ಬಿಟ್ಟು ಭೂಮಿಗೆ ಇಳಿದುಬರಲು ಕಾರಣವೇನು? ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ" ಎಂದ ಶ್ರೀ ಹರಿಗೆ ಶಿವಬ್ರಹ್ಮರು ಇಂತೆಂದರು. "ಎಲೈ ನಾರಾಯಣನೆ! ನೀನೆಲ್ಲಿ ರುವೆಯೊ, ಅಲ್ಲಿಯೇ ನಮಗೂ ವಾಸಮಾಡುವ ಅಭಿಲಾಷೆಯಿರುವುದು.

೨೬. ನೀನಿಲ್ಲದಿದ್ದರೆ ಸ್ವರ್ಗಲೋಕದಲ್ಲಿಯಾಗಲಿ, ಭೂಲೋಕದಲ್ಲಿಯಾಗಲಿ, ರಸಾತಲದಲ್ಲಿಯಾಗಲಿ ನಮಗೆ ಸುಖವುಂಟಾಗಲಾರದು. ಬಹುವಿಚಿತ್ರ ವಾದುದೂ, ಚಿನ್ನದ ಕಳಶಗಳುಳ್ಳ ಮನೆಗಳಿಂದ ತುಂಬಿರುದೂ ಆದ ಈ ಪಟ್ಟಣ ವನ್ನು ನೀನು ಯಾವಾಗ ಸೃಷ್ಟಿಮಾಡಿದೆ?"

೨೭. ಹರಿಯು ಹೇಳುತ್ತಾನೆ:—ಎಲೈ ಈಶ್ವರನೆ! ನಿನಗೋಸ್ಕರವಾಗಿಯೇ ವಿಶೇಷಪ್ರಭಾವಸಹಿತವೂ, ಸಕಲಗುಣಭರಿತವೂ ಆದ ಈ ನಗರವನ್ನು ನಾನು ಸೃಜಿಸಿರುವೆನು. ವಿಶ್ವೇಶ್ವರ! ನಮ್ಮಿಬ್ಬರಿಗೂ ಇಲ್ಲಿ ಒಂದು ನೆಲೆಯನ್ನೂ ಪ್ರಳಯ ದಲ್ಲಿಯೂ ನಾಶವಾಗದಂತಹ ತೀರ್ಥವನ್ನೂ ಅನುಗ್ರಹಿಸಿಕೊಡು.

೨೮. ಎಲೈ ಬ್ರಹ್ಮದೇವನೆ! ನಿಮ್ಮಿಬ್ಬರ ಅಭೀಷ್ಟವನ್ನು ನಾನು ನೆರವೇರಿಸು ವೆನು. ಇಲ್ಲಿ ನಿಮಗೆ ಆಲಯಗಳಿರಲಿ. ಬ್ರಹ್ಮನಾದ ನಿನ್ನ ತಲೆಯು ಉತ್ತರ ದಿಕ್ಕಿನಲ್ಲಿರುವುದು. ಮಹಾದೇವನೆ! ನೀನು ದಕ್ಷಿಣದಲ್ಲಿರುವ ಆಲಯವನ್ನೇ

**ಮಹಾಕಾಲೋ ಹ್ಯಥೋಜ್ವಾಲೋ ಜಗದಾತ್ಮಾ ಪ್ರಭುಃ ಸ್ಥಿತಃ ।**
**ಗಣೈರನೇಕಸಾಹಸ್ರೈರಾವೃತಃ ಪರಮೇಶ್ವರಃ ॥ ೨೯ ॥**
**ಕ್ರೀಡಾರ್ಥಂ ನಗರೀ ಸೃಷ್ಟ್ವಾ ಸರ್ವಭೂತಹಿತೈಷಿಣಾ ।**
**ಮಯಾऽದ್ಯ ಯುವಯೋರ್ದತ್ತಾ ವಿಹಾಯಾऽಚಲಮಾತ್ಮನಃ ॥ ೩೦ ॥**
**ಭವದ್ಭ್ಯಾಂ ಹೇಮಶೃಂಗೇತಿ ಯಸ್ಮಾಚ್ಚ ಸಮುದೀರಿತಾ ।**
**ಪುರೀ ಕನಕಶೃಂಗೇತಿ ಲೋಕೇ ಖ್ಯಾತಾ ಭವಿಷ್ಯತಿ ॥ ೩೧ ॥**
**ಏವಂ ಕನಕಶೃಂಗೇತಿ ಪ್ರಥಮಂ ನಾಮ ಕಥ್ಯತೇ ॥ ೩೨ ॥**
**ಜಪಂತಶ್ಚ ಸ್ಥಿತಾ ಯತ್ರ ಬ್ರಹ್ಮವಿಷ್ಣುಮಹೇಶ್ವರಾಃ ।**
**ನಿತ್ಯಂ ರಮಂತಿ ಭಕ್ತಾನಾಂ ಸರ್ವಾऽಭೀಷ್ಟಫಲಪ್ರದಾಃ ॥ ೩೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕನಕಶೃಂಗವೃತ್ತಾಂತವರ್ಣನಂ" ನಾಮ ಚತ್ವಾರಿಂಶೋऽಧ್ಯಾಯಃ**

---

ಸ್ಥಾನವನ್ನಾಗಿ ಮಾಡಿಕೊಂಡು ಹೊರಡು. ನಿಮ್ಮಿಬ್ಬರಿಗೂ ಮಂಗಳಕರಗಳಾಗಿರುವ ಸ್ಥಾನಗಳನ್ನು ಒಮ್ಮನಸ್ಸಿನಿಂದ ಕೊಟ್ಟಿರುವೆನು.

೨೯. ಮಹಾಕಾಲನೂ, ಜಗತ್ತಿನ ಅಂತರಾತ್ಮನೂ, ಲೋಕೇಶ್ವರನೂ, ಸರ್ವಸ್ವಾಮಿಯೂ ಆದ ಶಿವನು ತನ್ನ ಜ್ವಾಲೆಗಳನ್ನು ಕೆಳಕ್ಕೆ ಪ್ರಸರಿಸುತ್ತ ಅನೇಕ ಸಾವಿರ ಶಿವಗಣಗಳಿಂದ ಪರಿವೃತನಾಗಿ ಅಲ್ಲಿ ನಿಂತನು.

೩೦. ಸಕಲಜೀವರ ಹಿತವನ್ನಿಚ್ಛಿಸಿ ಕ್ರೀಡೆಗಾಗಿ ನಾನು ಈ ನಗರವನ್ನು ಸೃಷ್ಟಿಮಾಡಿದೆನು. ನನಗೇ ಶಾಶ್ವತನಾಗಬೇಕಾಗಿದ್ದ ಈ ಸ್ಥಾನವನ್ನು ಬಿಟ್ಟು ನಾನೇ ನಿಮ್ಮಿಬ್ಬರಿಗೂ ಇದನ್ನು ಕೊಟ್ಟಿರುವೆನು.

೩೧. ನೀವು ಈ ನಗರವನ್ನು ವರ್ಣಿಸುವಾಗ ಕನಕಶೃಂಗಸಹಿತವೆಂದು ಕರೆದಿರಾದುದರಿಂದ ಈ ನಗರಿಗೆ ಕನಕಶೃಂಗವೆಂದೇ ಲೋಕದಲ್ಲಿ ಪ್ರಖ್ಯಾತಿಯುಂಟಾಗುವುದು."

೩೨. ಎಲೈ ಮುನಿಯೇ! ಇಂತು ಕನಕಶೃಂಗವೆಂಬ ಮೊದಲನೆಯ ಹೆಸರು ಮಹಾಕಾಲವನಕ್ಕೆ ಉಂಟಾಯಿತು.

೩೩. ಇಲ್ಲಿ ಬ್ರಹ್ಮವಿಷ್ಣುಮಹೇಶ್ವರರು ಮೂವರೂ ಜಪಪರಾಯಣರಾಗಿ ತಮ್ಮ ಭಕ್ತರಿಗೆ ಸಕಲಾಭೀಷ್ಟಫಲಗಳನ್ನೂ ಕೊಡುತ್ತ ಸರ್ವಕಾಲದಲ್ಲಿಯೂ ವಿಹರಿಸುತ್ತಿರುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ
ಮಾಹಾತ್ಮ್ಯದಲ್ಲಿ "ಕನಕಶೃಂಗವೃತ್ತಾಂತವರ್ಣನ"ವೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಚತ್ವಾರಿಂಶೋಽಧ್ಯಾಯಃ

### ಕುಶಸ್ಥಲೀನಾಮಹೇತುಕಥಾವರ್ಣನಂ

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಯಥೇಯಂ ತು ಪ್ರೋಚ್ಯತೇ ಹಿ ಕುಶಸ್ಥಲೀ ।
ಕಲ್ಪೇ ತತ್ಪುರುಷೇ ಪೂರ್ವಂ ವೇದವಿದ್ಭಿರ್ಮನೀಷಿಭಿಃ ॥ ೧ ॥
ವೇಧಸಾ ಸೃಜಿತಂ ವಿಶ್ವಂ ದೈತ್ಯದಾನವರಾಕ್ಷಸಂ ।
ಅನ್ಯೋನ್ಯಮದಸಂಮತ್ತಮನ್ಯೋನ್ಯದ್ವೇಷಿ ವೈ ರಣೇ ॥ ೨ ॥
ದೇವಾಶ್ಚ ದಾನವಾಃ ಸಂಖ್ಯೇ ನಿತ್ಯಂ ಸ್ಪರ್ಧಾಸಮನ್ವಿತಾಃ ।
ಮನುಷ್ಯಾ ಮನುಜೈಃ ಸಾರ್ಧಂ ಸಿದ್ಧವಿದ್ಯಾಧರೈಃ ಸಹ ॥ ೩ ॥
ಚಾರಣಾಃ ಕಿನ್ನರೈಃ ಸಾರ್ಧಮೇವಂ ತೇ ದ್ವೇಷತತ್ಪರಾಃ ।
ಯುದ್ಧಂ ಕುರ್ವಂತಿ ಸತತಮವಿಸ್ಪಷ್ಟಾಽರ್ಥಯಾ ಗಿರಾ ॥ ೪ ॥
ಸರ್ವೇ ಚೈವ ಚ ಬಲಿನೋ ದುರ್ಬಲೈರ್ಮನುಜೈಃ ಸಹ ।
ಪಶವಃ ಪಶುಭಿಃ ಸಾರ್ಧಂ ಪಕ್ಷಿಣಃ ಸಹ ಪಕ್ಷಿಭಿಃ ॥ ೫ ॥

---

### ಕನ್ನಡದ ಅನುವಾದ

#### ಕುಶಸ್ಥಲೀನಾಮವೃಂತಾಂತವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ವೇದಜ್ಞರೂ ಮಹಾಪ್ರಾಜ್ಞರೂ ಆದವರು ಈ ಕ್ಷೇತ್ರವನ್ನೇ ಹಿಂದೆ ತತ್ಪುರುಷಕಲ್ಪದಲ್ಲಿ ಕುಶಸ್ಥಲಿಯೆಂದು ಕರೆಯುತ್ತಿದ್ದರು. ಅದಕ್ಕೆ ಕಾರಣವನ್ನು ಕೇಳು.

೨. ಬ್ರಹ್ಮನು ಕಲ್ಪಾದಿಯಲ್ಲಿ ದೈತ್ಯ, ದಾನವ, ರಾಕ್ಷಸರೇ ಮುಂತಾದವರಿಂದ ಕೂಡಿದ ಬ್ರಹ್ಮಾಂಡವನ್ನು ಸೃಷ್ಟಿಮಾಡಿದನು. ಅವರಲ್ಲಿ ಒಬ್ಬೊಬ್ಬರೂ ಅನೇಕ ಸೃಷ್ಟಿಗಳನ್ನು ಸೃಷ್ಟಿಮಾಡಿದರು. ಹೀಗೆ ಸೃಷ್ಟರಾದವರಲ್ಲಿ ಒಬ್ಬೊಬ್ಬರೂ ಮದಿಸಿ ಯುದ್ಧರಂಗದಲ್ಲಿ ನಿಂತು ಪರಸ್ಪರದ್ವೇಷಪೂರಿತರಾಗಿದ್ದರು.

೩. ದೇವತೆಗಳಿಗೂ ದಾನವರಿಗೂ ನಿತ್ಯವೂ ಸ್ಪರ್ಧೆಯಿಂದ ಯುದ್ಧವುಂಟಾಗುತ್ತಿದ್ದಿತು. ಮನುಷ್ಯರು ಇತರ ಮಾನವರೊಡನೆಯೂ, ಸಿದ್ಧ, ವಿದ್ಯಾಧರರೊಡನೆಯೂ ಸ್ಪರ್ಧಿಸುತ್ತಿದ್ದರು.

೪. ಹಾಗೆಯೇ ಚಾರಣರೂ ಕಿನ್ನರರಲ್ಲಿ ದ್ವೇಷವನ್ನೇ ಸಾಧಿಸುತ್ತಿದ್ದರು. ತಮ್ಮತಮ್ಮ ಮಾತುಗಳು ಇತರರಿಗೆ ಅರ್ಥವಾಗದಿರಲು ನಿತ್ಯವೂ ಸಕಲರೂ ಯುದ್ಧಗಳಲ್ಲಿಯೇ ಆಸಕ್ತರಾಗಿದ್ದರು.

೫. ದೇವತೆಗಳೇ ಮುಂತಾದ ಬಲಶಾಲಿಗಳೆಲ್ಲರೂ ದುರ್ಬಲರಾದ

ಏವಮನ್ಯೋನ್ಯಮನ್ಯೈಶ್ಚ ನಿರ್ಮರ್ಯಾದಮಿದಂ ಜಗತ್ ।
ದೃಷ್ಟ್ವಾ ವಿಶ್ವಸ್ಯ ಕರ್ತಾರಂ ವಿಷ್ಣುಂ ವಿಶ್ವೇಶ್ವರಂ ಪರಂ ॥ ೬ ॥
ವ್ರಜಾಮಿ ಶರಣಂ ದೇವಂ ಶರಣಾರ್ತಿಹರಂ ಹರಿಂ ।
ಏವಂ ಮನಸಿ ಸಂಧಾಯ ದಧ್ಯೌ ಧ್ಯಾನೇನ ಮಾಧವಂ ॥ ೭ ॥
ತತೋ ಧ್ಯಾತೋ ಮಹಾಯೋಗೀ ವಿಶ್ವರೂಪಧರೋ ಹರಿಃ ।
ಲೋಹದಂಡಧರಃ ಶ್ರೀಮಾನಿದಮಾಹ ಪಿತಾಮಹಂ ॥ ೮ ॥
ಬ್ರಹ್ಮನ್ಧ್ಯಾತಸ್ತ್ವಯಾ ಸಮ್ಯಗ್ಧ್ಯಾನಯೋಗೇನ ಪಶ್ಯ ಮಾಂ ।
ಸಮಾಯಾಂತಂ ತಥಾ ಧ್ಯಾತಂ ಜಗತಾಂ ಪಾತುಮುದ್ಯತಂ ॥ ೯ ॥
ತತೋ ಧಾತಾ ನಿಶಮ್ಯೈತತ್ತ್ಯಕ್ತ್ವಾ ಧ್ಯಾನಮವೇಕ್ಷ್ಯ ತಂ ।
ಸಮುತ್ಥಾಯೈಕಮನಸಾ ನಮಶ್ಚಕ್ರೇಽರ್ಚಯತ್ಪುನಃ ॥ ೧೦ ॥
ಪಾದ್ಯೇನಾಚಮನೀಯೇನ ಮಧುಪರ್ಕೇಣ ಕೇಶವಂ ।
ಪೂಜಯಿತ್ವಾ ಪುನರ್ವಾಕ್ಯಮುವಾಚಾಽಚ್ಯುತಮಬ್ಜಜಃ ॥ ೧೧ ॥

---

ಮನುಷ್ಯರೊಡನೆ ಹೋರಾಡುತ್ತಿದ್ದರು. ಪಶುಗಳೊಡನೆ ಪಶುಗಳೂ, ಪಕ್ಷಿಗಳೊಡನೆ ಪಕ್ಷಿಗಳೂ ಸೆಣಸುತ್ತಿದ್ದುವು.

೬–೭. ಇಂತು ಸಮಸ್ತ ಜಾತಿಗಳವರೂ ಅನ್ಯೋನ್ಯವಾಗಿ ದ್ವೇಷಿಸುತ್ತಿರಲು ಈ ಜಗತ್ತೆಲ್ಲವೂ ರೀತಿನೀತಿಯಿಲ್ಲದುದಾಯಿತು. ಇದನ್ನು ಕಂಡು ಚತುರ್ಮುಖನು, "ಲೋಕಕ್ಕೆ ಕಾರಣನೂ, ಸರ್ವೇಶ್ವರನೂ, ಪರಾತ್ಪರನೂ, ದೇವದೇವನೂ, ಶರಣಾಗತರ ಕಷ್ಟವನ್ನು ಕಳೆಯುವವನೂ ಆದ ಶ್ರೀಹರಿಯನ್ನೇ ಶರಣುಹೋಗುವೆನು" ಎಂದು ಯೋಚಿಸಿ ನಿಶ್ಚಯಮಾಡಿಕೊಂಡು ಧ್ಯಾನಯೋಗದಿಂದ ಶ್ರೀಮನ್ನಾರಾಯಣನನ್ನು ಉಪಾಸನೆಮಾಡಿದನು.

೮. ಈತನ ಧ್ಯಾನಕ್ಕೆ ಪ್ರಸನ್ನನಾಗಿ ಮಹಾಯೋಗಿಯಾದ ಶ್ರೀಹರಿಯು ವಿಶ್ವರೂಪವನ್ನು ತಾಳಿ ಸಕಲವೈಭವಯುಕ್ತನಾಗಿ ಕಬ್ಬಿಣದ ದಂಡವನ್ನು ಕೈಯಲ್ಲಿ ಹಿಡಿದು ನಿಂತು ಬ್ರಹ್ಮನಿಗೆ ಇಂತೆಂದನು.

೯. "ಎಲೈ ಚತುರ್ಮುಖನೆ! ನೀನು ನನ್ನನ್ನು ಕುರಿತು ಉತ್ತಮರೀತಿಯಲ್ಲಿ ಧ್ಯಾನಮಾಡಿರುವೆ. ನಿನ್ನ ಧ್ಯಾನಯೋಗದ ಫಲವಾಗಿ ಧ್ಯೇಯರೂಪದಿಂದ ಲೋಕಗಳನ್ನೆಲ್ಲ ಕಾಪಾಡಲು ಬಂದಿರುವ ನನ್ನನ್ನು ನೋಡು."

೧೦–೧೧. ಈ ಮಾತುಗಳನ್ನು ಕೇಳಿ ಬ್ರಹ್ಮನು ಧ್ಯಾನಮುದ್ರೆಯನ್ನುಳಿದು ನಾರಾಯಣನನ್ನು ಕಂಡು ಸಂಭ್ರಮದಿಂದೆದ್ದು ಏಕಾಗ್ರಚಿತ್ತದಿಂದ ನಮಸ್ಕರಿಸಿ ಪುನಃ ಪೂಜೆಯನ್ನು ಮಾಡಿದನು. ಅರ್ಘ್ಯ, ಪಾದ್ಯ, ಆಚಮನೀಯ, ಮಧುಪರ್ಕಾದಿಗಳಿಂದ ಕೇಶವನಿಗೆ ಅರ್ಚನೆಯನ್ನು ಸಾಂಗವಾಗಿ ಮಾಡಿ ಬ್ರಹ್ಮನು ಮತ್ತೆ ಆತನನ್ನು ಕುರಿತು ವಿಜ್ಞಾಪಿಸಿಕೊಂಡನು.

ಬ್ರಹ್ಮೋವಾಚ :—
ದೇವದೇವ ಜಗನ್ನಾಥ ಜಗತ್ಸೃಷ್ಟಮಿದಂ ತ್ವಯಾ ।
ಋತೇ ತ್ವಯಾ ಜಗದ್ವಿಷ್ಣೋ ನೈವಾಽವಸ್ಥಾತುಮರ್ಹತಿ ॥ ೧೨ ॥
ಶಾಸ್ತಾ ತ್ವಮಸ್ಯ ವಿಶ್ವಸ್ಯ ವಿಶುದ್ಧಸ್ಯ ಚ ನಾಽಪರಃ ।
ತ್ವತ್ತೋಽಸ್ತೀದಂ ಜಗತ್ಸರ್ವಂ ತಸ್ಮಾತ್ತ್ವಮನುಶಾಸಯ ॥ ೧೩ ॥
ದೇವದಾನವಗಂಧರ್ವಾಃ ಸಯಕ್ಷೋರಗರಾಕ್ಷಸಾಃ ।
ತ್ವಾಮೃತೇ ಪುಂಡರೀಕಾಕ್ಷಂ ವ್ಯಾಪಿತಾಽಶೇಷವಿಗ್ರಹಾಃ ।
ಪರಸ್ಪರಂ ವಿನಿಘ್ನಂತಿ ತಾಂಶ್ಚ ತ್ವಂ ರಕ್ಷಿತುಂ ಕ್ಷಮಃ ॥ ೧೪ ॥
ತ್ವಮಸ್ಯ ವಿಶ್ವಸ್ಯ ಚರಾಚರಸ್ಯ
ಸ್ಥಿತೇಃ ಸದಾ ಪ್ರಾಣಭೃದಾತ್ಮರೂಪಿಣೇ ।
ತ್ವಯಾ ಧೃತಂ ಸರ್ವಮಿದಂ ಜಗದ್ವೈ
ಯತಸ್ತತೋಽಸಿ ತ್ವಮುಪೇಂದ್ರಸಂಜ್ಞಃ ॥ ೧೫ ॥
ಪ್ರವೇಶಿತಂ ವ್ಯಾಪ್ತಮಿದಂ ಸ್ವಧಾಮ ಯ
ತ್ತ್ವಮುಚ್ಯಸೇ ವಿಷ್ಣುರತೋ ಮುನೀಂದ್ರೈಃ ।
ನಿವಾಸಿತಂ ವಿಶ್ವಮಿದಂ ತ್ವಯಾಽದ್ಯ
ವಾಸಶ್ಚ ಧಾತೋರಿತಿ ವಾಸುದೇವಃ ॥ ೧೬ ॥

---

೧೨. ಬ್ರಹ್ಮನು ಹೇಳುತ್ತಾನೆ:—ದೇವಾಧಿದೇವನೆ! ಜಗನ್ನಾಥನೆ! ನೀನೇ ಈ ಬ್ರಹ್ಮಾಂಡವನ್ನು ಸೃಷ್ಟಿಮಾಡಿದವನು. ಸರ್ವವ್ಯಾಪಕನಾದ ನಿನ್ನನ್ನುಳಿದು ಇದು ಎಂದಿಗೂ ಸಮಸ್ಥಿತಿಗೆ ಬರಲಾರದು.

೧೩. ಪರಿಶುದ್ಧವಾದ ಈ ಲೋಕಕ್ಕೆ ನೀನಲ್ಲದೆ ಬೇರೆ ನಿಯಾಮಕನಿಲ್ಲ. ಸಕಲ ಬ್ರಹ್ಮಾಂಡವೂ ನಿನ್ನಿಂದಲೇ ನಡೆಯುತ್ತಿರುವುದರಿಂದ ನೀನೇ ಇದನ್ನು ಶಾಸನಮಾಡಿ ನಡೆಸುತ್ತಿರಬೇಕು.

೧೪. ಕಮಲನೇತ್ರನಾದ ನಿನ್ನ ಅಧಿಕಾರವಿಲ್ಲದೆ ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ಉರಗರು, ರಾಕ್ಷಸರು ಮೊದಲಾದವರೆಲ್ಲರೂ ಕೊನೆಗಾಣದ ಅಂತಃಕಲಹದಲ್ಲಿ ನಿರತರಾಗಿರುವರು. ಒಬ್ಬೊಬ್ಬರನ್ನು ಕೊಲ್ಲುತ್ತಿರುವರು. ಅವರನ್ನೆಲ್ಲ ಸಂರಕ್ಷಿಸಲು ನೀನೊಬ್ಬನೇ ಸಮರ್ಥನು.

೧೫. ಅಂತರಾತ್ಮನಾಗಿ ನೀನು ಚರಾಚರಾತ್ಮಕವಾದ ಈ ವಿಶ್ವದ ಸ್ಥಿತಿಗೆ ಪ್ರಾಣಭೂತನಾಗಿರುವೆ. ಈ ಸಕಲ ಜಗತ್ತೂ ನಿನ್ನಿಂದಲೇ ವಿಧೃತವಾಗಿರುವುದು. ಆದುದರಿಂದಲೇ ನಿನಗೆ ಉಪೇಂದ್ರನೆಂಬ ಹೆಸರುಂಟಾಗಿರುವುದು.

೧೬. ನಿನ್ನ ನೆಲೆಯಾದ ಬ್ರಹ್ಮಾಂಡದಲ್ಲಿಯೇ ನಿನ್ನ ಅನುಪ್ರವೇಶವೂ, ವ್ಯಾಪ್ತಿಯೂ ಇರುವುದರಿಂದ ಮುನಿವರ್ಯರು ನಿನ್ನನ್ನು ವಿಷ್ಣುವೆಂದು ಕರೆಯುವರು. ನೀನೇ ಈ ಸಕಲಜಗತ್ತಿನಲ್ಲಿಯೂ ನಿವಾಸಮಾಡುತ್ತಿರುವನು.

ತವಾಽನುಗಂ ವಿಶ್ವಮಿದಂ ವಿಭುಸ್ತ್ವ
ಮಶೇಷವಿಶ್ವಸ್ಯ ವಿಭಾಸಿ ರಾಜಾ ।
ಸೇನಾಽನುರೂಪಂ ಜಗದೇವ ಯಸ್ಮಾ
ದತಃ ಸ್ಮೃತಸ್ತ್ವಂ ಕಿಲ ವಿಶ್ವಸೇನಃ ॥ ೧೭ ॥
ವಿಲೇಖನಾದಸ್ಯ ಚರಾಚರಸ್ಯ
ಕೃತೇಶ್ಚ ಧಾತೋಸ್ತ್ವಮತೋಽಸಿ ಕೃಷ್ಣಃ ।
ಜಿತಂ ತ್ವಯಾ ದೇವ ಜಗತ್ತ್ರಯಂ ಯ
ಜ್ಜಿತೇಶ್ಚ ಧಾತೋಸ್ತ್ವಮತೋಽಸಿ ಜಿಷ್ಣುಃ ॥ ೧೮ ॥
ತಸ್ಮಾತ್ಸಮಸ್ತಗ್ರಹಲೋಕಪಾಲಂ
ಜಗದ್ವಿಭೋ ಪಾಲಯ ಸರ್ವಕಾಲಂ ।
ತ್ವಮಸ್ಯ ಸರ್ವಸ್ಯ ಭವಾಽಽದಿರಾಜ
ಸ್ತವಾಽಸ್ತು ಭದ್ರಾಸನಮದ್ವಿತೀಯಂ ॥ ೧೯ ॥
ಪ್ರದಕ್ಷಿಣಾವರ್ತನಕಸ್ತು ಶಂಖಃ
ಕರಸ್ಥಿತಃ ಶೋಭತಿ ಪೂರುಷಸ್ಯ ।
ಸುದರ್ಶನೋ ನಾಮ ತವಾಽಸ್ತಿ ಚಕ್ರ
ಮತೋ ಹಿ ಗೀತಃ ಕವಿಭಿಸ್ತು ಚಕ್ರೀ ॥ ೨೦ ॥

---

"ವಸ—ನಿವಾಸೇ" ಎಂಬ ಧಾತುವಿನ ಅರ್ಥವನ್ನು ಚಿಂತನಮಾಡಲು ನೀನೇ ವಾಸುದೇವನೂ ಆಗಿರುವೆ.

೧೭. ಸಕಲವಿಶ್ವವೂ ನಿನ್ನ ಅಧೀನದಲ್ಲಿರುವುದು. ನೀನೇ ಸಕಲ ಬ್ರಹ್ಮಾಂಡಕ್ಕೆ ವ್ಯಾಪಕನೂ, ರಾಜನೂ ಆಗಿ ಬೆಳಗುತ್ತಿರುವೆ. ಈ ಜಗತ್ತು ನಿನಗೆ ಸೈನ್ಯದಂತಿರುವುದರಿಂದ ನಿನ್ನನ್ನು ವಿಶ್ವಸೇನನೆಂದೂ ಕರೆಯುವರು.

೧೮. ಸ್ಥಾವರಜಂಗಮಸಹಿತವಾದ ಈ ಸಕಲವಿಶ್ವದ ಕಾರಣನಾದುದರಿಂದಲೇ "ಡು—ಕೃಞ್—ಕರಣೇ" ಎಂಬ ಧಾತುವಿನ ಅರ್ಥವನ್ನನುಸರಿಸಿ ನಿನ್ನನ್ನು ಕೃಷ್ಣನೆಂದೂ ಕರೆಯುತ್ತಿರುವರು. ತ್ರಿವಿಕ್ರಮನಾಗಿ ಮೂರುಲೋಕಗಳನ್ನೂ ಗೆದ್ದವನಾದುದರಿಂದ ಜಿಷ್ಣುವೆಂಬ ನಿನ್ನ ನಾಮವು "ಜಿ—ಜಯೇ" ಎಂಬ ಧಾತುವನ್ನನುಸರಿಸಿದ್ದಾಗಿರುವುದು.

೧೯. ಲೋಕನಾಥನೆ! ಆದುದರಿಂದ ಗ್ರಹಗಳು, ಲೋಕಪಾಲಕರೇ ಮುಂತಾದವರಿಂದ ನಿಬಿಡಿತವಾದ ಇದೆಲ್ಲವನ್ನೂ ಸರ್ವಕಾಲದಲ್ಲಿಯೂ ನೀನೇ ಪಾಲಿಸುತ್ತಿರು. ನೀನೇ ಇದೆಲ್ಲಕ್ಕೂ ಮೊದಲನೆಯ ರಾಜನಾಗು. ಅದ್ವಿತೀಯವಾದ ಈ ಪಟ್ಟವು ನಿನಗೇ ಸಲ್ಲಲಿ.

೨೦. ಸಕಲಜೀವರಲ್ಲಿ ಅಂತರ್ಯಾಮಿಯಾದ ನಿನ್ನ ಕೈಯಲ್ಲಿ ಪ್ರದಕ್ಷಿಣೆಯ ಸುಳಿಯಿರುವ (ಬಲಮುರಿ) ಶಂಖವು ಶೋಭಿಸುತ್ತಿರುವುದು. ಮತ್ತೊಂದು

ಧ್ವಜೋಽಸ್ತಿ ತೇ ದೇವ ಸುಪರ್ಣಸೇವಿತ
ಸ್ತಥಾ ಸುಪರ್ಣಶ್ಚ ತವಾಽಸ್ತಿವಾಹನಂ
ತುರಂಗಮಾಃ ಸಂತಿ ತವಾಽರಿಸಂಹರೇ ।
ತಥಾ ಹೃಷೀಕೇಶ ಸುದಂತದಂತಿನಃ ॥ ೨೧ ॥
ಕಿರೀಟನಿಷ್ಕಾಂಗದಕರ್ಣಪೂರ
ಕೇಯೂರಹಾರೋತ್ತಮಹೇಮಸೂತ್ರೈಃ ।
ವಿಚಿತ್ರವಸ್ತ್ರೋತ್ತಮರಕ್ತಮಾಲ್ಯೈ
ರ್ವಿಭೂಷಿತಸ್ತ್ವಂ ಭವ ಭೀಮಸೇನಃ ॥ ೨೨ ॥
ಶ್ರಿಯಾ ಕದಾಚಿಚ್ಚ ನ ಮುಚ್ಯತೇ ಭವಾನ್
ಭವಂತಿ ತೇ ನಿತ್ಯಮನಂತಸಂಪದಃ ॥ ೨೩ ॥
ತವಾಽನುಗಾ ಭಕ್ತಿರಿಹಾಽಸ್ತು ವೈ ಸತೀ
ಮುಕುಂದ ಭಕ್ತೇ ತ್ವಮತಃ ಪ್ರಸೀದ ಮೇ ॥ ೨೪ ॥

ಸನತ್ಕುಮಾರ ಉವಾಚ :—

ಸ ಏವಮುಕ್ತಸ್ತು ಪುರೋ ದಿವೌಕಸಾಂ
ವಿಭುಃ ಪ್ರಸನ್ನಸ್ತ್ವಿದಮಬ್ರವೀದ್ಧರಿಃ ।
ವಿರಿಂಚ ಮೇ ದರ್ಶಯ ತಸ್ಯ ಮಂಡಲಂ
ತ್ವಯಾ ವಿಮುಕ್ತಂ ಚ ಸದಾ ಶಿವಂ ವಿಭೋ ॥ ೨೫ ॥

---

ಕೈಯಲ್ಲಿ ಸುದರ್ಶನವೆಂಬ ಚಕ್ರವಿರುವುದರಿಂದ ಕವಿಗಳು ನಿನ್ನನ್ನು ಚಕ್ರಿಯೆಂದು ಹೊಗಳುತ್ತಿರುವರು.

೨೧—೨೨. ದೇವನೆ! ನಿನ್ನ ಧ್ವಜವು ಗರುಡನಿಂದ ಸೇವಿತವಾಗಿರುವುದು. ಆ ಗರುಡನೇ ನಿನಗೆ ವಾಹನವೂ ಆಗಿರುವನು. ಹೃಷೀಕೇಶ! ನಿನಗೆ ಶತ್ರುಸಂಹಾರ ಕಾರ್ಯದಲ್ಲಿ ಉದ್ದವಾದ ಕೋರೆದಾಡೆಗಳುಳ್ಳ ಆನೆಗಳೇ ಕುದುರೆಗಳಾಗಿರಲಿ. ಕಿರೀಟ, ಹಾರ, ಭಾಪುರಿ, ಕಿವಿಯೋಲೆ, ಕೇಯೂರ, ಉತ್ತಮವಾದ ಚಿನ್ನದ ಯಜ್ಞೋಪವೀತ, ವಿಚಿತ್ರಗಳಾದ ಪೀತಾಂಬರಗಳು, ರಕ್ತಪುಷ್ಪಗಳ ಮಾಲೆಗಳು ಮುಂತಾದುವುಗಳಿಂದ ವಿಭೂಷಿತನಾಗಿ ನೀನು ಭೀಮಸೇನನಾಗಿರು.

೨೩—೨೪. ನಿನಗೆ ಯಾವಾಗಲೂ ಐಶ್ವರ್ಯಚ್ಯುತಿಯುಂಟಾಗುವುದಿಲ್ಲ. ನಿನಗೆ ನಿತ್ಯವೂ ಅನಂತಸಂಪತ್ತುಗಳು ಲಭಿಸುತ್ತಿರುವುವು. ನಿನ್ನ ವಿಷಯವಾದ ಭಕ್ತಿಯೇ ಈ ಲೋಕದಲ್ಲಿ ಶಾಶ್ವತವಾಗಿರಲಿ. ಮುಕುಂದನೆ! ಆದುದರಿಂದ ನಿನ್ನ ಭಕ್ತನಾದ ನನ್ನಲ್ಲಿ ಪ್ರಸನ್ನನಾಗು.

೨೫. ಸನತ್ಕುಮಾರನು ಹೇಳುತ್ತಾನೆ:—ದೇವತೆಗಳ ಎದುರಿನಲ್ಲಿ ಇಂತು ಪ್ರಾರ್ಥನೆಯನ್ನು ಮಾಡುತ್ತಿದ್ದ ಬ್ರಹ್ಮನಲ್ಲಿ ಸರ್ವೇಶ್ವರನಾದ ಶ್ರೀಹರಿಯು

ಸ್ಥಿರಂ ಸ್ಥಿತೋ ಯತ್ರ ಜಗತ್ಕರೋಮ್ಯಹಂ
ತತೋ ವಿರಿಂಚಿಃ ಕುಶಮುಷ್ಟಿಮಾದದೇ ।
ಪವಿತ್ರದೇಶಸ್ಯ ನಿದರ್ಶನಾಯ
ಜಗಾಮ ಪುಣ್ಯಂ ಚ್ಯವನಾಶ್ರಮಂ ತದಾ ॥ ೨೬ ॥
ತತಃ ಸ್ಥಲೀಮುಚ್ಚತರಾಮವಾಪ್ಯ
ಪಿತಾಮಹಃ ಕೇಶವಮಾಹ ಚಾದರಾತ್ ।
ತ್ವದುದ್ಭವಂ ಚಾಽತ್ರ ಪವಿತ್ರಮಂಡಲಂ
ತ್ವಯಾ ವಿಮುಕ್ತಂ ಚ ಸದಾ ಶಿವಂ ವಿಭೋ ॥ ೨೭ ॥
ತ್ವಮೇವ ವಿಷ್ಣುರ್ವಿಬುಧಾರ್ಚಿತಃ ಸದಾ
ಸ್ಮೃತೋ ಮುನೀಂದ್ರೈಃ ಸ ಚ ವಿಷ್ಟರಶ್ರವಾಃ ।
ನಿಷೀದ ವಿಶ್ವೇಶ ಕುಶಸ್ಥಲಂ ಯದಾ
ತದಾಶ್ರಿತೋ ಮಾಧವಮಾಸರೂಪವಾನ್ ॥ ೨೮ ॥
ಕುಶಸ್ಥಲೀಂ ಸಂಸ್ಥಿತ ಏವ ದೇವ
ಇತ್ಥಂ ವಿಧಾತ್ರಾ ಪುರುಷೋತ್ತಮಃ ಸ್ತುತಃ ।
ಸ್ಥಲೀಂ ಕುಶೈರಾಸ್ತರಿತಾಮುಪಾವಿಶ
ತ್ಕುಶಸ್ಥಲೀಂ ದೇವಮುನೀಂದ್ರಸೇವಿತಾಂ ॥ ೨೯ ॥

---

ಪ್ರಸನ್ನನಾಗಿ ಇಂತೆಂದನು. ವಿರಿಂಚಿಯೆ! ನಿನ್ನ ಅಧೀನಕ್ಕೊಳಪಡದಿರವುದೂ, ನಿತ್ಯವೂ ಮಂಗಳಪ್ರದವೂ ಆದ ಈ ಸ್ಥಳವನ್ನು ತೋರಿಸುತ್ತಿರು.

೨೬. ಆಯಾ ಸ್ಥಳಗಳಲ್ಲಿ ನಾನು ನಿಂತು ಜಗತ್ತನ್ನು ಸ್ಥಿರಗೊಳಿಸುವೆನು. ಈ ಮಾತನ್ನು ಕೇಳಿ ಬ್ರಹ್ಮನು ಪವಿತ್ರಪ್ರದೇಶಗಳನ್ನು ನಾರಾಯಣನಿಗೆ ತೋರಿಸಿ ಕೊಡಲು ಒಂದೊಂದರಿಂದಲೂ ಒಂದೊಂದು ಹಿಡಿ ಕುಶಗಳನ್ನು ತೆಗೆದುಕೊಳ್ಳುತ್ತ ನಡೆದನು. ಕಡೆಗೆ ಆತನು ಹೀಗೆಯೆ ಪುಣ್ಯತಮವಾದ ಚ್ಯವನಾಶ್ರಮಕ್ಕೆ ಬಂದನು.

೨೭. ಸರ್ವೋತ್ತಮವಾದ ಆ ಸ್ಥಳವನ್ನು ಸೇರಿ ಪಿತಾಮಹನು ಕೇಶವನಿಗೆ ಹೇಳಿದನು. "ನಿನ್ನಿಂದ ಹುಟ್ಟಿದ ಈ ಪವಿತ್ರಪ್ರದೇಶವು ನಿನ್ನಿಂದಲೇ ಕಲಹ ವರ್ಜಿತವಾಗಿ ಯಾವಾಗಲೂ ಮಂಗಳವುಳ್ಳದ್ದಾಗಲಿ.

೨೮. ಸರ್ವವ್ಯಾಪಕನಾದ ನೀನೇ ಸರ್ವಕಾಲದಲ್ಲಿಯೂ ದೇವತೆಗಳಿಗೆ ಪೂಜಾರ್ಹನಾಗಿರುವೆ. ಮುನಿಗಳೂ ವಿಷ್ಟರಶ್ರವನೆಂದು ನಿನ್ನನ್ನು ಸ್ತುತಿಸುತ್ತಿರುವರು. ಈ ಕುಶಗಳಿರುವೆಡೆಯಲ್ಲಿ ನೀನು ಸ್ಥಿರವಾಗಿರು." ಇಂತೆಂದ ಬ್ರಹ್ಮದೇವನ ಮಾತನ್ನನುಸರಿಸಿ ನಾರಾಯಣನು ವಸಂತಮಾಸದ ರೂಪದಿಂದ ಆ ಪ್ರದೇಶವನ್ನಾಶ್ರಯಿಸಿ ನಿಂತನು.

೨೯. ಹೀಗೆ ನಿಂತು ದೇವದೇವನಾದ ಆ ಪುರುಷೋತ್ತಮನು ಬ್ರಹ್ಮನಿಂದ

ಸಮಂತತೋ ಯೋಜನಸಂಖ್ಯಯಾವೃತಾಂ
ತತೋ ವಿಧಾತಾ ಪುರುಷೋತ್ತಮಸ್ತಥಾ ।
ಕುಶಸ್ಥಲೀತಿ ಪ್ರಥಿತಂ ಜಗತ್ತ್ರಯೇ
ಪ್ರಚಕ್ರತುರ್ನಾಮ ಚ ತಾವುಭಾವಪಿ ॥ ೩೦ ॥
ತತ್ರ ವಿಶ್ವಪತಿಃ ಶ್ರೀಮಾನ್ವಿಶ್ವೇಶೋ ವಿಶ್ವಕೃದ್ವಿಭುಃ ।
ವಿಶ್ವಂ ಶಶಾಸ ವಿಶ್ವಾತ್ಮಾ ಸರ್ವವಿಶ್ವಸ್ಯ ನಾಯಕಃ ॥ ೩೧ ॥
ಏವಂ ಕುಶಸ್ಥಲೀ ಖ್ಯಾತಾ ಹೇಮಶೃಂಗೇತಿ ಯಾ ಪುರಾ ।
ಸ್ತೀರ್ಣಾ ಕುಶೈರ್ಯತೋ ಧಾತ್ರಾ ಕುಶಸ್ಥಲೀ ತತಃ ಸ್ಮೃತಾ ॥ ೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕುಶಸ್ಥಲೀನಾಮ ಹೇತುಕಥಾವರ್ಣನಂ" ನಾಮೈಕಚತ್ವಾರಿಂಶೋಽಧ್ಯಾಯಃ

---

ಸ್ತುತನಾಗಿ ಕುಶಗಳನ್ನು ಹಾಸಿದ್ದ ಆ ಸ್ಥಳದಲ್ಲಿ ನಿಂತನು. ಕುಶಾಸನದಿಂದಾವೃತವಾದ ಪರಮಾತ್ಮನಿಗೆ ನೆಲೆಯಾದ ಆ ಸ್ಥಳವನ್ನು ಕುಶಸ್ಥಳಿಯೆಂದೇ ಕರೆದು ದೇವತೆಗಳೂ ಮುನೀಂದ್ರರೂ ಸೇವಿಸಿದರು.

೩೦. ನಾಲ್ಕು ದಿಕ್ಕುಗಳಿಗೂ ಒಂದು ಯೋಜನದವರೆಗೂ ವ್ಯಾಪಿಸಿರುವ ಪ್ರದೇಶವನ್ನು ಬ್ರಹ್ಮನಾರಾಯಣರಿಬ್ಬರೂ ಕುಶಸ್ಥಳಿಯೆಂದು ಕರೆದು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಕ್ಷೇತ್ರವನ್ನಾಗಿ ಮಾಡಿದರು.

೩೧. ವಿಶ್ವನಾಯಕನೂ, ಲಕ್ಷ್ಮೀರಮಣನೂ, ವಿಶ್ವೇಶ್ವರನೂ, ವಿಶ್ವಸೃಷ್ಟಿಯನ್ನು ಮಾಡುವವನೂ, ವಿಶ್ವವ್ಯಾಪಿಯೂ, ವಿಶ್ವದ ಅಂತರಾತ್ಮನೂ, ಸಕಲ ಲೋಕಗಳ ಅಧಿಪತಿಯೂ ಆದ ನಾರಾಯಣನು ಅಲ್ಲಿ ನಿಂತು ಸಮಸ್ತ ಭೂಮಂಡಲವನ್ನೂ ಪಾಲನಮಾಡುತ್ತಿದ್ದನು.

೩೨. ಇಂತು ಪೂರ್ವದಲ್ಲಿ ಕನಕಶೃಂಗವೆಂದು ಪ್ರಖ್ಯಾತವಾಗಿದ್ದ ಆ ಕ್ಷೇತ್ರವೇ ಈಗ ಕುಶಸ್ಥಳಿಯೆಂದು ಕರೆಯಲ್ಪಟ್ಟಿತು. ಬ್ರಹ್ಮನು ತಾನು ತಂದಿದ್ದ ಕುಶಗಳನ್ನೆಲ್ಲ ಇಲ್ಲಿ ಪರಿಸ್ತರಣವನ್ನಾಗಿ ಹರಡಿದನಾದುದರಿಂದ ಈ ಕ್ಷೇತ್ರವು ಕುಶಸ್ಥಳಿಯೆಂದು ಕರೆಯಲ್ಪಟ್ಟಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕುಶಸ್ಥಲೀನಾಮವೃತ್ತಾಂತವರ್ಣನ"ವೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು

*

ನೃಸಿಂಹರೂಪಾಯೋಗ್ರಾಯ ನಮೋ ವಾರಾಹರೂಪಿಣೇ ।
ರಾಘವಾಯ ಚ ರಾಮಾಯ ಬ್ರಹ್ಮಣೇऽನಂತಶಕ್ತಯೇ ॥ ೧೩ ॥
ವಾಸುದೇವಾಯ ಶಾಂತಾಯ ಯದೂನಾಂ ಪತಯೇ ನಮಃ ।
ನಮೋ ಬುದ್ಧಾಯ ಶುದ್ಧಾಯ ಕಲ್ಕಯೇ ಮ್ಲೇಚ್ಛಶಾಸಿನೇ ॥ ೧೪ ॥
ಇತಿ ಸ್ತವಾಭಿಯುಕ್ತಾನಾಂ ವಾಗುವಾಚಾऽಶರೀರಿಣೀ ।
ಶೃಣುಧ್ವಂ ಭೋಃ ಸುರಾಃ ಸರ್ವೇ ಭೂತ್ವಾಚೈಕಾಗ್ರಮಾನಸಾಃ ॥ ೧೫ ॥
ಮಹಾಕಾಲವನೇ ರಮ್ಯೇ ಬ್ರಹ್ಮರ್ಷಿಗಣಸೇವಿತೇ ।
ತತ್ರ ಪುಣ್ಯಾ ಪುರೀ ಹ್ಯೇಕಾ ಸರ್ವಕಾಮಫಲಪ್ರದಾ ॥ ೧೬ ॥
ನಾಮ್ನಾ ಕುಶಸ್ಥಲೀ ರಮ್ಯಾ ಸಿದ್ಧಗಂಧರ್ವಸೇವಿತಾ ।
ಕಲ್ಪಾದೌ ಕಲ್ಪಮಧ್ಯೇ ವಾ ಯತ್ರ ಸನ್ನಿಹಿತೋ ಹರಃ ॥ ೧೭ ॥
ಕಲ್ಪಕ್ಷಯೇ ಕ್ಷಯಂ ಯಾಂತಿ ಸ್ಥಾವರಾಣಿ ಚರಾಣಿ ಚ ।
ತೀರ್ಥಾನಿ ಚೈವ ಸರ್ವಾಣಿ ಪುಣ್ಯಾನ್ಯಾಯತನಾನಿ ಚ ॥ ೧೮ ॥

---

ಕೂರ್ಮನಾಗಿ ಅವತರಿಸಿದವನೂ ಆದ ನಿನಗೆ ನಮಸ್ಕಾರವು. ಭಯಂಕರವಾದ ನರಸಿಂಹರೂಪನೂ, ವರಾಹದೇಹಿಯೂ ಆದ ನಿನಗೆ ನಮಸ್ಕಾರವಿರಲಿ. ಅನಂತ ಶಕ್ತಿಸಂಪನ್ನನಾಗಿ ಶ್ರೀರಾಮ, ಪರಶುರಾಮರಾಗಿ ಅವತರಿಸಿದ ಪರಬ್ರಹ್ಮವಸ್ತುವಾದ ನಿನಗೆ ಮಣಿಯುವೆವು.

೧೪. ವಸುದೇವನ ಮಗನಾಗಿ ಪ್ರಶಾಂತರೂಪದಿಂದ ಯಾದವರನ್ನು ಸಲಹಿದ ನಿನಗೆ ನಮಸ್ಕಾರವು. ಪರಿಶುದ್ಧನಾದ ಬುದ್ಧನೂ, ಮ್ಲೇಚ್ಛಸಮೂಹಗಳನ್ನು ನಾಶಗೊಳಿಸುವ ಕಲ್ಕಿಯೂ ಆದ ನಿನಗೆ ನಮಸ್ಕರಿಸುವೆವು.

೧೫. ಇಂತೆಂದು ಅವರು ಸ್ತೋತ್ರಮಾಡುತ್ತಿರಲು ಅಶರೀರವಾಣಿಯು ಅವರನ್ನು ಕುರಿತು ಇಂತೆಂದಿತು. "ದೇವತೆಗಳಿರಾ! ನೀವೆಲ್ಲರೂ ಏಕಾಗ್ರಚಿತ್ತದಿಂದ ಕೇಳಿರಿ.

೧೬. ಬ್ರಹ್ಮರ್ಷಿಸಮೂಹಗಳಿಂದ ಸೇವಿತವಾದ ಮಹಾಕಾಲವನವೆಂಬ ಮನೋಹರವಾದ ಪ್ರದೇಶದಲ್ಲಿ ಸರ್ವಾಭೀಷ್ಟಫಲಪ್ರದವಾದ ಪುಣ್ಯನಗರಿಯೊಂದು ಕಂಗೊಳಿಸುತ್ತಿರುವುದು.

೧೭. ರಮ್ಯವಾದ ಕುಶಸ್ಥಳಿಯೆಂಬ ಹೆಸರಿನ ಆ ನಗರವನ್ನು ಸಿದ್ಧರೂ, ಗಂಧರ್ವರೂ ಸೇವಿಸುತ್ತಿರುವರು. ಕಲ್ಪಗಳ ಆದಿಯಲ್ಲಿಯೂ, ಕಲ್ಪದ ಮಧ್ಯದಲ್ಲಿಯೂ ಪರಮೇಶ್ವರನು ಅಲ್ಲಿ ಸನ್ನಿಹಿತನಾಗಿರುವನು.

೧೮. ಕಲ್ಪಾವಸಾನದಲ್ಲಿ ಅಲ್ಲಿರುವ ಸ್ಥಾವರಜಂಗಮಪ್ರಾಣಿಗಳೂ, ಸಕಲ ತೀರ್ಥಗಳೂ, ಪುಣ್ಯ ದೇವಾಲಯಗಳೂ ನಾಶವಾಗುವುವು.

ಸರಿತಃ ಸಾಗರಾಃ ಸರ್ವೇ ಸರಾಂಸ್ಯುಪವನಾನಿ ಚ ।
ಔಷಧೀರ್ವೃಕ್ಷವಲ್ಲೀಶ್ಚ ಯಂತ್ರಂ ಮಂತ್ರಂ ಶುಭಾಽಶುಭಂ ॥ ೧೯ ॥
ಜ್ಯೋತೀಂಷಿ ಚಂದ್ರಸೂರ್ಯೌ ಚ ಸರ್ವಂ ವಿಷ್ಣುಮಯಂ ಜಗತ್ ।
ತೇಷಾಂ ಬೀಜಂ ಚ ಪುಣ್ಯಂ ಚ ಜೀವಕರ್ಮಾಶಯಂ ತಥಾ ॥ ೨೦ ॥
ಸರ್ವಮಾದಾಯ ಭಗವಾಂಛಂಕರಸ್ತತ್ರ ತಿಷ್ಠತಿ ।
ಸರ್ವತೀರ್ಥಮಯೀ ಗಂಗಾ ಸರ್ವದೇವಮಯೋ ಹರಿಃ ॥ ೨೧ ॥
ಸರ್ವಯಜ್ಞಮಯೋ ವೇದಃ ಸರ್ವಧರ್ಮಮಯೀ ದಯಾ ।
ರೇವಾ ಚ ಸರಿತಾಂ ಶ್ರೇಷ್ಠಾ ಭುವಿ ಪುಣ್ಯಕೃತಾಽಧಿಕಾ ॥ ೨೨ ॥
ತಸ್ಮಾದ್ಧಿತಕರಂ ಕ್ಷೇತ್ರಂ ಕುರೂಣಾಂ ವೈ ಸುರೋತ್ತಮಾಃ ।
ತಸ್ಮಾದ್ದಶಗುಣಂ ಮನ್ಯೇ ಪ್ರಯಾಗಂ ತೀರ್ಥಮುತ್ತಮಂ ॥ ೨೩ ॥
ತಸ್ಮಾದ್ದಶಗುಣಾ ಕಾಶೀ ಕಾಶ್ಯಾ ದಶಗುಣಾ ಗಯಾ ।
ತತೋ ದಶಗುಣಾ ಪ್ರೋಕ್ತಾ ಪುಣ್ಯದಾ ಚ ಕುಶಸ್ಥಲೀ ॥ ೨೪ ॥

---

೧೯–೨೧. ಹಾಗೆಯೇ ಸಕಲ ನದಿಗಳೂ, ಸಮುದ್ರಗಳೂ, ಸರೋವರಗಳೂ, ಉಪವನಗಳೂ, ವನಸ್ಪತಿಗಳೂ, ವೃಕ್ಷಗಳೂ, ಬಳ್ಳಿಗಳೂ, ಯಂತ್ರ ಮಂತ್ರಗಳೂ, ಪುಣ್ಯಪಾಪಗಳೂ, ಜ್ಯೋತಿಗಳೂ, ಚಂದ್ರಸೂರ್ಯರೂ ಮುಂತಾದುವುಗಳನ್ನೊಳಕೊಂಡ ಸಕಲ ಬ್ರಹ್ಮಾಂಡವೂ ವಿಷ್ಣುಮಯವಾಗಿರುವುದು. ಅವುಗಳೆಲ್ಲವುಗಳ ಬೀಜಗಳನ್ನೂ, ಪುಣ್ಯವನ್ನೂ, ಜೀವರ ಕರ್ಮಸಂಸ್ಕಾರಗಳನ್ನೂ ಸೂಕ್ಷ್ಮರೂಪದಿಂದ ತನ್ನಲ್ಲಿಟ್ಟುಕೊಂಡು ಸರ್ವೈಶ್ವರ್ಯಸಮನ್ವಿತನಾದ ಶಂಕರನು ಅಲ್ಲಿ ನೆಲಸಿರುವನು. ಗಂಗೆಯು ಸಕಲ ತೀರ್ಥಮಯವಾಗಿರುವುದು. ಶ್ರೀಹರಿಯು ಸರ್ವದೇವತೆಗಳ ಸನ್ನಿಧಿಯಾಗಿರುವನು.

೨೨. ವೇದವು ಸಕಲ ಯಜ್ಞಗಳನ್ನೊಳಕೊಂಡಿರುವುದು. ದಯೆಯಲ್ಲಿ ಇತರ ಸಕಲ ಧರ್ಮಗಳೂ ಅಡಗಿರುವುವು. ನದಿಗಳಲ್ಲಿ ಸರ್ವೋತ್ತಮವೆನಿಸಿದ ರೇವಾನದಿಯು ಭೂಲೋಕದಲ್ಲಿ ಮಹಾಪುಣ್ಯಪ್ರದವಾದುದು.

೨೩. ದೇವತೆಗಳಿರಾ! ಅದಕ್ಕಿಂತಲೂ ಕುರುಕ್ಷೇತ್ರವು ಹೆಚ್ಚುಹಿತಕರವಾಗಿರುವುದು. ಅದಕ್ಕೂ ಹತ್ತರಷ್ಟು ಪುಣ್ಯಪ್ರದವಾದುದೆಂದು ಉತ್ತಮತೀರ್ಥವಾದ ಪ್ರಯಾಗಕ್ಷೇತ್ರವನ್ನು ನಾನು ತಿಳಿದಿರುವೆನು.

೨೪. ಅದರ ಹತ್ತರಷ್ಟು ಮಹಿಮೆಯನ್ನು ಕಾಶಿಯು ತಳೆದಿರುವುದು. ಕಾಶಿಗಿಂತ ಹತ್ತರಷ್ಟು ಗಯೆಯು ಕೊಡುವುದು. ಪರಮಪುಣ್ಯಪ್ರದವಾದ ಕುಶಸ್ಥಳಿಯು ಅದಕ್ಕೂ ಹತ್ತುಗುಣದಿಂದ ಉತ್ತಮವಾದುದೆಂದು ಹೇಳುವರು.

ಉಪರಾಗಸಹಸ್ರಾಣಿ ವ್ಯತಿಪಾತಾಽಯುತಾನಿ ಚ ।
ಅಮಾಲಕ್ಷಂ ತು ಏತಸ್ಯಾಃ ಕಲಾಂ ನಾಽರ್ಹಂತಿ ಷೋಡಶೀಂ ॥ ೨೫ ॥
ಲಕ್ಷಮಿಂದುಕ್ಷಯೇ ದಾನಂ ಸಹಸ್ರಂ ಚಾಽಯನದ್ವಯೇ ।
ವ್ಯತೀಪಾತೇ ಚ ಕೋಟಿಃ ಸ್ಯಾದ್ರಾಕಾನಾಂ ಚ ಹ್ಯನಂತಕಂ ॥ ೨೬ ॥
ತಸ್ಮಾದ್ಧಿತಕರಾ ದೇವಾ ಪುರೀ ಹ್ಯೇಷಾ ಕುಶಸ್ಥಲೀ ।
ಅನಂತಾನಂತಸಂಖ್ಯಾತಂ ದಾನಂ ಕಿಂಚಿತ್ಕೃತಂ ನರೈಃ ॥ ೨೭ ॥
ತತ್ಸರ್ವಂ ಭೋಃ ಸುರಶ್ರೇಷ್ಠಾಃ ಸರ್ವಂ ತಚ್ಚಾಽಕ್ಷಯಂ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ಯೂಯಂ ಯಾತ ಹಿ ಮಾ ಚಿರಂ ॥ ೨೮ ॥
ಕ್ಷೀಣಪುಣ್ಯಾ ಭವಂತೋ ವೈ ಬಾಧಂತೇ ತೇನ ವಃ ಸುರಾಃ ।
ಮಹಾಕಾಲವನೇ ರಮ್ಯೇ ಪುರೀ ಹ್ಯೇಷಾ ಕುಶಸ್ಥಲೀ ॥ ೨೯ ॥
ತತ್ರ ಗತ್ವಾ ಭವಂತೋ ವೈ ಸ್ನಾನದಾನಾದಿಕಂ ಭುವಿ ।
ಆಚರಧ್ವಂ ಸುವಿಧಿನಾ ಪುಣ್ಯಾತ್ಸ್ವರ್ಗಮವಾಪ್ಸ್ಯಥ ॥ ೩೦ ॥

---

೨೫. ಒಂದು ಸಾವಿರ ಗ್ರಹಣಗಳನ್ನೂ, ಹತ್ತುಸಾವಿರ ವ್ಯತೀಪಾತಗಳನ್ನೂ, ಒಂದು ಲಕ್ಷ ಅಮಾವಾಸ್ಯೆಗಳನ್ನೂ ಸಾಂಗವಾಗಿ ನೆರವೇರಿಸಿದರೂ ಈ ಕ್ಷೇತ್ರದ ಸೇವೆಯ ಹದಿನಾರನೆಯ ಭಾಗವನ್ನೂ ಹೋಲಲಾರದು.

೨೬. ಒಂದು ಲಕ್ಷ ಅಮಾವಾಸ್ಯೆಗಳಲ್ಲಿಯೂ, ಸಾವಿರ ಉತ್ತರಾಯಣ, ದಕ್ಷಿಣಾಯನ ಪುಣ್ಯಕಾಲಗಳಲ್ಲಿಯೂ, ಕೋಟಿ ವ್ಯತೀಪಾತಗಳಲ್ಲಿಯೂ, ಸಂಖ್ಯೆಯಿಲ್ಲದ ಪೌರ್ಣಮಿಗಳಲ್ಲಿಯೂ ದಾನಗಳನ್ನು ಮಾಡಬಹುದು.

೨೭. ದೇವತೆಗಳಿರಾ! ಅವುಗಳೆಲ್ಲಕ್ಕಿಂತಲೂ ಒಮ್ಮೆ ಈ ಕುಶಸ್ಥಳಿಯ ಸೇವೆಯು ಹಿತಕರವಾದುದು. ಅಲ್ಲಿ ನರರು ಮಾಡಿದ ಅತ್ಯಲ್ಪವಾದ ದಾನವೂ ಅನಂತಾನಂತಗುಣಿತವಾಗಿ ಫಲವನ್ನು ಕೊಡುವುದು.

೨೮. ಸುರೋತ್ತಮರಿರಾ! ಅಲ್ಲಿ ಮಾಡಿದ ಸಕಲ ಕರ್ಮವೂ ಅಕ್ಷಯ ಫಲದಾಯಕವು. ಆದುದರಿಂದ ನೀವೆಲ್ಲರೂ ಕಾಲವಿಳಂಬವನ್ನು ಮಾಡದೆ ಆ ಕ್ಷೇತ್ರ ಶ್ರೇಷ್ಠವನ್ನು ಸರ್ವಪ್ರಯತ್ನದಿಂದಲೂ ಹೋಗಿ ಸೇರಿರಿ.

೨೯. ನಿಮ್ಮ ಪುಣ್ಯವು ನಾಶವಾಗಿರುವುದರಿಂದಲೇ ರಾಕ್ಷಸರು ನಿಮ್ಮನ್ನು ಹಿಂಸೆಗೊಳಿಸುತ್ತಿರುವರು. ಈ ಕುಶಸ್ಥಳಿಯೆಂಬ ಪಟ್ಟಣವು ರಮ್ಯವಾದ ಮಹಾಕಾಲವನದಲ್ಲಿರುವುದು.

೩೦. ಭೂಲೋಕಕ್ಕೆ ಹೋಗಿ ಅಲ್ಲಿ ನೀವೆಲ್ಲರೂ ಸ್ನಾನ, ದಾನಗಳೇ ಮುಂತಾದ ಪುಣ್ಯಕರ್ಮಗಳನ್ನು ವಿಧಿಗನುಸಾರವಾಗಿ ಮಾಡಿರಿ. ಆ ಪುಣ್ಯದ ಪ್ರಭಾವದಿಂದ ಪುನಃ ಸ್ವರ್ಗಲೋಕವನ್ನು ಹೋಗಿ ಸೇರುವಿರಿ.

ಏತಚ್ಛ್ರುತ್ವಾ ವಚಸ್ತಸ್ಯಾ ವಾಣ್ಯಾಶ್ಚಾಕಾಶಗಂ ತದಾ ।
ಪ್ರಣಮ್ಯ ಶಿರಸಾ ತಸ್ಯೈ ಬ್ರಹ್ಮೇಶಾನಪುರೋಗಮಾಃ ॥ ೩೧ ॥
ಪುನರ್ಜಗ್ಮುಃ ಸುರಾಃ ಸರ್ವೇ ಯತ್ರ ಮಾಹೇಶ್ವರಂ ವನಂ ।
ಪುರೀಂ ಚೈವ ದ್ವಿಜಶ್ರೇಷ್ಠ ಸರ್ವಕಾಮಫಲಪ್ರದಾಂ ॥ ೩೨ ॥
ಚಾತುರ್ವರ್ಣ್ಯಸಮಾಕೀರ್ಣಾಮೃಷಿಗಂಧರ್ವಸೇವಿತಾಂ ।
ಪುಣ್ಯವದ್ಭಿರ್ಜನೈಃ ಪೂರ್ಣಾಂ ಸಿದ್ಧಚಾರಣಸೇವಿತಾಂ ॥ ೩೩ ॥
ದರಿದ್ರೋ ನ ಜಡೋ ಮೂರ್ಖೋ ನ ರೋಗೀ ನ ಚ ಮತ್ಸರೀ ।
ನ ವ್ಯಾಧಿತೋ ನಾಽಪಕಾರೀ ಜನಃ ಕ್ವಚಿತ್ಪ್ರದೃಶ್ಯತೇ ॥ ೩೪ ॥
ದಾಂತಾಃ ಶಾಂತಾಃ ಸುಶೀಲಾಶ್ಚ ಜರಾರೋಗವಿವರ್ಜಿತಾಃ ।
ಸ್ವಧರ್ಮನಿರತಾ ನಿತ್ಯಂ ಸದಾಚಾರಾಽತಿಥಿಪ್ರಿಯಾಃ ॥ ೩೫ ॥
ನರಾ ಯತ್ರ ನಿವಸಂತಿ ನಾರ್ಯಶ್ಚೈವ ಪತಿವ್ರತಾಃ ।
ಮಹೋತ್ಸವಾಃ ಸುಗೀತಾನಿ ಹವ್ಯಂ ಕವ್ಯಂ ಗೃಹೇ ಗೃಹೇ ॥ ೩೬ ॥

---

೩೧. ಆಕಾಶಮಧ್ಯದಿಂದ ಕೇಳಿಬಂದ ಈ ಮಾತುಗಳನ್ನು ಕೇಳಿ ಬ್ರಹ್ಮ, ಮಹೇಶ್ವರರೇ ಮುಂತಾದ ದೇವತೆಗಳೆಲ್ಲರೂ ಅಶರೀರಿಯಾದ ಆ ಪರದೇವತೆಗೆ ಶಿರಸಾಷ್ಟಾಂಗನಮಸ್ಕಾರವನ್ನು ಮಾಡಿದರು.

೩೨. ಬ್ರಾಹ್ಮಣೋತ್ತಮನೆ! ಆ ಆಕಾಶವಾಣಿಯ ಮಾತಿನಂತೆ ಅವರೆಲ್ಲರೂ ಮಹೇಶ್ವರನಿಗೆ ಪ್ರಿಯವಾದ ಮಹಾಕಾಲವನವೂ, ಅದರಲ್ಲಿರುವ ಸಕಲ ಕಾಮ ಪ್ರದಾಯಕವಾದ ನಗರವೂ ಇರುವಲ್ಲಿಗೆ ಹೋದರು.

೩೩. ಆ ಪಟ್ಟಣವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಂದ ತುಂಬಿ ದುದಾಗಿ ಮಹರ್ಷಿಗಳು ಮತ್ತು ಗಂಧರ್ವರಿಂದ ಸೇವಿತವೆನಿಸಿದ್ದಿತು. ಅಲ್ಲಿರುವ ಸಕಲರೂ ಪುಣ್ಯವಂತರಾದ ಜನರೇ. ಸಿದ್ಧರೂ, ಚಾರಣರೂ ಆ ಕ್ಷೇತ್ರವನ್ನು ಸೇವಿಸುತ್ತಿದ್ದರು.

೩೪. ಆ ನಗರಿಯಲ್ಲಿ ಅಲಸನಾಗಲಿ, ಮೂರ್ಖನಾಗಲಿ, ರೋಗಿಯಾಗಲಿ, ಅಸೂಯಾಪರನಾಗಲಿ, ವ್ಯಾಧಿಪೀಡಿತನಾಗಲಿ, ಅಪಕಾರವನ್ನು ಮಾಡುವವ ನಾಗಲಿ ಒಬ್ಬನೂ ಕಾಣುತ್ತಿರಲಿಲ್ಲ.

೩೫. ಅಲ್ಲಿನ ನಿವಾಸಿಗಳೆಲ್ಲರೂ ಇಂದ್ರಿಯನಿಗ್ರಹವುಳ್ಳವರೂ, ಪ್ರಶಾಂತರೂ, ಸೌಶೀಲ್ಯವುಳ್ಳವರೂ, ಮುಪ್ಪುರೋಗಗಳಿಲ್ಲದವರೂ, ತಮ್ಮತಮ್ಮ ವರ್ಣಾಶ್ರಮ ಧರ್ಮಗಳಲ್ಲಿ ನಿರತರಾದವರೂ, ಯಾವಾಗಲೂ ಸದಾಚಾರಗಳಲ್ಲಿಯೂ ಅತಿಥಿ ಸತ್ಕಾರಗಳಲ್ಲಿಯೂ ಶ್ರದ್ಧೆಯುಳ್ಳವರೂ ಆಗಿದ್ದರು.

೩೬. ಅಲ್ಲಿ ನರರು ಏಕಪತ್ನೀವ್ರತಪರರೂ, ಸ್ತ್ರೀಯರು ಪತಿವ್ರತೆಯರೂ ಆಗಿದ್ದರು, ಪ್ರತಿಯೊಂದು ಮನೆಯಲ್ಲಿಯೂ ಮಹೋತ್ಸವಗಳೂ, ಗೀತನೃತ್ಯ ಗಳೂ, ದೇವಪಿತೃಕರ್ಮಗಳೂ ನಡೆಯುತ್ತಿದ್ದುವು.

ಈದೃಶೀಂ ಚ ಪುರೀಂ ದೃಷ್ಟ್ವಾ ದೇವಾ ಹರ್ಷಂ ಪರಂ ಗತಾಃ ।
ತತ್ರ ತೀರ್ಥಂ ಸಮಾಖ್ಯಾತಂ ನಾಮ್ನಾ ಪೈಶಾಚಮೋಚನಂ ॥ ೩೭ ॥
ಪುಣ್ಯವದ್ಭಿಃ ಸದಾ ಸೇವ್ಯಂ ಸರ್ವತೀರ್ಥನಿಷೇವಿತಂ ।
ತಸ್ಮಿನ್ ಸ್ನಾತ್ವಾ ಚ ಜಪ್ತ್ವಾ ಚ ಹುತ್ವಾ ದತ್ವಾ ಚ ದೇವತಾಃ ॥ ೩೮ ॥
ಪುಣ್ಯಂ ಚಾಽಥಾಽಕ್ಷಯಂ ಲಬ್ಧ್ವಾ ಪುನರ್ಯಾತಾಃ ಸುರಾಲಯಂ ।
ಜಿತ್ವಾಽಸುರಾನ್ ಮಹಾದುಷ್ಟಾನ್ ಸ್ಥಾನಂ ಪ್ರಾಪ್ತಾಃ ಸ್ವಕಂ ಸ್ವಕಂ॥ ೩೯॥
ಯೇಽಸ್ಯಾಂ ಕುರ್ಯುರ್ಮಹಾಭಾಗಾಃ ಸ್ನಾನಂ ದಾನಂ ತಥಾರ್ಚನಂ ।
ಹವನಂ ತರ್ಪಣಂ ಪಿತ್ರೂಂಸ್ತತ್ಸರ್ವಂ ಸ್ಯಾದ್ಧ್ಯನಂತಕಂ ॥ ೪೦ ॥
ತಸ್ಮಾತ್ಸರ್ವಪ್ರಯತ್ನೇನ ಏತತ್ಕಾರ್ಯಂ ಸದಾ ಬುಧೈಃ ।
ದೇವತೀರ್ಥೌಷಧೀಬೀಜಭೂತಾನಾಂ ಚೈವ ಪಾಲನಂ ॥ ೪೧ ॥
ಕಲ್ಪೇ ಕಲ್ಪೇ ಚ ಯಸ್ಯಾಂ ವೈ ತೇನಾಽವಂತೀ ಪುರೀ ಸ್ಮೃತಾ ।
ಅದ್ಯ ಪ್ರಭೃತಿ ಪುರೀ ಹ್ಯೇಷಾ ನಾಮ್ನಾಽವಂತೀ ಕುಶಸ್ಥಲೀ ॥ ೪೨ ॥

---

೩೭. ಇಂತಹ ನಗರಿಯನ್ನು ನೋಡಿ ದೇವತೆಗಳು ಅಮಿತಾನಂದಭರಿತರಾದರು. ಅಲ್ಲಿ ಪಿಶಾಚಮೋಚನವೆಂಬ ಹೆಸರಿನಿಂದ ಪ್ರಖ್ಯಾತವಾದ ಒಂದು ತೀರ್ಥವಿರುವುದು.

೩೮–೩೯. ಆ ತೀರ್ಥವು ಪುಣ್ಯವಂತರಿಗೆ ಸೇವಾರ್ಹವಾಗಿ ಸಕಲ ತೀರ್ಥಗಳಿಂದಲೂ ಸೇವಿತನಾಗಿರುವುದು. ದೇವತೆಗಳು ಅದರಲ್ಲಿ ಸ್ನಾನಮಾಡಿ ಜಪ, ಹೋಮ, ದಾನಗಳನ್ನು ಸಾಂಗವಾಗಿ ನೆರವೇರಿಸಿ ಅನಂತವಾದ ಪುಣ್ಯವನ್ನು ಸಂಪಾದಿಸಿಕೊಂಡು ಮತ್ತೆ ಸ್ವರ್ಗಲೋಕಕ್ಕೆ ಹೋದರು. ಮತ್ತು ಮಹಾದುಷ್ಟರಾದ ರಾಕ್ಷಸರನ್ನೆಲ್ಲ ಯುದ್ಧದಲ್ಲಿ ಜಯಿಸಿ ತಮ್ಮ ತಮ್ಮ ಸ್ಥಾನಗಳನ್ನೂ ಹೊಂದಿದರು.

೪೦. ಯಾವ ಮಹಾಭಾಗ್ಯಶಾಲಿಗಳು ಈ ಕ್ಷೇತ್ರದಲ್ಲಿ ಸ್ನಾನ, ದಾನ, ಪೂಜೆ, ಹೋಮ, ಪಿತೃತರ್ಪಣ ಮುಂತಾದುವನ್ನು ಮಾಡುವರೊ, ಆ ಕಾರ್ಯವೆಲ್ಲವೂ ಅನಂತಗುಣಿತವಾದ ಫಲವನ್ನು ಕೊಡುವುದು.

೪೧–೪೨. ಆದುದರಿಂದ ನಿತ್ಯವೂ ಸರ್ವಪ್ರಯತ್ನದಿಂದಲೂ ಪ್ರಾಜ್ಞರಾದವರು ಈ ಕಾರ್ಯಗಳನ್ನು ಮಾಡಬೇಕು. ಹೀಗೆ ಪ್ರತಿಯೊಂದು ಕಲ್ಪದ ಕೊನೆಯಲ್ಲಿಯೂ ದೇವತೆಗಳು, ತೀರ್ಥಗಳು, ವನಸ್ಪತಿಗಳು ಮುಂತಾದುವುಗಳಿಗೆ ಮುಂದಿನ ಕಲ್ಪದಲ್ಲಿ ಬೇಕಾಗುವ ಬೀಜಗಳನ್ನು ಇಲ್ಲಿಯೇ ಇರಿಸಿ ಪರಮೇಶ್ವರನು ಪಾಲಿಸುತ್ತಿರುವುದರಿಂದ ಈ ಕ್ಷೇತ್ರಕ್ಕೆ ಅವಂತಿಯೆಂಬ ಹೆಸರುಂಟಾಯಿತು. ಇಂದು ಮೊದಲುಗೊಂಡು ಈ ಕುಶಸ್ಥಳಿಯು ಅವಂತೀ ನಗರಿಯೆಂಬ ನಾಮವನ್ನು ಪಡೆಯಲಿ.

ಇತ್ಯುಕ್ತ್ವಾ ವೈ ತದಾ ದೇವಾಃ ಸ್ವಧಾಮ ಪರಮಂ ಗತಾಃ ।
ತದಾರಭ್ಯ ದ್ವಿಜಶ್ರೇಷ್ಠ ಹ್ಯವಂತೀ ಭುವಿ ವಿಶ್ರುತಾ ॥ ೪೩ ॥
ಯ ಏತಾಂ ಸುಕಥಾಂ ದಿವ್ಯಾಂ ಪುಣ್ಯಾಂ ಚ ಪಾಪಹಾರಿಣೀಂ ।
ಶೃಣುಯಾಚ್ಛ್ರಾವಯೇದ್ಯೋ ವೈ ಸರ್ವಪಾಪೈಃ ಸ ಮುಚ್ಯತೇ ॥ ೪೪ ॥
ಅಪುತ್ರೋ ಲಭತೇ ಪುತ್ರಮಧನೋ ಧನಮಾಪ್ನುಯಾತ್ ।
ವಾಜಪೇಯಸಹಸ್ರಾಣಾಂ ರಾಜಸೂಯಶತಾಧಿಕಂ ॥ ೪೫ ॥
ಪುಣ್ಯಂ ಲಬ್ಧ್ವಾ ನರೋ ನಿತ್ಯಂ ಶಿವಲೋಕೇ ಮಹೀಯತೇ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅವಂತ್ಯಭಿಧಾನ ಕಥಾವರ್ಣನಂ"ನಾಮ ದ್ವಿಚತ್ವಾರಿಂಶೋऽಧ್ಯಾಯಃ

---

೪೩. ಇಂತೆಂದು ದೇವತೆಗಳೆಲ್ಲರೂ ತಮ್ಮ ದಿವ್ಯ ನಿವಾಸಕ್ಕೆ ಹೊರಟು ಹೋದರು. ಎಲೈ ದ್ವಿಜೋತ್ತಮನೆ! ಅಂದಿನಿಂದ ಈ ನಗರಿಯು ಅವಂತಿ ಯೆಂದು ಪ್ರಖ್ಯಾತವಾಗಿರುವುದು.

೪೪. ಯಾವನು ದಿವ್ಯವೂ, ಪುಣ್ಯಪ್ರದವೂ, ಪಾಪಪರಿಹಾರಕವೂ ಆದ ಈ ಸತ್ಕಥೆಯನ್ನು ಕೇಳುವನೊ ಮತ್ತು ಇತರರಿಗೆ ಕೇಳಿಸುವನೊ, ಅವನು ಸಕಲ ಪಾಪಗಳನ್ನೂ ಕಳೆದುಕೊಳ್ಳುವನು.

೪೫–೪೬. ಸಂತತಿಹೀನನಾದವನು ಸತ್ಪುತ್ರನನ್ನೂ, ಧನಹೀನನು ಐಶ್ವರ್ಯವನ್ನೂ ಪಡೆಯುವರು. ಒಂದು ಸಾವಿರ ವಾಜಪೇಯಗಳನ್ನೂ ಒಂದು ನೂರು ರಾಜಸೂಯಗಳನ್ನೂ ಮಾಡುವುದಕ್ಕಿಂತಲೂ ಹೆಚ್ಚಿನ ಪುಣ್ಯವನ್ನು ಪಡೆದು ಅಂತಹ ನರನು ಶಿವಲೋಕದಲ್ಲಿ ಸರ್ವೋತ್ತಮನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅವಂತೀನಾಮಕಥಾನುವರ್ಣನ"ವೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಚತ್ವಾರಿಂಶೋಽಧ್ಯಾಯಃ

### ಉಜ್ಜಯಿನ್ಯಭಿಧಾನಕಥನಂ

ಸನತ್ಕುಮಾರ ಉವಾಚ :—

ಏತಸ್ಮಿನ್ನಂತರೇ ವ್ಯಾಸ ಯಥೋಜ್ಜಯಿನೀ ಸ್ಮೃತಾ ಪುರೀ ।
ತಥಾಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವ ತ್ವಂ ಸಮಾಹಿತಃ ॥ ೧ ॥
ತ್ರಿಪುರಾಖ್ಯೋ ಮಹಾದೈತ್ಯಃ ಸರ್ವದೈತ್ಯಜನೇಶ್ವರಃ ।
ತಪಸ್ತೇಪೇ ಸುದುರ್ಧರ್ಷಂ ಬ್ರಹ್ಮಣಸ್ತುಷ್ಟಿಕಾರಣಾತ್ ॥ ೨ ॥
ಆತಪೇ ಚಾಽಗ್ನಿ ಸೇವಾಂ ವೈ ಪ್ರಾವೃಷಿ ಮೇಘಡಂಬರಂ ।
ದಮಯಿತ್ವಾ ತದಾತ್ಮಾನಂ ಶೀತಕಾಲೇ ಜಲಾಶಯೇ ॥ ೩ ॥
ಶೀರ್ಣಪತ್ರಜಲಾಹಾರೋ ವಾಯುಭಕ್ಷೀ ನಿರಾಶ್ರಯಃ ।
ಗಾಯತ್ರೀವ್ರತಮಾಸ್ಥಾಯ ತ್ಯಕ್ತಸರ್ವಪರಿಗ್ರಹಃ ॥ ೪ ॥
ಏವಂ ವರ್ಷಸಹಸ್ರಂ ತು ತಪಸ್ತಪ್ತಂ ಸುದುಸ್ತರಂ ।
ಪೂರ್ಣೇ ವರ್ಷಸಹಸ್ರೇ ತು ಬ್ರಹ್ಮಾ ಪ್ರೀತತಮೋಽಬ್ರವೀತ್ ॥ ೫ ॥

---

## ಕನ್ನಡದ ಅನುವಾದ

### ಉಜ್ಜಯಿನ್ಯಭಿಧಾನಕಥನ

೧. ಸನತ್ಕುಮಾರನು ಹೇಳುತ್ತಾನೆ :—ವ್ಯಾಸನೆ! ಒಂದಾನೊಂದು ಕಾಲದಲ್ಲಿ ಈ ಕ್ಷೇತ್ರಕ್ಕೇ ಉಜ್ಜಯಿನಿಯೆಂಬ ಹೆಸರಾಯಿತು. ಅದಕ್ಕೆ ಕಾರಣವನ್ನು ಹೇಳುವೆನು. ಏಕಾಗ್ರಚಿತ್ತದಿಂದ ಕೇಳು.

೨. ಸಕಲ ದೈತ್ಯರಿಗೊಡೆಯನೂ, ಮಹಾದೈತ್ಯನೂ ಆದ ತ್ರಿಪುರಾಸುರನೆಂಬುವನು ಚತುರ್ಮುಖನನ್ನು ಸಂತೋಷಪಡಿಸಲು ಅತ್ಯುಗ್ರವಾದ ತಪಸ್ಸನ್ನು ಮಾಡತೊಡಗಿದನು.

೩. ಗ್ರೀಷ್ಮಕಾಲದಲ್ಲಿ ಪಂಚಾಗ್ನಿಗಳನ್ನು ಸೇವಿಸುತ್ತಿದ್ದನು. ವರ್ಷರ್ತುವಿನಲ್ಲಿ ದಿಗಂಬರನಾಗಿ ನೆನೆಯುತ್ತಿದ್ದನು. ಶೀತಕಾಲದಲ್ಲಿ ಕತ್ತಿನವರೆಗೂ ನೀರಿನಲ್ಲಿ ಮುಳುಗಿ ದೇಹವನ್ನು ದಂಡಿಸಿದನು.

೪. ಕೆಲವು ದಿನಗಳು ತರಗೆಲೆಗಳನ್ನೂ, ಬಳಿಕ ಜಲವನ್ನೂ, ಬಳಿಕ ವಾಯುವನ್ನೂ ಸೇವಿಸುತ್ತ ಕಡೆಗೆ ನಿರಾಹಾರಿಯಾದನು. ಗಾಯತ್ರಿಯ ಜಪದ ವ್ರತವನ್ನು ಸ್ವೀಕರಿಸಿ ಸಕಲ ವಿಧವಾದ ಪ್ರತಿಗ್ರಹವನ್ನೂ ದೂರಮಾಡಿದನು.

೫. ಇಂತು ಒಂದು ಸಾವಿರ ವರ್ಷದವರೆಗೂ ದುಶ್ಚರವಾದ ತಪಸ್ಸನ್ನು ಮಾಡುತ್ತಿದ್ದನು. ಒಂದು ಸಾವಿರ ವರ್ಷಗಳು ಕಳೆಯಲು ಅವನ ತಪಸ್ಸಿನಿಂದ ಸುಪ್ರೀತನಾದ ಬ್ರಹ್ಮನು ಅವನನ್ನು ಕುರಿತು ಇಂತೆಂದನು.

ವ್ರಿಯತಾಂ ಭೋಽಸುರಶ್ರೇಷ್ಠ ವರಂ ಮತ್ತೋಽಭಿವಾಂಛಿತಂ ।
ತತ್ಸರ್ವಂ ಸಾಂಪ್ರತಂ ಲೋಕೇ ವರಂ ತುಭ್ಯಂ ದದಾಮಿ ವೈ ॥ ೬ ॥
ಏವಮುಕ್ತಃ ಸ ವಿಧಿನಾ ದೈತ್ಯಸ್ತ್ರಿಪುರಸಂಜ್ಞಿತಃ ।
ಉವಾಚ ವಚನಂ ಸದ್ಯೋ ಬ್ರಹ್ಮಾಣಂ ಸಂಶಿತವ್ರತಂ ॥ ೭ ॥

ತ್ರಿಪುರ ಉವಾಚ :—

ಯದಿ ತುಷ್ಟಮನಾ ಬ್ರಹ್ಮನ್ವರಂ ಮೇ ದಾತುಮಿಚ್ಛಸಿ ।
ದೇವದಾನಗಂಧರ್ವಪಿಶಾಚೋರಗರಾಕ್ಷಸೈಃ ।
ಅವಧ್ಯೋಽಹಂ ಸದಾ ಭೂಯಾಂ ವರಮೇತದ್ವೃಣೋಮ್ಯಹಂ ॥ ೮ ॥

ಬ್ರಹ್ಮೋವಾಚ :—

ಏವಂ ಭವತು ಭೋ ವತ್ಸ ವಿಚರಸ್ವಾಽಕುತೋಭಯಃ ।
ಇತ್ಯುಕ್ತ್ವಾ ಸಹಸಾ ಬ್ರಹ್ಮಾ ತತ್ರೈವಾಽಂತರಧೀಯತ ॥ ೯ ॥
ತದಾರಭ್ಯ ಮಹಾದೈತ್ಯೋ ದೇವಾನಾಂ ಕದನಂ ಮಹತ್ ।
ಚಕಾರ ಕೋಪಪೂರ್ಣೋ ವೈ ಪೂರ್ವವೈರಮನುಸ್ಮರನ್ ॥ ೧೦ ॥

---

೬. "ಅಸುರಶ್ರೇಷ್ಠನೆ! ನನ್ನಿಂದ ನಿನಗೆ ಅಪೇಕ್ಷಿತವಾದ ವರವನ್ನು ಕೇಳಿಕೊ. ಲೋಕದಲ್ಲಿರುವ ಸಕಲ ವಸ್ತುಗಳಲ್ಲಿ ಯಾವ ವಸ್ತುವನ್ನು ಕೇಳಿದರೂ ನಿನಗೆ ಈಗಲೇ ಕೊಡಲಿರುವೆನು."

೭. ಇಂತು ಬ್ರಹ್ಮನಿಂದ ಹೇಳಲ್ಪಟ್ಟ ತ್ರಿಪುರನೆಂಬ ಆ ರಾಕ್ಷಸನು ವ್ರತ ನಿರತನಾಗಿದ್ದ ಬ್ರಹ್ಮದೇವನಿಗೆ ಈ ಮಾತುಗಳನ್ನು ಬಿನ್ನವಿಸಿದನು.

೮. ತ್ರಿಪುರನು ಹೇಳುತ್ತಾನೆ:—ಚತುರ್ಮುಖನಾದ ಬ್ರಹ್ಮನೆ! ನೀನು ನನ್ನಲ್ಲಿ ಸಂತುಷ್ಟನಾಗಿದ್ದರೆ, ನನಗೆ ವರವನ್ನು ಕೊಡಲಿಚ್ಛಿಯಿದ್ದರೆ ಒಂದು ವರವನ್ನು ಯಾಚಿಸುವೆನು. ದೇವತೆಗಳು, ದಾನವರು, ಗಂಧರ್ವರು, ಪಿಶಾಚರು, ನಾಗರು, ರಾಕ್ಷಸರು—ಇವರಲ್ಲಿ ಯಾರಿಂದಲೂ ನನಗೆ ಮರಣವು ಸಂಭವಿಸ ಬಾರದು.

೯. ಬ್ರಹ್ಮನು ಹೇಳುತ್ತಾನೆ:—"ಮಗನೆ! ಹಾಗೆಯೇ ಆಗಲಿ. ಯಾವ ಭಯವೂ ಇಲ್ಲದಂತೆ ಯಥೇಚ್ಛವಾಗಿ ವಿಹರಿಸುತ್ತಿರು." ಇಂತೆಂದು ಹೇಳಿ ಬ್ರಹ್ಮನು ಆ ಕ್ಷಣದಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೧೦. ಅಂದು ಮೊದಲಾಗಿ ಆ ಮಹಾದೈತ್ಯನು ಹಿಂದಿನ ವೈರವನ್ನು ಸ್ಮರಿಸಿ ಕೊಂಡು ಕೋಪಾವಿಷ್ಟನಾಗಿ ದೇವತೆಗಳೊಡನೆ ಭಯಂಕರವಾದ ಯುದ್ಧವನ್ನು ಮಾಡತೊಡಗಿದನು.

ವಾಸಯಿತ್ವಾ ಯತ್ರ ತತ್ರ ತ್ರಿಪುರಾಣಿ ಚರಾಣಿ ಚ ।
ಅತ್ರವಾಸಕೃತಃ ಸರ್ವೇ ವರ್ಣಾಶ್ರಮಪರಾ ಜನಾಃ ॥ ೧೧ ॥
ತೇಷಾಂ ವೈ ಕದನಂ ಚಕ್ರೇ ನಾನೋಪಾಯೇನ ಪಾಪಧೀಃ ।
ತಸ್ಮಿನ್ಪುರೇ ದುಷ್ಟವಾಸೇ ಬ್ರಾಹ್ಮಣಾ ವೇದಪಾರಗಾಃ ॥ ೧೨ ॥
ನ ಜುಹುಯುಶ್ಚಾಽಗ್ನಿಹೋತ್ರಂ ಸೋಮಪಾನಂ ನ ಕರ್ಹಿಚಿತ್ ।
ಕುತಶ್ಚಿತ್ಸುಕೃತಂ ಕರ್ಮ ಜನಾಃ ಕುರ್ವಂತಿ ನೋ ಮುನೇ ॥ ೧೩ ॥
ಸ್ವಾಹಾಕಾರಸ್ವಧಾಕಾರವಷಟ್ಕಾರವಿವರ್ಜಿತಾಃ ।
ನೋತ್ಸವೋ ದೃಶ್ಯತೇ ಗೇಹೇ ಕಸ್ಯಚಿದ್ಭುವಿ ವಿಸ್ತೃತಃ ॥ ೧೪ ॥
ದೇವತಾಯತನಂ ನಾಽಸ್ತಿ ತಥಾ ನೋ ಶಿವಪೂಜನಂ ।
ನಾಽಸ್ತಿ ಯಜ್ಞೋ ನ ದಾನಾನಿ ನ ಗೋಬ್ರಾಹ್ಮಣಪೂಜನಂ ॥ ೧೫ ॥
ಸದಾಚಾರಜನೋ ನಾಽಸ್ತಿ ದಯಾ ಮಾನವಿವರ್ಜಿತಾ ।
ನ ದಾನೀ ನೋಪಕಾರೀ ಚ ತಪಸ್ವೀ ನೈವ ದೃಶ್ಯತೇ ॥ ೧೬ ॥

---

೧೧. ಚಲಿಸಲು ಶಕ್ತಿಯುಳ್ಳ ತನ್ನ ಮೂರು ನಗರಗಳನ್ನು ಇಷ್ಟಬಂದೆಡೆಯಲ್ಲಿ ನಿಲ್ಲಿಸಿಕೊಂಡು ಸುತ್ತುಮುತ್ತಿನಲ್ಲಿ ವರ್ಣಾಶ್ರಮಧರ್ಮ ನಿರತರಾಗಿರುವ ಸಮಸ್ತಜನರನ್ನೂ ಪೀಡಿಸತೊಡಗಿದನು.

೧೨–೧೩. ಪಾಪಬುದ್ಧಿಯುಳ್ಳ ಅವನು ಅನೇಕ ಉಪಾಯಗಳಿಂದ ಅವರೊಡನೆ ಯುದ್ಧವನ್ನು ಮಾಡುತ್ತಿದ್ದನು. ದುಷ್ಟರಿಗೆ ಆವಾಸವಾದ ಆ ಪ್ರದೇಶದಲ್ಲಿ ವೇದಪಾರಂಗತರಾದ ಬ್ರಾಹ್ಮಣೋತ್ತಮರು ಹೋಮವನ್ನಾಗಲಿ, ಅಗ್ನಿಹೋತ್ರವನ್ನಾಗಲಿ, ಸೋಮಪಾನವನ್ನಾಗಲಿ ಎಲ್ಲಿಯೂ ಮಾಡಲಾರದವರಾದರು. ಮುನಿಯೆ! ಎಲ್ಲಿಯೂ ಸಾಧಾರಣಜನರೂ ಯಾವ ಪುಣ್ಯಕರ್ಮವನ್ನೂ ಮಾಡುತ್ತಿರಲಿಲ್ಲ.

೧೪. ಎಲ್ಲರೂ ದೇವತೆಗಳು, ಪಿತೃಗಳು, ಭೂತಗಳಿಗೆ ಬಲಿಗಳನ್ನು ಕೊಡುವುದನ್ನು ಬಿಟ್ಟರು. ವಿಶಾಲವಾದ ಭೂಮಿಯಲ್ಲೆಲ್ಲಿಯೂ ಯಾರ ಮನೆಯಲ್ಲಿಯೂ ಉತ್ಸವಗಳನ್ನು ನಡೆಸುತ್ತಿರಲಿಲ್ಲ.

೧೫. ಆ ರಾಕ್ಷಸನ ಕೋಟಲೆಗೊಳಗಾದ ಪ್ರದೇಶದಲ್ಲಂತೂ ದೇವಾಲಯವಾಗಲಿ, ಶಿವಪೂಜೆಯಾಗಲಿ, ಯಜ್ಞವಾಗಲಿ, ದಾನಕರ್ಮವಾಗಲಿ, ಗೋಬ್ರಾಹ್ಮಣರ ಪೂಜೆಯಾಗಲಿ ಇರಲಿಲ್ಲ.

೧೬. ಸದಾಚಾರನಿರತರಾದ ಜನರಿಲ್ಲದಾದರು. ಅಭಿಮಾನರಹಿತವಾದ ದಯೆಯು ಲುಪ್ತವಾಯಿತು. ದಾತೃಗಳಾಗಲಿ, ಉಪಕಾರವಂತರಾಗಲಿ, ತಪಸ್ಸಂಪನ್ನರಾಗಲಿ ಎಲ್ಲಿಯೂ ಕಾಣುತ್ತಿರಲಿಲ್ಲ.

ಏವಂ ವ್ಯಾಸ ಪುರೇ ತಸ್ಮಿನ್ ನಷ್ಟಪ್ರಾಯಮಿದಂ ಜಗತ್ ।
ಪ್ರಜಾನಾಂ ಬ್ರಾಹ್ಮಣಾ ಮೂಲಂ ವೇದಮೂಲಾ ಹಿ ಬ್ರಾಹ್ಮಣಾಃ॥ ೧೭ ॥
ವೇದಮೂಲಪರಾ ಯಜ್ಞಾ ಯಜ್ಞಮೂಲಾ ಹಿ ದೇವತಾಃ ।
ತಸ್ಮಾದ್ವ್ಯಾಸ ಹತಂ ಸರ್ವಂ ಕೃತಂ ತೇನ ದುರಾತ್ಮನಾ ॥ ೧೮ ॥
ತೇನ ದೇವಗಣಾಃ ಸರ್ವೇ ಹತಪ್ರಾಯಾ ಹತೌಜಸಃ ।
ವಿಚರಂತಿ ಯಥಾ ಮರ್ತ್ಯಾ ಭುವಿ ತೇನ ಪರಾಜಿತಾಃ ॥ ೧೯ ॥
ಅನ್ಯೋನ್ಯಕೃತಸಂಧಾನಾ ಮಂತ್ರಂ ಕೃತ್ವಾ ಸಮಾಹಿತಾಃ ।
ಜಗ್ಮುಸ್ತೇ ತತ್ರ ಯತ್ರಾಸ್ತೇ ಪ್ರಜಾಪತಿರಕಲ್ಮಷಃ ॥ ೨೦ ॥
ತ್ರಿದಶಾಃ ಕಥಯಾಮಾಸುರಾತ್ಮವ್ಯಸನಕಾರಣಂ ।
ತಜ್ಜ್ಞಾತ್ವಾ ಸಹಸೋತ್ಥಾಯ ಬ್ರಹ್ಮಾ ಲೋಕಪಿತಾಮಹಃ ॥ ೨೧ ॥
ಜಗಾಮ ತ್ರಿದಶೈಃ ಸಾರ್ಧಂ ಮಹಾಕಾಲವನೋತ್ತಮಂ ।
ಯತ್ರಾಸ್ತೇ ಸತತಂ ದೇವ ಉಮಯಾ ಸಹಿತಃ ಶಿವಃ ॥ ೨೨ ॥

---

೧೭. ವ್ಯಾಸನೆ! ಇಂತು ಆ ರಾಕ್ಷಸೇಂದ್ರನ ನಗರಿಯಲ್ಲಿ ಸಕಲ ವ್ಯವಹಾರವೂ ಶೂನ್ಯವಾದಂತೆ ತೋರುತ್ತಿತ್ತು. ಪ್ರಜೆಗಳೆಲ್ಲರೂ ಬ್ರಾಹ್ಮಣರನ್ನಾಶ್ರಯಿಸಿರುವರಷ್ಟೆ. ಆ ಬ್ರಾಹ್ಮಣರು ವೇದಗಳನ್ನಾಶ್ರಯಿಸಿರುವರು.

೧೮. ಆ ವೇದಗಳು ಯಜ್ಞಾದಿಕರ್ಮಗಳನ್ನು ಬೋಧಿಸುತ್ತಿರುವುವು. ಯಜ್ಞಹವಿಸ್ಸುಗಳಿಂದಲೇ ದೇವತೆಗಳು ಸಂತೃಪ್ತರಾಗುವರು. ಎಲೈ ವ್ಯಾಸನೆ! ಆದುದರಿಂದ ಆ ದುರಾತ್ಮನ ಉಪಟಳದಿಂದ ಈ ಪರಂಪರೆಯೆಲ್ಲವೂ ನಾಶವನ್ನು ಹೊಂದಿತು.

೧೯. ಅದರಿಂದ ದೇವತೆಗಳೆಲ್ಲರೂ ಸತ್ತವರಂತೆ ನಿಸ್ತೇಜಸ್ಕರಾಗಿ ಆ ರಾಕ್ಷಸನ ಸೈನ್ಯದಿಂದ ಪರಾಭವವನ್ನು ಹೊಂದಿ ಭೂಲೋಕದಲ್ಲಿನ ಮಾನವರಂತೆ ಸಂಚರಿಸುತ್ತಿದ್ದರು.

೨೦. ಬಳಿಕ ಸಮಾಧಾನಮನಸ್ಸಿನಿಂದ ಒಬ್ಬೊಬ್ಬರನ್ನು ಕಲೆತು ಮಂತ್ರಾಲೋಚನೆಯನ್ನು ಮಾಡಿಕೊಂಡು ಸಕಲ ಪಾಪವಿದೂರನಾದ ಪ್ರಜಾಪತಿಯಿದ್ದಲ್ಲಿಗೆ ಹೊರಟರು.

೨೧–೨೨. ಅಲ್ಲಿ ದೇವತೆಗಳು ತಮಗೊದಗಿರುವ ಸಂಕಟದ ಕಾರಣವನ್ನು ವಿಜ್ಞಾಪಿಸಿಕೊಂಡರು. ಲೋಕಪಿತಾಮಹನಾದ ಚತುರ್ಮುಖನು ಅವರ ಸಂಕಟವನ್ನರಿತು ಸಂಭ್ರಮದಿಂದೆದ್ದು ಆ ದೇವತೆಗಳೊಡನೆಯೇ ಕೂಡಿ ಸರ್ವೋತ್ತಮವಾದ ಮಹಾಕಾಲವನಕ್ಕೆ ಬಂದು ಸೇರಿದನು. ಅಲ್ಲಿಯೇ ಪಾರ್ವತೀ ಸಮೇತನಾದ ಪರಮೇಶ್ವರನು ಸತತವೂ ವಾಸಮಾಡುತ್ತಿರುವನು.

ಯತ್ರಾಽವಂತೀ ಪುರೀ ದಿವ್ಯಾ ಸರ್ವತೀರ್ಥನಿಷೇವಿತಾ ।
ತತ್ರಾಽಽಗತ್ಯ ಸುರೈಃ ಸಾಕಂ ಸ್ವಯಂಭೂಶ್ಚತುರಾನನಃ ॥ ೨೩ ॥
ಸ್ನಾನಂ ದಾನಂ ಜಪಂ ಹೋಮಂ ಕೃತ್ವಾ ರುದ್ರಸರೇ ತದಾ ।
ಪೂಜಯಿತ್ವಾ ಮಹಾಕಾಲಂ ಬ್ರಹ್ಮಾ ವಚನಮಬ್ರವೀತ್ ॥ ೨೪ ॥

ಬ್ರಹ್ಮೋವಾಚ :—

ದೇವದೇವ ಮಹಾದೇವ ಭಕ್ತಾನಾಮಭಯಂಕರ ।
ಶ್ರೂಯತಾಂ ಭೋಃ ಸುರಶ್ರೇಷ್ಠ ದೇವಕಾರ್ಯಮನುತ್ತಮಂ ॥ ೨೫ ॥
ತ್ರಿಪುರೋ ನಾಮ ದೈತ್ಯೇಂದ್ರೋ ದೇವಾನಾಂ ಕದನಂ ಮಹತ್ ।
ಕರೋತಿ ಸತತಂ ದೈತ್ಯೋ ದೇವಬ್ರಾಹ್ಮಣನಿಂದಕಃ ॥ ೨೬ ॥
ವಾಸಯಿತ್ವಾ ಪುರಸ್ತಿಸ್ರೋ ವಿಸ್ತೀರ್ಣಾ ವಿಚರತ್ಯಥ ।
ತತ್ರ ಸ್ಥಿತಾನಿ ಭೂತಾನಿ ನಾಶಂ ಯಾಂತಿ ದುರಾತ್ಮನಾ ॥ ೨೭ ॥
ಏವಂ ಕೃತ್ವಾ ಪ್ರಜಾಃ ಸರ್ವಾಃ ಕ್ಷಯಂ ನೀತಾಶ್ಚರಾಚರಾಃ ।
ಉದ್ವಾಸಿತಾನಿ ದ್ವೀಪಾನಿ ಗ್ರಾಮಾಶ್ಚ ನಗರಾಣಿ ಚ ॥ ೨೮ ॥

---

೨೩–೨೪. ಅಲ್ಲಿಯೇ ಸಕಲ ತೀರ್ಥಗಳಿಂದ ಸೇವಿತವಾದ ದಿವ್ಯವಾದ ಅವಂತೀನಗರವಿರುವುದು. ದೇವತೆಗಳೊಡನೆ ಅಲ್ಲಿಗೆ ಬಂದು ಸ್ವಯಂಭುವಾದ ಚತುರ್ಮುಖನು ರುದ್ರಸರೋವರದಲ್ಲಿ ಸ್ನಾನ, ದಾನ, ಜಪ, ಹೋಮ ಮುಂತಾದುವುಗಳನ್ನು ಮಾಡಿಕೊಂಡು ಮಹಾಕಾಲನನ್ನು ಪೂಜಿಸಿ ಸ್ತೋತ್ರ ಮಾಡತೊಡಗಿದನು.

೨೫. ಬ್ರಹ್ಮನು ಹೇಳುತ್ತಾನೆ:—ದೇವೋತ್ತಮನೆ! ಮಹಾದೇವನೆ! ಭಕ್ತರಿಗೆ ಅಭಯವನ್ನೀಯುವ ಸುರಶ್ರೇಷ್ಠನೆ! ಬಹಳ ಆವಶ್ಯಕವಾಗಿ ಈಗ ನಡೆಯಬೇಕಾಗಿರುವ ದೇವಕಾರ್ಯವನ್ನು ಲಾಲಿಸು.

೨೬. ದೇವತೆಗಳನ್ನೂ ಬ್ರಾಹ್ಮಣರನ್ನೂ ಕಡೆಗಾಣುತ್ತಿರುವ ತ್ರಿಪುರನೆಂಬ ರಾಕ್ಷಸಶ್ರೇಷ್ಠನು ನಿರಂತರವೂ ದೇವತೆಗಳೊಡನೆ ಘೋರವಾದ ಸಂಗ್ರಾಮವನ್ನು ನಡೆಸುತ್ತಿರುವನು.

೨೭. ವಿಸ್ತಾರವಾದ ಮೂರು ಕೋಟೆಗಳುಳ್ಳ ತನ್ನ ಪುರವನ್ನು ಇಷ್ಟ ಬಂದೆಡೆಯಲ್ಲಿ ನೆಲದಮೇಲೆ ಇಳಿಸುವನು. ಆ ಪ್ರದೇಶದಲ್ಲಿರುವ ಸಕಲ ಪ್ರಾಣಿಗಳನ್ನೂ ಆ ದುರಾತ್ಮನು ನಾಶಗೊಳಿಸುವನು.

೨೮–೨೯. ಈ ವಿಧವಾಗಿ ಅವನು ಸ್ಥಾವರಜಂಗಮಗಳಾದ ಸಕಲ ಪ್ರಾಣಿಗಳನ್ನೂ ಕ್ಷಯಗೊಳಿಸುತ್ತಿರುವನು. ಭೂಲೋಕದ ಸಪ್ತದ್ವೀಪಗಳೂ, ಗ್ರಾಮಗಳೂ, ಪಟ್ಟಣಗಳೂ, ಮಹರ್ಷಿಗಳ ಆಶ್ರಮಗಳೂ, ಯತಿಗಳು ವಾಸ

ಋಷೀಣಾಮಾಶ್ರಮಾಃ ಸರ್ವೇ ಯತೀನಾಮಾಯತನಾನಿ ಚ ।
ಏವಂ ಕೃತ್ವಾ ಸುರಾಃ ಸರ್ವೇ ಭ್ರಷ್ಟರಾಜ್ಯಾಃ ಪರಾಜಿತಾಃ ॥ ೨೯ ॥
ವಿಚರಂತಿ ಯಥಾ ಮರ್ತ್ಯಾಸ್ತ್ರಿಪುರೇಣ ದುರಾತ್ಮನಾ ।
ಮತ್ತೋ ಲಬ್ಧವರೋ ನಿತ್ಯಂ ವ್ರಜತ್ಯೇವಾಽಕುತೋಭಯಃ ॥ ೩೦ ॥
ತಸ್ಮಾತ್ಸರ್ವಪ್ರಯತ್ನೇನ ವಧಸ್ತಸ್ಯ ವಿಚಿಂತ್ಯತಾಂ ॥ ೩೧ ॥
ಇತಿ ಶ್ರುತ್ವಾ ವಚಸ್ತಸ್ಯ ಬ್ರಹ್ಮಣಃ ಸಂಶಿತಾತ್ಮನಃ ।
ಚಿರಂ ಧ್ಯಾತ್ವಾ ಮಹಾದೇವೋ ಬ್ರಹ್ಮಾಣಂ ತಮುವಾಚ ಹ ॥ ೩೨ ॥

ಮಹಾದೇವ ಉವಾಚ :—

ಶ್ರೂಯತಾಂ ಭೋಃ ಸುರಶ್ರೇಷ್ಠಾ ಬ್ರಹ್ಮಶಕ್ರಪುರೋಗಮಾಃ ।
ಜಯೋಪಾಯಂ ಕರಿಷ್ಯಾಮಿ ದೈತ್ಯಸ್ಯಾಽಸ್ಯ ದುರಾತ್ಮನಃ ॥ ೩೩ ॥
ತಪಶ್ಚರತ ಯೂಯಂ ವಾ ಆತ್ಮನೋ ಜಯಕಾಂಕ್ಷಿಣಃ ।
ಅವಂತ್ಯಾಂ ಯದ್ಧುತಂ ದತ್ತಂ ತತ್ಸರ್ವಂ ಚಾಕ್ಷಯಂ ಭವೇತ್ ॥ ೩೪ ॥
ಇತ್ಯುಕ್ತ್ವಾ ಸರ್ವದೇವಾನಾಂ ತತ್ರೈವಾಽಂತರ್ಹಿತಃ ಶಿವಃ ।
ಗತ್ವಾ ಶ್ಮಶಾನನಿಲಯೇ ಭೂತಪ್ರೇತನಿಷೇವಿತೇ ॥ ೩೫ ॥

---

ಮಾಡುವ ಮಠಗಳೂ ಮುಂತಾಗಿ ಸಕಲ ಪ್ರದೇಶಗಳೂ ಅಲ್ಲಕಲ್ಲೋಲವಾಗಿರುವುವು.

೩೦. ದುರಾತ್ಮನಾದ ತ್ರಿಪುರನು ಇಂತಹ ದುಷ್ಕೃತ್ಯವನ್ನು ಮಾಡುತ್ತ ಸಕಲದೇವತೆಗಳನ್ನೂ ಪರಾಜಯಗೊಳಿಸಲು ಅವರು ತಮ್ಮ ರಾಜ್ಯವನ್ನು ಕಳೆದುಕೊಂಡು ಮನುಷ್ಯರಂತೆಯೇ ಭೂಲೋಕದಲ್ಲಿ ಸಂಚರಿಸುತ್ತಿರುವರು.

೩೧. ನನ್ನಿಂದ ವರವನ್ನು ಪಡೆದು ಅವನು ಯಾವುದಕ್ಕೂ ಭಯಪಡದವನಾಗಿ ಸಂಚರಿಸುತ್ತಿರುವನು. ಆದುದರಿಂದ ಸರ್ವಪ್ರಕಾರದಿಂದಲೂ ಇವನ ನಿಗ್ರಹವು ಹೇಗಾಗಬೇಕೆಂಬುದನ್ನು ಚಿಂತಿಸಬೇಕಾಗಿರುವುದು.

೩೨. ಸಂಶಯಾವಿಷ್ಟನಾದ ಬ್ರಹ್ಮದೇವನ ಈ ಮಾತುಗಳನ್ನು ಕೇಳಿ ಮಹಾದೇವನು ಬಹಳಕಾಲ ಯೋಚನೆಯನ್ನು ಮಾಡಿ ಬಳಿಕ ಇಂತೆಂದನು.

೩೩. ಮಹಾದೇವನು ಹೇಳುತ್ತಾನೆ:—ಬ್ರಹ್ಮೇಂದ್ರರೇ ಮುಂತಾದ ಎಲೈ ದೇವೋತ್ತಮರಿರಾ! ಕೇಳಿರಿ. ದುರಾತ್ಮನಾದ ಈ ದೈತ್ಯೇಂದ್ರನನ್ನು ಜಯಿಸುವುದಕ್ಕೆ ತಕ್ಕ ಉಪಾಯವೊಂದನ್ನು ಮಾಡುವೆನು.

೩೪. ನೀವೆಲ್ಲರೂ ಜಯಾಭಿಲಾಷೆಯಿಂದ ತಪಸ್ಸನ್ನು ಮಾಡಿರಿ. ಅವಂತೀ ಕ್ಷೇತ್ರದಲ್ಲಿ ಮಾಡಿದ ಹೋಮ, ದಾನಾದಿ ಸಕಲಕರ್ಮವೂ ಅಕ್ಷಯಫಲಪ್ರದಾಯಕವಾಗುವುದು.

೩೫. ಇಂತೆಂದು ಸಕಲದೇವತೆಗಳಿಗೂ ಅಪ್ಪಣೆಯನ್ನು ಮಾಡಿ ಶಿವನು

ಜಯಾರ್ಥಂ ತಸ್ಯ ದೈತ್ಯಸ್ಯ ತ್ರಿಪುರಸ್ಯ ದುರಾತ್ಮನಃ ।
ಉಪಾಸಾಂಚಕ್ರಿರೇ ತತ್ರ ಚಾಮುಂಡಾಯಾಃ ಸುರೇಶ್ವರಾಃ ॥ ೩೬ ॥
ಮಹಿಷೈಶ್ಚ ಮಹಾಮೇಧ್ಯೈಃ ಪಶುಪುಷ್ಪಾರ್ಘತರ್ಪಣೈಃ ।
ಬಲಿಭಿರ್ವಿವಿಧೈರ್ದಾನೈರ್ಧೂಪದೀಪಾಗ್ನಿತರ್ಪಣೈಃ ।
ಪೂಜಯಿತ್ವಾ ತದಾ ದೇವೀಂ ತಾಮೀಡೇ ವೃಷಭಧ್ವಜಃ ॥ ೩೭ ॥
ದುರ್ಗಾಂ ಭಗವತೀಂ ಭದ್ರಾಂ ದುರ್ಗಸಂಸಾರತಾರಿಣೀಂ ।
ತ್ರಿಪುರಾಂತಕಾರಿಣೀಂ ಕೃತ್ಯಾಂ ಚಂಡಮುಂಡವಧೋದ್ಯಮಾಂ ॥ ೩೮ ॥
ದೈತ್ಯಮೇದೋಮದೋನ್ಮತ್ತಾಂ ರಕ್ತಾಖ್ಯಾಂ ರಕ್ತದಂತಿಕಾಂ ।
ರಕ್ತಾಂಬರಧರಾಂ ಧೀರಾಂ ರಕ್ತಪುಷ್ಪಾವತೀಂ ಸತೀಂ ॥ ೩೯ ॥
ಮಹಿಷವಾಹಿನೀಂ ಶ್ಯಾಮಾಂ ಯಕ್ಷಾಸನಪರಿಗ್ರಹಾಂ ।
ದ್ವೀಪಿಚರ್ಮಪರೀಧಾನಾಂ ಶುಷ್ಕಮಾಂಸಾತಿಭೈರವಾಂ ॥ ೪೦ ॥

---

ಕಣ್ಮರೆಯಾಗಿ ಭೂತಪ್ರೇತಾದಿ ಗಣಗಳಿಂದ ಸೇವಿತವಾದ ಸ್ಮಶಾನವೆಂಬ ತನ್ನ ನಿಲಯಕ್ಕೆ ಹೊರಟುಹೋದನು.

೩೬. ದುಷ್ಟನಾದ ಆ ತ್ರಿಪುರದೈತ್ಯನನ್ನು ಜಯಿಸುವ ಅಭಿಲಾಷೆಯಿಂದ ದೇವತೆಗಳು ಚಾಮುಂಡಾಂಬಿಕೆಯ ಉಪಾಸನೆಯನ್ನು ಮಾಡಲು ಉಪಕ್ರಮಿಸಿದರು.

೩೭. ಕೋಣಗಳ ಬಲಿಗಳಿಂದಲೂ, ಇತರ ನೈವೇದ್ಯಗಳಿಂದಲೂ, ಪಶು, ಪುಷ್ಪ, ಅರ್ಘ್ಯ, ತರ್ಪಣಗಳಿಂದಲೂ, ವಿಧವಿಧಗಳಾದ ಬಲಿಹರಣ, ದಾನ, ಧೂಪ, ದೀಪ, ಹೋಮಗಳಿಂದಲೂ ಪೂಜೆಯನ್ನು ಮಾಡಿ ಮಹಾದೇವನು ಆ ದೇವಿಯನ್ನು ಸ್ತೋತ್ರಮಾಡಿದನು.

೩೮. ಆ ದೇವಿಯು ದುರ್ಗಮ್ಯಳೂ, ಷಡ್ಗುಣೈಶ್ವರ್ಯಭರಿತಳೂ, ಮಂಗಳಪ್ರದೆಯೂ, ಭಯಂಕರವಾದ ಸಂಸಾರದಿಂದ ಕಡೆಹಾಯಿಸುವವಳೂ ಆಗಿರುವಳು. ತ್ರಿಪುರನನ್ನು ಸಂಹರಿಸುವ ಕೃತ್ಯವುಳ್ಳವಳೂ, ಚಂಡಮುಂಡಾಸುರರನ್ನು ನಿಗ್ರಹಿಸುವುದರಲ್ಲಿ ನಿರತಳೂ ಆಗಿರುವಳು.

೩೯. ದೈತ್ಯರ ಮೆದುಳಿನ ಸೇವನೆಯಿಂದ ಉನ್ಮತ್ತಳೂ, ಕೆಂಪಾದ ಮುಖ ಮತ್ತು ಹಲ್ಲುಗಳುಳ್ಳವಳೂ, ಕೆಂಪುವಸ್ತ್ರವನ್ನುಟ್ಟವಳೂ, ಧೈರ್ಯಶಾಲಿನಿಯೂ, ಕೆಂಪು ಹೂವುಗಳಿಂದ ಅಲಂಕೃತಳೂ ಆಗಿರುವಳು.

೪೦. ಮಹಿಷದ ಮೇಲೆ ಕುಳಿತು ಸಂಚರಿಸುವಳು; ನೀಲವರ್ಣದವಳು; ಯಕ್ಷರ ದೇಹಗಳೇ ಆಕೆಗೆ ಆಸನವಾಗಿರುವುವು. ಆನೆಯ ತೊಗಲನ್ನು ಹೊದೆದುಕೊಂಡು ಒಣಗಿದ ಮಾಂಸದ ಮೈಯಿಂದ ಅತಿಭಯಂಕರಳಾಗಿರುವಳು.

ಪೂಜಯಿತ್ವಾ ಪ್ರಸನ್ನಾತ್ಮಾ ಧ್ಯಾನಮಾಸ್ಥಾಯ ಸಂಸ್ಥಿತಃ ।
ತದಾ ಭಗವತೀ ಭದ್ರಾ ಯಯೇದಂ ಧಾರ್ಯತೇ ಜಗತ್ ।
ಪ್ರಸನ್ನವದನಾ ಭೂತ್ವಾ ಪ್ರತ್ಯಕ್ಷಂ ಪ್ರಾಹ ಚಂಡಿಕಾ ॥ ೪೧ ॥

ದೇವ್ಯುವಾಚ :—

ವ್ರಿಯತಾಂ ಭೋಃ ಸುರಶ್ರೇಷ್ಠ ವರಂ ಮತ್ತೋಽಭಿವಾಂಛಿತಂ ।
ಸರ್ವಂ ತ್ವಯೋಕ್ತಂ ಯಚ್ಛಾಮಿ ಜಗತಾಮುಪಕಾರಕಂ ॥ ೪೨ ॥

ಶ್ರೀ ಹರ ಉವಾಚ :—

ಯದಿ ತುಷ್ಟಾಽಸಿ ವೈ ದೇವಿ ದೇಹಿ ಮೇ ವರಮುತ್ತಮಂ ।
ಯೇನ ಹನ್ಮಿ ಮಹಾದೈತ್ಯಂ ತ್ರಿಪುರಂ ದೇವಕಂಟಕಂ ॥ ೪೩ ॥

ಶ್ರೀ ದೇವ್ಯುವಾಚ :—

ಜಯ ಹ್ಯೇನಂ ಮಹಾದೇವ ಗೃಹಾಣ ಪಾಶುಪತಂ ಪರಂ ।
ಮಯಾ ದತ್ತಂ ಸುರಶ್ರೇಷ್ಠ ದೈತ್ಯನಾಶಕರಂ ಪರಂ ॥ ೪೪ ॥
ಮಹಾಪಾಶುಪತಂ ಶಸ್ತ್ರಂ ಕರೇ ಕೃತ್ವಾ ಚ ಶಂಕರಃ ।
ಉಜ್ಜಹಾರ ತದಾ ಶಂಭುರ್ದೈತ್ಯನಾಶಾಯ ಸತ್ವರಃ ॥ ೪೫ ॥
ಮಹಾಡಂಬರಿಕೋ ಭೂತ್ವಾ ಸರ್ವಪ್ರಾಣಿಭಯಂಕರಃ ।
ಸ್ತುತಿಂ ಕೃತ್ವಾ ಯಯೌ ವಾಗ್ಭಿಃ ಪೃಷ್ಠತೋಽನುಯಯುಃ ಸುರಾಃ ॥ ೪೬ ॥

---

೪೧. ಇಂತಹ ದೇವಿಯ ಪೂಜೆಯನ್ನು ಮಾಡಿ ಪ್ರಸನ್ನವಾದ ಮನಸ್ಸಿನಿಂದ ಆ ಪರಮೇಶ್ವರನು ಧ್ಯಾನಾಸಕ್ತನಾಗಿ ಕುಳಿತುಕೊಂಡನು. ಆಗ ಸಕಲ ಲೋಕಗಳಿಗೂ ಆಧಾರವೆನಿಸಿದ ಚಂಡಿಕೆಯು ಪ್ರಸನ್ನಮುಖವುಳ್ಳವಳಾಗಿ ಪ್ರತ್ಯಕ್ಷಳಾಗಿ ಪರಮೇಶ್ವರನನ್ನು ಕುರಿತು ಇಂತೆಂದಳು.

೪೨. ದೇವಿಯು ಹೇಳುತ್ತಾಳೆ:—ದೇವೋತ್ತಮನಾದ ಹರನೆ! ನನ್ನಿಂದ ನಿನಗೆ ಬೇಕಾದ ವರವನ್ನು ಕೇಳಿಕೊ. ಲೋಕೋಪಕಾರಕ್ಕಾಗಿ ನೀನು ಬೇಡುವುದೆಲ್ಲವನ್ನೂ ಕೊಡುವೆನು.

೪೩. ಹರನು ಹೇಳುತ್ತಾನೆ:—ದೇವಿಯೆ! ನಿನಗೆ ನನ್ನ ವಿಷಯದಲ್ಲಿ ಸಂತೋಷವುಂಟಾಗಿದ್ದರೆ ನನಗೊಂದು ಉತ್ತಮವಾದ ವರವನ್ನುಕೊಡು. ಅದರಿಂದ ದೇವಘಾತಕನಾಗಿರುವ ತ್ರಿಪುರನೆಂಬ ಮಹಾಸುರನನ್ನು ಸಂಹರಿಸುವೆನು.

೪೪. ದೇವಿಯು ಹೇಳುತ್ತಾಳೆ:—ಮಹಾದೇವನೆ! ಸುರೋತ್ತಮನೆ! ಸರ್ವೋತ್ತಮವಾದ ಈ ಪಾಶುಪತವೆಂಬ ಅಸ್ತ್ರವನ್ನು ತೆಗೆದುಕೊ. ನನ್ನಿಂದ ಕೊಡಲ್ಪಟ್ಟ ಈ ಮಹಾಸ್ತ್ರವು ಸಕಲದೈತ್ಯರನ್ನೂ ನಾಶಗೊಳಿಸುವುದು.

೪೫. ಆ ಮಹಾಪಾಶುಪತಾಸ್ತ್ರವನ್ನು ಕೈಯಲ್ಲಿ ಹಿಡಿದುಕೊಂಡು ಶಂಕರನು ದೈತ್ಯರನ್ನು ನಾಶಗೊಳಿಸಲು ಸಂಭ್ರಮದಿಂದ ಮೇಲಕ್ಕೆದ್ದನು.

೪೬. ಮಹತ್ತರವಾದ ಆಡಂಬರದಿಂದಕೂಡಿ ಸಕಲ ಪ್ರಾಣಿಗಳಿಗೂ

ಶರೇಣೈಕೇನ ವೈ ರುದ್ರೋ ಜಘಾನ ತಂ ಮಹಾಽಸುರಂ ॥ ೪೭ ॥
ಮಾಯಿನಂ ತಂ ತ್ರಿಧಾ ಭಿತ್ವಾ ಮಾಯಾಯುದ್ಧೇನ ಶಂಕರಃ ।
ಪುನರಾಗಾತ್ಪುರೀಮೇತಾಮವಂತೀಮಮರಸೇವಿತಾಂ ॥ ೪೮ ॥
ಜಯಾಽಽಶಿಷಾ ಪ್ರಯುಂಜಾನಾ ಋಷಯಃ ಸಿದ್ಧಚಾರಣಾಃ ।
ತುಷ್ಟುವುಶ್ಚ ತದಾ ದೇವಾ ಜಯಶಬ್ದೇನ ಹರ್ಷಿತಾಃ ॥ ೪೯ ॥
ಅಪ್ಸರಾ ನನೃತುಸ್ತತ್ರ ಗಂಧರ್ವಾ ಲಲಿತಂ ಜಗುಃ ।
ವವೌ ತದಾ ಪುಣ್ಯತಮೋ ವಾಯುಃ ಸುಖಪ್ರದೋ ನೃಣಾಂ ॥ ೫೦ ॥
ಜಯಶಬ್ದಸ್ತದಾ ಜಾತಃ ಪ್ರಾಣಿನಾಂ ಚ ಗೃಹೇ ಗೃಹೇ ।
ಜಜ್ವಲುಶ್ಚಾಽಗ್ನಯಃ ಶಾಂತಾಃ ಶಾಂತಾ ದಿಗ್ಜನಿತಸ್ವನಾಃ ॥ ೫೧ ॥
ಪ್ರವರ್ತಂತೇ ತದಾ ಯಜ್ಞಾ ಮಹೋತ್ಸವಸದಕ್ಷಿಣಾಃ ।
ದೇವಾಃ ಪ್ರಪೇದಿರೇ ಸ್ಥಾನಂ ಸ್ವಕೀಯಂ ಪುನರಾದೃತಂ ॥ ೫೨ ॥

---

ಭಯವನ್ನುಂಟುಮಾಡುವ ರೂಪವನ್ನು ತಳೆದು ಆ ಶಂಕರನು ದೇವಿಯನ್ನು ಅನೇಕವಿಧವಾಗಿ ಸ್ತೋತ್ರಮಾಡಿ ಹೊರಟನು. ಸಮಸ್ತದೇವತೆಗಳೂ ಆತನನ್ನು ಹಿಂಬಾಲಿಸಿ ನಡೆದರು.

೪೭–೪೮. ಆ ರುದ್ರನು ಒಂದು ಬಾಣದಿಂದಲೇ ಆ ಮಹಾಸುರನನ್ನು ಹೊಡೆದು ಕೆಡವಿದನು. ಇಂತು ಮಹಾಯುದ್ಧದಲ್ಲಿ ಮಾಯಾವಿಯಾದ ಅವನನ್ನು ಕೆಡವಿದ ಬಳಿಕ ಅವನನ್ನು ಮೂರುಭಾಗವಾಗಿ ಸೀಳಿ ಸಂಹರಿಸಿ ಶಂಕರನು ದೇವತೆಗಳಿಂದ ಸೇವಿತವಾದ ಈ ಅವಂತೀನಗರಿಗೇ ಹಿಂದಿರುಗಿದನು.

೪೯. ಋಷಿಗಳೂ, ಸಿದ್ಧರೂ, ಚಾರಣರೂ ಜಯಾಶೀರ್ವಾದಗಳನ್ನು ಹೇಳುತ್ತ ಹರ್ಷಗೊಂಡು ಜಯಕಾರಗಳನ್ನು ಮಾಡುತ್ತ ದೇವತೆಗಳೊಡನೆ ಪರಮೇಶ್ವರನನ್ನು ಸ್ತೋತ್ರಮಾಡಿದರು.

೫೦. ಅಪ್ಸರೆಯರು ನರ್ತನಗಳನ್ನು ಮಾಡಿದರು. ಗಂಧರ್ವರು ಮನೋಹರವಾಗಿ ಹಾಡಿದರು. ಮಾನವರಿಗೆ ಪುಣ್ಯತಮವೂ ಸೌಖ್ಯಪ್ರದವೂ ಆದ ತಂಗಾಳಿಯು ಬೀಸತೊಡಗಿತು.

೫೧. ಸಕಲಜೀವರ ಮನೆಗಳಲ್ಲಿಯೂ ಜಯಶಬ್ದಗಳು ಕೇಳತೊಡಗಿದುವು. ಎಲ್ಲೆಡೆಗಳಲ್ಲಿಯೂ ಅಗ್ನಿಗಳು ಪ್ರಶಾಂತಗಳಾಗಿ ಜ್ವಲಿಸುತ್ತಿದ್ದುವು. ದಿಕ್ಕುಗಳೂ ಪ್ರಸನ್ನಗಳಾಗಿ ಜಯಧ್ವನಿಗಳನ್ನು ಮಾರ್ದನಿಗೊಡುತ್ತಿದ್ದುವು.

೫೨. ಮಹೋತ್ಸವಗಳಿಂದಲೂ ಭೂರಿದಕ್ಷಿಣೆಗಳಿಂದಲೂ ಕೂಡಿದ ಮಹಾಯಜ್ಞಗಳು ಆರಂಭಿಸಲ್ಪಟ್ಟುವು. ದೇವತೆಗಳು ತಮ್ಮ ಮೊದಲಿನ ನೆಲೆಯನ್ನೇ ಆದರದಿಂದ ಬಂದುಸೇರಿದರು.

**ಉಜ್ಜಿತೋ ದಾನವೋ ಯಸ್ಮಾತ್ತ್ರೈಲೋಕ್ಯೇ ಸ್ಥಾಪಿತಂ ಯಶಃ ।**
**ತಸ್ಮಾತ್ಸರ್ವೈಃ ಸುರಶ್ರೇಷ್ಠೈ ಋಷಿಭಿಃ ಸನಕಾದಿಭಿಃ ॥ ೫೩ ॥**
**ಕೃತಂ ನಾಮ ಹ್ಯವಂತ್ಯಾ ವಾ ಉಜ್ಜಯಿನೀ ಪಾಪನಾಶಿನೀ ।**
**ಅವಂತೀ ಚ ಪುರಾ ಪ್ರೋಕ್ತಾ ಸರ್ವಕಾಮವರಪ್ರದಾ ॥ ೫೪ ॥**
**ಅದ್ಯ ಪ್ರಭೃತಿ ಪುರೀ ವ್ಯಾಸ ಉಜ್ಜಯಿನೀಸಮಾಶ್ರಿತಾಃ ।**
**ಯೇಽಸ್ಯಾಂ ಚ ಸ್ನಾನದಾನಾದಿ ಭುವಿ ಕುರ್ವಂತಿ ಮಾನವಾಃ ॥ ೫೫ ॥**
**ನ ತೇಷಾಂ ದುಷ್ಕೃತಂ ಕಿಂಚಿದ್ದೇಹೇ ತಿಷ್ಠತಿ ಪಾಪಜಂ ॥ ೫೬ ॥**
**ವಿದ್ಯಾರ್ಥೀ ಗಿರೀಶಂ ಧನಾರ್ಥೀ ಧನೇಶಂ**
**ಸುತಾರ್ಥೀ ಸುತೇಶಂ ದಿನೇಶಂ ಸುಖಾರ್ಥೀ ।**
**ಧಿಯೋಽರ್ಥೀ ಗಣೇಶಂ ಪ್ರಿಯಾರ್ಥೀ ವಸೇದ್ವೈ**
**ಗಿರಾಂ ಗ್ರಾಹ್ಯಮಾನೀ ಜನಶ್ಚೋಜ್ಜಯಿನ್ಯಾಂ ॥ ೫೭ ॥**
**ಯ ಏತಸ್ಯಾಂ ಮಹಾಭಾಗ ಸದಾ ವಸತಿ ಮಾನವಃ ।**
**ಭುಕ್ತ್ವಾ ಕಾಮಾನ್ ಮನೋಽಭೀಷ್ಟಾನ್ ಮೃತಃ ಶಿವಪುರಂ ವ್ರಜೇತ್॥೫೮॥**

---

೫೩-೫೪. ಇಂತು ಈ ಸ್ಥಳದಿಂದ ಹೊರಟ ಶಿವನು ತ್ರಿಪುರದಾನವನನ್ನು ಜಯಿಸಿ ಮೂರು ಲೋಕಗಳಲ್ಲಿಯೂ ತನ್ನ ಯಶಸ್ಸನ್ನು ನೆಲೆಗೊಳಿಸಿದನು. ಆದುದರಿಂದ ಸಮಸ್ತರಾದ ದೇವೋತ್ತಮರೂ, ಸನಕಾದಿ ಮಹರ್ಷಿಗಣಗಳೂ ಪಾಪನಾಶಕವಾದ ಈ ಅವಂತೀನಗರಿಗೇ ಉಜ್ಜಯಿನಿಯೆಂಬ ಹೆಸರನ್ನಿಡು ವವರಾದರು. ಈ ಅವಂತೀಪುರವು ಸಮಸ್ತಕಾಮಗಳನ್ನೀಡೇರಿಸಿ ಸಕಲ ವರಗಳನ್ನೂ ಕೊಡುವುದೆಂದು ಹೇಳುವರು.

೫೫-೫೬. ಎಲೈ ವ್ಯಾಸಮುನಿವರ್ಯನೆ! ಅಂದು ಮೊದಲಾಗಿ ಉಜ್ಜಯಿನೀ ನಗರಿಯನ್ನು ಆಶ್ರಯಿಸಿ ಅಲ್ಲಿ ಸ್ನಾನ, ದಾನ ಮೊದಲಾದುವನ್ನು ಮಾಡುವ ಮಾನವರ ದೇಹಗಳಲ್ಲಿ ಅವರು ಮಾಡಿದ ಪಾಪಗಳಿಂದುಂಟಾದ ಸಂಸ್ಕಾರವು ಲೇಶಮಾತ್ರವೂ ನಿಲ್ಲುವುದಿಲ್ಲ.

೫೭. ಈ ಉಜ್ಜಯಿನಿಯಲ್ಲಿ ವಿದ್ಯಾರ್ಥಿಯು ಮಹಾದೇವನನ್ನೂ, ಧನ ಕಾಮನಾದವನು ಕುಬೇರನನ್ನೂ, ಸಂತಾನಾಪೇಕ್ಷೆಯುಳ್ಳವನು ಸುತೇಶ್ವರ ನನ್ನೂ, ಸೌಖ್ಯಕಾಮನು ಆದಿತ್ಯನನ್ನೂ, ಪ್ರಜ್ಞಾಪೇಕ್ಷಿಯು ಗಣೇಶ್ವರನನ್ನೂ ಭಜಿಸುತ್ತಿರಲು ಜನರೆಲ್ಲರೂ ತಮ್ಮ ಇಷ್ಟಾರ್ಥಗಳನ್ನು ಪಡೆದು ಮರ್ಯಾದೆಯ ಮಾತುಗಳಿಗೆ ಪಾತ್ರರಾಗಿರುವರು.

೫೮. ಮಹರ್ಷಿಯೆ! ಯಾವ ಮನುಜನು ನಿತ್ಯವೂ ಈ ಪುರಿಯಲ್ಲಿ ವಾಸ ಮಾಡುವನೊ, ಅವನು ತನ್ನ ಮನೋಭೀಷ್ಟಗಳೆಲ್ಲವನ್ನೂ ಪಡೆದು ಸುಖಿಸುವುದ ಲ್ಲದೆ ಅಂತ್ಯದಲ್ಲಿ ಶಿವಲೋಕವನ್ನು ಸೇರುವನು.

ತತ್ರೈವ ವಸತೇ ನಿತ್ಯಂ ಕಲ್ಪಕೋಟಿಶತಾಽಧಿಕಂ ॥ ೫೯ ॥
ಯ ಏತಾಂ ವೈ ಕಥಾಂ ಪುಣ್ಯಾಂ ಪಠತೇ ಶೃಣುತೇಽಥವಾ ।
ಮುಚ್ಯತೇ ಸರ್ವಪಾಪೇಭ್ಯೋ ಗೋಸಹಸ್ರಫಲಂ ಲಭೇತ್ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಉಜ್ಜಯಿನ್ಯಭಿಧಾನ ಕಥನಂ"ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

೫೯. ಅಲ್ಲಿ ನೂರು ಕೋಟಿ ಕಲ್ಪಗಳಿಗಿಂತಲೂ ಅಧಿಕ ಕಾಲವು ಕಳೆಯುವ ವರೆಗೂ ವಾಸಮಾಡುತ್ತಿರುವನು.

೬೦. ಪರಮಪುಣ್ಯಪ್ರದವಾದ ಈ ಚರಿತ್ರೆಯನ್ನು ಯಾವನು ಪಠಿಸುವನೊ ಮತ್ತು ಭಕ್ತಿಯಿಂದ ಕೇಳುವನೊ, ಅವನು ಸಮಸ್ತ ಪಾತಕಗಳಿಂದಲೂ ಮುಕ್ತನಾಗಿ ಒಂದು ಸಾವಿರ ಗೋವುಗಳನ್ನು ದಾನಮಾಡಿದ ಉತ್ತಮ ಫಲಕ್ಕೆ ಭಾಗಿಯಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಉಜ್ಜಯಿನ್ಯಭಿಧಾನಕಥನ"ವೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ಪದ್ಮಾವತೀನಾಮಕಥಾವರ್ಣನಂ

**ಸನತ್ಕುಮಾರ ಉವಾಚ :—**

**ಅಥಾಽತಃ ಸಂಪ್ರವಕ್ಷ್ಯಾಮಿ ಪದ್ಮಾವತೀ ಯಥಾಽಭವತ್ ।**
**ಶೃಣುಷ್ವ ಚಾದೃತೋ ವ್ಯಾಸ ಬಹುಪುಣ್ಯಕೃತಾಂ ಕಥಾಂ ॥ ೧ ॥**
**ಏಕದಾ ಸರ್ವರತ್ನಾನಾಂ ಹಾನಿರ್ಜಾತಾ ದುರಾತ್ಮಭಿಃ ।**
**ಧರ್ಮಗ್ಲಾನಿರ್ನಿರೋಧಶ್ಚ ಜಾತೋ ವೈ ದುಷ್ಟದಾನವೈಃ ॥ ೨ ॥**
**ತದಾ ಸುರಾಽಸುರೈಃ ಸರ್ವೈರ್ಮಿಲಿತ್ವಾ ಮಥಿತೋಽಂಬುಧಿಃ ।**
**ಮೇರುರ್ಮಂಶೋದಧಿಃ ಪಾತ್ರಂ ರಜ್ಜುರ್ವಾಸುಕಿಪನ್ನಗಃ ॥ ೩ ॥**
**ಕೂರ್ಮಪೃಷ್ಠೇ ವಿಧಿಂ ಕೃತ್ವಾ ರತ್ನಾನಿ ದುದುಹುಸ್ತದಾ ।**
**ಆದೌ ಲಕ್ಷ್ಮೀರ್ವಿನಿರ್ಯಾತಾ ಕೃಷ್ಣಾಯ ಪ್ರತಿಪಾದಿತಾ ॥ ೪ ॥**
**ತೇನ ಕೃತ್ವಾ ವಿಷಾದೋಽಭೂದ್ದೇವದಾನವಯೋಸ್ತದಾ ।**
**ಏತಸ್ಮಿನ್ನಂತರೇ ಪ್ರಾಪ್ತೋ ನಾರದೋ ದೇವದರ್ಶನಃ ॥ ೫ ॥**

---

### ಕನ್ನಡದ ಅನುವಾದ

#### ಪದ್ಮಾವತೀನಾಮಕಥನವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ವ್ಯಾಸನೆ! ಇನ್ನು ಈ ಕ್ಷೇತ್ರಕ್ಕೆ ಪದ್ಮಾವತಿಯೆಂಬ ಹೆಸರು ಹೇಗೆ ಬಂದಿತೆಂಬುದನ್ನು ಹೇಳುವೆನು. ಬಹು ಪುಣ್ಯಪ್ರದವಾದ ಈ ಕಥೆಯನ್ನು ಆದರದಿಂದ ಕೇಳು.

೨. ದುರಾತ್ಮರೂ, ದುಷ್ಟರೂ ಆದ ದಾನವರು ಒಮ್ಮೆ ಭೂಲೋಕದ ಸಕಲರತ್ನಗಳನ್ನೂ ಅಪಹರಿಸಿ ಧರ್ಮಕ್ಕೆ ಹಾನಿಯನ್ನೂ ಸತ್ಕಾರ್ಯಗಳಿಗೆ ತೊಂದರೆಗಳನ್ನೂ ಮಾಡುತ್ತಿದ್ದರು.

೩. ಆಗ ದೇವತೆಗಳೂ, ರಾಕ್ಷಸರೂ ಒಟ್ಟುಗೂಡಿ ಸಮುದ್ರವನ್ನು ಮಥಿಸಲುಪಕ್ರಮಿಸಿದರು. ಮೇರುಪರ್ವತವೇ ಕಡೆಗೋಲಾಯಿತು. ಸಮುದ್ರವೇ ಪಾತ್ರೆಯಾಯಿತು. ವಾಸುಕಿಯೆಂಬ ನಾಗನೇ ಕಡೆಯುವ ಹಗ್ಗವಾಯಿತು.

೪. ಆ ಪರ್ವತವನ್ನು ಕೂರ್ಮಾವತಾರವನ್ನೆತ್ತಿದ ಶ್ರೀ ಹರಿಯ ಬೆನ್ನಿನಲ್ಲಿರಿಸಿ ರತ್ನಗಳನ್ನು ಪಡೆಯಲು ಕಡೆದರು. ಮೊದಲು ಮಹಾಲಕ್ಷ್ಮಿಯು ಹುಟ್ಟಿಬರಲು ಆಕೆಯು ಶ್ರೀಮನ್ನಾರಾಯಣನಿಗೆ ಒಪ್ಪಿಸಲ್ಪಟ್ಟಳು.

೫. ಈ ಕಾರಣದಿಂದ ದೇವದಾನವರಿಗೆ ವಿಷಾದವುಂಟಾಯಿತು. ಈ ಅವಸರದಲ್ಲಿಯೇ ದೇವತೆಗಳನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ನಾರದ ಮಹರ್ಷಿಯು ಅಲ್ಲಿಗೆ ಪ್ರಾಪ್ತನಾದನು.

**ವಾರಿತಃ ಕಲಹಸ್ತೇನ ದೇವದೈತ್ಯಸಮುದ್ಭವಃ ।**
**ಮಹಾಕಾಲವನೇ ಸಾಽಸ್ತು ಪದ್ಮಾ ಸಿಂಧುಸಮುದ್ಭವಾ ॥ ೬ ॥**
**ಸಾಗರಾಂತೇ ಚ ರತ್ನಾನಿ ತಿಷ್ಠಂತಿ ವಿವಿಧಾನಿ ಚ ।**
**ತಾನಿ ಸರ್ವಾಣಿ ಚಾದಾಯ ಭವತಾಂ ವೈ ದದಾಮ್ಯಹಂ ॥ ೭ ॥**
**ಮಥ್ಯತಾಮುದಧಿಃ ಶೀಘ್ರಂ ನಾಽತ್ರ ಕಾರ್ಯಾ ವಿಚಾರಣಾ ।**
**ಪುನಸ್ತೇ ತೂದ್ಯಮಂ ಚಕ್ರುರಮೃತಾರ್ಥಂ ಸುರಾಽಸುರಾಃ ॥ ೮ ॥**
**ಮಥ್ಯಮಾನೇಽಂಬುಧೌ ತೇಷಾಂ ಮಣಿಃ ಪ್ರಾಪ್ತಶ್ಚ ಕೌಸ್ತುಭಃ ।**
**ಪಾರಿಜಾತತರುಃ ಪಶ್ಚಾತ್ಸುರಾ ಜಾತಾ ತತಃ ಪರಂ ॥ ೯ ॥**
**ಧನ್ವಂತರಿರಥೋತ್ಪನ್ನಶ್ಚಂದ್ರೋ ಜಾತೋಽಪಿ ವೈ ತತಃ ।**
**ಕಾಮಧೇನುಸ್ತತೋ ಜಾತಾ ಗಜರತ್ನಂ ತತಃ ಪರಂ ॥ ೧೦ ॥**
**ಉಚ್ಚೈಃಶ್ರವಾ ಹಯಶ್ರೇಷ್ಠಃ ಸುಧಾ ರಂಭಾ ತತಸ್ತತಃ ।**
**ತತಃ ಪರಂ ಚ ಸಾರಂಗಂ ಧನುಃ ಸರ್ವಾಽಸ್ತ್ರಸಂಭವಂ ॥ ೧೧ ॥**
**ಪಾಂಚಜನ್ಯಸ್ತಥಾ ಶಂಖಃ ಕರೇ ತಿಷ್ಠತಿ ಮುರದ್ವಿಷಃ ।**
**ನಿಧಿರೇಷ ಮಹಾಪದ್ಮೋ ವಿಷಂ ಹಾಲಾಹಲಂ ತತಃ ॥ ೧೨ ॥**

---

೬–೭. ದೇವದಾನವರಲ್ಲಿ ಉಂಟಾದ ಕಲಹವನ್ನು ಆತನು ನಿವಾರಿಸಿ ಇಂತೆಂದನು. "ಸಮುದ್ರದಿಂದ ಉದಯಿಸಿದ ಈ ಪದ್ಮೆಯು ಮಹಾಕಾಲವನದಲ್ಲಿ ನೆಲಸಲಿ. ಈ ಸಮುದ್ರದಲ್ಲಿ ಅನೇಕ ವಿಧಗಳಾದ ರತ್ನ ಸಮೂಹಗಳಿರುವುವು. ಅವುಗಳೆಲ್ಲವನ್ನೂ ತಂದು ನಿಮಗೆ ನಾನು ಕೊಡುವೆನು.

೮. ಆದುದರಿಂದ ಬೇಗನೆ ಪುನಃ ಈ ಸಮುದ್ರಮಥನಕಾರ್ಯವು ಮುಂದುವರೆಯಲಿ." ನಾರದನ ಮಾತನ್ನು ಕೇಳಿ ದೇವದಾನವರು ಪುನಃ ಅಮೃತವನ್ನು ಪಡೆಯುವ ಅಭಿಲಾಷೆಯಿಂದ ಮಥನವನ್ನು ಮುಂದುವರೆಸಿದರು.

೯. ಇಂತು ಅವರು ಮಥನಮಾಡುತ್ತಿರಲು ಕೌಸ್ತುಭವೆಂಬ ಅನರ್ಘ ಮಣಿಯೂ, ಪಾರಿಜಾತವೃಕ್ಷವೂ ಬಳಿಕ ಮದಿರೆಯೂ ಕ್ರಮವಾಗಿ ಹೊರಕ್ಕೆ ಬಂದುವು.

೧೦. ಬಳಿಕ ಧನ್ವಂತರಿಯು ಹುಟ್ಟಿದನು. ಆಮೇಲೆ ಚಂದ್ರನು ಎದ್ದು ಬಂದನು. ಬಳಿಕ ಕಾಮಧೇನುವೂ ಆಮೇಲೆ ಐರಾವತವೆಂಬ ಗಜರತ್ನವೂ ಮೇಲಕ್ಕೆ ಬಂದುವು.

೧೧. ಬಳಿಕ ಉಚ್ಚೈಃಶ್ರವಸ್ಸೆಂಬ ಉತ್ತಮಾಶ್ವವೂ, ಅಮೃತವೂ, ರಂಭೆಯೆಂಬ ಅಪ್ಸರೆಯೂ, ಸರ್ವಾಸ್ತ್ರಸಂಪನ್ನವಾದ ಶಾರ್ಙ್ಗವೆಂಬ ಧನುಶ್ಶ್ರೇಷ್ಠವೂ ಉಂಟಾದುವು.

೧೨. ಆ ಬಳಿಕ ಮಹಾವಿಷ್ಣುವಿನ ಕೈಯಲ್ಲಿರುವ ಪಾಂಚಜನ್ಯವೆಂಬ

ಚತುರ್ದಶಾಽಪಿ ರತ್ನಾನಿ ಪ್ರಾಪ್ತಾನಿ ವಿವಿಧಾನಿ ಚ ।
ಸಮಾದಾಯ ಗತಾಸ್ತತ್ರ ಯತ್ರ ಮಾಹೇಶ್ವರಂ ವನಂ ॥ ೧೩ ॥
ಗತ್ವಾ ತೇ ಚ ಸಮಾಸೀನಾ ಮಂತ್ರಂ ಚಕ್ರುಃ ಪರಸ್ಪರಂ ।
ಅಹಂ ಪೂರ್ವಮಹಂ ಪೂರ್ವಮಿತಿ ತೇ ಸಮಯಂತ್ರಿತಾಃ ॥ ೧೪ ॥
ಕೋಲಾಹಲಸ್ತಥೋತ್ಪನ್ನೋ ನಾರದಃ ಪುನರಭ್ಯಗಾತ್ ।
ತೇಷಾಂ ಕಲಿಮಲಂ ದೃಷ್ಟ್ವಾ ವಿಷ್ಣುಮಾರಾಧಯತ್ತತಃ ॥ ೧೫ ॥
ಮೋಹಿನೀರೂಪಮಾಸ್ಥಾಯ ನಾರೀ ಭೂತ್ವಾಽಭ್ಯಗಾದ್ಧರಿಃ ।
ಅತಿರೂಪವತೀ ತನ್ವೀ ತಾಮಾಲೋಕ್ಯ ಮಹಾಽಸುರಾಃ ॥ ೧೬ ॥
ವಿಹ್ವಲಾಂಗಾಶ್ಚ ತೇ ಸರ್ವೇ ಕಾಮಬಾಣವಶಂಗತಾಃ ।
ಏತಸ್ಮಿನ್ನಂತರೇ ತೇಷಾಂ ಸುರಾಂ ಪ್ರಾದಾತ್ಸುರೇಶ್ವರಃ ॥ ೧೭ ॥
ಹಸ್ತಲಾಘವಯೋಗೇನ ದೇವಾನಾಮಮೃತಂ ದದೌ ।
ಏತಸ್ಮಿನ್ನಂತರೇ ವ್ಯಾಸ ರಾಹುಸ್ತದ್ರೂಪಧಾರಕಃ ॥ ೧೮ ॥

---

ಶಂಖವು ಹೊರಬಿದ್ದಿತು. ಮಹಾಪದ್ಮವೆಂಬ ನಿಧಿಯೂ ಕೊನೆಯಲ್ಲಿ ಹಾಲಾಹಲ ವೆಂಬ ವಿಷವೂ ಎದ್ದು ಬಂದುವು.

೧೩. ಇಂತು ಸಮುದ್ರಮಥನದಿಂದ ಹದಿನಾಲ್ಕು ರತ್ನಗಳೂ ಮಹಾ ವಿಷವೂ ಹೊರಕ್ಕೆ ಬಂದುವು. ಆ ಹದಿನಾಲ್ಕು ರತ್ನಗಳನ್ನು ತೆಗೆದುಕೊಂಡು ಎಲ್ಲರೂ ಮಹಾಕಾಳವನಕ್ಕೆ ಹೋಗಿ ಸೇರಿದರು.

೧೪. ಅಲ್ಲಿ ಎಲ್ಲರೂ ಕುಳಿತುಕೊಂಡು ವಿಚಾರಮಾಡತೊಡಗಿದರು. ನಾನು ಮೊದಲು ತಾನು ಮೊದಲೆಂಬುದಾಗಿ ಎಲ್ಲರೂ ತಮ್ಮತಮ್ಮ ಸಲಹೆ ಗಳನ್ನು ಹೇಳತೊಡಗಿದರು.

೧೫. ಆ ಮಹಾಕೋಲಾಹಲವು ಉತ್ಪನ್ನವಾದುದನ್ನು ಕಂಡು ನಾರದನು ಮತ್ತೆ ಅಲ್ಲಿಗೈತಂದನು. ಅವರಲ್ಲಿ ಕಲಹವೆಂಬ ಕಶ್ಮಲವುಂಟಾದುದನ್ನು ನೋಡಿ ಆತನು ಮಹಾವಿಷ್ಣುವನ್ನು ಪೂಜಿಸಿ ಮರೆಹೊಕ್ಕನು.

೧೬–೧೭. ಆಗ ಶ್ರೀಹರಿಯು ಹೆಂಗಸಾಗಿ ಮೋಹಿನಿಯೆಂಬ ರೂಪದಿಂದ ಅಲ್ಲಿ ಸುಳಿದಾಡಿದನು. ಅತ್ಯಂತ ಸುಂದರಿಯಾದ ಆಕೆಯನ್ನು ಕಂಡು ಮಹಾ ದೈತ್ಯರೆಲ್ಲರೂ ರೋಮಾಂಚಗೊಂಡು ಕಾಮಬಾಣದ ಹೊಡೆತಗಳಿಗೆ ತುತ್ತಾದರು. ಈ ಸಮಯವನ್ನೇ ನೋಡುತ್ತಿದ್ದ ಮಹೇಂದ್ರನು ಅವರಿಗೆಲ್ಲ ಮದಿರೆಯನ್ನು ಹಂಚಿದನು.

೧೮. ಮತ್ತು ತನ್ನ ಕೈಯ ಲಾಘವದಿಂದ ದೇವತೆಗಳಿಗೆ ಮಾತ್ರ ಅಮೃತವು ಸಿಕ್ಕುವಂತೆ ಮಾಡಿದನು. ಇದನ್ನು ಕಂಡು ರಾಹುವೆಂಬ ದೈತ್ಯನೂ ದೇವತೆಯ ರೂಪವನ್ನೇ ತಾಳಿದನು.

ತೇಷಾಮಂತರಗೋ ಭೂತ್ವಾ ಪಪೌ ಚಾಽಮೃತಮುತ್ತಮಂ ।
ತಜ್ಜ್ಞಾತ್ವಾ ಚ ದ್ರುತಂ ವಿಷ್ಣುಃ ಶಿರಶ್ಚಕ್ರೇಣ ಚಾಽಚ್ಛಿನತ್ ॥ ೧೯ ॥
ಸುಧಾಸ್ಪರ್ಶಪ್ರಸಂಗೇನ ನ ಮಮಾರಾಽಸುರಸ್ತದಾ ।
ರಾಹುಃ ಕೇತುರಿತಿ ಖ್ಯಾತೌ ಕ್ಷೇತ್ರೇಽಸ್ಮಿನ್ಮುನಿಸತ್ತಮ ॥ ೨೦ ॥
ರಾಹುಕಾಯಾತ್ಸಮುದ್ಭೂತಂ ಬಹು ಸುಸ್ರಾವ ಶೋಣಿತಂ ।
ತಸ್ಮಿನ್ ಕ್ಷೇತ್ರೇ ಮಹತ್ತೀರ್ಥಂ ಜಾತಂ ತದ್ದೋಷನಾಶನಂ ॥ ೨೧ ॥
ತತ್ರ ಸ್ನಾತ್ವಾ ಶುಚಿರ್ಭೂತ್ವಾ ರಾಹೋರ್ದರ್ಶನತತ್ಪರಾಃ ।
ನ ತೇಷಾಂ ಜಾಯತೇ ಕಿಂಚಿದ್ರಾಹುಪೀಡಾ ಕದಾಚನ ॥ ೨೨ ॥
ವಾಂಛಿತಾರ್ಥಮವಾಪ್ನೋತಿ ಗೋಸಹಸ್ರಫಲಂ ಭವೇತ್ ।
ತತಸ್ತಾನಿ ಚ ರತ್ನಾನಿ ಮಹಾಕಾಲವನೇ ಸುರಾಃ ॥ ೨೩ ॥
ವಿಭಜ್ಯ ಭಾಗಾಂಸ್ತೇ ಸರ್ವೇ ಪ್ರಾಪ್ಯ ರತ್ನಭುಜೋಽಭವನ್ ।
ಮಣಿಂ ಪದ್ಮಾಂ ಧನುಃ ಶಂಖಂ ವಿಷ್ಣವೇ ನಾರದೋ ದದೌ ॥ ೨೪ ॥

---

೧೯. ಅವನು ದೇವತೆಗಳ ಮಧ್ಯದಲ್ಲಿ ಸೇರಿಕೊಂಡು ತಾನೂ ಅಮೃತವನ್ನು ಪಾನಮಾಡಿದನು. ಇದನ್ನು ತಿಳಿದ ಮಹಾವಿಷ್ಣುವು ಆ ಕ್ಷಣದಲ್ಲಿಯೇ ಅವನ ತಲೆಯನ್ನು ಕತ್ತರಿಸಿದನು.

೨೦. ಆದರೂ ಅಮೃತದ ಸ್ಪರ್ಶವಾಗಿದ್ದುದರಿಂದ ಆ ರಾಕ್ಷಸನು ಸಾಯಲಿಲ್ಲ. ಎಲೈ ಮುನಿಸತ್ತಮನೆ! ಆತನ ತಲೆಯೇ ರಾಹುವೆಂದೂ, ಶರೀರವೇ ಕೇತುವೆಂದೂ ಕರೆಯಲ್ಪಡುತ್ತ ಇಂದಿಗೂ ಆಕಾಶದಲ್ಲಿ ಪ್ರಖ್ಯಾತಗಳಾಗಿರುವುವು.

೨೧. ರಾಹುವಿನ ಶರೀರದಿಂದ ಉಂಟಾದ ರಕ್ತವು ಬಹುವಾಗಿ ಹರಿಯತೊಡಗಿತು. ಆ ಮಹಾಕ್ಷೇತ್ರದಲ್ಲಿ ಒಂದು ದೊಡ್ಡ ತೀರ್ಥವಾಗಿ ಪರಿಣಮಿಸಿತು. ಅದರಿಂದ ಅವನ ದೋಷವೂ ನಷ್ಟವಾಯಿತು.

೨೨. ಗ್ರಹಣಕಾಲಗಳಲ್ಲಿ ಆ ತೀರ್ಥದಲ್ಲಿ ಸ್ನಾನಮಾಡಿ ಶುಚಿಯಾಗಿ ರಾಹುವಿನ ದರ್ಶನವನ್ನು ಮಾಡುವವರಿಗೆಂದಿಗೂ ರಾಹುಗ್ರಹದ ಪೀಡೆಯು ಸ್ವಲ್ಪವೂ ಉಂಟಾಗುವುದಿಲ್ಲ.

೨೩–೨೪. ಅಂತಹವನು ತನ್ನ ವಾಂಛಿತವಿಷಯಗಳನ್ನೆಲ್ಲ ಪಡೆಯುವನು. ಮತ್ತು ಒಂದು ಸಾವಿರ ಗೋವುಗಳನ್ನು ದಾನಮಾಡಿದ ಪುಣ್ಯಕ್ಕೆ ಭಾಗಿಯಾಗುವನು. ಬಳಿಕ ಮಹಾಕಾಲವನದಲ್ಲಿ ದೇವತೆಗಳೆಲ್ಲರೂ ಕೂಡಿ ಆ ರತ್ನಗಳನ್ನು ಭಾಗಮಾಡಿಕೊಂಡು ಅನುಭವಿಸುತ್ತಿದ್ದರು. ಆಗ ನಾರದನು ಕೌಸ್ತುಭಮಣಿಯನ್ನೂ, ಮಹಾಲಕ್ಷ್ಮಿಯನ್ನೂ, ಶಾರ್ಙ್ಗಧನುಸ್ಸನ್ನೂ, ಪಾಂಚಜನ್ಯಶಂಖವನ್ನೂ, ಮಹಾವಿಷ್ಣುವಿಗೆ ಒಪ್ಪಿಸಿದನು.

ಸೂರ್ಯಾಯ ಚ ದದೌ ಹ್ಯಶ್ವಂ ಸಪ್ತಾಸ್ಯಂ ಚಾಽಬ್ಧಿಸಂಭವಂ ।
ಐರಾವತಂ ಗಜಶ್ರೇಷ್ಠಂ ವಾಸವಾಯ ಸಮರ್ಪಯತ್ ॥ ೨೫ ॥
ಪೀಯೂಷಂ ದಿವಿಷದ್ಗಣಾನ್ ದದೌ ಚಂದ್ರಂ ಚ ಶಂಭವೇ ।
ಪಾರಿಜಾತಂ ತರುಶ್ರೇಷ್ಠಂ ರಂಭಾಂ ಚೈವ ವರಾಂಗನಾಂ ॥ ೨೬ ॥
ಇಂದ್ರಕ್ರೀಡಾವನೇ ರಮ್ಯೇ ನಂದನೇ ಚ ಸಮರ್ಪಯತ್ ।
ಋಷೀಣಾಂ ಸಮುದಾದ್ಧೇನುಂ ಕಾಮದೋಗ್ಧ್ರೀಂ ಯಜ್ಞಸಿದ್ಧಯೇ॥೨೭॥
ನಿಧಿರೇಷ ಮಹಾಪದ್ಮಃ ಕುಬೇರಭವನಂ ಗತಃ ।
ಯತ್ತದ್ಧಾಲಾಹಲಂ ಪ್ರೋಕ್ತಂ ವಿಷಂ ಕೇನಾಽಪಿ ನಾದೃತಂ ॥ ೨೮ ॥
ಯತೋ ಯತಃ ಪ್ರಸರತಿ ಪ್ರಲಯಂ ಯಾಂತಿ ಜಂತವಃ ।
ದಧಾರ ತದ್ವಿಷಂ ಶಂಭುರ್ಜಗತಾಂ ಹಿತಕಾಮ್ಯಯಾ ॥ ೨೯ ॥
ತದಾ ಪ್ರಭೃತಿ ಮಹಾದೇವೋ ನೀಲಕಂಠ ಇತಿ ಸ್ಮೃತಃ ।
ರತ್ನಕುಂಡೇ ನರಃ ಸ್ನಾತ್ವಾ ನೀಲಗ್ರೀವಂ ಚ ಪಶ್ಯತಿ ॥ ೩೦ ॥

---

೨೫. ಸಮುದ್ರದಿಂದುದಿಸಿದ ಏಳುಮುಖವುಳ್ಳ ಕುದುರೆಯನ್ನು ಸೂರ್ಯನಿಗೆ ಕೊಟ್ಟನು. ಉತ್ತಮಗಜವಾದ ಐರಾವತವನ್ನು ಮಹೇಂದ್ರನಿಗೆ ಒಪ್ಪಿಸಿದನು.

೨೬–೨೭. ಅಮೃತವನ್ನು ದೇವತೆಗಳಿಗೆಲ್ಲ ಹಂಚಿ ಚಂದ್ರನನ್ನು ಪರಮೇಶ್ವರನಿಗೆ ಕೊಟ್ಟನು. ಪಾರಿಜಾತವೆಂಬ ಉತ್ತಮವೃಕ್ಷವನ್ನೂ ಸರ್ವಾಂಗಸುಂದರಿಯಾದ ರಂಭೆಯನ್ನೂ, ಮಹೇಂದ್ರನ ರಮ್ಯವಾದ ನಂದನವೆಂಬ ಕ್ರೀಡಾವನದಲ್ಲಿ ನೆಲೆಗೊಳಿಸಿದನು. ಮಹರ್ಷಿಗಳ ಯಜ್ಞಗಳು ಸಾಂಗವಾಗಿ ನೆರವೇರಬೇಕೆಂಬ ಅಭಿಲಾಷೆಯಿಂದ ಅವರಿಗೆ ಸರ್ವಕಾಮಫಲಪ್ರದೆಯಾದ ಕಾಮಧೇನುವೆಂಬ ಗೋವನ್ನು ಕೊಟ್ಟನು.

೨೮. ಮಹಾಪದ್ಮವೆಂಬ ನಿಧಿಯು ಕುಬೇರನ ಮನೆಯನ್ನು ಸೇರಿತು. ಆದರೆ ಕಡೆಯಲ್ಲಿ ಜನಿಸಿದ ಹಾಲಾಹಲವೆಂಬ ವಿಷವನ್ನು ಮಾತ್ರ ಯಾರೂ ಸ್ವೀಕರಿಸುವುದಕ್ಕೆ ಮುಂದುವರೆಯಲಿಲ್ಲ.

೨೯. ಆ ವಿಷವು ಪ್ರಸರಿಸಿದ ಕಡೆಗಳಲ್ಲೆಲ್ಲ ಪ್ರಾಣಿಗಳು ಸಾಯುತ್ತಿದ್ದುವು. ಅದನ್ನು ಕಂಡು ಮಹೇಶ್ವರನು ಲೋಕಗಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ತಾನೇ ಧರಿಸಿದನು.

೩೦–೩೧. ಅಂದು ಮೊದಲಾಗಿ ಮಹಾದೇವನು ನೀಲಕಂಠನೆಂದು ಪ್ರಸಿದ್ಧನಾದನು. ರತ್ನಕುಂಡದಲ್ಲಿ ಸ್ನಾನಮಾಡಿಕೊಂಡು ನೀಲಕಂಠನನ್ನು ನೋಡಿದ ಮಾನವನು ಸಮಸ್ತ ಪಾತಕಗಳನ್ನೂ ಕಳೆದುಕೊಂಡು ನವರತ್ನಗಳ ಐಶ್ವರ್ಯಕ್ಕೆ

ಮುಕ್ತ್ವಾ ಸ ಸರ್ವಪಾಪೇಭ್ಯಃ ಸರ್ವರತ್ನಭುಜೋ ಭವೇತ್ ।
ಶತಾಶ್ವಮೇಧಿಕಂ ಪುಣ್ಯಂ ಲಬ್ಧ್ವಾ ಶಿವಪುರಂ ವ್ರಜೇತ್ ॥ ೩೧ ॥
ತದಾದಾಯ ಸುರಾಃ ಸರ್ವೇ ಬ್ರಹ್ಮವಿಷ್ಣುಪುರೋಗಮಾಃ ।
ಊಚುಶ್ಚ ತೇ ತದಾ ವ್ಯಾಸ ಹರ್ಷನಿರ್ಭರಮಾನಸಾಃ ॥ ೩೨ ॥
ಉಜ್ಜಯಿನೀಂ ಸಮಾಸಾದ್ಯ ಜಾತಾ ರತ್ನಭುಜೋ ವಯಂ ।
ಪದ್ಮಾಯಾಶ್ಚ ನಿವಾಸೇನ ಯುಸ್ಮಾತ್ಸರ್ವಸುಖಾವಹಾ ॥ ೩೩ ॥
ತಸ್ಮಾತ್ಸರ್ವೇಷು ಕಾಲೇಷು ಪದ್ಮಾ ವಸತು ನಿಶ್ಚಲಾ ।
ಅದ್ಯ ಪ್ರಭೃತಿ ಪೂರೇಷಾ ಪದ್ಮಾವತೀತಿ ಚ ಸ್ಮೃತಾ ॥ ೩೪ ॥
ಯ ಏತಸ್ಯಾಂ ಮಹಾಭಾಗಾಃ ಸ್ನಾನಂ ದಾನಂ ತಥಾರ್ಚನಂ ।
ತರ್ಪಣಂ ಚೈವ ದೇವಾನಾಂ ಪಿತ್ರೂಣಾಂ ಚ ವಿಶೇಷತಃ ॥ ೩೫ ॥
ನ ತೇಷಾಂ ದುಷ್ಕೃತಂ ಕಿಂಚಿನ್ನ ದಾರಿದ್ರ್ಯಂ ನ ದುರ್ಗತಿಃ ।
ಶತಂ ಕುಲಾನಿ ಸರ್ವಾಣಿ ತಾರಯೇನ್ನಿರಯಾತ್ತದಾ ॥ ೩೬ ॥
ಧನಾರ್ಥೀ ಚೈವ ಪುತ್ರಾರ್ಥೀ ವಿದ್ಯಾರ್ಥೀ ಬಹುಕಾಮುಕಃ ।
ಯತ್ರ ಕುತ್ರ ಸ್ಥಿತೋ ಭೂತ್ವಾ ಪದ್ಮಾವತೀತಿ ಚ ಸ್ಮರೇತ್ ॥ ೩೭ ॥

---

ಭಾಗಿಯಾಗುವನು. ಅವನು ಒಂದು ನೂರು ಅಶ್ವಮೇಧಗಳನ್ನು ಮಾಡಿದ ಪುಣ್ಯವನ್ನು ಪಡೆದು ಅಂತ್ಯದಲ್ಲಿ ಶಿವಲೋಕಕ್ಕೆ ತೆರಳುವನು.

೩೨. ವ್ಯಾಸನೆ! ಬ್ರಹ್ಮವಿಷ್ಣುಗಳೇ ಮುಂತಾದ ದೇವತೆಗಳೆಲ್ಲರೂ ತಮ್ಮ ತಮ್ಮ ಐಶ್ವರ್ಯಗಳನ್ನು ತೆಗೆದುಕೊಂಡು ಹರ್ಷದಿಂದ ತುಂಬಿದ ಮನಸ್ಸುಳ್ಳವರಾಗಿ ಮಹಾಕಾಲವನದಲ್ಲಿ ನಿಂತು ಇಂತೆಂದು ಹೇಳಿದರು.

೩೩. ಈ ಉಜ್ಜಯಿನಿಯನ್ನು ಹೊಂದಿಯೇ ನಾವು ಚತುರ್ದಶರತ್ನಗಳಿಗೆ ಒಡೆಯರಾದೆವು. ಮಹಾಲಕ್ಷ್ಮಿಯೂ ಇಲ್ಲಿಯೇ ವಾಸಮಾಡುತ್ತಿರುವುದರಿಂದ ಈ ಕ್ಷೇತ್ರವು ಸರ್ವಸುಖಭರಿತವಾಗಿರುವುದು.

೩೪. ಆದುದರಿಂದ ಇನ್ನುಮೇಲೆ ಲಕ್ಷ್ಮಿಯು ಇಲ್ಲಿ ನಿರಂತರವೂ ವಾಸ ಮಾಡುತ್ತಿರಲಿ. ಇಂದು ಮೊದಲಾಗಿ ಈ ಪಟ್ಟಣವು ಪದ್ಮಾವತಿಯೆಂದು ಹೆಸರುಳ್ಳದ್ದಾಗಲಿ.

೩೫–೩೬. ಯಾವ ಮಹಾಮಹಿಮರು ಇಲ್ಲಿ ಸ್ನಾನ, ದಾನ, ಶಿವಪೂಜೆ, ದೇವತೆಗಳಿಗೂ ಪಿತೃಗಳಿಗೂ ತರ್ಪಣಗಳು ಮುಂತಾದುವನ್ನು ಮಾಡುವರೊ, ಅವರಿಗೆಂದಿಗೂ ಪಾತಕವಾಗಲಿ, ದಾರಿದ್ರ್ಯವಾಗಲಿ, ದುರ್ಗತಿಯಾಗಲಿ ಉಂಟಾಗುವುದಿಲ್ಲ. ಅಂತಹ ಮನುಷ್ಯನು ನೂರುಕುಲಗಳ ಸಮಸ್ತರನ್ನೂ ನರಕದಿಂದ ಮೇಲಕ್ಕೆತ್ತಿ ಕಡೆಹಾಯಿಸುವನು.

೩೭. ಧನಾರ್ಥಿಯಾಗಲಿ, ಪುತ್ರಕಾಮನಾಗಲಿ, ವಿದ್ಯಾಭಿಲಾಷೆಯುಳ್ಳವ

ಸರ್ವಾನ್ಕಾಮಾನವಾಪ್ನೋತಿ ಶಿವಃ ಸಾಕ್ಷಾದ್ಭವೇನ್ನರಃ ।
ಏತದ್ವ್ಯಾಸ ಫಲಂ ನಾಮ್ನಃ ಕಿಂ ಚಿರಂ ಸೇವನೇನ ವೈ ॥ ೩೮ ॥
ಯೇ ಶೃಣ್ವಂತಿ ಕಥಾಂ ಪುಣ್ಯಾಂ ಯೇ ಶ್ರಾವಯಂತಿ ನಿತ್ಯಶಃ ।
ನ ತೇಷಾಂ ಪಾತಕಂ ಕಿಂಚಿದಶ್ವಮೇಧಫಲಂ ಲಭೇತ್ ॥ ೩೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಪದ್ಮಾವತೀ ನಾಮ ಕಥಾವರ್ಣನಂ" ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

ನಾಗಲಿ, ಇತರ ಯಾವ ಅಪೇಕ್ಷೆಯುಳ್ಳವನೇ ಆಗಲಿ, ಎಲ್ಲಿ ನೆಲಸಿದ್ದರೂ ಅಲ್ಲಿಂದಲೇ ಪದ್ಮಾವತೀ ನಗರಿಯನ್ನು ಸ್ಮರಿಸಬೇಕು.

೩೮. ಅವನು ಸಕಲಾಭೀಷ್ಟಗಳನ್ನೂ ಪಡೆಯುವನಲ್ಲದೆ ಆವನಿಗೆ ಶಿವನೂ ಸಾಕ್ಷಾತ್ಕಾರವನ್ನು ನೀಡುವನು. ಎಲೈ ವ್ಯಾಸಮುನಿಯೆ! ಕೇವಲ ನಾಮದ ಮಹತ್ತ್ವವೇ ಇಷ್ಟಿರುವುದೆಂದಮೇಲೆ ಇನ್ನು ಕ್ಷೇತ್ರದಲ್ಲಿ ಕೆಲವುಕಾಲ ವಾಸಮಾಡಿ ಸೇವಿಸುವುದರ ಫಲವನ್ನು ಹೇಳಬೇಕೆ?

೩೯. ಪರಮಪುಣ್ಯವಾದ ಈ ಕಥೆಯನ್ನು ನಿತ್ಯವೂ ಯಾರು ಕೇಳುವರೊ, ಯಾರು ಇತರರಿಗೆ ಶ್ರವಣಮಾಡಿಸುವರೊ, ಅವರು ನಿಷ್ಪಾಪರಾಗುವರಲ್ಲದೆ ಅಶ್ವಮೇಧ ಫಲವು ಅವರಿಗೆ ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಪದ್ಮಾವತೀನಾಮಕಥನವರ್ಣನ"ವೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಚತ್ವಾರಿಂಶೋಽಧ್ಯಾಯಃ

### ಕುಮುದ್ವತೀಪ್ರಭಾವಕಥನಂ

**ಸನತ್ಕುಮಾರ ಉವಾಚ :—**

**ಶೃಣುಷ್ವಾಽವಹಿತೋ ವ್ಯಾಸ ಕಥಾಂ ಪಾಪಹರಾಂ ಪರಾಂ ।**
**ಏಷಾ ಕುಮುದ್ವತೀ ಜಾತಾ ಯಥಾ ಪದ್ಮಾವತೀ ಪುರೀ ।**
**ತಥಾಽಹಂ ಸಂಪ್ರವಕ್ಷ್ಯಾಮಿ ಯಥಾ ಮೇ ಲೋಮಶೋಽಬ್ರವೀತ್ ॥೧॥**

**ಲೋಮಶ ಉವಾಚ :—**

**ಶೃಣು ವತ್ಸ ಮಯಾ ದೃಷ್ಟಾ ಬಹುಪುಣ್ಯತಮಾ ಪುರೀ ।**
**ಏಕದಾ ತೀರ್ಥಯಾತ್ರಾಯಾಂ ಗತೋಽಹಂ ವೈ ಕುಶಸ್ಥಲೀಂ ।**
**ಗುಹ್ಯಾದ್ಗುಹ್ಯತರಂ ಸ್ಥಾನಂ ಯತ್ರ ಸನ್ನಿಹಿತೋ ಹರಃ ॥ ೨ ॥**
**ಯಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾ ವ್ಯಪೋಹತಿ ।**
**ಯತ್ರ ತತ್ರ ಸ್ಥಿತಾ ವಿಪ್ರಾ ಬ್ರಹ್ಮಘೋಷಮಕುರ್ವತ ॥ ೩ ॥**
**ಯಜ್ಞಾಂಶ್ಚೈವ ತಥಾ ಚಿತ್ರಾನೃತ್ವಿಜೋದಾರಕರ್ಮಣಃ ।**
**ಋಷಯಶ್ಚ ಮಹಾಭಾಗಾಃ ಪ್ರಕುರ್ವಂತಿ ಸಮಾಹಿತಾಃ ॥ ೪ ॥**

---

## ಕನ್ನಡದ ಅನುವಾದ

### ಕುಮುದ್ವತೀಪ್ರಭಾವಕಥನ

೧. ಸನತ್ಕುಮಾರನು ಹೇಳುತ್ತಾನೆ:—ವ್ಯಾಸಮಹರ್ಷಿಯೆ ! ಈ ಪದ್ಮಾವತಿಯೆಂಬ ನಗರವೇ ಕುಮುದ್ವತಿಯೆಂದು ಕರೆಯಲ್ಪಟ್ಟುದನ್ನು ತಿಳಿಸುವೆನು. ಪಾಪಹರವಾದ ಈ ಉತ್ತಮಕಥೆಯನ್ನು ಸಮಾಧಾನದಿಂದ ಕೇಳು. ನನಗೆ ಲೋಮಶಮಹಾಮುನಿಯು ಹೇಳಿರುವ ಈ ಚರಿತ್ರೆಯನ್ನು ಸಮಗ್ರವಾಗಿ ಹೇಳುತ್ತೇನೆ.

೨. ಲೋಮಶನು ಹೇಳುತ್ತಾನೆ :—ವತ್ಸನೆ! ಕೇಳು. ಪರಮಪುಣ್ಯಪ್ರದವಾದ ಪಟ್ಟಣವೊಂದನ್ನು ನಾನು ಕಂಡಿರುವೆನು. ಒಮ್ಮೆ ನಾನು ತೀರ್ಥಯಾತ್ರೆಯನ್ನು ಮಾಡುತ್ತ ಕುಶಸ್ಥಳಿಗೆ ಬಂದು ಸೇರಿದೆನು. ಆ ಕ್ಷೇತ್ರವು ಅತ್ಯಂತ ಗುಹ್ಯವಾದುದಾಗಿರುವುದು. ಅಲ್ಲಿ ಪರಮೇಶ್ವರನು ನಿತ್ಯವೂ ಸನ್ನಿಹಿತನಾಗಿರುವನು.

೩. ಆ ಕ್ಷೇತ್ರವನ್ನು ನೋಡುವ ಮಾತ್ರದಿಂದಲೇ ಬ್ರಹ್ಮಹತ್ಯೆಯ ಪಾತಕವೂ ತೊಲಗುವುದು. ಅಲ್ಲಿರುವ ಬ್ರಾಹ್ಮಣರೆಲ್ಲರೂ ವೇದಘೋಷಗಳನ್ನು ನಿರಂತರವಾಗಿ ಮಾಡುತ್ತಿರುವರು.

೪. ಶಾಸ್ತ್ರೋಕ್ತ ಕರ್ಮಗಳಲ್ಲಿ ಕುಶಲರಾದ ಋತ್ವಿಜರೂ ಮಹಾಭಾಗ್ಯಶಾಲಿಗಳಾದ ಮಹರ್ಷಿಗಳೂ ಸಮಾಧಾನದಿಂದ ಅನೇಕವಿಧಗಳಾದ ಯಜ್ಞಗಳನ್ನು ನೆರವೇರಿಸುತ್ತಿರುವರು.

ಋಷಿಪತ್ನ್ಯಸ್ತಥಾ ಸಾಧ್ವ್ಯಃ ಪರಿಚರ್ಯಾಂ ಪ್ರಕುರ್ವತೇ ।
ದಶ ವಿಷ್ಣುಸಮಾಃ ಖ್ಯಾತಾಸ್ತತ್ರೈವ ನಿವಸಂತಿ ತೇ ॥ ೫ ॥
ರುದ್ರಾಹ್ಯೇಕಾದಶ ಪ್ರೋಕ್ತಾ ದ್ವಾದಶಾಽರ್ಕಾಸ್ತಥೈವ ಚ ।
ಅಷ್ಟೌ ಚ ವಸವಃ ಖ್ಯಾತಾ ವಿಶ್ವೇದೇವಾಸ್ತ್ರಯೋದಶ ॥ ೬ ॥
ಅಷ್ಟೌ ಚ ದಿಗ್ಗಜಾಶ್ಚೈವ ಮನವಶ್ಚ ಚತುರ್ದಶ ।
ಮರುದ್ಗಣಾಶ್ಚ ತೇ ಸರ್ವೇ ತತ್ರೈವೇಂದ್ರಪುರೋಗಮಾಃ ॥ ೭ ॥
ಗಂಧರ್ವಾಽಪ್ಸರಸಶ್ಚೈವ ಕಿನ್ನರೋರಗರಾಕ್ಷಸಾಃ ।
ಸಿದ್ಧಾಸ್ತಪಸ್ವಿನೋ ವತ್ಸ ತತ್ರೈವ ಸಮುಪಸ್ಥಿತಾಃ ॥ ೮ ॥
ಅಷ್ಟೌ ವೈ ಭೈರವಾಃ ಖ್ಯಾತಾಶ್ಚತ್ವಾರಃ ಪವನಾತ್ಮಜಾಃ ।
ವಿನಾಯಕಾಶ್ಚ ಷಟ್ಪ್ರೋಕ್ತಾ ದೇವ್ಯಶ್ಚ ಚತುರ್ವಿಂಶತಿಃ ॥ ೯ ॥
ಏತೇ ದೇವಗಣಾಃ ಪ್ರೋಕ್ತಾ ರೌದ್ರಾಶ್ಚೈವ ತಥಾ ಗಣಾಃ ।
ಬ್ರಹ್ಮಾ ವೇದವಿದಾಂ ಶ್ರೇಷ್ಠೋ ಮರೀಚಿಃ ಕಶ್ಯಪಾದಯಃ ॥ ೧೦ ॥
ದಕ್ಷಃ ಪ್ರಜಾಪತಿಃ ಶ್ರೇಷ್ಠೋ ದಿತಿರ್ವೈ ದೇವಮಾತರಃ ।
ಸುರಭಿಪ್ರಮುಖಾ ಗಾವಃ ಸ್ಥಾವರಾಣಿ ಚರಾಣಿ ಚ ॥ ೧೧ ॥

---

೫. ಪರಮಸಾಧ್ವಿಯರಾದ ಋಷಿಪತ್ನಿಯರು ಅವರಿಗೆ ಬೇಕಾದ ಪದಾರ್ಥಗಳನ್ನೊದಗಿಸಿಕೊಡುತ್ತಿರುವರು. ಮಹಾವಿಷ್ಣುವಿನ ದಶಾವತಾರ ಪುರುಷರೂ ಅಲ್ಲಿ ವಾಸಮಾಡುತ್ತಿರುವರು.

೬–೮. ಏಕಾದಶರುದ್ರರೂ, ದ್ವಾದಶಾದಿತ್ಯರೂ, ಪ್ರಖ್ಯಾತರಾದ ಅಷ್ಟವಸುಗಳೂ, ಹದಿಮೂರು ಮಂದಿ ವಿಶ್ವೇದೇವರೂ, ಎಂಟು ದಿಗ್ಗಜಗಳೂ, ಹದಿನಾಲ್ಕು ಮನುಗಳೂ, ಮಹೇಂದ್ರನೇ ಮೊದಲಾದ ಸಮಸ್ತ ದೇವತೆಗಳ ಗಡಣಗಳೂ, ಗಂಧರ್ವರೂ, ಅಪ್ಸರೆಯರೂ, ಕಿನ್ನರರೂ, ನಾಗರೂ, ರಾಕ್ಷಸರೂ, ಸಿದ್ಧರೂ, ಮಹರ್ಷಿಗಳೂ ಅಲ್ಲಿಯೇ ಬಂದು ನೆಲಸಿರುವರು.

೯. ಅಲ್ಲದೆ ಎಂಟುಮಂದಿ ಭೈರವರೂ, ನಾಲ್ಕುಮಂದಿ ವಾಯುಪುತ್ರರೂ, ಆರುಮಂದಿ ವಿನಾಯಕರೂ, ಇಪ್ಪತ್ತನಾಲ್ಕುಮಂದಿ ದೇವಿಯರೂ ಅಲ್ಲಿಯೇ ವಾಸಮಾಡುತ್ತಿರುವರು.

೧೦–೧೫. ಹಿಂದೆ ಹೇಳಿದ ದೇವತಾಗಣಗಳೂ, ಈಶ್ವರಾನುಚರರ ಗಣಗಳೂ, ವೇದಜ್ಞರಲ್ಲಿ ಶ್ರೇಷ್ಠನಾದ ಚತುರ್ಮುಖಬ್ರಹ್ಮನೂ, ಮರೀಚಿಕಶ್ಯಪರೇ ಮುಂತಾದ ಮಹರ್ಷಿಗಳೂ, ಪ್ರಜೇಶ್ವರರಲ್ಲಿ ಉತ್ತಮನೆನಿಸಿದ ದಕ್ಷನೂ, ದಿತಿಯೂ, ದೇವಮಾತೆಯಾದ ಅದಿತಿಯೂ, ಕಾಮಧೇನುವೇ ಮೊದಲಾದ ಆಕಳುಗಳೂ, ಸಕಲ ಚರಾಚರಪ್ರಾಣಿಗಳೂ, ಭೂಲೋಕದಲ್ಲಿರುವ ಸಮಸ್ತ ತೀರ್ಥಗಳೂ, ನದಿಗಳೂ, ಗಿರಿನಿರ್ಝರಗಳೂ, ಪರಮಪುಣ್ಯಪ್ರದಗಳೆನಿಸಿದ

ತೀರ್ಥಾನಿ ಯಾನಿ ಸರ್ವಾಣಿ ನದ್ಯಃ ಪ್ರಸ್ರವಣಾನಿ ಚ ।
ಕ್ಷೇತ್ರಾಣಿ ಚೈವ ಸರ್ವಾಣಿ ಭುವಿ ಪುಣ್ಯತಮಾನಿ ವೈ ॥ ೧೨ ॥
ಸಪ್ತ ಪುರ್ಯಸ್ತ್ರಯೋ ಗ್ರಾಮಾ ನವಾಽರಣ್ಯಾ ನವೋಷರಾಃ ।
ಚತುರ್ದಶಾನಿ ಗುಹ್ಯಾನಿ ಮುಕ್ತಿದ್ವಾರಾಣಿ ಭೂತಲೇ ॥ ೧೩ ॥
ಸಮುದ್ರಾಶ್ಚೈವ ಚತ್ವಾರೋ ರತ್ನಾನಿ ವಿವಿಧಾನಿ ಚ ।
ಸತೀ ಪತಿವ್ರತಾಃ ಸಾಧ್ವ್ಯಸ್ತಥಾ ಬ್ರಹ್ಮರ್ಷಯೋಽಮಲಾಃ ।
ರಾಜರ್ಷಯಸ್ತಥಾ ಶಾಂತಾ ಬ್ರಾಹ್ಮಣಾ ವೇದಪಾರಗಾಃ ॥ ೧೪ ॥
ವೇದಾಃ ಪುರಾಣಸ್ಮೃತಯಃ ಗಾಥಾ ಗೀತಿಃ ಪ್ರಹೇಲಿಕಾಃ ।
ಉಪಾಸಾಂಚಕ್ರಿರೇ ತಸ್ಯ ದೇವದೇವೇಹ್ಯುಮಾಪತೇಃ ॥ ೧೫ ॥
ತಸ್ಯ ದರ್ಶನಮಾತ್ರೇಣ ಜಾತೋಽಹಂ ವಿಜ್ವರೋಽಮಲಃ ।
ದೀರ್ಘಾಯುರ್ದೀರ್ಘತಪಸಾ ಜರಾರೋಗವಿವರ್ಜಿತಃ ॥ ೧೬ ॥
ಸ್ನಾತೋಽಹಂ ಸರ್ವತೀರ್ಥೇಷು ಶುಚಿರ್ಭೂತ್ವಾ ಸಮಾಹಿತಃ ।
ಪ್ರಸನ್ನಮಾನಸೋ ಜಾತಃ ಸರ್ವಪಾಪಪರಾಙ್ಮುಖಃ ॥ ೧೭ ॥
ದೃಷ್ಟ್ವಾ ಪದ್ಮಾವತೀಂ ಶುದ್ಧಾಂ ಸರ್ವಕಾಮವರಪ್ರದಾಂ ।
ನ ಯತ್ರ ದೃಶ್ಯತೇ ಕಶ್ಚಿಚ್ಛೋಕರೋಗಪರೋ ಜನಃ ॥ ೧೮ ॥

---

ಸಕಲ ಕ್ಷೇತ್ರಗಳೂ, ಮೋಕ್ಷದಾಯಕಗಳೆನಿಸಿದ ಏಳು ಪುರಗಳೂ, ಮೂರು ಗ್ರಾಮಗಳೂ, ಒಂಬತ್ತು ಅರಣ್ಯಗಳೂ, ಒಂಬತ್ತು ಊಷರಗಳೂ, ಮುಕ್ತಿ ದ್ವಾರಗಳೆನಿಸಿದ ಹದಿನಾಲ್ಕು ಗುಹ್ಯಸ್ಥಾನಗಳೂ, ನಾಲ್ಕು ಸಮುದ್ರಗಳೂ, ಅನೇಕ ವಿಧಗಳಾದ ರತ್ನಗಳೂ, ಪತಿವ್ರತೆಯರೂ ಸಾಧುಗಳೂ ಆದ ಸತಿಯರೂ, ನಿಷ್ಕಲ್ಮಷರಾದ ಬ್ರಹ್ಮರ್ಷಿಗಳೂ, ಪ್ರಶಾಂತಚಿತ್ತರಾದ ರಾಜರ್ಷಿಗಳೂ, ವೇದ ಶಾಸ್ತ್ರ ಪಾರಂಗತರಾದ ಬ್ರಾಹ್ಮಣೋತ್ತಮರೂ, ವೇದಗಳೂ, ಪುರಾಣಗಳೂ, ಲೋಕಗಾಥೆಗಳೂ, ಸಂಗೀತಗಳೂ, ಒಗಟುಗಳೂ, ಸಕಲ ವಿದ್ಯೆಗಳೂ ಅಲ್ಲಿ ದೇವಾಧಿದೇವತೆಗಳಿಂದಲೂ ಪೂಜ್ಯತಮನಾಗಿ ನೆಲಸಿರುವ ಮಹಾಕಾಲನನ್ನು ಉಪಾಸನೆಮಾಡುತ್ತಿರುವುವು.

೧೬. ಆ ಕ್ಷೇತ್ರವನ್ನು ನೋಡಿದ ಮಾತ್ರದಿಂದಲೇ ನಾನು ನಿಶ್ಚಿಂತನೂ ಪರಿಶುದ್ಧನೂ ಆದೆನು. ಮತ್ತು ಅಲ್ಲಿಯೇ ಬಹುಕಾಲದ ತಪಸ್ಸನ್ನೂ ಮಾಡಿ ದೀರ್ಘಾಯುಷ್ಯವಂತನೂ ಮುಪ್ಪು ರೋಗಗಳಿಲ್ಲದವನೂ ಆದೆನು.

೧೭. ಅಲ್ಲಿರುವ ಸಮಸ್ತತೀರ್ಥಗಳಲ್ಲಿಯೂ ನಾನು ಸ್ನಾನಮಾಡಲು ಶುಚಿಯೂ, ಸಮಾಧಿಯುಕ್ತನೂ, ಪ್ರಸನ್ನವಾದ ಮನಸ್ಸುಳ್ಳವನೂ, ಸಮಸ್ತ ಪಾಪಗಳಿಂದ ದೂರನೂ ಆದೆನು.

೧೮. ಪರಿಶುದ್ಧವೂ ಸಕಲಾಭೀಷ್ಟಫಲಪ್ರದವೂ ಆದ ಪದ್ಮಾವತೀನಗರ

ನ ದುಃಖೀ ನ ಚ ದಾರಿದ್ರೋ ನ ಮೂರ್ಖೋ ನಾಽಜಿತೇಂದ್ರಿಯಃ ।
ಪರಸ್ಪರವಿರೋಧೀ ನ ನೃತಿರ್ಯಕ್ಷು ಚ ದೃಶ್ಯತೇ ॥ ೧೯ ॥
ಅನ್ಯೋನ್ಯಂ ಸರ್ವಮಾತ್ರಾಣಿ ಅನ್ಯೋನ್ಯಂ ಚೋಪಕಾರಿಣಃ ।
ಸರ್ವೇ ದಾಂತಾಶ್ಚ ಶಾಂತಾಶ್ಚ ಸರ್ವೇ ವಿದ್ಯೋಪದೇಶಿನಃ ॥ ೨೦ ॥
ಉದ್ಯಾನಾನಿ ಚ ರಮ್ಯಾಣಿ ವನಾನ್ಯುಪವನಾನಿ ಚ ।
ಹರ್ಮ್ಯಾಣಿ ಚ ಸು ಶುಭ್ರಾಣಿ ಶ್ರೇಣೀಬದ್ಧಾನಿ ಭಾಂತಿ ವೈ ॥ ೨೧ ॥
ನಾನಾರತ್ನಸಮಾಕೀರ್ಣೈಃ ಹೇಮಕುಂಭೈಃ ಸುಶೋಭನೈಃ ।
ವಿರಾಜಂತೇ ವಿಚಿತ್ರಾಣಿ ಗೀತವಾದ್ಯಮಹೋತ್ಸವೈಃ ॥ ೨೨ ॥
ಸದೈವ ವಸತೇ ಯತ್ರ ಉಮಯಾ ಸಹ ಶಂಕರಃ ।
ಚಂದ್ರಚೂಡಃ ಕೃತ್ತಿವಾಸಾಶ್ಚಿತಾಭಸ್ಮಾಂಗಲೇಪನಃ ॥ ೨೩ ॥
ಚಂದ್ರಜ್ಯೋತ್ಸ್ನಾಕಲಾಪೂರ್ಣಮರೀಚಿಭಿಃ ಸದಾ ಬಭೌ ।
ಯತ್ರ ನೋ ಕೃಷ್ಣಪಕ್ಷೋಽಭೂನ್ನಾಽಮಾವಾಸ್ಯಾ ನ ವೈ ತಮಃ ॥ ೨೪ ॥

---

ವನ್ನು ನೋಡಿದವರಲ್ಲಿ ಯಾವನೊಬ್ಬನೂ ಶೋಕದಿಂದಾಗಲಿ, ರೋಗಗಳಿಂದಾಗಲಿ ದುಃಖಗೊಳ್ಳುವುದಿಲ್ಲ.

೧೯. ಅಲ್ಲಿ ವಾಸಮಾಡುವ ಮನುಷ್ಯರಲ್ಲಾಗಲಿ, ತಿರ್ಯಗ್ಜಂತುಗಳಲ್ಲಿಯಾಗಲಿ ದುಃಖ, ದಾರಿದ್ರ್ಯ, ಮೂರ್ಖತ್ವ, ಇಂದ್ರಿಯಲೋಲುಪತೆ, ಪರಸ್ಪರ ವೈರ ಮುಂತಾದುವುಗಳು ಕಾಣುವುದಿಲ್ಲ.

೨೦. ಅಲ್ಲಿನ ಜನರೆಲ್ಲರೂ ಪರಸ್ಪರಮೈತ್ರಿಯಿಂದಲೂ, ಅನ್ಯೋನ್ಯ ಉಪಕಾರಗಳಿಂದಲೂ, ಬಾಹ್ಯೇಂದ್ರಿಯ ಅಂತರಿಂದ್ರಿಯ ನಿಗ್ರಹಗಳಿಂದಲೂ ಕೂಡಿದವರಾಗಿ ಸಕಲರೂ ಬ್ರಹ್ಮವಿದ್ಯೆಯನ್ನುಪದೇಶಮಾಡುವವರಾಗಿರುವರು.

೨೧. ಆ ಪಟ್ಟಣದ ಉದ್ಯಾನಗಳೂ, ವನಗಳೂ, ಉಪವನಗಳೂ ಮನೋಹರಗಳಾಗಿರುವುವು. ಸಾಲುಸಾಲಾಗಿ ಕಟ್ಟಿರುವ ಮಹಾಸೌಧಗಳು ಸುಣ್ಣಬಣ್ಣಗಳಿಂದ ಶುಭ್ರವಾಗಿ ಕಂಗೊಳಿಸುತ್ತಿರುವುವು.

೨೨. ವಾಸಗೃಹಗಳು ನವರತ್ನಖಚಿತಗಳೂ, ಶೋಭನಗಳೂ ಆದ ಚಿನ್ನದ ಕಳಶಗಳಿಂದಲೂ, ಸಂಗೀತ, ವಾದ್ಯಗಳೇ ಮೊದಲಾದ ಮಹೋತ್ಸವಗಳಿಂದಲೂ ಅನೇಕ ವಿಧಗಳಾಗಿ ರಾಜಿಸುತ್ತಿರುವುವು.

೨೩. ಅಂತಹ ನಗರದಲ್ಲಿ ಚಂದ್ರಶೇಖರನೂ, ಗಜಚರ್ಮಧಾರಿಯೂ, ಸ್ಮಶಾನಭಸ್ಮವಿಭೂಷಿತನೂ ಆದ ಪರಮೇಶ್ವರನು ಪಾರ್ವತಿಯೊಡನೆ ಸರ್ವಕಾಲದಲ್ಲಿಯೂ ವಾಸಮಾಡುತ್ತಿರುವನು.

೨೪. ಆ ನಗರದಲ್ಲಿ ಚಂದ್ರನ ಬೆಳದಿಂಗಳ ಹದಿನಾರುಕಳೆಗಳ ಪೂರ್ಣಕಾಂತಿಯೇ ನಿತ್ಯವೂ ಕಾಣುತ್ತಿರುವುದು. ಆದುದರಿಂದ ಕೃಷ್ಣಪಕ್ಷವಾಗಲಿ, ಅಮಾವಾಸ್ಯೆಯಾಗಲಿ, ಅಂಧಕಾರವಾಗಲಿ ಅಲ್ಲಿರುವುದಿಲ್ಲ.

**ಸದೈವ ಪುಷ್ಪಿತಾ ಶ್ಯಾಮಾ ಬಾಲ್ಯರೂಪಾವತೀ ಯಥಾ ।**
**ಹರ್ಮ್ಯಪೃಷ್ಠೇ ಗವಾಕ್ಷೇ ಚ ದ್ವಾರಾಜಿರಗೃಹಾಂತರೇ ॥ ೨೫ ॥**
**ಗಿರಿಗಹ್ವರಕುಂಜೇಷು ಗುಹಾಧ್ವಾಂತಾಂತರೇಷು ಚ ।**
**ಆಶ್ರಮೇಷು ಚ ರಮ್ಯೇಷು ವನೇಷೂಪವನೇಷು ಚ ॥ ೨೬ ॥**
**ಗೃಹದೀರ್ಘಿಕಾಸು ರಮ್ಯಾಸು ಶಾಲಾಮಾಲಾಸು ಸರ್ವತಃ ।**
**ಚಂದ್ರಜ್ಯೋತ್ಸ್ನಾಸಮಾಪೂರ್ಣಾ ದೃಶ್ಯಂತೇ ಧವಲಾ ದಿಶಃ ॥ ೨೭ ॥**
**ಕುಮುದ್ವತೀಪ್ರಫುಲ್ಲಾನಿ ವಿರಾಜಂತೇ ಸರಾಂಸಿ ಚ ।**
**ಜ್ಯೋತಿರ್ಗಣಸಮಾಕೀರ್ಣಂ ಶರದೀವ ನಭಸ್ಥಲಂ ॥ ೨೮ ॥**
**ನದ್ಯಃ ಸರಾಂಸಿ ಸರ್ವಾಣಿ ವಾಪೀಕೂಪಸುಪಲ್ವಲಾಃ ।**
**ಕುಮುದ್ವತ್ಯಾ ಸಮಾಕೀರ್ಣಾ ಆಸೀಚ್ಚಾಂದ್ರಮಸೀ ಮಹೀ ॥ ೨೯ ॥**
**ಯಸ್ಮಾತ್ಸರ್ವೇಷು ಕಾಲೇಷು ಪ್ರಫುಲ್ಲಾ ಚ ಕುಮುದ್ವತೀ ।**
**ತಸ್ಮಾತ್ಪದ್ಮಾವತೀಹ್ಯೇಷಾ ಜಾತಾ ಕುಮುದ್ವತೀ ಪುರೀ ॥ ೩೦ ॥**
**ಕುಮುದ್ವತ್ಯಾಂ ನರಾ ಯೇ ತು ಶ್ರಾದ್ಧಂ ಕುರ್ಯುಃ ಸಮಾಹಿತಾಃ ।**
**ನ ತೇಷಾಂ ಪಿತರಃ ಸ್ವರ್ಗಾತ್ ಚ್ಯವಂತೇ ಹಿ ಕದಾಚನ ॥ ೩೧ ॥**

---

೨೫–೨೭. ಆ ಪಟ್ಟಣವು ಸುಂದರಿಯಾದ ಬಾಲೆಯಂತೆ ಪುಷ್ಪಿತವೂ ಶ್ಯಾಮಳವೂ ಆಗಿ ಯಾವಾಗಲೂ ಕಾಣುತ್ತಿದ್ದಿತು. ಮಹಡಿಗಳಲ್ಲಿಯೂ, ಗವಾಕ್ಷಿಗಳಲ್ಲಿಯೂ, ಬಾಗಿಲುಗಳಲ್ಲಿಯೂ, ಅಂಗಳಗಳಲ್ಲಿಯೂ, ಮನೆಗಳಲ್ಲಿಯೂ, ಪರ್ವತಗಳ ಗುಹೆಗಳಲ್ಲಿಯೂ, ಲತಾಮಂಟಪಗಳಲ್ಲಿಯೂ, ಕಣಿವೆಗಳಲ್ಲಿಯೂ, ಮನೋಹರಗಳಾದ ಆಶ್ರಮಗಳಲ್ಲಿಯೂ, ಅರಣ್ಯಗಳಲ್ಲಿಯೂ, ಉಪವನಗಳಲ್ಲಿಯೂ, ರಮ್ಯಗಳಾದ ಮನೆಗಳ ತಿಳಿಗೊಳಗಳಲ್ಲಿಯೂ, ಗೀತನೃತ್ಯಶಾಲೆಗಳಲ್ಲಿಯೂ ಎಲ್ಲೆಲ್ಲಿಯೂ ಚಂದ್ರಕಾಂತಿಯಿಂದ ಸಕಲದಿಕ್ಕುಗಳೂ ಬಿಳುಪುಗೊಂಡು ಕಾಣುತ್ತಿರುವುವು.

೨೮–೨೯. ಶರತ್ಕಾಲದಲ್ಲಿ ಗ್ರಹತಾರಕೆಗಳಿಂದಕೂಡಿ ಪ್ರಕಾಶಿಸುತ್ತಿರುವ ಆಕಾಶದಂತೆ ಸರೋವರಗಳೆಲ್ಲವೂ ಕನ್ನೈದಿಲೆಗಳ ಸಮೂಹಗಳಿಂದ ವಿರಾಜಿಸುತ್ತಿರುವುವು. ನದಿಗಳು, ಸರೋವರಗಳು, ಸಮಸ್ತ ಕೊಳಗಳು, ಬಾವಿಗಳು, ಕಾಲುವೆಗಳು, ಎಲ್ಲವೂ ಕುಮುದಪುಷ್ಪಗಳಿಂದ ತುಂಬಿತುಳುಕುತ್ತಿರುವುವು. ಭೂಮಿಯೆಲ್ಲವೂ ಚಂದ್ರಜ್ಯೋತ್ಸ್ನೆಯಿಂದ ಕೂಡಿರುವುದು.

೩೦. ಈ ಕುಮುದಗಳು ಅಲ್ಲಿ ಸರ್ವಕಾಲಗಳಲ್ಲಿಯೂ ಅರಳಿರುವುವಾದುದರಿಂದ ಆ ಪದ್ಮಾವತಿಯೇ ಕುಮುದ್ವತೀನಗರವಾಗಿ ಪರಿಣಮಿಸಿತು.

೩೧. ಕುಮುದ್ವತಿಯಲ್ಲಿ ಯಾರು ಸಮಾಹಿತಮನಸ್ಕರಾಗಿ ಶ್ರಾದ್ಧಗಳನ್ನು ಮಾಡುವರೊ, ಅವರ ಪಿತೃಗಳಿಗೆ ಎಂದಿಗೂ ಸ್ವರ್ಗಲೋಕವಾಸದಿಂದ ಚ್ಯುತಿಯುಂಟಾಗುವುದಿಲ್ಲ.

ಅಕ್ಷಯಂ ಲಭತೇ ಶ್ರಾದ್ಧಂ ಪಿತೄಣಾಂ ದತ್ತಮಕ್ಷಯಂ ।
ಸ್ನಾನಂ ದಾನಂ ತಥಾ ಹೋಮೋ ದೇವತಾರಾಧನಂ ತಥಾ ॥ ೩೨ ॥
ಯತ್ಕಿಂಚಿತ್ಕ್ರಿಯತೇ ಕರ್ಮ ತತ್ಸರ್ವಂ ಚಾಽಕ್ಷಯಂ ಭವೇತ್ ।
ಏವಂ ಕುಮುದ್ವತೀ ಜಾತಾ ಪುರೀ ವ್ಯಾಸ ಸನಾತನೀ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕುಮುದ್ವತೀ
ಪ್ರಭಾವಕಥನಂ" ನಾಮ ಪಂಚಚತ್ವಾರಿಂಶೋಽಧ್ಯಾಯಃ

---

೩೨–೩೩. ಶ್ರಾದ್ಧ ಮಾಡಿದವನೂ ಅಕ್ಷಯಪುಣ್ಯವನ್ನು ಪಡೆಯುವನು. ಪಿತೃಗಳಿಗೂ ಆ ಶ್ರಾದ್ಧದಿಂದ ಅನಂತವಾದ ತೃಪ್ತಿಯುಂಟಾಗುವುದು. ಸ್ನಾನ, ದಾನ, ಹೋಮ, ದೇವತಾರಾಧನೆ ಮುಂತಾದ ಯಾವ ಕೆಲಸವನ್ನೇ ಅತ್ಯಲ್ಪವಾಗಿ ಮಾಡಿದರೂ ಅದು ಅಕ್ಷಯಫಲಪ್ರದವಾಗುವುದು. ವ್ಯಾಸಮುನಿಯೆ! ಇಂತು ಅನಾದಿಯಿಂದ ನೆಲಸಿರುವ ಉಜ್ಜಯಿನಿಯು ಕುಮುದ್ವತಿಯಾದುದನ್ನು ವಿವರಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ
ಮಾಹಾತ್ಮ್ಯದಲ್ಲಿ "ಕುಮುದ್ವತೀಪ್ರಭಾವಕಥನ"ವೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಚತ್ವಾರಿಂಶೋಽಧ್ಯಾಯಃ

### ಅಮರಾವತೀನಾಮಕಥನಂ

**ಸನತ್ಕುಮಾರ ಉವಾಚ :—**

**ಅಮರಾವತೀ ಯಥಾ ಜಾತಾ ಪುರೀ ಹ್ಯೇಷಾ ಕುಶಸ್ಥಲೀ ।**
**ಶೃಣು ವ್ಯಾಸ ಮಹಾಭಾಗ ಯಥಾ ಬ್ರಹ್ಮಾಽಬ್ರವೀತ್ಸುರಾನ್ ॥ ೧ ॥**
**ತಥಾಽಹಂ ಸಂಪ್ರವಕ್ಷ್ಯಾಮಿ ವಿಸ್ತರೇಣ ತಪೋಧನ ।**
**ಏಕದಾ ಬ್ರಹ್ಮಣಾದಿಷ್ಟಃ ಪ್ರಜಾರ್ಥಮೃಷಿಸತ್ತಮಃ ॥ ೨ ॥**
**ಮಾರೀಚಃ ಕಶ್ಯಪಸ್ತೇಪೇ ತಪಃ ಪರಮದುಷ್ಕರಂ ।**
**ಮಹಾಕಾಲವನೇ ರಮ್ಯೇ ದಿವ್ಯೇ ಸ ಹಿ ಮಹಾನೃಷಿಃ ॥ ೩ ॥**
**ಶೀರ್ಣಪತ್ರಾನಿಲಾಹಾರಃ ವಾಯುಭಕ್ಷೀ ಜಿತೇಂದ್ರಿಯಃ ।**
**ಪೂರ್ಣೇ ವರ್ಷಸಹಸ್ರೇ ತು ವಾಗುವಾಚಾಽಶರೀರಿಣೀ ॥ ೪ ॥**
**ಶ್ರೂಯತಾಂ ಭೋ ದ್ವಿಜಶ್ರೇಷ್ಠ ಮಮ ವಾಕ್ಯಮನುತ್ತಮಂ ।**
**ಯಸ್ಮಾತ್ತಪಸಿ ತಪಸ್ತೀವ್ರಂ ಫಲಮುದ್ದಿಶ್ಯ ಸುವ್ರತ ॥ ೫ ॥**

---

### ಕನ್ನಡದ ಅನುವಾದ

#### ಅಮರಾವತೀನಾಮಕಥನ

೧. ಸನತ್ಕುಮಾರನು ಹೇಳುತ್ತಾನೆ:—ಮಹಾಭಾಗ್ಯವಂತನಾದ ವ್ಯಾಸ ಮುನಿಯೆ! ಈ ಕುಶಸ್ಥಳಿಯೇ ಮುಂದೆ ಹೇಗೆ ಅಮರಾವತಿಯೆಂಬ ನಾಮವನ್ನು ಪಡೆಯಿತೆಂಬ ವಿಷಯದಲ್ಲಿ ಹಿಂದೆ ಬ್ರಹ್ಮನು ದೇವತೆಗಳಿಗೆ ಹೇಳಿದುದನ್ನು ತಿಳಿಸುವೆನು, ಕೇಳು.

೨–೩. ಎಲೈ ತಪಸ್ಸಂಪನ್ನನೆ! ವಿಸ್ತಾರವಾಗಿ ನಾನು ಹೇಳುವುದನ್ನು ಕೇಳು. ಒಮ್ಮೆ ಮಹರ್ಷಿಸತ್ತಮನೂ, ಮರೀಚಿಪುತ್ರನೂ ಆದ ಕಶ್ಯಪನು ಸಂತತಿಯನ್ನಪೇಕ್ಷಿಸಿ ಚತುರ್ಮುಖನ ಅಪ್ಪಣೆಯಂತೆ ಅತ್ಯಂತ ದುಸ್ತರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು. ಆ ಮಹರ್ಷಿಯು ಮನೋಹರವೂ ದಿವ್ಯವೂ ಆದ ಮಹಾಕಾಲವನದಲ್ಲಿ ತಪೋನಿರತನಾಗಿದ್ದನು.

೪. ತರಗೆಲೆಗಳನ್ನೂ, ಗಾಳಿಯನ್ನೂ ಸೇವನೆಮಾಡುತ್ತ ಜಿತೇಂದ್ರಿಯನಾಗಿ ಆತನು ತಪಸ್ಸನ್ನು ಮಾಡುತ್ತಿರಲು ಒಂದು ಸಾವಿರ ವರ್ಷಗಳು ಪೂರ್ತಿಯಾಗಿ ಕಳೆದುಹೋದುವು. ಆಗ ಅಶರೀರವಾಣಿಯು ಇಂತೆಂದಿತು.

೫. "ಅಯ್ಯಾ ಬ್ರಾಹ್ಮಣೋತ್ತಮನೆ! ಸರ್ವಥಾ ಗ್ರಾಹ್ಯವಾದ ನನ್ನ ವಾಕ್ಯವನ್ನು ಕೇಳು. ಸುವ್ರತನೆ! ನೀನು ಫಲಾಪೇಕ್ಷೆಯಿಂದ ಉಗ್ರವಾದ ತಪಸ್ಸನ್ನು ಮಾಡುತ್ತಿರುವೆಯಲ್ಲವೆ.

ತಸ್ಮಾತ್ತೇ ಸಂತತಿಸ್ತಾತ ಯಾವಚ್ಚಂದ್ರದಿವಾಕರೌ ।
ತಾವತ್ತಿಷ್ಠತು ಮೇದಿನ್ಯಾಂ ಯಶಸಾ ಪುತ್ರಪೌತ್ರಕೈಃ ॥ ೬ ॥
ಅದಿತಿಸ್ತೇ ಸತೀ ಭಾರ್ಯಾ ತ್ವಯಾ ಸಹಾಽಚರತ್ತಪಃ ।
ತಸ್ಮಾತ್ಸರ್ವೇಷು ಕಾಲೇಷು ಛಾಯಾಭೂತಾ ಯಶಸ್ವಿನೀ ॥ ೭ ॥
ಭವಿಷ್ಯಂತಿ ಸುತಾಃ ಸರ್ವೇ ವಿಷ್ಣುಶ್ಚೇಂದ್ರಪುರೋಗಮಾಃ ।
ಅಮರಾ ನಿರ್ಜರಾ ದೇವಾ ದಿವಿ ಖ್ಯಾತಾಃ ಸದೈವ ಹಿ ॥ ೮ ॥
ತ್ವಂ ಚಾಽಪಿ ಚ ಋಷಿಶ್ರೇಷ್ಠಃ ಪ್ರಜಾಪತಿರಕಲ್ಮಷಃ ।
ಭವಿಷ್ಯಸಿ ನ ಸಂದೇಹೋ ಮಮ ವಾಕ್ಯಾದ್ದ್ವಿಜೋತ್ತಮ ॥ ೯ ॥
ಇತ್ಯುಕ್ತ್ವಾ ಚ ಪುನರ್ದೇವೀ ತತ್ರೈವಾಂತರಧೀಯತ ।
ತದಾಽರಭ್ಯ ಪುರೀಂ ವ್ಯಾಸ ಕುಶಸ್ಥಲೀಮನುತ್ತಮಾಂ ।
ಕಶ್ಯಪಃ ಸಹ ದಾಕ್ಷಿಣ್ಯಾ ಸಾಽಗ್ನಿಕಃ ಸಮುಪಾಶ್ರಿತಃ ॥ ೧೦ ॥
ಪ್ರಜಾಽಪಿ ವವೃಧೇ ತಸ್ಮಾತ್ಸದೇವಾಽಸುರಮಾನುಷಾ ।
ಮರೀಚೇಃ ಕಶ್ಯಪೋ ಜಜ್ಞೇ ತತಃ ಸರ್ವಂ ಪ್ರತಿಷ್ಠಿತಂ ॥ ೧೧ ॥

---

೬. ಆದುದರಿಂದ ನಿನ್ನ ಸಂತಾನವು ಸೂರ್ಯಚಂದ್ರರಿರುವವರೆಗೂ ಪುತ್ರಪೌತ್ರಸಮನ್ವಿತವೂ, ಯಶಸ್ಸಂಪನ್ನವೂ ಆಗಿ ಭೂಮಿಯಲ್ಲಿ ನೆಲಸಿರುವುದು.

೭. ಪತಿವ್ರತೆಯೂ ನಿನ್ನ ಹೆಂಡತಿಯೂ ಆದ ಅದಿತಿಯೂ ನಿನ್ನೊಡನೆ ತಪಸ್ಸನ್ನಾಚರಿಸಿರುವಳು. ಆದುದರಿಂದ ಆ ಪುಣ್ಯವಂತೆಯು ಸರ್ವಕಾಲದಲ್ಲಿಯೂ ನೆರಳಿನಂತೆ ನಿನ್ನನ್ನು ಎಡಬಿಡದಿರುವಳು.

೮. ಮಹಾವಿಷ್ಣುವೂ ಮಹೇಂದ್ರನೇ ಮುಂತಾದವರೂ ಎಲ್ಲರೂ ನಿನಗೆ ಮಕ್ಕಳಾಗುವರು. ಅವರು ದೇವತೆಗಳೆನಿಸಿ ಜರಾಮರಣವರ್ಜಿತರಾಗಿ ಸ್ವರ್ಗಲೋಕದಲ್ಲಿ ನೆಲಸಿ ಪ್ರಖ್ಯಾತರಾಗುವರು.

೯. ಬ್ರಾಹ್ಮಣಶ್ರೇಷ್ಠನೆ! ಋಷಿಸತ್ತಮನಾದ ನೀನೂ ನಿಷ್ಕಲ್ಮಷನಾಗಿ ಪ್ರಜಾಪತಿಯ ಪದವಿಯನ್ನು ಪಡೆಯುವೆ. ಈ ನನ್ನ ವಾಕ್ಯದಲ್ಲಿ ಸಂದೇಹಗೊಳ್ಳಬೇಡ.''

೧೦. ಇಂತೆಂದು ಅಶರೀರವಾಣಿಯಿಂದ ನುಡಿದ ದೇವಿಯು ಸುಮ್ಮನಾಗಲು ಅದು ಮೊದಲಾಗಿ ಕಶ್ಯಪನು ತನ್ನ ಹೆಂಡತಿಯೂ ದಕ್ಷಪುತ್ರಿಯೂ ಆದ ಅದಿತಿಯೊಡನೆಯೂ ತನ್ನ ಗಾರ್ಹಪತ್ಯಾಗ್ನಿಯೊಡನೆಯೂ ಹೊರಟು ಸರ್ವೋತ್ತಮವಾದ ಮಹಾಕಾಲವನಕ್ಕೆ ಬಂದು ಅಲ್ಲಿಯೇ ನಿಂತು ವಾಸಮಾಡತೊಡಗಿದನು.

೧೧. ಅಲ್ಲಿಯೇ ದೇವತೆಗಳು, ರಾಕ್ಷಸರು, ಮನುಷ್ಯರು ಮೊದಲಾದವರಿಂದ ಕೂಡಿದ ಆತನ ಸಂತತಿಯೂ ಅಭಿವೃದ್ಧಿಯನ್ನು ಹೊಂದಿತು. ಮರೀಚಿ

**ಸುಧಾಪಾನಕೃತೋ ದೇವಾಃ ಶಶ್ವತ್ತೇನಾಽಮರಾಃ ಕೃತಾಃ ।**
**ನಂದನಂ ಚಾಽಪಿ ತತ್ರೈವ ಮಹಾಕಾಲವನೋತ್ತಮೇ ॥ ೧೨ ॥**
**ಕಾಮಧೇನುಃ ಸಮಾಖ್ಯಾತಾ ಮನೋರಥವರಪ್ರದಾ ।**
**ಸಾ ಸಿಷೇವೇ ಸದಾ ತತ್ರ ಮಹಾಕಾಲಂ ಮಹೇಶ್ವರಂ ॥ ೧೩ ॥**
**ಪಾರಿಜಾತತರುಶ್ರೇಷ್ಠಸ್ತಥಾ ಚಾಽಮ್ಲಾನಪಂಕಜಂ ।**
**ಬಿಂದುಸರಃ ಸಮಾಖ್ಯಾತಂ ಮಾನಸಂ ಸರ ಉತ್ತಮಂ ॥ ೧೪ ॥**
**ಹಂಸಸಾರಸಸಮಾಕೀರ್ಣಂ ಸುರಸಿದ್ಧನಿಷೇವಿತಂ ।**
**ಮುಕ್ತಾಮಣಿಗಣಾಕೀರ್ಣಂ ರತ್ನಶೋಭನಶೋಭಿತಂ ॥ ೧೫ ॥**
**ನಿಧಿರೇಷ ಮಹಾಪದ್ಮಃ ಕಲ್ಹಾರ ಕುಮುದೋಜ್ಜ್ವಲಃ ॥ ೧೬ ॥**
**ಯಾನಿ ಯಾನಿ ಚ ದಿವ್ಯಾನಿ ಸಂತಿ ಬ್ರಹ್ಮಾಂಡಗೋಲಕೇ ।**
**ತಾನಿ ಸರ್ವಾಣಿ ತಿಷ್ಠಂತಿ ಮಹಾಕಾಲವನೇ ಶುಭೇ ॥ ೧೭ ॥**

---

ಯಿಂದ ಕಾಶ್ಯಪನು ಹುಟ್ಟಿದನು. ಆತನಿಂದಲೇ ಲೋಕವೆಲ್ಲವೂ ಜನಪೂರಿತ ವಾಯಿತು.

೧೨. ದೇವತೆಗಳು ಅಮೃತವನ್ನು ಪಾನಮಾಡಿದುದರಿಂದ ಮರಣ ವಿಲ್ಲದವರಾದರು. ಉತ್ತಮವಾದ ಆ ಮಹಾಕಾಲವನದಲ್ಲಿಯೇ ನಂದನವನವೂ ನೆಲಸಿದ್ದಿತು.

೧೩. ಮನಸ್ಸಿನ ಸಕಲಾಭೀಷ್ಟಗಳನ್ನೂ ಕೊಡುವುದೆಂದು ಪ್ರಖ್ಯಾತ ವಾಗಿರುವ ಕಾಮಧೇನುವೆಂಬ ದಿವ್ಯಗೋವೂ ಯಾವಾಗಲೂ ಅಲ್ಲಿರುವ ಮಹಾ ಕಾಲನೆಂಬ ಮಾಹೇಶ್ವರಲಿಂಗವನ್ನು ಸೇವಿಸುತ್ತಿದ್ದಿತು.

೧೪. ಹಾಗೆಯೇ ಶ್ರೇಷ್ಠವಾದ ಪಾರಿಜಾತವೃಕ್ಷವೂ, ಬಾಡದಿರುವ ಕಮಲಗಳನ್ನೊಳಕೊಂಡ ಬಿಂದುಸರೋವರವೂ, ಅಲ್ಲಿಯೇ ನೆಲಸಿದುವು. ಇದನ್ನೇ ಉತ್ತಮವಾದ ಮಾನಸಸರೋವರವೆಂದೂ ಕರೆಯುವರು.

೧೫–೧೬. ಹಂಸ ಮತ್ತು ಸಾರಸಪಕ್ಷಿಗಳಿಂದ ನಿಬಿಡವಾದ ಈ ಸರೋವರ ವನ್ನು ದೇವತೆಗಳೂ ಸಿದ್ಧರೂ ಸೇವಿಸುತ್ತಿರುವರು. ಮುತ್ತಿನ ಮಣಿಗಳ ಸಾಲುಗಳಿಂದಲೂ ನವರತ್ನಗಳ ಶೋಭೆಗಳಿಂದಲೂ ರಂಜಿಸುತ್ತ ಕಲ್ಹಾರ ಕುಮುದಗಳಿಂದ ಉಜ್ವಲವಾದ ಇದನ್ನೇ ಮಹಾಪದ್ಮವೆಂಬ ನಿಧಿಯೆಂದೂ ಹೇಳುವರು.

೧೭. ಸಮಸ್ತ ಬ್ರಹ್ಮಾಂಡದಲ್ಲಿಯೂ ಯಾವ ಯಾವ ದಿವ್ಯವಸ್ತು ಗಳಿರುವುವೊ, ಅವುಗಳೆಲ್ಲವೂ ಒಂದಂಶದಿಂದ ಪರಮಪವಿತ್ರವಾದ ಮಹಾಕಾಲ ವನದಲ್ಲಿ ಸನ್ನಿಹಿತಗಳಾಗಿರುವುವು.

**ತೇನ ತೇನಾಽಽತ್ಮಯೋಗೇನ ಮಾನವಾಶ್ಚಾಽತ್ರ ಸಂಸ್ಥಿತಾಃ ।**
**ತದಾಹಾರಾಸ್ತದಾಚಾರಾಸ್ತದ್ರೂಪಾಸ್ತತ್ಪರಾಕ್ರಮಾಃ ॥ ೧೮ ॥**
**ಅನ್ಯೋಽನ್ಯಂ ಚ ಸಮಾಕೀರ್ಣಾಃ ಸರ್ವೇ ಚಾಽಮರಸನ್ನಿಭಾಃ ।**
**ವಿಚರಂತಿ ಯಥಾ ದೇವಾಃ ಪುರೀಮೇತಾಂ ಜನಾ ಭುವಿ ॥ ೧೯ ॥**
**ಅಮರಾಂಗನಾಸಮಾ ನಾರ್ಯಃ ಸದೈವ ಸ್ಥಿರಯೌವನಾಃ ।**
**ಈದೃಶೀ ಚ ಪುರೀ ದೃಷ್ಟ್ವಾ ಭುವಿ ವ್ಯಾಸ ಸನಾತನೀ ॥ ೨೦ ॥**
**ದೇವದಾನವಗಂಧರ್ವೈಃ ಕಿನ್ನರೋರಗರಾಕ್ಷಸೈಃ ।**
**ಭುಕ್ತಿಮುಕ್ತಿಪ್ರದಾ ನಿತ್ಯಾ ಬಹುಕಾಲಫಲಪ್ರದಾ ॥ ೨೧ ॥**
**ಅಮರಾಣಾಂ ಕಟಕಂ ಹ್ಯತ್ರ ತಸ್ಮಾಜ್ಜಾತಾಽಮರಾವತೀ ।**
**ಯ ಏತಸ್ಯಾಂ ಮಹಾಭಾಗಾಃ ಪ್ರಸಂಗೇನ ಸಮಾಗತಾಃ ॥ ೨೨ ॥**
**ಸ್ನಾನದಾನಾದಿಕಂ ಕೃತ್ವಾ ಪಶ್ಯಂತ್ಯೇವ ಮಹೇಶ್ವರಂ ।**
**ನ ತೇಷಾಂ ದುರ್ಲಭಂ ಕಿಂಚಿತ್ಪುತ್ರತೋ ಧನತೋಽಪಿ ವಾ ॥ ೨೩ ॥**

---

೧೮. ಅಲ್ಲಿರುವ ಮನುಷ್ಯರೂ ಸಹ ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ಆಹಾರ, ವ್ಯವಹಾರ, ರೂಪ, ಪರಾಕ್ರಮಗಳಿಂದ ಕೂಡಿ ನೆಲಸಿರುವರು.

೧೯. ಭೂಲೋಕದಲ್ಲಿದ್ದರೂ ಈ ಪಟ್ಟಣದ ಜನರು ದೇವತೆಗಳನ್ನು ಹೋಲುವವರಾಗಿ ಅನ್ಯೋನ್ಯವಾದ ಐಕಮತ್ಯದಿಂದ ಸ್ವರ್ಗಲೋಕದಲ್ಲಿರುವ ವೇವತೆಗಳಂತೆಯೇ ಸುಖವಾಗಿ ವಿಹರಿಸುತ್ತಿರುವರು.

೨೦. ಅಲ್ಲಿನ ಸ್ತ್ರೀಯರು ದೇವಕನ್ಯೆಯರಿಗೆ ಸಮಾನರಾಗಿ ಯಾವಾಗಲೂ ಯೌವನವನ್ನೇ ಸ್ಥಿರವಾಗಿ ಹೊಂದಿರುವರು. ವ್ಯಾಸಮುನಿಯೆ ! ಅನಾದಿಯಾಗಿ ನೆಲೆಸಿರುವ ಇಂತಹ ಪಟ್ಟಣವೊಂದನ್ನು ನಾನು ಭೂಲೋಕದಲ್ಲಿ ಕಂಡೆನು.

೨೧. ದೇವತೆಗಳು, ದಾನವರು, ಗಂಧರ್ವರು, ಕಿನ್ನರರು, ನಾಗರು, ರಾಕ್ಷಸರು ಮುಂತಾದವರೆಲ್ಲರಿಗೂ ಅನಾದಿಯಾದ ಈ ಕ್ಷೇತ್ರವು ಬಹಳಕಾಲದಿಂದ ಐಹಿಕಾಮುಷ್ಮಿಕಫಲಗಳನ್ನು ಕೊಡುತ್ತಿರುವುದು.

೨೨. ಅಮರರ ಗಡಣವೆಲ್ಲವೂ ಇಲ್ಲಿ ನೆರೆದಿದ್ದುದರಿಂದ ಇದಕ್ಕೆ ಅಮರಾವತಿಯೆಂಬ ಹೆಸರುಂಟಾಯಿತು. ಪ್ರಸಂಗವಶದಿಂದಲಾದರೂ ಇಲ್ಲಿಗೆ ಆಗಮಿಸುವ ಮನುಷ್ಯರು ಮಹಾಭಾಗ್ಯಶಾಲಿಗಳೇ ಸರಿ.

೨೩. ಇಲ್ಲಿ ಸ್ನಾನ, ದಾನ, ಮುಂತಾದ ಸತ್ಕಾರ್ಯಗಳನ್ನು ಮಾಡಿ ಮಹಾಕಾಲೇಶ್ವರನನ್ನು ನೋಡುವವರಿಗೆ ಪುತ್ರಪೌತ್ರಸಂತತಿಯಲ್ಲಾಗಲಿ ಧನಧಾನ್ಯ ಸಮೃದ್ಧಿಯಲ್ಲಾಗಲಿ ಅಲಭ್ಯವಾದುದೇ ಇಲ್ಲವು.

**ಸರ್ವಭೋಗಾನವಾಪ್ನೋತಿ ಮೃತಃ ಶಿವಪುರಂ ವ್ರಜೇತ್ ।**
**ಪಠನಾಚ್ಛ್ರವಣಾದ್ವಾಽಪಿ ಶತರುದ್ರಿಯಫಲಂ ಲಭೇತ್ ॥ ೨೪ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅಮರಾವತೀ ನಾಮ ಕಥನಂ" ನಾಮ ಷಟ್ಚತ್ವಾರಿಂಶೋಽಧ್ಯಾಯಃ**

---

೨೪. ಇಲ್ಲಿ ವಾಸಮಾಡುವ ಮಾನವನು ಸಕಲ ಭೋಗಗಳನ್ನೂ ಅನುಭವಿಸಿ ಮೃತನಾದಮೇಲೆ ಶಿವಲೋಕವನ್ನು ಸೇರುವನು. ಈ ಅಧ್ಯಾಯವನ್ನು ಪಠನ, ಶ್ರವಣ ಮಾಡುವುದರಿಂದಲೂ ಶತರುದ್ರೀಯವನ್ನು ಜಪಮಾಡಿದ ಫಲವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅಮರಾವತೀನಾಮಕಥನ"ವೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಚತ್ವಾರಿಂಶೋಽಧ್ಯಾಯಃ

### ವಿಶಾಲಾಽಭಿಧಾನಕಥನಂ

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಮಹಾಭಾಗ ಪುರೀ ಹ್ಯೇಷಾಽಮರಾವತೀ ।
ವಿಶಾಲಾ ಚ ಸಮಾಖ್ಯಾತಾ ಸರ್ವಲೋಕೇಷು ಗೀಯತೇ ॥ ೧ ॥
ತಥಾಽಹಂ ಸಂಪ್ರವಕ್ಷ್ಯಾಮಿ ಬ್ರಹ್ಮಣಾ ಕಥಿತಂ ಪುರಾ ।
ಗುಹ್ಯಾದ್ಗುಹ್ಯತರಂ ಕ್ಷೇತ್ರಂ ಸರ್ವಪಾಪಪ್ರಣಾಶನಂ ॥ ೨ ॥
ಉಮಯಾ ಸಹಿತೋ ದೇವ ಏಕ ಏವಾಽಚರದ್ವನೇ ।
ತತೋ ಭೂತಗಣಾಃ ಸರ್ವೇ ಪಶ್ಚಾತ್ಸರ್ವೇ ಸುರಾಽಸುರಾಃ ॥ ೩ ॥
ವಿಷ್ಣುರ್ದಶಾಕೃತಿರ್ಯತ್ರ ದೇವ್ಯೋ ವೈ ಲೋಕಮಾತರಃ ।
ವಿನಾಯಕಾಶ್ಚ ವೇತಾಲಾಃ ಕೂಷ್ಮಾಂಡಾ ಭೈರವಾದಯಃ ॥ ೪ ॥
ಕಲ್ಪೋದ್ಭೇದಾಶ್ಚ ಲಿಂಗಾಶ್ಚ ಚತುರಾಶೀತಿಸಂಖ್ಯಕಾಃ ।
ಕ್ಷೇತ್ರಾಣಿ ಕ್ಷೇತ್ರಪಾಲಾಶ್ಚ ಋದ್ಧಿಃ ಸಿದ್ಧಿಸ್ತಥೈವ ಚ ॥ ೫ ॥

---

## ಕನ್ನಡದ ಅನುವಾದ

### ವಿಶಾಲಾಽಭಿಧಾನಕಥನ

೧. ಸನತ್ಕುಮಾರನು ಹೇಳುತ್ತಾನೆ:—ಪರಮಪುಣ್ಯವಂತನಾದ ವ್ಯಾಸನೆ! ಈ ಅಮರಾವತೀನಗರಿಯೇ ಮುಂದೆ ವಿಶಾಲೆಯೆಂಬ ಹೆಸರನ್ನು ಪಡೆದು ಹದಿನಾಲ್ಕು ಲೋಕಗಳಲ್ಲಿಯೂ ಸ್ತುತ್ಯವಾಗಿರುವುದು.

೨. ಅದಕ್ಕೆ ಸಂಬಂಧಿಸಿದ ಚರಿತ್ರೆಯನ್ನು ಹೇಳುವೆನು. ಇದನ್ನು ಬ್ರಹ್ಮದೇವನೇ ನನಗೆ ಮುನ್ನು ಹೇಳಿರುವೆನು. ಪರಮಗುಹ್ಯತಮವೆನಿಸಿದ ಈ ಕ್ಷೇತ್ರವು ಸಮಸ್ತ ಪಾತಕಗಳನ್ನೂ ನಾಶಮಾಡುವುದು.

೩–೮. ಈ ಕ್ಷೇತ್ರದ ಮಹಾಕಾಲವನದಲ್ಲಿ ಉಮಾಸಹಿತನಾಗಿ ಮಹೇಶ್ವರನೊಬ್ಬನೇ ವಿಹರಿಸುತ್ತಿದ್ದನು. ಬಳಿಕ ಸಮಸ್ತ ಭೂತಗಣಗಳೂ, ಆಮೇಲೆ ದೇವತೆಗಳೂ, ಅಸುರರೂ, ದಶಾವತಾರಗಳನ್ನೆತ್ತಿದ ಮಹಾವಿಷ್ಣುವೂ, ಲೋಕಮಾತೆಯರಾದ ದೇವಿಯರೂ, ವಿನಾಯಕರೂ, ಭೇತಾಳರೂ, ಕೂಷ್ಮಾಂಡಗಣಗಳೂ, ಭೈರವರೂ, ಕಲ್ಪಕಲ್ಪಗಳಲ್ಲಿಯೂ ಮೇಲಕ್ಕೆ ಬರುವ ಎಂಬತ್ತನಾಲ್ಕು ಸ್ವಯಂಭುಲಿಂಗಗಳೂ, ಸಕಲ ಕ್ಷೇತ್ರಗಳೂ, ಕ್ಷೇತ್ರಪಾಲಕರೂ,

ಪಿತರೋ ಲೋಕಪಾಲಾಶ್ಚ ಸಿದ್ಧಾಃ ಸಿದ್ಧಿಪ್ರದಾಶ್ಚ ಯೇ ।
ಋಷಯಶ್ಚ ಮಹಾಭಾಗಾ ಋಷಿಪತ್ನ್ಯೋಽಮಲಾಶಯಾಃ ॥ ೬ ॥
ಕಿನ್ನರಾ ದೇವಗಂಧರ್ವಾಹ್ಯಪ್ಸರಾಶ್ಚ ವರಾಂಗನಾಃ ।
ಮರುದ್ಗಣಾಶ್ಚ ಯೇ ಸರ್ವೇ ಸಾಧಕಾನಾಂ ಗಣಾಶ್ಚ ಯೇ ॥ ೭ ॥
ಯಕ್ಷಾ ಗುಹ್ಯಕಸಂಘಾಶ್ಚ ಪಿಶಾಚೋರಗರಾಕ್ಷಸಾಃ ।
ಸ್ಥಾವರಾ ಜಂಗಮಾಃ ಸರ್ವೇ ಧ್ಯಾನಂ ಮಾನಸಮಾಶ್ರಿತಾಃ ।
ಉಪಾಸಾಂಚಕ್ರಿರೇ ತತ್ರ ದೇವದೇವಮುಮಾಪತಿಂ ॥ ೮ ॥
ತಾನ್ ದೃಷ್ಟ್ವಾ ಸಾ ತದಾ ದೇವೀ ಪಾರ್ವತೀ ಗಿರಿಜಾ ತದಾ ।
ಉವಾಚ ಶ್ಲಕ್ಷ್ಣಯಾ ವಾಚಾ ಶಂಕರಂ ಜಗದಾಶ್ರಯಂ ॥ ೯ ॥

ಪಾರ್ವತ್ಯುವಾಚ :—

ದೇವದೇವ ಜಗನ್ನಾಥ ಜಗದಾಧಾರತತ್ಪರ ।
ಪಶ್ಯ ಏತಾನ್ಮಹಾಭಾಗಾನ್ಧ್ಯಾಯಮಾನಾಂಸ್ತ್ವಾಶ್ರಿತಾನ್ ॥ ೧೦ ॥
ನಾನುಪೇಕ್ಷ್ಯಂಶ್ಚ ತಾನ್ ಸರ್ವಾನ್ ವಾತವರ್ಷಾತಪಾರ್ದಿತಾನ್ ।
ಕಲ್ಪಯ ತ್ವಂ ಮಹಾಭಾಗ ಏತೇಷಾಮಾತ್ಮನೋ ಹಿತಂ ॥ ೧೧ ॥

---

ಅಷ್ಟೈಶ್ವರ್ಯಗಳೂ, ಅಷ್ಟಸಿದ್ಧಿಗಳೂ, ಪಿತೃಗಳೂ, ಲೋಕಪಾಲಕರೂ, ಸಿದ್ಧಿಪ್ರದರಾದ ಸಿದ್ಧರೂ, ಮಹಾಭಾಗ್ಯಶಾಲಿಗಳಾದ ಮಹರ್ಷಿಗಳೂ, ನಿರ್ಮಲ ಮನಸ್ಕರಾದ ಋಷಿಪತ್ನಿಯರೂ, ಕಿನ್ನರರೂ, ದೇವಗಂಧರ್ವರೂ, ಸುಂದರಿಯರಾದ ಅಪ್ಸರಸ್ತ್ರೀಯರೂ, ಸಕಲ ದೇವತೆಗಳೂ, ಸಾಧಕ ಸಮೂಹಗಳೂ, ಯಕ್ಷರೂ, ಗುಹ್ಯಕರ ಸಂಘಗಳೂ, ಪಿಶಾಚರೂ, ನಾಗರೂ, ರಾಕ್ಷಸರೂ, ಸಮಸ್ತ ಸ್ಥಾವರ ಜಂಗಮಜೀವರೂ, ಸಕಲರೂ ಅಲ್ಲಿ ನೆಲಸಿ ಮಾನಸಿಕ ಧ್ಯಾನದಿಂದ ದೇವತಾಸಾರ್ವಭೌಮನಾದ ಉಮಾರಮಣನನ್ನು ಉಪಾಸನೆಮಾಡುತ್ತಿದ್ದರು.

೯. ಅವರೆಲ್ಲರನ್ನೂ ನೋಡಿ ಪರ್ವತರಾಜಪುತ್ರಿಯಾದ ಉಮೆಯು ಮೃದುವಚನಗಳಿಂದ ಸಕಲ ಲೋಕಗಳಿಗೂ ಆಶ್ರಯನೆನಿಸಿದ ಶಂಕರನನ್ನು ಕುರಿತು ಹೇಳತೊಡಗಿದಳು.

೧೦. ಪಾರ್ವತಿಯು ಹೇಳುತ್ತಾಳೆ:—ದೇವಾಧಿದೇವನೆ! ಲೋಕನಾಥನೆ! ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳಲ್ಲಿ ನಿರತನಾದವನೆ! ಧ್ಯಾನಾಸಕ್ತರಾಗಿ ನಿನ್ನನ್ನೇ ಆಶ್ರಯಿಸಿರುವ ಈ ಮಹಾತ್ಮರನ್ನು ನೋಡು.

೧೧. ಗಾಳಿ, ಮಳೆ, ಬಿಸಿಲುಗಳನ್ನು ಸಹಿಸಿಕೊಂಡು ತಪಸ್ಸನ್ನು ಮಾಡುತ್ತಿರುವ ಇವರನ್ನೆಲ್ಲ ಉಪೇಕ್ಷೆಮಾಡುವುದು ಸರಿಯಲ್ಲ. ಎಲೈ ಸರ್ವೇಶ್ವರನೆ! ಇವರಿಗೆ ತಮ್ಮ ಮನೋಭೀಷ್ಟಗಳು ದೊರಕುವಂತೆ ಮಾಡು.

ಯಥಾ ಯೋಗ್ಯಂ ವಾಸನಾರ್ಥಂ ಸ್ಥಾನಂ ಪರಮಶೋಭನಂ ।
ಪುರೀಂ ಕಲ್ಪಯ ಮೇ ನಾಥ ವಾಸಾರ್ಥಂ ಸರ್ವಕಾಮದಾಂ ।
ಏಷಾ ಮೇ ವಾಸನಾ ಸ್ವಾಮಿನ್ ಭವತಾಂ ಯದಿ ರೋಚತೇ ॥ ೧೨ ॥
ಇತಿ ಶ್ರುತ್ವಾ ವಚಸ್ತಸ್ಯಾಃ ಪಾರ್ವತ್ಯಾಃ ಪರಮೇಶ್ವರಃ ।
ಕಲ್ಪಯಾಮಾಸ ಪುರೀಂ ರಮ್ಯಾಂ ಸರ್ವಭೂತಮನೋರಮಾಂ ॥ ೧೩ ॥
ಆತ್ಮನೋಽಪಿ ಹಿತಾಂ ಪುಣ್ಯಾಂ ಶಂಭುಃ ಸರ್ವಾತ್ಮನಾ ತದಾ ।
ಬಹುಯೋಜನವಿಸ್ತೀರ್ಣಾಂ ದಿವ್ಯಾಂ ದಿವ್ಯಜನಪ್ರಿಯಾಂ ॥ ೧೪ ॥
ದಿವ್ಯಾಭಿಪ್ರಾಯಸಂಯುಕ್ತಾಂ ದಿವ್ಯಸ್ಥಾನಮನೋರಮಾಂ ।
ದಿವ್ಯಸರ್ವಗುಣೋಪೇತಾಂ ವಿಶಾಲಾಂ ವಿರಜಾಂ ಶುಭಾಂ ॥ ೧೫ ॥
ಕ್ರಯವಿಕ್ರಯಸಂಪನ್ನಹ್ಯಟ್ಟಾಟ್ಟಾಲಕಚತ್ವರಾಂ ।
ಬಹುಹರ್ಮ್ಯಗೃಹಾಕೀರ್ಣಾಂ ಸೌಧಪಙ್ಕ್ತಿವಿರಾಜಿತಾಂ ॥ ೧೬ ॥
ಸ್ಫಾಟಿಕಾಭಿತ್ತಿರಚಿತಾಂ ವೈಡೂರ್ಯಮಣಿಭೂಮಿಕಾಂ ।
ಪ್ರವಾಲಸ್ತಂಭಪ್ರವರಾಂ ಹೇಮಾಭರಣಸಂಭರಾಂ ॥ ೧೭ ॥

---

೧೨. ಇವರೆಲ್ಲರೂ ತಮ್ಮ ಯೋಗ್ಯತೆಯನ್ನನುಸರಿಸಿ ವಾಸಮಾಡುವುದಕ್ಕೂ ನನ್ನ ನಿವಾಸಕ್ಕೂ ಸಹ ಪರಮಮಂಗಳಕರವಾದ ಸ್ಥಾನವೊಂದನ್ನೂ ಸರ್ವಾಭೀಷ್ಟದಾಯಕವಾದ ಒಂದು ಪಟ್ಟಣವನ್ನೂ ಕಲ್ಪಿಸಿಕೊಡು. ನಾಥನೆ! ನನ್ನ ಮನಸ್ಸಿನ ಕೋರಿಕೆಯನ್ನು ಇಷ್ಟವಿದ್ದರೆ ನಡೆಸಿಕೊಡು.''

೧೩. ಇಂತೆಂದ ಆ ಪಾರ್ವತಿಯ ಮಾತುಗಳನ್ನು ಕೇಳಿ ಪರಮೇಶ್ವರನು ಸುಂದರವೂ, ಸರ್ವಪ್ರಾಣಿಗಳಿಗೂ ಹಿತಕರವೂ ಆದ ಪಟ್ಟಣವೊಂದನ್ನು ನಿರ್ಮಿಸಿದನು.

೧೪. ಸರ್ವಪ್ರಕಾರದಿಂದಲೂ ಈ ನಗರಿಯು ತನಗೆ ಹಿತವಾಗಿಯೂ, ಪುಣ್ಯಕ್ಷೇತ್ರವಾಗಿಯೂ, ಅನೇಕ ಯೋಜನಗಳ ವಿಸ್ತಾರವುಳ್ಳದ್ದಾಗಿಯೂ, ದಿವ್ಯವೂ, ದೇವತೆಗಳಿಗೆ ಪ್ರಿಯವೂ ಆಗಿದ್ದಿತು.

೧೫. ಉತ್ಕೃಷ್ಟಾಭಿಪ್ರಾಯಗಳಿಂದ ಕೂಡಿದುದೂ, ದಿವ್ಯಸ್ಥಾನಗಳಿಂದ ಮನೋಹರವೂ, ಉತ್ತಮಗಳಾದ ಸರ್ವಗುಣಗಳುಳ್ಳದುದೂ, ವಿಶಾಲವೂ, ನಿರ್ಮಲವೂ, ಶುಭಕರವೂ ಆಗಿದ್ದಿತು.

೧೬. ಆ ನಗರದ ಸಂತೆಯ ಬೀದಿಯಲ್ಲಿಯೂ, ಅಂಗಡಿಗಳಲ್ಲಿಯೂ, ಚೌಕಗಳಲ್ಲಿಯೂ ಮಾರುವ ಕೊಳ್ಳುವ ವ್ಯಾಪಾರಗಳು ನಡೆಯುತ್ತಿದ್ದುವು. ಅನೇಕ ಮಹಡಿಗಳುಳ್ಳ ಮನೆಗಳಿಂದಲೂ, ಸಾಲುಸಾಲಾದ ಉಪ್ಪರಿಗೆಗಳಿಂದಲೂ ಆ ಪಟ್ಟಣವು ವಿರಾಜಿಸುತ್ತಿದ್ದಿತು.

೧೭. ಗೋಡೆಗಳು ಸ್ಫಟಿಕಗಳಿಂದಲೂ, ಜಗುಲಿಗಳು ವೈಡೂರ್ಯಮಣಿ

**ಆರಕ್ತಮಣಿದೇಹಲ್ಯಾಂ ದ್ವಾರಶಾಖಾಃಭಿಮಂಡಿತಾಂ ।**
**ಜಾಂಬೂನದಕಪಾಟಾಢ್ಯಾಂ ವಜ್ರಾರ್ಗಲಸುಸಂಸ್ಕೃತಾಂ ॥ ೧೮ ॥**
**ಮಣಿರತ್ನಸಮಾಭೂಮಿದ್ವಾರಾಃಜಿರಗೃಹಾಂತರಾಂ ।**
**ಘೋಷಜಾಲಾಃತಿರಮ್ಯಾಂ ಚ ಮುಕ್ತಾದಾಮವಿಲಂಬಿನೀಂ ॥ ೧೯ ॥**
**ಹೇಮಸ್ತಂಭಧ್ವಜೋಪೇತಾಃ ಪತಾಕಾಶ್ಚ ಗೃಹೇ ಗೃಹೇ ।**
**ಕಲಶಾಶ್ಚ ವಿರಾಜಂತೇ ಮಣಿಹೇಮಾಚಿತಾ ಗೃಹೇ ॥ ೨೦ ॥**
**ವಾಪೀಕೂಪತಡಾಗಾನಿ ಸರಾಂಸಿ ವಿಮಲಾನಿ ಚ ।**
**ಪದ್ಮಕಿಂಜಲ್ಕಗಂಧೀನಿ ಜಲಯಂತ್ರೋಪಶೋಭಿತಾಂ ॥ ೨೧ ॥**
**ಹಂಸಕಾರಂಡವಾಕೀರ್ಣಾಂ ಶಿಖಂಡಿಗಣಶೋಭಿತಾಂ ।**
**ಜಲಯಂತ್ರಕೃತಾಧಾರಾಂ ಗೃಹವಾಪೀವನಾಕರಾಂ ॥ ೨೨ ॥**
**ಕ್ವಚಿನ್ನೃತ್ಯಂತಿ ಮಯೂರಾಃ ಕ್ವಚಿತ್ಕೂಜಂತಿ ಕೋಕಿಲಾಃ ।**
**ಭ್ರಮರಾವಲೀಢಪುಷ್ಪಾಢ್ಯಸ್ತಬಕಾ ವನರಾಜಯಃ ॥ ೨೩ ॥**

---

ಗಳಿಂದಲೂ, ಕಂಬಗಳ ಸಾಲುಗಳು ಹವಳದ ಗಿಡಗಳಿಂದಲೂ, ಚಿನ್ನದ ಕಳಶ ಕನ್ನಡಿಗಳಿಂದಲೂ ಕೂಡಿದುವಾಗಿದ್ದುವು.

೧೮. ಕೆಂಪಾದ ಮಣಿಗಳಿಂದ ಕೂಡಿದ ಹೊಸ್ತಿಲುಗಳಿಂದ ಬಾಗಿಲುವಾಡಗಳು ಶೋಭಿಸುತ್ತಿದ್ದುವು. ಅವುಗಳಿಗೆ ಚಿನ್ನದ ತಗಡಿನ ಕದಗಳೂ, ವಜ್ರದ ಅಗುಳಿಗಳೂ ಜೋಡಿಸಲ್ಪಟ್ಟಿದ್ದುವು.

೧೯. ಮನೆಗಳೊಳಗೆ ಸಮವಾದ ನೆಲವೂ ಒಳ ಅಂಗಳಗಳೂ ಮಣಿರತ್ನಗಳಿಂದಲಂಕೃತಗಳಾಗಿ ಕಿರುಗಂಟೆಗಳ ಸಾಲುಗಳಿಂದಲೂ ಮುತ್ತಿನ ಹಾರಗಳ ತೂಗಾಟದಿಂದಲೂ ಕಂಗೊಳಿಸುತ್ತಿದ್ದುವು.

೨೦. ಪ್ರತಿಯೊಂದು ಮನೆಯಲ್ಲಿಯೂ, ಚಿನ್ನದ ಸ್ತಂಭಗಳ ಮೇಲೆ ಹಾರುತ್ತಿರುವ ಧ್ವಜಪತಾಕೆಗಳೂ, ಮಣಿಖಚಿತವಾದ ಚಿನ್ನದ ಕಳಶಗಳೂ ರಾರಾಜಿಸುತ್ತಿದ್ದುವು.

೨೧. ಬಾವಿಗಳೂ, ಕೊಳಗಳೂ, ಕೆರೆಗಳೂ, ಸರೋವರಗಳೂ ಪರಿಶುದ್ಧವಾಗಿ ಕಮಲಪುಷ್ಪಗಳ ಧೂಳಿನಿಂದ ಸುವಾಸಿತವಾಗಿದ್ದುವು. ನೀರನ್ನು ಮೇಲಕ್ಕೆತ್ತಲು ಜಲಯಂತ್ರಗಳು ಸಿದ್ಧಗೊಳಿಸಲ್ಪಟ್ಟಿದ್ದುವು.

೨೨. ಆ ನಗರವು ಹಂಸ, ಕಾರಂಡವಾದಿ ಪಕ್ಷಿಗಳಿಂದಲೂ, ನವಿಲುಗಳ ಸಾಲುಗಳಿಂದಲೂ ಶೋಭಿಸುತ್ತ ಮನೆಗಳ ಬಾವಿ ಕೊಳಗಳಿಂದ ಜಲಯಂತ್ರಗಳು ಧಾರೆಯಾಗಿ ಸುರಿಯುತ್ತಿರುವ ನೀರಿನಿಂದ ಕೂಡಿದ್ದುವು.

೨೩. ಕೆಲವೆಡೆಗಳಲ್ಲಿ ನವಿಲುಗಳು ಕುಣಿಯುತ್ತಿದ್ದುವು. ಕೆಲವೆಡೆಗಳಲ್ಲಿ ಕೋಗಿಲೆಗಳು ಧ್ವನಿಗೈಯುತ್ತಿದ್ದುವು. ವನಪಙ್ಕ್ತಿಗಳೆಲ್ಲವೂ ದುಂಬಿಗಳು ಸಾರವನ್ನು ಹೀರಿದ ಪುಷ್ಪಗಳ ಭಾರದಿಂದ ಬಗ್ಗಿದ್ದುವು.

ನರನಾರೀಗಣಾಕೀರ್ಣಾಂ ವರ್ಣಾಶ್ರಮನಿಷೇವಿತಾಂ ।
ಹರ್ಮ್ಯಾಂತರಾಗತಾ ನಾರ್ಯೋ ವಿಲೋಕನಪರಾ ಬಭುಃ ॥ ೨೪ ॥
ಚಂದ್ರಮಾಲಾಕೃತಶ್ರೇಣೀತೋರಣಾನೀವ ಶೋಭತೇ ।
ಏವಂ ವ್ಯಾಸ ಪುರೀ ರಮ್ಯಾ ಆತ್ಮಯೋಗೇನ ವಾಸಿತಾ ॥ ೨೫ ॥
ಯತ್ರಾಽಲಕಾಪುರೀ ರಮ್ಯಾ ಕುಬೇರಭವನಾಂಕಿತಾ ।
ಧವಲಾ ಪುಣ್ಯಜನ್ಯೈಃ ಕೀರ್ಣಾ ಪಕ್ಷಿಭಿಶ್ಚೋಪಶೋಭಿತಾ ॥ ೨೬ ॥
ತತ್ರ ಭೋಗವತೀ ದಿವ್ಯಾ ವರುಣಾಲಯ ಉತ್ತಮಃ ।
ನಾಗಕನ್ಯಾಭಿರುಗ್ರಾಭಿರ್ನಾಗಪತ್ನೀಭಿಃ ಸಂಕುಲಾ ॥ ೨೭ ॥
ಸಂಯಮನೀ ಪುರೀ ಶ್ರೇಷ್ಠಾ ಧರ್ಮರಾಜೇನ ಪಾಲಿತಾ ।
ಸದಾಚಾರಜನ್ಯೈಃ ಪೂರ್ಣಾ ಕೃತಾಕೃತವಿಚಕ್ಷಣೈಃ ॥ ೨೮ ॥
ದೇವತಾನಾಂ ಪುರೀ ರಮ್ಯಾ ವಾಸವೇನಾಽಭಿರಕ್ಷಿತಾ ।
ಪುಣ್ಯಸ್ತ್ರೀಣಾಂ ಗಣಾಕೀರ್ಣಾ ಕಿನ್ನರೋದ್ಗೀತಮಂಡಿತಾ ॥ ೨೯ ॥

---

೨೪. ಪುರುಷರೂ, ಸ್ತ್ರೀಯರೂ ಸಾಲುಸಾಲಾಗಿ ಬೀದಿಗಳಲ್ಲಿ ಓಡಾಡುತ್ತಿದ್ದರು. ಸಕಲರೂ ತಮ್ಮ ವರ್ಣಾಶ್ರಮ ಧರ್ಮಗಳನ್ನು ನೇವಿಸುತ್ತಿದ್ದರು. ಮಹಡಿಗಳ ಮೇಲಿನಿಂದ ಅಂತಃಪುರಸ್ತ್ರೀಯರು ಬೀದಿಯ ಜನರನ್ನು ನೋಡುತ್ತ ಅಲಂಕರಿಸಿಕೊಳ್ಳುತ್ತಿದ್ದರು.

೨೫. ಅವರ ಮುಖಗಳು ಬೀದಿಗಳ ಇರ್ಕಡೆಗಳಲ್ಲಿಯೂ ಸಾಲು ಸಾಲಾಗಿ ಕಟ್ಟಿದ ಚಂದ್ರಬಿಂಬಗಳ ತೋರಣಗಳಂತೆ ಶೋಭಿಸುತ್ತಿದ್ದುವು. ಎಲೈ ವ್ಯಾಸನೆ! ಇಂತು ಪರಮೇಶ್ವರನು ತನ್ನ ಯೋಗಶಕ್ತಿಯಿಂದಲೇ ಸಕಲ ನಗರವನ್ನೂ ಜನಭೂಯಿಷ್ಠವನ್ನಾಗಿ ಮಾಡಿದನು.

೨೬. ಅಲ್ಲಿಯೇ ರಮ್ಯವೂ, ಕುಬೇರನ ರಾಜಧಾನಿಯೂ, ಶುಭ್ರವೂ, ಪುಣ್ಯವಂತರಿಂದ ಕೂಡಿದುದೂ, ಪಕ್ಷಿಗಳಿಂದ ಶೋಭಿಸುವುದೂ ಆದ ಅಲಕಾಪುರಿಯೂ ನೆಲಸಿದ್ದಿತು.

೨೭. ಅಲ್ಲಿಯೇ ದಿವ್ಯವೂ, ಉತ್ತಮರಾದ ನಾಗಕನ್ಯೆಯರಿಂದಲೂ, ನಾಗಪತ್ನಿಯರಿಂದಲೂ ಕೂಡಿದುದೂ, ವರುಣನ ನಿವಾಸವೂ ಆದ ಭೋಗವತೀ ನಗರವೂ ಇದ್ದಿತು.

೨೮. ಸರ್ವೋತ್ತಮವೂ, ಸದಾಚಾರನಿಷ್ಠರೂ, ಪುಣ್ಯಪಾಪ ವಿವೇಚನೆಯಲ್ಲಿ ವಿಚಕ್ಷಣರೂ ಆದ ಜನರಿಂದ ತುಂಬಿದುದೂ ಆದ ಯಮನ ರಾಜಧಾನಿಯೆನಿಸಿದ ಸಂಯಮನೀಪುರಿಯೂ ಅಲ್ಲಿಯೇ ಅಡಗಿದ್ದಿತು.

೨೯. ಮಹೇಶ್ವರನಿಂದ ಪಾಲಿತವೂ, ಪುಣ್ಯಸ್ತ್ರೀಯರ ಗಡಣವನ್ನೊಳಕೊಂಡಿರುವುದೂ, ಕಿನ್ನರರ ಸಂಗೀತಗಳಿಂದ ತುಂಬಿರುವುದೂ ಆದ ದೇವನಗರಿಯೂ ಅಲ್ಲಿ ಸನ್ನಿಹಿತವಾಗಿದ್ದಿತು.

**ಏವಂವಿಧಾನಿ ರಮ್ಯಾಣಿ ಪುರಾ ಬಹುತರಾಣಿ ಚ ।**
**ಬಹುವಿಸ್ತೀರ್ಣಮಾನಾನಿ ಶುಭ್ರಾಣ್ಯತಿತರಾಣಿ ಚ ॥ ೩೦ ॥**
**ಕ್ವಚಿದ್ರಂಭಾಕೃತದ್ವಾರಾ ಯವಾಂಕುರಘಟಾಃ ಶುಭಾಃ ।**
**ಕ್ವಚಿದ್ಗಾಯಂತಿ ಗಂಧರ್ವಾಃ ಕ್ವಚಿನ್ನೃತ್ಯಂತಿ ನರ್ತಕಾಃ ॥ ೩೧ ॥**
**ಕ್ವಚಿದ್ಬಾಲಾಃ ಪಠಂತಿ ಸ್ಮ ವೇದಾಧ್ಯಯನಕಾ ದ್ವಿಜಾಃ ।**
**ಕ್ವಚಿದ್ಯಜ್ಞಾನ್ ಯಜಂತಿ ಸ್ಮ ಯಜಮಾನಾಃ ಸಋತ್ವಿಜಃ ॥ ೩೨ ॥**
**ಕ್ವಚಿಚ್ಚಾಽವಭೃಥಸ್ನಾತಾಃ ಕ್ವಚಿದ್ದಾನಾನ್ಯಕುರ್ವತ ।**
**ಕ್ವಚಿತ್ಕ್ವಚಿತ್ತೂಪನಯನಂ ವಿವಾಹಾಽಗ್ನಿಪರಿಗ್ರಹಂ ॥ ೩೩ ॥**
**ಕ್ವಚಿದಾರಾಮಪೂರ್ತಂ ವೈ ಕ್ವಚಿದ್ಯಾತ್ರಾಽವಧಾರಣಂ ।**
**ವಾಪೀಕೂಪತಡಾಗಾನಾಂ ತಥೈವ ವಿಧಿಪೂರ್ವಕಂ ॥ ೩೪ ॥**
**ಕ್ವಚಿತ್ಕಥಾಪ್ರಸಂಗಾಂಶ್ಚ ಪರಿಶಂಸಂತಿ ವಾಚಕಾಃ ।**
**ಕ್ವಚಿದ್ಗಾಥಾಃ ಪ್ರಕುರ್ವಂತಿ ಕವಯಃ ಪುರ ಉತ್ತಮೇ ॥ ೩೫ ॥**

---

೩೦. ಇಂತಹ ಬಹುವಿಶಾಲಸ್ಥಳವಲ್ಲಿರುವುವುಗಳೂ, ಅತ್ಯಂತ ಪರಿಶುದ್ಧಗಳೂ ಆದ ಮನೋಹರಗಳಾದ ಅನೇಕ ವಿಶೇಷಗಳು ಆ ನಗರಿಯಲ್ಲಿ ಕಾಣುತ್ತಿದ್ದುವು.

೩೧. ಕೆಲವು ಮನೆಗಳ ಬಾಗಿಲುಗಳು ಬಾಳೆಯ ಕಂಬಗಳಿಂದಲಂಕೃತಗಳಾಗಿ ಭತ್ತದ ಪೈರಿನ ಕಳಶಗಳಿಂದೊಪ್ಪುತ್ತಿದ್ದುವು. ಕೆಲವೆಡೆಗಳಲ್ಲಿ ಗಂಧರ್ವರು ಗಾನಮಾಡುತ್ತಿರಲು ನರ್ತಕರು ನರ್ತನಗಳನ್ನು ಮಾಡುತ್ತಿದ್ದರು.

೩೨. ಕೆಲವೆಡೆಗಳಲ್ಲಿ ಹುಡುಗರು ಪಾಠಗಳನ್ನು ಓದಿಕೊಳ್ಳುತ್ತಿದ್ದರು. ಬ್ರಾಹ್ಮಣರು ವೇದಾಧ್ಯಯನಪರರಾಗಿದ್ದರು. ಹಲವೆಡೆಗಳಲ್ಲಿ ಯಜಮಾನರು ಋತ್ವಿಜರೊಡಗೂಡಿ ಯಜ್ಞಗಳನ್ನು ಮಾಡುತ್ತಿದ್ದರು.

೩೩. ಹಲವೆಡೆಗಳಲ್ಲಿ ಅವಭೃಥಸ್ನಾನಗಳನ್ನು ಮಾಡಿ ಹಲವರು ದಾನಕಾರ್ಯಗಳಲ್ಲಿ ಆಸಕ್ತರಾಗಿದ್ದರು. ಕೆಲವೆಡೆಗಳಲ್ಲಿ ಉಪನಯನಗಳೂ, ಮದುವೆಗಳ ಗಾರ್ಹಪತ್ಯಾಗ್ನಿಯ ಸ್ವೀಕಾರವೂ ನಡೆಯುತ್ತಿದ್ದುವು.

೩೪. ಕೆಲವೆಡೆಗಳಲ್ಲಿ ಆರಾಮನಿರ್ಮಾಣಾದಿ ಪೂರ್ತಕರ್ಮಗಳೂ, ಹಲವೆಡೆಗಳಲ್ಲಿಯೂ ಯಾತ್ರಾಪ್ರಸಂಗಗಳೂ, ವಿಧ್ಯುಕ್ತರೀತಿಯಿಂದ ಕೊಳ, ಭಾವಿ, ಕೆರೆಗಳ ನಿರ್ಮಾಣಗಳೂ ನಡೆಯುತ್ತಿದ್ದುವು.

೩೫. ಕೆಲವು ಕಡೆಗಳಲ್ಲಿ ಗಮಕಿಗಳು ಕುಳಿತುಕೊಂಡು ಪುಣ್ಯಕಥೆಗಳನ್ನು ವಿಸ್ತಾರವಾಗಿ ನಿರೂಪಿಸುತ್ತಿದ್ದರು. ಆ ಉತ್ತಮನಗರಿಯ ಕೆಲವೆಡೆಗಳಲ್ಲಿ ಕವಿಗಳು ತಮ್ಮ ಕಾವ್ಯಗಳ ಪಠನವನ್ನು ಮಾಡುತ್ತಿದ್ದರು.

ಕ್ವಚಿನ್ಮಲ್ಲಾ ನಿಯುಧ್ಯಂತೇ ನಟಾ ನಾಟ್ಯಪರಾಃ ಕ್ವಚಿತ್ ।
ತಡಾಗಾನಿ ವಿರಾಜಂತೇ ಮಣಿಸೋಪಾನಪಙ್ಕ್ತಿಭಿಃ ॥ ೩೬ ॥
ಚಂಚಲಾಕ್ಷ್ಯಶ್ಚಪಲಾ ಬಾಲಾಃ ಶ್ಯಾಮಾಃ ಷೋಡಶವಾರ್ಷಿಕಾಃ ।
ವಾರಿಹಾರಪರಾಸ್ತತ್ರ ಮಣಿಹೇಮಘಟೋತ್ಕಟಾಃ ॥ ೩೭ ॥
ಏವಂ ವ್ಯಾಸ ಪುರೀ ರಮ್ಯಾ ನಿರ್ಮಿತಾ ಯೋಗಮಾಯಯಾ ।
ಶಂಭುನಾ ಸರ್ವಪಾಪಘ್ನೀ ಪ್ರಿಯಾಪ್ರಿಯಚಿಕೀರ್ಷಯಾ ।
ವಿಶಾಲಾ ಬಹುವಿಸ್ತೀರ್ಣಾ ಪುಣ್ಯಾ ಪುಣ್ಯಜನಾಶ್ರಯಾ ॥ ೩೮ ॥
ತಸ್ಮಾತ್ಸರ್ವೇಷು ಕಾಲೇಷು ಸರ್ವಲೋಕೇಷು ಗೀಯತೇ ।
ವಿಶಾಲೇತಿ ಸಮಾಖ್ಯಾತಾ ಪುರೀ ರಮ್ಯಾ ಸನಾತನೀ ॥ ೩೯ ॥
ಯತ್ರ ತತ್ರ ಸ್ಥಿತೋ ವಾಽಪಿ ಸರ್ವಾಽವಸ್ಥಾಂಗತೋಽಪಿ ವಾ ।
ವಿಶಾಲೇತಿ ವದೇನ್ನಿತ್ಯಂ ಶಿವಲೋಕೇ ಮಹೀಯತೇ ॥ ೪೦ ॥
ಈದೃಶೀ ನ ಪುರೀ ವ್ಯಾಸ ಭುವಿ ಬ್ರಹ್ಮಾಂಡಗೋಲಕೇ ।
ವಿಶಾಲಾಸದೃಶೀ ಚಾಽನ್ಯಾ ಭುಕ್ತಿಮುಕ್ತಿಪ್ರದಾ ನೃಣಾಂ ॥ ೪೧ ॥

---

೩೬. ಒಂದೆಡೆಯಲ್ಲಿ ಮಲ್ಲರು ಕಾಳಗಗಳನ್ನು ಮಾಡುತ್ತಿದ್ದರು. ನಟರು ನಾಟ್ಯಗಳನ್ನು ಪ್ರದರ್ಶಿಸುತ್ತಿದ್ದರು. ಅಲ್ಲಿನ ಕೊಳಗಳೆಲ್ಲವೂ ಮಣಿಖಚಿತಗಳಾದ ಮೆಟ್ಟಲುಗಳ ಸಾಲುಗಳಿಂದ ವಿರಾಜಿಸುತ್ತಿದ್ದುವು.

೩೭. ಚಂಚಲದೃಷ್ಟಿಯುಳ್ಳವರೂ, ಚಪಲೆಯರೂ, ನೀಲವರ್ಣದವರೂ, ಹದಿನಾರು ವರ್ಷವಯಸ್ಸಿನವರೂ ಆದ ಬಾಲೆಯರು ರತ್ನಖಚಿತಗಳಾದ ಚಿನ್ನದ ಕೊಡಗಳನ್ನೆತ್ತಿಕೊಂಡು ನೀರನ್ನು ತರುವುದರಲ್ಲಾಸಕ್ತರಾಗಿದ್ದರು.

೩೮. ವ್ಯಾಸಮಹರ್ಷಿಯೆ! ಇಂತಹ ಪಟ್ಟಣವನ್ನು ಪರಮೇಶ್ವರನು ತನ್ನ ಯೋಗಮಾಯೆಯಿಂದ ನಿರ್ಮಿಸಿದನು. ತನ್ನ ಸತಿಗೆ ಪ್ರಿಯವನ್ನುಂಟು ಮಾಡಲು ನಿರ್ಮಿತವಾದ ಈ ನಗರವು ಸಕಲ ಪಾತಕಗಳನ್ನು ಕಳೆಯುವುದೂ, ಬಹಳ ವಿಸ್ತಾರವೂ, ಪುಣ್ಯಪ್ರದವೂ, ಪುಣ್ಯಜನರಿಗೆ ಆಶ್ರಯವೂ ಆಗಿ ವಿಶಾಲೆ ಯೆಂದೇ ಕರೆಯಲ್ಪಟ್ಟಿತು.

೩೯. ಆದುದರಿಂದ ಮನೋಹರವೂ, ಅನಾದಿಯೂ ಆದ ಈ ನಗರವು ಸರ್ವಕಾಲಗಳಲ್ಲಿಯೂ, ಹದಿನಾಲ್ಕು ಲೋಕಗಳಲ್ಲಿಯೂ ವಿಶಾಲೆಯೆಂಬ ಹೆಸರಿನಿಂದಲೇ ಹೊಗಳಲ್ಪಡುತ್ತಿರುವುದು.

೪೦. ಮನುಷ್ಯನು ಎಲ್ಲಿಯೇ ನೆಲಸಿರುವನಾದರೂ, ಯಾವ ಅವಸ್ಥೆಯಲ್ಲಿರುವನಾದರೂ ನಿತ್ಯವೂ ವಿಶಾಲಾನಗರಿಯನ್ನು ಸ್ತುತಿಸುತ್ತಿರಲು ಆತನಿಗೆ ಶಿವಲೋಕದಲ್ಲಿ ಉತ್ತಮಸ್ಥಾನವು ಲಭಿಸುವುದು.

೪೧—೪೨. ವ್ಯಾಸನೆ! ಸೇವಿಸುವವರಿಗೆ ಭುಕ್ತಿಮುಕ್ತಿಗಳನ್ನು ಕೊಡುವ ವಿಶಾಲೆಗೆ ಸದೃಶವಾದ ಮತ್ತೊಂದು ಪಟ್ಟಣವು ಸಕಲ ಬ್ರಹ್ಮಾಂಡದಲ್ಲಿಯೂ

ಪಿತೄನುದ್ದಿಶ್ಯ ಕುರ್ವಂತಿ ಶ್ರಾದ್ಧಂ ಕಾಲೇ ನರಾ ಯದಿ ।
ತದಕ್ಷಯಂ ಭವೇತ್ತೇಷಾಂ ಪಿತೃಕಲ್ಪೇ ಚ ಗೀಯತೇ ॥ ೪೨ ॥
ಸ್ನಾನದಾನಾದಿಕಂ ಯೈಸ್ತು ವಿಶಾಲಾಯಾಂ ಪ್ರಸಂಗತಃ ।
ಯತ್ರ ಕುತ್ರ ಗತಾಸ್ತೇ ವೈ ಮೃತಾ ಯಾಂತಿ ಶಿವಾಲಯಂ ॥ ೪೩ ॥
ಧನ್ಯಾಃ ಪುಣ್ಯತಮಾ ಲೋಕೇ ಪ್ರೀತಿರ್ಯೇಷಾಂ ಸದಾಽಚಲಾ ।
ವಿಶಾಲಾಯಾಂ ಫಲಂ ಶಶ್ವಚ್ಛೇಷಃ ಶಕ್ತೋ ನ ವರ್ಣಿತುಂ ॥ ೪೪ ॥
ಕಥಾಶ್ರವಣಮಾತ್ರೇಣ ವಾಚ್ಯಮಾನೇನ ತತ್ಕ್ಷಣಾತ್ ।
ಮಹಾಪಾಪೋದ್ಭವಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೪೫ ॥
ಏವಂ ವ್ಯಾಸ ಪುರೀ ಜಾತಾ ವಿಶಾಲಾ ಚ ಕುಶಸ್ಥಲೀ ।
ಪ್ರತಿಕಲ್ಪಾ ಯಥಾ ಜಾತಾ ತಥಾ ಮೇ ಶೃಣು ಭಾಷತಃ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ವಿಶಾಲಾಽಭಿಧಾನ ಕಥನಂ" ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

ಇಲ್ಲವೇ ಇಲ್ಲವು. ಮಾನವರು ಅಲ್ಲಿ ಪಿತೃಗಳನ್ನುದ್ದೇಶಿಸಿ ಕಾಲಶ್ರಾದ್ಧಗಳನ್ನು ಮಾಡುವವರಾದರೆ ಅವರ ಕಾರ್ಯವು ಅಕ್ಷಯಫಲವನ್ನು ಕೊಡುವುದೆಂದು ಪಿತೃಕಲ್ಪದಲ್ಲಿ ಹೇಳಲ್ಪಟ್ಟಿರುವುದು.

೪೩. ಪ್ರಸಂಗವಶದಿಂದ ಒಮ್ಮೆಯಾದರೂ ವಿಶಾಲಾನಗರಿಯಲ್ಲಿ ಸ್ನಾನ ದಾನಾದಿಗಳನ್ನು ಮಾಡಿದವರು ಎಲ್ಲಿ ಹೋಗಿ ದೇಹವನ್ನು ತ್ಯಜಿಸಿದರೂ ಶಿವ ಲೋಕವನ್ನು ಸೇರುವರು.

೪೪. ಯಾರಿಗೆ ವಿಶಾಲಾಕ್ಷೇತ್ರದಲ್ಲಿ ನಿತ್ಯವೂ ನಿಶ್ಚಲವಾದ ಪ್ರೀತಿ ಯಿರುವುದೊ, ಅವರೇ ಧನ್ಯರು, ಪುಣ್ಯವಂತರು. ಆ ಭಕ್ತಿಯ ಶಾಶ್ವತಫಲ ವನ್ನು ವರ್ಣಿಸಲು ಆದಿಶೇಷನೂ ಶಕ್ತನಲ್ಲ.

೪೫. ಈ ಕಥೆಯನ್ನು ಶ್ರವಣಮಾಡಿದ ಮಾತ್ರದಿಂದಾಗಲಿ, ಪಠನ ದಿಂದಾಗಲಿ ಕ್ಷಣಮಾತ್ರದಲ್ಲಿಯೇ ಮನುಷ್ಯನು ಮಹಾಪಾತಕಗಳಿಂದುಂಟಾದ ದುಃಖಗಳಿಂದ ಮುಕ್ತನಾಗುವನು. ಇದರಲ್ಲಿ ಸಂದೇಹವಿಲ್ಲ.

೪೬. ಎಲೈ ವ್ಯಾಸನೆ! ಇಂತು ಕುಶಸ್ಥಳಿಯು ವಿಶಾಲೆಯೆಂಬ ಹೆಸರನ್ನು ತಳೆದ ವಿಷಯವನ್ನು ಹೇಳಿರುವೆನು. ಇನ್ನು ಕಲ್ಪಗಳೂ ಪ್ರತಿಕಲ್ಪಗಳೂ ಉಂಟಾದ ವಿವರವನ್ನು ತಿಳಿಸುವೆನು, ಕೇಳುವವನಾಗು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ವಿಶಾಲಾಽಭಿಧಾನಕಥನ"ವೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಽಷ್ಟಚತ್ವಾರಿಂಶೋಽಧ್ಯಾಯಃ

## ಪ್ರತಿಕಲ್ಪಾಽಭಿಧಾನಕಥನಂ

ಸನತ್ಕುಮಾರ ಉವಾಚ :—

ಶೃಣುಷ್ವಾಽವಹಿತೋ ವ್ಯಾಸ ಸ್ಥಿತಿಮೇಕಾಗ್ರಮಾನಸಃ ।
ಮಯಾ ವ್ಯಾಸಮುಖಾತ್ಪ್ರಾಪ್ತಾ ಕಲ್ಪಭೇದೇ ಕಥಾ ಶುಭಾ ॥ ೧ ॥
ಗುಹ್ಯಾದ್ಗುಹ್ಯತರಾ ಶ್ರೇಷ್ಠಾ ನ ದೇಯಾ ಯಸ್ಯ ಕಸ್ಯಚಿತ್ ।
ನಾಸ್ತಿಕಾಯ ಕೃತಘ್ನಾಯ ನಾಽಶಿಷ್ಯಾಯ ಕದಾಚನ ॥ ೨ ॥
ಏಷಾ ಪುಣ್ಯತಮಾ ವ್ಯಾಸ ಕಥಾ ಪಾಪಹರಾ ಪರಾ ।
ಯಸ್ಯಾಃ ಶ್ರವಣಮಾತ್ರೇಣ ಕಲ್ಪದೋಷೋ ನ ಬಾಧತೇ ।
ಪ್ರಮಾಣಂ ಕಲ್ಪಪರ್ಯಂತಂ ಬ್ರಹ್ಮಣಃ ಪರಮೇಷ್ಠಿನಃ ॥ ೩ ॥
ಮನ್ವಂತರೇಷು ಸರ್ವೇಷು ಕಲ್ಪಕಲ್ಪಾಂತರೇಷು ಚ ॥ ೪ ॥
ಯಾವತ್ಸಂಖ್ಯಾ ಪರಿಮಿತಾ ತಾವತೀ ಶೃಣು ಸತ್ತಮ ।
ಅಹೋರಾತ್ರಂ ಚ ಭಜತೇ ಸೂರ್ಯೋ ಮಾನುಷದೈವತಂ ॥ ೫ ॥

---

## ಕನ್ನಡದ ಅನುವಾದ

### ಪ್ರತಿಕಲ್ಪಾಭಿಧಾನಕಥನ

೧. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಸಾವಧಾನದಿಂದಲೂ ಏಕಾಗ್ರಚಿತ್ತದಿಂದಲೂ ಕೇಳುವ ಪವಿತ್ರವಾದ ಈ ಕಥೆಯನ್ನು ನಾನು ಹಿಂದಿನ ಕಲ್ಪದಲ್ಲಿದ್ದ ವ್ಯಾಸನ ಮುಖದಿಂದ ಕೇಳಿರುವೆನು.

೨. ಈ ವಿಜ್ಞಾನವು ಗುಹ್ಯಗಳಲ್ಲೆಲ್ಲ ಪರಮಗುಹ್ಯತರವಾದುದು. ಶ್ರೇಷ್ಠವಾದ ಈ ವಿದ್ಯೆಯನ್ನು ಪಾತ್ರಾಪಾತ್ರವಿವೇಚನೆಯಿಲ್ಲದೆ ಕೊಡಬಾರದು. ವಿಶೇಷವಾಗಿ ನಾಸ್ತಿಕನೂ, ಕೃತಘ್ನನೂ, ಶಿಷ್ಯನಲ್ಲದವನೂ ಆದವನಿಗೆಂದಿಗೂ ಹೇಳಬಾರದು.

೩. ವ್ಯಾಸಮುನಿಯೆ! ಈ ಕಥೆಯು ಪುಣ್ಯತಮವೂ, ಪಾಪನಾಶಕವೂ, ಸರ್ವೋತ್ತಮವೂ ಆಗಿರುವುದು. ಇದನ್ನು ಕೇಳುವ ಮಾತ್ರದಿಂದಲೇ ಕಲ್ಪದೋಷಗಳ ಭಾಧೆಯು ಕಳೆಯುವುದು. ಲೋಕಸೃಷ್ಟಿಕರ್ತನಾದ ಬ್ರಹ್ಮನ ಒಂದು ದಿವಸದ ಕಾಲಮಾನಕ್ಕೆ ಕಲ್ಪವೆಂದು ಹೆಸರು.

೪–೫. ಸಕಲಮನ್ವಂತರಗಳಲ್ಲಿಯೂ, ಕಲ್ಪಕಲ್ಪಾಂತರಗಳಲ್ಲಿಯೂ ಯಾವ ದಿನಗಳ ಸಂಖ್ಯೆಯು ಅಡಗಿರುವುದೆಂಬುದನ್ನೀಗ ಕೇಳುವವನಾಗು. ಸೂರ್ಯದೇವನು ತನ್ನ ಸಂಚಾರದಿಂದ ಮನುಷ್ಯರಿಗೂ ದೇವತೆಗಳಿಗೂ ಅಹೋರಾತ್ರಿಗಳನ್ನುಂಟುಮಾಡುತ್ತಿರುವನು.

ತಾಮುಪಾದಾಯ ಗಣನಾಂ ಶೃಣು ಸಂಖ್ಯಾಂ ದ್ವಿಜೋತ್ತಮ ।
ನಿಮೇಷೈಃ ಪಂಚದಶಭಿಃ ಕಾಷ್ಠಾ ತ್ರಿಂಶತ್ತು ತಾಃ ಕಲಾ ॥ ೬ ॥
ತ್ರಿಂಶತ್ಕಲಾ ಮುಹೂರ್ತಸ್ತು ತ್ರಿಂಶತಾ ತೈರ್ಮನೀಷಿಣಃ ।
ಅಹೋರಾತ್ರಮಿತಿ ಪ್ರಾಹುಶ್ಚಂದ್ರಾದಿತ್ಯಗತಿಸ್ತದಾ ॥ ೭ ॥
ರವಿರ್ಗತಿವಿಶೇಷೇಣ ಸಂಧ್ಯಾಯಾಂ ಯಾತಿ ನಿತ್ಯಶಃ ।
ತದಹಸ್ತು ಮನುಷ್ಯಾಣಾಂ ರಾತ್ರಿಶ್ಚೈವ ತು ತಾದೃಶೀ ॥ ೮ ॥
ಪಕ್ಷೌ ಮಾಸಾ ಋತುಶ್ಚಾಽಬ್ದಮಯನೇ ಚ ಪ್ರಕೀರ್ತಿತೇ ।
ಪಿತ್ರೂಣಾಂ ಚೈವ ದೇವಾನಾಂ ಬ್ರಹ್ಮಣಶ್ಚ ಯಥಾತಥಂ ॥ ೯ ॥
ಯಾವತ್ಸಂಖ್ಯಾ ಸಮಾಖ್ಯಾತಾ ಆಯುರಂತಶ್ಚ ತಾದೃಶಃ ।
ಅಹೋರಾತ್ರಾಃ ಪಂಚದಶ ಪಕ್ಷ ಇತ್ಯಭಿಶಬ್ದಿತಃ ॥ ೧೦ ॥
ಪಕ್ಷೌ ದ್ವೌ ತೌ ಕೃತೌ ಮಾಸೌ ಮಾಸೌ ದ್ವಾವೃತುರುಚ್ಯತೇ ।
ಅಯನಂ ಚತುರ್ಭಿಸ್ತ್ರಿಭಿರಬ್ದಂ ದ್ವೇ ಅಯನೇ ಸ್ಮೃತಂ ॥ ೧೧ ॥

---

೬. ಎಲೈ ಬ್ರಾಹ್ಮಣೋತ್ತಮನೆ! ಆ ವಿಭಾಗವನ್ನನುಸರಿಸಿ ಕಾಲಗಣನೆಯನ್ನು ಮಾಡಬೇಕು. ಆ ಸಂಖ್ಯೆಯನ್ನು ಕೇಳು. ಹದಿನೈದು ನಿಮೇಷಗಳು (ಕಣ್ಣಿನ ಎವೆಯಿಕ್ಕುವಷ್ಟುಕಾಲ) ಕಾಷ್ಠವೆಂದು ಕರೆಯಲ್ಪಡುವುವು. ಅಂತಹ ಮೂವತ್ತು ಕಾಷ್ಠಗಳಿಗೆ ಒಂದು ಕಲೆಯೆಂದು ಹೆಸರು

೭. ಮೂವತ್ತು ಕಲೆಗಳಿಗೆ ಒಂದು ಮುಹೂರ್ತವೆನ್ನುವರು. ಮೂವತ್ತು ಮುಹೂರ್ತಗಳಿಗೆ ಒಂದು ಅಹೋರಾತ್ರವೆಂದು ಜ್ಞಾನಿಗಳು ಹೇಳುವರು. ಹೀಗೆ ಒಂದು ದಿವಸದ ಹಗಲಿನಲ್ಲಿ ಸೂರ್ಯನೂ, ರಾತ್ರಿಯಲ್ಲಿ ಚಂದ್ರನೂ ಆಕಾಶದಲ್ಲಿ ಸಂಚರಿಸುತ್ತಿರುವರು.

೮. ಸೂರ್ಯನು ತನ್ನ ಗತಿವಿಶೇಷದಿಂದ ನಿತ್ಯವೂ ಸಂಧ್ಯಾಕಾಲಗಳನ್ನು ಉಂಟುಮಾಡುತ್ತಿರುವನು. ಆತನು ಕಾಣುವಾಗ ಮನುಷ್ಯರಿಗೆ ಹಗಲೂ, ಕಾಣದಿರುವಾಗ ರಾತ್ರಿಯೂ ಉಂಟಾಗುವುವು.

೯. ಈ ಮಾನದಿಂದಲೇ, ಪಕ್ಷಗಳು, ಮಾಸಗಳು, ಋತುಗಳು, ಅಯನಗಳು, ಸಂವತ್ಸರಗಳು—ಎಲ್ಲವೂ ಪಿತೃಗಳಿಗೂ, ದೇವತೆಗಳಿಗೂ, ಬ್ರಹ್ಮನಿಗೂ ಸಹ ಯಥಾಯೋಗ್ಯವಾಗಿ ಹೇಳಲ್ಪಟ್ಟಿರುವುವು.

೧೦. ಯಾರಿಗೆ ಯಾವ ಸಂಖ್ಯೆಯು ಹೇಳಲ್ಪಟ್ಟಿದೆಯೊ, ಅವರ ಆಯುಷ್ಯವೂ ಆ ಮಾನದಿಂದಲೇ ಗಣಿಸಲ್ಪಡತಕ್ಕದ್ದೆಂದು ತಿಳಿಯಬೇಕು. ಹದಿನೈದು ಅಹೋರಾತ್ರಗಳ ಕಾಲವು ಪಕ್ಷವೆಂದು ಕರೆಯಲ್ಪಡುವುದು.

೧೧. ಎರಡು ಪಕ್ಷಗಳು ಒಂದು ಮಾಸವನ್ನುಂಟುಮಾಡುವುವು. ಎರಡು ತಿಂಗಳುಗಳು ಒಂದು ಋತುವೆಂದು ಕರೆಯುವರು. ಮೂರು ಋತುಗಳಾದರೆ

ದಕ್ಷಿಣಂ ಚೋತ್ತರಂ ಚೈವ ಸಂಖ್ಯಾತತತ್ತ್ವವಿಶಾರದೈಃ ।
ಮಾನೇನಾಽನೇನ ಯೋ ಮಾಸಃ ಪಕ್ಷದ್ವಯಸಮನ್ವಿತಃ ॥ ೧೨ ॥
ಪಿತೄಣಾಂ ತದಹೋರಾತ್ರಮಿತಿ ಕಾಲವಿದೋ ವಿದುಃ ।
ಶುಕ್ಲಪಕ್ಷಸ್ತ್ವಹಸ್ತೇಷಾಂ ಕೃಷ್ಣಪಕ್ಷಸ್ತು ಶರ್ವರೀ ॥ ೧೩ ॥
ಕೃಷ್ಣಪಕ್ಷೇ ತ್ವಿಹ ಶ್ರಾದ್ಧಂ ಪಿತೄಣಾಂ ವರ್ತತೇ ದ್ವಿಜ ।
ಮಾನುಷೇಣ ತು ಮಾನೇನ ಯೋ ವೈ ಸಂವತ್ಸರಃ ಸ್ಮೃತಃ ॥ ೧೪ ॥
ದೇವಾನಾಂ ತದಹೋರಾತ್ರಂ ದಿವಾಚೈವೋತ್ತರಾಯಣಂ ।
ದಕ್ಷಿಣಾಽಯನಂ ಸ್ಮೃತಾ ರಾತ್ರಿಃ ಪ್ರಾಜ್ಞೈಸ್ತತ್ತ್ವಾರ್ಥಕೋವಿದೈಃ ॥೧೫॥
ದಿವ್ಯಮಬ್ದಂ ಶತಗುಣಂ ದಿವ್ಯಮಬ್ದಸಹಸ್ರಕಂ ।
ಮುನಿಭಿಶ್ಚೈವ ತತ್ತ್ವಜ್ಞೈರಹೋರಾತ್ರಂ ಮನೋಃ ಸ್ಮೃತಂ ॥ ೧೬ ॥
ಅಹೋರಾತ್ರಂ ದಶಗುಣಂ ಮಾನವಃ ಪಕ್ಷ ಉಚ್ಯತೇ ।
ಪಕ್ಷಾದ್ದಶಗುಣೋ ಮಾಸೋ ಮಾಸಾ ದ್ವಾದಶಭಿರ್ಗುಣೈಃ ॥ ೧೭ ॥

---

ಒಂದು ಅಯನವಾಗುವುದು. ಎರಡು ಅಯನಗಳಿಂದ ಒಂದು ಸಂವತ್ಸರ ವಾಗುವುದು.

೧೨. ಸಂಖ್ಯಾತತತ್ತ್ವವಿಶಾರದರು ಇವುಗಳನ್ನು ದಕ್ಷಿಣಾಯನ, ಉತ್ತರಾಯಣಗಳೆಂದು ಕರೆಯುವರು. ಈ ಕಾಲಮಾನದಿಂದ ಎರಡು ಪಕ್ಷಗಳನ್ನೊಳಕೊಂಡ ಮಾಸವನ್ನು ಹೇಳಿದೆವಷ್ಟೆ.

೧೩. ಅದನ್ನೇ ಪಿತೃಗಳಿಗೆ ಒಂದು ಅಹೋರಾತ್ರವನ್ನಾಗಿ ಕಾಲಜ್ಞರು ತಿಳಿದಿರುವರು. ಮಾಸದ ಶುಕ್ಲಪಕ್ಷವೇ ಅವರಿಗೆ ಹಗಲು; ಕೃಷ್ಣಪಕ್ಷವೇ ರಾತ್ರಿಯಾಗಿರುವುದು.

೧೪. ಬ್ರಾಹ್ಮಣೋತ್ತಮನೆ! ಇಲ್ಲಿ ಕೃಷ್ಣಪಕ್ಷದಲ್ಲಿಯೂ ಪಿತೃಗಳಿಗೆ ಶ್ರಾದ್ಧಕ್ರಿಯೆಗಳು ನಡೆಯುತ್ತಿರುವುವು. ಮನುಷ್ಯಮಾನದಿಂದ ಮುನ್ನೂರ ಅರುವತ್ತು ದಿವಸಗಳಿಗೆ ಒಂದು ಸಂವತ್ಸರವೆಂದು ಹೇಳಿರುವೆವಷ್ಟೆ.

೧೫. ಅದೇ ದೇವತೆಗಳಿಗೆ ಒಂದು ಅಹೋರಾತ್ರವಾಗಿರುವುದು. ಪ್ರಾಜ್ಞರೂ, ತತ್ತ್ವಾರ್ಥವನ್ನರಿತವರೂ ಆದವರು ಉತ್ತರಾಯಣವನ್ನು ದೇವತೆಗಳ ಹಗಲೆಂದೂ, ದಕ್ಷಿಣಾಯನವನ್ನು ರಾತ್ರಿಯೆಂದೂ ಹೇಳುವರು.

೧೬. ಇದರ ನೂರರಷ್ಟು ಕಾಲವು ಒಂದು ದಿವ್ಯವರ್ಷವಾಗುವುದು. ಇಂತಹ ಒಂದು ಸಾವಿರ ದಿವ್ಯವರ್ಷಗಳಿಗೆ ತತ್ತ್ವಜ್ಞರಾದ ಮುನಿಗಳು ಮನುವಿನ ಅಹೋರಾತ್ರವೆಂದು ಹೇಳುವರು.

೧೭. ಹತ್ತು ಅಹೋರಾತ್ರಗಳಿಗೆ ಒಂದು ಮಾನವಪಕ್ಷವೆನ್ನುವರು. ಹತ್ತು ಪಕ್ಷಗಳಾಗಲು ಒಂದು ಮಾಸವಾಗುವುದು. ಇಂತಹ ಮಾಸಗಳ ಹನ್ನೆರಡರಷ್ಟು ಕಾಲವನ್ನು ತೆಗೆದುಕೊಳ್ಳಬೇಕು.

ಋತುರ್ಮಾನೂನಾಂ ಸಂಪ್ರೋಕ್ತಃ ಪ್ರಾಜ್ಞೈಸ್ತತ್ತ್ವಾರ್ಥದರ್ಶಿಭಿಃ ।
ಷಡ್ಭಿಸ್ತ್ರೈರ್ವರ್ಷಂ ಸಂಪ್ರೋಕ್ತಂ ತೇನ ಸಂಖ್ಯಾ ನಿಬಧ್ಯತೇ ॥ ೧೮ ॥
ಚತ್ವಾರ್ಯೇವ ಸಹಸ್ರಾಣಿ ವರ್ಷಾಣಾಂ ತು ಕೃತಂ ಯುಗಂ ।
ತಾವತೀ ತು ಭವೇತ್ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥ ೧೯ ॥
ತ್ರೀಣಿ ವರ್ಷಸಹಸ್ರಾಣಿ ತ್ರೇತಾ ತತ್ಪರಿಮಾಣತಃ ।
ತಸ್ಯಾಶ್ಚ ತ್ರಿಶತೀ ಸಂಧ್ಯಾ ಸಂಧ್ಯಾಂಶಶ್ಚ ತಥಾಪರಃ ॥ ೨೦ ॥
ತಥಾ ವರ್ಷಸಹಸ್ರೇ ದ್ವೇ ದ್ವಾಪರಂ ಪರಿಕೀರ್ತಿತಂ ।
ತಸ್ಯ ಚ ದ್ವಿಶತೀ ಸಂಧ್ಯಾ ಸಂಧ್ಯಾಂಶಶ್ಚ ತಥಾಪರಃ ॥ ೨೧ ॥
ಕಲಿವರ್ಷಸಹಸ್ರಂ ತು ಸಂಖ್ಯಾಚೋಕ್ತಾ ಮನೀಷಿಭಿಃ ।
ತಸ್ಯ ಚೈಕಶತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥ ೨೨ ॥

[೪೮೦೦ ಕೃತಂ, ೩೬೦೦ ತ್ರೇತಾ, ೨೪೦೦ ದ್ವಾಪರಂ, ೧೨೦೦ ಕಲಿಃ]

ಏಷಾ ದ್ವಾದಶಸಾಹಸ್ರೀ ಯುಗಸಂಖ್ಯಾ ಪ್ರಕೀರ್ತಿತಾ ।
ದಿವ್ಯೇನಾಽನೇನ ಮಾನೇನ ಯುಗಸಂಖ್ಯಾಂ ನಿಬೋಧ ಮೇ ॥ ೨೩ ॥

---

೧೮. ತತ್ತ್ವದರ್ಶಿಗಳಾದ ವಿದ್ವಾಂಸರು ಅದನ್ನು ಮಾನವಋತುವೆಂದು ಕರೆಯುವರು. ಆರು ಋತುಗಳಾದರೆ ಒಂದು ವರ್ಷವು. ಇದರಿಂದ ಮನ್ವಂತರಗಳ ಕಾಲಮಾನವು ಗುಣಿಸಲ್ಪಡುವುದು.

೧೯. ಕೃತಯುಗವು ನಾಲ್ಕು ಸಾವಿರ ವರ್ಷಗಳುಳ್ಳದ್ದಾಗಿರುವುದು. ಇದರ ಮೊದಲಿನ ಸಂಧ್ಯಾಕಾಲವೂ ಕೊನೆಯ ಸಂಧ್ಯಾಂಶವೂ ನಾಲ್ಕು ನಾಲ್ಕು ನೂರು ವರ್ಷಗಳ ಅವಧಿಯುಳ್ಳವುಗಳು.

೨೦. ಈ ಪರಿಮಾಣದಿಂದಲೇ ತ್ರೇತಾಯುಗವು ಮೂರು ಸಾವಿರ ವರ್ಷಗಳೂ ಸಂಧಿಕಾಲವು ಮತ್ತು ಸಂಧ್ಯಾಂಶವು ಮುನ್ನೂರು ಮುನ್ನೂರು ವರ್ಷಗಳೂ ನಡೆಯುವುವು.

೨೧. ಹಾಗೆಯೇ ದ್ವಾಪರಯುಗವೂ ಎರಡು ಸಾವಿರ ವರ್ಷಗಳುಳ್ಳದೆಂದು ಹೇಳುವರು. ಇದಕ್ಕೆ ಸಂಧಿಯು ಇನ್ನೂರು ವರ್ಷಗಳು. ಸಂಧ್ಯಾಂಶವೂ ಇದೇ ಪರಿಮಾಣವುಳ್ಳದ್ದಾಗಿರುವುದು.

೨೨. ಕಲಿಯುಗವು ಒಂದು ಸಾವಿರ ವರ್ಷವುಳ್ಳದ್ದೆಂದು ಪ್ರಾಜ್ಞರು ಹೇಳುವರು. ಅದಕ್ಕೂ ಒಂದು ನೂರು ವರ್ಷಗಳ ಸಂಧ್ಯಾಕಾಲವೂ ಒಂದು ನೂರು ವರ್ಷಗಳ ಸಂಧ್ಯಾಂಶವೂ ಇರುವುವು.

೨೩. ಇಂತು ಒಂದು ಮಹಾಯುಗವು ಹನ್ನೆರಡು ಸಾವಿರ ವರ್ಷಗಳುಳ್ಳದ್ದೆಂದು ಹೇಳಲ್ಪಟ್ಟಿರುವುದು. ಈ ಯುಗಸಂಖ್ಯೆಯೆಲ್ಲವೂ ದೇವಮಾನದಿಂದ ಗುಣಿತವಾಗಿರುವುದೆಂಬುದನ್ನು ನಾನು ಹೇಳಿರುವೆನಷ್ಟೆ.

ಸಸರ್ಜ ಸ ಪುನಸ್ತತ್ರ ಜಗತ್ಸರ್ವಮಿದಂ ತತಃ ।
ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೈವ ಚತುರ್ಯುಗಂ ॥ ೨೪ ॥
ಯುಗಂ ತದೇಕಸಪ್ತತ್ಯಾ ಗುಣಿತಂ ದ್ವಿಜಸತ್ತಮ ।
ಮನ್ವಂತರಮಿತಿ ಪ್ರೋಕ್ತಂ ಸಂಖ್ಯಾನಾರ್ಥವಿಶಾರದೈಃ ॥ ೨೫ ॥
ಅಯನಂ ಚಾಽಪಿ ತತ್ಪ್ರೋಕ್ತಂ ದ್ವೇಽಯನೇ ದಕ್ಷಿಣೋತ್ತರೇ ।
ಮನುಃ ಪ್ರಲೀಯತೇ ಹ್ಯತ್ರ ಸಂಪ್ರಾಪ್ತೇ ಜಗತಃ ಪ್ರಭೌ ॥ ೨೬ ॥
ತತೋಽಪರೋ ಮನುಃ ಕಾಲಮೇತಾವಂತಂ ಭವೇತ್ಪುನಃ ।
ಸಮತೀತೇ ತು ರಾಜೇಂದ್ರ ಪ್ರೋಕ್ತಃ ಸಂವತ್ಸರಸ್ಯ ವೈ ॥ ೨೭ ॥
ತದೈವ ಚಾಯನಂ ಪ್ರೋಕ್ತಂ ಮುನಿನಾ ತತ್ತ್ವದರ್ಶಿನಾ ।
ಬ್ರಹ್ಮಣಸ್ತದಹಃ ಪ್ರೋಕ್ತಂ ಕಲ್ಪಶ್ಚೇತಿ ಸ ಉಚ್ಯತೇ ॥ ೨೮ ॥
ಸಹಸ್ರಯುಗಪರ್ಯಂತಂ ಸಾ ನಿಶಾ ಪ್ರೋಚ್ಯತೇ ಬುಧೈಃ ।
ನಿಮಜ್ಜತ್ಯತ್ರ ಚೋರ್ವೀ ಸಾ ಸಶೈಲವನಕಾನನಾ ॥ ೨೯ ॥

---

೨೪. ಈ ಮಹಾಯುಗವು ಕಳೆದು ಪ್ರಳಯವಾದ ಮೇಲೆ ಪುನಃ ಬ್ರಹ್ಮನು ಜಗತ್ತನ್ನು ಸೃಷ್ಟಿಮಾಡುವನು. ಪುನಃ ಕೃತ, ತ್ರೇತಾ, ದ್ವಾಪರ, ಕಲಿಗಳಿಂದ ಕೂಡಿದ ಚತುರ್ಯುಗವು ನಡೆಯುವುದು.

೨೫. ಬ್ರಾಹ್ಮಣೋತ್ತಮನೆ! ಇಂತಹ ಎಪ್ಪತ್ತೊಂದು ಮಹಾಯುಗಗಳು ನಡೆಯುವ ಕಾಲವನ್ನೇ ಸಂಖ್ಯಾಶಾಸ್ತ್ರವಿಶಾರದರು ಮನ್ವಂತರವೆಂದು ಕರೆಯುವರು.

೨೬. ಇದನ್ನೇ ಅಯನವೆಂದೂ ಕರೆಯುವರು. ದಕ್ಷಿಣಾಯನ, ಉತ್ತರಾಯಣಗಳೆಂದು ಎರಡು ಅಯನಗಳಿರುವುವು. ಪುನಃ ಜಗತ್ಸೃಷ್ಟಿಯುಂಟಾಗುವ ಸಮಯಕ್ಕೆ ಮನ್ವಂತರವು ಕೊನೆಗಾಣುವುದು.

೨೭. ಬಳಿಕ ಮತ್ತೊಬ್ಬ ಮನುವು ಹುಟ್ಟಿ ಇಷ್ಟು ಕಾಲವನ್ನೇ ಪುನಃ ಆಳುತ್ತಿರುವನು. ಆತನ ಕಾಲವೂ ಕಳೆಯಲು ಒಂದು ಸಂವತ್ಸರವು ಕಳೆಯಿತೆಂದು ಹೇಳುವರು.

೨೮. ತತ್ತ್ವದರ್ಶಿಯಾದ ಮುನಿಯು ಅದನ್ನೇ ಅಯನವೆಂದು ಕರೆಯುವನು. ಅದನ್ನೇ ಬ್ರಹ್ಮನ ಒಂದು ಹಗಲೆಂದೂ ಕಲ್ಪವೆಂದೂ ಕರೆಯುವರು.

೨೯–೩೦. ಹೀಗೆಯೇ ಬ್ರಹ್ಮನ ರಾತ್ರಿಯೂ ಒಂದು ಸಾವಿರ ಮಹಾಯುಗಗಳುಳ್ಳದೆಂದು ಹೇಳುವರು. ಆಗ ಪರ್ವತಗಳು, ಉದ್ಯಾನಗಳು, ಅರಣ್ಯಗಳು ಮುಂತಾದುವುಗಳಿಂದೊಡಗೂಡಿದ ಭೂಮಿಯು ನೀರಿನಲ್ಲಿ ಮುಳುಗಿಹೋಗುವುದು. ಎಲೈ ಬ್ರಾಹ್ಮಣೋತ್ತಮನೆ! ಆ ರಾತ್ರಿಯೂ ಸಂಪೂರ್ಣವಾಗಿ ಒಂದು

ತಸ್ಮಿನ್ ಯುಗಸಹಸ್ರೇ ತು ಪೂರ್ಣೇ ವೈ ದ್ವಿಜಸತ್ತಮ ।
ಬ್ರಾಹ್ಮೇ ದಿವಸಪರ್ಯಂತಂ ಕಲ್ಪೋ ನಿಃಶೇಷ ಉಚ್ಯತೇ ॥ ೩೦ ॥
ಯುಗಾನಿ ಸಪ್ತತಿಂ ತಾನಿ ಸಾಗ್ರಾಣಿ ಕಥಿತಾನಿ ತೇ ।
ಕೃತತ್ರೇತಾದಿಯುಕ್ತಾನಿ ಮನೋರಂತರಮುಚ್ಯತೇ ॥ ೩೧ ॥
ಚತುರ್ದಶೈತೇ ಮನವಃ ಕಥಿತಾಃ ಕೀರ್ತಿವರ್ಧನಾಃ ।
ವೇದೇಷು ಸಪುರಾಣೇಷು ಸರ್ವೇಷು ಪ್ರಭವಿಷ್ಣವಃ ॥ ೩೨ ॥
ಪ್ರಜಾನಾಂ ಪತಯೋ ವ್ಯಾಸ ಧನ್ಯಮೇಷಾಂ ಪ್ರಕೀರ್ತನಂ ॥ ೩೩ ॥
ಮನ್ವಂತರೇಷು ಸಂಹಾರಾಃ ಸಂಹಾರಾಂತೇಷು ಸಂಭವಾಃ ।
ನ ಶಕ್ಯಮಂತಸ್ತೇಷಾಂ ವೈ ವಕ್ತುಂ ವರ್ಷಶತೈರಪಿ ॥ ೩೪ ॥
ವಿಸರ್ಗಶ್ಚ ಪ್ರಜಾನಾಂ ವೈ ಸಂಹಾರಸ್ಯ ಚ ಭಾರತ ।
ಮನ್ವಂತರೇಷು ಸಂಹಾರಃ ಶ್ರೂಯತೇ ಭರತರ್ಷಭ ॥ ೩೫ ॥
ಯತ್ರ ತಿಷ್ಠಂತಿ ವೈ ದೇವಾಃ ಸರ್ವೇ ಸಪ್ತರ್ಷಿಭಿಃ ಸಹ ।
ತಪಸಾ ಬ್ರಹ್ಮಚರ್ಯೇಣ ಶ್ರುತೇನ ಚ ಸಮನ್ವಿತಾಃ ॥ ೩೬ ॥

---

ಸಾವಿರ ಯುಗಗಳ ಕಾಲವಿರುವುದು. ಹೀಗೆ ಕಲ್ಪವೆಂದರೆ ಬ್ರಹ್ಮನ ಒಂದು ಸಾಗ್ರವಾದ ದಿವಸವೆಂದು ಪ್ರಾಜ್ಞರು ಹೇಳುವರು.

೩೧. ಹಿಂದೆ ಎಪ್ಪತ್ತೊಂದು ಮಹಾಯುಗಗಳನ್ನು ಹೇಳಿರುವನಷ್ಟೆ. ಅವುಗಳಲ್ಲಿ ಒಂದೊಂದರಲ್ಲಿಯೂ ಕೃತ, ತ್ರೇತಾ, ದ್ವಾಪರ, ಕಲಿಯುಗಗಳಿರುವುವು. ಈ ಕಾಲಕ್ಕೆ ಮನ್ವಂತರವೆಂದು ಹೆಸರು.

೩೨. ಇಂತಹ ಮನುಗಳು ಬ್ರಹ್ಮನ ಒಂದು ಹಗಲು ಅಥವಾ ರಾತ್ರಿಯಲ್ಲಿ ಹದಿನಾಲ್ಕು ಜನರು ಹುಟ್ಟುವರು. ಅವರ ಹೆಸರುಗಳನ್ನು ಹೇಳಿದವರಿಗೂ ಕೀರ್ತಿಯು ಲಭಿಸುವುದು. ಅವರ ಮಹಿಮೆಯು ವೇದಗಳಲ್ಲಿಯೂ ಸಮಸ್ತ ಪುರಾಣಗಳಲ್ಲಿಯೂ ಉಕ್ತವಾಗಿರುವುದು.

೩೩. ವ್ಯಾಸನೆ! ಇವರೇ ಪ್ರಜಾಪತಿಗಳೂ ಆಗಿರುವರು. ಇವರ ನಾಮಸಂಕೀರ್ತನವೇ ಪುಣ್ಯಕರವು.

೩೪. ಮನ್ವಂತರಗಳ ಕೊನೆಯಲ್ಲಿ ಪ್ರಳಯಗಳೂ, ಪ್ರಳಯಗಳಾದ ಮೇಲೆ ಮತ್ತೆ ಜಗತ್ಸೃಷ್ಟಿಯೂ ನಡೆಯುತ್ತಲೇ ಇರುವುವು. ಇವುಗಳ ನಿರ್ಣಯವನ್ನು ಹೇಳಲು ನೂರಾರು ವರ್ಷಗಳಾದರೂ ಸಾಲದು.

೩೫. ಮುನಿಶ್ರೇಷ್ಠನೆ! ಪ್ರತಿಯೊಂದು ಮನ್ವಂತರದ ಕೊನೆಯಲ್ಲಿಯೂ ಒಂದೊಂದು ಮಹಾಯುಗದ ಅಂತ್ಯದಲ್ಲಿ ನಡೆಯುವ ಜನರಸೃಷ್ಟಿಸಂಹಾರಾದಿ ವ್ಯವಹಾರಗಳೆಲ್ಲವೂ ಉಪಸಂಹಾರವನ್ನು ಹೊಂದುವುವು.

೩೬. ಆಗ ದೇವತೆಗಳೂ ಸಪ್ತರ್ಷಿಗಳೂ ಮಾತ್ರ ಬ್ರಹ್ಮಚರ್ಯ, ವೇದಾಧ್ಯಯನಗಳಿಂದ ಕೂಡಿದವರಾಗಿ ನಷ್ಟರಾಗುವುದಿಲ್ಲ.

ಪೂರ್ಣೇ ಯುಗಸಹಸ್ರೇ ತು ಕಲ್ಪೋ ನಿಃಶೇಷ ಉಚ್ಯತೇ ।
ತತ್ರ ಸರ್ವಾಣಿ ಭೂತಾನಿ ದಗ್ಧಾನ್ಯಾದಿತ್ಯರಶ್ಮಿಭಿಃ ॥ ೩೭ ॥
ಬ್ರಹ್ಮಾಣಮಗ್ರತಃ ಕೃತ್ವಾ ಸಹಾದಿತ್ಯೈರ್ಗಣೈರ್ದ್ವಿಜ ।
ಪ್ರವಿಶಂತಿ ಸುರಶ್ರೇಷ್ಠಂ ಹರಿಂ ನಾರಾಯಣಂ ಪ್ರಭುಂ ॥ ೩೮ ॥
ಸ ಸ್ರಷ್ಟಾ ಸರ್ವಭೂತಾನಾಂ ಕಲ್ಪಾಂತೇ ತು ಪುನಃ ಪುನಃ ।
ಅವ್ಯಕ್ತಃ ಶಾಶ್ವತೋ ದೇವಸ್ತಸ್ಯ ಸರ್ವಮಿದಂ ಜಗತ್ ॥ ೩೯ ॥
ಸ ಏವ ವಿದ್ಯತೇ ವ್ಯಾಸ ಮಹೇಶ್ಯಾ ಸಹ ಸಂಯುತಃ ।
ಮಹಾಕಾಲವನೇ ವಾಸಂ ಚಕಾರ ಜಗದೀಶ್ವರಃ ॥ ೪೦ ॥
ಪ್ರಲಯೋ ನ ಬಾಧತೇ ವ್ಯಾಸ ಮಹಾಕಾಲವನೋತ್ತಮೇ ।
ಕಲ್ಪೇ ಕಲ್ಪೇ ಚ ವೈ ರಮ್ಯಾ ಪುರೀ ಹ್ಯೇಷಾ ಕುಶಸ್ಥಲೀ ॥ ೪೧ ॥
ನಿರಾಮಯಾ ನಿರಾತಂಕಾ ನಿರ್ವಿಕಾರಾ ಯುಗೇ ಯುಗೇ ।
ಮಾರ್ಕಂಡೇಯೋಪದಿಷ್ಟಾನಿ ಕಲ್ಪಾನಿ ಸಂಭವಂತಿ ಚ ॥ ೪೨ ॥

---

೩೭. ಆದರೆ ಒಂದು ಸಾವಿರ ಮಹಾಯುಗಗಳು ಕಳೆದು ಬ್ರಹ್ಮನಿಗೆ ರಾತ್ರಿಯಾಗುವಾಗ ಮಾತ್ರ ಸೃಷ್ಟಿಯು ನಿಶ್ಶೇಷವಾಗುವುದೆಂದು ಹೇಳುವರು. ಆಗ ಸಕಲ ಭೂತಗಳೂ ಸೂರ್ಯನ ತಾಪದಿಂದ ಬೆಂದು ಬೂದಿಯಾಗುವುವು.

೩೮. ಆಗ ಬ್ರಹ್ಮನನ್ನು ಮುಂದುಮಾಡಿಕೊಂಡು ಸಮಸ್ತ ಆದಿತ್ಯ ಗಣಗಳೂ ದೇವದೇವನೂ, ಲೋಕನಾಥನೂ, ಅನನ್ಯಪರಾಯಣನೂ ಆದ ನಾರಾಯಣನಲ್ಲಿ ಸೇರಿಹೋಗುವರು.

೩೯. ಬ್ರಹ್ಮನ ರಾತ್ರಿಯ ಕಾಲವು ಕಳೆಯಲು ಆತನೇ ಮತ್ತೆ ಮತ್ತೆ ಸಕಲ ಭೂತಗಳನ್ನೂ ಸೃಷ್ಟಿಮಾಡುವನು. ಆ ದೇವನು ಅವ್ಯಕ್ತನೂ, ಶಾಶ್ವತನೂ ಆಗಿರುವನು. ಈ ಸಮಸ್ತ ಬ್ರಹ್ಮಾಂಡವೂ ಆತನ ಅಧೀನದಲ್ಲಿರುವುದು.

೪೦. ವ್ಯಾಸಮಹರ್ಷಿಯೆ ! ಜಗದೀಶ್ವರನಾದ ಆತನೇ ಮಹೇಶ್ವರಿಯೊಡಗೂಡಿ ಮಹಾಕಾಲವನದಲ್ಲಿ ವಾಸಮಾಡುತ್ತ ಜನರಿಗೆ ದರ್ಶನವನ್ನು ಕೊಡುತ್ತಿರುವನು.

೪೧. ಮಹಾಕಾಲವನವೆಂಬ ಈ ಉತ್ತಮಕ್ಷೇತ್ರವನ್ನು ಪ್ರಳಯವೂ ಬಾಧಿಸಲಾರದು. ಪ್ರತಿಯೊಂದು ಕಲ್ಪದಲ್ಲಿಯೂ ಈ ಕುಶಸ್ಥಲೀನಗರಿಯು ಹೆಚ್ಚು ಹೆಚ್ಚು ಮನೋಹರವಾಗುತ್ತಿರುವುದು.

೪೨. ಮಾರ್ಕಂಡೇಯ ಮಹಾಮುನಿಯು ಉಪದೇಶಿಸಿದ ಕಲ್ಪಾಂತ್ಯದ ಮಹಾಪ್ರಳಯಗಳೂ, ಮಹಾಯುಗಾಂತ್ಯಗಳ ಅವಾಂತರ ಪ್ರಳಯಗಳೂ ಈ ವಿಷಯದಲ್ಲಿ ಮಾತ್ರ ಅಶಕ್ತಗಳಾಗಿರುವುವು. ಈ ಕ್ಷೇತ್ರವು ಯಾವಾಗಲೂ ನಿರ್ಭಯವೂ, ನಿರಾಂತಕವೂ, ವಿಕಾರಶೂನ್ಯವೂ ಆಗಿರುವುದು.

ಅತ್ರೈವ ಚ ವನೇ ರಮ್ಯೇ ಬ್ರಹ್ಮಾ ಲೋಕಪಿತಾಮಹಃ ।
ಪ್ರಜಾನಾಂ ಪತಯೋ ಯೇ ತೇ ದಕ್ಷಃ ಪ್ರಾಚೇತಸಸ್ತಥಾ ॥ ೪೩ ॥
ಮರೀಚಿಃ ಕಶ್ಯಪೋ ರುದ್ರೋ ಯೇಽನ್ಯೇ ಭೃಗ್ವಾದಯಸ್ತಥಾ ।
ಕಲ್ಪಾದೌ ಸಸೃಜೇ ಲೋಕಾಂಶ್ಚರಾಽಚರಾನ್ಯಥಾತಥಾ ॥ ೪೪ ॥
ಏವಮಾದೌ ಪುರಾ ವ್ಯಾಸ ಕಲ್ಪಂ ಕಲ್ಪಾಯತೇ ತದಾ ।
ವಾರಾಹವಾಮನವಿಷ್ಣುಪಿತ್ರೄಣಾಂ ವೈ ತಥೈವ ಚ ॥ ೪೫ ॥
ಕಲ್ಪಭೇದಾಃ ಸಮಾಖ್ಯಾತಾ ಮಹಾಕಾಲವನೇ ಶುಭೇ ।
ಚತುರಾಶೀತಿಕಲ್ಪಾನಿ ಸಂಜಾತಾನಿ ದ್ವಿಜೋತ್ತಮ ॥ ೪೬ ॥
ತಾವಂತಿ ಯೋಗಲಿಂಗಾನಿ ವನೇ ತಿಷ್ಠಂತಿ ಸತ್ತಮ ।
ಪುನರ್ಜಾತಾಃ ಪುನರ್ನಷ್ಟಾ ಮಹೀಸಾಗರಪರ್ವತಾಃ ॥ ೪೭ ॥
ಪುನಃ ಪುನರ್ಭವಿಷ್ಯಂತಿ ಪುರೀ ಹ್ಯೇಷಾಽಚಲಾ ಸ್ಮೃತಾ ।
ತಸ್ಮಾತ್ಸರ್ವೇಷು ಕಾಲೇಷು ಸರ್ವಲೋಕೇಷು ಗೀಯತೇ ॥ ೪೮ ॥
ಪ್ರತಿಕಲ್ಪೇತಿ ವಿಖ್ಯಾತಾ ಭುವಿ ವ್ಯಾಸ ಭವಿಷ್ಯತಿ ।
ಯೇಽಸ್ಯಾಂ ವೈ ಮಾನವಾ ದಾಂತಾಃ ಸ್ನಾನದಾನಾದಿಕಂ ತಥಾ ॥ ೪೯ ॥

---

೪೩–೪೪. ರಮ್ಯವಾದ ಈ ಕ್ಷೇತ್ರದಲ್ಲಿ ನೆಲಸಿಯೇ ಲೋಕಪಿತಾಮಹನಾದ ಚತುರ್ಮುಖನೂ, ಪ್ರಾಚೇತಸರಾದ ದಕ್ಷ, ಮರೀಚಿ, ಕಾಶ್ಯಪ ಮುಂತಾದ ಪ್ರಜೇಶ್ವರರೂ, ರುದ್ರನೂ, ಭೃಗುವೇ ಮುಂತಾದ ಮಹರ್ಷಿಗಳೂ ಚರಾಚರಾತ್ಮಕಗಳಾದ ಲೋಕಗಳನ್ನು ಯಥಾಯೋಗ್ಯವಾಗಿ ಸೃಷ್ಟಿಮಾಡುತ್ತಿರುವರು.

೪೫. ವ್ಯಾಸನೆ! ಈ ರೀತಿಯಾಗಿ ವಾರಾಹ, ವಾಮನ, ವೈಷ್ಣವ, ಪೈತ್ರ್ಯ ಮುಂತಾದ ಅನೇಕ ಕಲ್ಪಗಳು ಹಿಂದೆ ಕಳೆದುಹೋಗಿರುವುವು.

೪೬. ಇಂತು ಕಲ್ಪಭೇದಗಳನ್ನು ನಿನಗೆ ವಿವರಿಸಿ ಹೇಳಿರುವೆನು. ದ್ವಿಜೋತ್ತಮನೆ! ಪರಮಪವಿತ್ರವಾದ ಮಹಾಕಾಲವನವು ಸ್ಥಾಪಿತವಾದಂದಿನಿಂದ ಇಂತಹ ಎಂಬತ್ತುನಾಲ್ಕು ಕಲ್ಪಗಳು ಕಳೆದುಹೋಗಿರುವುವು.

೪೭. ಇದರ ಚಿಹ್ನೆಗಾಗಿ ಅಲ್ಲಿ ಅದೇ ಸಂಖ್ಯೆಯ ಯೋಗಲಿಂಗಗಳು ಪ್ರತಿಷ್ಠಿತಗಳಾಗಿರುವುವು. ಮಹರ್ಷಿಯೆ! ಪ್ರತಿ ಕಲ್ಪಾಂತ್ಯದಲ್ಲಿಯೂ ಭೂಮಿಯೂ, ಸಮುದ್ರಗಳೂ, ಪರ್ವತಗಳೂ ಮತ್ತೆ ಮತ್ತೆ ಹುಟ್ಟಿ ನಷ್ಟವಾಗುತ್ತಿರುವುವು.

೪೮. ಆದರೆ ಈ ನಗರಿಯು ಮತ್ತೆ ಮತ್ತೆ ಹಾನಿವೃದ್ಧಿಗಳನ್ನು ಹೊಂದದೆ ಅಚಲವಾಗಿರುವುದು. ಆದುದರಿಂದಲೇ ಇದನ್ನು ಎಲ್ಲ ಕಾಲಗಳಲ್ಲಿಯೂ, ಸಮಸ್ತ ಲೋಕಗಳಲ್ಲಿಯೂ ಹೊಗಳುತ್ತಿರುವುದು.

೪೯–೫೦. ವ್ಯಾಸನೆ! ಆದಕಾರಣವೇ ಇದು ಪ್ರತಿಕಲ್ಪವೆಂಬ ಹೆಸರಿನಿಂದ ಲೋಕದಲ್ಲಿ ಪ್ರಖ್ಯಾತವಾಗುವುದು. ಯಾವ ಮಾನವರು ಇಂದ್ರಿಯ ಸಂಯಮ

**ಜಪಂ ಹೋಮಂ ತಥಾ ಶ್ರಾದ್ಧಂ ಪಿತೄನುದ್ದಿಶ್ಯ ದೇವತಾಃ ।**
**ನ ತೇಷಾಂ ಪುನರಾವೃತ್ತಿಃ ಕೋಟಿಕಲ್ಪಶತೈರಪಿ ॥ ೫೦ ॥**
**ಪ್ರತಿಕಲ್ಪಮನುಪ್ರಾಪ್ಯ ದೃಷ್ಟ್ವಾ ದೇವಂ ಮಹೇಶ್ವರಂ ।**
**ವೈಶಾಖೇ ಪೌರ್ಣಮಾಸ್ಯಾಂ ವೈ ಸ್ನಾಪಯಂತ್ಯೇಕವಾಸರಂ ॥ ೫೧ ॥**
**ಪ್ರಸಂಗತೋ ರಜಃಕ್ಲಾಂತಾಃ ಶಿಪ್ರಾಂಭಸಿ ಚ ಮಾನವಾಃ ।**
**ನ ತೇಷಾಂ ದುಷ್ಕೃತಂ ಕಿಂಚಿದ್ವಿಷ್ಣುಲೋಕೇ ವಸಂತಿ ತೇ ॥ ೫೨ ॥**
**ಮನ್ವಂತರಸಹಸ್ರೇಷು ಕಾಶಿವಾಸೇಷು ಯತ್ಫಲಂ ।**
**ತತ್ಫಲಂ ಪ್ರಾಪ್ನುಯಾಜ್ಜಂತುಃ ಪ್ರತಿಕಲ್ಪಂ ಕ್ಷಣಾದಪಿ ॥ ೫೩ ॥**
**ಪ್ರತಿಕಲ್ಪೇ ಚ ಕಲ್ಪಾಂತೇ ಸೈವಾಸೀಚ್ಚ ಪುರೀ ಶುಭಾ ।**
**ತಸ್ಮಾತ್ಸರ್ವಜನ್ಯೈಃ ಖ್ಯಾತಾ ಪ್ರತಿಕಲ್ಪಾ ದ್ವಿಜೋತ್ತಮ ॥ ೫೪ ॥**
**ಯೇ ಚೈತಸ್ಯಾಂ ಮಹಾಭಾಗಾಃ ಪ್ರೀತಿಂ ಕುರ್ವಂತಿ ಮಾನವಾಃ ।**
**ನ ತೇಷಾಂ ಕಲ್ಪಭೇದೋಽಯಂ ಸ್ವಪ್ನವಜ್ಜಾಯತೇ ಕ್ಷಣಾತ್ ॥ ೫೫ ॥**

---

ದೊಡನೆ ಈ ಕ್ಷೇತ್ರದಲ್ಲಿ ಸ್ನಾನ, ದಾನ, ಜಪ, ಹೋಮ, ಪಿತೃಗಳಿಗೂ, ದೇವತೆಗಳಿಗೂ ಶ್ರಾದ್ಧಗಳು, ಮುಂತಾದುವನ್ನು ಮಾಡುವರೊ, ಅವರಿಗೆ ನೂರಾರು ಕೋಟಿ ಕಲ್ಪಗಳಾದರೂ ಪುನರಾವೃತ್ತಿಯಿರುವುದಿಲ್ಲ.

೫೧–೫೨. ಆಕಸ್ಮಿಕವಾಗಿ ದೋಷದುಷ್ಟರಾದ ಮಾನವರು ಪ್ರತಿಕಲ್ಪ ಕ್ಷೇತ್ರವನ್ನು ಸೇರಿ ಅಲ್ಲಿರುವ ಮಹಾಕಾಲೇಶ್ವರನನ್ನು ಕಂಡು ವೈಶಾಖಮಾಸದ ಹುಣ್ಣಿಮೆಯ ದಿನ ಆ ಲಿಂಗಕ್ಕೆ ಶಿಪ್ರಾತೀರ್ಥದ ಜಲದಿಂದ ಏಕವಾರ ರುದ್ರಾಭಿಷೇಕವನ್ನು ಮಾಡಿದರೆ ಅವರ ಪಾತಕವು ನಿಶ್ಶೇಷವಾಗಿ ಕಳೆದುಹೋಗುವುದು. ಅವರು ವಿಷ್ಣುಲೋಕದಲ್ಲಿ ವಾಸಮಾಡುವರು.

೫೩. ಕಾಶೀಕ್ಷೇತ್ರದಲ್ಲಿ ಸಾವಿರಾರು ಮನ್ವಂತರಗಳು ವಾಸಮಾಡುವುದರಿಂದ ಯಾವ ಫಲವುಂಟೊ, ಅದನ್ನೇ ಮನುಷ್ಯನು ಪ್ರತಿಕಲ್ಪದಲ್ಲಿ ಕ್ಷಣಮಾತ್ರದ ವಾಸದಿಂದಲೇ ಪಡೆಯುವನು.

೫೪. ಪ್ರತಿಯೊಂದು ಕಲ್ಪದಲ್ಲಿಯೂ, ಕಲ್ಪಾಂತದಲ್ಲಿಯೂ ಈ ಪವಿತ್ರ ಕ್ಷೇತ್ರವೊಂದೇ ಶಾಶ್ವತವಾಗಿ ನಿಂತಿದ್ದಿತು. ಬ್ರಾಹ್ಮಣೋತ್ತಮನೆ! ಆದುದರಿಂದಲೇ ಸಕಲ ಜನರಲ್ಲಿಯೂ ಇದು ಪ್ರತಿಕಲ್ಪವೆಂದು ಪ್ರಖ್ಯಾತವಾಗಿರುವುದು.

೫೫. ಯಾವ ಮಹಾಪುರುಷರು ಈ ಕ್ಷೇತ್ರದಲ್ಲಿ ಭಕ್ತಿಯಿಂದ ನಡೆದುಕೊಳ್ಳುವರೊ, ಅವರಿಗೂ ಕಲ್ಪಾಂತ್ಯದಲ್ಲಿ ನಾಶವಿಲ್ಲ. ಪ್ರಳಯಕಾಲವು ಸ್ವಪ್ನಪ್ರಾಯವಾಗಿ ನಿಮಿಷಮಾತ್ರದಂತೆ ಅವರಿಗೆ ಕಳೆದುಹೋಗುವುದು.

**ಯಃ ಶೃಣೋತಿ ಕಥಾಂ ಪುಣ್ಯಾಂ ಪ್ರತಿಕಲ್ಪೋದ್ಭವಾಂ ಶುಭಾಂ ।**
**ಶ್ರಾವಯೇದ್ವಾ ಪ್ರಯತ್ನೇನ ಬ್ರಹ್ಮಹತ್ಯಾಂ ವ್ಯಪೋಹತಿ ॥ ೫೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಪ್ರತಿಕಲ್ಪಾಽಭಿಧಾನ ಕಥನಂ" ನಾಮಾಷ್ಟಚತ್ವಾರಿಂಶೋಽಧ್ಯಾಯಃ**

---

೫೬. ಮಹಾಕಾಲವನಕ್ಕೆ ಪ್ರತಿಕಲ್ಪಾ ಎಂಬ ಹೆಸರು ಬಂದ ವಿಷಯಕವಾದ ಪುಣ್ಯಪ್ರದವೂ, ಪವಿತ್ರವೂ ಆದ ಈ ಕಥೆಯನ್ನು ಯಾವನು ಕೇಳುವನೊ, ಯಾವನು ಪ್ರಯತ್ನಪೂರ್ವಕವಾಗಿ ಹೇಳಿಸುವನೊ, ಅವರು ಬ್ರಹ್ಮಹತ್ಯಾಪಾಪವನ್ನೂ ಕಳೆದುಕೊಳ್ಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಪ್ರತಿಕಲ್ಪಾಭಿಧಾನಕಥನ"ವೆಂಬ ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಪಂಚಾಶತ್ತಮೋಽಧ್ಯಾಯಃ

## ಶಿಪ್ರಾಮಾಹಾತ್ಮ್ಯೇ ಜ್ವರಾಽನುಗ್ರಹವರ್ಣನಂ

**ಸನತ್ಕುಮಾರ ಉವಾಚ :—**

**ಏವಂ ವ್ಯಾಸ ಪುರೀ ರಮ್ಯಾ ನಾಮಭೂತಾ ಸನಾತನೀ ।**
**ಯುಗೇ ಯುಗೇ ಯಥಾ ಜಾತಾ ತಥಾ ಖ್ಯಾತಾ ಮಯಾಽನಘ ॥ ೧ ॥**

**ವ್ಯಾಸ ಉವಾಚ :—**

**ಭೂಯೋಽಹಂ ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ।**
**ಶಿಪ್ರಾಯಾಶ್ಚ ಕಥಾಂ ಪುಣ್ಯಾಂ ಪವಿತ್ರಾಂ ಪಾಪಹಾರಿಣೀಂ ॥ ೨ ॥**
**ಸುಂದರಂ ಕುಂಡಮಾಖ್ಯಾತಂ ಪಿಶಾಚಮೋಚನಂ ತಥಾ ।**
**ನೀಲಗಂಗಾ ಇತಿ ಪ್ರೋಕ್ತಾ ಕರ್ಕರಾಜಮತಃ ಪರಂ ॥ ೩ ॥**
**ಪುಷ್ಕರಾಣಿ ಚ ಸರ್ವಾಣಿ ಗಯಾತೀರ್ಥಮನುತ್ತಮಂ ।**
**ಗೋಮತೀಕುಂಡಮಾಖ್ಯಾತಂ ನಾಮ್ನಾ ಧರ್ಮಸರಸ್ತಥಾ ॥ ೪ ॥**
**ಖ್ಯಾತಂ ಸಂಗಮಜಂ ತೀರ್ಥಂ ಶನೇರ್ಜನ್ಮಕಥಾಂ ಶುಭಾಂ ।**
**ಚ್ಯವನಾಶ್ರಮೇ ಚ ಯಾ ವಾರ್ತಾ ಕಥಾ ನಾಗಾಽಽಲಯೇ ಶುಭೇ ॥ ೫ ॥**

---

### ಕನ್ನಡದ ಅನುವಾದ

#### ಶಿಪ್ರಾಮಾಹಾತ್ಮ್ಯ—ಜ್ವರಾನುಗ್ರಹವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಇಂತು ಸನಾತನವಾದ ಈ ಕ್ಷೇತ್ರವು ಪ್ರತಿಯುಗದಲ್ಲಿಯೂ ಯಾವ ಯಾವ ಹೆಸರುಗಳನ್ನು ಪಡೆಯಿತೆಂಬುದನ್ನು ನಿನಗೆ ಯಥಾವತ್ತಾಗಿ ಹೇಳಿರುವೆನು.

೨. ವ್ಯಾಸನು ಹೇಳುತ್ತಾನೆ:—ಬ್ರಹ್ಮಜ್ಞರಲ್ಲಿ ಉತ್ತಮನೆ! ಪುಣ್ಯಪ್ರದವೂ, ಪವಿತ್ರವೂ, ಪಾಪಪರಿಹಾರಕವೂ ಆದ ಶಿಪ್ರಾಚರಿತ್ರೆಯನ್ನು ವಿಸ್ತಾರವಾಗಿ ನಿನ್ನ ಮುಖದಿಂದ ಪುನಃ ಕೇಳಲಿಚ್ಛಿಸುತ್ತೇನೆ.

೩. ಈ ನದೀತೀರದಲ್ಲಿ ಸುಂದರಕುಂಡವೂ, ಪಿಶಾಚಮೋಚನತೀರ್ಥವೂ, ನೀಲಗಂಗೆಯೂ, ಕರ್ಕರಾಜವೆಂಬ ಉತ್ತಮತೀರ್ಥವೂ ಇರುವುವಲ್ಲವೆ.

೪. ಇವುಗಳೆಲ್ಲವೂ ತೀರ್ಥೋತ್ತಮಗಳೇ. ಹಾಗೆಯೇ ಅಸದೃಶವಾದ ಗಯಾತೀರ್ಥವೂ, ಗೋಮತೀಕುಂಡವೂ, ಧರ್ಮಸರವೂ ಇರುವುವು.

೫. ಪ್ರಖ್ಯಾತವಾದ ಸಂಗಮತೀರ್ಥದ ಚರಿತ್ರೆಯನ್ನೂ, ಶನಿಯ ಜನ್ಮದ ಕಥೆಯನ್ನೂ, ಚ್ಯವನಾಶ್ರಮದಲ್ಲಿ ನಡೆದ ಸಮಾಚಾರಗಳನ್ನೂ, ಪವಿತ್ರವಾದ ನಾಗಲೋಕದಲ್ಲಿ ನಡೆದುದನ್ನೂ ನನಗೆ ತಿಳಿಸು.

**ಪುರುಷೋತ್ತಮಮಹಿಮಾನಂ ಕಾಲೇ ಕೇನ ಕಥಂ ಭವೇತ್ ।**
**ಏತದ್ವೇದಿತುಮಿಚ್ಛಾಮಿ ಯತ್ತೇ ಮನಸಿ ವರ್ತತೇ ॥ ೬ ॥**

**ಸನತ್ಕುಮಾರ ಉವಾಚ :—**

**ಶೃಣು ವ್ಯಾಸ ಮಹಾಭಾಗ ಕಥಾಂ ಪಾಪಹರಾಂ ಪರಾಂ ।**
**ಯಸ್ಮಿನ್ಕಾಲೇ ಯದಾ ಜಾತಾ ಮಹಾಕಾಲವನೇ ಶುಭೇ ॥ ೭ ॥**
**ನಾಽಸ್ತಿ ವತ್ಸ ಮಹೀಪೃಷ್ಠೇ ಶಿಪ್ರಾಯಾಃ ಸದೃಶೀ ನದೀ ।**
**ಯಸ್ಯಾಸ್ತೀರೇ ಕ್ಷಣಾನ್ಮುಕ್ತಿಃ ಕಿಂ ಚಿರಾತ್ಸೇವನೇನ ವೈ ॥ ೮ ॥**
**ವೈಕುಂಠೇ ಜಾಯತೇ ಶಿಪ್ರಾ ಜ್ವರಘ್ನೀ ಚ ಸುರಾಲಯೇ ।**
**ಮಹಾದ್ವಾರೇ ಚ ಪಾಪಘ್ನೀ ಪಾತಾಲೇಽಮೃತಸಂಭವಾ ॥ ೯ ॥**
**ವಾರಾಹಕಲ್ಪೇ ವೈ ಪ್ರೋಕ್ತಾ ವಿಷ್ಣುದೇಹೇತಿ ನಾಮತಃ ।**
**ಶಿಪ್ರಾವಂತ್ಯಾಂ ಸಮಾಖ್ಯಾತಾ ಕಾಮಧೇನುಸಮುದ್ಭವಾ ॥ ೧೦ ॥**

**ವ್ಯಾಸ ಉವಾಚ :—**

**ವಿಚಿತ್ರಮಿದಮಾಖ್ಯಾತಂ ಭವತಾ ಋಷಿಸತ್ತಮ ।**
**ವಕ್ತುಮರ್ಹಸಿ ಶಿಪ್ರಾಯಾಃ ಸಮಾಸೇನ ಕಥಾಂ ಶುಭಾಂ ॥ ೧೧ ॥**

---

೬. ಪುರುಷೋತ್ತಮನ ಮಹಿಮೆಯೂ ಯಾವ ಕಾಲದಲ್ಲಿ ಯಾರಿಂದ ಹೇಗೆ ಪ್ರಸಿದ್ಧವಾಯಿತೆಂಬುದನ್ನೂ ಸಹ ನಿನ್ನಿಂದ ಕೇಳಲಿಚ್ಛಿಸುತ್ತೇನೆ. ನಿನ್ನ ಮನಸ್ಸಿಗೆ ಬಂದರೆ ಇದೆಲ್ಲವನ್ನೂ ನನಗೆ ಹೇಳುವವನಾಗು.

೭. ಸನತ್ಕುಮಾರನು ಹೇಳುತ್ತಾನೆ:—ಮಹಾತ್ಮನಾದ ವ್ಯಾಸನೆ! ಪಾಪಪರಿಹಾರಕವೂ, ಸರ್ವೋತ್ಕೃಷ್ಟವೂ ಆದ ಈ ಚರಿತ್ರೆಯನ್ನು ಕೇಳು. ಪವಿತ್ರವಾದ ಮಹಾಕಾಲವನದಲ್ಲಿ ಈ ನದಿಯು ಯಾವಾಗ ಹೇಗೆ ಹುಟ್ಟಿತೆಂಬುದನ್ನು ಹೇಳುವೆನು.

೮. ವತ್ಸ! ಸಮಸ್ತ ಭೂವಲಯದಲ್ಲಿಯೂ ಶಿಪ್ರಾನದಿಗೆ ಸಮಾನವಾದ ನದಿಯು ಮತ್ತೊಂದಿಲ್ಲ. ಅದರ ತೀರದಲ್ಲಿ ಕ್ಷಣಕಾಲದ ವಾಸದಿಂದಲೂ ಮುಕ್ತಿಯೊದಗುವುದೆಂದಮೇಲೆ ಚಿರಕಾಲದ ವಾಸದ ಮಹಿಮೆಯನ್ನು ಹೇಳಲೇಕೆ?

೯. ಈ ನದಿಯು ದೇವತೆಗಳ ನಿವಾಸವಾದ ವೈಕುಂಠದಲ್ಲಿ ಜ್ವರಘ್ನಿಯೆಂದೂ, ಮಹಾದ್ವಾರದಲ್ಲಿ ಪಾಪಘ್ನಿಯೆಂದೂ, ಪಾತಾಳದಲ್ಲಿ ಅಮೃತಸಂಭವೆಯೆಂದೂ ಕರೆಯಲ್ಪಡುತ್ತಿರುವುದು.

೧೦. ಶ್ವೇತವರಾಹಕಲ್ಪದಲ್ಲಿ ಇದನ್ನು ವಿಷ್ಣುದೇಹವೆಂಬ ಹೆಸರಿನಿಂದ ಕರೆಯುವರು. ಕಾಮಧೇನುವಿನಿಂದುದ್ಭವಿಸಿದ ಇದನ್ನು ಅವಂತೀಕ್ಷೇತ್ರದಲ್ಲಿ ಶಿಪ್ರಾನದಿಯೆಂದು ಕರೆಯುವರು.

೧೧. ವ್ಯಾಸನು ಹೇಳುತ್ತಾನೆ:—ಋಷಿವರ್ಯನೆ! ನೀನು ಹೇಳುವ ವಿಷಯವಾದರೊ ಬಹುವಿಚಿತ್ರವಾಗಿರುವುದು. ಶಿಪ್ರಾನದಿಯ ಪವಿತ್ರಚರಿತ್ರೆಯನ್ನು ಆಮೂಲಾಗ್ರವಾಗಿ ಹೇಳಲು ನೀನೇ ಅರ್ಹನಾಗಿರುವೆ.

**ಸನತ್ಕುಮಾರ ಉವಾಚ :—**

**ಬ್ರಾಹ್ಮಂ ಕಪಾಲಮಾದಾಯ ಭಿಕ್ಷಾರ್ಥಂ ಸಂಚರನ್ಮಹೀಂ ।**
**ಮಹಾದೇವೋ ವಿಶುದ್ಧಾತ್ಮಾ ಸರ್ವಲೋಕೇಷು ಸರ್ವತಃ ॥ ೧೨ ॥**
**ಅಪ್ರಾಪ್ತಭಿಕ್ಷೋ ಭಿಕ್ಷಾರ್ಥೀ ವೈಕುಂಠಮಗಮದ್ವಿಭುಃ ।**
**ಗತಶ್ಚಾತಿಥ್ಯವೇಲಾಯಾಂ ಭ್ರಮಮಾಣೋ ಯತಸ್ತತಃ ॥ ೧೩ ॥**
**ಲೋಕನಿಂದಾಪರಃ ಕ್ರುದ್ಧಃ ಕ್ಷುಧಿತೋ ಬಹುವಾಸರೈಃ ।**
**ಭಿಕ್ಷಾಂ ದೇಹೀತಿ ಭೋ ಬ್ರಹ್ಮನ್ ಕ್ಷುಧಿತೋಽಹಂ ಸಮಾಹಿತಃ ॥ ೧೪ ॥**
**ಕಪಾಲಂ ಚ ಕರೇ ಕೃತ್ವಾ ಇತ್ಯುವಾಚ ಪುನಃ ಪುನಃ ।**
**ಗೃಹ್ಯತಾಂ ಹರ ಭಿಕ್ಷಾಂ ತೇ ದದಾಮೀತಿ ಹರಿಸ್ತದಾ ॥ ೧೫ ॥**
**ಇತ್ಯುಕ್ತ್ವಾ ಕರಮುದ್ಯಮ್ಯ ತರ್ಜನ್ಯಂಗುಲಿಮಾದಧತ್ ।**
**ತದಾ ರುದ್ರಸ್ಸಮಾಧ್ಮಾತಸ್ತ್ರಿಶೂಲೇನಾಽಹನದ್ರುಷಾ ॥ ೧೬ ॥**
**ತದಾಽಂಗುಲಿಸಮುದ್ಭೂತಂ ಬಹು ಸುಸ್ರಾವ ಶೋಣಿತಂ ।**
**ತೇನಾಽಶು ಪಾತ್ರಂ ತತ್ಪೂರ್ಣಂ ಶಂಕರಸ್ಯ ಕರೇ ಸ್ಥಿತಂ ॥ ೧೭ ॥**

---

೧೨. ಸನತ್ಕುಮಾರನು ಹೇಳುತ್ತಾನೆ:—ಪರಿಶುದ್ಧಾಂತರಂಗನಾದ ಮಹಾದೇವನು ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದು ಭಿಕ್ಷೆಗಾಗಿ ಸಮಸ್ತ ಲೋಕಗಳಲ್ಲಿಯೂ ಸಕಲ ಸ್ಥಳಗಳಲ್ಲಿಯೂ ಸಂಚರಿಸಿದನು.

೧೩. ಎಲ್ಲಿಯೂ ಭಿಕ್ಷೆಯು ಸಿಕ್ಕದಿರಲು ಆ ಮಹೇಶ್ವರನು ಭಿಕ್ಷೆಗಾಗಿ ವೈಕುಂಠಕ್ಕೆ ಹೋದನು. ಮನಸ್ಸಿಗೆ ಬಂದೆಡೆ ಸಂಚರಿಸುತ್ತ ಅತಿಥಿಪೂಜೆಯ ವೇಳೆಗೆ ಸರಿಯಾಗಿ ವೈಕುಂಠದ್ವಾರವನ್ನು ಸೇರಿದನು.

೧೪. ಅನೇಕ ದಿನಗಳಿಂದ ಹಸಿವುಗೊಂಡು ಅನ್ನವನ್ನೀಯದ ಲೋಕವನ್ನು ನಿಂದಿಸುತ್ತ ಕೋಪಗೊಂಡು, "ಅಯ್ಯಾ! ಹಸಿವಿನಿಂದ ಬಳಲುತ್ತಿರುವ ನನಗೆ ಸಮಾಧಾನಮನಸ್ಸಿನಿಂದ ಭಿಕ್ಷೆಯನ್ನು ನೀಡು" ಎಂದು ಕೂಗಿದನು.

೧೫. ಕಪಾಲವನ್ನು ಕೈಯಲ್ಲಿ ಹಿಡಿದು ಪುನಃ ಪುನಃ ಹೀಗೆ ಕೂಗುತ್ತಿರುವ ಹರನನ್ನು ಕಂಡು ಶ್ರೀ ಹರಿಯು, "ಇದೊ ನಿನಗೆ ಭಿಕ್ಷೆಯನ್ನು ಕೊಡುವೆನು; ತೆಗೆದುಕೊ" ಎಂದು ಹೇಳಿದನು.

೧೬. ಇಂತೆಂದು ಹೇಳುತ್ತ ಕೈಯನ್ನೆತ್ತಿ ತರ್ಜನಿಯ ಬೆರಳಿನಿಂದ ಸಂಜ್ಞೆಯನ್ನು ಮಾಡಲು ಅದನ್ನು ಕಂಡು ಶಿವನು ರೋಷದಿಂದ ಆತನ ಬೆರಳನ್ನು ತ್ರಿಶೂಲದಿಂದ ಕತ್ತರಿಸಿದನು.

೧೭. ಕತ್ತರಿಸಿದ ಆ ಬೆರಳಿನಿಂದ ರಕ್ತವು ಬಹುವಾಗಿ ಸುರಿಯುತ್ತಿದ್ದಿತು. ಅದರಿಂದ ಶೀಘ್ರದಲ್ಲಿಯೇ ಶಿವನ ಕೈಯಲ್ಲಿದ್ದ ಕಪಾಲವು ತುಂಬಿ ಹೋಯಿತು.

ತದಾ ಉದ್ವೇಲಿತಾ ಸಾ ವೈ ಧಾರಾ ಜಾತಾ ಸಮಂತತಃ ।
ತತ್ರ ಸ್ಥಾನೇ ಸಮುದ್ಭೂತಾ ಶಿಪ್ರಾಽಸೃಗ್ಧರಸಂಭವಾ ॥ ೧೮ ॥
ವೈಕುಂಠೇ ಚಾಽಭವತ್ಸದ್ಯೋ ನದೀ ತ್ರೈಲೋಕ್ಯಪಾವನೀ ।
ಏವಂ ಶಿಪ್ರಾ ಸರಿಚ್ಛ್ರೇಷ್ಠಾ ತ್ರಿಷು ಲೋಕೇಷು ವಿಶ್ರುತಾ ॥ ೧೯ ॥
ಜ್ವರಘ್ನೀ ಚ ಯಥಾ ಪ್ರೋಕ್ತಾ ತಥಾ ವ್ಯಾಸ ಬ್ರವೀಮ್ಯಹಂ ।
ಯದಾ ಬಾಣಾಽಸುರೋ ದೈತ್ಯಃ ಕೃಷ್ಣೇನ ಸಹ ಸಂಯುಗೇ ॥ ೨೦ ॥
ಯೋಧಯಾಮಾಸ ದೈತ್ಯೇಂದ್ರೋ ಹ್ಯನಿರುದ್ಧಪ್ರಹೇಲನಃ ।
ಸಹಸ್ರಬಾಹುಭಿರ್ವೀರೋ ನಾನಾಪ್ರಹರಣೋದ್ಯತಃ ॥ ೨೧ ॥
ತಸ್ಮಾತ್ಕ್ರುದ್ಧೋ ವಾಸುದೇವಶ್ಚಕ್ರಮಾದಾಯ ಸತ್ವರಃ ।
ಚಿಚ್ಛೇದ ಬಾಹುಸಾಹಸ್ರಂ ಕ್ಷುರಪ್ರೇಣಾಶುಗಾಮಿನಾ ॥ ೨೨ ॥
ಸ ತದಾ ಭಗ್ನಸಂಕಲ್ಪಶ್ಛಿನ್ನದೋಶ್ಚ ವ್ರಣಾರ್ದಿತಃ ।
ಪರಾಙ್ಮುಖಪರೋ ಭೂತ್ವಾ ಶಂಕರಂ ಶರಣಂ ಯಯೌ ॥ ೨೩ ॥

---

೧೮. ಉಕ್ಕಿಬಂದ ಆ ರಕ್ತವು ಪಾತ್ರೆಯ ಸುತ್ತಲೂ ಧಾರೆಧಾರೆಯಾಗಿ ಸುರಿಯತೊಡಗಿತು. ಆ ರಕ್ತದ ಧಾರೆಯಿಂದ ಆ ಪ್ರದೇಶದಲ್ಲಿಯೇ ಶಿಪ್ರಾ ನದಿಯು ಉದ್ಭವಿಸಿತು.

೧೯. ವೈಕುಂಠದಲ್ಲಿ ಉದ್ಭವಿಸಿದ ಆ ನದಿಯು ಸ್ವಲ್ಪಕಾಲದಲ್ಲಿಯೇ ಮೂರು ಲೋಕಗಳನ್ನೂ ಪಾವನಗೊಳಿಸುವುದಾಯಿತು. ಇಂತು ನದಿಗಳಲ್ಲಿ ಉತ್ತಮವಾದ ಶಿಪ್ರಾನದಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಯಿತು.

೨೦–೨೧. ಎಲೈ ವ್ಯಾಸನೆ! ಇನ್ನು ಇದಕ್ಕೆ ಜ್ವರಘ್ನಿಯೆಂಬ ಹೆಸರು ಬಂದ ಕಾರಣವನ್ನು ನಿರೂಪಿಸುವೆನು. ಬಾಣಾಸುರನೆಂಬ ರಾಕ್ಷಸೇಂದ್ರನು ಅನಿರುದ್ಧನ ಅವಹೇಳನಗಳನ್ನು ತಡೆಯಲಾರದೆ ಕೃಷ್ಣನೊಡನೆ ಯುದ್ಧವನ್ನು ಹೂಡಿದನು. ಒಂದು ಸಾವಿರ ಬಾಹುಗಳುಳ್ಳ ಆ ವೀರನು ಅಸಂಖ್ಯಾತಗಳಾದ ಆಯುಧಗಳನ್ನು ಹಿಡಿದು ಯುದ್ಧರಂಗದಲ್ಲಿ ಪ್ರಾಪ್ತನಾದನು.

೨೨. ಆಗ ವಾಸುದೇವನು ಅತ್ಯಂತ ಕೋಪಗೊಂಡು ವೇಗವಾಗಿ ತನ್ನ ಚಕ್ರಾಯುಧವನ್ನು ತೆಗೆದುಕೊಂಡು ತೀಕ್ಷ್ಣಗಾಮಿಯಾದ ಅದರ ಹರಿತವಾದ ಅಂಚಿನಿಂದ ಆ ರಾಕ್ಷಸನ ಸಾವಿರಬಾಹುಗಳನ್ನೂ ಕತ್ತರಿಸಿ ಕೆಡವಿದನು.

೨೩. ಆಗ ಆ ಅಸುರನು ಭಗ್ನಮನೋರಥನೂ, ಕತ್ತರಿಸಿದ ಬಾಹುಗಳುಳ್ಳವನೂ, ಮೈಯೆಲ್ಲ ಗಾಯಗೊಂಡವನೂ ಆಗಿ ಯುದ್ಧರಂಗದಿಂದ ಓಡಿಹೋಗಿ ಪರಮೇಶ್ವರನನ್ನು ಶರಣುಹೊಕ್ಕನು.

ತದಾಗತಂ ಮಹಾದೈತ್ಯಂ ಸಮೀಪೇ ಭಯವಿಹ್ವಲಂ ।
ವಿಲೋಕ್ಯ ಕೃಪಯಾವಿಷ್ಟೋ ಗತೇ ಸಂಗ್ರಾಮಮೂರ್ಧನಿ ॥ ೨೪ ॥
ಛಿತ್ವಾ ಬಾಹುಸಹಸ್ರಂ ವೈ ದೈತ್ಯರಾಜಸ್ಯ ಚಾಽಽಹವೇ ।
ಕ್ರುದ್ಧಃ ಕೃಷ್ಣೋ ಮಹಾಬಾಹುಃ ಪರಸೇನಾಂತಕೋ ವರಃ ॥ ೨೫ ॥
ಸ್ಥಿತೋ ಯತ್ರಾಽಚಲೋ ವ್ಯಾಸ ತತ್ರಾಗತೋ ಮಹೇಶ್ವರಃ ।
ವಾರಯಾಮಾಸ ಕೃಷ್ಣಂ ವೈ ಶರೌಘೈಶ್ಚ ಸಮಾಕಿರನ್ ॥ ೨೬ ॥
ಅನ್ಯೋನ್ಯಂ ಚ ಸಮಾಸಾದ್ಯ ಕೃತ್ವಾ ಯುದ್ಧಂ ತು ದಾರುಣಂ ।
ಶಸ್ತ್ರಾಽಸ್ತ್ರೈಶ್ಚ ಮಹಾಘೋರೈಃ ಸರ್ವಪ್ರಾಣಿಭಯಂಕರೈಃ ॥ ೨೭ ॥
ವೈಷ್ಣವಾಽಸ್ತ್ರಂ ತದಾ ಕೃಷ್ಣಃ ಸಂದಧೇ ಹರಜಿಘಾಂಸಯಾ ।
ಪಾಶುಪತಂ ಚ ನಾಮಾಸ್ತ್ರಂ ಸರ್ವಸಂಹಾರಕಾರಕಂ ॥ ೨೮ ॥
ಸಂದಧೇ ವೈ ತದಾ ಶಂಭುಃ ಕೃಷ್ಣಪ್ರಾಣಹರೋತ್ಸುಕಃ ।
ಹಾಹಾಕಾರಸ್ತದಾ ಜಾತಃ ಸರ್ವಲೋಕೇಷು ಶ್ರೂಯತೇ ॥ ೨೯ ॥
ಮೋಹನಾಸ್ತ್ರಂ ಪುನಃ ಕೃಷ್ಣಃ ಶಿವೋಪರಿ ಮುಮೋಚ ಹ ।
ತೇನಾಽಸ್ತ್ರೇಣ ತದಾ ಶಂಭುರ್ಮೋಹಿತೋ ದೇವಮಾಯಯಾ ॥ ೩೦ ॥

---

೨೪. ಭಯದಿಂದ ವಿಹ್ವಲಿತನಾಗಿ ತನ್ನ ಬಳಿಗೆ ಬಂದ ಆ ಮಹಾದೈತ್ಯನನ್ನು ಕಂಡು ಶಿವನು ಕೃಪೆಯಿಂದ ಕೂಡಿದವನಾಗಿ ತಾನೇ ಯುದ್ಧಭೂಮಿಗೆ ಬಂದನು.

೨೫–೨೬. ಕ್ರುದ್ಧನಾದ ಶ್ರೀ ಕೃಷ್ಣನು ಆ ರಾಕ್ಷಸನ ಸಾವಿರ ಬಾಹುಗಳನ್ನೂ ಕತ್ತರಿಸಿ ಶತ್ರುಸೈನ್ಯಕ್ಕೆ ಯಮನಂತೆ ತೋರುತ್ತ ಬೆಟ್ಟದಂತೆ ಅಲ್ಲಿಯೇ ನಿಂತಿದ್ದನು. ಪರಮೇಶ್ವರನು ಅಲ್ಲಿಗೆ ಬಂದು ಬಾಣಗಳ ಮಳೆಗಳನ್ನು ಸುರಿಸುತ್ತ ಕೃಷ್ಣನನ್ನು ತಡೆದು ನಿಲ್ಲಿಸಿದನು.

೨೭. ಶಿವಕೃಷ್ಣರಿಬ್ಬರೂ ಎದುರಾಗಿ ನಿಂತು ಮಹಾಭಯಂಕರಗಳೂ, ಸಕಲ ಜೀವರಿಗೆ ತ್ರಾಸವನ್ನುಂಟುಮಾಡುವಂತಹವುಗಳೂ ಆದ ಅನೇಕ ಶಸ್ತ್ರಾಸ್ತ್ರಗಳಿಂದ ದಾರುಣವಾದ ಯುದ್ಧವನ್ನು ಮಾಡಿದರು.

೨೮–೨೯. ಹರನನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಕೃಷ್ಣನು ವೈಷ್ಣವಾಸ್ತ್ರವನ್ನು ಬಿಲ್ಲಿನಲ್ಲಿ ಹೂಡಿದನು. ಶಂಭುವೂ ಶ್ರೀ ಕೃಷ್ಣನ ಪ್ರಾಣಗಳನ್ನಪಹರಿಸಲೋಸುಗ ಸಕಲ ಲೋಕಗಳನ್ನೂ ಸಂಹರಿಸಲು ಶಕ್ತವಾದ ಪಾಶುಪತಾಸ್ತ್ರವನ್ನು ತೆಗೆದನು. ಆಗ ಉಂಟಾದ ಜನರ ಹಾಹಾಕಾರವು ಮೂರು ಲೋಕಗಳಲ್ಲಿಯೂ ಕೇಳಿಬಂದಿತು.

೩೦. ಶ್ರೀ ಕೃಷ್ಣನು ಪುನಃ ಸಮ್ಮೋಹನಾಸ್ತ್ರವನ್ನು ಶಿವನ ಮೇಲೆ ಪ್ರಯೋಗಿಸಿದನು. ಆ ಅಸ್ತ್ರದ ಮಹಿಮೆಯಿಂದುಂಟಾದ ದೇವಮಾಯೆಯಿಂದ ಶಂಭುವು ಮೋಹಗೊಂಡು ನಿಂತನು.

ಜೃಂಭಮಾಣಃ ಸ್ಥಿತಃ ಸಂಖ್ಯೇ ಕಿಂಚಿತ್ಕಾಲಂ ಮುಹುರ್ಮುಹುಃ ।
ಲಬ್ಧಸಂಜ್ಞಃ ಪುನರ್ಜಾತೋ ಯದಾ ರುದ್ರೋ ಮಹಾಹವೇ ॥ ೩೧ ॥
ತದಾ ಕ್ರೋಧಾಭಿಭೂತೇನ ಕೃತೋ ಮಾಹೇಶ್ವರೋ ಜ್ವರಃ ।
ಲಲಾಟಫಲಕಾತ್ಸದ್ಯೋ ವೀರಭದ್ರೋ ಮಹಾಬಲಃ ॥ ೩೨ ॥
ತ್ರಿನೇತ್ರಸ್ತ್ರಿಶಿರಾ ಹ್ರಸ್ವಸ್ತ್ರಿಪಾದೋ ಬರ್ಬರಾಕೃತಿಃ ।
ಕ್ಷುದ್ರೋ ಜಟಿಲಭಸ್ಮಾಂಗೋ ಮಹಾವ್ಯಾಧಿರ್ದುರತ್ಯಯಃ ॥ ೩೩ ॥
ಕೃಷ್ಣಸೇನಾಂ ಸಮಾಸಾದ್ಯ ಮಹಾದೇವೇನ ಪ್ರೇರಿತಃ ।
ಪ್ರಾಣಿನಾಂ ಕದನಂ ಚಕ್ರೇ ಸರ್ವೇಷಾಂ ಕೃಷ್ಣಸಂಗಿನಾಂ ॥ ೩೪ ॥
ಪರಾಙ್ಮುಖಪರಾ ಭಗ್ನಾ ಜ್ವರಾಭಿಘಾತಪೀಡಿತಾ ।
ಬಭೂವ ಸಹಸಾ ವ್ಯಾಸ ಸೇನಾ ಕೃಷ್ಣೇನ ಪಾಲಿತಾ ॥ ೩೫ ॥
ತಥಾ ಭೂತಾಂ ಸಮಾಲೋಕ್ಯ ಜೃಂಭಮಾಣಾಂ ರುಜಾರ್ದಿತಾಂ ।
ಸ್ವಸೇನಾಂ ಭಗ್ನಸಂಕಲ್ಪಾಂ ಮಾಹೇಶಜ್ವರಪೀಡಿತಾಂ ॥ ೩೬ ॥

---

೩೧–೩೨. ಸ್ವಲ್ಪಕಾಲದವರೆಗೂ ಯುದ್ಧಭೂಮಿಯಲ್ಲಿ ನಿಮಿಷ ನಿಮಿಷಕ್ಕೂ ಆಕಳಿಸುತ್ತ ನಿಂತು ಕ್ರಮವಾಗಿ ಪ್ರಜ್ಞೆಯನ್ನು ಹೊಂದಿದಮೇಲೆ ರುದ್ರನು ಮಹಾಯುದ್ಧವನ್ನು ಮಾಡುತ್ತ ಕ್ರೋಧಗೊಂಡು ಮಾಹೇಶ್ವರ ಜ್ವರವೊಂದನ್ನುಂಟುಮಾಡಿದನು. ಆ ಜ್ವರವೇ ಶಿವನ ಫಾಲಭಾಗದಿಂದ ಹುಟ್ಟಿದ ಮಹಾಪರಾಕ್ರಮಿಯಾದ ವೀರಭದ್ರನು.

೩೩. ಆತನು ಮೂರು ಕಣ್ಣುಗಳೂ, ಮೂರು ತಲೆಗಳೂ, ಮೂರು ಕಾಲುಗಳೂ ಉಳ್ಳ ಕುಬ್ಜನಾಗಿ ಕುರಿಯ ಮುಖದಿಂದೊಪ್ಪುತ್ತ ಕ್ಷುದ್ರನೂ, ಭಸ್ಮತ್ರಿಪುಂಡ್ರಗಳಿಂದಲಂಕೃತನೂ, ದುರ್ನಿವಾರ್ಯನೂ ಆದ ಮಹಾವ್ಯಾಧಿಯಾಗಿದ್ದನು.

೩೪. ಮಹಾದೇವನ ಪ್ರೇರೇಪಣೆಯಿಂದ ಅವನು ಕೃಷ್ಣನ ಸೈನ್ಯವನ್ನು ಪ್ರವೇಶಿಸಿ ಆತನ ಅನುಯಾಯಿಗಳಾದ ಎಲ್ಲರೊಡನೆಯೂ ಯುದ್ಧವನ್ನು ಮಾಡತೊಡಗಿದನು.

೩೫. ಎಲೈ ವ್ಯಾಸನೆ! ಆ ಕ್ಷಣದಲ್ಲಿಯೇ ಕೃಷ್ಣನಿಂದ ರಕ್ಷಿತವಾದ ಆ ಸೈನ್ಯವು ಭಗ್ನವೂ, ಜ್ವರದಿಂದ ಬಹುವಾಗಿ ಪೀಡಿತವೂ ಆಗಿ ಯುದ್ಧಭೂಮಿಗೆ ಬೆನ್ನುತೋರಿ ಓಡಿಹೋಗಲನುವಾಯಿತು.

೩೬. ಆ ಶೈವಜ್ವರದಿಂದ ಅಡಿಗಡಿಗೆ ಅಕಳಿಸುತ್ತಿರುವುದೂ, ರೋಗಪೀಡಿತವೂ, ಭಗ್ನಮನೋರಥವೂ, ತಪಿಸುತ್ತಿರುವುದೂ ಆದ ತನ್ನ ಸೇನೆಯನ್ನು ಶ್ರೀ ಕೃಷ್ಣನು ನೋಡಿದನು.

ಸಸರ್ಜ ವೈಷ್ಣವಂ ತಾಪಂ ಕೃಷ್ಣಃ ಪರಮಕೋಪನಃ ।
ತೇನ ಸಹ ವೈಷ್ಣವೇನ ಮಾಹೇಶ್ವರೇಣ ಜ್ವರೇಣ ಚ ॥ ೩೭ ॥
ಅನ್ಯೋನ್ಯಮಭವದ್ಯುದ್ಧಂ ಘೋರಂ ಘೋರತರಂ ಮಹತ್ ।
ಸಂಗ್ರಾಮಂ ಬಹುಲಂ ಕೃತ್ವಾ ಭಗ್ನೋ ಮಾಹೇಶ್ವರೋ ಜ್ವರಃ ॥ ೩೮ ॥
ಸರ್ವಲೋಕೇಷು ಗತ್ವಾ ವೈ ನ ಶಾಂತಿಂ ಪ್ರತಿಜಗ್ಮಿವಾನ್ ।
ಮಹಾಕಾಲವನೇ ರಮ್ಯೇ ಪ್ರಾಪ್ತಸ್ತೇನಾಽಭಿಪೀಡಿತಃ ॥ ೩೯ ॥
ನಿಮಗ್ನೋಽಥ ವೈ ಶಿಪ್ರಾಯಾಂ ತತಃ ಶಾಂತಿಂ ಪರಾಂ ಯಯೌ ।
ದೃಷ್ಟ್ವಾ ಮಾಹೇಶ್ವರಂ ಶಾಂತಂ ಜ್ವರಂ ಪರಮಕೋಪನಂ ॥ ೪೦ ॥
ವೈಷ್ಣವೋಽಪಿ ಸಮಾಸಾದ್ಯ ತಸ್ಯಾಂ ಮಜ್ಜನಮಾಚರತ್ ।
ತಸ್ಯಾಃ ಪ್ರಭಾವಸನ್ನಷ್ಟೌ ಜ್ವರೌ ಹರಿಹರೋದ್ಭವೌ ॥ ೪೧ ॥
ತಸ್ಮಾತ್ಸರ್ವೇಷು ಕಾಲೇಷು ಜ್ವರಘ್ನೀ ಸಾಽಭವತ್ ಕ್ಷಣಾತ್ ।
ಜ್ವರಾಽಭಿಭೂತಾಸ್ತಾಂ ಪ್ರಾಪ್ಯ ಜನಾಃ ಪರಮದುಃಖಿತಾಃ ॥ ೪೨ ॥
ನಿಮಜ್ಜಂತಿ ಚ ಶಿಪ್ರಾಯಾಂ ವ್ಯಾಸೋಷಸಿ ಸಮಾಹಿತಾಃ ।
ನ ತೇಷಾಂ ಬಾಧತೇ ಪೀಡಾ ಜ್ವರೋದ್ಭೂತಾ ಕದಾಚನ ॥ ೪೩ ॥

---

೩೭-೩೮. ಪರಮ ಕೋಪವನ್ನು ತಾಳಿದವನಾಗಿ ಕೃಷ್ಣನೂ ವೈಷ್ಣವಜ್ವರ ವನ್ನುಂಟುಮಾಡಿ ಕಳುಹಿಸಿದನು. ಆ ಕ್ಷಣದಲ್ಲಿಯೇ ಶೈವವೈಷ್ಣವ ಜ್ವರ ಗಳೆರಡಕ್ಕೂ ಬಹುಭಯಂಕರವಾದ ಅನ್ಯೋನ್ಯ ಕಲಹವು ಸಂಪ್ರಾಪ್ತವಾಯಿತು. ಬಹಳ ಹೊತ್ತಿನವರೆಗೂ ಕಾದಾಡಿ ಕಡೆಗೆ ಶೈವಜ್ವರವು ಸೋತುಹೋಯಿತು.

೩೯. ಹದಿನಾಲ್ಕು ಲೋಕಗಳಲ್ಲಿ ಸಂಚರಿಸಿದರೂ ಅದಕ್ಕೆ ಶಾಂತಿಯು ದೊರೆಯಲಿಲ್ಲ. ಕಡೆಗೆ ವೈಷ್ಣವಜ್ವರದಿಂದ ಪೀಡಿತವಾದ ಆ ಶೈವಶಕ್ತಿಯು ರಮ್ಯವಾದ ಮಹಾಕಾಲವನವನ್ನು ಹೊಕ್ಕಿತು.

೪೦-೪೧. ಅಲ್ಲಿ ಶಿಪ್ರಾನದಿಯಲ್ಲಿ ಮುಳುಗಿ ಅದು ಶಾಂತಿಯನ್ನು ಪಡೆ ಯಿತು. ಇಂತು ಮಹಾಘೋರವಾದ ಮಾಹೇಶ್ವರಜ್ವರವು ಪ್ರಶಾಂತವಾದುದನ್ನು ಕಂಡು ವೈಷ್ಣವಜ್ವರವೂ ಬಳಿಸಾರ್ದು ಆ ತೀರ್ಥದಲ್ಲಿ ಮಜ್ಜನವನ್ನು ಮಾಡಿ ಪ್ರಶಾಂತವಾಯಿತು. ಇಂತು ಶಿಪ್ರಾನದಿಯ ಮಾಹಾತ್ಮ್ಯದಿಂದ ಶೈವವೈಷ್ಣವ ಜ್ವರಗಳೆರಡೂ ಉಪಸಂಹಾರವನ್ನು ಹೊಂದಿದುವು.

೪೨-೪೩. ಆ ಕ್ಷಣದಿಂದ ಆ ನದಿಯು ಸರ್ವಕಾಲದಲ್ಲಿಯೂ ಜ್ವರಘ್ನಿ ಯೆಂಬ ಹೆಸರುಳ್ಳದ್ದಾಯಿತು. ವ್ಯಾಸನೆ! ಜ್ವರಗಳಿಂದ ಪೀಡಿತರಾಗಿ ಅತ್ಯಂತ ದುಃಖಕ್ಕೆ ಒಳಗಾದ ಜನರು ಉಷಃಕಾಲದಲ್ಲಿ ಶಾಂತಮನಸ್ಕರಾಗಿ ಶಿಪ್ರಾನದಿ ಯಲ್ಲಿ ಸ್ನಾನವನ್ನು ಮಾಡಲು ಅವರಿಗೆ ಜ್ವರದಿಂದುಂಟಾದ ಪೀಡೆಯು ತೊಲಗು ವುದಲ್ಲದೆ ಎಂದೆಂದಿಗೂ ಬರುವುದಿಲ್ಲ.

ಸತ್ಯಮುಕ್ತಂ ತದಾ ವ್ಯಾಸ ಬ್ರಹ್ಮಹರಿಹರೇಣ ಚ ॥ ೪೪ ॥
ಯೇ ಶೃಣ್ವಂತಿ ಕಥಾಂ ದಿವ್ಯಾಂ ನರಾಶ್ಚೈಕಾಗ್ರಮಾನಸಾಃ ।
ನ ತೇಷಾಂ ಜಾಯತೇ ಕಿಂಚಿಜ್ಜ್ವರಸಂತಾಪಜಂ ಭಯಂ ॥ ೪೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶಿಪ್ರಾಮಾಹಾತ್ಮ್ಯೇ ಜ್ವರಾನುಗ್ರಹವರ್ಣನಂ" ನಾಮ್ನೈಕೋನಪಂಚಾಶತ್ತಮೋಽಧ್ಯಾಯಃ

---

೪೪. ಇಂತೆಂಬುದಾಗಿ ಬ್ರಹ್ಮ ವಿಷ್ಣು ಮಹೇಶ್ವರರೆಲ್ಲರೂ ಪ್ರತಿಜ್ಞೆಯನ್ನು ಮಾಡಿ ನುಡಿದಿರುವರು.

೪೫. ಯಾವ ಮಾನವರು ಏಕಾಗ್ರಮನಸ್ಸಿನಿಂದ ಈ ಅಧ್ಯಾಯವನ್ನು ಕೇಳುವರೊ, ಅವರಿಗೆ ಎಳ್ಳಷ್ಟಾದರೂ ಜ್ವರಸಂತಾಪಗಳಿಂದ ಭಯವು ಸಂಭವಿಸಲಾರದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಶಿಪ್ರಾಮಾಹಾತ್ಮ್ಯ—ಜ್ವರಾನುಗ್ರಹವರ್ಣನ"ವೆಂಬ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಶತ್ತಮೋಽಧ್ಯಾಯಃ

### ಶಿಪ್ರಾಮಾಹಾತ್ಮ್ಯೇ ಪಾಪನಾಶಿನೀನಾಮವರ್ಣನಂ

**ಸನತ್ಕುಮಾರ ಉವಾಚ :—**

**ಪಾಪನಾಶಿನೀ ವಿಖ್ಯಾತಾ ಯಥಾ ಶಿಪ್ರಾ ಪಯಸ್ವಿನೀ ।**
**ತಥಾಽಹಂ ಸಂಪ್ರವಕ್ಷ್ಯಾಮಿ ಸಮಾಸೇನ ಪರಂತಪ ॥ ೧ ॥**
**ಪುರಾ ಕೃತಯುಗೇ ವ್ಯಾಸ ದಮನೋ ನಾಮ ವೈ ನೃಪಃ ।**
**ಕೀಕಟೇಷು ಸಮಾಖ್ಯಾತೋ ರಾಜಾ ಪರಮಕೋಪನಃ ॥ ೨ ॥**
**ಉತ್ಪಥೀ ಸರ್ವಧರ್ಮಾಣಾಂ ಗೋಬ್ರಾಹ್ಮಣವಿನಿಂದಕಃ ।**
**ಸುರಾಪಾಯೀ ಹೇಮಹಾರೀ ಮತ್ಸರೀ ಗುರುತಲ್ಪಗಃ ॥ ೩ ॥**
**ಪ್ರಜಾಸರ್ವಸ್ವಹರ್ತಾ ಚ ಪರದಾರಾಽಭಿಮರ್ಶಕಃ ।**
**ಧೂರ್ತಕೋ ಧೂರ್ತಸಂಗೀ ಚ ಪಿಶುನಸ್ತಸ್ಕರಾಕೃತಿಃ ॥ ೪ ॥**
**ಗೋಗ್ರಹಃ ಪುರಭೇದೀ ಚ ಬಂದೀ ಬಂದಿಜನಪ್ರಿಯಃ ।**
**ಕುತ್ಸಿತಃ ಕೋಪಪೂರ್ಣಶ್ಚ ವೇದಶಾಸ್ತ್ರವಿವರ್ಜಿತಃ ॥ ೫ ॥**

---

### ಕನ್ನಡದ ಅನುವಾದ

#### ಪಾಪನಾಶಿನೀನಾಮವರ್ಣನ

೧. ಸನತ್ಕುಮಾರನು ಹೇಳುತ್ತಾನೆ:— ಮಹರ್ಷಿಯೆ! ನೀರುತುಂಬಿ ಹರಿಯುತ್ತಿರುವ ಶಿಪ್ರಾನದಿಯು ಪಾಪನಾಶಿನಿಯೆಂದು ಪ್ರಖ್ಯಾತವಾದ ಬಗೆಯನ್ನು ಸವಿಸ್ತಾರವಾಗಿ ಹೇಳುವೆನು.

೨. ಎಲೈ ವ್ಯಾಸನೆ! ಹಿಂದೆ ಕೃತಯುಗದಲ್ಲಿ ಕೀಕಟವೆಂಬ ದೇಶದಲ್ಲಿ ದಮನನೆಂಬ ಮಹಾರಾಜನೊಬ್ಬನಿದ್ದನು. ಆತನು ಅತ್ಯಂತಕೋಪಸ್ವಭಾವದವನಾಗಿದ್ದನು.

೩. ಅವನು ಸಮಸ್ತ ಧರ್ಮಮಾರ್ಗಗಳನ್ನೂ ಅತಿಕ್ರಮಿಸಿ ನಡೆಯುತ್ತಿದ್ದನು. ಗೋಬ್ರಾಹ್ಮಣರನ್ನು ನಿಂದಿಸುತ್ತ ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನಗಳೇ ಮುಂತಾದ ಅಕಾರ್ಯಗಳಲ್ಲಿ ನಿರತನಾಗಿ ಮತ್ಸರಿಯಾಗಿದ್ದನು.

೪. ಪ್ರಜೆಗಳ ಸರ್ವಸ್ವವನ್ನೂ ಬಲದಿಂದ ಅಪಹರಿಸುತ್ತ, ಪರಸ್ತ್ರೀಯರಲ್ಲಿ ಕಾಮುಕನೂ, ಧೂರ್ತನೂ, ಧೂರ್ತರ ಸಹವಾಸವುಳ್ಳವನೂ, ಆದ ಆ ರಾಜನು ನೀಚನೂ, ಚೋರವೃತ್ತಿಯವನೂ ಆಗಿದ್ದನು.

೫. ಗೋವುಗಳನ್ನು ಹಿಡಿಯುವನು. ನಗರಗಳನ್ನು ಭೇದಿಸುವನು. ಇತರರನ್ನು ಸೆರೆಯಲ್ಲಿರಿಸುವನು. ಸೆರೆಯಾಳುಗಳಿಗೆ ಪ್ರಿಯನು. ಇಷ್ಟೆಯಲ್ಲದೆ ನೀಚನೂ, ಕೋಪಿಷ್ಠನೂ ಆಗಿ ವೇದಶಾಸ್ತ್ರಗಳ ಜ್ಞಾನವಿಲ್ಲದವನೂ ಆಗಿದ್ದನು.

**ಸಾಧುಸಂಗಪರಿತ್ಯಾಗೀ ದುಷ್ಟೋ ದುಷ್ಟಜನಪ್ರಿಯಃ ।**
**ಕುಲಾಂಗನಾಪರಿತ್ಯಾಗೀ ಪಣ್ಯಸ್ತ್ರೀವೃಷಲೀಪತಿಃ ॥ ೬ ॥**
**ಧರ್ಮನಿಂದಾಕರೋ ನಿತ್ಯಮಧರ್ಮೇ ರಮತೇ ಮತಿಃ ।**
**ನ ಹೂಯಂತೇ ನ ಪೂಜ್ಯಂತೇ ನ ಶ್ರೂಯಂತೇ ಕಥಾ ಬುಧೈಃ ॥ ೭ ॥**
**ವೇದಾ ಯಜ್ಞಾಶ್ಚ ದೇವಾನಾಂ ಮೂರ್ತಿಃ ಪದ್ಭ್ಯಾಂ ಚ ತಾಡ್ಯತೇ ।**
**ಏವಂ ದುಷ್ಟತರೋ ರಾಜಾ ನ ಭೂತೋ ನ ಭವಿಷ್ಯತಿ ॥ ೮ ॥**
**ಸ ಏಕದಾ ವನೇ ಘೋರೇ ಮೃಗಯಾವನಗೋಚರಃ ।**
**ಇತಸ್ತತೋ ಭ್ರಮಮಾಣೋ ವ್ಯಾಧೈಃ ಪರಿವೃತಃ ಖಲಃ ॥ ೯ ॥**
**ನ ಲಬ್ಧ್ವಾ ಖೇಟಕಂ ಕಿಂಚಿತ್ ಕ್ಷುಧಾರ್ತಸ್ತೃಷಿತಃ ಖಲಃ ।**
**ಏಕಾಕೀ ವಿಗತೋಽಸಂಗೋ ಮಹಾಕಾಲವನಾಂತಿಕೇ ॥ ೧೦ ॥**
**ರಾತ್ರಿಃ ಸಮಾಗತಾ ತತ್ರ ಘೋರಾ ಘೋರನಿಷೇವಿತಾ ।**
**ವೃಕ್ಷಮೂಲಮುಪಾವೃತ್ಯ ಶಯನಾರ್ಥೀ ಕ್ಷುಧಾರ್ದಿತಃ ॥ ೧೧ ॥**

---

೬. ದುಷ್ಟನೂ, ಸಾಧುಸಂಗವಿದ್ವೇಷಿಯೂ, ದುಷ್ಟಸಹವಾಸದವನೂ, ಧರ್ಮಪತ್ನಿಯನ್ನು ದೂರಮಾಡಿ ವೇಶ್ಯೆಯರಲ್ಲಿಯೂ ಅವಿವಾಹಿತಪ್ರೌಢೆಯರಲ್ಲಿಯೂ ಅನುರಕ್ತನಾಗಿದ್ದನು.

೭. ಸರ್ವಕಾಲವೂ ಧರ್ಮವನ್ನು ನಿಂದೆಮಾಡುತ್ತಿದ್ದನು. ಅವನ ಮನಸ್ಸು ಅಧರ್ಮದಲ್ಲಿಯೇ ಸ್ಥಿರವಾಗಿದ್ದಿತು. ಅವನ ರಾಜ್ಯದಲ್ಲಿ ಯಜ್ಞಯಾಗಗಳಾಗಲಿ, ದೇವಪಿತೃಪೂಜೆಗಳಾಗಲಿ, ವಿದ್ವಾಂಸರಿಂದ ಪುರಾಣಶ್ರವಣಗಳಾಗಲಿ ಎಂದೂ ನಡೆಯುತ್ತಿರಲಿಲ್ಲ.

೮. ವೇದಗಳು, ಯಜ್ಞವಾಟಗಳು, ದೇವತೆಗಳ ಮೂರ್ತಿಗಳು—ಇವುಗಳನ್ನು ಕಾಲಿನಿಂದ ಒದೆದು ಅಪವಿತ್ರಗೊಳಿಸುತ್ತಿದ್ದನು. ಇವನಂತಹ ಮಹಾದುಷ್ಟನಾದ ರಾಜನು ಹಿಂದೆಯೂ ಹುಟ್ಟಿರಲಿಲ್ಲ. ಮುಂದೆಯೂ ಹುಟ್ಟಲಾರನು.

೯. ಅವನು ಒಮ್ಮೆ ಬೇಟೆಯಾಡುವ ಮನಸ್ಸುಳ್ಳವನಾಗಿ ಕ್ಷುದ್ರಮೃಗಗಳನ್ನರಸುತ್ತ ಬೇಡರ ಗುಂಪಿನ ಮಧ್ಯದಲ್ಲಿ ಸೇರಿ ಘೋರವಾದ ಅರಣ್ಯದಲ್ಲೆಲ್ಲ ಸಂಚರಿಸುತ್ತಿದ್ದನು.

೧೦. ಯಾವ ಮೃಗವೂ ಸಿಕ್ಕದಿರಲು ಹಸಿವು ಮತ್ತು ಬಾಯಾರಿಕೆಗಳಿಂದ ಆಯಾಸಗೊಂಡು ಏಕಾಕಿಯಾಗಿ, ಸಹಚರರನ್ನು ಅಗಲಿ ಆ ರಾಜನೂ ಮಹಾಕಾಲವನದ ಸಮೀಪದಲ್ಲಿ ನಿಂತನು.

೧೧. ಅಲ್ಲಿಯೇ ಭಯಂಕರವೂ, ಭಯಂಕರಮೃಗಸೇವಿತವೂ ಆದ ರಾತ್ರಿಯು ಬಂದೊದಗಿತು. ದೊರೆಯು ಒಂದು ಮರದಡಿಯಲ್ಲಿ ಒರಗಿಕೊಂಡು ಹಸಿವುಗೊಂಡಿದ್ದರೂ ನಿದ್ರಿಸಬಯಸಿದನು.

ತತ್ರಾಽಶ್ವಂ ವಿಟಪೇ ಬದ್ಧ್ವಾ ಸ್ವಯಮೇವ ನ್ಯಷೀದತ ।
ತದೈವ ಕಾಲೇ ವೃಕ್ಷಾದ್ವೈ ಸರ್ಪಃ ಪಪಾತ ಮಸ್ತಕೇ ॥ ೧೨ ॥
ಕಿಮಿದಂ ಕುತ ಆಶ್ಚರ್ಯಂ ಕೃತ್ವಾ ಹಸ್ತೇನ ವಾರಿತಃ ।
ತೇನ ವಾರಯಿತಾ ರಾಜಾ ದಷ್ಟೋಽಂಗುಷ್ಠೇ ತದಾಽಹಿನಾ ॥ ೧೩ ॥
ದಷ್ಟಮಾತ್ರೇ ಚ ನೃಪತಿರ್ವ್ಯಥಿತಃ ಕ್ಷಿತಿಮಾಗತಃ ।
ಕಿಯತ್ಕಾಲೇ ವೃಥಾವಿಷ್ಟೋ ಮುಮೋಹ ಕ್ಷೀಣಮಂಗಲಃ ॥ ೧೪ ॥
ಏತತ್ಕ್ಷಣಾತ್ಪ್ರೇತಭೂತೋ ಘೋರೇ ನರಕಸಂಚಯೇ ।
ಯಮದೂತೈಸ್ತಾಡ್ಯಮಾನೋ ವಿವಿಧಾಽಸ್ತ್ರೈಃ ಸ್ವಕರ್ಮಜೈಃ ॥ ೧೫ ॥
ಹರ್ಷಿತಾಶ್ಚ ಗಣಾಃ ಸರ್ವೇ ಯಮರಾಜಸ್ಯ ಕಿಂಕರಾಃ ।
ಬದ್ಧ್ವಾ ಪಾಶೈಶ್ಚ ತಂ ನಿನ್ಯುಃ ಪಾಪಿಷ್ಠಂ ಯಮಮಂದಿರೇ ॥ ೧೬ ॥
ಏತಸ್ಮಿನ್ನಂತರೇ ವ್ಯಾಸ ಕ್ರವ್ಯಾದ್ಯೈಃ ಖಾದಿತಂ ಶವಂ ।
ಕಿಂಚಿಚ್ಛೇಷತರಂ ಪ್ರಾತರ್ವಾಯಸೇನಾಽಭಿಲಕ್ಷಿತಂ ॥ ೧೭ ॥

---

೧೨. ತನ್ನ ಕುದುರೆಯನ್ನು ಒಂದು ಮರಕ್ಕೆ ಕಟ್ಟಿಹಾಕಿ ತಾನೂ ಮಲಗಿಕೊಂಡನು. ಆ ಸಮಯದಲ್ಲಿಯೇ ಮರದ ಮೇಲಿನಿಂದ ಒಂದು ಹಾವು ತಲೆಯಮೇಲೆ ಬಿದ್ದಿತು.

೧೩. ಇದೇನೆಂದು ಆಶ್ಚರ್ಯಗೊಂಡು ರಾಜನು ಕೈಯಿಂದ ಆ ಪ್ರಾಣಿಯನ್ನು ದೂರಕ್ಕೆ ತಳ್ಳಿದನು. ಹಾಗೆ ತಳ್ಳಿದ ರಾಜನ ಕೈಹೆಬ್ಬೆರಳನ್ನು ಆ ಸರ್ಪವು ಆ ಕ್ಷಣದಲ್ಲಿಯೇ ಕಚ್ಚಿತು.

೧೪. ಕಚ್ಚಿದ ಮುಹೂರ್ತದಲ್ಲಿಯೇ ರಾಜನು ನೋವಿನಿಂದ ಭೂಮಿಯಲ್ಲಿ ಹೊರಳಾಡಿದನು. ಆಯುಸ್ಸು ಮುಗಿದುದರಿಂದ ಸ್ವಲ್ಪಕಾಲದಲ್ಲಿಯೇ ಅದರ ಫಲವಾಗಿ ಪ್ರಾಣಗಳನ್ನೂ ತ್ಯಜಿಸಿದನು.

೧೫. ಕೂಡಲೆ ಪ್ರೇತರೂಪವನ್ನು ತಾಳಿ ಘೋರಗಳಾದ ನರಕಗಳಿಗೆ ಹೋಗುವವನಾದನು. ಅಲ್ಲಿ ಯಮದೂತರು ಅವನನ್ನು ಅವನ ಪಾಪಕರ್ಮಗಳಿಗನುಗುಣಗಳಾದ ಅನೇಕ ಅಸ್ತ್ರಗಳಿಂದ ಹಿಂಸಿಸಿದರು.

೧೬. ಯಮಧರ್ಮರಾಜನ ಕಿಂಕರರು ಅತ್ಯಂತರೋಷದಿಂದ ಮಹಾಪಾತಕಿಯಾದ ಆ ರಾಜನನ್ನು ಪಾಶಗಳಿಂದ ಬಂಧಿಸಿ ಯಮರಾಜಧಾನಿಯಲ್ಲಿ ಸೆಳೆದಾಡುತ್ತಿದ್ದರು.

೧೭. ವ್ಯಾಸನೆ! ಇಷ್ಟರಲ್ಲಿಯೇ ಆ ರಾಜನ ಶರೀರವನ್ನು ಕಾಡುಮೃಗಗಳು ಬಹಳವಾಗಿ ತಿಂದುಹಾಕಿದ್ದುವು. ಮಾರನೆಯ ದಿನ ಬೆಳಿಗ್ಗೆ ಶೇಷವಾಗಿ ಉಳಿದಿದ್ದ ಒಂದು ತುಂಡು ಮಾಂಸವನ್ನು ಒಂದು ಕಾಗೆಯು ಕಂಡಿತು.

ತತ್ರ ಗತ್ವಾನಯನ್ಮಾಂಸಂ ತುಂಡೇನ ವಿಯದುದ್ಗತಃ ।
ತತೋsನ್ಯೈರ್ವಾಯಸೈರ್ಭಗ್ನೋ ಭ್ರಾಮ್ಯಮಾಣ ಇತಸ್ತತಃ ॥ ೧೮ ॥
ತತ್ರಾsಟತೇ ಹಿ ಯತ್ರಾsಸ್ತೇ ದಿವ್ಯಾ ಶಿಪ್ರಾ ಪಯಸ್ವಿನೀ ।
ಕಿಂಚಿತ್ಕರ್ಮವಿಪಾಕೇನ ವಾಯಸಾಸ್ಯಗತಂ ಪಲಂ ॥ ೧೯ ॥
ಪತಿತಂ ವೈ ಜಲೇ ತಸ್ಯಾಃ ಶಿಪ್ರಾಯಾಸ್ತಸ್ಯ ಕಾಯಜಂ ।
ತೇನ ಪುಣ್ಯಪ್ರಭಾವೇನ ಶಿವೋsಜಾಯತ ತತ್ಕ್ಷಣಾತ್ ॥ ೨೦ ॥
ತ್ರಿನೇತ್ರೋsಥ ಜಟಾಜೂಟೀ ವ್ಯಾಘ್ರಾಂಬರಪರೀವೃತಃ ।
ಶೂಲಹಸ್ತೋ ವೃಷಾರೂಢೋ ಭಾಲಚಂದ್ರೋ ಹ್ಯುಮಾಪತಿಃ ॥ ೨೧ ॥
ಇತ್ಯಾಶ್ಚರ್ಯಮಯಂ ರೂಪಂ ದೃಷ್ಟ್ವಾ ದೂತಾಶ್ಚ ಧರ್ಷಿತಾಃ ।
ತದ್ಗಣೈಸ್ತಾಡಿತಾ ಭಗ್ನಾ ಧರ್ಮರಾಜ್ಞೇ ಶಶಂಸಿರೇ ॥ ೨೨ ॥
ಶ್ರೂಯತಾಂ ಭೋ ಮಹಾರಾಜ ಧರ್ಮರಾಜ ನಮೋsಸ್ತು ತೇ ।
ದೂತಾನಾಂ ಯದ್ವಚೋ ರಮ್ಯಂ ಬಹ್ವಾಶ್ಚರ್ಯಮಯಂ ಪರಂ ॥ ೨೩ ॥

---

೧೮. ಅಲ್ಲಿಗೆ ಹೋಗಿ ಆ ಮಾಂಸದ ಚೂರನ್ನು ತೆಗೆದುಕೊಂಡು ಬಾಯಲ್ಲಿ ಕಚ್ಚಿ ಆಕಾಶಕ್ಕೆ ಹಾರಿತು. ಕೂಡಲೆ ಇತರ ಕಾಗೆಗಳು ಅದನ್ನು ಮುತ್ತಲು ಅಲ್ಲಲ್ಲಿಯೇ ಸುತ್ತಾಡತೊಡಗಿತು.

೧೯–೨೦. ಅದು ದಿವ್ಯನದಿಯಾದ ಶಿಪ್ರೆಯು ಇರುವೆಡೆಯಲ್ಲಿ ಸುಳಿದಾಡುತ್ತಿರಲು ಆ ರಾಜನ ಅಲ್ಪವಾದ ಪುಣ್ಯದ ಫಲವಾಗಿ ಆ ಕಾಗೆಯ ಮುಖದಿಂದ ಮಾಂಸಖಂಡವು ಶಿಪ್ರಾನದಿಯ ಜಲದಲ್ಲಿ ಜಾರಿಬಿದ್ದಿತು. ತನ್ನ ಶರೀರದ ಅಲ್ಪಭಾಗವು ತೀರ್ಥದಲ್ಲಿ ಬಿದ್ದ ಪುಣ್ಯದಿಂದಲೇ ರಾಜನು ಕ್ಷಣಮಾತ್ರದಲ್ಲಿ ಶಿವಸ್ವರೂಪದಿಂದ ಕೂಡಿದವನಾದನು.

೨೧. ಮೂರು ಕಣ್ಣುಗಳುಳ್ಳವನೂ, ಜಟಾಜೂಟಮಂಡಿತನೂ, ಹುಲಿಯ ಚರ್ಮವನ್ನು ಹೊದ್ದವನೂ, ತ್ರಿಶೂಲವನ್ನು ಹಿಡಿದವನೂ, ವೃಷಭವಾಹನನೂ, ಚಂದ್ರಶೇಖರನೂ ಆದ ಶಿವನಿಗೆ ಸಮಾನವಾದ ರೂಪವನ್ನು ಧರಿಸಿದನು.

೨೨. ಇಂತಹ ಆಶ್ಚರ್ಯಕಾರಕವಾದ ಆತನ ರೂಪವನ್ನು ಕಂಡು ಅವನ ತೇಜಸ್ಸಿನಿಂದ ಪರಾಭವವನ್ನು ಹೊಂದಿದವರೂ, ರುದ್ರಗಣಗಳ ಹೊಡೆತಗಳಿಗೆ ಸಿಕ್ಕಿ ಭಗ್ನರೂ ಆದ ಯಮಕಿಂಕರರು ಧರ್ಮರಾಜನಿಗೆ ಈ ವೃತ್ತಾಂತವನ್ನರುಹಿದರು.

೨೩. "ಮಹಾರಾಜನಾದ ಯಮಧರ್ಮನೆ! ನಮಸ್ಕಾರವು. ನಮ್ಮ ಮಾತುಗಳನ್ನು ಲಾಲಿಸು. ನಿನ್ನ ದೂತರಾದ ನಮ್ಮ ಮಾತು ರಮ್ಯವೂ, ಅನೇಕಾಶ್ಚರ್ಯಸಹಿತವೂ, ಸರ್ವೋತ್ತಮವೂ ಆಗಿರುವುದು.

ಕೀಕಟಾಧಿಪತಿರ್ಮಂದಃ ಪಾಪಿಷ್ಠೋ ವೃಷಲೀಪತಿಃ ।
ದಮನೋ ನಾಮ ರಾಜಾಽಭೂತ್ಸಮಸ್ತೇ ಕ್ಷಿತಿಮಂಡಲೇ ॥ ೨೪ ॥
ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ತಾನಿ ಸರ್ವಾಣಿ ತೇನಾಽಪಿ ಕೃತಾನಿ ಭುವಿ ಸತ್ತಮ ॥ ೨೫ ॥
ಮರ್ಯಾದಾಭೇದಕೋ ಮೂಢೋ ವರ್ಣಾಶ್ರಮಸುಧರ್ಮಿಣಾಂ ।
ಕುಸಂಗೀ ದ್ಯೂತಕೋನ್ಮಾದೀ ಬಹುವ್ಯಂಗಭರಃ ಖಲಃ ॥ ೨೬ ॥
ಯಮದಂಡಪರಃ ಪಾಪೀ ಅಸ್ಮಾಕಂ ಹರ್ಷವರ್ಧನಃ ।
ಸ ಕಥಂ ಶಿವರೂಪೀ ಸ್ಯಾತ್ಕಿಮಾಶ್ಚರ್ಯಮತಃ ಪರಂ ॥ ೨೭ ॥
ಯಾವಂತಃ ಪತಿತಾಃ ಪೂರ್ವೇ ಪಾಪಿನಃ ಸರ್ವ ಏವ ಹಿ ।
ಕೃಷ್ಣೇನ ತಾರಿತಾಃ ಸರ್ವೇ ಬ್ರಹ್ಮಪುತ್ರಾರ್ಥಿನಾ ತದಾ ॥ ೨೮ ॥
ತದಾ ಪ್ರಭೃತಿ ಸರ್ವಾಣಿ ಕುಂಡಾನಿ ನರಕಸ್ಯ ವೈ ।
ಶುಷ್ಕಾಣಿ ಚೈವ ದೃಶ್ಯಂತೇ ಗ್ರೀಷ್ಮಾಂತೇ ವೈ ಹ್ರದಾ ಯಥಾ ॥ ೨೯ ॥

---

೨೪. ಸಕಲಭೂಮಂಡಲದಲ್ಲಿಯೂ ಮಹಾಮೂಢನೂ, ಪಾಪಿಯೂ, ವೃಷಲೀಸಂಗವನ್ನು ಮಾಡುವವನೂ ಆದ ದಮನನೆಂಬ ಮಹಾರಾಜನು ಕೀಕಟದೇಶವನ್ನು ಆಳುತ್ತಿದ್ದನು.

೨೫. ಬ್ರಹ್ಮಹತ್ಯೆಗೆ ಸಮಾನವಾದುವುಗಳೆಂದು ಯಾವ ಯಾವ ಪಾತಕಗಳು ಹೇಳಲ್ಪಟ್ಟಿರುವುವೊ, ಅವುಗಳೆಲ್ಲವನ್ನೂ ತನ್ನ ರಾಜ್ಯದಲ್ಲಿ ಆತನು ಮಾಡುತ್ತಿದ್ದನು.

೨೬. ಆತನು ಶಾಸ್ತ್ರಲೋಕಮರ್ಯಾದೆಗಳನ್ನುಲ್ಲಂಘಿಸಿದ ಮೂಢನು. ವರ್ಣಾಶ್ರಮಧರ್ಮಗಳನ್ನು ದ್ವೇಷಿಸುವನು. ನೀಚಸಹವಾಸದವನೂ, ದ್ಯೂತಕಾರಿಯೂ, ಉನ್ಮತ್ತನೂ, ಅನೇಕ ಅಧಮರನ್ನು ಪೋಷಿಸುವ ಖಲನೂ ಆಗಿದ್ದನು.

೨೭. ಯಮನ ಬಾಧೆಗಳಿಗೆ ಅರ್ಹನಾದ ಆತನು ನಮಗೆಲ್ಲ ಅತ್ಯಂತಾನಂದವನ್ನುಂಟುಮಾಡುತ್ತಿದ್ದನು. ಅಂತಹವನು ಶಿವಸ್ವರೂಪಿಯಾದುದು ಹೇಗೆ? ಇದಕ್ಕಿಂತ ಆಶ್ಚರ್ಯವೇನು?

೨೮. ಹಿಂದೆ ಎಷ್ಟುಜನ ಪಾಪಿಗಳು ನರಕದಲ್ಲಿ ಬಿದ್ದಿದ್ದರೊ, ಅವರೆಲ್ಲರೂ ಸಾಂದೀಪಿನ್ಯಾಚಾರ್ಯನ ಪುತ್ರನನ್ನು ಹುಡುಕಲು ಬಂದ ಶ್ರೀ ಕೃಷ್ಣನಿಂದ ಉದ್ಧೃತರಾಗಿ ಹೊರಟುಹೋದರು.

೨೯. ಆ ದಿನದ ಮೊದಲುಗೊಂಡು ನರಕಗಳಲ್ಲಿರುವ ಸಕಲ ಕುಂಡಗಳೂ ಬೇಸಿಗೆ ಕಾಲದಲ್ಲಿ ಬತ್ತಿಹೋದ ಕೆರೆಕುಂಟೆಗಳಂತೆ ನಿರ್ಜನಗಳಾಗಿರುವುವು.

**ನ ಚೈವಾರ್ತರವಂ ಕಿಂಚಿಚ್ಛ್ರೂಯತೇ ತವ ಮಂದಿರೇ ।**
**ಅಸ್ಮಾಕಂ ಜೀವನಂ ನಾಽಸ್ತಿ ಕಿಮುಪಾಯಂ ವದಸ್ವ ನಃ ॥ ೩೦ ॥**
**ಏಕ ಏವಾಽಽಗತೋ ಲೋಕೇ ವೃತ್ತಿದೋ ನೋ ಯಮಾಽಧಿಪ ।**
**ಸೋಽಪಿ ಶಿವತ್ವಮಾಪನ್ನಃ ಕಸ್ಮಾನ್ನೋ ಜೀವ್ಯತೇ ಕಥಂ ॥ ೩೧ ॥**
**ಧರ್ಮರಾಜಸ್ತದಾಶ್ರುತ್ಯ ಕಿಂಕರಾಣಾಂ ಪರಂ ವಚಃ ।**
**ಚಿರಂ ಧ್ಯಾತ್ವಾ ಸ್ವಕಾನೂಚೇ ದೇಶಕಾಲೋಚಿತಂ ವಚಃ ॥ ೩೨ ॥**

**ಧರ್ಮರಾಜ ಉವಾಚ:—**

**ಶ್ರೂಯತಾಂ ಭೋ ಗಣಾಃ ಸರ್ವೈಃ ಶ್ರುತಿರೇಕಾಗ್ರಮಾನಸೈಃ ।**
**ಯೇನ ಪುಣ್ಯಪ್ರಭಾವೇನ ಪಾಪಿಷ್ಠಃ ಶಿವತಾಂ ಗತಃ ॥ ೩೩ ॥**
**ಭುವಿ ಪುಣ್ಯತಮೇ ದೇಶೇ ಮಹಾಕಾಲವನೇ ಶುಭೇ ।**
**ಶಿಪ್ರಾ ನಾಮ ಸರಿಚ್ಛ್ರೇಷ್ಠಾ ಸರ್ವಪಾಪಹರಾ ಪರಾ ॥ ೩೪ ॥**
**ಯೇಷಾಂ ಶಿಪ್ರೋದಕಸ್ಪರ್ಶೋ ಜಾಯತೇ ಭುವಿ ಕಿಂಕರಾಃ ।**
**ನ ತೇಷಾಂ ಪಾತಕಂ ಕಿಂಚಿನ್ಮೃತಃ ಶಿವಪುರಂ ವ್ರಜೇತ್ ॥ ೩೫ ॥**

---

೩೦. ನಿನ್ನ ಲೋಕದಲ್ಲೆಲ್ಲಿಯೂ ಹಿಂಸೆಯ ಆರ್ತನಾದವೇ ಕೇಳುವುದಿಲ್ಲ. ನಮಗೂ ಯಾವ ಕಾರ್ಯವೂ ಜೀವನೋಪಾಯವೂ ಇರುವುದಿಲ್ಲ. ಇದಕ್ಕೆ ಉಪಾಯವೇನೆಂಬುದನ್ನು ನಮಗೆ ಹೇಳು.

೩೧. ಯಮಮಹಾರಾಜನೆ! ನಮ್ಮ ವೃತ್ತಿಗೆ ಬಲಿಯಾಗಿ ಇವನೊಬ್ಬ ನಾದರೂ ದೊರಕಿದ್ದನು. ಅವನೂ ಸಹ ಶಿವಸ್ವರೂಪವನ್ನು ಹೊಂದಿದನೆಂದ ಮೇಲೆ ನಾವು ಜೀವನವನ್ನು ಮಾಡುವುದಾದರೂ ಹೇಗೆ?''

೩೨. ಇಂತು ಕಿಂಕರರಾಡಿದ ಯಥಾರ್ಥಗಳಾದ ಮಾತುಗಳನ್ನು ಕೇಳಿ ಯಮಧರ್ಮರಾಜನು ಕೆಲವುಕಾಲ ಧ್ಯಾನದಲ್ಲಿದ್ದು ಬಳಿಕ ದೇಶಕಾಲೋಚಿತ ಗಳಾದ ಸಮಾಧಾನ ವಚನಗಳನ್ನಾಡಿದನು.

೩೩. ಧರ್ಮರಾಜನು ಹೇಳುತ್ತಾನೆ:—ಎಲೈ ಕಿಂಕರಗಣಗಳಿರಾ! ನೀವೆ ಲ್ಲರೂ ಏಕಾಗ್ರವಾದ ಮನಸ್ಸಿನಿಂದ ನಾನು ಹೇಳುವುದನ್ನು ಕೇಳಿರಿ. ಯಾವ ಪುಣ್ಯದ ಪ್ರಭಾವದಿಂದ ಈ ಪರಮಪಾಪಿಯು ಶಿವಸಾರೂಪ್ಯವನ್ನು ಹೊಂದಿದ ನೆಂಬುದನ್ನು ವಿವರಿಸುವೆನು.

೩೪. ಭೂಲೋಕದಲ್ಲಿ ಪುಣ್ಯಪ್ರದವೂ, ಶುಭವೂ ಆದ ಮಹಾಕಾಲವನ ವೆಂಬ ಪ್ರದೇಶದಲ್ಲಿ ಸಕಲಪಾತಕಗಳನ್ನು ಕಳೆಯುವುದೂ, ಸರ್ವೋತ್ತಮವೂ ಆದ ಶಿಪ್ರಾನಾಮಕವಾದ ಉತ್ತಮನದಿಯೊಂದಿರುವುದು.

**೩೫. ಎಲೈ ಕಿಂಕರರಿರಾ! ಯಾರಿಗೆ ಈ ಶಿಪ್ರಾನದಿಯ ಜಲದ ಸ್ಪರ್ಶವು ಲಭಿಸುವುದೊ, ಅವರಿಗೆ ಭೂಮಿಯಲ್ಲಿ ಯಾವ ಪಾತಕವೂ ಅಂಟುವುದಿಲ್ಲ. ಅಂತಹ ಮಾನವನು ಸತ್ತರೆ ಶಿವಲೋಕವನ್ನು ಸೇರುವನು.**

ಮನಸಾ ವಪುಷಾ ವಾಚಾ ಪಾಪಾನಿ ವಿವಿಧಾನಿ ಚ ।
ತತ್ಕ್ಷಣಾತ್ಪ್ರಲಯಂ ಯಾಂತಿ ಶಿಪ್ರಾಸರಿನ್ನಿಷೇವಣಾತ್ ॥ ೩೬ ॥
ಶಿಪ್ರಾ ಶಿಪ್ರೇತಿ ಯೋ ಬ್ರೂತೇ ಯತ್ರ ಕುತ್ರಾಽಪಿ ಮಾನವಃ ।
ಸ ಏವ ಶಿವತಾಂ ಯಾತಿ ನ ಜಾನೇ ಸ್ನಾನಜಂ ಫಲಂ ॥ ೩೭ ॥
ಯತ್ರ ಕೀಟಪತಂಗಾಶ್ಚ ಶಿಪ್ರಾ ವಾರಿಚರಾಶ್ಚ ಯೇ ।
ಮೃತಾಃ ಶಿವಪುರಂ ಯಾಂತಿ ಶಿಪ್ರಾನೀರನಿಷೇವಣಾತ್ ॥ ೩೮ ॥
ಕೃತ್ವಾಽನ್ಯತ್ರ ಮಹಾಪಾಪಂ ಯೇಽಂತೇ ಶಿಪ್ರಾತಟಂ ಶ್ರಿತಾಃ ।
ಮಹಾಪಾತಕಿನೋಽಪ್ಯೇತೇ ಮೃತಾ ಯಾಂತಿ ಶಿವಾಲಯಂ ॥ ೩೯ ॥
ಮಾಧವೇ ಮಾಸಿ ಸಂಪ್ರಾಪ್ತೇ ನಿಮಜ್ಜಂತಿ ನರೋತ್ತಮಾಃ ।
ನ ತೇಷಾಂ ನಿರಯಂ ಕಿಂಚಿಚ್ಛಿವರೂಪಾಶ್ಚರಂತಿ ತೇ ॥ ೪೦ ॥
ವಾಯಸೇನಾಽಽಹೃತಂ ಮಾಂಸಂ ತಸ್ಯ ರಾಜ್ಞಃ ಕೃತಾಗಸಃ ।
ಶಿಪ್ರಾಽಗಾಧಜಲೇ ಕ್ಷಿಪ್ತಂ ಕಾ ತತ್ರ ಪರಿದೇವನಾ ॥ ೪೧ ॥

---

೩೬. ಮನಸ್ಸು, ದೇಹ, ಮಾತುಗಳಿಂದ ಅನೇಕವಿಧಗಳಾದ ಯಾವ ಪಾತಕಗಳನ್ನು ಮಾಡಿದ್ದರೂ, ಅವುಗಳೆಲ್ಲವೂ ಶಿಪ್ರಾನದೀಜಲದ ಸೇವನೆಯಿಂದ ಕ್ಷಣಮಾತ್ರದಲ್ಲಿಯೆ ನಾಶವಾಗುವುವು.

೩೭. ಮಾನವನು ತಾನಿದ್ದೆಡೆಯಲ್ಲಿಯೇ ಶಿಪ್ರಾನದಿಯ ನಾಮವನ್ನುಚ್ಚರಿಸಿದರೂ ಶಿವತ್ವವನ್ನು ಪಡೆಯುವನೆಂದಮೇಲೆ ಅದರಲ್ಲಿ ಸ್ನಾನವನ್ನು ಮಾಡುವುದರ ಫಲದ ಹಿರಿಮೆಯನ್ನು ನಾನು ತಿಳಿಯಲೂ ಸಾಧ್ಯವಿಲ್ಲ.

೩೮. ಅಲ್ಲಿರುವ ಕೀಟಗಳೂ, ಪತಂಗಗಳೂ, ನದಿಯಲ್ಲಿರುವ ಜಲಚರಗಳೂ ಸಹ ಶಿಪ್ರಾನದಿಯ ಜಲವನ್ನು ಸೇವಿಸುವುದರಿಂದ ದೇಹವನ್ನು ತ್ಯಜಿಸಿ ಶಿವಪುರಕ್ಕೆ ಹೋಗುವುವು.

೩೯. ಇತರ ಸ್ಥಳಗಳಲ್ಲಿ ಮಹಾಪಾತಕಗಳನ್ನು ಮಾಡಿದ್ದರೂ ಯಾರು ಕೊನೆಗಾಲದಲ್ಲಿ ಶಿಪ್ರಾನದಿಯ ದಡವನ್ನು ಸೇರುವರೊ, ಅಂತಹ ಮಹಾಪಾಪಿಗಳೂ ಸಹ ಮೃತಿಯನ್ನು ಹೊಂದಲು ಶಿವಲೋಕವನ್ನು ಸೇರುವರು.

೪೦. ವೈಶಾಖಮಾಸದಲ್ಲಿ ಯಾವ ಮಾನವೋತ್ತಮರು ಈ ನದಿಯಲ್ಲಿ ಮಜ್ಜನವನ್ನು ಮಾಡುವರೊ, ಅವರು ಯಾವ ನರಕವನ್ನೂ ನೋಡದೆ ಶಿವರೂಪವನ್ನು ಪಡೆದು ಸಂಚರಿಸುವರು.

೪೧. ಮಹಾಪಾಪಿಯಾದರೂ ಆ ದಮನರಾಜನ ಶರೀರದ ಒಂದು ಮಾಂಸಖಂಡವು ಶಿಪ್ರಾನದಿಯ ಆಳವಾದ ಜಲದಲ್ಲಿ ಕಾಗೆಯ ಮುಖದಿಂದ ಬಿದ್ದಿತಾದುದರಿಂದ ಇದರಲ್ಲಿ ದುಃಖಕ್ಕೆ ಕಾರಣವೇನು ?

ವಾಪೀಕೂಪತಡಾಗಾದಿ ಅಧಿಕಾಽಧಿಕಸತ್ಫಲಂ ।
ತಸ್ಮಾದ್ದಶಗುಣಂ ಪುಣ್ಯಂ ನದೀಷು ಉಪಜಾಯತೇ ॥ ೪೨ ॥
ತಸ್ಮಾದ್ದಶಗುಣಾ ತಾಪೀ ಗೋದಾ ಪುಣ್ಯಾ ತತೋಽಧಿಕಾ ।
ತಸ್ಮಾದ್ದಶಗುಣಾ ರೇವಾ ಗಂಗಾ ಪುಣ್ಯಾ ತತೋಽಧಿಕಾ ।
ತಸ್ಮಾದ್ದಶಗುಣಾ ಶಿಪ್ರಾ ಪವಿತ್ರಾ ಪಾಪನಾಶಿನೀ ॥ ೪೩ ॥
ದಮನಸ್ಯ ಶರೀರಸ್ಯ ಮಾಂಸಂ ಶಿಪ್ರಾಸಮಾಗತಂ ।
ತೇನ ಪುಣ್ಯಪ್ರಭಾವೇನ ಶಿವರೂಪಧರೋಽಭವತ್ ॥ ೪೪ ॥
ಈದೃಶಾ ಚ ನದೀ ರಮ್ಯಾ ಅವಂತ್ಯಾಂ ಭುವಿ ವರ್ತತೇ ।
ವಾಂಛಂತಿ ದೇವತಾಃ ಸರ್ವಾಸ್ತಸ್ಯಾ ದುರ್ಲಭದರ್ಶನಂ ॥ ೪೫ ॥
ಧರ್ಮರಾಜವಚಃ ಶ್ರುತ್ವಾ ಗಣಾ ವಿಸ್ಮಯಮಾಗತಾಃ ।
ಮನಸಾ ಚ ನಿರಾತಂಕಾಃ ಶಿಪ್ರಾಂ ಶರಣಮಾಗತಾಃ ॥ ೪೬ ॥

ಸನತ್ಕುಮಾರ ಉವಾಚ :—

ತದಾ ಪ್ರಭೃತಿ ವಿಖ್ಯಾತಾ ಶಿಪ್ರೇಯಂ ಪಾಪನಾಶಿನೀ ।
ಗೀಯತೇ ಚ ಪುರಾಣೇಷು ಯಸ್ಯಾ ಮಾಹಾತ್ಮ್ಯಮುತ್ತಮಂ ॥ ೪೭ ॥

---

೪೨. ಕೊಳ, ಭಾವಿ, ಕೆರೆಗಳಲ್ಲಿ ಸ್ನಾನವು ಒಂದಕ್ಕಿಂತ ಮತ್ತೊಂದರಲ್ಲಿ ಅಧಿಕಫಲಪ್ರದವು. ಇವುಗಳೆಲ್ಲವುಗಳ ಹತ್ತರಷ್ಟು ಪುಣ್ಯವು ನದಿಗಳಲ್ಲಿನ ಸ್ನಾನದಿಂದ ಲಭಿಸುವುದು.

೪೩. ಇತರ ನದಿಗಳಿಗಿಂತಲೂ ತಪತೀನದಿಯು ಹತ್ತುಪಾಲುಗುಣಗಳಿಂದ ಕೂಡಿದುದು. ಅದಕ್ಕಿಂತಲೂ ಗೋದಾವರಿಯು ಅಧಿಕಪುಣ್ಯಪ್ರದವು. ಅದಕ್ಕಿಂತಲೂ ರೇವಾನದಿಯು ದಶಗುಣಿತವಾದ ಫಲವನ್ನು ಕೊಡುವುದು. ಗಂಗಾನದಿಯು ರೇವಾನದಿಗಿಂತಲೂ ಹೆಚ್ಚಿನ ಮಹಿಮೆಯುಳ್ಳದ್ದಾಗಿರುವುದು. ಪವಿತ್ರವೂ ಪಾಪನಾಶಕವೂ ಆದ ಶಿಪ್ರಾನದಿಯು ಗಂಗೆಗೂ ಹತ್ತುಪಾಲು ಮಿಗಿಲೆನಿಸಿರುವುದು.

೪೪. ದಮನರಾಜನ ಶರೀರದ ಮಾಂಸವು ಶಿಪ್ರಾನದಿಯಲ್ಲಿ ಬಿದ್ದಿತು. ಅದರ ಪುಣ್ಯದ ಪ್ರಭಾವದಿಂದ ಆತನು ಶಿವನ ಸ್ವರೂಪವನ್ನೇ ಹೊಂದಿದನು.

೪೫. ಇದಕ್ಕೆ ಸಮಾನವಾದ ರಮ್ಯವಾದ ನದಿಯು ಅವಂತೀದೇಶದಲ್ಲಿ ಮತ್ತೊಂದಿಲ್ಲವು. ಸಕಲದೇವತೆಗಳೂ ಸಹ ಅತ್ಯಂತದುರ್ಲಭವಾದ ಆ ನದಿಯ ದರ್ಶನಕ್ಕಾಗಿ ಹಂಬಲಿಸುತ್ತಿರುವರು.

೪೬. ಸನತ್ಕುಮಾರನು ಹೇಳುತ್ತಾನೆ :—ಧರ್ಮರಾಜನ ಈ ಮಾತುಗಳನ್ನು ಕೇಳಿ ಕಿಂಕರಗಣಗಳೆಲ್ಲರೂ ವಿಸ್ಮಯಾವಿಷ್ಟಮಾನಸರಾಗಿ ತಮ್ಮ ಮನಸ್ಸಿನ ದುಗುಡವನ್ನು ಬಿಟ್ಟು ಶಿಪ್ರಾನದಿಯನ್ನೇ ಶರಣುಹೊಕ್ಕರು.

೪೭. ಅಂದುಮೊದಲು ಶಿಪ್ರಾನದಿಯು ಪಾಪನಾಶಿನಿಯೆಂದು ಪ್ರಖ್ಯಾತಿ

**ದಮನಸ್ಯ ಚ ನಿರ್ಮುಕ್ತಿಂ ಶಿಪ್ರಾಮಾಹಾತ್ಮ್ಯಮುತ್ತಮಂ ।**
**ಸಂವಾದಂ ಯಮದೂತಾನಾಂ ಶ್ರುತ್ವಾ ಮುಕ್ತಿರ್ನ ಸಂಶಯಃ ॥ ೪೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶಿಪ್ರಾಮಾಹಾತ್ಮ್ಯೇ ಪಾಪನಾಶಿನೀನಾಮವರ್ಣನಂ" ನಾಮ ಪಂಚಾಶತ್ತಮೋಽಧ್ಯಾಯಃ**

---

ಯನ್ನು ಪಡೆಯಿತು. ಇದರ ಮಾಹಾತ್ಮ್ಯವು ಸರ್ವೋತ್ತಮವೆನಿಸಿ ಸಕಲ ಪುರಾಣಗಳಲ್ಲಿಯೂ ಪ್ರಶಂಸಿಸಲ್ಪಟ್ಟಿರುವುದು.

೪೮. ದಮನಮಹಾರಾಜನ ಮೋಕ್ಷವನ್ನೂ, ಶಿಪ್ರಾನದಿಯ ಉತ್ತಮ ಮಾಹಾತ್ಮ್ಯವನ್ನೂ, ಯಮದೂತರ ಸಂವಾದವನ್ನೂ ಒಳಗೊಂಡಿರುವ ಈ ಅಧ್ಯಾಯವನ್ನು ಕೇಳಲು ಮೋಕ್ಷವು ಲಭಿಸುವುದರಲ್ಲಿ ಸಂದೇಹವಿಲ್ಲ.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಹಾತ್ಮ್ಯದಲ್ಲಿ "ಪಾಪನಾಶಿನೀನಾಮವರ್ಣನ"ವೆಂಬ ಐವತ್ತನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥೈಕಪಂಚಾಶತ್ತಮೋಽಧ್ಯಾಯಃ

### ಶಿಪ್ರಾಮಾಹಾತ್ಮ್ಯೇ ಅಮೃತೋದ್ಭವಾನಾಮಕಥಾವರ್ಣನಂ

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಮಹಾಬುದ್ಧೇ ಶಿಪ್ರಾಮಾಹಾತ್ಮ್ಯಮುತ್ತಮಂ ।
ಯಥಾಽಮೃತಭವಾ ಖ್ಯಾತಾ ಪಾತಾಲೇ ನಾಗಸಂಮತೇ ॥ ೧ ॥
ಭಿಕ್ಷಾರ್ಥಮೇಕದಾ ರುದ್ರೋ ನಾಗಲೋಕೇ ಬುಭುಕ್ಷಿತಃ ।
ಕರೇ ಕಪಾಲಮಾದಾಯ ಭೋಗವತ್ಯಾಂ ಸಮಾಗತಃ ॥ ೨ ॥
ಭಿಕ್ಷಾಂ ದೇಹಿ ವಚೋ ದೀನಂ ವಾಚಯಿತ್ವಾ ಗೃಹೇ ಗೃಹೇ ।
ಭಿಕ್ಷಾ ಕೇನಾಽಪಿ ನೋ ದತ್ತಾ ಕ್ಷುಧಿತಸ್ಯ ಚ ಧೂರ್ಜಟೇಃ ॥ ೩ ॥
ತದಾ ಕ್ರೋಧಾಭಿರಕ್ತಾಕ್ಷಃ ಶೂಲಪಾಣಿಃ ಕ್ಷುಧಾರ್ದಿತಃ ।
ಭ್ರಾಮಯಿತ್ವಾ ಪುರೀಂ ಸರ್ವಾಂ ಶನೈರ್ಬಹಿರ್ವಿನಿರ್ಯಯೌ ॥ ೪ ॥
ಏಕವಿಂಶತಿಕುಂಡಾನಿ ಪೀಯೂಷಸ್ಯ ದ್ವಿಜೋತ್ತಮ ।
ಯತ್ರ ತಿಷ್ಠಂತಿ ಸರ್ವಾಣಿ ನಾಗಲೋಕಸ್ಯ ರಕ್ಷಣೇ ॥ ೫ ॥

---

### ಕನ್ನಡದ ಅನುವಾದ

#### ಅಮೃತೋದ್ಭವಾನಾಮಕಥಾವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಮಹಾಬುದ್ಧಿಶಾಲಿಯಾದ ವ್ಯಾಸನೆ! ಉತ್ತಮವಾದ ಶಿಪ್ರಾಮಾಹಾತ್ಮ್ಯೆಯನ್ನು ಕೇಳು. ಈ ನದಿಯೇ ನಾಗರಿಗೆ ಪ್ರಿಯಾವಾಸವಾದ ಪಾತಾಳಲೋಕದಲ್ಲಿ ಅಮೃತೋದ್ಭವೆಯೆಂದು ಪ್ರಖ್ಯಾತವಾದುದನ್ನು ಹೇಳುವೆನು.

೨. ಒಮ್ಮೆ ಮಹಾದೇವನು ಹಸಿವುಗೊಂಡು ಕೈಯಲ್ಲಿ ಕಪಾಲವನ್ನು ಹಿಡಿದು ಭಿಕ್ಷೆಯನ್ನು ಬೇಡಲು ನಾಗಲೋಕದ ರಾಜಧಾನಿಯಾದ ಭೋಗವತೀ ನಗರಿಗೆ ಬಂದನು.

೩. ಕುಗ್ಗಿದ ದನಿಯಿಂದ ಅವನು "ಭವತಿ, ಭಿಕ್ಷಾಂ ದೇಹಿ" ಎಂಬುದಾಗಿ ಮನೆಮನೆಗೂ ಅಲೆದರೂ ಯಾರೂ ಹಸಿವಿನಿಂದ ಬಳಲಿದ ಆತನಿಗೆ ಭಿಕ್ಷೆಯನ್ನು ನೀಡಲಿಲ್ಲ.

೪. ಆಗಲೂ ತ್ರಿಶೂಲಪಾಣಿಯು ಹಸಿವನ್ನು ತಡೆಯಲಾರದೆ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಆ ಪಟ್ಟಣವನ್ನೆಲ್ಲ ಸುತ್ತಿ ಸುತ್ತಿ ಮೆಲ್ಲಮೆಲ್ಲಗೆ ಹೊರಗೆ ಬಂದನು.

೫. ಎಲೈ ಬ್ರಾಹ್ಮಣೋತ್ತಮನೆ! ನಾಗಲೋಕದ ಸಂರಕ್ಷಣೆಗಾಗಿ ಅಮೃತಪೂರಿತಗಳಾದ ಇಪ್ಪತ್ತೊಂದು ಕುಂಡಗಳೆಲ್ಲವೂ ಇದ್ದಲ್ಲಿಗೆ ಪರಮೇಶ್ವರನು ಬಂದನು.

ತತ್ರ ಗತ್ವಾ ಸ ಭಗವಾಂಛಂಭುಃ ಸರ್ವಾತ್ಮಸಂಭವಃ ।
ಅಪಿಬನ್ನೇತ್ರಮಾರ್ಗೇಣ ತೃತೀಯೇನ ಚ ಶಂಕರಃ ॥ ೬ ॥
ರಿಕ್ತಾನಿ ಪೀಯೂಷಕುಂಡಾನಿ ಕೃತ್ವಾ ತತ್ರೈವ ಸೋತ್ಥಿತಃ ।
ಕಂಪಿತಶ್ಚ ತದಾ ಲೋಕೋ ನಾಗಾನಾಂ ಸರ್ವತೋಮುಖಂ ॥ ೭ ॥
ಕಸ್ಯೇದಂ ಕರ್ಮ ಕಿಂ ಜಾತಂ ಸುಧಾ ಯಸ್ಮಾದಿತೋ ಗತಾ ।
ಇತ್ಯುಕ್ತ್ವಾ ಚೈವ ತೇ ಸರ್ವೇ ನಾಗಾ ವಾಸುಕಿಪುರೋಗಮಾಃ ॥ ೮ ॥
ಮಹದತಿಕ್ರಮಣೇ ಶಂಕಾಃ ಪುರಾತ್ತೇ ನಿರ್ಯಯುರ್ಬಹಿಃ ।
ಕಿಂ ಕುರ್ವಾಮ ಕ್ವ ಗಚ್ಛಾಮ ಕಸ್ಯೇದಂ ಹೇಲನಂ ಕೃತಂ ॥ ೯ ॥
ಯೇನಾಸ್ಮಾಕಂ ಕೋಪಿತೇನ ಹೃತಂ ಚಾಽಮೃತಮುತ್ತಮಂ ।
ಅಸ್ಮಾಕಂ ಜೀವನಂ ತಸ್ಮಾತ್ಕಥಂ ಜೀವಾಮ ಪನ್ನಗಾಃ ॥ ೧೦ ॥
ಇತ್ಯುಕ್ತ್ವಾ ಪನ್ನಗಾಃ ಸರ್ವೇ ಸಸ್ತ್ರೀಬಾಲಪರಿಗ್ರಹಾಃ ।
ಹರಿಂ ಚ ಜಗ್ಮುಃ ಶರಣಂ ಮನಸಾ ಪರಿಶಂಕಿತಾಃ ॥ ೧೧ ॥

---

೬. ಸರ್ವಶಕ್ತನೂ ಸರ್ವರ ಅಂತರ್ಯಾಮಿಯೂ ಆದ ಶಂಕರನು ಅಲ್ಲಿಗೆ ಹೋಗಿ ತನ್ನ ಮೂರನೆಯ ಹಣೆಗಣ್ಣಿನ ನೋಟದ ಮಾತ್ರದಿಂದಲೇ ಅಮೃತವೆಲ್ಲವನ್ನೂ ಸ್ವೀಕರಿಸಿಬಿಟ್ಟನು.

೭. ಇಂತು ಆ ಅಮೃತಕುಂಡಗಳನ್ನೆಲ್ಲ ಬರಿದುಮಾಡಿ ಪರಮೇಶ್ವರನು ಅಲ್ಲಿಯೇ ನಿಂತಿರಲು ನಾಗಲೋಕವು ಎಲ್ಲೆಡೆಗಳಲ್ಲಿಯೂ ನಡುಗತೊಡಗಿತು.

೮. "ಈ ಕೆಲಸವು ಯಾರಿಂದಾಯಿತು? ನಡೆದುದೇನು? ಅಮೃತವು ಇಲ್ಲಿಂದ ಮಾಯವಾದುದು ಹೇಗೆ?" ಇಂತೆಂದು ವಾಸಕಿಯೇ ಮೊದಲಾದ ನಾಗರು ತಮ್ಮಲ್ಲಿಯೇ ಮಾತನಾಡಿಕೊಂಡರು.

೯. ಯಾವ ಮಹಾತ್ಮರ ಆದರಾತಿಥ್ಯಗಳಲ್ಲಿ ಅತಿಕ್ರಮಣವಾಗಿರಬಹುದೆಂದು ಶಂಕಿಸಿ ಎಲ್ಲರೂ ನಗರದಿಂದ ಹೊರಕ್ಕೆಬಂದು ಚಿಂತಿಸತೊಡಗಿದರು. "ಈಗೇನು ಮಾಡೋಣ? ಎಲ್ಲಿಗೆ ಹೋಗೋಣ? ಯಾರಿಗೆ ನಾವು ಅನಾದರವನ್ನು ಮಾಡಿದೆವು?

೧೦. ನಮ್ಮಲ್ಲಿ ಕೋಪಗೊಂಡು ಉತ್ತಮವಾದ ಅಮೃತವನ್ನು ಯಾವನು ಅಪಹರಿಸಿದನು? ಅದೇ ನಮಗೆ ಆಹಾರವಾಗಿದ್ದಿತು. ಎಲೈ ನಾಗರಿರಾ! ಈಗ ಹೇಗೆ ಜೀವಿಸೋಣ!

೧೧. ಇಂತೆಂದು ನಾಗರೆಲ್ಲರೂ ಹೆಂಡಿರು, ಮಕ್ಕಳು, ಪರಿವಾರಗಳೊಡನೆ ಮನಸ್ಸಿನಲ್ಲಿ ಬಹಳ ಅಧೈರ್ಯವನ್ನು ತಾಳಿ ಶ್ರೀಮನ್ನಾರಾಯಣನನ್ನು ಶರಣ ಹೋದರು.

ತೇಷಾಮನುಗ್ರಹಾರ್ಥಾಯ ವಾಗುವಾಚಾಽಶರೀರಿಣೀ ।
ಶ್ರೂಯತಾಮುರಗಾಃ ಸರ್ವೇ ಯುಷ್ಮಾಭಿರ್ದೇವಹೇಲನಂ ॥ ೧೨ ॥
ಭಿಕ್ಷಾರ್ಥಮಾಗತಃ ಶಂಭುಃ ಕ್ಷುಧಾರ್ತಶ್ಚ ಗೃಹೇ ಗೃಹೇ ।
ವಿದಿತ್ವಾಽತಿಥಿವೇಲಾಯಾಂ ಕಪಾಲಕರಭಿಕ್ಷುಕಃ ॥ ೧೩ ॥
ದತ್ತಾ ನ ಭಿಕ್ಷಾ ಕೇನಾಽಪಿ ಭೋಗವತ್ಯಾಂ ಪಿನಾಕಿನಃ ।
ತದಾ ಬಹಿರ್ಗತೋ ನಾಥಃ ಕ್ಷುಧಿತೋ ಧರ್ಮವಿಗ್ರಹಃ ॥ ೧೪ ॥
ತೇನ ನಷ್ಟಾ ಸುಧಾ ಸರ್ವಾ ಕುಂಡಾಂತೇ ಪನ್ನಗೋತ್ತಮಾಃ ।
ಯೂಯಂ ಪ್ರಯಾತ ಪಾತಾಲಾನ್ಮಹಾಕಾಲವನೋತ್ತಮೇ ॥ ೧೫ ॥
ತತ್ರೈಕಾ ವೈ ಸರಿಚ್ಛ್ರೇಷ್ಠಾ ಶಿಪ್ರಾನಾಮೇತಿ ವಿಶ್ರುತಾ ।
ತ್ರೈಲೋಕ್ಯಪಾವನೀ ಹ್ಯೇಷಾ ಸರ್ವಕಾಮಫಲಪ್ರದಾ ॥ ೧೬ ॥
ಯಸ್ಯಾ ದರ್ಶನಮಾತ್ರೇಣ ಸರ್ವಪಾಪಕ್ಷಯೋ ಭವೇತ್ ।
ತತ್ರ ಗತ್ವಾ ಭವದ್ಭಿಶ್ಚ ಸ್ನಾನಂ ಕಾರ್ಯಂ ಯಥಾವಿಧಿ ॥ ೧೭ ॥

---

೧೨. ಅವರಲ್ಲಿ ಅನುಗ್ರಹವನ್ನುಂಟುಮಾಡುವುದಾಗಿ ಒಂದು ಅಶರೀರ ವಾಣಿಯು ಇಂತೆಂದು ಹೇಳಿತು. ಎಲೈ ನಾಗರಿರಾ! ನೀವೆಲ್ಲರೂ ಕೇಳಿರಿ. ನೀವು ದೇವದೇವನಾದ ಮಹಾದೇವನಿಗೆ ಅವಮಾನವನ್ನು ಮಾಡಿರುವಿರಿ.

೧೩. ಹಸಿವಿನಿಂದ ಬಳಲಿದ ಆ ಪರಮೇಶ್ವರನು ಮನೆಮನೆಗೂ ಅತಿಥಿ ಸತ್ಕಾರದವೇಳೆಯನ್ನು ತಿಳಿದೇ ಕೈಯಲ್ಲಿ ಕಪಾಲವನ್ನು ಹಿಡಿದು ಭಿಕ್ಷೆಯನ್ನು ಕೇಳುತ್ತ ಅಲೆದನು.

೧೪. ಈ ಭೋಗವತಿಯ ವಿಶಾಲನಗರದಲ್ಲಿ ಯಾವನೂ ಪಿನಾಕಿಗೆ ಭಿಕ್ಷೆ ಯನ್ನು ನೀಡಲಿಲ್ಲ. ಆದುದರಿಂದ ಧರ್ಮವೇ ಸ್ವರೂಪವಾಗಿರುವ ಆ ಲೋಕ ನಾಥನು ಹೊರಕ್ಕೆ ಹೊರಟನು.

೧೫. ಎಲೈ ಪನ್ನಗಶ್ರೇಷ್ಠರಿರಾ! ಅದರಿಂದಲೇ ಕುಂಡಗಳಲ್ಲಿದ್ದ ಅಮೃತವು ನಿಶ್ಶೇಷವಾಗಿ ನಷ್ಟವಾಯಿತು. ಈಗ ನೀವು ಪಾತಾಳಲೋಕವನ್ನು ಬಿಟ್ಟು ಮಹಾಕಾಳವನವೆಂಬ ಉತ್ತಮಕ್ಷೇತ್ರಕ್ಕೆ ಹೋಗಿರಿ.

೧೬. ಅಲ್ಲಿ ಶಿಪ್ರಾ ಎಂಬ ಹೆಸರಿನಿಂದ ಪ್ರಖ್ಯಾತವಾದ ಒಂದು ಸರ್ವೋತ್ತಮವಾದ ನದಿಯಿರುವುದು. ಈ ನದಿಯು ಮೂರು ಲೋಕಗಳನ್ನು ಪವಿತ್ರಗೊಳಿಸುವುದೂ ಸಕಲಾಭೀಷ್ಟಗಳನ್ನು ಕೊಡುವುದೂ ಆಗಿರುವುದು.

೧೭. ಅದರ ದರ್ಶನಮಾತ್ರದಿಂದಲೇ ಪ್ರಾಣಿಯ ಸಕಲಪಾತಕಗಳೂ ನಾಶವಾಗುವುವು. ಅಲ್ಲಿಗೆ ಹೋಗಿ ನೀವೆಲ್ಲರೂ ಯಥಾವಿಧಿಯಾಗಿ ಸ್ನಾನಗಳನ್ನು ಮಾಡಬೇಕು.

ಭಜನಂ ದೇವದೇವಸ್ಯ ತತಃ ಪೂಜಾಂ ಕರಿಷ್ಯಥ ।
ಭಜನಾದ್ದೇವದೇವಸ್ಯ ಶಿಪ್ರಾಸಲಿಲಮಜ್ಜನಾತ್ ।
ಭವಿಷ್ಯತಿ ತತಃ ಸದ್ಯಃ ಸುಧಾ ಲೋಕೇ ಪುರೇವ ವಃ ॥ ೧೮ ॥
ಇತಿ ಸಂಭಾಷ್ಯ ತಾನ್ನಾಗಾಂಸ್ತತ್ರೈವಾಂತರಧೀಯತ ॥ ೧೯ ॥
ವಾಣೀಂ ವ್ಯಾಸ ತದಾ ದಿವ್ಯಾಂ ಸಹಸಾ ಲೋಕಸಾಕ್ಷಿಣೀಂ ।
ಶ್ರುತ್ವಾ ದೇವೇರಿತಾಂ ವಾಣೀಂ ತಥೇತ್ಯುಕ್ತ್ವಾ ಚ ಪನ್ನಗಾಃ ।
ಸ್ತ್ರೀಬಾಲವೃದ್ಧಸಹಿತಾ ಮಹಾಕಾಲವನಂ ಯಯುಃ ॥ ೨೦ ॥
ತತ್ರ ಗತ್ವಾ ದದೃಶುಸ್ತೇ ನದೀಂ ತ್ರೈಲೋಕ್ಯವಂದಿತಾಂ ।
ಸರ್ವತ್ರ ಕುಸುಮಾಕೀರ್ಣಾಂ ತರುಚ್ಛಾಯಾಭಿರಾಶ್ರಿತಾಂ ॥ ೨೧ ॥
ಹಂಸಕಾರಂಡವಾಕೀರ್ಣಾಂ ಮಣಿಮುಕ್ತಾಪ್ರವಾಲಕಾಂ ।
ಮಣಿಸೋಪಾನರಚಿತಾಂ ಪದ್ಮಖಂಡೈಶ್ಚ ಮಂಡಿತಾಂ ॥ ೨೨ ॥
ಸಾಯಂ ಪ್ರಾತಃ ಸ್ಥಿತಾ ವಿಪ್ರಾಃ ಸಂಧ್ಯೋಪಾಸನತತ್ಪರಾಃ ।
ಋಷಯಶ್ಚ ಮಹಾಭಾಗಾ ಭೃಗ್ವಂಗಿರಸಮುಖ್ಯಕಾಃ ॥ ೨೩ ॥

---

೧೮. ಬಳಿಕ ಮಹಾಕಾಲೇಶ್ವರನ ಸೇವೆಯನ್ನು ಆಮೇಲೆ ಪೂಜೆಯನ್ನೂ ಮಾಡಿರಿ. ಆ ದೇವದೇವನನ್ನು ಭಜಿಸುವುದರಿಂದಲೂ ಶಿಪ್ರಾನದಿಯಲ್ಲಿ ಮಾಡುವ ಸ್ನಾನಗಳಿಂದಲೂ ನಿಮ್ಮ ಲೋಕದಲ್ಲಿ ಹಿಂದಿನಂತೆಯೇ ಅಮೃತವು ನಿಮಿಷ ಮಾತ್ರದಲ್ಲಿಯೆ ಪುನಃ ಸಿದ್ಧವಾಗುವುದು.

೧೯–೨೦. ಇಂತೆಂದು ಆ ನಾಗರಿಗೆ ಹೇಳಿ ಅಶರೀರವಾಣಿಯು ಸುಮ್ಮನಾಗಲು ದಿವ್ಯವೂ ಸಕಲಲೋಕಸಾಕ್ಷಿಯೂ ಆದ ಆ ವಾಣಿಯನ್ನು ಕೇಳಿ ದೇವರ ಆಜ್ಞೆಯೆಂದು ತಿಳಿದು ಹಾಗೆಯೇ ಆಗಲೆಂದು ಹೇಳಿಕೊಂಡು ಎಲ್ಲರೂ ಹೆಂಗಸರು, ಬಾಲಕರು, ವೃದ್ಧರೊಡನೆ ಹೊರಟು ಅವರು ಮಹಾಕಾಲ ವನವನ್ನು ಸೇರಿದರು.

೨೧. ಅಲ್ಲಿಗೆ ಹೋಗಿ ಮೂರುಲೋಕಗಳ ಜನರಿಂದ ವಂದಿತವೂ, ಎಲ್ಲೆಲ್ಲಿಯೂ ಅರಳಿದ ಹೂವುಗಳಿಂದ ತುಂಬಿರುವುದೂ, ಎರಡು ದಡಗಳಲ್ಲಿಯೂ ಮಹಾವೃಕ್ಷಗಳ ನಿಬಿಡಚ್ಛಾಯೆಯುಳ್ಳದುದೂ ಆದ ಆ ನದಿಯನ್ನು ನಾಗರು ಕಾಣುವವರಾದರು.

೨೨. ಆ ನದಿಯು ಹಂಸ, ಕಾರಂಡವಾದಿ ಜಲಪಕ್ಷಿಗಳಿಗೆ ಆವಾಸವಾಗಿ, ನವರತ್ನಗಳು, ಮುತ್ತು, ಹವಳಗಳಿಂದ ಶೋಭಿಸುತ್ತ, ಎರಡೂ ಕಡೆಗಳಲ್ಲಿ ಮಣಿಸೋಪಾನಗಳುಳ್ಳುದುದಾಗಿ ಪದ್ಮಖಂಡಗಳಿಂದಲಂಕೃತವಾಗಿದ್ದಿತು.

೨೩. ಪ್ರತಿದಿನದ ಸಾಯಂಕಾಲ ಪ್ರಾತಃಕಾಲಗಳಲ್ಲಿ ಬ್ರಾಹ್ಮಣೋತ್ತಮರೂ ಭೃಗು, ಅಂಗಿರಸರೇ ಮೊದಲಾದ ಮಹಾತ್ಮರಾದ ಋಷಿವರ್ಯರೂ ಎರಡು ದಡಗಳಲ್ಲಿಯೂ ಸಂಧ್ಯಾನಿತ್ಯಕರ್ಮಗಳಲ್ಲಿ ನಿರತರಾಗಿದ್ದರು.

ಗಂಧರ್ವಾಶ್ಚೈವ ತತ್ರೈವ ದೇವರ್ಷಿರ್ನಾರದಾದಯಃ ।
ವಸವಶ್ಚ ತಥಾದಿತ್ಯಾ ಹ್ಯಶ್ವಿನೌ ಮರುತಸ್ತಥಾ ॥ ೨೪ ॥
ರುದ್ರಾಃ ಸಾಧ್ಯಾಶ್ಚ ದೇವಾಶ್ಚ ಪಿತರೋ ವಿಮಲಾಶಯಾಃ ।
ಉಪಾಸತೇ ಚ ಶಿಪ್ರಾಂ ವೈ ಸಂಧ್ಯಾವೇಲಾಂ ಸಮಾಹಿತಾಃ ॥ ೨೫ ॥
ಋಷಿಪತ್ನ್ಯೋ ಮಹಾಭಾಗಾ ದೇವಕನ್ಯಾಃ ಪ್ಸರೋಗಣಾಃ ।
ಪತಿವ್ರತಾ ಮಹಾಭಾಗಾಸ್ತತ್ರೈವ ಪತಿಭಿಃ ಸಹ ॥ ೨೬ ॥
ಉಪಾಸಂತೇ ಸದಾಚಾರಾ ವರ್ಣಾಶ್ರಮಪುರೋಗಮಾಃ ।
ರಾಜರ್ಷಯಃ ಸಮಾಸೀನಾ ನಿರ್ವಾಣಪದವೀಂ ಗತಾಃ ॥ ೨೭ ॥
ಸಿದ್ಧಾ ಯೋಗೇಶ್ವರಾಃ ಶಾಂತಾಸ್ತಾಪಸಾಃ ಶಂಸಿತವ್ರತಾಃ ।
ನಾನಾದೇಶೋದ್ಭವಾ ಲೋಕಾ ಯಾತ್ರಿಣಃ ಸಮುಪಾಗತಾಃ ॥ ೨೮ ॥
ಶಿಪ್ರಾಕೂಲೇ ಸಮಾಸೀನಾ ನರನಾರೀಸಮನ್ವಿತಾಃ ।
ಕುರ್ವತೇ ತತ್ರ ಧರ್ಮಾಣಿ ಮಹಾದಾನಾನಿ ಸರ್ವಶಃ ॥ ೨೯ ॥
ಏವಂ ವಿಧಾಂ ಸಮಾಲೋಕ್ಯ ವ್ಯಾಸ ತ್ರೈಲೋಕ್ಯವಂದಿತಾಂ ।
ನದೀಂ ಸುಧಾಮಯೀಂ ಸರ್ವಾಂ ನಾಗಾಃ ಪರಮಹರ್ಷಿತಾಃ ॥ ೩೦ ॥

---

೨೪–೨೫. ಅಲ್ಲಿಯೇ ಗಂಧರ್ವರೂ, ನಾರದನೇ ಮುಂತಾದ ದೇವರ್ಷಿಗಳೂ, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಅಶ್ವಿನೀದೇವತೆಗಳೂ, ಸಪ್ತ ಮರುತ್ತುಗಳೂ, ಏಕಾದಶರುದ್ರರೂ, ಸಾಧ್ಯರೂ, ದೇವತೆಗಳೂ, ಪಿತೃಗಳೂ, ನಿರ್ಮಲಮನಸ್ಕರೂ ಏಕಾಗ್ರಚಿತ್ತರೂ ಆಗಿ ಆ ಶಿಪ್ರಾತೀರಗಳಲ್ಲಿಯೇ ಸಂಧ್ಯಾ ಸಮಯಗಳಲ್ಲಿ ನಿತ್ಯೋಪಾಸನೆಯನ್ನು ಮಾಡುತ್ತಿರುವರು.

೨೬–೨೭. ಮಹಾಭಾಗ್ಯಶಾಲಿಗಳಾದ ಋಷಿಪತ್ನಿಯರೂ, ದೇವಕನ್ಯೆಯರೂ, ಅಪ್ಸರಸ್ತ್ರೀಯರ ಗಡಣಗಳೂ, ಪತಿಗಳನ್ನೆಡಬಿಡದಿರುವ ಪತಿವ್ರತೆಯರಾದ ಅನೇಕರೂ ತಮ್ಮತಮ್ಮ ವರ್ಣಾಶ್ರಮಧರ್ಮಗಳನ್ನು ಪಾಲಿಸುತ್ತ ಸದಾಚಾರಗಳನ್ನೇ ಉಪಾಸನೆಮಾಡುತ್ತಿರುವರು. ಅಲ್ಲಿಯೇ ಪರಮನಿರ್ವಾಣ ಪದವಿಯನ್ನು ಹೊಂದಿರುವ ರಾಜರ್ಷಿಶ್ರೇಷ್ಠರೂ ಕುಳಿತಿರುವರು.

೨೮. ಸಿದ್ಧರು, ಯೋಗಿಗಳಲ್ಲಿ ಸರ್ವೋತ್ತಮರು, ಪ್ರಶಾಂತರೂ, ನಿಯತ ವ್ರತರೂ ಆದ ತಪಸ್ವಿಗಳೂ, ಅನೇಕ ದೇಶಗಳಲ್ಲಿ ಹುಟ್ಟಿ ಬೆಳೆದ ಸಾಮಾನ್ಯ ಜನರೂ ಸಹ ಯಾತ್ರೆಯ ಪ್ರಸಂಗದಲ್ಲಿ ಅಲ್ಲಿಗೆ ಬಂದು ನೆಲಸಿರುವರು.

೨೯. ಅನೇಕ ದಂಪತಿಗಳು ಗುಂಪುಗುಂಪಾಗಿ ಶಿಪ್ರಾನದಿಯ ದಡಗಳಲ್ಲಿ ಕುಳಿತುಕೊಂಡು ಪುಣ್ಯಪ್ರದಗಳಾದ ಧರ್ಮಕಾರ್ಯಗಳನ್ನೂ ಮಹಾದಾನಾದಿಗಳನ್ನೂ ಮಾಡುತ್ತಿರುವರು.

೩೦. ಎಲೈ ವ್ಯಾಸನೆ! ಇಂತು ತ್ರೈಲೋಕ್ಯವಂದಿತವಾದುದೂ ಅಮೃತ

ಸ್ನಾನದಾನಾದಿಕಂ ಕೃತ್ವಾ ಮಹಾದೇವಮುಪಾಸಿರೇ ।
ವೇದೋಕ್ತವಿಧಿನಾ ಸರ್ವೇ ಭಕ್ತ್ಯಾ ಪನ್ನಗಸತ್ತಮಾಃ ॥ ೩೧ ॥
ಪಂಚಾಂಗಪೂರ್ವಕಂ ಸ್ನಾನಂ ಯಕ್ಷಕರ್ದಮಲೇಪನಂ ।
ಅಮ್ಲಾನಪಂಕಜಾಂ ಮಾಲಾಂ ನಾನಾಪುಷ್ಪಾಕ್ಷತೈಸ್ತಥಾ ॥ ೩೨ ॥
ವಾಸಃಸ್ರಗನುಲೇಪಾದ್ಯೈಶ್ಚಂದನೈರ್ಗಂಧಧೂಪಕೈಃ ।
ದೀಪದಾನಾದಿನೈವೇದ್ಯೈಸ್ತಾಂಬೂಲಮಥ ದಕ್ಷಿಣಾಃ ॥ ೩೩ ॥
ಕರ್ಪೂರಾರ್ತಿಕರಾಃ ಸರ್ವೇ ಮಹಾದೇವಮುಪಾಗತಾಃ ।
ಸ್ತುತಿಮಾರೇಭಿರೇ ಕರ್ತುಂ ಸುಧಾಕಾಮಾಸ್ತದೋರಗಾಃ ॥ ೩೪ ॥

ಸರ್ಪಾ ಊಚುಃ:—

ನಮೋಽನಂತಾಯ ಬೃಹತೇ ಸರ್ವದೇವ ನಮೋನಮಃ ।
ಚಂದ್ರಮೌಲೇ ನಮಸ್ತೇಽಸ್ತು ಕಪರ್ದಿನ್ಪರಮಾತ್ಮನೇ ।
ವೃಷಧ್ವಜ ನಮಸ್ತೇಽಸ್ತು ತ್ರಿಶೂಲವರಧಾರಿಣೇ ॥ ೩೫ ॥

---

ವಾಹಿನಿಯಾದುದೂ ಆದ ಶಿಪ್ರಾನದಿಯನ್ನು ಕಂಡು ಆ ನಾಗರೆಲ್ಲರೂ ಅತ್ಯಂತ ಹರ್ಷಭರಿತರಾದರು.

೩೧. ಆ ಪನ್ನಗಶ್ರೇಷ್ಠರೆಲ್ಲರೂ ವೇದಗಳಲ್ಲಿ ವಿಧಿಸಿರುವ ಕ್ರಮವನ್ನನುಸರಿಸಿ ಸ್ನಾನ, ದಾನಗಳನ್ನು ಮಾಡಿದ ಬಳಿಕ ಮಹಾಕಾಳೇಶ್ವರನನ್ನು ಭಕ್ತಿಯಿಂದ ಸೇವಿಸತೊಡಗಿದರು.

೩೨. ಆ ದೇವದೇವನಿಗೆ ಪಂಚಾಂಗ ಸೇವೆಯನ್ನು ಮಾಡಿ ಬಳಿಕ ಸ್ನಾನವನ್ನೂ, ಯಕ್ಷಕರ್ದಮವೇ ಮೊದಲಾದ ಅನುಲೇಪನಗಳನ್ನೂ, ಬಾಡದಿರುವ ಕಮಲಗಳ ಮಾಲೆಯನ್ನೂ, ಬಹುವಿಧಗಳಾದ ಹೂವುಗಳನ್ನೂ, ಅಕ್ಷತೆಗಳನ್ನೂ ಸಮರ್ಪಿಸಿದರು.

೩೩. ವಸ್ತ್ರಗಳು, ಪುಷ್ಪಹಾರಗಳು, ಅನುಲೇಪನಗಳು, ಶ್ರೀಗಂಧ, ಚಂದನ, ಧೂಪಗಳು, ದೀಪ, ನೈವೇದ್ಯ, ತಾಂಬೂಲ, ದಕ್ಷಿಣೆ, ಮೊದಲಾದುದುವನ್ನು ಯಥಾಶಕ್ತಿಯಾಗಿ ನಿವೇದಿಸಿದರು.

೩೪. ಅಮೃತಾಪೇಕ್ಷಿಗಳಾದ ಸಮಸ್ತನಾಗರೂ ಕರ್ಪೂರದ ನಿರಾಜನಗಳನ್ನು ಹಿಡಿದುಕೊಂಡು ಮಹಾದೇವನ ಬಳಿಗೈದಿ ಆತನನ್ನು ಈ ಪ್ರಕಾರವಾಗಿ ಸ್ತೋತ್ರಮಾಡಲುಪಕ್ರಮಿಸಿದರು.

೩೫. ಸರ್ಪರು ಹೇಳುತ್ತಾರೆ:—ಅಂತ್ಯರಹಿತನೂ, ಮಹತ್ತರನೂ, ದೇವಾಧಿದೇವನೂ ಆದ ಓ ಸ್ವಾಮಿಯೆ! ನಿನಗೆ ನಮಸ್ಕಾರವು. ಚಂದ್ರಖಂಡವನ್ನು ಜಟಾಜೂಟದಲ್ಲಿ ಧರಿಸಿದವನೂ, ಕಪರ್ದಿಯೂ, ಪರಮಾತ್ಮನೂ ಆದ ನಿನ್ನನ್ನು ನಮಸ್ಕರಿಸುವೆವು.

ತ್ರ್ಯಂಬಕಾಯ ನಮಸ್ತೇಽಸ್ತು ಜಟಾಮುಕುಟಧಾರಿಣೇ ।
ಶೇಷಹಾರ ನಮಸ್ತೇಽಸ್ತು ಚಿತಾಭಸ್ಮಾಂಗಧಾರಿಣೇ ॥ ೩೬ ॥
ಕೃತ್ತಿವಾಸ ನಮಸ್ತೇಽಸ್ತು ಗಿರೀಶಾಯ ನಮೋನಮಃ ।
ತ್ರಿಪುರಘ್ನ ನಮಸ್ತೇಽಸ್ತು ಸ್ಮರಾಂತಕ ನಮೋಽಸ್ತುತೇ ॥ ೩೭ ॥
ಮೃಗವ್ಯಾಧ ನಮಸ್ತೇಽಸ್ತು ಘಸ್ಮರಾಯ ನಮೋನಮಃ ।
ಶಂಕರಾತ್ಮನ್ನಮಸ್ತೇಽಸ್ತು ಸರ್ವಕಾಮಫಲಪ್ರದ ॥ ೩೮ ॥
ಸರ್ವಸಾಕ್ಷಿನ್ನಮಸ್ತೇಽಸ್ತು ಸರ್ವಭೂತಾಶಯಾಕೃತೇ ।
ಸರ್ವಾಧಾರ ನಮಸ್ತೇಽಸ್ತು ಸರ್ವಶಕ್ತಿಧರಾಯ ಚ ॥ ೩೯ ॥
ಸರ್ವಭೋಗ ನಮಸ್ತೇಽಸ್ತು ಸರ್ವಬೀಜಸಮುದ್ಭವ ।
ದಿವ್ಯಹಾಸ ನಮಸ್ತೇಽಸ್ತು ನಮೋಽಮೃತಸ್ರವಾಯ ಚ ॥ ೪೦ ॥
ಕಾಮ್ಯಕಾಮ ನಮಸ್ತೇಽಸ್ತು ಸರ್ವಕಾಮವರಪ್ರದ ।
ನಮಃ ಶಿವಾಯ ಶಾಂತಾಯ ಪಶೂನಾಂ ಪತಯೇ ನಮಃ ॥ ೪೧ ॥
ನಮೋ ಮೃಡಾಯ ದಾಂತಾಯ ಶಾಂತರೂಪಾಯ ವೈ ನಮಃ ॥ ೪೨ ॥

---

೩೬. ಧ್ವಜದಲ್ಲಿ ವೃಷಭಚಿಹ್ನೆಯುಳ್ಳವನೂ, ತ್ರಿಶೂಲಧಾರಿಯೂ, ತ್ರ್ಯಂಬಕನೂ, ಜಟಾಮುಕುಟಭೂಷಿತನೂ ಆದ ನಿನಗೆ ನಮಸ್ಕಾರವು.

೩೭. ಆದಿಶೇಷನನ್ನು ಹಾರವಾಗಿ ಧರಿಸಿದವನೂ, ಚಿತೆಯ ಬೂದಿಯನ್ನು ಬಳಿದುಕೊಂಡಿರುವವನೂ, ಗಜಚರ್ಮವನ್ನು ಹೊದ್ದವನೂ, ಗಿರೀಶನೂ ಆದ ನಿನಗೆ ನಮಸ್ಕಾರವು.

೩೮. ತ್ರಿಪುರಗಳನ್ನು ನಾಶಮಾಡಿದವನೂ, ಮನ್ಮಥನನ್ನು ಕೊನೆಗಾಣಿಸಿದವನೂ, ಮೃಗವ್ಯಾಧನೂ, ಮಹಾರುದ್ರನೂ ಆದ ನಿನಗೆ ನಮಸ್ಕಾರವು.

೩೯. ಸುಖಪ್ರದನಾದ ಅಂತರಾತ್ಮನೂ, ಸಕಲಾಭೀಷ್ಟಗಳನ್ನು ಕೊಡುವವನೂ, ಸರ್ವಸಾಕ್ಷಿಯೂ, ಸಕಲ ಪ್ರಾಣಿಗಳ ಮನಸ್ಸಿನ ಸ್ವರೂಪನೂ ಆದ ನಿನಗೆ ನಮಸ್ಕಾರವಿರಲಿ.

೪೦. ಸಕಲಕ್ಕೂ ಆಧಾರಭೂತನಾಗಿ, ಸಕಲಶಕ್ತಿಗಳಿಗೆ ನಿವಾಸಭೂತನಾಗಿ, ಸಕಲಭೋಗಸಹಿತನಾಗಿ, ಸಕಲಕ್ಕೂ ಬೀಜಭೂತನಾಗಿ ಬಹುರೂಪಗಳಿಂದ ಕಾಣಿಸುವವನಾದ ನಿನಗೆ ನಮಸ್ಕಾರವು.

೪೧. ದಿವ್ಯವಾದ ಅಟ್ಟಹಾಸವುಳ್ಳವನೂ, ಅಮೃತವನ್ನು ಹೊರಗೆಡಹುವವನೂ, ಅವಾಪ್ತಕಾಮನೂ, ಸರ್ವಕಾಮಗಳಿಗೂ ವರಪ್ರದನೂ ಆಗಿರುವ ನಿನಗೆ ನಮಸ್ಕಾರವು.

೪೨. ಮಂಗಳಕರನೂ, ಪ್ರಶಾಂತನೂ, ಪ್ರಾಣಿಗಳೆಂಬ ಪಶುಗಳಿಗೆ ಅಧಿಪತಿಯೂ, ಮೃಡನೂ, ಇಂದ್ರಿಯನಿಗ್ರಹಪರನೂ, ಪ್ರಶಾಂತಮೂರ್ತಿಯೂ ಆದ ನಿನ್ನನ್ನು ನಮಸ್ಕರಿಸುವೆವು.

ಏವಂ ಪ್ರಸಾದಿತೋ ನಾಗೈರ್ಭಗವಾನ್ ವೃಷಭಧ್ವಜಃ ।
ಪ್ರಸನ್ನವದನೋ ಭೂತ್ವಾ ಪ್ರತ್ಯಕ್ಷಃ ಪ್ರಾಹ ಪನ್ನಗಾನ್ ॥ ೪೩ ॥

ಶ್ರೀ ಮಹಾದೇವ ಉವಾಚ:—

ಶೃಣುಧ್ವಮುರಗಾಃ ಸರ್ವೇ ವಚಸ್ತಥ್ಯಂ ವದಾಮಿ ವಃ ।
ನಾಗಲೋಕೇ ಪುರಾ ನಿತ್ಯಂ ಭಿಕ್ಷಾರ್ಥಂ ಚಾಽಽಗತೋಽಸ್ಮ್ಯಹಂ ॥ ೪೪ ॥
ಗೃಹೇ ಗೃಹೇ ಭೋಗವತ್ಯಾಂ ವ್ಯಚರನ್ಕ್ಷುಧಿತೋ ಭೃಶಂ ।
ಕಪಾಲಂ ಚ ಕರೇ ಕೃತ್ವಾ ಧೃತ್ವಾ ಕಂಥಾಂ ಸುಚೀರಕಾಂ ॥ ೪೫ ॥
ಅಪ್ರಾಪ್ತಭಿಕ್ಷೋ ಭಿಕ್ಷಾರ್ಥೀ ಪುನರಾಗಾಂ ತತೋ ಗೃಹಂ ।
ತೇನ ಪಾಪಪ್ರಸಂಗೇನ ಸುಧಾ ನಷ್ಟಾ ಚ ವಃ ಸ್ಥಲಾತ್ ॥ ೪೬ ॥
ಕಿಂಚಿತ್ಪುಣ್ಯಪ್ರಸಂಗೇನ ಮಹಾಕಾಲವನೋತ್ತಮೇ ।
ಯೂಯಂ ಪ್ರಾಪ್ತಾ ಮಹಾಭಾಗಾ ಹಿತ್ವಾ ನಾಗಾಲಯೋತ್ತಮಂ ॥೪೭॥
ಆಬಾಲವೃದ್ಧೈಃ ಸಸ್ತ್ರೀಭಿರ್ದೃಷ್ಟಾ ಶಿಪ್ರಾ ಸರಿದ್ವರಾ ।
ಯಸ್ಯಾ ದರ್ಶನಮಾತ್ರೇಣ ಸುನಿಷ್ಪಾಪೋಽಸ್ಮ್ಯಹಂ ಪುರಾ ॥ ೪೮ ॥

---

೪೩. ಇಂತು ನಾಗರಿಂದ ಸ್ತೋತ್ರಮಾಡಲ್ಪಟ್ಟವನಾಗಿ ವೃಷಭವಾಹನನಾದ ಪರಮೇಶ್ವರನು ಪ್ರಸನ್ನಮುಖದಿಂದ ದರ್ಶನವನ್ನು ಕೊಟ್ಟು ನಾಗರನ್ನು ಕುರಿತು ಇಂತೆಂದನು.

೪೪. ಮಹಾದೇವನು ಹೇಳುತ್ತಾನೆ:—"ಅಯ್ಯಾ ನಾಗರಿರಾ! ನೀವೆಲ್ಲರೂ ಕೇಳಿರಿ. ನಿಜವಾಗಿ ನಡೆದುದನ್ನು ನಿಮಗೆ ಹೇಳುವೆನು. ಹಿಂದೆ ನಾನು ನಾಗಲೋಕದಲ್ಲಿ ನಿತ್ಯದಲ್ಲಿಯೂ ಅಲೆದಾಡುತ್ತಿದ್ದೆನು.

೪೫. ನಿಮ್ಮ ರಾಜಧಾನಿಯಾದ ಭೋಗವತಿಯಲ್ಲಿ ಬಹಳವಾಗಿ ಹಸಿವುಗೊಂಡು ಕೈಯಲ್ಲಿ ಕಪಾಲವನ್ನು ಹಿಡಿದು, ಕಂಕುಳಿನಲ್ಲಿ ಜೋಳಿಗೆಯನ್ನೇರಿಸಿ ಮನೆಮನೆಗೂ ತಿರುಗಿದೆನು.

೪೬. ಭಿಕ್ಷಾರ್ಥಿಯಾದ ನಾನು ಏನನ್ನೂ ಪಡೆಯದೆ ಹಿಂದಿರುಗಿದೆನು. ಅತಿಥಿಗೆ ಅನ್ನವನ್ನು ನೀಡದ ಈ ಪಾಪದ ಫಲವಾಗಿ ಅಮೃತವು ನಿಮ್ಮ ಲೋಕದಲ್ಲಿ ನಷ್ಟವಾಯಿತು.

೪೭. ಎಲೈ ಮಹಾಭಾಗ್ಯಶಾಲಿಗಳಿರಾ! ನಿಮ್ಮಲ್ಲಿರುವ ಸ್ವಲ್ಪವಾದ ಪುಣ್ಯದ ಫಲವಾಗಿಯೇ ನೀವೆಲ್ಲರೂ ಉತ್ತಮವಾದ ನಾಗಲೋಕವನ್ನು ಬಿಟ್ಟು ದಿವ್ಯಕ್ಷೇತ್ರವಾದ ಈ ಮಹಾಕಾಲವನವನ್ನು ಸೇರಿರುವಿರಿ.

೪೮. ಬಾಲರು, ವೃದ್ಧರು, ಸ್ತ್ರೀಯರೇ ಮುಂತಾದವರೊಡನೆ ನೀವೆಲ್ಲರೂ ಈ ಸರ್ವೋತ್ತಮವಾದ ಶಿಪ್ರಾನದಿಯನ್ನು ಸಂದರ್ಶಿಸಿದಿರಿ; ಸೇವಿಸಿದಿರಿ. ಇದನ್ನು ನೋಡಿದಮಾತ್ರದಿಂದಲೇ ನಾನೂ ಸಹ ಪಾಪರಹಿತನಾದೆನು.

**ಶಿಪ್ರಾಯಾಂ ಸ್ನಾನಜಂ ಪುಣ್ಯಂ ವಕ್ತುಂ ಶಕ್ತೋ ನ ಕೀದೃಶಂ ।**
**ದರ್ಶನಾಜ್ಜಾಯತೇ ಶಂಭುಸ್ತತ್ಕ್ಷಣಾದ್ಭುವಿ ಪನ್ನಗಾಃ ॥ ೪೯ ॥**
**ಯಸ್ಮಾತ್ ಸ್ನಾನಂ ಕೃತಂ ಸರ್ವೈಃ ಶಿಪ್ರಾಯಾಂ ಪನ್ನಗೋತ್ತಮೈಃ ।**
**ತೇನ ಪುಣ್ಯಪ್ರಭಾವೇನ ಸುಧಾಽಸ್ತು ವೋ ಗೃಹೇ ಗೃಹೇ ।**
**ನೀತ್ವಾ ಶಿಪ್ರೋದಕಂ ಪುಣ್ಯಂ ಕುಂಡೇಷು ಪರಿಷಿಂಚತ ॥ ೫೦ ॥**
**ತೇನೈತಾನಿ ಚ ಕುಂಡಾನಿ ಅಮೃತಾನ್ಯೇಕವಿಂಶತಿಃ**
**ಸಂಪೂರ್ಣಾನಿ ಭವಿಷ್ಯಂತಿ ಸ್ಥಿರಾಣಿ ಪನ್ನಗೋತ್ತಮಾಃ । ॥ ೫೧ ॥**
**ತಥೇತ್ಯುಕ್ತ್ವಾ ಚ ತೇ ಸರ್ವೇ ಧೃತ್ವಾ ಶಿಪ್ರೋದಕಂ ಕರೈಃ ।**
**ಗತಾಸ್ತೇ ವೈ ಸ್ವಕಂ ಲೋಕಂ ನಮಸ್ಕೃತ್ವಾ ಮಹೇಶ್ವರಂ ॥ ೫೨ ॥**
**ತತಃ ಪ್ರಭೃತಿ ಸಾ ಶಿಪ್ರಾ ನಾಗಲೋಕೇಽಮೃತೋದ್ಭವಾ ।**
**ಸರ್ವಲೋಕೇಷು ವಿಖ್ಯಾತಾ ವ್ಯಾಸ ಶಿಪ್ರಾಽಮೃತೋದ್ಭವಾ ॥ ೫೩ ॥**
**ಯೇ ತು ತಸ್ಯಾಂ ಪ್ರಕುರ್ವಂತಿ ನರಾಃ ಸ್ನಾನಾದಿಕಂ ಭುವಿ ।**
**ನ ತೇಷಾಂ ದುಷ್ಕೃತಂ ಕಿಂಚಿನ್ನಾಪದೋ ನ ಚ ದುರ್ಗತಿಃ ॥ ೫೪ ॥**

---

೪೯. ಶಿಪ್ರಾನದಿಯಲ್ಲಿ ಮಾಡಿದ ಸ್ನಾನದಿಂದುಂಟಾದ ಪುಣ್ಯವು ಎಂತಹುದೆಂದು ಹೇಳಲು ನಾನೂ ಶಕ್ತನಲ್ಲ. ಪನ್ನಗರಿರಾ! ಅದರ ದರ್ಶನದಿಂದಲೇ ಭೂಲೋಕದಲ್ಲಿ ನಿಮಿಷಮಾತ್ರದಲ್ಲಿ ಪರಮೇಶ್ವರನ ಪ್ರಸಾದವು ಲಭಿಸುವುದರಲ್ಲಿ ಸಂದೇಹವಿಲ್ಲ.

೫೦. ಪನ್ನಗಶ್ರೇಷ್ಠರಾದ ನೀವೆಲ್ಲರೂ ಶಿಪ್ರಾನದಿಯಲ್ಲಿ ಸ್ನಾನವನ್ನು ಮಾಡಿರುವಿರಾದುದರಿಂದ ಅದರ ಪುಣ್ಯದ ಫಲವಾಗಿ ನಿಮ್ಮೆಲ್ಲರ ಮನೆಗಳಲ್ಲಿಯೂ ಅಮೃತವು ನೆಲಸುವಂತಾಗಲಿ. ಪರಮಪಾವನವಾದ ಈ ಶಿಪ್ರಾನದಿಯ ಜಲವನ್ನು ಅಮೃತ ಕಳಶಗಳಲ್ಲಿ ತುಂಬಿರಿಸಿರಿ.

೫೧–೫೨. ನಾಗಶ್ರೇಷ್ಠರಿರಾ! ಅದರಿಂದ ನಿಮ್ಮ ಇಪ್ಪತ್ತೊಂದು ಕುಂಡಗಳೂ ಅಮೃತಪೂರಿತಗಳಾಗುವುವು. ಮತ್ತು ಯಾವಾಗಲೂ ಅವು ತುಂಬಿಯೇ ಇರುವುವು." ಹಾಗೆಯೇ ಆಗಲೆಂದು ಆ ನಾಗರೆಲ್ಲರೂ ಕೈಗಳಲ್ಲಿ ಶಿಪ್ರೋದಕದ ಕಳಶಗಳನ್ನು ಹಿಡಿದುಕೊಂಡು ಮಹೇಶ್ವರನಿಗೆ ನಮಸ್ಕರಿಸಿ ತಮ್ಮ ಲೋಕವನ್ನು ಕುರಿತು ಹೊರಟುಹೋದರು.

೫೩. ಅಂದಿನಿಂದ ಆ ಶಿಪ್ರೋದಕವೇ ನಾಗಲೋಕದಲ್ಲಿ ಅಮೃತವನ್ನುಂಟುಮಾಡುವುದಾಯಿತು. ಎಲೈ ವ್ಯಾಸನೆ! ಅಂದಿನಿಂದಲೇ ಶಿಪ್ರಾನದಿಯೂ ಅಮೃತೋದ್ಭವೆಯೆಂದು ಸಕಲ ಲೋಕಗಳಲ್ಲಿಯೂ ಪ್ರಖ್ಯಾತವಾಯಿತು.

೫೪. ಯಾವ ನರರು ಅದರಲ್ಲಿ ಸ್ನಾನವೇ ಮುಂತಾದ ಕರ್ಮಗಳನ್ನಾಚರಿಸುವರೊ, ಅವರಿಗೆ ಪಾಪವಾಗಲಿ, ಆಪತ್ತುಗಳಾಗಲಿ, ದುರ್ಗತಿಯಾಗಲಿ ಎಂದಿಗೂ ಸಂಭವಿಸುವುದಿಲ್ಲ.

ನ ವಿಯೋಗೋ ಭವೇತ್ತೇಷಾಂ ಪುತ್ರದಾರಾದಿಕೈಃ ಕದಾ ।
ನ ಚ ಮಿತ್ರಾಣಿ ದುಷ್ಯಂತಿ ನ ರೋಗೋ ನ ದರಿದ್ರತಾ ॥ ೫೫ ॥
ಕಥಾಂ ಪಾಪಹರಾಂ ಪುಣ್ಯಾಂ ಸರ್ವಕಾಮವರಪ್ರದಾಂ ।
ಪಠನಾಚ್ಛ್ರವಣಾದ್ವಾಽಪಿ ಗೋಸಹಸ್ರಫಲಂ ಲಭೇತ್ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶಿಪ್ರಾಮಾಹಾತ್ಮ್ಯೇ ಅಮೃತೋದ್ಭವಾನಾಮಕಥಾವರ್ಣನಂ "ನಾಮೈಕಪಂಚಾಶತ್ತಮೋಽಧ್ಯಾಯಃ

---

೫೫. ಅವರಿಗೆ ಪತ್ನೀಪುತ್ರರ ಸಹವಾಸದಿಂದ ವಿಯೋಗವುಂಟಾಗುವುದಿಲ್ಲ. ಅವರ ಮಿತ್ರರು ಶತ್ರುಗಳಾಗುವುದಿಲ್ಲ. ಅವರಿಗೆ ರೋಗಗಳಾಗಲಿ ದಾರಿದ್ರ್ಯವಾಗಲಿ ಅಂಟುವುದಿಲ್ಲ.

೫೬. ಸಕಲ ಪಾಪಪರಿಹಾರಕವೂ, ಪುಣ್ಯಪ್ರದವೂ, ಸರ್ವಾಭೀಷ್ಟವರಪ್ರದವೂ ಆದ ಈ ಸತ್ಕಥೆಯ ಪಠನವನ್ನೂ, ಶ್ರವಣವನ್ನೂ ಮಾಡಿದವರಿಗೆ ಒಂದು ಸಾವಿರ ಗೋದಾನಗಳನ್ನು ಮಾಡಿದ ಫಲವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಅಮೃತೋದ್ಭವಾನಾಮಕಥಾವರ್ಣನ"ವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಪಂಚಾಶತ್ತಮೋಽಧ್ಯಾಯಃ

### ಶಿಪ್ರಾಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಭೂಯಃ ಶೃಣು ಮಹಾಭಾಗ ಶಿಪ್ರಾಮಾಹಾತ್ಮ್ಯಮುತ್ತಮಂ ।
ಯಸ್ಯ ಶ್ರವಣಮಾತ್ರೇಣ ಹಯಮೇಧಫಲಂ ಭವೇತ್ ॥ ೧ ॥
ಶಿಪ್ರಾ ಚ ಸರ್ವತಃ ಪುಣ್ಯಾ ಪವಿತ್ರಾ ಪಾಪಹಾರಿಣೀ ।
ಅವಂತ್ಯಾಂ ಚ ವಿಶೇಷೇಣ ಶಿಪ್ರಾ ಚೋತ್ತರವಾಹಿನೀ ॥ ೨ ॥
ತಥಾಽಪಿ ತತ್ಸಮುತ್ಪತ್ತಿಂ ವಿಸ್ತರಾದ್ಗದತೋ ಮಮ ।
ಯಥಾ ವರಾಹತನಯಾ ವಿಷ್ಣುದೇಹೋದ್ಭವಾ ಶಿವಾ ।
ಶೃಣು ವ್ಯಾಸ ಮಹಾಪುಣ್ಯಾಂ ಕಥಾಂ ಪೌರಾಣಿಕೀಂ ಶುಭಾಂ ॥ ೩ ॥
ಪುರಾ ಮಹಾಽಸುರೋ ಜಾತೋ ಹಿರಣ್ಯಾಕ್ಷೋ ಮಹಾಬಲಃ ॥ ೪ ॥
ಸ ಚೇಮಾಂ ಸಕಲಾಂ ಪೃಥ್ವೀಂ ವಶೀಕೃತ್ವಾ ಚಕಾರ ಹ ।
ರಾಜ್ಯಂ ಚ ಸಾರ್ವಭೌಮಾನಾಂ ದಾನವೈಶ್ಚ ದುರಾತ್ಮಭಿಃ ॥ ೫ ॥

---

### ಕನ್ನಡದ ಅನುವಾದ

#### ಶಿಪ್ರಾಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಮಹಾಮಹಿಮನಾದ ವ್ಯಾಸನೆ! ಶಿಪ್ರಾನದಿಯ ಉತ್ತಮವಾದ ಮಾಹಾತ್ಮ್ಯವನ್ನು ಇನ್ನೂ ಕೇಳುವವನಾಗು. ಅದನ್ನು ಕೇಳುವುದರಿಂದಲೇ ಅಶ್ವಮೇಧದ ಫಲವುಂಟು.

೨. ಈ ಶಿಪ್ರಾನದಿಯು ಆದ್ಯಂತವೂ ಪುಣ್ಯಪ್ರದವಾಗಿರುವುದು. ಪಾಪಗಳನ್ನು ಕಳೆಯುತ್ತಿರುವುದು. ವಿಶೇಷವಾಗಿ ಅವಂತೀಕ್ಷೇತ್ರದಲ್ಲಿ ಈ ನದಿಯು ಉತ್ತರದಿಕ್ಕಿಗೇ ಪ್ರವಹಿಸುತ್ತಿರುವುದು.

೩. ಅದು ಹುಟ್ಟಿದ ಚರಿತ್ರೆಯನ್ನು ವಿಸ್ತಾರವಾಗಿ ನಿನಗೆ ನಿರೂಪಿಸುವೆನು. ಎಲೈ ವ್ಯಾಸನೆ! ಈ ಪುಣ್ಯನದಿಯು ವಾರಾಹಪುತ್ರಿಯೂ, ವಿಷ್ಣುವಿನ ದೇಹದಿಂದುದ್ಭವಿಸಿದವಳೂ, ಮಂಗಳಪ್ರದೆಯೂ ಅದ ಮಹಾಪುಣ್ಯಕಥೆಯನ್ನು ಪುರಾಣಗಳಲ್ಲಿ ಹೇಳಿರುವರು. ಆ ಪವಿತ್ರ ಕಥೆಯನ್ನು ಹೇಳುತ್ತೇನೆ.

೪–೫. ಪೂರ್ವದಲ್ಲಿ ಹಿರಣ್ಯಾಕ್ಷನೆಂಬ ಮಹಾಬಲಶಾಲಿಯಾದ ರಾಕ್ಷಸನೊಬ್ಬನು ಹುಟ್ಟಿದನು. ಅವನು ಸಮಸ್ತ ಭೂಮಂಡಲವನ್ನೂ ವಶಮಾಡಿಕೊಂಡು ಸಕಲ ಸಾರ್ವಭೌಮರ ರಾಜ್ಯಗಳನ್ನೂ ಅಪಹರಿಸಿ ದುರಾತ್ಮರಾದ ರಾಕ್ಷಸರ ಸಹಾಯದಿಂದ ರಾಜ್ಯವನ್ನಾಳುತ್ತಿದ್ದನು.

ಜಿತ್ವಾ ಚ ಸಕಲಾಂಲ್ಲೋಕಾನ್ಸುರಾನಿಂದ್ರಪುರೋಗಮಾನ್ ।
ದಿಕ್ಪಾಲಾನ್ವಸುಪಾಲಾಂಶ್ಚ ತಿರಸ್ಕೃತ್ಯಾऽಸುರಾऽಧಿಪಃ ॥ ೬ ॥
ಸ ಸರ್ವಾನ್ಸರ್ವಲೋಕೇಭ್ಯಃ ಸ್ವಯಮೇವಾऽಧಿತಿಷ್ಠತಿ ।
ಸ್ವರ್ಗಾನ್ನಿರಾಕೃತಾಃ ಸರ್ವೇ ತೇನ ದೇವಗಣಾ ಭುವಿ ॥ ೭ ॥
ವಿಚರಂತಿ ಯಥಾ ಮರ್ತ್ಯಾ ಭ್ರಷ್ಟರಾಜ್ಯಾಃ ಪರಾಜಿತಾಃ ।
ಅಲಬ್ಧಶರಣಾಃ ಸರ್ವೇ ಬ್ರಹ್ಮಾಣಂ ಶರಣಂ ಯಯುಃ ॥ ೮ ॥
ತತ್ರ ಗತ್ವಾ ನಮಸ್ಕೃತ್ಯ ದೈತ್ಯಕೃತ್ಯಂ ನ್ಯವೇದಯನ್ ।
ಭಗವನ್ಕಿಮಿದಂ ಕಾರ್ಯಂ ಭವತಾ ಪರಮೇಷ್ಠಿನಾ ॥ ೯ ॥
ಯೇನ ದೇವಗಣಾಃ ಸರ್ವೇ ನಷ್ಟಪ್ರಾಯಾಶ್ಚ ತತ್ಕ್ಷಣಾತ್ ।
ಹಿರಣ್ಯಾಕ್ಷೇಣ ದೈತ್ಯೇನ ಹೃತಂ ಸ್ವರ್ಗಮಕಂಟಕಂ ॥ ೧೦ ॥
ಯಜ್ಞಭಾಗಾಂಶ್ಚ ವೈ ಸರ್ವಾನುಪಾऽಶ್ನಾತಿ ಪೃಥಕ್ಪೃಥಕ್ ।
ಕೇನೋಪಾಯೇನ ಜೀವಾಮ ಕಥಂ ತಿಷ್ಠಾಮ ಭೂತಲೇ ॥ ೧೧ ॥

---

೬. ಆ ರಾಕ್ಷಸಶ್ರೇಷ್ಠನು ಸಕಲ ಲೋಕಗಳನ್ನೂ ಜಯಿಸಿ ಇಂದ್ರನೇ ಮುಂತಾದ ದೇವತೆಗಳನ್ನೂ, ದಿಕ್ಪಾಲಕರನ್ನೂ, ಅಷ್ಟವಸುಗಳನ್ನೂ ತಿರಸ್ಕರಿಸಿ ರಾಜ್ಯಭಾರವನ್ನು ಮಾಡುತ್ತಿದ್ದನು.

೭. ಅವನು ಸಮಸ್ತ ಲೋಕಗಳಲ್ಲಿಯೂ ಸರ್ವರನ್ನೂ ತನ್ನ ಪೌರುಷದಿಂದ ಆಕ್ರಮಿಸಿದ್ದನು. ಅವನಿಂದ ಧಿಕ್ಕರಿಸಲ್ಪಟ್ಟ ದೇವತೆಗಳೆಲ್ಲರೂ ಸ್ವರ್ಗಲೋಕದಿಂದ ಬಂದು ಭೂಮಿಯಲ್ಲಿ ವಾಸಮಾಡುತ್ತಿದ್ದರು.

೮. ಅವರು ಪರಾಜಯವನ್ನು ಹೊಂದಿ ತಮ್ಮ ರಾಜ್ಯವನ್ನು ಕಳೆದುಕೊಂಡು ಮನುಷ್ಯರಂತೆ ಸಂಚರಿಸುತ್ತ ಎಲ್ಲಿಯೂ ಶರಣುಹೊಂದಲಾರದೆ ಬ್ರಹ್ಮದೇವನಲ್ಲಿಗೆಬಂದು ಶರಣಾಗತರಾದರು.

೯. ಆತನಲ್ಲಿಗೆ ಹೋಗಿ ನಮಸ್ಕರಿಸಿ ಆ ರಾಕ್ಷಸೇಂದ್ರನು ಮಾಡುತ್ತಿರುವ ಕಾರ್ಯಗಳನ್ನು ಬಿನ್ನವಿಸಿದರು. "ಸ್ವಾಮಿಯೆ! ಲೋಕಪಿತಾಮಹನಾದ ನೀನು ಮಾಡಿರುವ ಕಾರ್ಯವೇನು?

೧೦. ಕ್ಷಣಮಾತ್ರದಲ್ಲಿಯೇ ದೇವತಾಗಣಗಳೆಲ್ಲರೂ ನಷ್ಟಪ್ರಾಯರಾದರು. ಹಿರಣ್ಯಾಕ್ಷನೆಂಬ ದೈತ್ಯನಿಂದ ನಿಷ್ಕಂಟಕವಾಗಿ ನಾವು ಅನುಭವಿಸುತ್ತಿದ್ದ ಸ್ವರ್ಗಲೋಕವು ಅಪಹೃತವಾಯಿತು.

೧೧. ಅವನು ನಮ್ಮಲ್ಲಿ ಒಬ್ಬೊಬ್ಬರಿಗೂ ಸಲ್ಲಬೇಕಾದ ಯಜ್ಞಗಳ ಹವಿರ್ಭಾಗಗಳನ್ನು ತಾನೇ ತಿಂದುಬಿಡುವನು. ಇನ್ನು ನಮಗೆ ಜೀವನೋಪಾಯವೇನು? ಭೂಲೋಕದಲ್ಲಿ ನಾವು ಹೇಗೆ ವಾಸಮಾಡೋಣ?

ಇತಿ ವಿಕ್ಲವಿತಂ ತೇಷಾಂ ದೇವಾನಾಂ ಸ ಪಿತಾಮಹಃ ।
ಉವಾಚ ವಚನಂ ರಮ್ಯಂ ತತ್ಕಾಲಸಮಯೋಚಿತಂ ॥ ೧೨ ॥

ಬ್ರಹ್ಮೋವಾಚ :—

ಶೃಣುಧ್ವಂ ಭೋಃ ಸುರಶ್ರೇಷ್ಠಾ ಯೂಯಂ ಸರ್ವೇ ಸಮಾಹಿತಾಃ ।
ಪುರಾಽಯಂ ಪಾರ್ಷದಶ್ರೇಷ್ಠೋ ದ್ವಾರಪಾಲಃ ಸಮಾಹಿತಃ ॥ ೧೩ ॥
ವೈಕುಂಠಭವನೇ ರಮ್ಯೇ ವಿಷ್ಣೋರತುಲತೇಜಸಃ ।
ಜಯೋನಾಮ ಮಹಾಬಾಹುರ್ವಿಜಯೇನ ಸಮನ್ವಿತಃ ॥ ೧೪ ॥
ದ್ವಾವೇವ ಸಚಿವೌ ದಾಂತೌ ವಿಷ್ಣುವೇಷಧರಾವುಭೌ ।
ಆತ್ತಯಷ್ಟೀ ಚ ವಿಕ್ರಾಂತೌ ದ್ವಾರೇ ಸಂತಿಷ್ಠತಃ ಸದಾ ॥ ೧೫ ॥
ಏಕದಾ ವೈ ಮುನಿಶ್ರೇಷ್ಠಾ ಬ್ರಹ್ಮಣೋ ಮಾನಸಾತ್ಮಜಾಃ ।
ಸ್ವೈರಂ ಚರಂತೋ ಲೋಕಾನಾಂ ವಿಷ್ಣೋರ್ಭವನಮಾಗತಾಃ ॥ ೧೬ ॥
ಸನಕಾದಯೋ ಮಹಾಭಾಗಾ ಭಗವದ್ದರ್ಶನಲಾಲಸಾಃ ।
ತಾಭ್ಯಾಂ ನಿವಾರಿತಾಃ ಸರ್ವೇ ಪೇತುರ್ವೈ ಧರಣೀತಲೇ ॥ ೧೭ ॥

---

೧೨. ಇಂತೆಂದು ದೇವತೆಗಳು ಬಹಳ ದೈನ್ಯದಿಂದಾಡಿದ ಮಾತುಗಳನ್ನು ಕೇಳಿ ಪಿತಾಮಹನು ಅವರನ್ನು ಕುರಿತು ದೇಶ ಕಾಲಗಳಿಗುಚಿತವಾಗುವಂತೆ ಮೃದುಮಧುರವಾಗಿ ಹೇಳತೊಡಗಿದನು.

೧೩. ಬ್ರಹ್ಮನು ಹೇಳುತ್ತಾನೆ:—ಎಲೈ ಸುರಶ್ರೇಷ್ಠರಿರಾ! ನೀವೆಲ್ಲರೂ ಸಮಾಹಿತಚಿತ್ತರಾಗಿ ಕೇಳಿರಿ. ಈ ರಾಕ್ಷಸೇಂದ್ರನು ಹಿಂದೆ ಪಾರ್ಷದಶ್ರೇಷ್ಠ ನೆನಿಸಿ ಮಹಾವಿಷ್ಣುವಿನ ಬಾಗಿಲು ಕಾಯುವವನಾಗಿದ್ದನು.

೧೪. ಅಪ್ರತಿಮತೇಜಸ್ವಿಯಾದ ವಿಷ್ಣುವಿನ ಮನೋಹರ ನಿವಾಸವಾದ ವೈಕುಂಠದಲ್ಲಿದ್ದ ಜಯನೆಂಬ ಈ ಮಹಾಪರಾಕ್ರಮಿಯು ವಿಜಯನೊಂದಿಗೆ ಕೂಡಿ ಪ್ರಭುಸೇವೆಯನ್ನು ಮಾಡಿಕೊಂಡಿದ್ದನು.

೧೫. ವಿಷ್ಣುವಿನ ಸಮಾನ ವೇಷಧಾರಿಗಳಾದ ಈ ಇಬ್ಬರು ಜಯಶಾಲಿಗಳೂ ಸಹ ಜಿತೇಂದ್ರಿಯರೂ ಕೋಲುಗಳನ್ನು ಹಿಡಿದವರೂ ಆಗಿ ಯಾವಾಗಲೂ ವೈಕುಂಠದ ಬಾಗಿಲನ್ನು ಕಾಯುತ್ತಿದ್ದರು.

೧೬. ಎಲೈ ವ್ಯಾಸಮುನಿವರ್ಯನೆ! ಒಮ್ಮೆ ಬ್ರಹ್ಮನ ಮಾನಸಪುತ್ರರು ಯಥೇಚ್ಛೆಯಿಂದ ಲೋಕಗಳಲ್ಲಿ ಸಂಚರಿಸುತ್ತ ಶ್ರೀ ವೈಕುಂಠಕ್ಕೆ ಬಂದರು.

೧೭. ಮಹಾಭಾಗ್ಯಶಾಲಿಗಳಾದ ಆ ಸನಕಾದಿಗಳು ಭಗವಂತನ ದರ್ಶನವನ್ನು ಮಾಡಬೇಕೆಂದು ಕಾತರರಾಗಿ ಬರಲು ದ್ವಾರಪಾಲಕರು ಅವರನ್ನು ತಡೆದುತಳ್ಳಿದರು. ಅವರೆಲ್ಲರೂ ಭೂಲೋಕದಲ್ಲಿ ಬಂದುಬಿದ್ದರು.

**ಮುಮುಹುಶ್ಚ ತದಾ ವ್ಯಾಸ ಕುಮಾರಾ ಭೃಶದುಃಖಿತಾಃ ।**
**ತತೋಽಗಾತ್ಸ ಮಹಾಬಾಹುರ್ಭಗವಾನ್ ಕಮಲೇಕ್ಷಣಃ ॥ ೧೮ ॥**
**ದದರ್ಶ ಸಹಸಾ ವಿಷ್ಣುಃ ಕುಮಾರಾನ್ಭುವಿ ದುಃಖಿತಾನ್ ।**
**ಉತ್ಥಾಪ್ಯಾಽಂಕಂ ಸಮಾರೋಪ್ಯ ಸಸ್ವಜೇ ಮಧುಸೂದನಃ ॥ ೧೯ ॥**
**ಮೂರ್ಧ್ನಿ ಚಾಘ್ರಾಯ ಬಾಹುಭ್ಯಾಂ ಪರಿಷ್ವಜ್ಯ ಹ್ಯುವಾಚ ಹ ।**
**ಕಸ್ಮಾದ್ವಃ ಕಶ್ಮಲಮಿದಂ ಕೇನಾಽಪಿ ದುಃಖಿತಾ ಭೃಶಂ ॥ ೨೦ ॥**
**ಸರ್ವಂ ತತ್ಕಾರಣಂ ಬಾಲಾ ಬ್ರೂತ ನೋ ಧರ್ಮವಿತ್ತಮಾಃ ॥ ೨೧ ॥**

**ಕುಮಾರಾ ಊಚುಃ:—**

**ಶ್ರೂಯತಾಂ ಭೋ ಮಹಾರಾಜ ಅಸ್ಮಾಕಂ ದುಃಖಮೀದೃಶಂ ।**
**ಯೇನ ಪ್ರಾಪ್ತಾ ವಯಂ ಬ್ರಹ್ಮನ್ದಶಾಮೇತಾಂ ಶೃಣುಷ್ವ ಹ ॥ ೨೨ ॥**
**ಆಯಾತಾ ಭ್ರಾತರೋ ಹ್ಯೇತೇ ಚತ್ವಾರೋ ಲೋಕಪರ್ಯಟಾಃ ।**
**ದರ್ಶನಾರ್ಥಂ ರಮಾನಾಥ ಸಾಽಭಿಲಾಷಾಃ ಶುಚಾರ್ದಿತಾಃ ॥ ೨೩ ॥**

---

೧೮. ವ್ಯಾಸನೆ! ಆಗ ಅತ್ಯಂತ ದುಃಖಗೊಂಡು ಮೂರ್ಛೆಗೊಂಡಿರುವ ಅವರನ್ನು ಕಂಡು ಮಹಾಬಾಹುವೂ, ಕಮಲನೇತ್ರನೂ ಆದ ನಾರಾಯಣನು ಅವರಿದ್ದಲ್ಲಿಗೆ ಪ್ರಾಪ್ತನಾದನು.

೧೯. ಭೂಮಿಯಲ್ಲಿ ದುಃಖಗೊಂಡು ಬಿದ್ದಿರುವ ಆ ಬ್ರಹ್ಮಮಾನಸಪುತ್ರರನ್ನು ಕಂಡು ಸಂಭ್ರಮಗೊಂಡು ವಿಷ್ಣುವು ಅವರನ್ನೆತ್ತಿ ಆಲಿಂಗಿಸಿಕೊಂಡು ಮೈದಡವಿ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು.

೨೦. ತಲೆಯನ್ನು ಮೂಸಿನೋಡಿ ತೋಳುಗಳಿಂದ ಬಿಗಿದಪ್ಪಿಕೊಂಡು ಅವರನ್ನು ಕುರಿತು ಇಂತೆಂದನು. "ನಿಮಗೆ ಈ ದುರವಸ್ಥೆಯುಂಟಾಗಲು ಕಾರಣವೇನು? ಯಾವನಿಂದ ನೀವು ಇಷ್ಟು ದುಃಖಕ್ಕೊಳಗಾಗಿರುವಿರಿ?

೨೧. ಧರ್ಮಜ್ಞರಲ್ಲಿ ಉತ್ತಮರಾದ ಬಾಲಕರಿರಾ! ಇದೆಲ್ಲಕ್ಕೂ ಕಾರಣವನ್ನು ನನಗೆ ತಿಳಿಸಿರಿ."

೨೨. ಕುಮಾರರು ಹೇಳುತ್ತಾರೆ:—ಎಲೈ ದೇವಾಧಿದೇವನೆ! ನಮಗೆ ಇಂತಹ ದುಃಖವುಂಟಾದ ಬಗೆಯನ್ನು ಕೇಳು. ಸರ್ವವ್ಯಾಪಿಯೆ! ಮತ್ತು ಈ ದಶೆಯನ್ನು ಯಾವನಿಂದ ಹೊಂದಿದೆವೆಂಬುದನ್ನೂ ಲಾಲಿಸು.

೨೩. ಲಕ್ಷ್ಮೀರಮಣನೆ! ಈ ನಾಲ್ಕು ಜನ ಅಣ್ಣತಮ್ಮಂದಿರು ಲೋಕಗಳನ್ನೆಲ್ಲ ಸುತ್ತುತ್ತ ನಿನ್ನ ದರ್ಶನಕ್ಕಾಗಿ ಕುತೂಹಲದಿಂದ ವೈಕುಂಠಲೋಕಕ್ಕೆ ಬಂದು ಈ ದುಃಖಕ್ಕೊಳಗಾದರು.

ನಿವಾರಿತಾಶ್ಚ ಸಹಸಾ ತಾಭ್ಯಾಂ ವೈ ದ್ವಾರಪಾಲನಾತ್ ।
ತೇನೈವೇಯಂ ದಶಾ ಪ್ರಾಪ್ತಾ ಭವತಾ ಪರಿಪಾಲಿತಾಃ ॥ ೨೪ ॥

ಭಗವಾನುವಾಚ :—

ಅತಃ ಪ್ರಭೃತಿ ಸ್ಥಾನೇಽಸ್ಮಿನ್ ಸ್ಥಿತಿರ್ನಾಽಸ್ತಿ ಚ ಶಾಶ್ವತೀ ।
ಏತಯೋರಾಸುರೀ ಯೋನಿಃ ಪ್ರಾಪ್ಸ್ಯತೇ ಯನ್ಮಮಾಹಿತೌ ॥ ೨೫ ॥
ಸದ್ಯಃ ಪ್ರಾಪ್ತೌ ತದಾ ವ್ಯಾಸ ಆಸುರೀಂ ಯೋನಿಮೇವ ತೌ ।
ಜಯವಿಜಯನಾಮಾಖ್ಯೌ ದುಷ್ಟಭಾವಸಮಾಶ್ರಿತೌ ॥ ೨೬ ॥
ಜನ್ಮಾಂತರಸಹಸ್ರೇಣ ತಪೋದಾನಸಮಾಧಿಭಿಃ ।
ನರಾಣಾಂ ಕ್ಷೀಣಪಾಪಾನಾಂ ಕೃಷ್ಣೇ ಭಕ್ತಿಃ ಪ್ರಜಾಯತೇ ॥ ೨೭ ॥
ದುಷ್ಟಭಾವೇನ ಸದ್ಯೋ ವೈ ಜನ್ಮಭಿರ್ಜಾಯತೇ ತ್ರಿಭಿಃ ।
ಭವಿಷ್ಯತಿ ಚ ತಸ್ಮಾದ್ವೋ ವಿಷ್ಣುಭಕ್ತಿಃ ಪರಾ ಸ್ಮೃತಾ ॥ ೨೮ ॥
ಜನ್ಮಜನ್ಮಾಂತರೇ ಜಾತೌ ತಾಮಸೀಂ ಯೋನಿಮುದ್ಧತೌ ।
ಹಿರಣ್ಯಕಶಿಪುಶ್ಚೈವ ಹಿರಣ್ಯಾಕ್ಷೋ ಮಹಾಬಲಃ ॥ ೨೯ ॥

---

೨೪. ನಿನ್ನ ದ್ವಾರಪಾಲಕರಾದ ಜಯವಿಜಯರಿಂದ ಬಲವಾಗಿ ತಳ್ಳಲ್ಪಟ್ಟವರಾಗಿರುವರು. ಆದರಿಂದಲೇ ಈ ದಶೆಯು ಪ್ರಾಪ್ತವಾಗಿರುವುದು. ಈಗ ನಿನ್ನಿಂದ ಪರಿಪಾಲಿತರಾಗಬೇಕಾಗಿರುವುದು.

೨೫. ಭಗವಂತನು ಹೇಳುತ್ತಾನೆ:—"ಇಂದು ಮೊದಲಾಗಿ ಇವರಿಗೆ ಶಾಶ್ವತವಾದ ನನ್ನ ಲೋಕದಲ್ಲಿ ನೆಲೆಯಿಲ್ಲದಂತಾಗಲಿ. ಇವರು ನನಗೆ ಅಹಿತವನ್ನಾಚರಿಸಿರುವುದರಿಂದ ಇಬ್ಬರಿಗೂ ರಾಕ್ಷಸಜನ್ಮವುಂಟಾಗಲಿ."

೨೬. ಎಲೈ ವ್ಯಾಸನೆ! ಅವರಿಬ್ಬರೂ ಆ ಕ್ಷಣದಲ್ಲಿಯೇ ರಾಕ್ಷಸರಾಗಿ ಅವತರಿಸಿದರು. ಜಯವಿಜಯರೆಂಬ ತಮ್ಮ ಹೆಸರುಗಳನ್ನು ಕಳೆದುಕೊಂಡು ನೀಚವೃತ್ತಿಯನ್ನವಲಂಬಿಸಿ ಭೂಮಿಗೆ ಬಂದರು.

೨೭. ಸಾವಿರಾರು ಜನ್ಮಗಳಲ್ಲಿ ಅಭ್ಯಾಸಮಾಡಿದ ತಪಸ್ಸು, ದಾನ, ಸಮಾಧಿಗಳ ಫಲವಾಗಿ ತಮ್ಮ ಪಾಪಗಳನ್ನು ಕಳೆದುಕೊಂಡಿರುವ ನರರಿಗೆ ಮಾತ್ರ ಶ್ರೀ ಕೃಷ್ಣನಲ್ಲಿ ಭಕ್ತಿಯುಂಟಾಗುವುದು.

೨೮. ಇವರ ದುಷ್ಟಭಾವದ ಫಲವಾಗಿ ಇವರು ಮೂರು ಜನ್ಮಗಳನ್ನು ಮರ್ತ್ಯಲೋಕದಲ್ಲಿ ಪಡೆಯಲು ಈಗಲೇ ಹೊರಡುವರು. ನಿಮಗೂ ಸಹ ಪರಾತ್ಪರವೆನಿಸಿದ ವಿಷ್ಣುಭಕ್ತಿಯು ಲಭಿಸುವುದು.

೨೯. ಇಂತೆಂದು ಸನಕಾದಿಗಳಿಗೆ ಮಹಾವಿಷ್ಣುವಾಡಿದ ಮಾತುಗಳಿಗನುಸಾರವಾಗಿ ಅವರಿಬ್ಬರೂ ಗರ್ವದಿಂದ ರಾಕ್ಷಸರಾಗಿ ಹುಟ್ಟಿ ಹಿರಣ್ಯಕಶಿಪು ಮತ್ತು ಮಹಾಬಲಶಾಲಿಯಾದ ಹಿರಣ್ಯಾಕ್ಷನೆಂದು ಕರೆಯಲ್ಪಟ್ಟರು.

ತಥೈವ ಕುಂಭಕರ್ಣಾಖ್ಯೋ ರಾವಣೋ ಲೋಕರಾವಣಃ ।
ದಂತವಕ್ತ್ರಃ ಶಿಶುಪಾಲಶ್ಚ ಜನ್ಮತ್ರಯಮಿತಿ ಸ್ಮೃತಂ ॥ ೩೦ ॥
ಯೋऽಸೌ ಮಹಾಬಲೋ ದೈತ್ಯೋ ಹಿರಣ್ಯಾಕ್ಷ ಇತಿ ಸ್ಮೃತಃ ।
ದುಷ್ಟಭಾವಸಮಾಪನ್ನೋ ದೇವಬ್ರಾಹ್ಮಣನಿಂದಕಃ ॥ ೩೧ ॥
ಜಿತ್ವಾ ಚ ಸಕಲಾನ್ದೇವಾನ್ಸ್ವಯಮೇವಾऽಧಿತಿಷ್ಠತಿ ॥ ೩೨ ॥
ಸ್ವರ್ಗಾನ್ನಿರಾಕೃತಾಃ ಸರ್ವೇ ಭ್ರಷ್ಟರಾಜ್ಯಾಃ ಪರಾಜಿತಾಃ ।
ವಿಚರಂತಿ ಯಥಾ ಮರ್ತ್ಯಾಸ್ತೇನ ದೇವಗಣಾ ಭುವಿ ॥ ೩೩ ॥
ಸ್ವಧಾಕಾರೋ ವಷಟ್ಕಾರಃ ಸ್ವಾಹಾಕಾರೋ ನ ದೃಶ್ಯತೇ ।
ದೇವಪೂಜಾರ್ಚನಂ ನಾऽಸ್ತಿ ಬ್ರಾಹ್ಮಣಾನಾಂ ವಿಶೇಷತಃ ॥ ೩೪ ॥
ನೈವ ತೀರ್ಥಂ ಪ್ರಕಾಶೇತ ಪುಣ್ಯಾನ್ಯಾಯತನಾನಿ ಚ ।
ಆಶ್ರಮೇಷು ಚ ಸರ್ವೇಷು ಋಷೀಣಾಂ ಚ ಮಹಾತ್ಮನಾಂ ॥ ೩೫ ॥
ಉದ್ಧೃತಂ ಚ ಪ್ರಕುರ್ವಂತಿ ದುಷ್ಟದೈತ್ಯಾಃ ಪ್ರಹಾರಿಣಃ ।
ವರ್ಣಾಶ್ರಮವತಾಂ ಧರ್ಮಾಃ ಸ್ತ್ರೀಣಾಂ ಚೈವ ಸುಶೀಲತಾ ॥ ೩೬ ॥

---

೩೦. ಎರಡನೆಯ ಜನ್ಮದಲ್ಲಿ ಲೋಕವನ್ನು ಪೀಡಿಸುವ ರಾವಣ ಕುಂಭಕರ್ಣರಾದರು. ಮೂರನೆಯ ಅವತಾರವೇ ಶಿಶುಪಾಲ, ದಂತವಕ್ತ್ರರೆಂದು ಪೌರಾಣಿಕರು ಹೇಳುವರು.

೩೧. ಮಹಾಪರಾಕ್ರಮಿಯಾದ ಹಿರಣ್ಯಾಕ್ಷನೆಂಬ ಮೇಲೆ ಹೇಳಿದ ದೈತ್ಯನು ದುಷ್ಟಗುಣಗಳಿಗೆ ಆವಾಸವಾಗಿ ದೇವತೆಗಳನ್ನೂ ಬ್ರಾಹ್ಮಣರನ್ನೂ ಯಾವಾಗಲೂ ನಿಂದಿಸುತ್ತಿದ್ದನು.

೩೨. ಸಮಸ್ತ ದೇವತೆಗಳನ್ನೂ ಯುದ್ಧದಲ್ಲಿ ಜಯಿಸಿ ತಾನೇ ರಾಜ್ಯಾಧಿಕಾರವನ್ನು ಮಾಡುತ್ತಿದ್ದನು.

೩೩. ದೇವಸಮೂಹಗಳು ಎಲ್ಲರೂ ಸ್ವರ್ಗದಿಂದ ಹೊರದೂಡಲ್ಪಟ್ಟು ತಮ್ಮ ರಾಜ್ಯವನ್ನು ಕಳೆದುಕೊಂಡು, ಸೋತುಹೋಗಿ, ಮನುಷ್ಯರಂತೆ ಭೂಮಿಯಲ್ಲಿ ಸಂಚರಿಸುತ್ತಿದ್ದರು.

೩೪. ಪಿತೃಕಾರ್ಯಗಳಾಗಲಿ, ಭೂತತೃಪ್ತಿಯಾಗಲಿ, ದೇವತೆಗಳಿಗೆ ಯಜ್ಞಗಳಾಗಲಿ ಕಾಣುತ್ತಿರಲಿಲ್ಲ. ವಿಶೇಷವಾಗಿ ಬ್ರಾಹ್ಮಣರು ದೇವತಾಪೂಜಾದಿಗಳನ್ನು ಮಾಡುತ್ತಿರಲಿಲ್ಲ.

೩೫-೩೬. ತೀರ್ಥಗಳಲ್ಲಾಗಲಿ, ಪುಣ್ಯಕ್ಷೇತ್ರಗಳಲ್ಲಾಗಲಿ ಯಾವ ಮಾಹಾತ್ಮ್ಯವೂ ಕಾಣುತ್ತಿರಲಿಲ್ಲ. ಮಹಾತ್ಮರಾದ ಋಷಿಗಳ ಆಶ್ರಮಗಳಲ್ಲಿಯೂ ದುಷ್ಟರಾದ ರಾಕ್ಷಸರು ಎಲ್ಲರನ್ನೂ ಹೊಡೆದು ಬೆದರಿಸಿ ನಾನಾವಿಧವಾಗಿ ದುರಾಚಾರಿಗಳಾಗಿದ್ದರು. ಆ ದುರಾತ್ಮನು ಲೋಕವನ್ನಾಳುತ್ತಿರಲು

ಉಚ್ಛಿನ್ನಾ ಹಿ ತದಾ ಜಾತಾಸ್ತಸ್ಮಿನ್ರಾಜ್ಞಿ ದುರಾತ್ಮನಿ ।
ದುಷ್ಟಾಚಾರಾ ದುರಾತ್ಮನೋ ಮಾಯಿನೋ ಬಹುಮಾನಿನಃ ॥ ೩೭ ॥
ಪಾಖಂಡಿನೋಃ ಪರಾಕ್ರಾಂತಾಃ ಸರ್ವೇ ಧರ್ಮಬಹಿರ್ಮುಖಾಃ ।
ಪಶುಧರ್ಮರತಾಃ ಸರ್ವೇ ಸರ್ವೇ ಬ್ರಹ್ಮೇತಿಶಂಸಿನಃ ॥ ೩೮ ॥
ಬಹುಮ್ಲೇಚ್ಛಾ ಬಹುಕ್ಲೇಶಾ ಬಹ್ವಾಬಾಧಾವನೀ ಕೃತಾ ।
ಕೋ ವೇದಃ ಕಾ ಸ್ಮೃತಿಃ ಪುಣ್ಯಾ ಕೋ ಯಜ್ಞಃ ಕಾ ಚ ದಕ್ಷಿಣಾ ॥೩೯॥
ತಮೋಭೂತಂ ಜಗತ್ಸರ್ವಂ ದೃಶ್ಯತೇ ವಸುಧಾತಲೇ ।
ಏವಂ ವ್ಯಾಸ ಯದಾ ಜಾತಂ ದುಷ್ಟಂ ಸರ್ವಂ ಜಗತ್ತ್ರಯಂ ॥ ೪೦ ॥
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥ ೪೧ ॥
ಇತಿ ಜ್ಞಾತ್ವಾ ಮಹಾವಿಷ್ಣುರ್ವಾರಾಹಂ ವಪುರಾತ್ಮವಾನ್ ।
ದಧಾರ ಲೀಲಯಾ ದಿವ್ಯಂ ಶ್ವೇತದ್ವೀಪೋಪಮಂ ಶುಭಂ ॥ ೪೨ ॥

---

ವರ್ಣಾಶ್ರಮನಿರತರ ಧರ್ಮಗಳೂ, ಸ್ತ್ರೀಯರ ಪಾತಿವ್ರತ್ಯವೂ ನಡೆಯಲಾರದಿದ್ದುವು. ಮತ್ತು ಜನರೆಲ್ಲರೂ ದುಷ್ಟವಾದ ಆಚಾರವುಳ್ಳವರೂ, ದುರಾತ್ಮರೂ, ಮೋಸಗಾರರೂ, ದುರಭಿಮಾನವುಳ್ಳವರೂ, ಅವೈದಿಕಧರ್ಮಾನುಸಾರಿಗಳೂ, ಇತರರನ್ನು ಹಿಂಸಿಸುವವರೂ, ಧರ್ಮವಿಮುಖರೂ ಆಗಿದ್ದರು. ಮತ್ತು ಪಾಶವೀವೃತ್ತಿಯಲ್ಲೇ ಆಹಾರ ನಿದ್ರಾಭಯಮೈಥುನಗಳಲ್ಲಿ ನಿರತರಾಗಿದ್ದರೂ ಎಲ್ಲರೂ ಬ್ರಹ್ಮಜ್ಞಾನವನ್ನುಮಾತ್ರ ಬೋಧಿಸುತ್ತಿದ್ದರು.

೩೯. ಅವನ ಕಾಲದಲ್ಲಿ ಭೂಮಂಡಲವು ಅನೇಕ ಮ್ಲೇಚ್ಛರಿಗೆ ನಿವಾಸವೂ, ಬಹಳ ಕಷ್ಟಪಡುವುದೂ, ಬಹುವಾಗಿ ಹಿಂಸೆಯಿಂದ ಕೂಡಿದುದೂ ಆಯಿತು. ವೇದವೆಂದರೇನು? ಶಾಸ್ತ್ರವು ಯಾವುದು? ಯಜ್ಞವನ್ನು ಮಾಡಲೇಕೆ? ದಕ್ಷಿಣೆಗಳನ್ನು ಕೊಡಲೇಕೆ?

೪೦. ಭೂತಲದಲ್ಲಿ ಸಕಲವೂ ಧರ್ಮರಹಿತವಾದುದರಿಂದ ತಮಸ್ಸಿನಿಂದಾವೃತವಾದಂತಿದ್ದಿತು. ಎಲೈ ವ್ಯಾಸನೆ! ಮೂರು ಲೋಕಗಳಲ್ಲಿಯೂ ಇಂತು ಎಲ್ಲವೂ ನಾಶವಾಗುತ್ತಿದ್ದಿತು.

೪೧. "ಎಲೈ ಅರ್ಜುನನೆ! ಯಾವ ಯಾವ ಕಾಲದಲ್ಲಿ ಧರ್ಮಕ್ಕೆ ಚ್ಯುತಿಯುಂಟಾಗುವುದೊ, ಮತ್ತು ಅಧರ್ಮವು ತಲೆಯನ್ನೆತ್ತುತ್ತಿರುವುದೊ, ಆಗ ನಾನು ಅವತಾರಗಳನ್ನೆತ್ತುತ್ತೇನೆ."

೪೨. ಎಂಬ ಗೀತಾವಚನಾನುಸಾರವಾಗಿ ಮಹಾವಿಷ್ಣುವು ಆಗ ಉತ್ತಮವಾದ ವರಾಹರೂಪವನ್ನು ಧರಿಸಿಕೊಂಡನು. ಲೀಲಾಮಾತ್ರದಿಂದಲೇ ದಿವ್ಯವೂ ಶ್ವೇತದ್ವೀಪಕ್ಕೆ ಸಮಾನವೂ ಆದ ಮಹಾದೇಹವನ್ನು ತಳೆದು ಬಂದನು.

ಯೂಪದಂಷ್ಟ್ರೋ ಹವಿರ್ಗಂಧೋ ಬೀಜೌಷಧಿತನೂರುಹಃ ।
ವೇದಪಾದಃ ಶುಚಿರ್ದಂಡೀ ಜಿಹ್ವಾಗ್ನಿಸ್ತಾಲುಕಾಹುತಿಃ ॥ ೪೩ ॥
ಅಂತರಾಸ್ಯರುಚಾ ದಾಢ್ರ್ಯೋ ಯಜ್ಞಕಾಯಃ ಸುದಕ್ಷಿಣಃ ।
ಉದ್ಗಾನಘುರ್ಘುರೋನ್ನಾದೋ ವಿಹಾರಋತ್ವಿಜಾಕೃತಿಃ ॥ ೪೪ ॥
ಹೌತ್ರಶ್ವಾಸಪರೋ ದಕ್ಷಸದಸ್ಯಾಽವಯವಃ ಸ್ಮೃತಃ ।
ಪುಚ್ಛಕರ್ಮಾಽಶನೋ ನಿತ್ಯಂ ಯಜಮಾನಸುಮಾನದಃ ॥ ೪೫ ॥
ವೇದಿಪಲ್ವಲಸಂಸ್ತಾರೋ ಬ್ರಹ್ಮಾಽಧ್ವರ್ಯುರ್ವನಾಕರಃ ।
ಲೋಕಕಲ್ಪೋ ಲೋಕಸಾಕ್ಷೀ ಪರಾವರವಹಃ ಶುಚಿಃ ॥ ೪೬ ॥
ಆದ್ಯಃ ಪುರುಷ ಈಶಾನಃ ಪುರುಹೂತಃ ಪುರುಷ್ಟುತಃ ।
ತೇನಾಽಸೌ ನಿಹತೋ ದೈತ್ಯೋ ಹಿರಣ್ಯಾಕ್ಷೋ ದುರಾಸದಃ ॥ ೪೭ ॥
ಸಂಗ್ರಾಮಾನ್ ಸುಬಹೂನ್ ಕೃತ್ವಾ ಬಹುಕಷ್ಟೇನ ವಿಷ್ಣುನಾ ।
ದೈತ್ಯೇನ ಪೀಡಿತಾ ಪೃಥ್ವೀ ರಸಾತಲತಲಂ ಗತಾ ॥ ೪೮ ॥

---

೪೩. ಯೂಪಸ್ತಂಭವೇ ಕೋರೆದಾಡೆಯಾಯಿತು. ಹವಿಸ್ಸೇ ಗಂಧವು. ಓಷಧಿವನಸ್ಪತಿಗಳೇ ಕೂದಲುಗಳು. ನಾಲ್ಕು ವೇದಗಳೇ ಪಾದಗಳು. ಸೂರ್ಯನೇ ಅದರ ಮುಖವು. ನಾಲಿಗೆಯೇ ಅಗ್ನಿಯು. ಆಹುತಿಯೇ ದವಡೆಯು.

೪೪. ಬಾಯೊಳಗಿನ ಕಾಂತಿಯಿಂದ ದಿಕ್ಕುಗಳನ್ನು ಬೆಳಗಿಸುತ್ತಲೂ, ಯಜ್ಞವೇ ದೇಹವುಳ್ಳುದಾಗಿ, ದಕ್ಷಿಣಾಯುತವೂ, ಉದ್ಗಾನವೆಂಬ ಘುರ್ಘುರ ಶಬ್ದವನ್ನು ಮಾಡುತ್ತ, ಋತ್ವಿಜರೂಪವನ್ನೊಳಕೊಂಡು ಆ ಯಜ್ಞವರಾಹವು ಸಂಚರಿಸುತ್ತಿದ್ದಿತು.

೪೫. ಹೋತೃವೇ ಅದರ ಶ್ವಾಸವು. ಬ್ರಹ್ಮ ಮತ್ತು ಸದಸ್ಯರೇ ಅದರ ದೇಹಾವಯವಗಳು. ಕರ್ಮಫಲವೇ ಅದರ ಪುಚ್ಛವು. ಮತ್ತು ಯಜಮಾನನೇ ಅದರ ಗಾಂಭೀರ್ಯವು.

೪೬. ವೇದಗಳೆಂಬ ಕೆಸರಿನಲ್ಲಿ ಹೊರಳಾಡುತ್ತ ಈ ವರಾಹವು ಬ್ರಹ್ಮ, ಅಧ್ವರ್ಯುಗಳೆಂಬ ವನದಲ್ಲಿ ವಾಸಿಸುತ್ತಿರುವುದು. ಅಲ್ಲದೆ ಲೋಕಕ್ಕೆ ಬೀಜ ಭೂತವೂ, ಲೋಕವ್ಯಾಪಾರಕ್ಕೆ ಸಾಕ್ಷಿಯೂ, ಪರಾಪರಗಳನ್ನು ತಿಳಿದುದೂ, ಶುಚಿಯೂ ಆಗಿರುವುದು.

೪೭. ಹೀಗೆ ಆದಿಪುರುಷನಾದ ನಾರಾಯಣನೂ, ಸರ್ವೇಶ್ವರನೂ, ಅಗ್ರ ಹವಿರ್ಭಾಗಾರ್ಹನೂ, ಅಗ್ರಪೂಜಾರ್ಹನೂ ಆದ ಆ ಯಜ್ಞವರಾಹ ಮೂರ್ತಿ ಯಿಂದ ಸಕಲರಿಗೂ ದುರ್ಜೇಯನಾಗಿದ್ದ ಹಿರಣ್ಯಾಕ್ಷ ಮಹಾಸುರನು ನಿಗ್ರಹಿಸ ಲ್ಪಟ್ಟನು.

೪೮–೪೯. ಆ ಮಹಾವಿಷ್ಣುವು ಸಹ ಅನೇಕ ಯುದ್ಧಗಳನ್ನು ಮಾಡಿ ಬಹಳ ಕಷ್ಟದಿಂದ ಆ ರಾಕ್ಷಸನನ್ನು ಕೊಂದನು. ಆ ದೈತ್ಯನಿಂದ ದುಃಖಕ್ಕೊಳಗಾಗಿ

**ಉದ್ಧೃತಾ ಚ ವರಾಹೇಣ ದಂಷ್ಟ್ರಯಾ ಚಂದ್ರರೇಖಯಾ ।**
**ಹತಾಸ್ತೇ ದಾನವಾಃ ಸರ್ವೇ ಶೇಷಾಃ ಪಾತಾಲಮಾಯಯುಃ ॥ ೪೯ ॥**
**ವವುಃ ಪುಣ್ಯಾಸ್ತಥಾ ವಾತಾಃ ಸುಪ್ರಭೋಽಭೂದ್ದಿವಾಕರಃ ।**
**ಜಜ್ವಲುಶ್ಚಾಽಗ್ನಯಃ ಶಾಂತಾಃ ಶಾಂತಾ ದಿಗ್ಜನಿತಸ್ವನಾಃ ॥ ೫೦ ॥**
**ಸರಿತೋ ಮಾರ್ಗವಾಹಿನ್ಯಃ ಸಾಗರಃ ಪ್ರಕೃತಿಂ ಗತಃ ।**
**ದೃಷ್ಟ್ವಾ ದೇವೋಽಖಿಲಂ ವ್ಯಾಸ ಪ್ರಸನ್ನಾತ್ಮಾ ಬಭೂವ ಹ ॥ ೫೧ ॥**
**ವರಾಹಮೂರ್ತಿರ್ಭಗವಾನ್ ಸರ್ವಕಾಮಫಲಪ್ರದಃ ।**
**ಆನಂದನಿರ್ಭರೋ ದೇವೋ ಹತದೈತ್ಯೋ ವರಪ್ರದಃ ॥ ೫೨ ॥**
**ತಸ್ಯಾಽಪಿ ಹೃದಯಾಜ್ಜಾತಾ ನದೀ ಹ್ಯೇಷಾ ಸನಾತನೀ ।**
**ಆನಂದಜಲಸಂಪೂರ್ಣಾ ಸರ್ವಾನಂದವರಪ್ರದಾ ॥ ೫೩ ॥**
**ಬಹುಯೋಜನವಿಸ್ತಾರಾ ಬಹುಲಾ ಕಾಮಚಾರಿಣೀ ।**
**ಪದ್ಮಾಕರಸಮಾಕೀರ್ಣಾ ಹಂಸಕಾರಂಡಸಂಕುಲಾ ॥ ೫೪ ॥**

---

ರಸಾತಲಲೋಕದಲ್ಲಿ ಹುದುಗಿಕೊಂಡಿದ್ದ ಭೂಮಂಡಲವನ್ನು ಚಂದ್ರಮಂಡಲ ದಂತೆ ಶುಭ್ರವಾದ ತನ್ನ ಕೋರೆದಾಡೆಗಳಲ್ಲಿರಿಸಿಕೊಂಡು ವರಾಹಮೂರ್ತಿಯು ಮೇಲಕ್ಕೆ ತಂದನು. ಆ ರಾಕ್ಷಸರಲ್ಲಿ ಅನೇಕರು ಹತರಾಗಲು ಅಳಿದುಳಿದ ಕೆಲವರು ಪಾತಾಳದಲ್ಲಿ ಸೇರಿಕೊಂಡರು.

೫೦. ರಾಕ್ಷಸನ ನಿಗ್ರಹವಾಗಲು ಗಾಳಿಯು ಮಂದಮಂದವಾಗಿ ಬೀಸ ತೊಡಗಿತು. ಸೂರ್ಯನು ಕಾಂತಿಯಿಂದ ಜ್ವಲಿಸಿದನು. ಹೋಮಾಗ್ನಿಗಳು ಪ್ರಶಾಂತವಾಗಿ ಉರಿದುವು. ದಿಕ್ಕುಗಳಲ್ಲಿ ಎಲ್ಲ ಪ್ರಾಣಿಗಳೂ ಸಂತೋಷ ಸಮಾ ಧಾನಗಳಿಂದ ಧ್ವನಿಗೈಯುತ್ತಿದ್ದುವು.

೫೧. ನದಿಗಳು ಮೊದಲಿನಂತೆಯೆ ತುಂಬಿಹರಿದುವು. ಸಮುದ್ರಗಳು ತಮ್ಮ ಎಲ್ಲೆಗಳನ್ನು ಮೀರುತ್ತಿರಲಿಲ್ಲ. ಎಲೈ ವ್ಯಾಸನೆ? ಪ್ರಪಂಚವ್ಯವಹಾರವು ಯಥಾವಿಧಿಯಾದುದನ್ನು ಕಂಡು ನಾರಾಯಣನು ಪ್ರಸನ್ನಮನಸ್ಕನಾದನು.

೫೨. ಸರ್ವೇಶ್ವರನಾದ ವರಾಹಸ್ವಾಮಿಯು ಆ ಮಹಾದೈತ್ಯನನ್ನು ಕೊಂದು ಆನಂದಭರಿತನಾಗಿ ಭಕ್ತರಿಗೆ ಸಕಲಾಭೀಷ್ಟಗಳನ್ನೂ ಕೊಡಲು ಸುಮುಖನಾಗಿದ್ದನು.

೫೩. ಕರುಣಾಭರಣನಾದ ಆತನ ಹೃದಯದಿಂದಲೇ ಸನಾತನವೂ, ಆನಂದಜಲಭರಿತವೂ, ಸಮಸ್ತ ಆನಂದಗಳನ್ನೂ, ವರಗಳನ್ನೂ ಕೊಡುವುದೂ ಆದ ಈ ಶಿಪ್ರಾನದಿಯು ಉದ್ಭವಿಸಿತು.

೫೪. ಇದು ಅನೇಕ ಯೋಜನಗಳ ವಿಸ್ತಾರವುಳ್ಳದುದೂ, ಬಹಳ ನೀರುಳ್ಳ ದುದೂ, ಸ್ವೇಚ್ಛೆಯಾಗಿ ಪ್ರವಹಿಸುವುದೂ, ಅನೇಕ ಕಮಲ ಷಂಡಗಳಿಂದೊಪ್ಪು

ಸರಲಾ ತರಲಚ್ಛಾಯಾ ಯಕ್ಷಗಂಧರ್ವಸೇವಿತಾ ।
ಕಿನ್ನರೀಗೀಯಮಾನಾ ಚ ಗೀಯಮಾನಾ ಖಗಾಲಿಭಿಃ ॥ ೫೫ ॥
ಅಪ್ಸರೋಭಿರ್ನೃತ್ಯಮಾನಾ ಸ್ತೂಯಮಾನಾ ಮಹರ್ಷಿಭಿಃ ।
ಹೂಯಮಾನಾ ಹುತಾಗ್ನಿಭೀ ರಾಜರ್ಷಿಭಿಃ ಸಮಾಶ್ರಿತಾ ॥ ೫೬ ॥
ತುಂಗಸ್ತನಭರಾಕ್ರಾಂತಯೋಷಿದ್ಭಿಃ ಕ್ರೀಡಿತಾಂತರಾ ।
ಕ್ವಚಿತ್ಕರಿವರಾಂದೋಲ್ಯೈ ರಮಮಾಣಾ ವಿರಾಜಿತಾ ॥ ೫೭ ॥
ವೇದವಿದ್ಭಿರ್ದ್ವಿಜೈಃ ಸೇವ್ಯಾ ಋಷಿಭಿಃ ಸಂಶಿತಾತ್ಮಭಿಃ ।
ಸರ್ವದಾ ಸರ್ವಕಾಲೇ ಚ ಸಿದ್ಧೈಃ ಸಿದ್ಧಿಪ್ರದಾ ನೃಣಾಂ ॥ ೫೮ ॥
ಮಹಾಕಾಲವನೇ ರಮ್ಯೇ ರಮ್ಯಾ ಪದ್ಮಾವತೀ ಪುರೀ ।
ಸುಂದರಂ ಕುಂಡಮಪರಂ ರಮ್ಯಂ ಪ್ರಾಚೀನಕಂ ಶುಭಂ ॥ ೫೯ ॥

---

ತ್ತಿರುವುದೂ, ಹಂಸ ಕಾರಂಡವಗಳೇ ಮುಂತಾದ ಪಕ್ಷಿಗಳಿಂದ ಸೇವಿತವೂ ಆಗಿ ಕಂಗೊಳಿಸುತ್ತಿರುವುದು.

೫೫. ಸರಳವೂ, ತೀರಗಳಲ್ಲಿಯ ಮರಗಳ ದಟ್ಟವಾದ ನೆರಳಿನಿಂದ ಕೂಡಿದುದೂ, ಯಕ್ಷಗಂಧರ್ವರಿಂದ ಸೇವಿತವೂ ಆದ ಈ ನದಿಯ ಬಳಿಯಲ್ಲಿ ಕಿನ್ನರಿಯರು ಹಾಡುತ್ತಿರುವರು. ಪಕ್ಷಿ ಸಮೂಹಗಳು ಕಲರವಗಳನ್ನು ಮಾಡುತ್ತಿರುವುವು.

೫೬. ಅಪ್ಸರೆಯರು ನಾಟ್ಯವಾಡುತ್ತಿರುವರು. ಮಹರ್ಷಿಗಳು ಸ್ತೋತ್ರ ಮಾಡುತ್ತಿರುವರು. ರಾಜರ್ಷಿಗಳು ಅಗ್ನಿಗಳನ್ನು ಪ್ರಜ್ವಲಿಸಿ ಹೋಮಗಳನ್ನು ಮಾಡುತ್ತಿರುವರು.

೫೭. ಬಟ್ಟಮೊಲೆಗಳ ಭಾರದಿಂದ ಬಳಕುತ್ತಿರುವ ಬಾಲೆಯರು ನೀರಿನಲ್ಲಿ ಕ್ರೀಡಿಸುತ್ತಿರುವರು. ಕೆಲವೆಡೆಗಳಲ್ಲಿ ಕಾಡಾನೆಗಳು ಸೊಂಡಿಲುಗಳಿಂದ ನೀರನ್ನು ಫೂತ್ಕರಿಸುತ್ತಿರಲು ಸುಳಿಗಳು ವಿರಾಜಿಸುತ್ತಿರುವುವು.

೫೮. ನಾಲ್ಕು ವೇದಗಳಲ್ಲಿ ಪಾರಂಗತರಾದ ಬ್ರಾಹ್ಮಣೋತ್ತಮರೂ, ಯಮ ನಿಯಮಾದಿಗಳಿಂದ ಆತ್ಮಸಂಯಮನವನ್ನು ಮಾಡುತ್ತಿರುವ ಋಷಿಪುಂಗವರೂ, ಸಿದ್ಧರೂ, ಸರ್ವಕಾಲಗಳಲ್ಲಿಯೂ ಈ ನದಿಯನ್ನು ಸೇವಿಸುತ್ತಿರುವರು. ಇತರ ಮನುಜರಿಗೂ ಈ ನದಿಯು ಸಿದ್ಧಿಪ್ರದೆಯಾಗಿರುವುದು.

೫೯. ರಮ್ಯವಾದ ಮಹಾಕಾಲವನದಲ್ಲಿಯೇ ಪದ್ಮಾವತಿಯೆಂಬ ನಗರವೊಂದಿರುವುದು. ಅದರಲ್ಲಿ ಸುಂದರವೂ, ಪುರಾತನವೂ, ಮಂಗಳಪ್ರದವೂ ಆದ ಕುಂಡವೊಂದಿರುವುದು.

ಯತ್ರ ಸ್ನಾತ್ವಾ ನರಾ ಯಾಂತಿ ಶಿವಲೋಕಂ ಸನಾತನಂ ।
ಯತ್ರ ನೀಲಾ ಪರಾ ವ್ಯಾಸ ಶಿಪ್ರಾ ವೈ ಲೋಕಪಾವನೀ ॥ ೬೦ ॥
ವಾರಾಹೇಣ ಕೃತಂ ಸರ್ವಂ ದುಷ್ಟದೈತ್ಯನಿಬರ್ಹಣಂ ।
ತೇನ ದೇವಾ ನಿರಾತಂಕಾಃ ಕೃತಾ ವಾರಾಹಮೂರ್ತಿನಾ ॥ ೬೧ ॥
ಕೃತಪ್ರಾಂಜಲಯಃ ಸರ್ವೇ ದೇವಾ ಇಂದ್ರಪುರೋಗಮಾಃ ।
ಸ್ತುತಿಂ ಕೃತ್ವಾ ಮಹಾವಿಷ್ಣೋಃ ಸತತಂ ಪುರತಃ ಸ್ಥಿತಾಃ ॥ ೬೨ ॥
ದೇವದೇವ ಜಗನ್ನಾಥ ಪುಣ್ಯಶ್ರವಣಕೀರ್ತನ ।
ಕಿಂ ದಾನಂ ಕಿಂ ತಪಃ ಪುಣ್ಯಂ ಕಿಂ ತೀರ್ಥಂ ಕಾ ಚ ದೇವತಾ ॥ ೬೩ ॥
ಯೇನ ಪುಣ್ಯಪ್ರಭಾವೇನ ಪುನಃ ಸ್ವರ್ಗೋಽಸ್ಮಾವಾಪ್ಸ್ಯತೇ ।
ಏತನ್ನಿಶ್ಚಿತ್ಯ ನೋ ಬ್ರೂಹಿ ಸರ್ವಂ ಗುಹ್ಯತರಂ ವಿಭೋ ॥ ೬೪ ॥

ವಿಷ್ಣುರುವಾಚ :—

ಶೃಣುಧ್ವಂ ಭೋಃ ಸುರಾಃ ಸರ್ವೇ ಯುಷ್ಮಾಕಂ ಸಿದ್ಧಿಕಾರಣಂ ।
ಗುಹ್ಯಾದ್ಗುಹ್ಯತರಂ ಪುಣ್ಯಂ ಮಹಾಕಾಲವನಂ ಶುಭಂ ॥ ೬೫ ॥

---

೬೦. ಇದರಲ್ಲಿ ಸ್ನಾನಮಾಡಿದ ಮಾನವರು ಅನಾದಿನಿಧನವಾದ ಶಿವಲೋಕವನ್ನು ಸೇರುವರು. ಎಲೈ ವ್ಯಾಸನೆ! ಲೋಕಪಾವನೆಯಾದ ಶಿಪ್ರಾನದಿಯು ಇಲ್ಲಿ ನೀಲವರ್ಣವಿಶಿಷ್ಟವಾಗಿರುವುದು.

೬೧. ಇಲ್ಲಿಯೇ ವರಾಹಮೂರ್ತಿಯು ದುಷ್ಟನಾದ ಹಿರಣ್ಯಾಕ್ಷ ದೈತ್ಯನನ್ನು ನಿಗ್ರಹಿಸಿದನು. ಆದರಿಂದ ದೇವತೆಗಳೆಲ್ಲರೂ ಭಯರಹಿತರಾದರು.

೬೨. ಆಗ ಇಂದ್ರನೇ ಮೊದಲಾಗಿ ದೇವತೆಗಳೆಲ್ಲರೂ ಅಂಜಲಿಬಂಧವನ್ನು ಮಾಡಿಕೊಂಡು ಮಹಾವಿಷ್ಣುವನ್ನು ಸ್ತೋತ್ರಮಾಡುತ್ತ ಆತನ ಮುಂದೆ ನಿಂತುಕೊಂಡರು.

೬೩. "ದೇವಾಧಿದೇವನೆ! ಜಗನ್ನಾಥನೆ! ಪುಣ್ಯವಂತರ ಕಿವಿಗಳಿಗೆ ಮಾತ್ರ ದಿವ್ಯಚರಿತ್ರೆಯನ್ನು ಕೇಳಿಸುವವನೆ! ನಾವು ಮಾಡಬೇಕಾದ ದಾನವು ಯಾವುದು? ತಪಸ್ಸಾವುದು? ಪುಣ್ಯವು ಯಾವುದು? ಯಾವ ತೀರ್ಥವನ್ನು ಸೇವಿಸಬೇಕು? ಯಾವ ದೇವತೆಯನ್ನಾರಾಧಿಸೋಣ?

೬೪. ಯಾವ ಪುಣ್ಯದ ಪ್ರಭಾವದಿಂದ ಮತ್ತೆ ನಾವು ಸ್ವರ್ಗವನ್ನು ಪಡೆಯುವೆವು? ಸರ್ವಸ್ವಾಮಿಯೆ! ಇದನ್ನು ನಿಶ್ಚಯಮಾಡಿ ನಮಗೆ ಗುಟ್ಟಾದ ವಿಷಯವಾದರೂ ದಯವಿಟ್ಟು ತಿಳಿಸಬೇಕು" ಎಂದರು.

೬೫. ವಿಷ್ಣುವು ಹೇಳುತ್ತಾನೆ:—ಎಲೈ ದೇವತೆಗಳಿರಾ! ಎಲ್ಲರೂ ಕೇಳಿರಿ. ನಿಮ್ಮ ಕಾರ್ಯವು ಸಿದ್ಧಿಸುವುದಕ್ಕೆ ಉಪಾಯವೊಂದನ್ನು ತಿಳಿಸುವೆನು. ರಹಸ್ಯಗಳಲ್ಲಿ ಅತ್ಯಂತರಹಸ್ಯವಾದ ಮಹಾಕಾಲವನವೆಂಬ ಪುಣ್ಯಕ್ಷೇತ್ರವೊಂದಿರುವುದು.

ಮಮ ದೇಹೋದ್ಭವಾ ಶಿಪ್ರಾ ಯತ್ರ ಲೀನಾ ಪಯಸ್ವಿನೀ ।
ನೀಲಗಂಗಾ ಸರಿಚ್ಛ್ರೇಷ್ಠಾ ಯತ್ರ ಪ್ರಾಚೀ ಸರಸ್ವತೀ ॥ ೬೬ ॥
ಪುಷ್ಕರಂ ಚ ಗಯಾತೀರ್ಥಂ ಪುರುಷೋತ್ತಮಸರಃ ಶುಭಂ ।
ತತ್ರೈವ ಗಚ್ಛತ ಕ್ಷಿಪ್ರಂ ಪುನರ್ಲೋಕಾನವಾಪ್ಸ್ಯಥ ॥ ೬೭ ॥
ಇತಿ ಶ್ರುತ್ವಾ ಪರಂ ವಾಕ್ಯಂ ದೇವದೇವಜಗದ್ಗುರೋಃ ।
ತತ್ರ ದೇವಗಣಾಃ ಸರ್ವೇ ಬ್ರಹ್ಮಶಕ್ರಪುರೋಗಮಾಃ ॥ ೬೮ ॥
ಮಹಾಕಾಲವನೇ ರಮ್ಯೇ ಯತ್ರ ಶಿಪ್ರಾ ಸರಿದ್ವರಾ ।
ಸ್ನಾನದಾನಾದಿಕಂ ಕೃತ್ವಾ ಶ್ರಾದ್ಧಂ ಕೃತ್ವಾ ಯಥೋಚಿತಂ ॥ ೬೯ ॥
ತೇನ ಪುಣ್ಯಪ್ರಭಾವೇನ ಸ್ವಕಾನ್ ಲೋಕಾನ್ಗತಾಃ ಸುರಾಃ ।
ಏವಂ ವ್ಯಾಸ ಸಮಾಖ್ಯಾತಾ ಶಿಪ್ರಾ ವೈ ಲೋಕಪಾವನೀ ॥ ೭೦ ॥
ಜಾತಂ ಸರೋ ವರಾಹಸ್ಯ ವಿಷ್ಣೋರತುಲತೇಜಸಃ ।
ಯಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾಂ ವ್ಯಪೋಹತಿ ॥ ೭೧ ॥

---

೬೬. ನನ್ನ ದೇಹದಿಂದ ಹುಟ್ಟಿದ ಶಿಪ್ರಾನದಿಯು ಅಲ್ಲಿ ಹರಿಯುತ್ತಿರುವುದು. ಮತ್ತು ಸರಸ್ವತಿಯೆಂಬ ಹೆಸರಿನಿಂದ ಆ ಉತ್ತಮನದಿಯು ನೀಲವರ್ಣವುಳ್ಳದ್ದಾಗಿ ಪೂರ್ವಕ್ಕೆ ಹರಿಯುತ್ತಿರುವುದು.

೬೭. ಅಲ್ಲಿ ಪುಷ್ಕರತೀರ್ಥ, ಗಯಾತೀರ್ಥ, ಪುಣ್ಯಪ್ರದವಾದ ಪುರುಷೋತ್ತಮಸರಸ್ಸು ಮುಂತಾದುವುಗಳಿರುವುವು. ನೀವು ಜಾಗ್ರತೆಯಾಗಿ ಅಲ್ಲಿಗೆ ಹೋಗಿ ಸೇವಿಸಲು ಮತ್ತೆ ಸ್ವರ್ಗವನ್ನು ಹೊಂದುವಿರಿ.

೬೮. ದೇವದೇವನೂ ಜಗದ್ಗುರುವೂ ಆದ ನಾರಾಯಣನಾಡಿದ ಈ ಮಾತುಗಳನ್ನು ಕೇಳಿ ಬ್ರಹ್ಮ, ಮಹೇಂದ್ರರೊಡಗೊಂಡು ದೇವತೆಗಳೆಲ್ಲರೂ ಆ ಕ್ಷೇತ್ರೋತ್ತಮವನ್ನು ಸೇರಿದರು.

೬೯. ಮತ್ತು ಶ್ರೇಷ್ಠನದಿಯಾದ ಶಿಪ್ರಾಪ್ರವಾಹವು ಹರಿಯುತ್ತಿರುವ ರಮ್ಯವಾದ ಮಹಾಕಾಲವನವನ್ನು ಸೇರಿ ಅಲ್ಲಿ ಸ್ನಾನ, ದಾನಾದಿ ಕೃತ್ಯಗಳನ್ನು ಮಾಡಿ ಯೋಗ್ಯರೀತಿಯಿಂದ ಶ್ರಾದ್ಧಗಳನ್ನಾಚರಿಸಿದರು.

೭೦. ಆ ತೀರ್ಥಸೇವನೆಯ ಪುಣ್ಯದ ಪ್ರಭಾವದಿಂದ ದೇವತೆಗಳು ತಮ್ಮ ತಮ್ಮ ಲೋಕಗಳನ್ನು ಪಡೆದರು. ಎಲೈ ವ್ಯಾಸನೆ! ಈ ಕಾರಣದಿಂದ ಶಿಪ್ರಾನದಿಯು ಲೋಕಪಾವನಿಯೆಂಬ ಹೆಸರನ್ನು ಪಡೆದು ಪ್ರಖ್ಯಾತವಾಯಿತು.

೭೧. ಅಪ್ರತಿಮಪರಾಕ್ರಮಿಯಾದ ಮಹಾವಿಷ್ಣುವು ವರಾಹರೂಪವನ್ನು ತಾಳಿದ ಸ್ಥಳದಲ್ಲಿ ಸರೋವರವೊಂದುಂಟಾಯಿತು. ಅದನ್ನು ನೋಡುವಮಾತ್ರದಿಂದಲೇ ಮನುಷ್ಯನ ಬ್ರಹ್ಮಹತ್ಯಾದಿ ಮಹಾಪಾತಕಗಳೂ ಕಳೆದು ಹೋಗುವುವು.

**ಅತ್ರ ಸ್ನಾತ್ವಾ ಪಯಃ ಪೀತ್ವಾ ಶ್ರಾದ್ಧಂ ಕೃತ್ವಾ ಯಥೋಚಿತಂ ।**
**ಪಯಸ್ವಿನೀಂ ಚ ಗಾಂ ದತ್ವಾ ವಿಷ್ಣುಲೋಕೇ ಮಹೀಯತೇ ॥ ೭೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶಿಪ್ರಾಮಾಹಾತ್ಮ್ಯವರ್ಣನಂ" ನಾಮ ದ್ವಿಪಂಚಾಶತ್ತಮೋಽಧ್ಯಾಯಃ**

---

೭೨. ಆ ಸರೋವರದಲ್ಲಿ ಸ್ನಾನವನ್ನುಮಾಡಿ, ನೀರನ್ನುಕುಡಿದು, ಯಥಾಸಾಮರ್ಥ್ಯವಾಗಿ ಪಿತೃಶ್ರಾದ್ಧಗಳನ್ನು ನೆರವೇರಿಸಿ ಹಾಲುಕರೆಯುವ ಗೋವನ್ನು ದಾನಮಾಡಲು ವೈಕುಂಠಲೋಕದಲ್ಲಿ ಪೂಜ್ಯತೆಯು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಶಿಪ್ರಾಮಾಹಾತ್ಮ್ಯವರ್ಣನ"ವೆಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಪಂಚಾಶತ್ತಮೋಽಧ್ಯಾಯಃ

### ಸುಂದರಕುಂಡ— ಪಿಶಾಚಮೋಚನತೀರ್ಥಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

**ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ಸರ್ವಾಣಿ ಸುವ್ರತ ।**
**ಅವಂತ್ಯಾಂ ಸುಂದರೇ ತೀರ್ಥೇ ತಿಷ್ಠಂತಿ ಸರ್ವದಾ ಭುವಿ ॥ ೧ ॥**

ವ್ಯಾಸ ಉವಾಚ :—

**ಕಿಮಿದಂ ಸುಂದರಂ ಕುಂಡಂ ಕದಾ ಕಾಲೇಽಭವತ್ಕ್ಷಿತೌ ।**
**ನಿರ್ಮಿತಂ ಕೇನ ಕೋ ದೇವಃ ಕಿಂ ವಾ ತಸ್ಯ ಫಲಂ ಸ್ಮೃತಂ ॥ ೨ ॥**

ಸನತ್ಕುಮಾರ ಉವಾಚ :—

**ಶೃಣು ಪುಣ್ಯತಮೇ ಕ್ಷೇತ್ರೇ ಸುಂದರಾಖ್ಯಂ ಯದಾಽಭವತ್ ।**
**ಸರ್ವಪಾಪಪ್ರಶಮನಂ ವಾಂಛಿತಾರ್ಥಫಲಪ್ರದಂ ॥ ೩ ॥**
**ಯಸ್ಯ ಶ್ರವಣಮಾತ್ರೇಣ ಬ್ರಹ್ಮಹತ್ಯಾ ವ್ಯಪೋಹತಿ ।**
**ಅಶ್ವಮೇಧಾದಿಕಂ ಪುಣ್ಯಂ ವಾಜಪೇಯಶತಾಽಧಿಕಂ ॥ ೪ ॥**

---

### ಕನ್ನಡದ ಅನುವಾದ

#### ಸುಂದರಕುಂಡ— ಪಿಶಾಚಮೋಚನತೀರ್ಥಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:-ಎಲೈ ಮಹರ್ಷಿಯೆ ! ಈ ಭೂಮಂಡಲದಲ್ಲಿ ಎಷ್ಟು ತೀರ್ಥಗಳಿರುವುವೊ, ಅವುಗಳೆಲ್ಲವೂ, ಅವಂತೀಕ್ಷೇತ್ರದಲ್ಲಿರುವ ಸುಂದರಕುಂಡದಲ್ಲಿ ನಿತ್ಯವೂ ನೆಲಸಿರುವುವು.

೨. ವ್ಯಾಸನು ಹೇಳುತ್ತಾನೆ:—ಈ ಸುಂದರಕುಂಡವು ಯಾವುದು ? ಯಾವ ಕಾಲದಲ್ಲಿ ಭೂಮಿಯಲ್ಲಿ ನಿರ್ಮಿತವಾಯಿತು ? ಯಾವನು ಇದನ್ನು ಮಾಡಿದನು ? ಇದಕ್ಕೆ ಅಧಿದೇವತೆಯಾರು ? ಇದರ ಸೇವನೆಯಿಂದ ಯಾವ ಫಲವುಂಟೆಂದು ಹೇಳುವರು ?

೩. ಸನತ್ಕುಮಾರನು ಹೇಳುತ್ತಾನೆ:—ಪುಣ್ಯಪ್ರದವಾದ ಈ ಕ್ಷೇತ್ರದಲ್ಲಿ ಸುಂದರಕುಂಡವು ಯಾವಾಗ ಉದ್ಭವಿಸಿತೆಂಬುದನ್ನು ಹೇಳುವೆನು, ಕೇಳು. ಈ ತೀರ್ಥವು ಸಮಸ್ತಪಾತಕಗಳನ್ನು ಕಳೆಯುವುದೂ, ಸಕಲಾಭೀಷ್ಟಫಲಪ್ರದವೂ ಆಗಿರುವುದು.

೪. ಈ ಚರಿತ್ರೆಯನ್ನು ಕೇಳುವ ಮಾತ್ರದಿಂದಲೇ ಬ್ರಹ್ಮಹತ್ಯೆಯ ಪಾಪವೂ ದೂರವಾಗುವುದು. ಮತ್ತು ಅಶ್ವಮೇಧಯಜ್ಞಕ್ಕೂ ನೂರು ವಾಜಪೇಯಗಳಿಗೂ ಮಿಗಿಲಾದ ಪುಣ್ಯವು ಲಭಿಸುವುದು.

ಪುರಾ ಕಲ್ಪಕ್ಷಯೇ ವ್ಯಾಸ ನಷ್ಟಕಲ್ಪಾ ಚ ಮೇದಿನೀ ।
ಪ್ರಚಂಡವಾತವರ್ಷಾಭ್ಯಾಂ ಘೂರ್ಣಿತೋ ಮೇರುಪರ್ವತಃ ॥ ೫ ॥
ತದಾಽತ್ರ ಪತಿತಂ ವ್ಯಾಸ ವೈಕುಂಠಶಿಖರೋತ್ತಮಂ ।
ಮಹಾಕಾಲವನೇ ಘೋರೇ ಗುಹ್ಯೇ ಚಾಽವ್ಯಯಕೇ ಧ್ರುವೇ ॥ ೬ ॥
ತತ್ಕ್ಷಣಾತ್ಪತಿತೇ ಶೃಂಗೇ ಕುಂಡಂ ಜಾತಂ ಸುನಿಶ್ಚಿತಂ ।
ರತ್ನಸೋಪಾನಮಚ್ಛೋದಂ ಮುಕ್ತಾಸೈಕತಪೂರಿತಂ ॥ ೭ ॥
ಜಾಂಬೂನದಕರಾರೋಹಂ ಹೇಮಪದ್ಮವಿರಾಜಿತಂ ।
ಕಲ್ಪದ್ರುಮಕೃತಚ್ಛಾಯಂ ಚಿಂತಾಮಣಿಸಮುಚ್ಛ್ರಿತಂ ॥ ೮ ॥
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ।
ಬೀಜೌಷಧಿಗಣಾಕೀರ್ಣಂ ಸರ್ವತತ್ತ್ವಾಭಿಸಂಯುತಂ ॥ ೯ ॥
ಕಲ್ಪಕ್ಷಯೇ ನ ಕ್ಷೀಯಂತೇ ಯಾನಿ ತತ್ತ್ವಾನಿ ಸರ್ವಶಃ ।
ತಾನಿ ತತ್ರ ಪ್ರತಿಷ್ಠಂತಿ ಮೂರ್ತಿಮಂತಿ ಪರಾಣಿ ಚ ॥ ೧೦ ॥

---

೫. ವ್ಯಾಸನೆ! ಹಿಂದೆ ಕಲ್ಪಾವಸಾನದಲ್ಲಿ ಪ್ರಳಯವಾಗಲು ಭೂಮಿಯೆಲ್ಲವೂ ನಷ್ಟಪ್ರಾಯವಾಯಿತು. ಭಯಂಕರಗಳಾದ ಬಿರುಗಾಳಿ, ಮಳೆಗಳ ಹೊಡೆತಗಳಿಂದ ಮೇರುಪರ್ವತವೂ ಚಲಿಸಿತು.

೬. ಆಗ ಉತ್ತಮವಾದ ವೈಕುಂಠವೆಂಬ ಅದರ ಶಿಖರವು ಕಿತ್ತುಕೊಂಡು ಘೋರವೂ, ರಹಸ್ಯವೂ, ಶಾಶ್ವತವೂ ಆದ ಈ ಮಹಾಕಾಲವನದ ಪ್ರದೇಶದಲ್ಲಿ ಬಂದು ಬಿದ್ದಿತು.

೭. ಆ ಪರ್ವತಶೃಂಗವು ಬಿದ್ದೆಡೆಯಲ್ಲಿಯೇ ರತ್ನಸೋಪಾನಗಳುಳ್ಳುದೂ, ಶುಭ್ರಜಲಭರಿತವೂ, ಮುತ್ತುಗಳ ಮರಳುಗಳಿಂದ ಕೂಡಿದುದೂ ಆದ ಸರೋವರವೊಂದು ನಿರ್ಮಿತವಾಯಿತು.

೮. ಅದಕ್ಕೆ ಚಿನ್ನದ ಕೈಪಿಡಿಗಳು ಅಳವಟ್ಟಿದ್ದುವು. ರಕ್ತಕಮಲಗಳಿಂದ ಆ ಸರೋವರವು ವಿರಾಜಿಸುತ್ತಿದ್ದಿತು. ಕಲ್ಪವೃಕ್ಷಗಳು ಸುತ್ತಲೂ ನಿಬಿಡವಾದ ನೆರಳನ್ನು ಕೊಡುತ್ತಿದ್ದುವು. ಚಿಂತಾಮಣಿಯು ಸರ್ವಾಭೀಷ್ಟಗಳನ್ನು ಕೊಡುತ್ತಿದ್ದಿತು.

೯. ಹಂಸ, ಕಾರಂಡವಗಳೆಂಬ ಜಲಪಕ್ಷಿಗಳು ಅದನ್ನು ಆಶ್ರಯಿಸಿದ್ದುವು. ಚಕ್ರವಾಕಗಳು ರಂಜಿಸುತ್ತಿದ್ದುವು. ಸಕಲಧಾನ್ಯಗಳ ಭೀಜಗಳೂ ಔಷಧಿ ವನಸ್ಪತಿಗಳೂ ತುಂಬಿದ್ದುವು. ಸಕಲಪ್ರಪಂಚತತ್ತ್ವಗಳೂ ಅಲ್ಲಿ ಕೂಡಿ ನೆರೆದಿದ್ದುವು.

೧೦. ಕಲ್ಪದ ಅಂತ್ಯದಲ್ಲಿಯೂ ಯಾವ ಯಾವ ತತ್ತ್ವಗಳು ನಾಶವಾಗುವುದಿಲ್ಲವೊ, ಸರ್ವಶ್ರೇಷ್ಠಗಳಾದ ಅವುಗಳೆಲ್ಲವೂ ಅಲ್ಲಿಯೇ ರೂಪುಗೊಂಡು ಪ್ರತಿಷ್ಠಿತಗಳಾಗಿರುವುವು.

ವೇದಶಾಸ್ತ್ರಪುರಾಣಾನಿ ಗಾಥಾ ಗೀತಿಕ್ಷರಾಕ್ಷರಾಃ ।
ಓಂಕಾರಶ್ಚ ವಷಟ್ಕಾರೋ ಗಾಯತ್ರೀ ತ್ರಿಪದಾ ಪರಾ ॥ ೧೧ ॥
ಕಲಾಃ ಕಾಷ್ಠಾ ಮುಹೂರ್ತಾಶ್ಚ ಲವತ್ರುಟಿಪಲಂ ಘಟೀ ।
ಅಹರ್ನಿಶಶ್ಚ ಯಾಮಾಶ್ಚ ಪಕ್ಷಮಾಸಾವೃತುಸ್ತಥಾ ॥ ೧೨ ॥
ಸಂವತ್ಸರಯುಗಾಶ್ಚೈವ ಕುಂಡೇ ತಿಷ್ಠಂತಿ ಮೂರ್ತಿತಃ ।
ದೇವಾ ಯಕ್ಷಾಶ್ಚ ನಾಗಾಶ್ಚ ಗುಹ್ಯಕಾಃ ಕಿನ್ನರಾಸ್ತಥಾ ॥ ೧೩ ॥
ಗಂಧರ್ವಾಽಪ್ಸರಸೋ ಯಕ್ಷಾಃ ಸಿದ್ಧಾಃ ಕಿಂಪುರುಷಾಸ್ತಥಾ ।
ಉಪಾಸಾಂಚಕ್ರಿರೇ ತಸ್ಯ ಕಲ್ಪದೋಷಭಯಾತುರಾಃ ॥ ೧೪ ॥
ಬ್ರಹ್ಮಾ ರುದ್ರಶ್ಚ ಕಾಲಶ್ಚ ಲೋಕಪಾಲಾ ಮಹೌಜಸಃ ।
ಕೇಚಿದ್ಧ್ಯಾನಪರಾಃ ಸಿದ್ಧಾಸ್ತಾಪಸಾಃ ಶಂಸಿತವ್ರತಾಃ ॥ ೧೫ ॥
ತಿಷ್ಠಂತಿ ಬಹುಯುಗಂ ವ್ಯಾಸ ಯಾವತ್ಕಲ್ಪಃ ಸಮಾಪ್ಯತೇ ।
ಸುದರ್ಶನಸಮಾಕಾರಂ ಪೂರಿತಂ ಚಾಽಮೃತಾಂಬುಭಿಃ ॥ ೧೬ ॥
ದಿವ್ಯಪಾದಪಸಂಯುಕ್ತಂ ಪಾರಿಜಾತಗುಣಾನ್ವಿತಂ ।
ದಿವ್ಯಸ್ತ್ರೀಸ್ನಾನಗಂಧೋಘೈರ್ವಾಸಿತೋದ್ಗಾರಿಸೌರಭಂ ॥ ೧೭ ॥

---

೧೧–೧೪. ವೇದಗಳು, ಶಾಸ್ತ್ರಗಳು, ಪುರಾಣಗಳು, ಗಾದೆಗಳು, ಸಂಗೀತಗಳು, ಓಂಕಾರ, ವಷಟ್ಕಾರ, ಉತ್ತಮೋತ್ತಮವಾದ ಮೂರು ಪಾದಗಳುಳ್ಳ ಗಾಯತ್ರೀಮಂತ್ರ, ಕಲೆಗಳು, ಕಾಷ್ಠಗಳು, ಮುಹೂರ್ತಗಳು, ಲವಗಳು, ತೃಟಿಗಳು, ಪಲಗಳು, ಘಳಿಗೆಗಳು, ಹಗಲುರಾತ್ರಿಗಳು, ಯಾಮಗಳು, ಪಕ್ಷಗಳು, ಮಾಸಗಳು, ಋತುಗಳು, ಸಂವತ್ಸರಗಳು, ಯುಗಗಳು—ಇವುಗಳೆಲ್ಲವೂ ಮೂರ್ತಿಗೊಂಡು ಈ ತೀರ್ಥದಲ್ಲಿ ನೆಲಸಿರುವುವು. ದೇವತೆಗಳು, ಯಕ್ಷರು, ನಾಗರು, ಗುಹ್ಯಕರು, ಕಿನ್ನರರು, ಗಂಧರ್ವರು, ಅಪ್ಸರೆಯರು, ಯಕ್ಷರು, ಸಿದ್ಧರು, ಕಿಂಪುರುಷರು ಮುಂತಾದವರೆಲ್ಲರೂ ಕಲ್ಪಾಂತದಲ್ಲಿ ನಾಶವಾಗುವ ಭಯದಿಂದ ಈ ತೀರ್ಥವನ್ನು ಉಪಾಸಿಸುತ್ತಿರುವರು.

೧೫. ಬ್ರಹ್ಮದೇವನು, ಮಹೇಶ್ವರನು, ಮಹಾತೇಜಸ್ವಿಗಳಾದ ಲೋಕಪಾಲಕರು—ಇವರಲ್ಲಿ ಕೆಲವರು ಇಲ್ಲಿ ಧ್ಯಾನಾಸಕ್ತರಾಗಿರುವರು. ಸಿದ್ಧರೂ ತಾಪಸರೂ ನಿಯಮಗಳನ್ನು ಸ್ವೀಕರಿಸಿರುವರು.

೧೬. ಎಲೈ ವ್ಯಾಸನೆ! ಇವರೆಲ್ಲರೂ ಅನೇಕಯುಗಗಳು ಕಳೆದರೂ ಕಲ್ಪಾಂತ್ಯದವರೆಗೂ ಇಲ್ಲಿಯೇ ನೆಲಸಿರುವರು. ಈ ತೀರ್ಥವು ಸುದರ್ಶನಚಕ್ರದ ಆಕಾರವುಳ್ಳದುದಾಗಿ ಅಮೃತೋಪಮವಾದ ನೀರಿನಿಂದ ತುಂಬಿರುವುದು.

೧೭. ಸುತ್ತಲೂ ದಿವ್ಯವೃಕ್ಷಗಳು ಬೆಳೆದಿರುವುವು. ಇವು ಪಾರಿಜಾತಕ್ಕೆ ಸಮಾನವಾದ ಗುಣವುಳ್ಳವುಗಳಾಗಿರುವುವು. ದೇವಕನ್ಯೆಯರು ಸ್ನಾನಮಾಡು

**ಕ್ವಚಿನ್ಮಯೂರಾ ನೃತ್ಯಂತಿ ಕ್ವಚಿತ್ಕೂಜಂತಿ ಕೋಕಿಲಾಃ ।**
**ಕ್ವಚಿತ್ಕೇಕಾರವಾಃ ಕ್ವಾಽಪಿ ಮೇಘಘೋಷಸಮಾಕುಲಂ ॥ ೧೮ ॥**
**ಸುಂದರಂ ಸುಂದರಾಕಾರಂ ಸುಂದರಂ ತೇನ ಚೋಚ್ಯತೇ ।**
**ಬಹುಪುಣ್ಯಕರಂ ವ್ಯಾಸ ಸರ್ವಪಾಪಹರಂ ಪರಂ ॥ ೧೯ ॥**
**ಯತ್ರ ಸನ್ನಿಹಿತೋ ವಿಷ್ಣುಃ ಶಿವಃ ಶಕ್ತ್ಯಾ ಯುತೋ ವಶೀ ।**
**ಉಪಾಸಾಂಚಕ್ರಿರೇ ಶಶ್ವತ್ಸರ್ವಕಾಲೇಷು ಸರ್ವದಾ ॥ ೨೦ ॥**
**ಪಕ್ಷಾರ್ಧಂ ಪಕ್ಷಮೇಕಂ ಚ ಸುಂದರಕುಂಡೇ ನರೋ ವಸೇತ್ ।**
**ವೈಕುಂಠೇ ನಿಯುತಂ ವಾಸೋ ಯಾವತ್ಕಲ್ಪಶತಂ ಭವೇತ್ ॥ ೨೧ ॥**
**ಪಕ್ಷಿಕೀಟಪತಂಗಾಶ್ಚ ಮೃತಾ ಯಾಂತಿ ಶಿವಾಲಯಂ ।**
**ಕಿಂ ಪುನರ್ಮಾನವಾ ಲೋಕೇ ಸ್ನಾನಪೂತಾಶ್ಚ ತತ್ರ ವೈ ॥ ೨೨ ॥**
**ಯೇ ದದತಿ ತಿಲಾನ್ ಧೇನುಂ ಗಜವಾಜಿರಥಾಽವನೀಃ ।**
**ದಾಸೀರ್ದಾಸಾನ್ಸುವರ್ಣಂ ಚ ರತ್ನಾನಿ ವಿವಿಧಾನಿ ಚ ॥ ೨೩ ॥**

---

ತ್ತಿರಲು ಅವರ ಸುಗಂಧದ್ರವ್ಯಗಳು ಇದರ ನೀರಿನಲ್ಲಿ ಸೇರಿ ಸುವಾಸನೆಯನ್ನು ಬಹುದೂರ ಬೀರುತ್ತಿರುವುವು.

೧೮. ಕೆಲವೆಡೆಗಳಲ್ಲಿ ಗಂಡುನವಿಲುಗಳು ಕುಣಿಯುತ್ತಿರುವುವು. ಕೆಲವು ಕಡೆಗಳಲ್ಲಿ ಕೋಗಿಲೆಗಳು ಧ್ವನಿಗೈಯುತ್ತಿರುವುವು. ಹಲವು ಕಡೆಗಳಲ್ಲಿ ಮೇಘಗಳ ಗರ್ಜನೆಯನ್ನು ಕೇಳಿ ಹೆಣ್ಣುನವಿಲುಗಳು ಕೇಕೆಗಳನ್ನು ಹಾಕುತ್ತಿರುವುವು.

೧೯. ಮನೋಹರವೂ, ಸುಂದರ ರೂಪವುಳ್ಳುದೂ ಆದುದರಿಂದ ಇದನ್ನು ಸುಂದರತೀರ್ಥವೆಂದು ಕರೆಯುವರು. ಅಯ್ಯಾ ವ್ಯಾಸಮುನಿಯೆ ! ಇದು ಅತ್ಯಂತ ಪುಣ್ಯಪ್ರದವೂ, ಸಕಲಪಾಪನಾಶಕವೂ, ಉತ್ಕೃಷ್ಟವೂ ಆಗಿರುವುದು.

೨೦. ಇಲ್ಲಿ ಮಹಾವಿಷ್ಣುವು ಸದಾ ಸನ್ನಿಹಿತನಾಗಿರುವನು. ಇಂದ್ರಿಯ ಸಂಯಮಿಯಾದ ಮಹಾದೇವನೂ ಶಕ್ತಿಸಮೇತನಾಗಿರುವನು. ಎಲ್ಲರೂ ನಿರಂತರವೂ ಈ ತೀರ್ಥವನ್ನು ಸೇವಿಸುತ್ತಿರುವರು.

೨೧. ಒಂದು ವಾರವಾಗಲಿ, ಪಕ್ಷವಾಗಲಿ ಈ ಸುಂದರಕುಂಡದಲ್ಲಿ ವಾಸ ಮಾಡಿದ ನರನು ನೂರುಕಲ್ಪಗಳವರೆಗೂ ವೈಕುಂಠದಲ್ಲಿ ಅಚಲವಾದ ಸ್ಥಾನ ವನ್ನು ಹೊಂದುವನು.

೨೨. ಇಲ್ಲಿ ಮರಣವನ್ನು ಹೊಂದಿದ ಪಕ್ಷಿಗಳೂ, ಚಿಟ್ಟೆಗಳೇ ಮೊದಲಾದ ಕ್ರಿಮಿಕೀಟಗಳೂ ಶಿವಲೋಕವನ್ನು ಸೇರುವುವೆಂದಮೇಲೆ ಭಕ್ತಿಯಿಂದ ಸ್ನಾನವನ್ನು ಮಾಡಿದ ಮಾನವರ ವಿಷಯವನ್ನು ಹೇಳಬೇಕೆ !

೨೩–೨೪. ಯಾರು ಎಳ್ಳು, ಆಕಳು, ಆನೆ, ಕುದುರೆ, ರಥ, ಭೂಮಿ, ದಾಸದಾಸಿಯರು, ಚಿನ್ನ, ವಿಧವಿಧಗಳಾದ ರತ್ನಗಳು, ಹಾಸಿಗೆ, ವಿಮಾನಗಳು

ಶಯ್ಯಾದಾನವಿಮಾನಾನಿ ದಾನಾನಿ ವಿವಿಧಾನಿ ಚ ।
ನ ತೇಷಾಂ ದಾನಜಂ ವೇದ್ಮಿ ಕೀದೃಗ್ವ್ಯಾಸ ಫಲಂ ಭವೇತ್ ॥ ೨೪ ॥
ಭೂಯಃ ಶೃಣು ಫಲಂ ವ್ಯಾಸ ಸುಂದರಸ್ಯೋದ್ಭವಂ ಸ್ಮೃತಂ ॥ ೨೫ ॥
ಏಕದಾ ಬಹುಪಾಪೇನ ಪತಿತಃ ಪಾಪಯೋನಿಷು ।
ಪಿಶಾಚೋ ಮೋಕ್ಷಮಾಪನ್ನಃ ಶಿವರೂಪಧರೋ ಗತಃ ॥ ೨೬ ॥
ಪಿಶಾಚಮೋಚನೇ ಸ್ನಾತ್ವಾ ದೃಷ್ಟ್ವಾ ದೇವಂ ಮಹೇಶ್ವರಂ ।
ಮುಚ್ಯತೇ ಸರ್ವಪಾಪೇಭ್ಯೋ ಯದ್ಯಪಿ ಬ್ರಹ್ಮಹಾ ಭವೇತ್ ॥ ೨೭ ॥

ವ್ಯಾಸ ಉವಾಚ :—

ಕೋಽಸೌ ಪಿಶಾಚ ಇತಿ ಖ್ಯಾತಃ ಕಿಂ ತೇನ ದುಷ್ಕೃತಂ ಕೃತಂ ।
ಯೇನ ಪಾಪಪ್ರಸಂಗೇನ ಪಿಶಾಚತ್ವಮುಪಾಗತಃ ॥ ೨೮ ॥
ಕಥಂ ತೀರ್ಥಪ್ರಸಂಗೋಽಸ್ಯ ಜಾತೋ ವೈ ದ್ವಿಜಸತ್ತಮ ।
ಏತದ್ವೇದಿತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ॥ ೨೯ ॥

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಮಹಾಖ್ಯಾನಂ ತೀರ್ಥಮಾಹಾತ್ಮ್ಯಮುತ್ತಮಂ ।
ಯಸ್ಯ ಶ್ರವಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೩೦ ॥

---

ಮುಂತಾದ ಅನೇಕ ದಾನಗಳನ್ನು ಮಾಡುವರೊ, ಅವರ ದಾನವು ಎಂತಹ ಫಲವನ್ನು ಕೊಡುವುದೆಂಬುದನ್ನು ನಾನೂ ಅರಿಯೆನು.

೨೫. ಎಲೈವ್ಯಾಸನೆ! ಪುನಃ ಸರ್ವೋತ್ತಮವಾದ ಸುಂದರಕುಂಡದ ಫಲವನ್ನು ಹೇಳುವೆನು. ಕೇಳು.

೨೬–೨೭. ಒಮ್ಮೆ ಅನೇಕ ಪಾಪಗಳನ್ನು ಮಾಡಿ ನೀಚಯೋನಿಗಳಲ್ಲಿ ಬಿದ್ದು ಪಿಶಾಚಜನ್ಮವನ್ನು ತಾಳಿದವನೊಬ್ಬನು ಇಲ್ಲಿ ಮೋಕ್ಷವನ್ನು ಪಡೆದು ಶಿವ ಸ್ವರೂಪವನ್ನು ತಾಳಿ ಕೈಲಾಸಕ್ಕೆ ಹೋದನು. ಮನುಷ್ಯನು ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಈ ಪಿಶಾಚಮೋಚನ ತೀರ್ಥದಲ್ಲಿ ಸ್ನಾನವನ್ನು ಮಾಡಿ ಮಹೇಶ್ವರ ನನ್ನು ನೋಡುವುದರಿಂದ ಸಕಲಪಾತಕಗಳನ್ನೂ ಕಳೆದುಕೊಳ್ಳುವನು.

೨೮. ವ್ಯಾಸನು ಹೇಳುತ್ತಾನೆ:—ಈ ಪಿಶಾಚನೆಂದು ಪ್ರಖ್ಯಾತನಾದವನು ಯಾರು? ಅವನಿಂದ ಯಾವ ಮಹಾಪರಾಧವು ಮಾಡಲ್ಪಟ್ಟಿತು? ಯಾವ ಪಾಪದ ಫಲವಾಗಿ ಅವನು ಪಿಶಾಚಜನ್ಮವನ್ನು ತಾಳಿದನು?

೨೯. ಓ ಬ್ರಾಹ್ಮಣೋತ್ತಮನೆ! ಇವನಿಗೆ ಈ ತೀರ್ಥದ ಸೇವೆಯು ಹೇಗೆ ಲಭಿಸಿತು? ಬ್ರಹ್ಮಜ್ಞಶ್ರೇಷ್ಠನೆ! ನಿನ್ನಿಂದ ಇದೆಲ್ಲವನ್ನೂ ಸಾಂಗವಾಗಿ ತಿಳಿಯಲಿಚ್ಛಿಸುತ್ತಿರುವೆನು.

೩೦–೩೧. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಉತ್ತಮ ವಾದ ಈ ತೀರ್ಥದ ಮಾಹಾತ್ಮ್ಯವನ್ನೊಳಕೊಂಡ ಮಹಾಖ್ಯಾನವನ್ನು ಹೇಳು

ಬ್ರಾಹ್ಮಣೋ ದೇವಲೋ ನಾಮ ದಾಕ್ಷಿಣಾತ್ಯೋ ದ್ವಿಜಾಧಮಃ ।
ಸದಾ ಪಾಪರತೋ ಲೋಭೀ ಕೂಟಸಾಕ್ಷೀ ಚ ಲಂಪಟಃ ॥ ೩೧ ॥
ಗುರುದ್ರೋಹೀ ಕಿತವೋ ಧೂರ್ತೋ ಗುರುಹಾ ಗುರುತಲ್ಪಗಃ ।
ಹೇಮಹಾರೀ ಸುರಾಪೀ ಚ ಬ್ರಹ್ಮಹಾ ಸ್ವಾಮಿದ್ರೋಹಕಃ ॥ ೩೨ ॥
ಅಭಕ್ಷ್ಯಭಕ್ಷಕಶ್ಚೈವ ವೇದಶಾಸ್ತ್ರವಿವರ್ಜಿತಃ ।
ಅನೇಕಜನ್ಮಾರ್ಜಿತಪಾಪೀ ಸರ್ವಧರ್ಮಬಹಿಷ್ಕೃತಃ ॥ ೩೩ ॥
ವಿಶ್ವಾಸಘಾತಕೋ ಮಾನೀ ಚೋರಸಂಗರತಃ ಖಲಃ ।
ದೇಶಾಂತರಗತೋ ಮಂದಶ್ಚೌರಕಾರ್ಯಾರ್ಥಸಾಧಕಃ ॥ ೩೪ ॥
ಬಹವೋ ನಿಹತಾ ಮಾರ್ಗೇ ಪಾಪಾಚಾರೇಣ ಜಂತವಃ ।
ಮಗಧೇ ಸ ಗತೋ ದುಷ್ಟಃ ಪ್ರಸಂಗಾತ್ಪಾಪಕಾರಿಣಾಂ ॥ ೩೫ ॥
ತತ್ರೈಕೋ ಬ್ರಾಹ್ಮಣೋ ದಾಂತೋ ವೇದವೇದಾಂಗಪಾರಗಃ ।
ಸಾಗ್ನಿಕಃ ಶುದ್ಧ ಸತ್ವಸ್ಥೋ ಬ್ರಹ್ಮಕರ್ಮರತಃ ಸದಾ ॥ ೩೬ ॥

---

ವೆನು, ಕೇಳು. ಇದನ್ನು ಕೇಳುವ ಮಾತ್ರದಿಂದಲೇ ಸಕಲಪಾತಕಗಳೂ ನಾಶವನ್ನು ಹೊಂದುವುವು. ದಕ್ಷಿಣದೇಶದಲ್ಲಿ ದೇವಲನೆಂಬ ಬ್ರಾಹ್ಮಣನೊಬ್ಬನಿದ್ದನು. ಆ ಬ್ರಾಹ್ಮಣಾಧಮನು ಯಾವಾಗಲೂ ಪಾಪಕೃತ್ಯನಿರತನೂ, ಲೋಭಿಯೂ, ಸುಳ್ಳು ಸಾಕ್ಷ್ಯವನ್ನು ಹೇಳುವವನೂ, ಇಂದ್ರಿಯಲೋಲುಪನೂ ಆಗಿದ್ದನು.

೩೨. ಗುರುದ್ರೋಹಿಯೂ, ಮೋಸಗಾರನೂ, ಧೂರ್ತನೂ, ಗುರುಘಾತಕನೂ, ಗುರುತಲ್ಪಗಾಮಿಯೂ, ಚಿನ್ನವನ್ನು ಕದಿಯುವವನೂ, ಸುರಾಪಾನಾಸಕ್ತನೂ, ಬ್ರಹ್ಮಘ್ನನೂ, ಸ್ವಾಮಿದ್ರೋಹಿಯೂ ಆಗಿದ್ದನು.

೩೩. ಶಾಸ್ತ್ರನಿಷಿದ್ಧಗಳಾದುವನ್ನು ತಿನ್ನುತ್ತ, ವೇದಶಾಸ್ತ್ರಗಳ ಅಭ್ಯಾಸವನ್ನು ವರ್ಜಿಸಿ, ಅನೇಕ ಜನ್ಮಗಳಿಂದಲೂ ಪಾಪಗಳನ್ನೇ ಆರ್ಜಿಸುತ್ತ ಸಕಲಧರ್ಮಗಳಿಂದಲೂ ಅವನು ದೂರನಾಗಿದ್ದನು.

೩೪. ವಿಶ್ವಾಸಘಾತುಕನೂ, ಅಹಂಕಾರವುಳ್ಳವನೂ, ಕಳ್ಳರ ಸಹವಾಸದಲ್ಲಿರುವ ನೀಚನೂ ಆಗಿದ್ದ ಆ ಮಂದಬುದ್ಧಿಯೊಮ್ಮೆ ತನ್ನ ಚೌರ್ಯಕಾರ್ಯವನ್ನು ಸಾಧಿಸಿಕೊಳ್ಳಲು ದೇಶಾಂತರಕ್ಕೆ ಹೊರಟನು.

೩೫. ಪಾಪಿಯಾದ ಅವನು ದಾರಿಯಲ್ಲಿ ಸಿಕ್ಕಿದ ಅನೇಕ ಪ್ರಾಣಿಗಳನ್ನು ಕೊಂದನು. ಪ್ರಸಂಗವಶದಿಂದ ಇತರ ಪಾಪಕಾರಿಗಳ ಸಹವಾಸಕ್ಕೆ ಸಿಕ್ಕಿ ಆ ದುಷ್ಟನು ಅಂತು ಇಂತು ಮಗಧದೇಶವನ್ನು ಸೇರಿದನು.

೩೬. ಅಲ್ಲಿ ಒಬ್ಬಾನೊಬ್ಬ ಬ್ರಾಹ್ಮಣೋತ್ತಮನಿದ್ದನು. ಆತನು ಜಿತೇಂದ್ರಿಯನೂ, ವೇದವೇದಾಂತಗಳಲ್ಲಿ ನಿಷ್ಣಾತನೂ, ಅಗ್ನಿಹೋತ್ರಿಯೂ, ಶುದ್ಧಸತ್ತ್ವಗುಣಸಂಪನ್ನನೂ, ನಿತ್ಯವೂ ಸ್ವವರ್ಣೋಚಿತವಾದ ಕರ್ಮದಲ್ಲಿ ಆಸಕ್ತನೂ ಆಗಿದ್ದನು.

ಶ್ವಶುರಗೃಹೇ ಸ್ಥಿತಾ ಭಾರ್ಯಾ ತಾಮಾದಾಯ ಯಶಸ್ವಿನೀಂ ।
ಚಲಿತೋ ಯಾನಮಾರುಹ್ಯ ತೇನ ಪಾಪೇನ ಘಾತಿತಃ ॥ ೩೭ ॥
ತಸ್ಯ ಸ್ತ್ರೀ ಚ ವರಾರೋಹಾ ರೂಪಲಾವಣ್ಯಶಾಲಿನೀ ।
ಪತಿವ್ರತಾ ಮಹಾಭಾಗಾ ದೃಢಚಿತ್ತಾ ಶುಚಿಸ್ಮಿತಾ ॥ ೩೮ ॥
ಹತೇ ಭರ್ತರಿ ದುಃಖಾರ್ತಾ ಪತ್ಯುರ್ವಿರಹಕಾತರಾ ।
ವನೇ ಘೋರೇ ಪರಿಭ್ರಷ್ಟಾ ಕಾಷ್ಠಾನ್ಯಾದಾಯ ಭಾಮಿನೀ ॥ ೩೯ ॥
ಆರುರೋಹ ಚಿತಾಂ ದೀಪ್ತಾಂ ಪತಿನಾ ಹೃಷ್ಟಮಾನಸಾ ।
ಸ ಚ ದುಷ್ಟತರಃ ಸರ್ವಂ ತಸ್ಯ ವಿಪ್ರಸ್ಯ ಜೀವನಂ ॥ ೪೦ ॥
ಗೃಹೀತ್ವಾ ಚಲಿತೋ ಮಾರ್ಗೇ ಗೃಹೀತೋ ರಾಜಕಿಂಕರೈಃ ।
ಬಂಧಯಿತ್ವಾ ಚ ತೈಃ ಸರ್ವೈಸ್ತೇನ ವಿತ್ತೇನ ವೈ ಸಹ ।
ನೀತೋಽಸೌ ರಾಜಭವನಂ ವಿಜ್ಞಪ್ತೋ ರಾಜಸನ್ನಿಧೌ ॥ ೪೧ ॥
ಪಾತಿತೋ ವೈ ಗಲೇ ಬದ್ಧ್ವಾ ರಜ್ಜುನಾ ವೃಕ್ಷಕೋಟರೇ ।
ಚಾಂಡಾಲೈರ್ಘರ್ಷಿತೋ ಭೂಮಾವಿತಸ್ತತಃ ಶ್ವಸಾಕಿಭಿಃ ॥ ೪೨ ॥

---

೩೭. ಆತನ ಹೆಂಡತಿಯು ತವರುಮನೆಗೆ ಹೋಗಿರಲು ಪತಿವ್ರತೆಯಾದ ಆಕೆಯನ್ನು ಕರೆದುಕೊಂಡು ಹಿಂದಿರುಗಿ ಬರುತ್ತ ಗಾಡಿಯನ್ನೇರಿರಲು ದಾರಿಯಲ್ಲಿ ಆ ಬ್ರಾಹ್ಮಣಾಧಮನು ಆತನನ್ನು ಕೊಂದನು.

೩೮. ಕುಲೀನಳೂ, ರೂಪಲಾವಣ್ಯಾನ್ವಿತಳೂ, ಪತಿವ್ರತೆಯೂ, ಮಹಾಭಾಗ್ಯಶಾಲಿನಿಯೂ, ಶುಚಿಸ್ಮಿತೆಯೂ ಆದ ಆತನ ಮಡದಿಯು ದೃಢವಾದ ಮನಸ್ಸುಳ್ಳವಳಾಗಿದ್ದಳು.

೩೯. ಪತಿಯು ಮರಣವನ್ನು ಹೊಂದಲು ದುಃಖದಿಂದಲೂ ಪತಿಯ ಅಗಲಿಕೆಯಿಂದಲೂ ಕಾತರಗೊಂಡು ಘೋರಾರಣ್ಯದಲ್ಲಿ ಒಬ್ಬೊಂಟಿಗಳಾಗಿಯೇ ಕಟ್ಟಿಗೆಗಳನ್ನು ಸೇರಿಸಿ ಸಂತೋಷದಿಂದಲೇ ಆ ಪತಿವ್ರತೆಯು ಉರಿಯುತ್ತಿರುವ ಚಿತೆಯನ್ನು ಪ್ರಿಯನ ದೇಹದೊಡನೆ ಏರಿದಳು.

೪೦. ಈ ನೀಚನಾದರೊ ಆ ಬ್ರಾಹ್ಮಣನಲ್ಲಿದ್ದ ಜೀವನೋಪಾಯವಾದ ಸಕಲ ಧನವನ್ನೂ ಅಪಹರಿಸಿಕೊಂಡು ಬರುತ್ತ ದಾರಿಯಲ್ಲಿ ರಾಜಭಟರ ಕೈಗೆ ಸಿಕ್ಕಿಬಿದ್ದನು.

೪೧. ದ್ರವ್ಯದೊಡನೆಯೇ ಅವನನ್ನು ಬಂಧಿಸಿ ಅವರೆಲ್ಲರೂ ಅವನನ್ನು ರಾಜನ ಅರಮನೆಗೆ ಕರೆದುಕೊಂಡು ಹೋಗಿ ರಾಜಸನ್ನಿಧಿಯಲ್ಲಿ ನಡೆದ ಸಮಾಚಾರವೆಲ್ಲವನ್ನೂ ನಿವೇದಿಸಿದರು.

೪೨. ರಾಜನ ಅಪ್ಪಣೆಯಂತೆ ಅವನ ಕುತ್ತಿಗೆಗೆ ಹಗ್ಗವನ್ನು ಕಟ್ಟಿ ಒಂದು ಮರದ ಪೊಟರೆಯಲ್ಲಿ ನೇಣುಹಾಕಿದರು. ಅವನ ದೇಹವನ್ನು ಶ್ವಮಾಂಸಭಕ್ಷಕರಾದ ಚಂಡಾಲರು ಭೂಮಿಯಲ್ಲಿ ಎಳೆದಾಡಿದರು.

ತೇನ ಕರ್ಮವಿಪಾಕೇನ ರೌರವಂ ನರಕಂ ಗತಃ ।
ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಕೃಮಿತಾಂ ಗತಃ ॥ ೪೩ ॥
ತತೋಽನ್ಯಂ ನರಕಂ ಪ್ರಾಪ್ತೋ ಯಮಶಾಸನಕಾರಕೈಃ ।
ಅಸಿಪತ್ರವನಂ ಘೋರಮಾಯಸಂ ತಪ್ತಸಾಯಕಂ ॥ ೪೪ ॥
ಮುದ್ಗರೈಸ್ತಾಡ್ಯಮಾನೋ ಹಿ ಶೃಂಖಲಾಭಿಶ್ಚ ಕಿಂಕರೈಃ ।
ಕುಂಭೀಪಾಕಗತೋ ರೌತಿ ವೈತರಣ್ಯಾಂ ಸುಪೀಡಿತಃ ॥ ೪೫ ॥
ಏವಂ ಬಹುವಿಧಾನ್ಕುಂಡಾನ್ ಭುಕ್ತ್ವಾ ಪಾಪೀ ನವಾನ್ನವಾನ್ ।
ತತಃ ಪ್ರೇತತ್ವಮಾಪನ್ನೋ ಯುಗಾನಾಂ ಪಂಚಸಪ್ತತಿಂ ॥ ೪೬ ॥
ಮಹಾಕಾಯೋ ಮಹಾರಾವೋ ಮಹೋದರಃ ಸೂಚೀಮುಖಃ ।
ಕ್ಷುತ್ತೃಡ್ಭ್ಯಾಂ ಚ ಪರಾಕ್ರಾಂತೋ ಮರುದೇಶಂ ಸಮಾಶ್ರಿತಃ ॥ ೪೭ ॥
ತತಃ ಕಷ್ಟತರಾಂ ಪ್ರಾಪ್ಯ ಪೈಶಾಚೀಂ ತನುಮಾಶ್ರಿತಃ ।
ಕುಟಿಲೋ ದುಷ್ಟಭಾವಶ್ಚ ದುಷ್ಟಚಾರೀ ದಿಗಂಬರಃ ॥ ೪೮ ॥

---

೪೩. ತನ್ನ ಕರ್ಮದ ಫಲವಾಗಿ ಆ ದ್ವಿಜಾಧಮನು ರೌರವನರಕವನ್ನು ಸೇರಿದನು. ಅರುವತ್ತು ಸಾವಿರ ವರ್ಷಗಳವರೆಗೂ ಅಮೇಧ್ಯದಲ್ಲಿ ಕ್ರಿಮಿಯಾಗಿ ಯಾತನೆಯನ್ನನುಭವಿಸಿದನು.

೪೪. ಪುನಃ ಯಮಶಾಸನಗಳನ್ನು ನಡೆಸುವ ಕಿಂಕರರಿಂದ ಭಯಂಕರವೂ ಕಾದ ಕಬ್ಬಿಣದ ಬಾಣಗಳಿಂದ ಹಿಂಸೆಯನ್ನು ಕೊಡುವುದೂ ಆದ ಅಸಿಪತ್ರವನ ವೆಂಬ ಮತ್ತೊಂದು ನರಕಕ್ಕೆ ಹೋದನು.

೪೫. ಯಮಕಿಂಕರರು ಅವನನ್ನು ಮುದ್ಗರಗಳಿಂದ ಹೊಡೆಯುತ್ತ ಸಂಕೋಲೆಗಳಿಂದ ಬಂಧಿಸಿ ಕುಂಭೀಪಾಕನರಕದಲ್ಲಿ ತಳ್ಳಿದರು. ಅದರಿಂದ ಆ ಪಾಪಿಯು ವೈತರಣೀನದಿಯಲ್ಲಿ ಬಿದ್ದು ಬಹುವಾಗಿ ವ್ಯಥೆಗೊಂಡು ಗಟ್ಟಿಯಾಗಿ ಅತ್ತನು.

೪೬. ಇಂತು ಆ ಪಾಪಿಯು ಹೊಸಹೊಸದಾಗಿ ಅನೇಕ ನರಕಗಳಲ್ಲಿ ಯಾತನೆಗಳನ್ನನುಭವಿಸುತ್ತ ಕಡೆಯಲ್ಲಿ ಎಪ್ಪತ್ತೈದು ಯುಗಗಳವರೆಗೂ ಪ್ರೇತ ವಾಗಿ ತಿರುಗಾಡುತ್ತಿದ್ದನು.

೪೭. ದೊಡ್ಡ ದೇಹವೂ, ಭಯಂಕರಧ್ವನಿಯೂ, ದೊಡ್ಡ ಹೊಟ್ಟೆಯೂ, ಸೂಜಿಯ ಮನೆಯಂತೆ ಸಣ್ಣ ಗಂಟಲಿನ ಮುಖವೂ, ಉಳ್ಳವನಾಗಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಒಂದು ಮರಳುಕಾಡನ್ನಾಶ್ರಯಿಸಿದನು.

೪೮–೪೯. ಬಳಿಕ ಕಷ್ಟಗಳಿಗೆ ನೆಲೆಯಾದ ಪಿಶಾಚಶರೀರವನ್ನಾಶ್ರಯಿಸಿ ದನು. ಮೋಸಗಾರನೂ, ದುಷ್ಟಮನಸ್ಸಿನವನೂ, ದುಷ್ಟವ್ಯವಹಾರದವನೂ, ದಿಗಂಬರನೂ ಆಗಿ ಅಲ್ಲಿಯೆ ಸಂಚರಿಸುತ್ತಿದ್ದನು. ಮೂತ್ರಾಮೇಧ್ಯಗಳಿಂದ

ವಿಣ್ಮೂತ್ರದೂಷಿತೋಚ್ಛಿಷ್ಟಪೂತಿಪರ್ಯುಷಿತಭೋಜನಃ ।
ಶ್ಮಶಾನೋಚ್ಛಿಷ್ಟಭೋಜೀ ಚ ಕೃತ್ತಿವಾಸಾ ವಿಲೋಚನಃ ॥ ೪೯ ॥
ಭಗ್ನವಾಪೀತಡಾಗೇ ಚ ಶುಷ್ಕವೃಕ್ಷೇ ನಿರೂದಕೇ ।
ಪ್ರಾಕಾರಪರಿಖಾಗಾರೇ ಶೂನ್ಯಾಗಾರೇ ನದೀತಟೇ ।
ನಿವಾಸೋ ರೋಚತೇ ತಸ್ಯ ಸರ್ವದಾ ಸರ್ವಸಂಧಿಷು ॥ ೫೦ ॥
ಏವಂ ಬಹುಯುಗೇ ಯಾತೇ ಮಹಾಕಾಲವನಂ ಗತಃ ।
ಯತ್ರ ಮಾಹೇಶ್ವರಂ ಲಿಂಗಂ ಸುಂದರಂ ಕುಂಡಮುತ್ತಮಂ ॥ ೫೧ ॥
ತತ್ರೋಕ್ಷಿತತ್ವಮಾತ್ರೇಣ ಸಿಂಹೇನ ವಿನಿಪಾತಿತಃ ।
ಘಾತಯಿತ್ವಾ ಚ ತಂ ಪಾಪಂ ಜಲಾರ್ಥೀ ಕುಂಡಮಾವಿಶತ್ ॥ ೫೨ ॥
ದಂಷ್ಟ್ರಾಂತರಗತಂ ಚಾಸ್ಥ್ಯಪತತ್ತಸ್ಯ ಮುಖಾಜ್ಜಲೇ ।
ತೇನ ಪುಣ್ಯಪ್ರಭಾವೇನ ಸರ್ವಪಾಪಂ ಕ್ಷಯಂ ಗತಂ ॥ ೫೩ ॥
ಮೃತಮಾತ್ರೇ ಚ ಲಿಂಗಂ ತನ್ನೇತ್ರಾಂತರಗತಂ ತದಾ ।
ಹಿತ್ವಾ ಪೈಶಾಚಕಂ ದೇಹಂ ಜ್ಯೋತಿಸ್ತಲ್ಲಿಂಗಮಾವಿಶತ್ ॥ ೫೪ ॥

---

ದೂಷಿತವಾದುದನ್ನೂ, ಉಚ್ಛಿಷ್ಟವನ್ನೂ, ದುರ್ಗಂಧವಸ್ತುಗಳನ್ನೂ, ಹಳಸಿದನ್ನ ವನ್ನೂ ತಿನ್ನುತ್ತಿದ್ದನು. ಸ್ಮಶಾನಗಳಲ್ಲಿ ಪ್ರೇತಗಳ ಉಚ್ಛಿಷ್ಟಗಳನ್ನು ತಿನ್ನುತ್ತ, ಚರ್ಮವನ್ನು ಹೊದ್ದು ವಿಕಾರಗೊಂಡ ನೇತ್ರಗಳುಳ್ಳವನಾಗಿದ್ದನು.

೫೦. ಶಿಥಿಲಗಳಾದ ಬಾವಿ, ಕೊಳಗಳ ಬಳಿಯಲ್ಲಿಯೂ, ಒಣಗಿದ ಮರ ಗಳಲ್ಲಿಯೂ, ನಿರ್ಜಲಪ್ರದೇಶಗಳಲ್ಲಿಯೂ, ಕೋಟೆಕೊತ್ತಳಗಳ ಬಳಿಯಲ್ಲಿಯೂ, ಜನರಿಲ್ಲದ ಮನೆಗಳಲ್ಲಿಯೂ, ನದೀತೀರಗಳಲ್ಲಿಯೂ, ಯಾವಾಗಲೂ ಸಂಧಿ ಪ್ರದೇಶಗಳಲ್ಲಿಯೂ ಅವನಿಗೆ ವಾಸಮಾಡುವುದರಲ್ಲಿ ಆಸಕ್ತಿಯು ಹೆಚ್ಚಾಗಿದ್ದಿತು.

೫೧. ಇಂತು ಅನೇಕಯುಗಗಳು ಕಳೆಯಲು ಅವನು ಕರ್ಮಧರ್ಮ ಸಂಯೋಗದಿಂದ ಮಹಾಕಾಲವನವನ್ನು ಸೇರಿ ಮಾಹೇಶ್ವರಲಿಂಗವೂ ಉತ್ತಮ ವಾದ ಸುಂದರಕುಂಡವೂ ಇರುವಲ್ಲಿ ಸಂಚರಿಸುತ್ತಿದ್ದನು.

೫೨. ಅಲ್ಲಿ ವಾಸಿಸುತ್ತಿದ್ದಂತೆಯೇ ಒಂದು ಸಿಂಹವು ಅವನನ್ನು ಕೊಂದು ಹಾಕಿತು. ಆ ಪಾತಕಿಯನ್ನು ಕೊಂದು ತಿಂದು ಬಾಯಾರಿಕೆಯನ್ನಾರಿಸಿ ಕೊಳ್ಳಲು ಆ ಸಿಂಹವು ಸುಂದರತೀರ್ಥದ ಬಳಿಗೆ ಬಂದು ಹೊಕ್ಕಿತು.

೫೩. ಆ ಸಿಂಹದ ಹಲ್ಲುಗಳಲ್ಲಿ ಸಿಕ್ಕಿಕೊಂಡಿದ್ದ ಒಂದು ಎಲುಬಿನ ಚೂರು ಅದರ ಮುಖದಿಂದ ನೀರಿನಲ್ಲಿ ಬಿದ್ದಿತು. ಅಷ್ಟುಮಾತ್ರದ ಪುಣ್ಯಪ್ರಭಾವ ದಿಂದಲೇ ಅವನ ಸಮಸ್ತಪಾಪವೂ ನಾಶವಾಯಿತು.

೫೪. ಅವನು ಸತ್ತಕೂಡಲೆ ಅಲ್ಲಿ ಒಂದು ಲಿಂಗವು ಕಾಣಿಸಿಕೊಂಡಿತು. ಮತ್ತು ಆ ದೇವಲನೂ ತನ್ನ ಪಿಶಾಚರೂಪವನ್ನು ತ್ಯಜಿಸಿ ಜ್ಯೋತಿಸ್ಸ್ವರೂಪನಾಗಿ ಆ ಲಿಂಗದಲ್ಲಿ ಐಕ್ಯವನ್ನು ಹೊಂದಿದನು.

ತದಾರಭ್ಯ ಪರಂ ವ್ಯಾಸ ತೀರ್ಥಂ ಪೈಶಾಚಮೋಚನಂ ।
ಪಿಶಾಚಮೋಚನೇಶೇತಿ ದೇವಃ ಖ್ಯಾತಿಂ ತತೋ ಗತಃ ॥ ೫೫ ॥
ತಾವದ್ಗರ್ಜಂತಿ ಪಾಪಾನಿ ಮದೋನ್ಮತ್ತಗಜಾ ಯಥಾ ।
ಯಾವನ್ನಾಯಾತಿ ಶಿಪ್ರಾಯಾಸ್ತೀರ್ಥೇ ಪೈಶಾಚಮೋಚನೇ ॥ ೫೬ ॥
ಪಿಶಾಚಮೋಚನೇ ಸ್ನಾತ್ವಾ ಶುಚಿರ್ಭೂತ್ವಾ ಸಮಾಹಿತಃ ॥ ೫೭ ॥
ಪಿಶಾಚಮೋಚನಂ ದೇವಂ ಪೂಜಯಿತ್ವಾ ಯಥಾವಿಧಿ ।
ಸರ್ವಪಾಪವಿಶುದ್ಧಾತ್ಮಾ ಜಾಯತೇ ನಾಽತ್ರ ಸಂಶಯಃ ॥ ೫೮ ॥
ಪಿಶಾಚಮೋಚನೇ ವ್ಯಾಸ ಮಹಾದಾನಾನಿ ಕಾರಯೇತ್ ।
ನ ತಸ್ಯ ಪುನರಾವೃತ್ತಿಃ ಶಿವಲೋಕಾತ್ಕದಾಚನ ॥ ೫೯ ॥
ಪಿಶಾಚಮೋಚನಕಥಾಂ ಪವಿತ್ರಾಂ ಪಾಪಹಾರಿಣೀಂ ।
ಯಃ ಪಠೇಚ್ಛೃಣುಯಾಚ್ಚೈವ ಹಯಮೇಧಫಲಂ ಲಭೇತ್ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಸುಂದರಕುಂಡ ಪಿಶಾಚಮೋಚನ ತೀರ್ಥಮಾಹಾತ್ಮ್ಯವರ್ಣನಂ" ನಾಮ ತ್ರಿಪಂಚಾಶತ್ತಮೋಽಧ್ಯಾಯಃ

---

೫೫–೫೬. ಎಲೈ ವ್ಯಾಸನೆ! ಅಂದು ಮೊದಲುಗೊಂಡು ಆ ತೀರ್ಥಕ್ಕೆ ಪಿಶಾಚಮೋಚನವೆಂದು ಹೆಸರಾಯಿತು. ಆ ಲಿಂಗವೂ ಪಿಶಾಚಮೋಚನೇಶ್ವರನೆಂದು ಪ್ರಖ್ಯಾತಿಯನ್ನು ಪಡೆಯಿತು. ಎಲ್ಲಿಯವರೆಗೆ ಮಾನವನು ಪಿಶಾಚಮೋಚನವೆಂಬ ಶಿಪ್ರಾನದಿಯ ತೀರ್ಥವನ್ನು ಸೇವಿಸುವುದಿಲ್ಲವೊ, ಅಲ್ಲಿಯವರೆಗೆ ಮಾತ್ರ ಪಾತಕಗಳು ಮನುಷ್ಯನನ್ನು ಆವರಿಸಲು ಮದ್ದಾನೆಗಳಂತೆ ಘರ್ಜಿಸುತ್ತಿರುವುವು.

೫೭–೫೮. ಪಿಶಾಚಮೋಚನತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಶುಚಿಯಾಗಿ ಚಿತ್ತೈಕಾಗ್ರತೆಯಿಂದ ಯಥಾವಿಧಿಯಾಗಿ ಪಿಶಾಚಮೋಚನೇಶ್ವರನನ್ನು ಪೂಜಿಸಲು ಮನುಷ್ಯನು ಸಮಸ್ತ ಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧನಾಗುವುದರಲ್ಲಿ ಸಂದೇಹವಿಲ್ಲ.

೫೯. ವ್ಯಾಸಮುನಿವರ್ಯನೆ! ಪಿಶಾಚಮೋಚನತೀರ್ಥದಲ್ಲಿಯೇ ಸಕಲ ದಾನಗಳನ್ನೂ ಮಾಡಬೇಕು. ಅವನಿಗೆ ಶಿವಲೋಕದಲ್ಲಿ ವಾಸವು ಲಭಿಸುವುದಲ್ಲದೆ ಎಂದಿಗೂ ಪುನರ್ಜನ್ಮವಿಲ್ಲ.

೬೦. ಪರಮಪವಿತ್ರವೂ ಪಾಪಪರಿಹಾರಕವೂ ಆದ ಈ ಪಿಶಾಚಮೋಚನತೀರ್ಥದ ಕಥೆಯನ್ನು ಯಾರು ಭಕ್ತಿಯಿಂದ ಪಠಿಸುವರೊ, ಮತ್ತು ಕೇಳುವರೊ, ಅವರಿಗೆ ಅಶ್ವಮೇಧಯಜ್ಞನವನ್ನು ಮಾಡಿದ ಪುಣ್ಯವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಸುಂದರಕುಂಡ–ಪಿಶಾಚಮೋಚನಮಾಹಾತ್ಮ್ಯವರ್ಣನ" ವೆಂಬ ಐವತ್ತಮೂರನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

## ಅಥ ಚತುಃಪಂಚಾಶತ್ತಮೋಽಧ್ಯಾಯಃ

### ನೀಲಗಂಗಾಮಾಹಾತ್ಮ್ಯವರ್ಣನಂ

**ವ್ಯಾಸ ಉವಾಚ :—**

**ಭೂಯಸ್ತು ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ।**
**ನೀಲಗಂಗಾ ಕದಾ ಬ್ರಹ್ಮನ್ ಶಿಪ್ರಾಕುಂಡೇ ಸಮಾಗತಾ ॥ ೧ ॥**

**ಸನತ್ಕುಮಾರ ಉವಾಚ :—**

**ಶೃಣು ವ್ಯಾಸ ಮಹಾತೀರ್ಥಂ ಸರ್ವತೀರ್ಥಫಲಪ್ರದಂ ॥ ೨ ॥**
**ನೀಲಗಂಗಾಂ ನರಃ ಸ್ನಾತ್ವಾ ಸಂಗಮೇಶ್ವರಮರ್ಚಯೇತ್ ।**
**ದುಃಸಂಗಸಂಭವಾ ದೋಷಾ ನ ಭವಂತಿ ಕದಾಚನ ॥ ೩ ॥**
**ಏಕದಾ ಬ್ರಹ್ಮಲೋಕೇ ವೈ ಗಂಗಾ ತ್ರಿಪಥಗಾ ನದೀ ।**
**ಗತಾ ಪುನಂತೀ ತ್ರೀಂಲ್ಲೋಕಾನ್ನೀಲವಾಸಾ ಶುಚಾರ್ದಿತಾ ॥ ೪ ॥**
**ಭಗವನ್ಕಿಮಿದಂ ಜಾತಂ ಪಾತಕಂ ಮೇ ಕೃತಂ ಪುರಾ ।**
**ದುಷ್ಟಾಚಾರಾಪರಾಧೇನ ಯೇನೇಮಾಂ ಪ್ರಾಪಿತಾ ದಶಾಂ ॥ ೫ ॥**

---

### ಕನ್ನಡದ ಅನುವಾದ

#### ನೀಲಗಂಗಾಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ :–ಬ್ರಹ್ಮಜ್ಞರಲ್ಲಿ ಶ್ರೇಷ್ಠನಾದವನೆ! ಈ ಶಿಪ್ರಾ ಕುಂಡದಲ್ಲಿ ನೀಲಗಂಗಾತೀರ್ಥವು ಯಾವಾಗ ಬಂದಿತೆಂಬುದನ್ನು ನಿನ್ನಿಂದ ಕೇಳಲು ಕುತೂಹಲವುಳ್ಳವನಾಗಿರುವೆನು.

೨. ಸನತ್ಕುಮಾರನು ಹೇಳುತ್ತಾನೆ :—ಎಲೈ ವ್ಯಾಸನೆ! ಈ ಮಹಾ ತೀರ್ಥವು ಸಕಲತೀರ್ಥಗಳ ಫಲವನ್ನೂ ಕೊಡಿಸುವುದಾಗಿರುವುದು.

೩. ನೀಲಗಂಗಾತೀರ್ಥದಲ್ಲಿ ಮಿಂದ ನರನು ಸಂಗಮೇಶ್ವರನ ಪೂಜೆಯನ್ನು ಮಾಡಬೇಕು. ಅವನಿಗೆ ದುಷ್ಟಸಹವಾಸದಿಂದ ಜನಿಸಿದ ದೋಷಗಳೆಂದಿಗೂ ಅಂಟುವುದಿಲ್ಲ.

೪. ತ್ರಿಪಥಗೆಯೆನಿಸಿದ ಗಂಗೆಯು ಮೂರು ಲೋಕಗಳನ್ನೂ ಪಾವನ ಗೊಳಿಸುತ್ತ ಒಮ್ಮೆ ನೀಲವಸ್ತ್ರವನ್ನುಟ್ಟು ಅತ್ಯಂತದುಃಖಗೊಂಡವಳಾಗಿ ಬ್ರಹ್ಮ ಲೋಕಕ್ಕೆ ಹೋಗಿ ಚತುರ್ಮುಖನೊಡನೆ ಇಂತೆಂದಳು.

೫. "ಸ್ವಾಮಿಯೆ! ನಾನು ಹಿಂದಿನ ಜನ್ಮಗಳಲ್ಲಿ ಯಾವ ಪಾತಕಗಳನ್ನು ಮಾಡಿದೆನು? ಯಾವ ದುರಾಚಾರಗಳನ್ನಾಶ್ರಯಿಸಿದ ಅಪರಾಧಕ್ಕಾಗಿ ನನಗೆ ಈ ದೆಸೆಯುಂಟಾಯಿತು?

ಸರ್ವಲೋಕೇಷು ಯತ್ಕಿಂಚಿಜ್ಜನಾನಾಂ ಪಾತಕಂ ಭುವಿ ।
ತತ್ಸರ್ವಂ ತಿಷ್ಠತಿ ಮಯಿ ಸರ್ವೇಷಾಮಪಿ ದೇಹಿನಾಂ ॥ ೬ ॥
ತೇನಾಽಹಂ ವೈ ಭರಾಕ್ರಾಂತಾ ನೋ ಶಕ್ತಾ ಚಲಿತುಂ ಧರಾಂ ।
ನೀಲಭಾಸಾ ವಿವರ್ಣಾ ಚ ಸರ್ವಧರ್ಮಬಹಿರ್ಮುಖಾ ॥ ೭ ॥
ಯತ್ಕಿಂಚಿತ್ಕ್ರಿಯತೇ ಕರ್ಮ ಶುಭಂ ವಾ ಯದಿ ವಾಽಶುಭಂ ।
ಮಯಿ ತ್ಯಕ್ತ್ವಾ ಪುನಂತೀಹ ಜಂತವಃ ಸರ್ವಶೋಽಮಲಾಃ ॥ ೮ ॥
ತಿಷ್ಠಂತಿ ಪುಣ್ಯಲೋಕೇಷು ಭುಕ್ತಿಮುಕ್ತಿಪ್ರದೇಷು ಚ ।
ಅಸ್ಮಾಕಂ ಚ ಮಹತ್ಕಷ್ಟಂ ಜಾತಂ ಧಾತಃ ಪರಂ ಮಲಂ ॥ ೯ ॥
ನ ಹಿ ಶರ್ಮ ನ ವೈ ಶಾಂತಿರ್ನ ನಿದ್ರಾ ನ ಚ ನಿರ್ವೃತಿಃ ।
ನ ಲೋಕೇ ಚ ಸ್ಥಿತಿರ್ಮೇಽದ್ಯ ಪಾಪಿಷ್ಠಾಯಾಃ ಸನಾತನೀ ॥ ೧೦ ॥
ದುಷ್ಟಸಂಗೋದ್ಭವೈರ್ದೋಷೈಃ ಪ್ಲಾವಿತಾಽಹಂ ಜಗದ್ಗುರೋ ।
ಕಿಂ ಕರೋಮಿ ಕ್ವ ಗಚ್ಛಾಮಿ ಯೇನ ಶಾಂತಿರ್ಭವೇನ್ಮಮ ।
ಕಿಂ ತಪಃ ಕಿಂ ಚ ದಾನಂ ಮೇ ಕಿಂ ತೀರ್ಥಂ ಕಿಂ ಚ ಸಾಧನಂ ॥ ೧೧ ॥

---

೬. ಸಕಲ ಲೋಕಗಳಲ್ಲಿಯೂ ಜನರು ಯಾವ ಪಾತಕಗಳನ್ನು ಮಾಡಿದರೂ ಆಯಾ ಮನುಷ್ಯರ ಪಾತಕಗಳೆಲ್ಲವೂ ನನ್ನಲ್ಲಿಯೇ ಸೇರುವುವು.

೭. ಆದುದರಿಂದ ನಾನು ಈ ಪಾಪದ ಭಾರವನ್ನು ಹೊತ್ತುಕೊಂಡು ಭೂಮಿಯನ್ನು ನಡೆಸಲು ಶಕ್ತಳಾಗಿಲ್ಲ. ಈಗ ನಾನು ನೀಲವರ್ಣವುಳ್ಳವಳೂ, ವರ್ಣರಹಿತಳೂ, ಸಕಲಧರ್ಮಬಹಿಷ್ಕೃತಳೂ ಆಗಿರುವೆನಲ್ಲವೆ.

೮. ಸಕಲ ಜಂತುಗಳೂ ಶುಭ ಮತ್ತು ಅಶುಭಗಳಾದ ಯಾವುವೇ ಕೆಲಸಗಳನ್ನು ಮಾಡಿದರೂ ಅವುಗಳನ್ನೆಲ್ಲ ನನ್ನಲ್ಲಿ ತ್ಯಾಗಮಾಡಿ ಪರಿಶುದ್ಧರಾಗಿ ಮೋಕ್ಷಭಾಗಿಗಳಾಗುವರು.

೯. ಅವರೆಲ್ಲರೂ ಭೋಗಮೋಕ್ಷಪ್ರದಗಳಾದ ಪುಣ್ಯಲೋಕಗಳಲ್ಲಿ ವಾಸ ಮಾಡುತ್ತಿರುವರು. ಬ್ರಹ್ಮದೇವನೆ! ನನಗಾದರೊ ಮಹತ್ತರವಾದ ಕಷ್ಟವೂ ಪಾಪಲೇಪವೂ ಪ್ರಾಪ್ತವಾಗಿರುವುವು.

೧೦. ನನಗೆ ಸೌಖ್ಯವಾಗಲಿ, ಮನಶ್ಶಾಂತಿಯಾಗಲಿ, ಸಿದ್ಧಿಯಾಗಲಿ, ಸಂತೋಷವಾಗಲಿ, ಪಾಪಭರಿತಳಾದುದರಿಂದ ಭೂಲೋಕದಲ್ಲಿ ಅನಾದಿನಿಧನವಾದ ಒಂದು ಸ್ಥಾನವಾಗಲಿ ಇಲ್ಲವಾಯಿತು.

೧೧–೧೨. ಲೋಕೇಶ್ವರನೆ! ದುರ್ಜನರ ಸಂಗದಿಂದುಂಟಾದ ದೋಷಗಳಲ್ಲಿ ನಾನು ಮುಳುಗಿಹೋಗಿರುವೆನು. ಏನುಮಾಡಲಿ? ಎಲ್ಲಿಗೆ ಹೋಗಲಿ? ಯಾವುದರಿಂದ ನನಗೆ ಶಾಂತಿಯುಂಟಾದೀತು? ಯಾವ ತಪಸ್ಸನ್ನು, ದಾನವನ್ನು, ತೀರ್ಥಸೇವೆಯನ್ನು, ಇತರ ಸಾಧನವನ್ನು ಮಾಡಿದರೆ ಪಾಪಲೇಪ

ಯೇನಾಽಹಂ ಪಾಪಲಿಪ್ತಾಂಗೀ ಪುನಃ ಪ್ರಕೃತಿಮಾಪ್ನುಯಾಂ ।
ಏವಂ ಜ್ಞಾತ್ವಾ ಮಹಾಯೋಗಿನ್ಯಥಾಯೋಗ್ಯಂ ತಥಾ ಕುರು ॥ ೧೨ ॥

ಬ್ರಹ್ಮೋವಾಚ :—

ಶ್ರೂಯತಾಂ ಭೋಃ ಸರಿಚ್ಛ್ರೇಷ್ಠೇ ಕಾರಣಂ ಪಾಪನಾಶನಂ ।
ಮಹಾಕಾಲವನೇ ರಮ್ಯೇ ಪುರೀ ಹ್ಯೇಷಾಽಮರಾವತೀ ॥ ೧೩ ॥
ತತ್ರ ಶಿಪ್ರಾ ಸರಿಚ್ಛ್ರೇಷ್ಠಾ ವರ್ತತೇ ಭುವಿ ಪಾವನೀ ।
ತಸ್ಯಾ ದರ್ಶನಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೧೪ ॥
ತತ್ರ ಗಚ್ಛ ಮಹಾಭಾಗೇ ಸದ್ಯಶ್ಚಾತ್ಮವಿಶುದ್ಧಯೇ ।
ಬ್ರಹ್ಮಣೇತಿ ಸಮಾಖ್ಯಾತಂ ಶ್ರುತ್ವಾ ಗಂಗಾ ಸರಿದ್ವರಾ ॥ ೧೫ ॥
ತಮಭಿಜ್ಞಾಯ ಸಂಪ್ರಾಪ್ತಾ ಮಹಾಕಾಲವನಂ ಶುಭಂ ।
ಪುಷ್ಕರಸ್ಯಾಗ್ನಿಭಾಗೇ ಚ ಯತ್ರ ದೇವೋ ಮರುತ್ಸುತಃ ॥ ೧೬ ॥
ವಿಂಧ್ಯಸ್ಯ ಚೋತ್ತರೇ ಭಾಗೇ ಅಂಜನ್ಯಾಶ್ರಮಮುತ್ತಮಂ ।
ಸಾ ಪುತ್ರೇಣ ತಪಸ್ತೇಪೇ ಪವಿತ್ರಾ ಬ್ರಹ್ಮಚಾರಿಣೀ ॥ ೧೭ ॥

---

ವುಳ್ಳ ನಾನು ಮತ್ತೆ ಸ್ವಸ್ಥಚಿತ್ತಳಾಗುವೆನು? ಮಹಾಯೋಗಿಯೆ! ಇದೆಲ್ಲವನ್ನೂ ತಿಳಿದು ಯೋಗ್ಯವಾದ ರೀತಿಯಲ್ಲಿ ನನಗೆ ಉಪದೇಶಮಾಡುವವನಾಗು."

೧೩. ಬ್ರಹ್ಮನು ಹೇಳುತ್ತಾನೆ:—"ಎಲೌ ನದೀಶ್ರೇಷ್ಠಳೆ! ನಿನ್ನಲ್ಲಿ ಕೂಡುವ ಪಾತಕಳು ನಿವಾರಣೆಯಾಗಲು ಒಂದು ಉಪಾಯವನ್ನು ಹೇಳುವೆನು, ಕೇಳು. ರಮ್ಯವಾದ ಮಹಾಕಾಲವನದಲ್ಲಿ ಅಮರಾವತಿಯೆಂಬ ಒಂದು ಮಹಾನಗರ ವಿರುವುದು.

೧೪. ಸಕಲ ಲೋಕಗಳಲ್ಲಿಯೂ ಪರಮಪಾವನವೆನಿಸಿದ ಶ್ರೇಷ್ಠವಾದ ಶಿಪ್ರಾನದಿಯೂ ಅಲ್ಲಿ ಪ್ರವಹಿಸುತ್ತಿರುವುದು. ಅದನ್ನು ನೋಡುವ ಮಾತ್ರ ದಿಂದಲೇ ಸಕಲ ಪಾಪಗಳೂ ನಾಶವಾಗುವುವು.

೧೫. ಮಹಾಮಹಿಮಳೆ! ನಿನ್ನ ಪರಿಶುದ್ಧತೆಗಾಗಿ ಈ ಕ್ಷಣವೇ ಅಲ್ಲಿಗೆ ಹೋಗುವವಳಾಗು." ಇಂತೆಂದು ಬ್ರಹ್ಮದೇವನ ಅಪ್ಪಣೆಯನ್ನು ಕೇಳಿ ಸರಿಚ್ಛ್ರೇಷ್ಠಳಾದ ಗಂಗೆಯು ಅಲ್ಲಿಂದ ಹೊರಟಳು.

೧೬. ಆತನನ್ನು ನಮಸ್ಕರಿಸಿ ಶುಭಕ್ಷೇತ್ರವಾದ ಮಹಾಕಾಲವನವಿದ್ದಲ್ಲಿಗೆ ಬಂದಳು. ಪುಷ್ಕರಕ್ಕೆ ಆಗ್ನೇಯದಿಗ್ಭಾಗದಲ್ಲಿ ಪವಮಾನತನಯನಾದ ಹನುಮಂತನು ಅಲ್ಲಿದ್ದನಷ್ಟೆ.

೧೭. ವಿಂಧ್ಯಪರ್ವತದ ಉತ್ತರದಲ್ಲಿ ಉತ್ತಮವಾದ ಅಂಜನ್ಯಾಶ್ರಮವಿರುವುದು. ಅಲ್ಲಿಯೇ ಪುತ್ರನಾದ ಮಾರುತಿಯೊಡನೆ ಅಂಜನಾದೇವಿಯು ಪವಿತ್ರಳೂ ಬ್ರಹ್ಮಚರಿಣಿಯೂ ಆಗಿ ತಪಸ್ಸನಾಚರಿಸಿದಳು.

ಪತಿವ್ರತಾಭಿಃ ಸರ್ವಾಭಿಃ ಪತಿಭಿರ್ಬ್ರಹ್ಮಚಾರಿಭಿಃ ।
ದೇವಾಂಗನಾಭಿರ್ಬಹುಭಿಃ ಕ್ರೀಡದ್ಭಿರ್ಬಾಲಕುಂಜರೈಃ ॥ ೧೮ ॥
ಸರಸೀಫುಲ್ಲಕಲ್ಹಾರೈರ್ಮತ್ತಾಲಿಕುಲನಾದಿತೈಃ ।
ನಿರ್ವೈರಜಂತುಭಿಃ ಸೇವ್ಯಂ ಬ್ರಹ್ಮರ್ಷಿಗಣಸೇವಿತಂ ॥ ೧೯ ॥
ಮನೋಹ್ಲಾದಕರಂ ಪುಣ್ಯಂ ಪವಿತ್ರಂ ಪಾಪನಾಶನಂ ।
ತತ್ರ ಪ್ರವೇಶಮಾತ್ರೇಣ ನೀಲವಾಸಾಃ ಸರಿದ್ವರಾ ॥ ೨೦ ॥
ಶುಕ್ಲವಾಸಾಭವತ್ಸದ್ಯೋ ನಷ್ಟಪಾಪಮಲಾಶುಭಾ ।
ಶರಚ್ಚಂದ್ರನಿಭಾಕಾರಾ ಧೂತಪಾಪಾ ಪಯಸ್ವಿನೀ ॥ ೨೧ ॥
ತತ್ರೈವ ಚಾಶ್ರಮಂ ಚಕ್ರೇ ಮನಃಸಂಹರ್ಷಕಾರಣಂ ।
ತತ್ಪ್ರಭೃತಿ ಸಮಾಖ್ಯಾತಂ ಸರ್ವಲೋಕೇಷು ಪುಣ್ಯದಂ ॥ ೨೨ ॥
ನೀಲಗಂಗೇತಿ ವೈ ವ್ಯಾಸ ತೀರ್ಥಂ ಕಿಲ್ಬಿಷನಾಶನಂ ।
ಅಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಹನುಮಂತಮಥಾರ್ಚಯೇತ್ ॥ ೨೩ ॥

---

೧೮–೧೯. ಆ ಆಶ್ರಮಪ್ರದೇಶವು ಸಕಲಪತಿವ್ರತೆಯರಿಂದಲೂ, ಬ್ರಹ್ಮಚರ್ಯವ್ರತನಿಷ್ಠರಾದ ಅವರ ಪತಿಗಳಿಂದಲೂ, ಅಸಂಖ್ಯಾತರಾದ ದೇವಕನ್ಯೆಯರಿಂದಲೂ, ಕ್ರೀಡಿಸುತ್ತಿರುವ ಆನೆಯ ಮರಿಗಳಿಂದಲೂ, ಮದಿಸಿದ ದುಂಬಿಗಳ ಗುಂಪುಗಳ ಝೇಂಕಾರದಿಂದಲೂ ಕೂಡಿ ಸರೋವರಗಳಲ್ಲಿ ಅರಳಿರುವ ಕಮಲಕಲ್ಹಾರಗಳಿಂದಲೂ, ಸ್ವಭಾವಜನ್ಯವಾದ ವೈರವನ್ನು ತ್ಯಜಿಸಿ ಸಂಚರಿಸುತ್ತಿರುವ ಮೃಗಗಳಿಂದಲೂ, ಸೇವಿತವಾಗಿ ಬ್ರಹ್ಮರ್ಷಿಗಳ ಗಡಣಗಳಿಗೆ ನಿವಾಸವೆನಿಸಿದ್ದಿತು.

೨೦–೨೧. ಮತ್ತು ಮನಸ್ಸಿಗೆ ಆನಂದವನ್ನುಂಟುಮಾಡುವುದೂ, ಪುಣ್ಯಪ್ರದವೂ, ಪವಿತ್ರವೂ, ಪಾಪನಾಶಕವೂ ಆದ ಆ ಪ್ರದೇಶವನ್ನು ಪ್ರವೇಶಿಸಿದ ಕ್ಷಣದಲ್ಲಿಯೇ ನೀಲವಸ್ತ್ರಧರಳಾಗಿದ್ದ ಗಂಗೆಯು ಶುಭ್ರವಸ್ತ್ರಾನ್ವಿತೆಯಾದಳು. ತನ್ನ ಸಮಸ್ತ ಪಾತಕಗಳನ್ನೂ, ಮಲಗಳನ್ನೂ, ಅಶುಭಗಳನ್ನೂ ಕಳೆದುಕೊಂಡಳು. ಶರತ್ಕಾಲದ ಚಂದ್ರನನ್ನು ಹೋಲುವ ಮೈಬಣ್ಣವುಳ್ಳವಳಾಗಿ ನದ್ಯಭಿಮಾನಿದೇವತೆಯಾದ ಆ ಗಂಗೆಯು ಶುದ್ಧೋದಕವುಳ್ಳವಳಾದಳು.

೨೨. ಅಲ್ಲಿಯೇ ತನ್ನ ಮನಸ್ಸಿಗೆ ಹರ್ಷವನ್ನುಂಟುಮಾಡುವಂತೆ ಒಂದು ಆಶ್ರಮವನ್ನು ಕಟ್ಟಿಕೊಂಡಳು. ಅಂದಿನಿಂದ ಸಕಲಲೋಕದಲ್ಲಿಯೂ ಅಲ್ಲಿರುವ ತೀರ್ಥವು ಪರಮಪುಣ್ಯಪ್ರದವೆಂದು ಪ್ರಖ್ಯಾತವಾಯಿತು.

೨೩–೨೫. ವ್ಯಾಸಮುನಿಯೆ ! ಪಾಪನಾಶಕವಾದ ಈ ತೀರ್ಥಕ್ಕೆ ನೀಲಗಂಗಾತೀರ್ಥವೆಂದೇ ಹೆಸರಾಯಿತು. ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ಅಲ್ಲಿರುವ ಹನುಮಂತನನ್ನು ಪೂಜಿಸಬೇಕು. ಹಾಗೆ ಪೂಜಿಸಿದವನಿಗೆ ಅಭೀಪ್ಸಿತ

ತಸ್ಯ ಸಿದ್ಧಿಃ ಕರಗತಾ ಭವಿಷ್ಯತಿ ನ ಸಂಶಯಃ ।
ಆಶ್ವಿನೇ ಮಾಸಿ ಸಂಪ್ರಾಪ್ತೇ ಕೃಷ್ಣಪಕ್ಷೇ ಸಮಾಹಿತಃ ॥ ೨೪ ॥
ದರ್ಶೇ ಪಿತೄನ್ಸಮುದ್ದಿಶ್ಯ ಶ್ರಾದ್ಧಂ ಕುರ್ಯಾನ್ಮಹಾಲಯಂ ।
ತಾರಿತಂ ಚ ಕುಲಂ ಸರ್ವಂ ತೇನಾತ್ಮೈಕೋತ್ತರಂ ಶತಂ ॥ ೨೫ ॥
ಸಮಗೋತ್ರೇಷು ಯೇ ಜಾತಾಃ ಪೂರ್ವಜಾ ನಿರಯವಾಸಿನಃ ।
ತೇ ಸರ್ವೇ ಸದ್ಗತಿಂ ಯಾಂತಿ ತೇಷಾಂ ಲೋಕಾಃ ಸನಾತನಾಃ ॥ ೨೬ ॥
ಸ್ನಾತ್ವಾ ತಿಲಾಂಜಲಿಂ ದದ್ಯಾತ್ಪಿತೄನುದ್ದಿಶ್ಯ ತತ್ಪರಃ ।
ಅಕ್ಷಯಾ ಜಾಯತೇ ತೃಪ್ತಿಃ ಸ್ವರ್ಗಲೋಕೇ ಮಹೀಯತೇ ॥ ೨೭ ॥
ಭೋಜಯೇದ್ಬ್ರಾಹ್ಮಣಾನ್ ಸಪ್ತ ಶ್ರಾದ್ಧಂ ಕೃತ್ವಾ ತು ಪಾಯಸೈಃ ।
ಅಕ್ಷಯಂ ಲಭತೇ ಶ್ರಾದ್ಧಮಶ್ವಮೇಧಫಲಂ ಭವೇತ್ ॥ ೨೮ ॥
ತೀರ್ಥಂ ಪುಣ್ಯತರಂ ವ್ಯಾಸ ಶೃಣು ಚಾನ್ಯದ್ವದಾಮಿ ತೇ ।
ದುಗ್ಧಕುಂಡಮಿತಿ ಖ್ಯಾತಂ ತ್ರಿಷು ಲೋಕೇಷು ವಿಶ್ರುತಂ ॥ ೨೯ ॥
ಸರ್ವಪಾಪಹರಂ ಪುಣ್ಯಂ ಸರ್ವಕಾಮವರಪ್ರದಂ ।
ಪುರಾ ದುಗ್ಧಧರಾ ದೇವೀ ಪೃಥುನಾ ಧರ್ಮಮೂರ್ತಿನಾ ॥ ೩೦ ॥

---

ಕಾರ್ಯದಲ್ಲಿ ಸಂಪೂರ್ಣಸಿದ್ಧಿಯು ಕರಗತವಾಗುವುದರಲ್ಲಿ ಸಂದೇಹವಿಲ್ಲ. ಆಶ್ವಯುಜಮಾಸದ ಮೊದಲಿನಲ್ಲಿ ಬರುವ ಕೃಷ್ಣಪಕ್ಷದ ಅಮಾವಾಸ್ಯೆಯ ದಿನದಲ್ಲಿ ಪಿತೃಗಳನ್ನುದ್ದೇಶಿಸಿ ಈ ತೀರ್ಥದಲ್ಲಿ ಮಹಾಲಯಾ ಅಮಾವಾಸ್ಯೆಯ ಕ್ರಮವನ್ನು ನಡೆಸಬೇಕು. ಆ ಕರ್ತೃವಿನ ನೂರೊಂದು ಕುಲದವರೂ ಅದರಿಂದ ಉದ್ಧೃತರಾಗುವರು.

೨೬. ಕರ್ತೃವಿನ ಗೋತ್ರದಲ್ಲಿ ಹಿಂದೆ ಜನಿಸಿ ತಮ್ಮ ದುಷ್ಕರ್ಮಗಳಿಂದ ನರಕದಲ್ಲಿ ವಾಸಮಾಡುತ್ತಿರುವ ಪೂರ್ವಜರೆಲ್ಲರೂ ಈ ಕರ್ಮದಿಂದ ಸದ್ಗತಿಯನ್ನು ಹೊಂದುವರು. ಅವರಿಗೆ ಶಾಶ್ವತಲೋಕಗಳೂ ಲಭಿಸುವುವು.

೨೭. ಇತರ ದಿವಸಗಳಲ್ಲಿಯೂ ಇಲ್ಲಿ ಸ್ನಾನವನ್ನು ಮಾಡಿ ಪಿತೃಗಳನ್ನು ನೆನೆದು ತಿಲತರ್ಪಣಗಳನ್ನಿತ್ತರೂ, ಕರ್ತೃವಿನ ಆ ಭಕ್ತಿಯಿಂದ ಅವರಿಗೆ ಅಕ್ಷಯ ತೃಪ್ತಿಯಾಗುವುದು. ಕರ್ತೃವೂ ಸ್ವರ್ಗಲೋಕದಲ್ಲಿ ಸುಖಿಸುವನು.

೨೮. ಶ್ರಾದ್ಧವನ್ನು ಮಾಡಿ ಪಾಯಸಾನ್ನಗಳಿಂದ ಏಳುಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಲು ಆ ಶ್ರಾದ್ಧವು ಅಕ್ಷಯಫಲದಾಯಕವಾಗುವುದು. ಶ್ರಾದ್ಧಮಾಡಿಸಿದವನಿಗೂ ಅಶ್ವಮೇಧಫಲವು ಲಭಿಸುವುದು.

೨೯. ವ್ಯಾಸನೆ! ಮತ್ತೊಂದು ಪುಣ್ಯತಮವಾದ ತೀರ್ಥವನ್ನು ಕುರಿತು ಹೇಳುವೆನು, ಕೇಳು. ದುಗ್ಧಕುಂಡವೆಂದು ಪ್ರಖ್ಯಾತವಾದ ಈ ತೀರ್ಥವು ಮೂರು ಲೋಕಗಳಲ್ಲಿಯೂ ಎಲ್ಲರ ಕಿವಿಗಳಿಗೂ ಬಿದ್ದಿರುವುದು.

೩೦. ಈ ತೀರ್ಥವು ಸಕಲಪಾಪಗಳನ್ನು ಕಳೆಯುವುದೂ, ಪುಣ್ಯವನ್ನು

ದುಗ್ಧಂ ಸರ್ವಂ ಹವಿರ್ಭಾವ್ಯಂ ಸರ್ವೇಷಾಂ ಜೀವನಪ್ರದಂ ।
ದತ್ತಂ ನಿಧಾಯ ಕುಂಡೇಽಸ್ಮಿಂಸ್ತೇನ ದುಗ್ಧಸರಃ ಸ್ಮೃತಂ ॥ ೩೧ ॥
ಕುಂಡೇ ಸ್ನಾತ್ವಾ ಪಯಃ ಪೀತ್ವಾ ದತ್ವಾ ಗಾಂ ಚ ಪಯಸ್ವಿನೀಂ ।
ಸರ್ವಬಾಧಾವಿನಿರ್ಮುಕ್ತೋ ಧನಧಾನ್ಯಸಮನ್ವಿತಃ ॥ ೩೨ ॥
ಜಾಯತೇ ಸರ್ವಕಾಲೇಷು ಮೃತಃ ಸ್ವರ್ಗಪುರಂ ವ್ರಜೇತ್ ।
ತತಃ ಪುಷ್ಕರಮಾಸಾದ್ಯ ಸ್ನಾನದಾನಾದಿಕಂ ಚರೇತ್ ॥ ೩೩ ॥
ಸರ್ವಪಾಪವಿಶುದ್ಧಾತ್ಮಾ ಪುಷ್ಕರಸ್ಯ ಫಲಂ ಲಭೇತ್ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ನೀಲಗಂಗಾಮಾಹಾತ್ಮ್ಯವರ್ಣನಂ" ನಾಮ ಚತುಃಪಂಚಾಶತ್ತಮೋಽಧ್ಯಾಯಃ

---

ಕೊಡುವುದೂ, ಸಕಲಾಭೀಷ್ಟದಾಯಕವೂ ಆಗಿರುವುದು. ಹಿಂದೆ ಧರ್ಮವೇ ಮೂರ್ತಿಗೊಂಡಂತಿದ್ದ ಪೃಥುಮಹಾರಾಜನು ಗೋರೂಪಧಾರಿಣಿಯಾಗಿದ್ದ ಭೂಮಿಯನ್ನು ಕರೆದನಷ್ಟೆ.

೩೧. ಯಜ್ಞಗಳ ಹವಿಸ್ಸುಗಳಿಗೆ ಯೋಗ್ಯವೂ, ಸಕಲಪ್ರಾಣಿಗಳಿಗೆ ಜೀವನೋಪಾಯವೂ ಆದ ಈ ಆಕಳಿನ ಹಾಲನ್ನೆಲ್ಲ ಈ ಕುಂಡದಲ್ಲಿಟ್ಟು ಆ ಮಹಾರಾಜನು ಜನರಿಗೆ ವಿನಿಯೋಗಿಸಿದನು. ಆದುದರಿಂದ ಇದಕ್ಕೆ ದುಗ್ಧ ಕುಂಡವೆಂಬ ಹೆಸರಾಯಿತು.

೩೨. ಮಾನವನು ಈ ಕುಂಡದಲ್ಲಿ ಸ್ನಾನವನ್ನು ಮಾಡಿ ನೀರನ್ನು ಕುಡಿದು ಕರೆಯುವ ಆಕಳನ್ನು ದಾನಮಾಡಲು ಸಕಲವಿಧಗಳಾದ ಈತಿಬಾಧೆಗಳನ್ನೂ ಕಳೆದುಕೊಂಡು ಧನ ಧಾನ್ಯಗಳ ಸಮೃದ್ಧಿಯನ್ನು ಪಡೆಯುವನು.

೩೩. ಅಲ್ಲದೆ ಯಾವಜ್ಜೀವವೂ ಸುಖಸಂತೋಷಗಳಿಂದ ಕೂಡಿದವನಾಗಿ ಮೃತನಾಗಲು ಸ್ವರ್ಗಲೋಕವನ್ನು ಸೇರುವನು. ಈ ತೀರ್ಥದ ಸೇವೆಯನ್ನು ಮುಗಿಸಿ ಪುಷ್ಕರತೀರ್ಥದಲ್ಲಿ ಸ್ನಾನದಾನದಿಗಳನ್ನು ಮಾಡಬೇಕು.

೩೪. ಅಂತಹ ನರನು ಸಕಲಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧಾತ್ಮನಾಗಿ ಪೌಂಡರೀಕಯಜ್ಞವನ್ನು ಮಾಡಿದ ಫಲಕ್ಕೆ ಭಾಗಿಯಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ನೀಲಗಂಗಾಮಾಹಾತ್ಮ್ಯವರ್ಣನ"ವೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಪಂಚಾಶತ್ತಮೋಽಧ್ಯಾಯಃ

### ವಿಂಧ್ಯವಾಸಿನೀ—ವಿಮಲೋದತೀರ್ಥಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

**ಕೋಽಸೌ ವಿಂಧ್ಯಗಿರಿರ್ಬ್ರಹ್ಮನ್ಕದಾ ಕಾಲೇ ಸಮಾಗತಃ ।**
**ಮಹಾಕಾಲವನೇ ರಮ್ಯೇ ಕೇನ ವಾ ಪ್ರೇಷಿತಃ ಪುರಾ ॥ ೧ ॥**

ಸನತ್ಕುಮಾರ ಉವಾಚ :—

**ಪುರಾ ರೇವಾಜಲೈರ್ವ್ಯಾಸ ಪ್ಲಾವಿತೇಯಂ ವಸುಂಧರಾ ।**
**ತದಾ ಸರ್ವಸುರೈರೇವಮಗಸ್ತಿರ್ಮುನಿಸತ್ತಮಃ ॥ ೨ ॥**
**ಆರಾಧಿತೋ ಮಹಾಭಾಗೋ ಧರಣೀತ್ರಾಣಕಾರಣಾತ್ ।**
**ತದಾಗತ್ಯ ಗಿರೌ ರಮ್ಯೇ ವಿಂಧ್ಯೇ ಸ ಮುನಿಸತ್ತಮಃ ॥ ೩ ॥**
**ಏಕಾಗ್ರಮಾನಸೋ ಭೂತ್ವಾ ಭವಾನೀಂ ವಿಂಧ್ಯವಾಸಿನೀಂ ।**
**ಆರಾಧಯಾಮಾಸ ತದಾ ತಾಂ ಚ ದೇವೀಂ ವರೇಪ್ಸಯಾ ॥ ೪ ॥**
**ಕಂಸವಿದ್ರಾವಣಕರೀಮಸುರಾಣಾಂ ಕ್ಷಯಂಕರೀಂ ।**
**ಭಾರಾಽವತಾರಣೀಂ ಪುಣ್ಯಾಂ ಬಲದೇವಾಽನುಜಾಂ ಶುಭಾಂ ॥ ೫ ॥**

---

### ಕನ್ನಡದ ಅನುವಾದ

#### ವಿಂಧ್ಯವಾಸಿನೀ—ವಿಮಲೋದತೀರ್ಥಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಬ್ರಾಹ್ಮಣಶ್ರೇಷ್ಠನೆ! ವಿಂಧ್ಯಗಿರಿಯೆಂಬುದಾವುದು? ಯಾವ ಕಾಲದಲ್ಲಿ ಇಲ್ಲಿಗೆ ಬಂದಿತು? ರಮ್ಯವಾದ ಈ ಮಹಾಕಾಲವನಕ್ಕೆ ಅದನ್ನು ಹಿಂದೆ ಕಳಿಸಿದವರು ಯಾರು?

೨–೪. ಸನತ್ಕುಮಾರನು ಹೇಳುತ್ತಾನೆ:—ವ್ಯಾಸನೆ! ಮುನ್ನು ರೇವಾನದಿಯ ಜಲದಲ್ಲಿ ಈ ಸಕಲ ಭೂಮಂಡಲವೂ ಮುಳುಗಿಹೋಗಿದ್ದಿತು. ಆ ಸಮಯದಲ್ಲಿ ಮುನಿಶ್ರೇಷ್ಠನೂ ಮಹಾಭಾಗ್ಯವಂತನೂ ಆದ ಅಗಸ್ತ್ಯಮಹಾಮುನಿಯನ್ನು ಸಕಲದೇವತೆಗಳೂ ಸಮಾಪಿಸಿ ಭೂಮಿಯನ್ನುದ್ಧಾರಮಾಡಬೇಕೆಂಬುದಾಗಿ ಪ್ರಾರ್ಥಿಸಿಕೊಂಡರು. ಆ ಮುನಿಸತ್ತಮನು ಅವರ ಮಾತನ್ನಂಗೀಕರಿಸಿ ರಮ್ಯವಾದ ವಿಂಧ್ಯಪರ್ವತಕ್ಕೆ ಬಂದು ಅಲ್ಲಿ ನೆಲಸಿ ವಿಂಧ್ಯವಾಸಿನಿಯೆಂದೇ ಹೆಸರಾದ ಭವಾನೀದೇವಿಯನ್ನು ಏಕಾಗ್ರಚಿತ್ತದಿಂದ ಪೂಜಿಸುತ್ತಿದ್ದನು.

೫. "ಕಂಸನನ್ನು ಓಡಿಸಿದವಳೂ, ರಾಕ್ಷಸರ ಕುಲವನ್ನು ನಾಶಗೊಳಿಸಿದವಳೂ, ಭೂಭಾರವನ್ನಿಳುಹಿದವಳೂ, ಪುಣ್ಯಮೂರ್ತಿಯೂ, ಬಲದೇವನ ಸಹೋದರಿಯೂ ಆದ ನಿನಗೆ ನಮಸ್ಕರಿಸುವೆನು.

ಯಶೋದಾಗರ್ಭಸಂಭೂತಾಂ ಚಾಣೂರಬಲಮರ್ದಿನೀಂ ।
ವಿದ್ಯುದಾಭಾಂ ನಭಃಸ್ಥಾಂ ಚ ಕೃಷ್ಣಾಂ ಕೃಷ್ಣಾಹಿಮರ್ದಿನೀಂ ॥ ೬ ॥
ಜನನೀಂ ದೇವಸೇನಸ್ಯ ಕವೀನಾಂ ವಾಚಮೀಶ್ವರೀಂ ।
ಗಾಯತ್ರೀಂ ದ್ವಿಜಮುಖ್ಯಾನಾಂ ವ್ಯಾಹೃತಿಶ್ಛಂದಸಾಂ ವರಾಂ ॥ ೭ ॥
ಸಹಸ್ರಾಕ್ಷೀಂ ತಥೇಂದ್ರಸ್ಯ ಋಷೇಶ್ಚಾಽರುಂಧತೀಂ ಪರಾಂ ।
ಗವಾಂ ಕಾಮದುಘಾಂ ಶ್ಯಾಮಾಂ ಲತಾಂ ಮಧುತಮಪ್ರಿಯಾಂ ॥ ೮ ॥
ಅದಿತಿಂ ಸರ್ವಮಾತೄಣಾಂ ಪಾರ್ವತೀಂ ಸರ್ವಯೋಷಿತಾಂ ।
ಜ್ಯೋತ್ಸ್ನಾಂ ಚಾಂದ್ರಮಸೀಂ ಬಾಲಾಂ ಸರ್ವಕಾಮವರಪ್ರದಾಂ ॥ ೯ ॥
ಶಾರದೀಮೃತುವೇಲಾಯಾಂ ವೃಂದಾವನಚರೀಂ ವರಾಂ ।
ಮಾಯಿನಾಂ ವೈಷ್ಣವೀಂ ಮಾಯಾಂ ಸರ್ವದೈತ್ಯವಿಮೋಹಿನೀಂ ॥ ೧೦ ॥
ಲಕ್ಷ್ಮೀಂ ಚ ಶ್ರೀಮತಾಮಿಷ್ಟಾಂ ಯಕ್ಷಿಣೀಂ ಧನದಾರ್ಚಿತಾಂ ।
ಮಹೋದಧೇಸ್ಸಿತಾಂ ವೇಲಾಂ ರಾಜ್ಞಾಂ ಚ ರಾಜಸಂಪದಂ ॥ ೧೧ ॥

---

೬. ಯಶೋದಾದೇವಿಯ ಗರ್ಭದಲ್ಲಿ ಜನಿಸಿದವಳೂ, ಚಾಣೂರದೈತ್ಯನ ಬಲವನ್ನು ಮುರಿದವಳೂ, ಕಾಳೀಯದಮನವನ್ನು ಮಾಡಿದವಳೂ ಆದ ನಿನ್ನನ್ನು ಸ್ತೋತ್ರಮಾಡುವೆನು.

೭. ದೇವಸೇನನಿಗೆ ತಾಯಿಯಾದವಳೂ, ಕವಿಗಳ ವಾಗ್ವೈಖರಿಗೆ ಅಧಿದೇವತೆಯೂ, ಬ್ರಾಹ್ಮಣೋತ್ತಮರ ಆರಾಧ್ಯದೈವವಾದ ಗಾಯತ್ರಿಯೂ, ವೇದಗಳಲ್ಲಿ ಪ್ರತಿಪಾದ್ಯಳಾದ ವ್ಯಾಹೃತಿಯೂ ಆದ ನಿನಗೆ ನಮಸ್ಕಾರವು.

೮. ಮಹೇಂದ್ರನಿಗೆ ಇಂದ್ರಾಣಿಯೂ, ವಸಿಷ್ಠಮಹರ್ಷಿಗೆ ಅರುಂಧತೀದೇವಿಯೂ, ಗೋವುಗಳಲ್ಲಿ ಕಾಮಧೇನುವೂ, ಶ್ಯಾಮಲವರ್ಣವುಳ್ಳ ಲತೆಯಂತಿರುವವಳೂ, ವಸಂತಪ್ರಿಯಳೂ ಆದ ನಿನಗೆ ನಮಸ್ಕರಿಸುವೆನು.

೯. ದೇವಮಾತೃಕೆಯರಲ್ಲಿ ಅದಿತಿಯೂ, ಸಕಲಸ್ತ್ರೀಯರಲ್ಲಿ ಪಾರ್ವತೀದೇವಿಯೂ, ಪೂರ್ಣಚಂದ್ರನ ಬೆಳದಿಂಗಳಿನಂತೆ ಮನೋಹರಳೂ, ಬಾಲೆಯೂ, ಸಕಲಾಭೀಷ್ಟವರಗಳನ್ನು ಕೊಡುವವಳೂ ಆದ ನಿನಗೆ ನಮಸ್ಕಾರವಿರಲಿ.

೧೦. ಶರದೃತುವಿನ ಸಮಯದಲ್ಲಿ ವೃಂದಾವನದಲ್ಲಿ ಸಂಚರಿಸುವ ಉತ್ತಮೆಯೂ, ಮಾಯಾಜಾಲಗಳಲ್ಲಿ ಸಕಲರಾಕ್ಷಸರಿಗೂ ಸಮ್ಮೋಹನವನ್ನುಂಟುಮಾಡುವ ವೈಷ್ಣವಮಾಯೆಯೂ ಆದ ನಿನಗೆ ಮಣಿಯುವೆನು.

೧೧. ಐಶ್ವರ್ಯವಂತರಿಗೆ ಇಷ್ಟಳಾದ ಮಹಾಲಕ್ಷ್ಮಿಯೂ, ಕುಬೇರನಿಂದ ಪೂಜಿತಳಾದ ಯಕ್ಷಿಣಿಯೂ, ಮಹಾಸಮುದ್ರಗಳನ್ನು ತಡೆದು ನಿಲ್ಲಿಸುತ್ತಿರುವ ತೀರವೂ, ರಾಜರಿಗೆ ರಾಜ್ಯೈಶ್ವರ್ಯವೂ ಆದ ನಿನಗೆ ನಮಸ್ಕಾರವಿರಲಿ.

ವೇದಿಕಾಂ ಯಜ್ಞಶಾಲಾನಾಂ ಹವಿರಾಹವನೀಂ ಶುಭಾಂ ।
ದಕ್ಷಿಣಾಂ ಸರ್ವದೀಕ್ಷಾಣಾಂ ಸರ್ವಕಾಮಫಲಪ್ರದಾಂ ॥ ೧೨ ॥
ಏವಂ ಸ್ತುತಾ ತದಾ ದೇವೀ ಪ್ರತ್ಯಕ್ಷಾ ವಿಂಧ್ಯವಾಸಿನೀ ।
ಪ್ರಾಹ ಪ್ರಸಾದಸುಮುಖೀ ಋಷೀಣಾಂ ಪ್ರವರಂ ಹ್ಯೃಷಿಂ ॥ ೧೩ ॥
ವ್ರಿಯತಾಂ ಭೋ ದ್ವಿಜಶ್ರೇಷ್ಠ ಯದಸ್ಮತ್ತೋಽಭಿವಾಂಛಿತಂ ।
ಯದೀಪ್ಸಿತಾ ತ್ವಯಾ ವತ್ಸ ಸ್ತುತಿರ್ಮೇ ಶುಚಿನಾ ಕೃತಾ ॥ ೧೪ ॥

ಅಗಸ್ತಿರುವಾಚ:—

ಯದಿ ಮಾತರ್ವರೋ ದೇಯೋ ದೇವಾನಾಮುಪಕಾರಿಣಿ ।
ರೇವೇಯಂ ವರ್ಧಿತಾ ಲೋಕೇ ಸರ್ವಲೋಕಭಯಪ್ರದಾ ॥ ೧೫ ॥
ತಯೇದಂ ಪ್ಲಾವಿತಂ ವಿಶ್ವಂ ತಸ್ಯಾಸ್ತು ಗ್ರಹಣಂ ಕುರು ।
ಇತಿ ಸಾ ಪ್ರಾರ್ಥಿತಾ ತೇನ ತದಾ ಕಾಲೇ ಮಹರ್ಷಿಣಾ ॥ ೧೬ ॥
ಆಗಾತ್ಸಾಧ್ವೀ ತದಾ ವ್ಯಾಸ ಮಹಾಕಾಲವನಂ ಶುಭಂ ।
ಸಾಂತ್ವಪೂರ್ವಂ ವಚಸ್ತಥ್ಯಮಗಸ್ತಿಮಿದಮಬ್ರವೀತ್ ॥ ೧೭ ॥

---

೧೨. ಯಜ್ಞಶಾಲೆಗಳಲ್ಲಿ ವೇದಿಕೆಯ ಸ್ವರೂಪಳೂ, ಹವಿಸ್ಸುಗಳಲ್ಲಿ ಪವಿತ್ರವಾದ ಆಹವನೀಯವೂ, ಸಕಲದೀಕ್ಷೆಗಳನ್ನೂ ಸಾರ್ಥಕಗೊಳಿಸುವಂತಹ ದಕ್ಷಿಣೆಯೂ, ಸಕಲಕಾಮಿತಫಲಗಳನ್ನೂ ಕೊಡುವವಳೂ ಆದ ನಿನ್ನನ್ನು ನಮಸ್ಕರಿಸುವೆನು.''

೧೩. ಇಂತೆಂದು ಅಗಸ್ತ್ಯಮುನಿಯು ಸ್ತುತಿಸುತ್ತಿರಲು ವಿಂಧ್ಯವಾಸಿನೀ ದೇವಿಯು ಪ್ರತ್ಯಕ್ಷಳಾಗಿ ಪ್ರಸನ್ನವಾದ ಮುಖದಿಂದ ಋಷಿವರ್ಯನಾದ ಆತನನ್ನು ಕುರಿತು ಇಂತೆಂದಳು.

೧೪. "ಎಲೈ ಬ್ರಾಹ್ಮಣೋತ್ತಮನೆ! ವತ್ಸ! ಪವಿತ್ರನಾದ ನೀನು ಯಾವ ಅಭಿಲಾಷೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಸ್ತೋತ್ರವನ್ನು ಮಾಡಿದೆಯೊ ಆ ಅಭೀಷ್ಟ ವರವನ್ನು ನನ್ನಿಂದ ಬೇಡು.

೧೫–೧೬. ಅಗಸ್ತ್ಯನು ಹೇಳುತ್ತಾನೆ:—ತಾಯಿ! ದೇವತೆಗಳಿಗೂ ಉಪಕಾರವನ್ನು ಮಾಡುವವಳಾದ ನೀನು ನನಗೆ ವರವನ್ನು ಕೊಡುವವಳಾಗಿದ್ದರೆ ಹೇಳುವೆನು. ಈ ರೇವಾನದಿಯು ಸಕಲ ಭೂಮಂಡಲಕ್ಕೂ ಭಯವನ್ನುಂಟುಮಾಡುತ್ತ ವೃದ್ಧಿಯನ್ನೈದುತ್ತಿರುವುದು. ಆದರಿಂದ ಭೂಮಿಯೆಲ್ಲವೂ ಮುಳುಗಿಹೋಗಿರುವುದು. ಅದನ್ನು ನೀನು ಗ್ರಹಣಮಾಡು.'' ಇಂತೆಂದು ಆ ಕಾಲದಲ್ಲಿ ಮಹರ್ಷಿಯು ಪ್ರಾರ್ಥನೆಯನ್ನು ಮಾಡಿಕೊಂಡನು.

೧೭. ಸಾಧುಸಮ್ಮತಳಾದ ಆ ದೇವಿಯು ಆಗ ಪವಿತ್ರವಾದ ಮಹಾಕಾಲವನವನ್ನು ಪ್ರವೇಶಿಸಿ ಅಗಸ್ತ್ಯಮುನಿಯನ್ನು ಸಮಾಧಾನಗೊಳಿಸುತ್ತ ಯಥಾರ್ಥವಾಗಿ ಹೀಗೆ ಹೇಳತೊಡಗಿದಳು.

ವಾರಯಿಷ್ಯೇ ಪರಾಂ ದೇವೀಂ ವರ್ಧಮಾನಾಂ ದ್ರುತಂ ಹ್ಯೃಷೇ ।
ತಾವತ್ಕಾಲಂ ನ ಚೋತ್ತಿಷ್ಠೇದ್ವಿಂಧ್ಯೋ ನಾಮ ಮಹಾಗಿರಿಃ ॥ ೧೮ ॥
ಯಾವತ್ತ್ರಿಕೂಟೇ ದ್ವಾರೇ ತ್ವಂ ಸ್ಥಾಸ್ಯಸಿ ಋಷಿಸತ್ತಮ ।
ದೇವಕಾರ್ಯೋದ್ಯತೋ ನಿತ್ಯಂ ದಕ್ಷಿಣಾಂ ದಿಶಮುತ್ತಮಾಂ ॥ ೧೯ ॥
ಕುಶಸ್ಥಲೀ ಮಹಾಪುಣ್ಯಾ ಪವಿತ್ರಾ ಪಾಪಹಾರಿಣೀ ।
ಪುರೀ ಹ್ಯೇಷಾ ಮುನಿಶ್ರೇಷ್ಠ ತ್ರಿಷು ಲೋಕೇಷು ವಿಶ್ರುತಾ ॥ ೨೦ ॥
ತತ್ರೈವಾಽಹಂ ಚಿರಂ ಕಾಲಂ ಮಾತೃಭಿರ್ನಿವಸಾಮಿ ವೈ ।
ತತ್ರಾಽಪಿ ತ್ವಂ ಸದಾ ಸಿದ್ಧಕ್ಷೇತ್ರಾಧಿಪತ್ಯಮಾಪ್ನುಯಾಃ ॥ ೨೧ ॥
ಮತ್ಸರೋನಿರ್ಮಲಂ ಪುಣ್ಯಂ ವಿಮಲೋದಂ ಚ ವಿಶ್ರುತಂ ।
ಯತ್ರ ಪುಣ್ಯವತಾಂ ವಾಸೋ ದೇವ್ಯಸ್ತಿಷ್ಠಂತಿ ಕೋಟಿಶಃ ॥ ೨೨ ॥
ತಸ್ಮಿಂಸ್ತೀರ್ಥೇ ನರಾಃ ಸ್ನಾತ್ವಾ ಶುಚಿರ್ಭೂಯ ಸಮಾಹಿತಾಃ ।
ಯಜಂತಿ ಚೈವ ಮಾಂ ಭಕ್ತ್ಯಾ ಧೂಪದೀಪಾಗ್ನಿತರ್ಪಣೈಃ ॥ ೨೩ ॥

---

೧೮. ಮಹರ್ಷಿಯೆ! ಉಕ್ಕಿಬರುತ್ತಿರುವ ಈ ರೇವೆಯನ್ನು ಕ್ಷಿಪ್ರದಲ್ಲಿಯೇ ನಾನು ತಡೆದುಹಾಕುವೆನು. ಅದಕ್ಕೆ ಅಡ್ಡವಾಗಿ ವಿಂಧ್ಯಗಿರಿಯು ಮೇಲಕ್ಕೇಳದಂತೆ ಮಾಡಬೇಕಾಗಿರುವುದು.

೧೯. ಆದುದರಿಂದ ಉತ್ತಮವಾದ ದಕ್ಷಿಣದಿಕ್ಕಿಗೆ ನೀನು ಹೊರಟು ದೇವಕಾರ್ಯದಲ್ಲಿ ನಿರತನಾಗಿ ತಪಸ್ಸನ್ನು ಮಾಡುತ್ತ ತ್ರಿಕೂಟವೆಂಬ ಪರ್ವತ ದ್ವಾರದಲ್ಲಿ ವಾಸಮಾಡುತ್ತಿರು.

೨೦. ಮುನಿಶ್ರೇಷ್ಠನೆ! ಕುಶಸ್ಥಳಿಯೆಂಬ ಈ ಪಟ್ಟಣವು ಮಹಾಪುಣ್ಯಪ್ರದವೂ, ಪವಿತ್ರವೂ, ಪಾಪಗಳನ್ನು ಕಳೆಯುವುದೂ ಆಗಿ, ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು.

೨೧. ಇಲ್ಲಿಯೇ ನಾನು ಬಹುಕಾಲದವರೆಗೆ ಮಾತೃಕೆಯರೊಡನೆ ವಾಸಮಾಡುತ್ತಿರುವೆನು. ಅಲ್ಲಿ ನೀನೂ ಸಹ ಸಿದ್ಧಕ್ಷೇತ್ರದ ಆಧಿಪತ್ಯವನ್ನು ಶಾಶ್ವತವಾಗಿ ಪಡೆದಿರುವೆ.

೨೨. ಮತ್ತು ನನ್ನ ಹೆಸರಿನಿಂದ ನಿರ್ಮಲವೂ, ಪುಣ್ಯಪ್ರದವೂ, ಶುದ್ಧೋದಕಭರಿತವೂ, ಪ್ರಖ್ಯಾತವೂ ಆದ ಸರೋವರವೊಂದು ಉದ್ಭವಿಸುವುದು. ಅಲ್ಲಿ ಪುಣ್ಯವಂತರು ವಾಸಮಾಡುತ್ತಿರುವರು. ಅನೇಕ ಕೋಟಿ ದೇವಿಯರೂ ಅಲ್ಲಿಯೇ ಸನ್ನಿಹಿತರಾಗಿರುವರು.

೨೩–೨೪. ಆ ತೀರ್ಥದಲ್ಲಿ ಸ್ನಾನಮಾಡಿ ಪವಿತ್ರರೂ, ಸಮಾಹಿತಚಿತ್ತರೂ ಆಗಿ ಭಕ್ತಿಯಿಂದ ಯಾವ ಮಾನವರು ನನ್ನ ಪೂಜೆಯನ್ನು ಮಾಡುವರೊ,

ಕ್ಷೀರಖಂಡಾಜ್ಯಭೋಜ್ಯೈಶ್ಚ ಭೋಜಯೇದ್ವಿಧಿವದ್ದ್ವಿಜಾನ್ ।
ನ ತೇಷಾಂ ದುರ್ಲಭಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥ ೨೪ ॥
ಧನಧಾನ್ಯಧರೈಶ್ವರ್ಯಪುತ್ರದಾರಾದಿಸಂಪದಾಂ ।
ಪ್ರಾಪ್ಸ್ಯಂತೇ ವಿವಿಧಾ ಭೋಗಾ ದೇವಾನಾಮಪಿ ದುರ್ಲಭಾಃ ॥ ೨೫ ॥
ಶತ್ರುತೋ ನ ಭಯಂ ತೇಷಾಂ ದಸ್ಯುಭ್ಯೋ ವಾ ನ ರಾಜತಃ ।
ನ ಶಸ್ತ್ರಾಽನಲತೋಽಯೌಘಾತ್ಕದಾಚಿತ್ಸಂಭವಿಷ್ಯತಿ ॥ ೨೬ ॥
ದೀರ್ಘಾಯುರ್ಬುದ್ಧಿಮಾಂಲ್ಲೋಕೇ ಉಷಿತ್ವಾ ಶಾಶ್ವತೀಃ ಸಮಾಃ ।
ಸರ್ವಪಾಪವಿಶುದ್ಧಾತ್ಮಾ ಮೃತಃ ಶಿವಪುರಂ ವ್ರಜೇತ್ ॥ ೨೭ ॥
ಏವಂ ವ್ಯಾಸ ಪುರೀಂ ಪ್ರಾಪ್ಯ ರಮ್ಯಾಂ ಚೋಜ್ಜಯಿನೀಂ ಶುಭಾಂ ।
ಸಮಾಶ್ರಿತಾ ತದಾ ದೇವೀ ಸತತಂ ವಿಂಧ್ಯವಾಸಿನೀ ।
ತಸ್ಮಿಂ ಸ್ತೀರ್ಥೇ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೨೮ ॥
ಸ್ತ್ರಿಯೋ ವಾ ರಜೋದೋಷಾರ್ತಾ ವಂಧ್ಯಾಃ ಕಾಕಬಕಾದಿಕಾಃ ।
ದುರ್ಭಗಾಃ ಶೀಲಹೀನಾಶ್ಚ ಸರ್ವಕಾಮವಿವರ್ಜಿತಾಃ ॥ ೨೯ ॥

ಮತ್ತು ಧೂಪ, ದೀಪ, ಹೋಮಾದಿಗಳನ್ನು ಮಾಡಿ ಹಾಲು, ಸಕ್ಕರೆ, ತುಪ್ಪ, ಭಕ್ಷ್ಯಗಳಿಂದ ವಿಧಿವತ್ತಾಗಿ ಬ್ರಾಹ್ಮಣರಿಗೆ ಭೋಜನಗಳನ್ನು ಮಾಡಿಸುವರೊ, ಅವರಿಗೆ ದುರ್ಲಭವಾದ ವಸ್ತುವಾಗಲಿ ವರವಾಗಲಿ ಮೂರುಲೋಕಗಳಲ್ಲಿ ಯಾವುದೂ ಇರುವುದಿಲ್ಲ.

೨೫. ಅವರು ದೇವತೆಗಳಿಗೂ ಅಸಾಧ್ಯಗಳೆನಿಸಿದ ಧನ, ಧಾನ್ಯ, ಭೂಮಿ, ಐಶ್ವರ್ಯ, ಪುತ್ರ, ಕಳತ್ರಗಳೇ ಮುಂತಾದ ಸಕಲಭೋಗಗಳನ್ನೂ ಪಡೆದು ಆನಂದಗೊಳ್ಳುವರು.

೨೬. ಅವರಿಗೆ ಶತ್ರುಗಳಿಂದಾಗಲಿ, ಕಳ್ಳಕಾಕರಿಂದಾಗಲಿ, ರಾಜರಿಂದಾಗಲಿ, ಶಸ್ತ್ರಗಳಿಂದಾಗಲಿ, ಬೆಂಕಿಯಿಂದಾಗಲಿ, ನೀರಿನಿಂದಾಗಲಿ ಎಂದಿಗೂ ಭಯವುಂಟಾಗಲಾರದು.

೨೭. ಅಂತಹ ನರನು ದೀರ್ಘಾಯುವೂ, ಬುದ್ಧಿವಂತನೂ, ಆಗಿ ಲೋಕದಲ್ಲಿ ಬಹುಕಾಲ ಬಾಳಿ ಸಕಲಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧನಾಗಿ ದೇಹವನ್ನು ನೀಗಿದಬಳಿಕ ಶಿವಪುರವನ್ನು ಸೇರುವನು.

೨೮. ಎಲೈ ವ್ಯಾಸನೆ! ಇಂತು ವಿಂಧ್ಯವಾಸಿನೀದೇವಿಯು ರಮ್ಯವೂ ಪುಣ್ಯಕ್ಷೇತ್ರವೂ ಆದ ಉಜ್ಜಯಿನೀನಗರಿಯನ್ನು ಸೇರಿದವಳಾಗಿ ಅಲ್ಲಿಯೇ ಶಾಶ್ವತವಾಗಿ ನೆಲಸುವ ಇಚ್ಛೆಯನ್ನು ಮಾಡಿದಳು. ಆಕೆಯ ತೀರ್ಥದಲ್ಲಿ ಸ್ನಾನವನ್ನು ಮಾಡಿದ ನರನು ಸಕಲಪಾಪಗಳಿಂದಲೂ ಮುಕ್ತನಾಗುವನು.

೨೯–೩೦. ರಜೋದೋಷಗಳಿಂದ ವ್ಯಥೆಗೊಳ್ಳುವ ಸ್ತ್ರೀಯರಾಗಲಿ,

ವಿಮಲೋದೇಽಪಿ ತಾಃ ಸ್ನಾತ್ವಾ ದೃಷ್ಟ್ವಾ ವೈ ವಿಂಧ್ಯವಾಸಿನೀಂ ।
ಮುಚ್ಯಂತೇ ಸರ್ವದೋಷೈಸ್ತಾ ನಾಽತ್ರ ಕಾರ್ಯಾ ವಿಚಾರಣಾ ॥ ೩೦ ॥
ಅಪುತ್ರಾಃ ಪ್ರಾಪ್ನುಯುಃ ಪುತ್ರಾನ್ಕನ್ಯಾ ವೀರಪತಿಂ ವರಂ ।
ಪ್ರಾಪ್ಯತೇ ಸರ್ವಸೌಭಾಗ್ಯಂ ಸರ್ವಕಾಮವರಪ್ರದಂ ॥ ೩೧ ॥
ವಿದ್ಯಾವಾನ್ ಜಾಯತೇ ವಿಪ್ರಃ ಕ್ಷತ್ರಿಯೋ ವಿಜಯೀ ಭವೇತ್ ।
ವೈಶ್ಯಶ್ಚ ಬಹುಲಾಭಾಢ್ಯಃ ಶೂದ್ರಃ ಸುಖಮಥಾಽಶ್ನುತೇ ॥ ೩೨ ॥
ಕಥಾಂ ಪುಣ್ಯವತೀಮೇತಾಂ ಸರ್ವಕಾಮವರಪ್ರದಾಂ ।
ಪಠನ್ವಾಽಪ್ಯಥವಾ ಶೃಣ್ವನ್ ಗೋಸಹಸ್ರಫಲಂ ಲಭೇತ್ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ವಿಂಧ್ಯವಾಸಿನೀ ವಿಮಲೋದತೀರ್ಥಮಾಹಾತ್ಮ್ಯವರ್ಣನಂ" ನಾಮ ಪಂಚಪಂಚಾಶತ್ತಮೋಽಧ್ಯಾಯಃ

---

ಹುಟ್ಟುಬಂಜೆಯರಾಗಲಿ, ಒಂದೆರಡು ಮಕ್ಕಳನ್ನು ಮಾತ್ರ ಹೆತ್ತವರಾಗಲಿ, ಮೋಸಗಾರರಾಗಲಿ, ದುರ್ಭಾಗ್ಯಯುತರಾಗಲಿ, ಶೀಲರಹಿತರಾಗಲಿ, ಈ ಜನ್ಮ ದಲ್ಲಿ ಯಾವ ಇಷ್ಟಾರ್ಥವನ್ನೂ ಪಡೆಯದಿರುವರೇ ಆಗಲಿ ಈ ನಿರ್ಮಲೋದಕದ ತೀರ್ಥದಲ್ಲಿ ಸ್ನಾನವನ್ನು ಮಾಡಿ ವಿಂಧ್ಯವಾಸಿನಿಯ ದರ್ಶನವನ್ನು ಪಡೆದು ಕೊಳ್ಳಲು ಅವರು ಸಕಲದೋಷಗಳಿಂದಲೂ ವರ್ಜಿತರಾಗುವುದರೆಂಬುದರಲ್ಲಿ ಸಂದೇಹವೇ ಇಲ್ಲವು.

೩೧. ಪುತ್ರರಿಲ್ಲದವರು ಸತ್ಪುತ್ರರನ್ನು ಪಡೆಯುವರು. ಕನ್ಯೆಯು ವೀರನಾದ ವರನನ್ನೇ ಪತಿಯಾಗಿ ಹೊಂದುವಳಲ್ಲದೆ ಸಕಲಸೌಭಾಗ್ಯಗಳನ್ನೂ ಸಕಲಾಭೀಷ್ಟಸಿದ್ಧಿಗಳನ್ನೂ ಪಡೆಯುವಳು.

೩೨. ಬ್ರಾಹ್ಮಣನು ವಿದ್ಯಾವಂತನಾಗುವನು. ಕ್ಷತ್ರಿಯನಿಗೆ ಯುದ್ಧದಲ್ಲಿ ವಿಜಯವು ಲಭಿಸುವುದು. ವೈಶ್ಯನು ವ್ಯಾಪಾರದಲ್ಲಿ ಅಧಿಕಲಾಭವನ್ನು ಸಂಪಾದಿ ಸುವನು. ಶೂದ್ರನು ದೇಹಾರೋಗ್ಯವನ್ನೂ ಸೌಖ್ಯವನ್ನೂ ಪಡೆಯುವನು.

೩೩. ಪರಮಪುಣ್ಯಪ್ರದವೂ, ಸಕಲಾಭೀಷ್ಟವರಪ್ರದವೂ ಆದ ಈ ಚರಿತ್ರೆ ಯನ್ನು ಓದಿದವನಾಗಲಿ, ಶ್ರದ್ಧೆಯಿಂದ ಕೇಳಿದವನಾಗಲಿ ಒಂದು ಸಾವಿರ ಗೋವುಗಳನ್ನು ದಾನಮಾಡಿದ ಫಲಕ್ಕೆ ಭಾಗಿಯಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ವಿಂಧ್ಯವಾಸಿನೀ—ವಿಮಲೋದತೀರ್ಥಮಾಹಾತ್ಮ್ಯವರ್ಣನ" ವೆಂಬ ಐವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಪಂಚಾಶತ್ತಮೋಽಧ್ಯಾಯಃ

### ಕ್ಷಾತಾಸಂಗಮಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ತೀರ್ಥಮನ್ಯತರಂ ವ್ಯಾಸ ಕ್ಷಾತಾಸಂಗಮಸಂಭವಂ ।
ಯತ್ರ ತು ಸ್ನಾನಮಾತ್ರೇಣ ಮಹಾಪಾಪೈಃ ಪ್ರಮುಚ್ಯತೇ ॥ ೧ ॥
ಅಮಾ ವೈ ಶನಿವಾರೇಣ ಯದಾಯಾತಿ ಸಮಾಹಿತಃ ।
ಪಿತ್ರೂನುದ್ದಿಶ್ಯ ಯಃ ಕುರ್ಯಾಚ್ಛ್ರಾದ್ಧಂ ಚೈವ ತಿಲೋದಕಂ ॥ ೨ ॥
ಪಶ್ಯೇಚ್ಛನೈಶ್ಚರಂ ದೇವಂ ಸ್ಥಾವರಂ ಲಿಂಗಮುತ್ತಮಂ ।
ತಸ್ಯ ಶಾನೈಶ್ಚರೀ ಪೀಡಾ ನ ಭವೇತ್ತು ಕದಾಚನ ॥ ೩ ॥

ವ್ಯಾಸ ಉವಾಚ :—

ಮಹಾತೀರ್ಥಂ ಸಮಾಖ್ಯಾತಂ ಮಹಾಕಾಲವನೇ ಶುಭೇ ।
ಭೂಯಸ್ತು ಶ್ರೋತುಮಿಚ್ಛಾಮಿ ವಿಸ್ತರೇಣ ತಪೋಧನ ॥ ೪ ॥

ಸನತ್ಕುಮಾರ ಉವಾಚ :—

ಶ್ರೂಯತಾಂ ಭೋ ದ್ವಿಜಶ್ರೇಷ್ಠ ಕಥಾ ಪೌರಾಣಿಕೀ ಶುಭಾ ।
ಯಸ್ಯಾಃ ಶ್ರವಣಮಾತ್ರೇಣ ಮಹಾಪಾಪಕ್ಷಯೋ ಭವೇತ್ ॥ ೫ ॥

---

## ಕನ್ನಡದ ಅನುವಾದ

### ಕ್ಷಾತಾಸಂಗಮಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸಮುನಿಯೆ! ಕ್ಷಾತಾ ಸಂಗಮದಲ್ಲಿ ಉತ್ತಮವಾದ ಮತ್ತೊಂದು ತೀರ್ಥವಿರುವುದು. ಅದರಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಮಾನವನು ಮಹಾಪಾತಕಗಳನ್ನು ಕಳೆದುಕೊಳ್ಳುವನು.

೨–೩. ಶನಿವಾರದ ದಿನ ಅಮಾವಾಸ್ಯೆಯು ಬರಲು ಏಕಾಗ್ರಚಿತ್ತದಿಂದ ಆ ತೀರ್ಥದಲ್ಲಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧವನ್ನೂ, ತಿಲೋದಕವನ್ನೂ ನೆರವೇರಿಸಿ ಕೊಂಡು ಸ್ಥಾವರಲಿಂಗದ ರೂಪದಿಂದ ಅಲ್ಲಿ ನೆಲಸಿರುವ ಶನೈಶ್ಚರನ ದರ್ಶನವನ್ನು ಮಾಡಬೇಕು. ಅಂತಹವನಿಗೆ ಎಂದಿಗೂ ಶನಿಯ ದೆಸೆಯಿಂದ ಪೀಡೆಯು ಸಂಭವಿಸುವುದಿಲ್ಲ.

೪. ವ್ಯಾಸನು ಹೇಳುತ್ತಾನೆ:—ಓ ತಪೋಧನನೆ! ಪವಿತ್ರವಾದ ಮಹಾ ಕಾಲವನದಲ್ಲಿ ಮಹಾತೀರ್ಥವನ್ನೇ ನೀನು ನಿರೂಪಿಸುತ್ತಿರುವೆ. ಇದನ್ನೇ ವಿಸ್ತಾರ ವಾಗಿ ನಿನ್ನಿಂದ ಕೇಳಲಿಚ್ಛಿಸುತ್ತೇನೆ.

೫. ಸನತ್ಕುಮಾರನು ಹೇಳುತ್ತಾನೆ:–ಬ್ರಾಹ್ಮಣಶ್ರೇಷ್ಠನೆ! ಪುರಾಣೋಕ್ತ

ರೇವಾ ಚರ್ಮಣ್ವತೀ ಕ್ಷಾತಾ ತಿಸ್ರೋ ನದ್ಯಃ ಪುರಾಽನಘ ।
ಜಾತಾಸ್ತ್ರೈಲೋಕ್ಯಪಾವನ್ಯೋ ಭುವಿ ಚಾಮರಕಂಟಕಾತ್ ॥ ೬ ॥
ಪುಣ್ಯಾಃ ಪುಣ್ಯಜಲಾ ರಮ್ಯಾಃ ಪವಿತ್ರಾಃ ಪಾಪಹಾರಕಾಃ ।
ಪುನಂತ್ಯಃ ಸರ್ವಲೋಕಾನಾಂ ಸ್ನಾನಾತ್ಪಾನಾತ್ತಥಾಪಗಾಃ ॥ ೭ ॥
ಏಕದೋಪವನೇ ರಮ್ಯೇ ಮಾಂಧಾತೃಕ್ಷೇತ್ರ ಉತ್ತಮೇ ।
ಮಿಥೋ ರಮಂತಿ ಸಂಹೃಷ್ಟಾಃ ಪರಸ್ಪರಜಿಗೀಷಯಾ ॥ ೮ ॥
ಕಿಂಚಿದ್ದೋಷಪ್ರಸಂಗೇನ ಮಿಥೋ ಭೇದೋಽಹ್ಯಜಾಯತ ।
ರೇವಾ ಸಂಗಂ ಪರಿತ್ಯಕ್ತ್ವಾ ಭಿತ್ತ್ವಾ ವಿಂಧ್ಯಗಿರಿಂ ವರಂ ॥ ೯ ॥
ಮಹಾಕಾಲವನೇ ರಮ್ಯೇ ಸಮಾಯಾತಾ ಸರಿದ್ವರಾ ।
ಯತ್ರ ಶಿಪ್ರಾ ಮಹಾಪುಣ್ಯಾ ಪುರೀ ಹ್ಯೇಷಾಽಮರಾವತೀ ॥ ೧೦ ॥
ಸರ್ವತೀರ್ಥವರಂ ಶ್ರೇಷ್ಠಂ ನಾಮ್ನಾ ರುದ್ರಸರಃ ಸ್ಮೃತಂ ।
ಭುಕ್ತಿಮುಕ್ತಿಪ್ರದಂ ನಿತ್ಯಂ ಸಿದ್ಧರ್ಷಿಗಣಸೇವಿತಂ ॥ ೧೧ ॥

---

ವಾದ ಈ ಶುಭಚರಿತ್ರೆಯನ್ನು ಕೇಳು. ಇದನ್ನು ಕೇಳುವ ಮಾತ್ರದಿಂದಲೇ ಪಾಪಗಳು ನಾಶವಾಗುವುವು.

೬. ಎಲೈ ನಿಷ್ಪಾಪನೆ! ಭೂಲೋಕದಲ್ಲಿ ಅಮರಕಂಟಕದಿಂದ ಹಿಂದೆ ರೇವಾ, ಚರ್ಮಣ್ವತೀ ಮತ್ತು ಕ್ಷಾತಾ ಎಂಬ ಮೂವರು ನದಿಗಳಾಗಿ ಜನಿಸಿ ಮೂರು ಲೋಕಗಳನ್ನೂ ಪಾವನಗೊಳಿಸುತ್ತಿದ್ದರು.

೭. ಪುಣ್ಯಪ್ರದಗಳೂ, ಪುಣ್ಯಜಲಭರಿತಗಳೂ, ಮನೋಹರಗಳೂ, ಪವಿತ್ರಗಳೂ, ಪಾಪಪರಿಹಾರಕಗಳೂ ಆಗಿ ಈ ಮೂರು ನದಿಗಳೂ ಸ್ನಾನ, ಪಾನಾದಿಗಳಿಂದ ಸಕಲಲೋಕಗಳನ್ನೂ ಪವಿತ್ರಗೊಳಿಸುತ್ತಿದ್ದುವು.

೮. ಒಂದು ದಿನ ಮಾಂಧಾತೃಕ್ಷೇತ್ರದ ಉತ್ತಮವೂ ರಮ್ಯವೂ ಆದ ಉಪವನಪ್ರದೇಶವೊಂದರಲ್ಲಿ ಸಂತೋಷದಿಂದ ಇವರೆಲ್ಲರೂ ಒಬ್ಬರನ್ನೊಬ್ಬರು ಜಯಿಸುವ ಬಯಕೆಯಿಂದ ಮೇಲಾಟಗಳನ್ನಾಡುತ್ತಿದ್ದರು.

೯–೧೦. ಆ ಆಟದಲ್ಲಿ ಯಾವುದೋ ಒಂದು ದೋಷದ ಕಾರಣದಿಂದ ಅವರಲ್ಲಿ ಕಲಹವುಂಟಾಯಿತು. ರೇವೆಯು ಸಖಿಯರ ಸಹವಾಸವನ್ನು ತ್ಯಜಿಸಿ ಶ್ರೇಷ್ಠವೆನಿಸಿದ ವಿಂಧ್ಯಪರ್ವತವನ್ನು ಸೀಳಿಕೊಂಡು ನದಿಯಾಗಿಹರಿದು ಮಹಾಪುಣ್ಯಪ್ರದವಾದ ಶಿಪ್ರಾನದಿಯೂ ಈ ಅಮರಾವತೀನಗರವೂ ಇರುವ ರಮ್ಯವಾದ ಮಹಾಕಾಲವನವನ್ನು ಸೇರಿದಳು.

೧೧. ಅಲ್ಲಿರುವ ರುದ್ರಸರಸ್ಸೆಂಬ ಹೆಸರಿನಿಂದ ಪ್ರಖ್ಯಾತವಾದುದೂ ಸಕಲತೀರ್ಥಗಳಲ್ಲಿ ಉತ್ತಮವೂ ಆದ ತೀರ್ಥಶ್ರೇಷ್ಠವು ನಿತ್ಯವೂ ಭುಕ್ತಿ ಮುಕ್ತಿಗಳನ್ನೀಯುತ್ತ ಸಿದ್ಧರಿಗೂ ಮಹರ್ಷಿಗಣಗಳಿಗೂ ಸಂಸೇವ್ಯವಾಗಿರುವುದು.

ತತ್ರಾಗತ್ಯ ಪುರಾ ಕ್ಷಾತಾ ಶಿಪ್ರಾಸಂಗಂ ಸಮಾಶ್ರಿತಾ ।
ತತ್ರ ತೀರ್ಥಂ ಪರಂ ಜಾತಂ ಕ್ಷಾತಾಸಂಗಮಸಂಜ್ಞಿತಂ ।
ಯತ್ರ ಧೂತರಜಾ ಜಾತಃ ಸದ್ಯಃ ಪ್ರೋಕ್ತೋ ವಿಭಾವಸುಃ ॥ ೧೨ ॥

ವ್ಯಾಸ ಉವಾಚ :—

ಕಥಂ ಸೂರ್ಯಸ್ತ್ವಯಾ ಪ್ರೋಕ್ತೋ ವಿರಜೋಹ್ಯಭವತ್ಪುರಾ ।
ಏತದ್ವೇದಿತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ॥ ೧೩ ॥

ಸನತ್ಕುಮಾರ ಉವಾಚ :—

ಪುರಾನುಸೂರ್ಯಾಂ ಸಾವಿತ್ರೀಂ ತ್ವಷ್ಟಾ ಸ್ವತನಯಾಂ ದದೌ ।
ಪತಿಧರ್ಮರತಾ ನಿತ್ಯಂ ಸಿಷೇವೇ ಲೋಕಚಕ್ಷುಷೇ ॥ ೧೪ ॥
ತಸ್ಯಾಂ ವೈ ಮಿಥುನಂ ಜಜ್ಞೇ ಲೋಕಸಾಕ್ಷಿವಿಭಾವಸೋಃ ।
ಯಮೋ ವೈವಸ್ವತೋ ಜಾತೋ ಯಮುನಾ ಲೋಕಪಾವನೀ ॥ ೧೫ ॥
ತತಸ್ತ್ವಷ್ಟ್ರಾಽಬ್ರವೀಚ್ಛಾಯಾಂ ಸ್ವಕೀಯಾಂ ಸೂನೃತಾಂ ಗಿರಂ ।
ಮಿಥುನಂ ಮೇ ತವೋತ್ಸಂಗೇ ಧೃತಂ ತ್ವಂ ಪರಿಪಾಲಯ ॥ ೧೬ ॥
ತಾವದೇವಮಿಹ ಛಾಯೇ ಯಾವತ್ಪಿತುರ್ಗೃಹೇ ಚರೇ ।
ರವಿಭಕ್ತಿರತಾ ನಿತ್ಯಂ ಚರ ತ್ವಂ ಮಮ ವೇಶ್ಮನಿ ॥ ೧೭ ॥

---

೧೨. ಹಿಂದೆ ಕ್ಷಾತಾನದಿಯು ಅಲ್ಲಿಗೆ ಬಂದು ಶಿಪ್ರಾನದಿಯೊಡನೆ ಸೇರಿ ಹೋಗಲು ಅಲ್ಲಿ ಕ್ಷಾತಾಸಂಗಮವೆಂಬ ಹೆಸರಿನಿಂದ ಸರ್ವೋತ್ತಮವಾದ ತೀರ್ಥವೊಂದು ಉದ್ಭವಿಸಿತು. ಅಲ್ಲಿಯೇ ಸೂರ್ಯದೇವನು ಕ್ಷಣಮಾತ್ರದಲ್ಲಿ ನಿಷ್ಕಲ್ಮಷನಾದನೆಂದು ಹೇಳಲ್ಪಟ್ಟಿರುವುದು.

೧೩. ವ್ಯಾಸನು ಹೇಳುತ್ತಾನೆ:—ಬ್ರಹ್ಮಜ್ಞರಲ್ಲಿ ಉತ್ತಮನೆ! ಸೂರ್ಯನು ಮುನ್ನ ಧೂತಪಾಪನಾದನೆಂದು ನೀನು ಹೇಳಿದೆಯಷ್ಟೆ. ಇದು ಹೇಗೆಂಬುದನ್ನು ತಿಳಿಯಲಿಚ್ಛಿಸುವೆನು.

೧೪–೧೫. ಸನತ್ಕುಮಾರನು ಹೇಳುತ್ತಾನೆ:—ಹಿಂದೆ ವಿಶ್ವಕರ್ಮನು ತನ್ನ ಮಗಳಾದ ಸಾವಿತ್ರಿಯನ್ನು ಸೂರ್ಯನಿಗೆ ಮದುವೆಮಾಡಿಕೊಟ್ಟನು. ಆಕೆಯು ಲೋಕನೇತ್ರನಾದ ಆತನನ್ನು ಏಕಾಗ್ರಚಿತ್ತದಿಂದ ಪತಿವ್ರತೆಯ ಧರ್ಮವನ್ನನುಸರಿಸಿ ಸೇವಿಸುತ್ತಿದ್ದಳು. ಆಕೆಯಲ್ಲಿ ಲೋಕಸಾಕ್ಷಿಯಾದ ಸೂರ್ಯದೇವನಿಗೆ ಪಿತೃಪತಿಯಾದ ಯಮನೂ ಲೋಕಪಾವನೆಯಾದ ಯಮುನೆಯೂ ಅವಳಿ ಮಕ್ಕಳಾಗಿ ಜನಿಸಿದರು.

೧೬. ಒಮ್ಮೆ ಸಾವಿತ್ರಿಯು ತಂದೆಯ ಮನೆಗೆ ಹೋಗಲೆಳಸಿ ತನ್ನ ಛಾಯೆಗೆ ಇಂತೆಂದು ಪ್ರಿಯವಚನವನ್ನಾಡಿದಳು. "ಎಲೆ ಛಾಯೆ, ನನ್ನ ಈ ಇಬ್ಬರು ಮಕ್ಕಳನ್ನೂ ನಿನ್ನ ಮಡಿಲಲ್ಲಿ ಹಾಕಿರುವೆನು. ಇವರನ್ನು ನೀನು ಕಾಪಾಡು.

೧೭. ಎಲೌ ಛಾಯೆಯೆ! ನಾನು ತಂದೆಯ ಮನೆಯಲ್ಲಿರುವವರೆಗೂ

ನೋ ವಾಚ್ಯಾಹಂ ತದಾ ಚ್ಛಾಯೇ ಪಿತೃವೇಶ್ಮಗತಾ ರವೇಃ ।
ಏವಂ ಸಾ ಸಮಯಂ ಕೃತ್ವಾ ಸಾವಿತ್ರೀಹ್ಯಗಮತ್ತದಾ ॥ ೧೮ ॥
ಪಿತುರ್ವೇಶ್ಮಗತಾ ಬಾಲಾ ಸವಿತುರ್ಭಯವಿಹ್ವಲಾ ॥ ೧೯ ॥
ಪಿತ್ರಾ ನಿವಾರಿತಾ ಸದ್ಯೋ ವಡವಾರೂಪಧಾರಿಣೀ ।
ವಿಚಚಾರ ವನೇ ರಮ್ಯೇ ಬಹುಲೋದಕಶಾಡ್ವಲೇ ॥ ೨೦ ॥
ಏಕದಾ ಯಾಚಿತಾ ತೇನ ವೈವಸ್ವತೇನ ಬುಭುಕ್ಷತಾ ।
ನೋದನಂ ವೈ ತಯಾ ದತ್ತಂ ಯಾಚಮಾನಾಯ ತತ್ಕ್ಷಣಾತ್ ॥ ೨೧ ॥
ತದಾ ಪದಾಹತಾ ತೇನ ಛಾಯಾ ತಂ ಚ ಶಶಾಪ ಹ ।
ಯತಸ್ತ್ವಂ ಮೇ ಪದಾಘಾತಂ ಕೃತವಾನ್ಬಾಲಭಾವಸಾತ್ ॥ ೨೨ ॥
ತಸ್ಮಾತ್ತ್ವಂ ಚ ಪದಾ ಖಂಜೋ ಭವಿಷ್ಯಸಿ ನ ಸಂಶಯಃ ।
ಏವಂ ಶಪ್ತೋ ರುಜಾಕ್ರಾಂತೋ ವಿಲಲಾಪ ಶುಚಾರ್ದಿತಃ ॥ ೨೩ ॥

---

ನೀನು ಈ ಕೆಲಸವನ್ನು ಮಾಡುತ್ತ ನಿತ್ಯವೂ ಸೂರ್ಯನಿಗೆ ಭಕ್ತಿಯಿಂದ ನಡೆದುಕೊಂಡು ಮನೆಯಲ್ಲಿರು.

೧೮. ನಾನು ತಂದೆಯ ಮನೆಗೆ ಹೋಗಿರುವುದನ್ನು ಸೂರ್ಯನಿಗೆಂದಿಗೂ ನೀನು ಹೇಳಬಾರದು.'' ಇಂತೆಂದು ಸಾವಿತ್ರಿಯು ನಿಯಮವನ್ನು ಮಾಡಿಕೊಂಡು ತನ್ನ ಆಕಾರವೇ ಉಳ್ಳ ಛಾಯೆಯನ್ನು ಅಲ್ಲಿ ಬಿಟ್ಟು ತಂದೆಯ ಮನೆಗೆ ಹೋದಳು.

೧೯. ತಂದೆಯ ಮನೆಯನ್ನು ಸೇರಿದ ಆಕೆಗೆ ಗಂಡನ ಭಯದಿಂದ ಕಾತರವುಂಟಾಯಿತು.

೨೦. ತಂದೆಯು ನಿರ್ಬಂಧಪಡಿಸಲು ಸಾವಿತ್ರಿಯು ಕ್ಷಣದಲ್ಲಿಯೇ ಹೆಣ್ಣು ಕುದುರೆಯ ರೂಪವನ್ನು ಸ್ವೀಕರಿಸಿ ಬಹಳವಾದ ನೀರಿನಿಂದಲೂ ಹುಲ್ಲಿನಿಂದಲೂ ಮನೋಹರವಾದ ಮಹಾಕಾಲವನದ ಒಂದು ಪ್ರದೇಶದಲ್ಲಿ ಸಂಚರಿಸುತ್ತಿದ್ದಳು.

೨೧. ಇತ್ತ ಒಂದು ದಿನ ಮಗುವಾದ ಯಮನು ಹಸಿವುಗೊಂಡು ಬಹಳವಾಗಿ ಯಾಚಿಸಿದರೂ ಆ ಹೊತ್ತಿನಲ್ಲಿ ಛಾಯಾದೇವಿಯು ಆ ಮಗುವಿಗೆ ತಿನ್ನಲು ಏನನ್ನೂ ಕೊಡಲಿಲ್ಲ.

೨೨. ಯಮನು ಛಾಯೆಯನ್ನು ಕಾಲಿನಿಂದ ಒದೆಯಲು ಅವಳು ಅವನಿಗೆ ಶಾಪವನ್ನಿತ್ತಳು. ''ಬಾಲಚಾಪಲ್ಯದಿಂದ ನೀನು ನನ್ನನ್ನು ಕಾಲಿನಿಂದ ಒದ್ದೆಯಲ್ಲವೆ.

೨೩. ಈ ಕಾರಣದಿಂದ ನೀನು ನಿಸ್ಸಂದೇಹವಾಗಿಯೂ ಇನ್ನು ಮೇಲೆ ಕುಂಟನಾಗುವೆ.'' ಇಂತೆಂದು ಶಪಿಸಿದ ಫಲವಾಗಿ ಯಮನು ಕಾಲುಗಳನ್ನು ಕಳೆದುಕೊಂಡು ದುಃಖದಿಂದ ಬಹುವಾಗಿ ವಿಲಪಿಸುತ್ತಿದ್ದನು.

ಏತಸ್ಮಿನ್ನಂತರೇ ವ್ಯಾಸ ಪರಿಭ್ರಮ್ಯ ವಸುಂಧರಾಂ ।
ಭಾವಯನ್ಸಕಲಾಂಲ್ಲೋಕಾನ್ಗ್ರಹಚಾರೀ ವಿಭಾವಸುಃ ॥ ೨೪ ॥
ದೃಷ್ಟ್ವಾ ಚ ತನಯಂ ಪಂಗುಮಿತ್ಯುವಾಚ ವಿಭಾವಸುಃ ।
ಕಿಮಿದಂ ವತ್ಸ ತೇ ಕಷ್ಟಂ ಕುತಃ ಪ್ರಾಪ್ತಂ ತ್ವಯಾಽನಘ ॥ ೨೫ ॥
ಇತಿ ಪೃಷ್ಟೋ ಯದಾ ತೇನ ಸವಿತ್ರಾ ಲೋಕಭಾಸ್ವತಾ ।
ಉವಾಚ ಗದ್ಗದಾಂ ವಾಚಂ ಯಮಃ ಸಂಯಮಿನೀಪತಿಃ ॥ ೨೬ ॥
ಪ್ರಾತರಾಶಾಯ ಮೇ ನಾಥ ಯಾಚಿತಂ ಮಾತುರಂತಿಕಾತ್ ।
ನೋ ದತ್ತಂ ಭೋಜನಂ ಕ್ಷಿಪ್ರಂ ಬಾಲಭಾವೇನ ತಾಡಿತಾ ॥ ೨೭ ॥
ಪಾದೌ ಮೇ ಗಲಿತೌ ಸದ್ಯೋ ಮಾತುಃ ಶಾಪಪರಾಭವೌ ।
ತಚ್ಛ್ರುತ್ವಾ ಮೋಹಮಾಪನ್ನೋ ರವಿರ್ಧ್ಯಾನಪರಾಯಣಃ ॥ ೨೮ ॥
ವಿಚಿತ್ರಮಿದಮಾಖ್ಯಾತಂ ಮಾತುಃ ಶಾಪಸ್ಯ ಕಾರಣಂ ।
ಏವಂ ಧ್ಯಾತ್ವಾ ಚಿರಂ ಕಾಲಂ ಜ್ಞಾತವಾನ್ ರವಿರಂಶುಮಾನ್ ॥ ೨೯ ॥

---

೨೪. ಎಲೈ ವ್ಯಾಸನೆ! ಇಷ್ಟರಲ್ಲಿಯೇ ಸೂರ್ಯದೇವನು ಗ್ರಹಗಳಿಗೆ ತನ್ನ ಗತಿಗಳನ್ನು ತೋರುತ್ತ ಸಕಲ ಲೋಕಗಳನ್ನೂ ನೋಡಿಕೊಂಡು ಭೂಗೋಳವನ್ನು ಸುತ್ತಿಕೊಂಡು ಬಂದನು.

೨೫. ಆಗ ಅವನು ಕುಂಟನಾದ ತನ್ನ ಮಗನನ್ನು ಕಂಡು "ವತ್ಸ! ನಿಷ್ಪಾಪನಾಗಿರುವ ನಿನ್ನ ಈ ಕಷ್ಟವೇನು? ಇದು ನಿನಗೆ ಬಂದ ಕಾರಣವೇನು?" ಎಂದು ಪ್ರಶ್ನೆಮಾಡಿದನು.

೨೬. ಲೋಕಗಳನ್ನೆಲ್ಲ ಬೆಳಗುವ ಸೂರ್ಯನು ಇಂತೆಂದು ಕೇಳಲು ಸಂಯಮಿನೀಪಟ್ಟಣಕ್ಕೆ ಅಧಿಪತಿಯಾದ ಯಮಧರ್ಮನು ಗದ್ಗದದಿಂದಕೂಡಿದ ಧ್ವನಿಯಲ್ಲಿ ಹೇಳತೊಡಗಿದನು.

೨೭. "ತಂದೆಯೆ! ಬೆಳಗಿನ ಉಪಹಾರಕ್ಕಾಗಿ ನಾನು ತಾಯಿಯನ್ನು ಏನನ್ನಾದರೂ ಕೊಡೆಂದು ಪ್ರಾರ್ಥಿಸಿದೆನು. ಆಕೆಯು ಬೇಗ ಏನನ್ನೂ ಕೊಡದಿರಲು ಬಾಲ್ಯಚಾಪಲ್ಯದಿಂದ ನಾನು ಆಕೆಯನ್ನು ಒದ್ದೆನು.

೨೮. ಕೋಪಗೊಂಡ ಆಕೆಯು ನನ್ನನ್ನು ಶಪಿಸಿದಳು. ಅದರಿಂದ ನನ್ನ ಕಾಲುಗಳೆರಡೂ ಕ್ಷಣದಲ್ಲಿಯೇ ಬಿದ್ದುಹೋದುವು." ಇದನ್ನು ಕೇಳಿ ಸೂರ್ಯನು ದಿಗ್ಭ್ರಾಂತನಾಗಿ ಕೆಲವುಕಾಲ ತನ್ನಲ್ಲಿಯೇ ಚಿಂತಿಸಿದನು.

೨೯. "ತಾಯಿಯೇ ಮಗನಿಗೆ ಶಾಪವನ್ನು ಕೊಟ್ಟುದನ್ನೊಳಗೊಂಡ ಈ ಕಥೆಯು ಬಹು ವಿಚಿತ್ರವಾಗಿರುವುದು." ಇಂತೆಂದು ಬಹುಕಾಲ ಚಿಂತಿಸಿ ತೇಜೋರಾಶಿಯಾದ ಆ ಸೂರ್ಯನು ವಿಷಯವನ್ನು ತಿಳಿದುಕೊಂಡನು.

ನೇಯಂ ಸಾ ರುಚಿರಾಪಾಂಗೀ ತ್ವಾಷ್ಟ್ರೀ ಲೋಕಸ್ಯ ಪಾವನೀ ।
ಕೇಯಂ ವಾ ಕುತ ಆಯಾತಾ ಕಾಽಸಿ ತ್ವಂ ಚ ಶುಚಿಸ್ಮಿತೇ ॥ ೩೦ ॥

ಛಾಯೋವಾಚ :—

ನಾನುಸೂರ್ಯಾ ಮಹಾರಾಜ ಛಾಯಾ ತಸ್ಯಾಃ ಸ್ವಸಂಭವಾ ।
ಗತಾ ವೈ ಸಾ ಪಿತುರ್ಗೇಹೇ ವಾರಿತಾಽಹಂ ತಯಾಽನಘ ॥ ೩೧ ॥
ಸವಿತ್ರೇ ನೈವ ವಕ್ತವ್ಯಂ ಛಾಯೇ ಕಿಂಚಿತ್ಕಥಂಚನ ।
ಏಷ ಮೇ ಸಮಯೋ ನಾಥ ತೇನಾಽಹಂ ಮೌನಮಾಸ್ಥಿತಾ ॥ ೩೨ ॥
ತಚ್ಛ್ರುತ್ವಾ ಭಗವಾಂಸ್ತ್ವಷ್ಟುಃ ಸಮೀಪಂ ರೋಷಮಾಸ್ಥಿತಃ ।
ಜಗಾಮ ಸಹಸಾ ಭಾನುರ್ಬಹುರೋಷಸಮನ್ವಿತಃ ॥ ೩೩ ॥
ತಂ ದೃಷ್ಟ್ವಾ ಸಹಸೋತ್ಥಾಯ ತ್ವಷ್ಟಾ ಲೋಕಪಿತಾಮಹಃ ।
ಪಾದ್ಯಾರ್ಘ್ಯಾಚಮನೀಯಂ ಚ ಮಧುಪರ್ಕೈರಪೂಜಯತ್ ॥ ೩೪ ॥
ನತ್ವಾ ಪಾದೌ ಪರಿಕ್ರಮ್ಯ ಬಹುಮಾನಪುರಃಸರಂ ।
ಉವಾಚ ಮಧುರಯಾ ವಾಚಾ ಪ್ರಿಯಂ ತೇ ಕರವಾಣಿ ಕಿಂ ॥ ೩೫ ॥

---

೩೦. "ಈಕೆಯು ವಿಶ್ವಕರ್ಮನ ಮಗಳೂ, ಲೋಕಪಾವನೆಯೂ ಆದ ನನ್ನ ಮನೋವಲ್ಲಭೆಯಲ್ಲ; ಇವಳು ಯಾರು? ಎಲ್ಲಿಂದ ಬಂದಳು?" ಎಂದು ಆಲೋಚಿಸಿ "ಎಲೌ ಸುಂದರಿಯೆ? ನೀನು ಯಾರು?" ಎಂದು ಪ್ರಶ್ನಿಸಿದನು.

೩೧. ಛಾಯೆಯು ಹೇಳುತ್ತಾಳೆ:—ಮಹಾರಾಜ! ನಾನು ಅನುಸೂರ್ಯೆಯಾದ ಸಾವಿತ್ರಿಯಲ್ಲ. ಆಕೆಯ ದೇಹದ ಛಾಯೆಯು. ಆಕೆಯು ತನ್ನ ತಂದೆಯ ಮನೆಗೆ ಹೋಗುವಾಗ ನನ್ನನ್ನು ಇಲ್ಲಿಯೇ ಇರುವಂತೆ ನಿರ್ಬಂಧಪಡಿಸಿರುವಳು.

೩೨. ಎಲೌ ಛಾಯೆಯೆ! ನೀನು ಈ ವಿಷಯವನ್ನು ಹೇಗೂ ಸ್ವಲ್ಪವಾದರೂ ಸೂರ್ಯನಿಗೆ ತಿಳಿಸಬಾರದು—ಎಂದಿರುವಳು. ಈ ನಿಯಮವನ್ನು ಮಾಡಿಕೊಂಡಿರುವುದರಿಂದಲೇ ನಾನು ಇಲ್ಲಿಯವರೆಗೂ ಮೌನವ್ರತವನ್ನಾಶ್ರಯಿಸಿಕೊಂಡಿರುವೆನು."

೩೩. ಇದನ್ನು ಕೇಳಿ ಸೂರ್ಯನು ಅತ್ಯಂತ ರೋಷವನ್ನು ತಾಳಿದವನಾಗಿ ಮಾವನಾದ ತ್ವಷ್ಟೃವಿನ ಮನೆಯನ್ನು ಕುರಿತು ವೇಗವಾಗಿ ಪ್ರಯಾಣ ಮಾಡಿದನು.

೩೪. ಅವನನ್ನು ಕಂಡು ಲೋಕಕರ್ತನಾದ ವಿಶ್ವಕರ್ಮನು ಸಂಭ್ರಮದಿಂದೆದ್ದು ಎದುರುಗೊಂಡು ಪಾದ್ಯ, ಅರ್ಘ್ಯ, ಮಧುಪರ್ಕ ಮುಂತಾದುವುಗಳಿಂದ ಸತ್ಕರಿಸಿದನು.

೩೫. ಭಕ್ತಿಪುರಸ್ಸರವಾಗಿ ಆತನಿಗೆ ಬಲವಂದು ಪಾದಗಳಿಗೆರಗಿ, "ನಿನಗೆ ಪ್ರಿಯವಾದ ಯಾವ ಕಾರ್ಯವನ್ನು ಮಾಡಲಿ?" ಎಂದು ಪ್ರಿಯವಾಗಿ ಮಾತುಗಳನ್ನಾಡಿದನು.

ರವಿರುವಾಚ :—

ಕ್ವ ಸಾನುಸೂರ್ಯಾ ಸಾವಿತ್ರೀ ಮಮಾಽನುಪ್ರಿಯಕಾರಿಣೀ ।
ಆಗತಾ ತೇ ಗೃಹಂ ತಾತ ಮಮ ಮಾರ್ಗಾನುಮೋದಿನೀ ॥ ೩೬ ॥

ತ್ವಷ್ಟೋವಾಚ :—

ನ ಜಾನೀಮೋ ವಯಂ ತಾತ ಪ್ರಿಯಾ ಮೇ ಕ್ವ ಗತಾ ಸುತಾ ।
ಇತ್ಯುಕ್ತೇ ವಚನೇ ತ್ವಷ್ಟ್ರಾ ರವಿರ್ದುಶ್ಚಿಂತಮಾನಸಃ ॥ ೩೭ ॥
ಕಿಂ ಕರೋಮಿ ಕ್ವ ಗಚ್ಛಾಮಿ ಕ್ವ ಚ ಪ್ರಿಯತರಾ ಮಮ ।
ಇತಿ ಸಂಭಾಷಮಾಣೇ ತು ತ್ವಷ್ಟಾ ವಾಕ್ಯಮಥಾಽಬ್ರವೀತ್ ॥ ೩೮ ॥
ತವ ತೇಜಃಪರಿಭ್ರಷ್ಟಾ ಭಗ್ನಾ ಕ್ವಾಽಪಿ ಗತಾಽಬಲಾ ।
ಯದಿ ತೇ ವಲ್ಲಭಾ ಭಾರ್ಯಾ ತೇಜಸ್ತ್ವಂ ಪರಿಶಾಮಯ ॥ ೩೯ ॥

ಸೂರ್ಯ ಉವಾಚ :—

**ಯದ್ಯೇವಂ ದುಃಸಹಂ ತೇಜೋ ಮಮ ಪೂರ್ವಪಿತಾಮಹ ।**
**ತದಾ ತೇ ರೋಚತೇ ಸಮ್ಯಗ್ಯಥಾ ಸ್ಯಾದ್ವೈ ತಥಾ ಕುರು ॥ ೪೦ ॥**
**ಇತಿ ಸೂರ್ಯವಚಃ ಶ್ರುತ್ವಾ ಶಾಣಂ ಕೃತ್ವಾ ಸುದರ್ಶನಂ ।**
**ಘೃಷ್ಟಿತಃ ಕ್ಷುರಧಾರೇಣ ಲಘೀಯಾನ್ನಿರ್ಮಲೋಽಭವತ್ ॥ ೪೧ ॥**

---

೩೬. ಸೂರ್ಯನು ಹೇಳುತ್ತಾನೆ:—ನನಗೆ ಪ್ರಿಯಪತ್ನಿಯಾಗಿದ್ದ ಅನುಸೂರ್ಯೆಯಾದ ಆ ಸಂಜ್ಞಾದೇವಿಯೆಲ್ಲಿರುವಳು? ನನ್ನ ಧರ್ಮಕರ್ಮಗಳಲ್ಲಿ ಭಾಗಿನಿಯಾಗಿದ್ದ ಆಕೆಯು ನಿನ್ನ ಮನೆಗೆ ಬಂದಿರುವಳಲ್ಲವೆ.

೩೭. ತ್ವಷ್ಟೃವು ಹೇಳುತ್ತಾನೆ:—ಎಲೈ ಸೂರ್ಯನೆ! ಆ ನನ್ನ ಪ್ರಿಯ ಪುತ್ರಿಯು ಎಲ್ಲಿ ಹೋದಳೆಂಬುದನ್ನು ತಿಳಿಯೆನು.'' ಇಂತೆಂದ ತ್ವಷ್ಟೃವಿನ ಮಾತುಗಳನ್ನು ಕೇಳಿ ಸೂರ್ಯನು ಖಿನ್ನಮನಸ್ಕನಾದನು.

೩೮. ''ಈಗೇನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನ ಪ್ರಿಯತಮೆಯು ಎಲ್ಲಿಗೆ ಹೋಗಿರಬಹುದು?'' ಎಂದು ಚಿಂತಿಸುತ್ತಿರಲು ತ್ವಷ್ಟೃವು ಆತನಿಗೆ ಇಂತೆಂದನು.

೩೯. ''ಎಲೈ ಭಾಸ್ಕರನೇ! ನಿನ್ನ ತೇಜಸ್ಸಿನಿಂದ ತಾಪಗೊಂಡವಳೂ, ದೂರವರ್ತಿನಿಯೂ ಆಗಿ ಆ ಸ್ತ್ರೀಯು ಎಲ್ಲಿಗೋ ಹೊರಟುಹೋಗಿರಬೇಕು. ಹೆಂಡತಿಯು ನಿನಗೆ ಪ್ರಿಯಳಾಗಿರಬೇಕಾದಲ್ಲಿ ನಿನ್ನ ತೇಜಸ್ಸನ್ನು ಉಪಸಂಹರಿಸು.

೪೦. ಸೂರ್ಯನು ಹೇಳುತ್ತಾನೆ:— ಓ ಲೋಕಪಿತಾಮಹನೆ! ನನ್ನ ತೇಜಸ್ಸು ಇತರರಿಗೆ ಅಷ್ಟು ದುಸ್ಸಹವಾಗಿರುವುದಾದರೆ ಅದನ್ನು ಕಡಿಮೆಮಾಡಲು ನಿನಗೆ ಯಾವ ಸದುಪಾಯವು ತೋರುವುದೊ ಅದನ್ನು ಮಾಡು.

೪೧. ಇಂತೆಂದ ಸೂರ್ಯನ ಮಾತನ್ನು ಕೇಳಿ ವಿಶ್ವಕರ್ಮನು ಸುದರ್ಶನ

**ತಸ್ಯ ಘೃಷ್ಟಿತಮಾತ್ರೇಣ ತ್ವಷ್ಟ್ರಾ ಚಕ್ರೇ ವಿವಸ್ವತಃ ।**
**ಶಾಣಂ ಸುದರ್ಶನಂ ಚಕ್ರಂ ಸೈಕತಾ ಮಣಿಜಾತಯಃ ॥ ೪೨ ॥**
**ತದಾ ತ್ವಷ್ಟಾಽಬ್ರವೀದ್ವಾಕ್ಯಂ ಮಧುರಂ ಸೂರ್ಯಸನ್ನಿಧೌ ।**
**ಮಹಾಕಾಲವನೇ ರಮ್ಯೇ ವಡವಾರೂಪಧಾರಿಣೀ ॥ ೪೩ ॥**
**ಗೃಹ್ಯತಾಂ ಭೋಃ ಸುರಶ್ರೇಷ್ಠ ಶೀಘ್ರಂ ಗಚ್ಛತು ಶಾಡ್ವಲೇ ।**
**ಯತ್ರ ಶಿಪ್ರಾ ಸರಿಚ್ಛ್ರೇಷ್ಠಾ ಯತ್ರ ಕ್ಷಾತಾ ಸಮಾಗತಾ ॥ ೪೪ ॥**
**ಉಭಯೋಃ ಸಂಗಮೋ ಯತ್ರ ತತ್ರ ಮುಕ್ತಿರ್ನ ಸಂಶಯಃ ।**
**ತತ್ರ ತಾಂ ಸುಭಗಾಂ ಪತ್ನೀಂ ಪ್ರಾಪ್ಸ್ಯಸಿ ತ್ವಂ ನ ಸಂಶಯಃ ॥ ೪೫ ॥**
**ಇತಿ ತಸ್ಯ ವಚಃ ಶ್ರುತ್ವಾ ಸವಿತಾ ಸರ್ವತಾಪನಃ ।**
**ತತ್ರಾಽಗಮದ್ವನಂ ಯತ್ರ ಮಹಾಕಾಲಸ್ಯ ಪಾವನಂ ॥ ೪೬ ॥**
**ಕ್ಷಾತಾಸಂಗಮಸಂಯುಕ್ತಾ ಯತ್ರ ಶಿಪ್ರಾ ಪಯಸ್ವಿನೀ ।**
**ತತ್ರ ಭುಕ್ತಿಶ್ಚ ಮುಕ್ತಿಶ್ಚ ಧನಧಾನ್ಯಸಮಾಗಮಃ ॥ ೪೭ ॥**

---

ಚಕ್ರವನ್ನೇ ಚೆನ್ನಾಗಿ ಸಾಣೆಹಿಡಿದು ತೀಕ್ಷ್ಣವಾದ ಅದರ ಧಾರೆಯಿಂದ ಸೂರ್ಯನ ಬಿಂಬವನ್ನು ಉಜ್ಜಲು ಸೂರ್ಯನು ಲಘುವೂ, ನಿರ್ಮಲನೂ ಆದನು.

೪೨. ಸುದರ್ಶನಚಕ್ರದಿಂದ ಘೃಷ್ಟಿತವಾದಾಗ ಸೂರ್ಯಮಂಡಲದಿಂದ ಹಾರಿದ ಕಿಡಿಗಳೇ ಭೂಲೋಕದಲ್ಲಿ ಮರಳು ಕಲ್ಲುಗಳೂ ಮಣಿಗಳೂ ಆದುವು.

೪೩. ಆಗ ಸೂರ್ಯನ ಮುಂದೆ ವಿಶ್ವಕರ್ಮನು ಮೃದುಮಧುರವಾಗಿ ಹೇಳತೊಡಗಿದನು. "ನಿನ್ನ ಮಡದಿಯಾದ ಸಂಜ್ಞಾದೇವಿಯು ರಮ್ಯವಾದ ಮಹಾಕಾಲವನದಲ್ಲಿ ಹೆಣ್ಣುಕುದುರೆಯಾಗಿ ಸಂಚರಿಸುತ್ತಿರುವಳು.

೪೪. ಎಲೈ ದೇವೋತ್ತಮನೆ! ಬೇಗನೆ ಅಲ್ಲಿಗೆಹೋಗಿ ಹುಲ್ಲುಗಾವಲಿನಲ್ಲಿ ಸಂಚರಿಸುತ್ತಿರುವ ಆಕೆಯನ್ನು ಪರಿಗ್ರಹಿಸು. ಅಲ್ಲಿ ಉತ್ತಮನದಿಯಾದ ಶಿಪ್ರೆಯು ಕ್ಷಾತಾನದಿಯೊಡನೆ ಸೇರುವುದು.

೪೫. ಆ ಎರಡು ನದಿಗಳ ಸಂಗಮಸ್ಥಾನದಲ್ಲಿ ಮೋಕ್ಷಲಾಭವಾಗುವುದು ನಿಶ್ಚಯವು. ಅಲ್ಲಿಯೇ ನಿನ್ನ ಪತ್ನಿಯಾದ ಸಂಜ್ಞಾದೇವಿಯನ್ನು ನೀನು ಪಡೆಯುವುದರಲ್ಲಿ ಸಂದೇಹವಿಲ್ಲ."

೪೬. ಇಂತೆಂದ ವಿಶ್ವಕರ್ಮನ ಮಾತನ್ನು ಲಾಲಿಸಿ ಲೋಕತಾಪನನಾದ ಸೂರ್ಯನು ಮಹಾಕಾಲವನದ ಆ ಪಾವನಪ್ರದೇಶವಿದ್ದಲ್ಲಿಗೆ ವೇಗವಾಗಿ ಬಂದು ಸೇರಿದನು.

೪೭. ನಿರ್ಮಲೋದಕಸಹಿತವಾದ ಶಿಪ್ರಾನದಿಯು ಕ್ಷಾತಾನದಿಯೊಡನೆ ಸೇರುವ ಆ ತೀರ್ಥವನ್ನು ಸೇವಿಸಿದವರಿಗೆ ಭೋಗಮೋಕ್ಷಗಳೂ, ಧನಧಾನ್ಯ ಸಮೃದ್ಧಿಯೂ ಲಭಿಸುವುವು.

ತತ್ರಾಗತ್ಯ ಪ್ರಿಯಾಂ ಭಾರ್ಯಾಂ ವಡವಾರೂಪಧಾರಿಣೀಂ ।
ದದರ್ಶ ತಾಂ ಪುನಃ ಶ್ಯಾಮಾಂ ಹರಿರೂಪಧರೋ ಹರಿಃ ॥ ೪೮ ॥
ನಾಸಿಕಾಘ್ರಾಣಮಾತ್ರೇಣ ಯತ್ರ ಜಾತೌ ಸುತಾವುಭೌ ।
ದರ್ಶನೀಯೌ ಸುನ್ನೃಮ್ಣಾಂಗೌ ಭಿಷಜೌ ತೌ ದಿವೌಕಸಾಂ ॥ ೪೯ ॥
ಛಾಯಾ ಚ ಸುಷುವೇ ತತ್ರ ಮಿಥುನಂ ದ್ವಿಜಸತ್ತಮ ।
ತಾಪೀಂ ಶನೈಶ್ಚರಂ ಚೈವ ಸರ್ವಲೋಕಪ್ರತಾಪನಂ ॥ ೫೦ ॥
ಶನಿಯೋಗೇ ಯದಾಽಮಾ ಸ್ಯೈ ಜಾಯತೇ ಸರ್ವಕಾಮದಾ ।
ತದಾ ಸ್ನಾನಂ ಚ ದಾನಂ ಚ ಶ್ರಾದ್ಧಂ ಚೈವ ತು ಕಾರಯೇತ್ ।
ತಸ್ಯ ಹಸ್ತಗತಾ ಲಕ್ಷ್ಮೀರ್ಜಾಯತೇ ಸರ್ವದಾ ಭುವಿ ॥ ೫೧ ॥
ಕ್ಷ್ನಾತಾಸಂಗಮೇ ನರಃ ಸ್ನಾತ್ವಾ ದಾನಂ ದತ್ವಾ ಚ ಶಕ್ತಿತಃ ।
ಸ್ಥಾವರೇಶಂ ಸಮಭ್ಯರ್ಚ್ಯ ತಸ್ಯ ಪಾಪಕ್ಷಯೋ ಭವೇತ್ ॥ ೫೨ ॥
ಸೌರಿಃ ಶನೈಶ್ಚರೋ ಮಂದಃ ಕೃಷ್ಣೋಽನಂತೋಽಂತಕೋ ಯಮಃ ।
ಪಿಂಗಚ್ಛಾಯಾಸುತೋ ಬಭ್ರುಃ ಸ್ಥಾವರಃ ಪಿಪ್ಪಲಾಯನಃ ॥ ೫೩ ॥

---

೪೮. ಅಲ್ಲಿಗೆ ಬಂದು ತನ್ನ ಪ್ರಿಯಭಾರ್ಯೆಯು ಕಪ್ಪಾದ ಹೆಣ್ಣು ಕುದುರೆಯಾಗಿರುವುದನ್ನು ಕಂಡು ಸೂರ್ಯನೂ ಕುದುರೆಯ ರೂಪವನ್ನೇ ತಾಳಿ ಅವಳನ್ನು ಸೇರಿದನು.

೪೯. ವಾಸನೆಯನ್ನು ನೋಡಿದ ಮಾತ್ರದಿಂದಲೇ ಅವಳಿಗೆ ಅಶ್ವಿನೀಕುಮಾರರು ಅವಳಿಮಕ್ಕಳಾಗಿ ಹುಟ್ಟಿದರು. ಬಹು ಸುಂದರರೂ ಹೃಷ್ಟಪುಷ್ಟದೇಹಗಳುಳ್ಳವರೂ ಆದ ಅವರು ದೇವತೆಗಳಿಗೆ ವೈದ್ಯರಾದರು.

೫೦. ಎಲೈ ಬ್ರಾಹ್ಮಣೋತ್ತಮನೆ! ಅತ್ತಕಡೆ ಛಾಯಾದೇವಿಯೂ ಅವಳಿಮಕ್ಕಳನ್ನು ಪಡೆದಳು. ಆಕೆಗೆ ತಾಪಿನಿಯೆಂಬ ಕುವರಿಯೂ ಸಕಲ ಲೋಕಹಿಂಸಕನಾದ ಶನೈಶ್ಚರನೂ ಮಕ್ಕಳಾದರು.

೫೧. ಶನಿವಾರದಲ್ಲಿ ಬರುವ ಅಮಾವಾಸ್ಯೆಯು ಸರ್ವಕಾಮಫಲಪ್ರದವಾಗಿರುವುದು. ಆ ಕಾಲದಲ್ಲಿ ಕ್ಷ್ನಾತಾಸಂಗಮದಲ್ಲಿ ಸ್ನಾನ, ದಾನ, ಪಿತೃಶ್ರಾದ್ಧಗಳನ್ನು ಮಾಡಿದ ಮಾನವನಿಗೆ ಯಾವಾಗಲೂ ಮಹಾಲಕ್ಷ್ಮಿಯು ಕರಗತಳಾಗಿರುವಳು.

೫೨. ಈ ಕ್ಷ್ನಾತಾಸಂಗಮದಲ್ಲಿ ಇತರ ದಿನಗಳಲ್ಲಿಯೂ ಸ್ನಾನಮಾಡಿ ತನ್ನ ಶಕ್ತಿಗನುಸಾರವಾಗಿ ದಾನಗಳನ್ನಿತ್ತು ಸ್ಥಾವರೇಶ್ವರನ ಪೂಜೆಯನ್ನು ಮಾಡಲು ಮಾನವನ ಸಕಲಪಾತಕಗಳೂ ನಾಶವಾಗುವುವು.

೫೩–೫೪. ಸೂರ್ಯ, ಶನೈಶ್ಚರ, ಮಂದ, ಕೃಷ್ಣ, ಅನಂತ, ಅಂತಕ,

ಏತಾನಿ ಶನಿನಾಮಾನಿ ಪ್ರಾತಃಕಾಲೇ ಪಠೇನ್ನರಃ ।
ತಸ್ಯ ಶಾನೈಶ್ಚರೀ ಪೀಡಾ ನ ಭವೇತ್ತು ಕದಾಚನ ॥ ೫೪ ॥
ಯಮಧರ್ಮೋಽಪಿ ಚಾತ್ರೈವ ತಪಸ್ತೇಪೇ ಸುದುಸ್ತರಂ ।
ಯಜ್ಞಕುಂಡೋತ್ತರೇ ಭಾಗೇ ಯತ್ರ ತಿಷ್ಠತಿ ಮಾರುತಿಃ ॥ ೫೫ ॥
ಧರ್ಮಸರೇತಿ ವಿಖ್ಯಾತಂ ನಾಮ್ನಾ ತತ್ತೀರ್ಥಮುತ್ತಮಂ ।
ಯತ್ರ ಸಿದ್ಧಿಂ ಪರಾಂ ಪ್ರಾಪ್ತಸ್ತಪಸಾ ಪವನಾತ್ಮಜಃ ॥ ೫೬ ॥
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ದತ್ವಾ ವೈ ಕಾಂಸ್ಯಭಾಜನಂ ।
ಸ ವಾಸೋ ಮಣಿಮುಕ್ತಾಭಿಃ ಕಾಂಚನಾಲಂಕೃತಂ ವರಂ ॥ ೫೭ ॥
ಬ್ರಾಹ್ಮಣೇಭ್ಯಃ ಸ್ವಲಂಕೃತ್ಯ ವೇದವಿದ್ಭ್ಯಶ್ಚ ಸಾದರಂ ।
ಮಾತೃಲೋಕಂ ಸಮುತ್ತೀರ್ಣೋ ಬ್ರಹ್ಮಲೋಕೇ ಮಹೀಯತೇ ॥ ೫೮ ॥
ಶ್ರಾವಣೇ ಮಾಸ್ಯುಭೇ ಪಕ್ಷೇ ಏಕಾದಶ್ಯಾಂ ತು ಯೋ ನರಃ ॥ ೫೯ ॥
ಧರ್ಮತೀರ್ಥೇ ಸದಾಚಾರೀ ಸ್ನಾನದಾನಾದಿಕಾಃ ಕ್ರಿಯಾಃ ।
ಕರೋತಿ ಸತತಂ ತಸ್ಯ ವಿಷ್ಣುಲೋಕಃ ಸನಾತನಃ ॥ ೬೦ ॥

---

ಯಮ, ಪಿಂಗ, ಛಾಯಾಸುತ, ಬಭ್ರು, ಸ್ಥಾವರ, ಪಿಪ್ಪಲಾಯನ—ಈ ಹನ್ನೆರಡು ಶನಿನಾಮಗಳನ್ನು ಪ್ರತಿ ಮಾನವನೂ ಪ್ರಾತಃಕಾಲದಲ್ಲಿ ಜಪಿಸಬೇಕು. ಅವನಿಗೆಂದಿಗೂ ಶನಿಗ್ರಹದ ಪೀಡೆಯುಂಟಾಗುವುದಿಲ್ಲ.

೫೫. ಇಲ್ಲಿರುವ ಯಜ್ಞಕುಂಡದ ಉತ್ತರಭಾಗದಲ್ಲಿ ಮಾರುತಿಯು ಪ್ರತಿಷ್ಠಿತನಾಗಿರುವನಷ್ಟೆ. ಅಲ್ಲಿಯೇ ಯಮಧರ್ಮರಾಜನು ಹಿಂದೆ ಬಹುದುಸ್ತರವಾದ ತಪಸ್ಸನ್ನಾಚರಿಸಿದನು.

೫೬. ಅಲ್ಲಿಯೇ ಧರ್ಮಸರಸ್ಸೆಂದು ಪ್ರಖ್ಯಾತವಾದ ಸರ್ವೋತ್ತಮತೀರ್ಥವಿರುವುದು. ಅಲ್ಲಿಯೇ ಹನುಮಂತನು ತಪಸ್ಸನ್ನು ಮಾಡಿ ಉತ್ತಮವಾದ ಸಿದ್ಧಿಯನ್ನು ಪಡೆದನು.

೫೭. ಈ ತೀರ್ಥದಲ್ಲಿ ನರನು ಸ್ನಾನಮಾಡಿ ಕಂಚಿನ ಪಾತ್ರೆಯೊಂದನ್ನು ದಾನಮಾಡಬೇಕು. ಆ ಕಳಶವು ವಸ್ತ್ರ, ಮಣಿ, ಮುತ್ತಿನಸರಗಳಿಂದ ಚೆನ್ನಾಗಿ ಅಲಂಕೃತವಾಗಿರಬೇಕು.

೫೮. ವೇದಜ್ಞರಾದ ಬ್ರಾಹ್ಮಣರನ್ನು ಕರೆದು ಆದರದಿಂದ ಅವರಿಗೂ ಅಲಂಕಾರಗಳನ್ನಿತ್ತು ಆ ಕಳಶವನ್ನು ದಾನಮಾಡಲು ಮಾನವನು ಮಾತೃಲೋಕದಿಂದ ಉತ್ತೀರ್ಣನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

೫೯–೬೦. ಶ್ರಾವಣಮಾಸದ ಎರಡುಪಕ್ಷಗಳ ಏಕಾದಶೀದಿನಗಳಲ್ಲಿಯೂ ಯಾವ ನರನು ಸದಾಚಾರಸಂಪನ್ನನಾಗಿ ಧರ್ಮತೀರ್ಥದಲ್ಲಿ ಸ್ನಾನದಾನಾದಿ ಸತ್ಕಾರ್ಯಗಳನ್ನು ಮಾಡುವನೊ, ಅವನಿಗೆ ಶಾಶ್ವತವಾದ ವೈಕುಂಠಲೋಕವು ಲಭಿಸುವುದು ನಿಸ್ಸಂದೇಹವು.

ಚ್ಯವನಾಶ್ರಮೇ ನರಃ ಸ್ನಾತ್ವಾ ಚ್ಯವನೇಶ್ವರಂ ವಿಲೋಕಯೇತ್ ।
ಯತ್ರ ಸಿದ್ಧಿಂಗತೌ ಪುಣ್ಯಾವಶ್ವಿನೌ ಭಿಷಜಾಂ ವರೌ ॥ ೬೧ ॥
ಚ್ಯವನಸ್ಯ ಪ್ರಸಾದೇನ ದೇವಪಂಕ್ತಿಮವಾಪತುಃ ।
ಚ್ಯವನೇನ ಪುರಾ ದೃಷ್ಟಿಃ ಪ್ರಾಪ್ತಾ ವೈ ದೇವಭೇಷಜಾತ್ ॥ ೬೨ ॥
ತಸ್ಮಿಂಸ್ತೀರ್ಥೇ ದ್ವಿಜಶ್ರೇಷ್ಠ ದಿವ್ಯದೃಷ್ಟಿರ್ಭವೇನ್ನರಃ ।
ಅತ್ರೈವ ಪ್ರಾಪ್ತವಾನ್ ಸೂರ್ಯಃ ಸಾಽಗ್ನಿಹೋತ್ರಾಶ್ರಮಂ ಪರಂ ॥ ೬೩ ॥
ಅನುಸೂರ್ಯಾಂ ಮಹಾಭಾಗಾಂ ಸಾವಿತ್ರೀಂ ಲೋಕವಿಶ್ರುತಾಂ ।
ಸೂರ್ಯಲೋಕಂ ಸಮಾಸಾದ್ಯ ಬುಭುಜೇ ವಿಪುಲಾಂ ಶ್ರಿಯಂ ॥ ೬೪ ॥
ತಸ್ಮಾದ್ವ್ಯಾಸ ಪರಂ ತೀರ್ಥಂ ಕ್ವಾತಾಸಂಗಮಸಂಜ್ಞಿತಂ ।
ಸರ್ವಪಾಪಹರಂ ಪುಣ್ಯಂ ಸರ್ವಕಾಮವರಪ್ರದಂ ॥ ೬೫ ॥
ಯ ಏತಾಂ ತು ಕಥಾಂ ಪುಣ್ಯಾಂ ಶೃಣೋತಿ ಭುವಿ ಭಕ್ತಿತಃ ।
ಪಠೇದ್ವಾ ಪ್ರಾತರುತ್ಥಾಯ ತಸ್ಯ ಪುಣ್ಯಫಲಂ ಶೃಣು ॥ ೬೬ ॥

---

೬೧. ಚ್ಯವನಾಶ್ರಮಕ್ಕೆ ಹೋದ ಮನುಷ್ಯನು ಅಲ್ಲಿ ಸ್ನಾನವನ್ನು ಮಾಡಿ ಚ್ಯವನೇಶ್ವರನನ್ನು ಸಂದರ್ಶಿಸಬೇಕು. ಅಲ್ಲಿಯೇ ವೈದ್ಯೋತ್ತಮರೆನಿಸಿದ ಅಶ್ವಿನೀ ದೇವತೆಗಳು ತಪಸ್ಸಿದ್ಧಿಯನ್ನು ಹೊಂದಿದರು.

೬೨. ಚ್ಯವನಮಹರ್ಷಿಯ ಅನುಗ್ರಹದಿಂದ ಅವರಿಬ್ಬರಿಗೂ ದೇವತೆಗಳ ಸಮೂಹದಲ್ಲಿ ಸ್ಥಾನವು ಲಭಿಸಿತು. ಚ್ಯವನನಿಗೂ ಅವರ ಕೃಪೆಯಿಂದ ಕಳೆದಿದ್ದ ದೃಷ್ಟಿಯು ಪುನಃ ಲಭ್ಯವಾಯಿತು.

೬೩. ಎಲೈ ಬ್ರಾಹ್ಮಣಶ್ರೇಷ್ಠನೆ! ಆ ತೀರ್ಥದಲ್ಲಿ ಮಿಂದ ನರೋತ್ತಮನಿಗೆ ದಿವ್ಯದೃಷ್ಟಿಯ ಶಕ್ತಿಯುಂಟಾಗುವುದು. ಇಲ್ಲಿಯೇ ಸೂರ್ಯನು ಅಗ್ನಿಹೋತ್ರಸಹಿತವೂ, ಪರಮಪವಿತ್ರವೂ ಆದ ಗೃಹಸ್ಥಧರ್ಮದ ಆಶ್ರಮವನ್ನು ಪುನಃ ಪಡೆದುಕೊಂಡನು.

೬೪. ತನ್ನನ್ನನುಸರಿಸುವವಳೂ, ಮಹಾಭಾಗ್ಯವಂತಳೂ, ತ್ರಿಲೋಕವಿಖ್ಯಾತಳೂ ಆದ ಸಾವಿತ್ರಿಯೆಂಬ ಸಂಜ್ಞಾದೇವಿಯೊಡನೆ ಪುನಃ ಸೇರಿ ತನ್ನ ಲೋಕವನ್ನು ಹೊಂದಿ ಸೂರ್ಯದೇವನೂ ಸಕಲಭೋಗಗಳನ್ನು ಅನುಭವಿಸುತ್ತಿದ್ದನು.

೬೫. ಎಲೈ ವ್ಯಾಸನೆ! ಆದುದರಿಂದ ಕ್ವಾತಾಸಂಗಮವೆಂದು ಪ್ರಸಿದ್ಧವಾಗಿರುವ ಈ ತೀರ್ಥವು ಸರ್ವಶ್ರೇಷ್ಠವೂ, ಸಕಲದುರಿತಾಪಹಾರಕವೂ, ಪುಣ್ಯಪ್ರದವೂ, ಸಕಲಾಭೀಷ್ಟದಾಯಕವೂ ಆಗಿರುವುದು.

೬೬. ಭೂಲೋಕದಲ್ಲಿ ಯಾವನು ಈ ಚರಿತ್ರೆಯನ್ನು ಭಕ್ತಿಪೂರ್ವಕವಾಗಿ ಕೇಳುವನೊ, ಯಾವನು ಬೆಳಿಗ್ಗೆ ಏಳುತ್ತಲೇ ಈ ಪುಣ್ಯಕಥೆಯನ್ನು ಓದುವನೊ, ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು.

**ಕಪಿಲಾ ಗೋಸಹಸ್ರೇಣ ಫಲಂ ಭವತಿ ಪರ್ವಣಿ ।**
**ತತ್ಫಲಂ ಸಮವಾಪ್ನೋತಿ ನಾಽತ್ರ ಕಾರ್ಯಾ ವಿಚಾರಣಾ ॥ ೬೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕ್ಷಾತಾಸಂಗಮ ಮಾಹಾತ್ಮ್ಯವರ್ಣನಂ" ನಾಮ ಷಟ್ಪಂಚಾಶತ್ತಮೋಽಧ್ಯಾಯಃ**

---

೬೭. ಆ ಭಕ್ತನು ಪರ್ವಕಾಲದಲ್ಲಿ ಒಂದು ಸಾವಿರ ಕಪಿಲೆಯ ಆಕಳುಗಳನ್ನು ದಾನಮಾಡಿದ ಫಲಕ್ಕೆ ಭಾಗಿಯಾಗುವನು. ಈ ವಿಷಯದಲ್ಲಿ ಸಂದೇಹಕ್ಕೆಡೆಯಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ
ಮಾಹಾತ್ಮ್ಯದಲ್ಲಿ "ಕ್ಷಾತಾಸಂಗಮ ಮಾಹಾತ್ಮ್ಯವರ್ಣನ"ವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಪಂಚಾಶತ್ತಮೋಽಧ್ಯಾಯಃ

### ಗಯಾತೀರ್ಥಪ್ರಶಂಸಾವರ್ಣನಂ

ಸನತ್ಕುಮಾರ ಉವಾಚ :—

**ಶೃಣು ವ್ಯಾಸ ಪ್ರವಕ್ಷ್ಯಾಮಿ ತೀರ್ಥಮೇಕಮತಃ ಪರಂ ।**
**ತೀರ್ಥಾನಾಮುತ್ತಮಂ ತೀರ್ಥಂ ಗಯಾನಾಮೇತಿ ನಾಮತಃ ॥ ೧ ॥**
**ತತ್ರ ಸ್ನಾತ್ವಾ ನರೋ ನಿತ್ಯಂ ಮುಚ್ಯತೇ ಚ ಋಣತ್ರಯಾತ್ ।**
**ದೇವಾನ್ ಪಿತ್ರೂನ್ ಸಮಭ್ಯರ್ಚ್ಯ ವಿಷ್ಣುಲೋಕಂ ಸ ಗಚ್ಛತಿ ॥ ೨ ॥**

ವ್ಯಾಸ ಉವಾಚ :—

**ಕೀಕಟೇಷು ಗಯಾ ಪುಣ್ಯಾ ನದೀ ಪುಣ್ಯಾ ಪುನಃ ಪುನಾ ।**
**ಚ್ಯವನಸ್ಯಾಶ್ರಮಃ ಪುಣ್ಯಃ ಪುಣ್ಯೋ ರಾಜಗಿರಿಸ್ತಥಾ ॥ ೩ ॥**
**ಸ ಕಥಂ ವಿದಿತೋ ದೇಶೇ ಮಹಾಕಾಲವನೇ ಶುಭೇ ।**
**ಏತದ್ವೇದಿತುಮಿಚ್ಛಾಮಿ ವಿಸ್ತರೇಣ ತಪೋಧನ ॥ ೪ ॥**

---

### ಕನ್ನಡದ ಅನುವಾದ

#### ಗಯಾತೀರ್ಥಪ್ರಶಂಸಾವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಇನ್ನುಮೇಲೆ ಮತ್ತೊಂದು ತೀರ್ಥವನ್ನು ಕುರಿತು ಹೇಳುವೆನು, ಕೇಳು. ಗಯಾನಾಮಕವಾದ ಈ ತೀರ್ಥವು ಸಮಸ್ತ ತೀರ್ಥಗಳಲ್ಲಿಯೂ ಉತ್ತಮವೆನಿಸಿರುವುದು.

೨. ಆ ತೀರ್ಥದಲ್ಲಿ ನಿತ್ಯವೂ ಸ್ನಾನವನ್ನು ಮಾಡಲು ಋಣತ್ರಯಗಳಿಂದಲೂ ಮಾನವನು ಮುಕ್ತನಾಗುವನು. ಅಲ್ಲಿ ದೇವತಾರ್ಚನೆಯನ್ನೂ ಪಿತೃಶ್ರಾದ್ಧಗಳನ್ನೂ ಮಾಡಿದವನು ವಿಷ್ಣುಲೋಕವನ್ನು ಸೇರುವನು.

೩. ವ್ಯಾಸನು ಹೇಳುತ್ತಾನೆ:—ಗಯಾಕ್ಷೇತ್ರವೂ, ಪುನಾನದಿಯೂ ಪುಣ್ಯಪ್ರದವಾದ ಚ್ಯವನಾಶ್ರಮವೂ, ಪಾವನವಾದ ರಾಜಗಿರಿಯೂ ಕೀಕಟದೇಶದಲ್ಲಿರುವುವಲ್ಲವೆ.

೪. ಅಂತಹ ತೀರ್ಥೋತ್ತಮವು ಶುಭಕರವಾದ ಈ ಮಹಾಕಾಲವನದಲ್ಲಿ ಬಂದುದು ಹೇಗೆ? ಎಲೈ ತಪೋಧನನೆ! ಈ ವಿಷಯವನ್ನು ವಿಸ್ತಾರವಾಗಿ ಕೇಳಲಿಚ್ಛೆಯುಳ್ಳವನಾಗಿರುವೆನು.

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಕಥಾಂ ಪುಣ್ಯಾಂ ಪವಿತ್ರಾಂ ಪಾಪಹಾರಿಣೀಂ ।
ಯಸ್ಯಾಃ ಶ್ರವಣಮಾತ್ರೇಣ ಪಿತರೋ ಯಾಂತಿ ಸದ್ಗತಿಂ ॥ ೫ ॥
ಪುರಾ ಕೃತಯುಗೇ ಪುಣ್ಯೇ ಯುಗಾದಿದೇವಸಾಮತಃ ।
ರಾಜಾಸೀತ್ಸ ತು ಧರ್ಮಾತ್ಮಾ ಪುಣ್ಯಶ್ರವಣಕೀರ್ತನಃ ॥ ೬ ॥
ತಸ್ಯ ಪಾಲಯತಃ ಸಮ್ಯಕ್ಪ್ರಜಾಃ ಪುತ್ರಾನಿವೌರಸಾನ್ ।
ಬಭೂವುಃ ಸರ್ವಸಂಪನ್ನಾ ವರ್ಧಮಾನಾಃ ಸಮಂತತಃ ॥ ೭ ॥
ಧರ್ಮಶ್ಚತುಷ್ಪದೋ ನಿತ್ಯಂ ಯಸ್ಮಿನ್ರಾಜ್ಞಿ ಪ್ರಶಾಸತಿ ।
ಕಾಲವರ್ಷೀ ಚ ಪರ್ಜನ್ಯ ಋತವಃ ಸ್ವಾಂಗಚಾರಿಣಃ ॥ ೮ ॥
ಬಹು ಸಸ್ಯಫಲಾ ಪೃಥ್ವೀ ಗಾವಶ್ಚ ಬಹು ದುಗ್ಧದಾಃ ।
ವೇದವಾದರತಾ ವಿಪ್ರಾಃ ಕ್ಷತ್ರಿಯಾ ಬಾಹುಶಾಲಿನಃ ॥ ೯ ॥
ವೈಶ್ಯಾ ಧನಪರಾ ನಿತ್ಯಂ ಶೂದ್ರಾಃ ಶುಶ್ರೂಷಣೇ ರತಾಃ ।
ವರ್ಣಾಶ್ರಮರತಾಃ ಸರ್ವೇ ಸರ್ವೇ ಧರ್ಮೋಪದೇಶಕಾಃ ॥ ೧೦ ॥

---

೫. ಸನತ್ಕುಮಾರನು ಹೇಳುತ್ತಾನೆ:—ಅಯ್ಯಾ ವ್ಯಾಸನೆ! ಪುಣ್ಯವೂ, ಪವಿತ್ರವೂ, ಪಾಪನಾಶಕವೂ ಆದ ಆ ಚರಿತ್ರೆಯನ್ನು ಕೇಳು. ಇದನ್ನು ಕೇಳುವ ಮಾತ್ರದಿಂದಲೇ ಶ್ರೋತೃವಿನ ಪಿತೃಗಳು ಸದ್ಗತಿಯನ್ನು ಹೊಂದುವರು.

೬. ಹಿಂದೆ ಕೃತಯುಗದಲ್ಲಿ ಯುಗಾದಿದೇವನೆಂಬ ಹೆಸರಿನ ಮಹಾರಾಜನೊಬ್ಬನಾಳುತ್ತಿದ್ದನು. ಆತನು ಧರ್ಮಾತ್ಮನೂ, ಪವಿತ್ರ ಚರಿತ್ರೆ, ಕೀರ್ತಿಗಳುಳ್ಳವನೂ ಆಗಿದ್ದನು.

೭. ಆತನು ಪ್ರಜೆಗಳೆಲ್ಲರನ್ನೂ ತನ್ನ ಮಕ್ಕಳಂತೆಯೆ ನೋಡುತ್ತ ಚೆನ್ನಾಗಿ ಪಾಲಿಸುತ್ತಿರಲು ಸಕಲೈಶ್ವರ್ಯಗಳೂ ಎಲ್ಲೆಲ್ಲಿಯೂ ತುಂಬಿ ತುಳುಕಾಡುತ್ತಿದ್ದುವು.

೮. ಆ ರಾಜನ ಆಳ್ವಿಕೆಯಲ್ಲಿ ಧರ್ಮವು ನಾಲ್ಕು ಪಾದಗಳ ಮೇಲೆಯೂ ನಿಂತಿದ್ದಿತು. ಮೇಘಗಳು ಕಾಲಕಾಲಕ್ಕೆ ಮಳೆಗರೆಯುತ್ತಿದ್ದುವು. ಋತುಗಳು ತಮ್ಮ ಧರ್ಮಗಳನ್ನನುಸರಿಸಿ ನಡೆಯುತ್ತಿದ್ದುವು.

೯. ಭೂಮಿಯು ಸಮೃದ್ಧವಾದ ಸಸ್ಯಫಲಗಳಿಂದ ಭರಿತವಾಗಿದ್ದಿತು. ಆಕಳುಗಳು ಯಥೇಚ್ಛವಾಗಿ ಹಾಲನ್ನು ಕೊಡುತ್ತಿದ್ದುವು. ಬ್ರಾಹ್ಮಣರು ವೇದಾಧ್ಯಯನಗಳಲ್ಲಿ ನಿರತರಾಗಿದ್ದರು. ಕ್ಷತ್ರಿಯರು ಪರಾಕ್ರಮಿಗಳಾಗಿದ್ದರು.

೧೦. ವೈಶ್ಯರು ಧನಸಂಗ್ರಹತತ್ಪರರಾಗಿದ್ದರು. ಶೂದ್ರರು ತ್ರೈವರ್ಣಿಕರ ಶುಶ್ರೂಷೆಯನ್ನು ಮಾಡುತ್ತಿದ್ದರು. ಸಕಲರೂ ತಮ್ಮ ವರ್ಣಾಶ್ರಮ ಧರ್ಮಗಳನ್ನಾಚರಿಸುತ್ತ ಇತರರಿಗೆ ಧರ್ಮಗಳನ್ನುಪದೇಶಿಸುತ್ತಿದ್ದರು.

ಶ್ರುತಿಸ್ಮೃತಿಪರೋ ಧರ್ಮೋ ಹೃಷ್ಟಪುಷ್ಟಜನಾಕರಃ ।
ನಾಧಿವ್ಯಾಧ್ಯಭಿಭೂತಶ್ಚ ಲಕ್ಷ್ಯತೇ ಕೋಽಪಿ ಮಾನವಃ ॥ ೧೧ ॥
ದುಃಶೀಲಾ ದುರ್ಭಗಾ ನಾರೀ ವಿಧವಾ ನೈವ ಲಕ್ಷ್ಯತೇ ।
ಬಹುಪುತ್ರಾಽಲ್ಪಪುತ್ರಾ ಚ ಮೃತಪುತ್ರಾ ನ ವಂಧ್ಯಕಾ ॥ ೧೨ ॥
ರೂಪಶೀಲಗುಣೋಪೇತಾ ಪತಿವ್ರತಪರಾಯಣಾ ।
ನೋ ಮಾರ್ಗಃ ಕಂಟಸಂಕೀರ್ಣೋ ದಸ್ಯುದೋಷೈಶ್ಚ ದೂಷಿತಃ ॥ ೧೩ ॥
ಹೂಯತಾಂ ಭುಜ್ಯತಾಂ ಶಶ್ವದ್ದೀಯತಾಂ ಚ ಗೃಹೇ ಗೃಹೇ ।
ದಯಾದಾನತಪೋಹೋಮಜಪಯಜ್ಞಕ್ರಿಯಾಪರಾಃ ॥ ೧೪ ॥
ಜನಾಃ ಸರ್ವತ್ರ ದೃಶ್ಯಂತೇ ಸರ್ವಧರ್ಮಪರಾಯಣಾಃ ।
ಚತುಷ್ಪಾದಚರೋ ಧರ್ಮೋಽಹ್ಯಧರ್ಮೋಽಪಾದವಿಗ್ರಹಃ ॥ ೧೫ ॥
ಏವಂ ರಾಜಾ ಸಧರ್ಮಾತ್ಮಾ ಯುಗಾದಿದೇವಸಂಜ್ಞಿತಃ ।
ಯೇನೇಯಂ ಪಾಲಿತಾ ಪೃಥ್ವೀ ಧರ್ಮೇಣ ವರ್ಧಿತಾಃ ಪ್ರಜಾಃ ॥ ೧೬ ॥

---

೧೧. ಧರ್ಮವೂ ಶ್ರುತಿಸ್ಮೃತಿಗಳನ್ನನುಸರಿಸಿದ್ದಿತು. ದೇಶವು ಹರ್ಷ ಸಮೃದ್ಧಿಗಳಿಂದ ಕೂಡಿದ್ದಿತು. ಯಾವ ಮನುಷ್ಯನೂ ಮಾನಸಿಕ, ಶಾರೀರಕ ಕ್ಲೇಶಗಳಿಂದ ಸಂಕಟಪಡುತ್ತಿರಲಿಲ್ಲ.

೧೨. ಕುಲಗೆಟ್ಟವಳೂ, ದರಿದ್ರಳೂ, ವಿಧವೆಯೂ ಆದ ಸ್ತ್ರೀಯೇ ಕಾಣು ತ್ತಿರಲಿಲ್ಲ. ಹಾಗೆಯೇ ಅನೇಕ ಮಕ್ಕಳುಳ್ಳವಳೂ, ಅಲ್ಪಸಂತಾನಳೂ, ಹುಟ್ಟಿ ದೊಡನೆ ಸಾಯುವ ಮಕ್ಕಳುಳ್ಳವಳೂ, ಬಂಜೆಯೂ ಇರಲಿಲ್ಲ.

೧೩. ಸಕಲಸ್ತ್ರೀಯರೂ, ಸೌಂದರ್ಯಸೌಶೀಲ್ಯಭರಿತರಾದವರೂ, ಪಾತಿ ವ್ರತ್ಯಪರಾಯಣೆಯರೂ ಆಗಿದ್ದರು. ಮಾರ್ಗಗಳಲ್ಲಿ ಕಂಟಕಗಳಾಗಲಿ, ಕಳ್ಳ ಕಾಕರ ಉಪಟಳಗಳಾಗಲಿ ಇರಲಿಲ್ಲ.

೧೪. "ಹೋಮಮಾಡಿರಿ; ಭೋಜನವಾಗಲಿ; ದಾನಗಳು ನಡೆಯಲಿ" ಎಂಬ ಶಬ್ದಗಳೇ ನಿತ್ಯವೂ ಮನೆಮನೆಯಲ್ಲಿಯೂ ಕೇಳಿಬರುತ್ತಿದ್ದುವು. ಜನರೆ ಲ್ಲರೂ ದಯೆ, ದಾನ, ತಪಸ್ಸು, ಯಜ್ಞ, ಜಪ, ಹೋಮಗಳೆಂಬ ಕಾರ್ಯ ಗಳಲ್ಲಿ ಆಸಕ್ತರಾಗಿದ್ದರು.

೧೫. ಎಲ್ಲೆಲ್ಲಿಯೂ ಜನರು ಸಕಲಧರ್ಮಗಳನ್ನೂ ಎಡಬಿಡದೆ ಆಚರಿಸು ತ್ತಿದ್ದರು. ಧರ್ಮವು ನಾಲ್ಕು ಪಾದಗಳ ಮೇಲೆ ನಿಂತಿದ್ದಿತು. ಅಧರ್ಮ ವೆಂಬುದಕ್ಕೆ ನೆಲೆಯೇ ಇರಲಿಲ್ಲ.

೧೬. ಇಂತು ಯುಗಾದಿದೇವನೆಂಬ ಹೆಸರಿನ ಆ ರಾಜನು ಧರ್ಮಾತ್ಮ ನಾಗಿದ್ದನು. ಆತನಿಂದ ಈ ಭೂಮಂಡಲವೆಲ್ಲವೂ ಪಾಲಿಸಲ್ಪಡುತ್ತಿದ್ದಿತು. ಪ್ರಜೆಗಳೂ ಧರ್ಮದಿಂದ ವೃದ್ಧಿಯನ್ನು ಹೊಂದುತ್ತಿದ್ದರು.

ಅವಂತ್ಯಾಂ ಚ ಪುರಾ ವ್ಯಾಸ ಯಜ್ಞಕೋಟಿಂ ಸಮಾಚರತ್ ।
ತಸ್ಮಿನ್ಕಾಲೇಽತಿವಿಕ್ರಾಂತಸ್ತುಹಂಡೋ ನಾಮ ದಾನವಃ ॥ ೧೭ ॥
ತೇನ ಸರ್ವಂ ವಶಂ ನೀತಂ ಚರಾಽಚರಮಿದಂ ಜಗತ್ ।
ಘೋರಂ ತಪಸ್ತ್ವಾ ತಪಃ ಪುಣ್ಯಂ ಬ್ರಹ್ಮಲಬ್ಧವರಃ ಖಲಃ ॥ ೧೮ ॥
ನೈವ ದೇವಾ ನ ಯಜ್ಞಾಶ್ಚ ವೇದಮಾರ್ಗವಿವರ್ಜಿತಾಃ ।
ದೇವತಾಪೂಜನಂ ನಾಽಸ್ತಿ ಸ್ವಧಾ ಸ್ವಾಹಾ ನ ದೃಶ್ಯತೇ ॥ ೧೯ ॥
ಉತ್ಸನ್ನೋ ಧರ್ಮಮಾರ್ಗೋಽಯಂ ಶಾಶ್ವತೋ ವೈ ದುರಾತ್ಮನಾ ।
ನಷ್ಟಪ್ರಾಯಾಃ ಸುರಾಸ್ತೇನ ಕೃತಾಃ ಸರ್ವೇ ದ್ವಿಜೋತ್ತಮಾಃ ॥ ೨೦ ॥
ಬ್ರಹ್ಮಾಣಂ ಶರಣಂ ಜಗ್ಮುಃ ಪಿತೃಭಿಃ ಸಹ ಸಾಧುಭಿಃ ।
ಕಿಂ ಕುರ್ಮೋ ವಾ ಕ್ವ ಗಚ್ಛಾಮ ತುಹಂಡೇನ ಪರಾಜಿತಾಃ ॥ ೨೧ ॥
ಇತಿ ಶ್ರುತ್ವಾ ವಚಸ್ತೇಷಾಂ ಬ್ರಹ್ಮಾ ಲೋಕಪಿತಾಮಹಃ ।
ಸಮುತ್ಥಾಯ ತತಃ ಸರ್ವೈರ್ವಿಷ್ಣುಲೋಕಂ ಜಗಾಮ ಹ ॥ ೨೨ ॥

---

೧೭. ಎಲೈ ವ್ಯಾಸನೆ! ಈತನು ಒಮ್ಮೆ ಅವಂತೀಕ್ಷೇತ್ರದಲ್ಲಿ ಒಂದು ಕೋಟಿ ಯಜ್ಞಗಳನ್ನು ಮಾಡಲುಪಕ್ರಮಿಸಿದನು. ಇದೇ ಕಾಲದಲ್ಲಿಯೇ ಮಹಾಬಲ ಶಾಲಿಯಾದ ತುಹಂಡನೆಂಬ ದಾನವನೊಬ್ಬನಿದ್ದನು.

೧೮. ಅವನಿಂದ ಚರಾಚರಾತ್ಮಕವಾದ ಈ ಭೂಮಂಡಲವೆಲ್ಲವನ್ನೂ ತನ್ನ ವಶಪಡಿಸಿಕೊಳ್ಳುವ ಪ್ರಯತ್ನವು ನಡೆಯಿತು. ಘೋರವೂ ಪುಣ್ಯಪ್ರದವೂ ಆದ ತಪಸ್ಸನ್ನಾಚರಿಸಿ ಆ ದಾನವನು ಚತುರ್ಮುಖನಿಂದ ವರವೊಂದನ್ನು ಪಡೆದಿದ್ದನು.

೧೯. ದೇವತೆಗಳಾಗಲಿ ಯಜ್ಞಗಳಾಗಲಿ ಇರಲಿಲ್ಲ. ಜನರು ವೇದಮಾರ್ಗಗಳನ್ನು ತ್ಯಜಿಸತೊಡಗಿದರು. ದೇವತಾರ್ಚನೆಗಳಾಗಲಿ, ಪಿತೃಶ್ರಾದ್ಧಗಳಾಗಲಿ, ಸ್ವಾಹಾಕಾರಗಳಾಗಲಿ ಎಲ್ಲಿಯೂ ಕಾಣದಾದುವು.

೨೦. ಆ ದುರಾತ್ಮನಿಂದ ಸನಾತನವಾದ ಧರ್ಮಮಾರ್ಗವು ಲುಪ್ತವಾಗಲು ಪಕ್ರಮಿಸಿತು. ಅವನು ದೇವತೆಗಳನ್ನೂ ಬ್ರಾಹ್ಮಣೋತ್ತಮರನ್ನೂ ನಷ್ಟಪ್ರಾಯರನ್ನಾಗಿ ಮಾಡಿಟ್ಟಿದ್ದನು.

೨೧. ಅವರೆಲ್ಲರೂ ಪಿತೃಗಳಿಂದಲೂ ಸಾಧುಗಳಿಂದಲೂ ಕೂಡಿಕೊಂಡು ಬ್ರಹ್ಮನಲ್ಲಿಗೆ ಶರಣುಹೋಗಿ "ನಾವೆಲ್ಲರೂ ತುಹಂಡನಿಂದ ಪರಾಜಿತರಾಗಿರುವೆವು; ಈಗೇನು ಮಾಡೋಣ? ಎಲ್ಲಿಗೆ ಹೋಗೋಣ?" ಎಂದರು.

೨೨. ಅವರ ಮಾತುಗಳನ್ನು ಕೇಳಿ ಲೋಕಪಿತಾಮಹನಾದ ಬ್ರಹ್ಮದೇವನು ಎದ್ದು ಎಲ್ಲರನ್ನೂ ಕರೆದುಕೊಂಡು ವಿಷ್ಣುಲೋಕವನ್ನು ಕುರಿತು ಹೊರಟನು.

ತತ್ರ ಗತ್ವಾ ಸಮಾರಾಧ್ಯ ವಿಷ್ಣುಂ ದೇವಗಣೈಃ ಸಹ ।
ಸ್ತುತಿಂ ಪುರುಷಸೂಕ್ತೇನ ವಿಷ್ಣೋರತುಲತೇಜಸಃ ॥ ೨೩ ॥
ಪ್ರಚಕ್ರುಃ ಸರ್ವ ಏವೈತೇ ಹ್ಯಾತ್ಮನೋಽಭ್ಯುದಯಾಯ ಚ ।
ತದಾ ತೇಷಾಂ ಶಮಿಚ್ಛಂತೀ ವಾಗುವಾಚಾಽಶರೀರಿಣೀ ॥ ೨೪ ॥
ಶ್ರೂಯತಾಂ ಭೋಃ ಸುರಶ್ರೇಷ್ಠಾ ಭವತಾಂ ಶ್ರೇಯ ಉತ್ತಮಂ ।
ಯೂಯಂ ಯಾತಾ ಕ್ಷಿತೌ ಕ್ಷಿಪ್ರಂ ಮಹಾಕಾಲವನಂ ಪ್ರತಿ ॥ ೨೫ ॥
ಗುಹ್ಯಾದ್ಗುಹ್ಯತರಂ ಪುಣ್ಯಂ ಪವಿತ್ರಂ ಪಾಪನಾಶನಂ ।
ನೋ ಯತ್ರ ಮಾಯಿನಾಂ ಮಾಯಾ ಪ್ರಕಾಶಯತಿ ಭೂತಲೇ ॥ ೨೬ ॥
ಸರ್ವತೀರ್ಥಮಯಂ ತೀರ್ಥಂ ಕೋಟಿತೀರ್ಥವರಪ್ರದಂ ।
ಯತ್ರ ಶಿಪ್ರಾ ಸರಿಚ್ಛ್ರೇಷ್ಠಾ ಸರ್ವಕಾಮಫಲಪ್ರದಾ ॥ ೨೭ ॥
ದೈತ್ಯಾಂತಕಾರಿಣೀ ದಿವ್ಯಾ ಮಹಾಕಾಲೀ ಕುಲೇಶ್ವರೀ ।
ಕೋಟಿಕೋಟಿಗಣಾಕೀರ್ಣಾ ಮಾತೄಣಾಂ ಶಕ್ತಿವರ್ಧಿನೀ ॥ ೨೮ ॥

---

೨೩. ಅಲ್ಲಿಗೆ ಹೋಗಿ ದೇವತಾಗಣಗಳೊಡನೆ ಅಪ್ರತಿಮಪರಾಕ್ರಮನಾದ ಮಹಾವಿಷ್ಣುವಿನ ಪೂಜೆಯನ್ನು ಮಾಡಿದಮೇಲೆ ಎಲ್ಲರೂ ಪುರುಷಸೂಕ್ತದ ಮಂತ್ರಗಳಿಂದ ಆತನನ್ನು ಸ್ತುತಿಸಿದರು.

೨೪. ಅವರೆಲ್ಲರೂ ಉತ್ತರೋತ್ತರಾಭಿವೃದ್ಧಿಯನ್ನು ಪಡೆಯಲು ಸ್ತೋತ್ರ ಮಾಡುತ್ತಿರಲು ಅವರಿಗೆ ಮನಶ್ಶಾಂತಿಯನ್ನುಂಟುಮಾಡುವಂತೆ ಅಶರೀರ ವಾಣಿಯು ನುಡಿಯತೊಡಗಿತು.

೨೫. "ಎಲೈ ದೇವೋತ್ತಮರಿರಾ! ನಿಮಗೆ ಉತ್ತಮಶ್ರೇಯಸ್ಸುಂಟಾಗುವ ಉಪಾಯವನ್ನು ಕೇಳಿರಿ. ನೀವೆಲ್ಲರೂ ಬೇಗನೆ ಭೂಲೋಕದಲ್ಲಿರುವ ಮಹಾಕಾಲವನಕ್ಕೆ ಹೋಗಿರಿ.

೨೬. ಈ ಕ್ಷೇತ್ರವು ಸಕಲಗುಹ್ಯಕ್ಷೇತ್ರಗಳಲ್ಲಿ ಗುಹ್ಯತಮವಾದುದೂ ಪುಣ್ಯಪ್ರದವೂ, ಪವಿತ್ರವೂ, ಪಾಪನಾಶಕವೂ ಆಗಿರುವುದು. ಇಲ್ಲಿ ಮಾಯಾವಿಗಳ ಯಾವ ಮಾಯೆಯೂ ಕೆಲಸಮಾಡಲಾರದು.

೨೭. ಇಲ್ಲಿ ಕೋಟಿತೀರ್ಥಗಳ ಪುಣ್ಯವನ್ನು ಒಮ್ಮೆಯೇ ಕೊಡುವ ಸಕಲ ತೀರ್ಥಮಯವಾದ ತೀರ್ಥವೊಂದಿರುವುದು. ಅಲ್ಲಿಯೇ ಸಕಲಾಭೀಷ್ಟಫಲ ಪ್ರದಾಯಕವೂ, ಉತ್ತಮವೂ ಆದ ಶಿಪ್ರಾನದಿಯೂ ಪ್ರವಹಿಸುತ್ತಿರುವುದು.

೨೮. ಇಲ್ಲಿಯೇ ದೈತ್ಯಕುಲನಾಶಕಳಾದ ಮಹಾಕಾಳಿಯೆಂಬ ದೇವಿಯು ಕುಲೇಶ್ವರಿಯೆಂಬ ಹೆಸರಿನಿಂದ ನೆಲಸಿರುವಳು. ಆಕೆಯು ಅಸಂಖ್ಯಾತ ಕೋಟಿಶಕ್ತಿಗಣಗಳಿಂದ ಪರಿವೃತಳಾಗಿ ಸಪ್ತಮಾತೃಕೆಯರಿಗೂ ಶಕ್ತಿಪ್ರದೆಯೆನಿಸಿರುವಳು.

ಯತ್ರ ಗಯಾ ಮಹಾಪುಣ್ಯಾ ಫಲ್ಗುಶ್ಚೈವ ಮಹಾನದೀ ।
ಪುರುಷೋತ್ತಮಗಿರಿಶ್ರೇಷ್ಠೋ ಯತ್ರ ಬುದ್ಧಗಯಾ ಸ್ಮೃತಾ ॥ ೨೯ ॥
ತಥೈವಾದ್ಯಗಯಾ ಖ್ಯಾತಾ ತ್ರಿಷು ಲೋಕೇಷು ವಿಶ್ರುತಾ ।
ವಿಷ್ಣೋಃ ಷೋಡಶಪದೀ ತೀರ್ಥಂ ಗದಾಧರವಿನಿರ್ಮಿತಂ ॥ ೩೦ ॥
ಸರ್ವಪಾಪಹರಾ ಪುಣ್ಯಾ ಯತ್ರ ಪ್ರಾಚೀ ಸರಸ್ವತೀ ।
ಮಹಾಸುರನದೀ ಪ್ರೋಕ್ತಾ ಯತ್ರ ತಿಷ್ಠತಿ ಪುಣ್ಯದಾ ॥ ೩೧ ॥
ನ್ಯಗ್ರೋಧಶ್ಚಾಕ್ಷಯೋ ನಿತ್ಯಃ ಪುರಾ ಪ್ರೋಕ್ತೋ ಮಹರ್ಷಿಣಾ ।
ತತ್ರೈವ ಸಾ ಶಿಲಾ ಪ್ರೋಕ್ತಾ ಪ್ರೇತಮೋಕ್ಷಕರೀ ಶುಭಾ ॥ ೩೨ ॥
ತತ್ರೈವ ಸಂತಿ ತಾಃ ಸರ್ವಾ ದೇವತಾಃ ಪಿತೃಕಲ್ಪಜಾಃ ।
ಸರ್ವಾಕ್ಷರಮಯೋಂಕಾರಃ ಸರ್ವದೇವಮಯೋ ಹರಿಃ ॥ ೩೩ ॥
ಸರ್ವತೀರ್ಥಮಯಾ ದೇವಾ ಗಯಾತೀರ್ಥಮನುತ್ತಮಂ ।
ಶೀಘ್ರಂ ಗಚ್ಛತ ತತ್ರೈವ ಪರಾಂ ಸಿದ್ಧಿಮವಾಪ್ಸ್ಯಥ ॥ ೩೪ ॥

---

೨೯. ಅಲ್ಲಿಯೇ ಗಯೆಯೆಂಬ ಮಹಾಪುಣ್ಯಕ್ಷೇತ್ರವೂ, ಮಹಾನದಿಯಾದ ಫಲ್ಗುವೂ, ಶ್ರೇಷ್ಠವಾದ ಪುರುಷೋತ್ತಮಗಿರಿಯೂ, ಬುದ್ಧಗಯೆಯೂ ನೆಲಸಿರುವುವು.

೩೦. ಹಾಗೆಯೇ ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದ ಆದಿಗಯೆಯೂ ಗದಾಧರನಿರ್ಮಿತವೆನಿಸಿದ ಷೋಡಶಪತಿಯೆಂಬ ವೈಷ್ಣವ ತೀರ್ಥವೂ ಇರುವುವು.

೩೧. ಸಕಲಪಾತಕಗಳನ್ನೂ ಪರಿಹರಿಸುವ ಸರಸ್ವತೀನದಿಯು ಪೂರ್ವ ದಿಕ್ಕಿಗೆ ಪ್ರವಹಿಸುತ್ತಿರುವುದು. ಪುಣ್ಯಪ್ರದೆಯಾದ ಮಹಾಸುರನದಿಯೆಂಬುದೂ ಅಲ್ಲಿಯೇ ಇರುವುದೆಂದು ಹೇಳುವರು.

೩೨. ಹಿಂದೆ ಮಹರ್ಷಿಗಳು ಪ್ರಶಂಸಿಸಿರುವ ಅನಾದಿಯಾದ ಅಕ್ಷಯವಟ ವೃಕ್ಷವೂ ಪ್ರೇತಗಳಿಗೆ ಮೋಕ್ಷವನ್ನು ಕೊಡುವ ಪವಿತ್ರವಾದ ಪ್ರೇತಶಿಲೆಯೂ ಅಲ್ಲಿಯೇ ಕಾಣುತ್ತಿರುವುವು.

೩೩. ಈ ಸಕಲಪದಾರ್ಥಗಳೇ ಅಲ್ಲದೆ ಪಿತೃಕಲ್ಪಜರಾದ ಸಕಲದೇವತೆಗಳೂ ಮಹಾಕಾಲವನದ ಆ ಗಯಾತೀರ್ಥದಲ್ಲಿರುವುವು. ಓಂಕಾರವು ಸರ್ವಾಕ್ಷರಮಯವಾಗಿರುವುದು. ಶ್ರೀಮನ್ನಾರಾಯಣನು ಸಕಲದೇವತಾಮಯನಾಗಿರುವನು.

೩೪. ದೇವತೆಗಳು ಸರ್ವತೀರ್ಥಮಯರಾಗಿರುವಂತೆಯೇ ಗಯಾತೀರ್ಥವು ಎಲ್ಲವನ್ನೂ ಒಳಕೊಂಡು ಸರ್ವೋತ್ತಮವೆನಿಸಿರುವುದು. ನೀವೆಲ್ಲರೂ ಶೀಘ್ರವಾಗಿ ಅಲ್ಲಿಗೆ ಹೋದಲ್ಲಿ ನಿಮ್ಮ ಕಾರ್ಯವು ಸರ್ವಪ್ರಕಾರದಿಂದಲೂ ಸಿದ್ಧಿಸುವುದು.

ಯತ್ರ ಪ್ರವಿಷ್ಟಮಾತ್ರೇಣ ಪಿತರೋ ನಿರಯಸ್ಥಿತಾಃ ।
ತೇ ಸರ್ವೇ ಸ್ವರ್ಗಮಾಯಾಂತಿ ಬ್ರಹ್ಮಭೂಯಾಯ ಕಲ್ಪತೇ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಗಯಾತೀರ್ಥ ಪ್ರಶಂಸಾವರ್ಣನಂ" ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೩೫. ಮನುಷ್ಯನು ಅಲ್ಲಿ ಪ್ರವೇಶಿಸಿದ ಮಾತ್ರದಿಂದಲೇ ನರಕಗಳಲ್ಲಿರುವ ಅವನ ಪಿತೃಗಳೆಲ್ಲರೂ ಸ್ವರ್ಗಭಾಗಿಗಳಾಗುವರು. ಅವನೂ ಬ್ರಹ್ಮಪದವಿಯನ್ನು ಹೊಂದಲರ್ಹನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಗಯಾತೀರ್ಥಪ್ರಶಂಸಾವರ್ಣನ"ವೆಂಬ ಐವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಪಂಚಾಶತ್ತಮೋಽಧ್ಯಾಯಃ

### ಶ್ರಾದ್ಧವಿಧಿವರ್ಣನಂ

ವ್ಯಾಸ ಉವಾಚ :—

ವಿಚಿತ್ರಮಿದಮಾಖ್ಯಾತಂ ಗಯಾಮಾಹಾತ್ಮ್ಯಮುತ್ತಮಂ ।
ಭಗವನ್ಭವತಾ ಸರ್ವಂ ವಿದಿತಂ ವಿಶ್ವಮೂರ್ತಿನಾ ॥ ೧ ॥
ತತ್ಸರ್ವಂ ಶ್ರೋತುಮಿಚ್ಛಾಮಿ ಶ್ರಾದ್ಧಸ್ಯ ಫಲಮುತ್ತಮಂ ।
ಕ್ಷೇತ್ರಸ್ಯ ಚ ದ್ವಿಜಶ್ರೇಷ್ಠ ವಿಸ್ತರೇಣ ತಪೋಧನ ॥ ೨ ॥
ಕಿಯಂತಃ ಪಿತರೋ ನಿತ್ಯಂ ತೃಪ್ತಾ ಯಾಂತಿ ಸುರಾಲಯಂ ।
ಕೇಷಾಂ ಕೇ ಪಿತರಃ ಪ್ರೋಕ್ತಾಃ ಕಿಮುದ್ದೇಶ್ಯಾಃ ಪುರಾಽನಘ ॥ ೩ ॥

ಸನತ್ಕುಮಾರ ಉವಾಚ :—

ಧನ್ಯೋಽಸಿ ಕೃತಕೃತ್ಯೋಽಸಿ ಯಸ್ಯ ತೇ ನೈಷ್ಠಿಕೀ ಮತಿಃ ।
ತಥಾಽಪಿ ಶೃಣು ವೈ ವತ್ಸ ಶ್ರಾದ್ಧಸ್ಯ ವಿಧಿಮುತ್ತಮಾಂ ॥ ೪ ॥
ಶ್ರಾದ್ಧೇ ಪ್ರಕಲ್ಪಿತಾ ಲೋಕಾಃ ಶ್ರಾದ್ಧೇ ಧರ್ಮಃ ಪ್ರತಿಷ್ಠಿತಃ ।
ಶ್ರಾದ್ಧೇ ಯಜ್ಞಾ ಹಿ ತಿಷ್ಠಂತಿ ಸರ್ವಕರ್ಮಫಲಪ್ರದಾಃ ॥ ೫ ॥

---

## ಕನ್ನಡದ ಅನುವಾದ

### ಶ್ರಾದ್ಧವಿಧಿವರ್ಣನ

೧. ವ್ಯಾಸನು ಹೇಳುತ್ತಾನೆ:—ವಿಚಿತ್ರವೂ, ಸರ್ವೋತ್ತಮವೂ ಆದ ಗಯಾ ಮಾಹಾತ್ಮ್ಯವನ್ನು ಹೇಳಿರುವೆಯಷ್ಟೆ. ಎಲೈ ಸ್ವಾಮಿಯೆ! ಸರ್ವಾಂತರ್ಯಾಮಿಯಾದ ನಿನಗೆ ಸಕಲವೂ ತಿಳಿದಿರುವುದು.

೨. ಈಗ ಬ್ರಾಹ್ಮಣೋತ್ತಮನೂ, ತಪೋಮೂರ್ತಿಯೂ ಆದ ನಿನ್ನಿಂದ ಶ್ರಾದ್ಧಕರ್ಮಗಳನ್ನು ಮಾಡುವುದರ ಫಲವನ್ನೂ ಈ ಕ್ಷೇತ್ರದ ಮಾಹಾತ್ಮ್ಯವನ್ನೂ ವಿಸ್ತಾರವಾಗಿ ಕೇಳಲಪೇಕ್ಷಿಸುತ್ತೇನೆ.

೩. ನಿತ್ಯವೂ ಎಷ್ಟುಮಂದಿ ಪಿತೃಗಳು ತೃಪ್ತರಾಗಿ ದೇವಲೋಕಕ್ಕೆ ಹೋಗುವರು? ಯಾರಿಗೆ ಯಾರು ಪಿತೃಗಳೆಂದು ಹೇಳುವರು? ಯಾರಿಗೋಸ್ಕರ ಈ ಕರ್ಮವನ್ನು ಮಾಡಬೇಕು?

೪. ಸನತ್ಕುಮಾರನು ಹೇಳುತ್ತಾನೆ:—ಅಯ್ಯಾ ವ್ಯಾಸನೆ! ಇಂತಹ ಕರ್ಮನಿಷ್ಠೆಯಲ್ಲಿ ಬುದ್ಧಿಯುಳ್ಳವನಾದ ನೀನೇ ಧನ್ಯನು, ಕೃತಾರ್ಥನು. ಇನ್ನು ಶ್ರಾದ್ಧದ ಉತ್ತಮವಿಧಿಯನ್ನು ಕೇಳು.

೫. ಶ್ರಾದ್ಧದಿಂದಲೇ ಲೋಕಗಳೆಲ್ಲವೂ ಸೃಷ್ಟಿಮಾಡಲ್ಪಟ್ಟುವು. ಶ್ರಾದ್ಧದಲ್ಲಿಯೇ ಧರ್ಮವು ನೆಲಸಿರುವುದು. ಶ್ರಾದ್ಧದಲ್ಲಿಯೇ ಸಕಲಾಭೀಷ್ಟಪ್ರದಾಯಕಗಳಾದ ಯಜ್ಞಗಳೂ ಅಡಗಿರುವುವು.

ಶ್ರದ್ಧಯಾ ದೀಯತೇ ಕಿಂಚಿದ್ದೈವಂ ಬ್ರಹ್ಮಾಗ್ನಿತರ್ಪಣಂ ।
ಶ್ರಾದ್ಧಂ ತು ತದ್ವಿಜಾನೀಯಾತ್ಪುರಾ ಪ್ರೋಕ್ತಂ ಮಹರ್ಷಿಣಾ ॥ ೬ ॥
ಮನುಷ್ಯಾ ಋಷಯಃ ಸರ್ವೇ ಸುರಸಿದ್ಧಾಶ್ಚ ರಾಕ್ಷಸಾಃ ।
ಗಂಧರ್ವಾಃ ಕಿನ್ನರಾ ನಾಗಾ ಬ್ರಹ್ಮೇಶಾನಸುರೇಶ್ವರಾಃ ॥ ೭ ॥
ತ್ರೀನ್ಪಿತೄಂಶ್ಚ ಸಮುದ್ದಿಶ್ಯ ಶ್ರಾದ್ಧಂ ದದ್ಯುಃ ಸಮಾಹಿತಾಃ ।
ಪ್ರಾಪ್ನುವಂತ್ಯಖಿಲಾನ್ಕಾಮಾನ್ ಸರ್ವಾನ್ವ್ಯಾಸ ಮನೋಗತಾನ್ ॥ ೮ ॥
ಏವಂ ಪರಂಪರಾಮಾರ್ಗಂ ಪ್ರವರ್ತಂತೇ ಸನಾತನಂ ।
ತಥಾಽಪಿ ಪಿತರೋಹ್ಯೇತೇ ಸಮಾಖ್ಯಾತತಮಾ ಭುವಿ ॥ ೯ ॥
ತತ್ಸರ್ವಂ ಸಂಪ್ರವಕ್ಷ್ಯಾಮಿ ಯಥಾ ಶ್ರುತಂ ತಥಾ ಶೃಣು ।
ತ ಏತೇ ಪಿತರೋ ದೇವಾ ದೇವಾಶ್ಚ ಪಿತರಸ್ತಥಾ ॥ ೧೦ ॥
ಅನ್ಯೋನ್ಯಂ ಪಿತರೋ ಹ್ಯೇತೇ ದೇವಾಃ ಪಿತೃಗಣೈಃ ಸಹ ।
ಮಾರ್ಕಂಡೇನ ಪುರಾ ಪೃಷ್ಟಂ ಪ್ರಶ್ನಮೇತದ್ದ್ವಿಜೋತ್ತಮ ॥ ೧೧ ॥
ನಿಬೋಧ ತ್ವಂ ಮತಂ ಸರ್ವಂ ಯದುಕ್ತಂ ತತ್ಸಮಾಹಿತಃ ।
ಯಾವಂತಸ್ತೇ ಪಿತೃಗಣಾಸ್ತಸ್ಮಿಂಲ್ಲೋಕೇ ಚ ಯೇ ಗತಾಃ ॥ ೧೨ ॥

---

೬. ದೇವತೆಗಳನ್ನಾಗಲಿ, ಬ್ರಾಹ್ಮಣರನ್ನಾಗಲಿ, ಅಗ್ನಿಯನ್ನಾಗಲಿ ತೃಪ್ತಿಗೊಳಿಸುವುದಕ್ಕಾಗಿ ಯಾವ ಅಲ್ಪಪದಾರ್ಥವನ್ನು ಶ್ರದ್ಧೆಯಿಂದ ಕೊಟ್ಟರೂ ಅದೇ ಶ್ರಾದ್ಧವೆನಿಸುವುದೆಂದು ಹಿಂದಿನ ಮಹರ್ಷಿಗಳು ಹೇಳಿರುವರು.

೭–೮. ಮನುಷ್ಯರು, ಮಹರ್ಷಿಗಳು, ಸಕಲದೇವತೆಗಳು, ಸಿದ್ಧರು, ರಾಕ್ಷಸರು, ಗಂಧರ್ವರು, ಕಿನ್ನರರು, ನಾಗರು, ಬ್ರಹ್ಮ, ರುದ್ರ, ಮಹೇಂದ್ರನೇ ಮುಂತಾದವರು ಎಲ್ಲರೂ ಪ್ರಶಾಂತವಾದ ಮನಸ್ಸಿನಿಂದ ಮೂವರು ಪಿತೃಗಳನ್ನೂ ಉದ್ದೇಶಿಸಿ ಶ್ರಾದ್ಧಗಳನ್ನು ಮಾಡುವರು. ಎಲೈ ವ್ಯಾಸನೆ! ಇದರಿಂದ ಅವರು ತಮ್ಮ ಮನಸ್ಸಿನ ಇಷ್ಟಾರ್ಥಗಳೆಲ್ಲವನ್ನೂ ಪಡೆಯುವರು.

೯. ಇಂತು ಎಲ್ಲರೂ ಸನಾತನವಾದ ಈ ಮಾರ್ಗವನ್ನೇ ಅನುಸರಿಸುತ್ತಿರುವರು. ಆದರೂ ಇವರೇ ಭೂಲೋಕದ ಜನರಿಗೆ ಪಿತೃಗಳೆಂದು ಹೇಳಲ್ಪಟ್ಟು ಪ್ರಸಿದ್ಧರಾಗಿರುವರು.

೧೦. ಈ ವಿಷಯವೆಲ್ಲವನ್ನೂ ನಾನು ಕೇಳಿರುವಂತೆಯೇ ನಿನಗೆ ಹೇಳುತ್ತೇನೆ, ಕೇಳು. ಈ ಪಿತೃಗಳೇ ದೇವತೆಗಳು. ದೇವತೆಗಳೇ ಪಿತೃಗಳಾಗಿರುವರು.

೧೧–೧೨. ದೇವತೆಗಳೂ, ಪಿತೃಗಣಗಳೂ ಒಟ್ಟಾಗಿ ಅನ್ಯೋನ್ಯ ಪಿತೃಗಳೆನಿಸಿರುವರು. ಎಲೈ ಬ್ರಾಹ್ಮಣಶ್ರೇಷ್ಠನೆ! ಇದೇ ಪ್ರಶ್ನೆಯನ್ನೇ ಮಾರ್ಕಂಡೇಯ ಮುನಿಯು ಹಿಂದೆ ಕೇಳಿದನು. ಆತನಿಗೆ ಹೇಳಿದ ಅಭಿಪ್ರಾಯವನ್ನೇ ಕೂಲಂಕಷವಾಗಿ ಸಾವಧಾನದಿಂದ ಕೇಳು. ಪಿತೃಗಣಗಳೆಷ್ಟಿರುವರೆಂಬುದನ್ನೂ ಆ ಲೋಕಗಳಿಗೆ ಯಾವ ಮಾನವರು ಹೋಗುವರೆಂಬುದನ್ನೂ ಹೇಳುವೆನು.

ಸನತ್ಕುಮಾರ ಉವಾಚ :—

ಸಪ್ತೈತೇ ಯಜತಾಂ ಶ್ರೇಷ್ಠಾಃ ಸರ್ವೇ ಪಿತೃಗಣಾಃ ಸ್ಮೃತಾಃ ।
ಚತ್ವಾರೋ ಮೂರ್ತಿಮಂತೋ ವೈ ತ್ರಯಸ್ತೇಷಾಂ ಚ ಮೂರ್ತಯಃ ॥
ತೇಷಾಂ ಲೋಕಂ ನಿಸರ್ಗಂ ಚ ಕೀರ್ತಯಿಷ್ಯಾಮಿ ತಚ್ಛೃಣು ।
ಪ್ರಭಾವಂ ತ್ವಂ ಮಹತ್ವಂ ಚ ವಿಸ್ತರೇಣ ತಪೋಧನ ॥ ೧೪ ॥
ಧರ್ಮಮೂರ್ತಿಧರಾಸ್ತೇಷಾಂ ತಪೋ ಯೇ ಪರಮಂ ಗತಾಃ ।
ತೇಷಾಂ ನಾಮಾನಿ ಲೋಕಾಂಶ್ಚ ಕೀರ್ತಯಿಷ್ಯಾಮಿ ತಚ್ಛೃಣು ॥ ೧೫ ॥
ಲೋಕಾಃ ಸನಾತನಾ ನಾಮ ಯತ್ರ ತಿಷ್ಠಂತಿ ಭಾಸ್ವರಾಃ ।
ಅಮೂರ್ತಯಃ ಪಿತೃಗಣಾಸ್ತೇ ವೈ ಪುತ್ರಾಃ ಪ್ರಜಾಪತೇಃ ॥ ೧೬ ॥
ವಿರಾಜಸ್ಯ ದ್ವಿಜಶ್ರೇಷ್ಠ ವೈರಾಜಾ ಇತಿ ನಃ ಶ್ರುತಂ ।
ಯಜಂತೇ ತಾನ್ದೇವಗಣಾ ವಿಧಿದೃಷ್ಟೇನ ಕರ್ಮಣಾ ॥ ೧೭ ॥
ಏತೇ ವೈ ಯೋಗವಿಭ್ರಷ್ಟಾ ಲೋಕಾನ್ಪ್ರಾಪ್ಯ ಸನಾತನಾನ್ ।
ಪುನರ್ಯುಗಸಹಸ್ರಾಂತೇ ಜಾಯಂತೇ ಬ್ರಹ್ಮವಾದಿನಃ ॥ ೧೮ ॥

---

೧೩–೧೪. ಸನತ್ಕುಮಾರನು ಹೇಳುತ್ತಾನೆ:—ಯಜ್ಞಗಳನ್ನು ಮಾಡಿದ ಏಳು ಜಾತಿಯ ಜನರೆಲ್ಲರೂ ಪಿತೃಗಣಗಳೆಂದು ಕರೆಯಲ್ಪಡುವರು. ಅವರಲ್ಲಿ ನಾಲ್ವರು ಮೂರ್ತಿರಹಿತರೂ, ಮೂವರು ವಸುರುದ್ರಾದಿತ್ಯ ಮೂರ್ತಿಸ್ವರೂಪರೂ ಆಗಿರುವರು. ಅವರಿಗೆ ಸಂಬಂಧಿಸಿದ ಲೋಕವನ್ನೂ, ಸೃಷ್ಟಿಯನ್ನೂ, ಅವರ ಪ್ರಭಾವ, ಮಹತ್ವಗಳನ್ನೂ ತಪೋಧನನಾದ ನಿನಗೆ ವಿಸ್ತಾರವಾಗಿ ಹೇಳುವೆನು, ಕೇಳುವವನಾಗು.

೧೫. ಅವರಲ್ಲಿ ಯಾರು ಪರಮತಪಸ್ಸನ್ನು ಮಾಡಿರುವರೋ ಅವರು ಧರ್ಮಸ್ವರೂಪವನ್ನು ಧರಿಸಿರುವರು. ಅವರ ಹೆಸರುಗಳನ್ನೂ, ನಿವಾಸಲೋಕಗಳನ್ನೂ ಕೀರ್ತನಮಾಡುವೆನು, ಕೇಳು.

೧೬. ಅವರು ತೇಜೋಮಯರಾಗಿ ವಾಸಮಾಡುವ ಲೋಕಗಳಿಗೆ ಸನಾತನ ಲೋಕಗಳೆಂದು ಹೆಸರು. ಸ್ವರೂಪರಹಿತರಾದ ಆ ಪಿತೃಗಣಗಳೆಲ್ಲರೂ ಪ್ರಜಾಪತಿಯ ಪುತ್ರರಾಗಿರುವರು.

೧೭. ಬ್ರಾಹ್ಮಣಶ್ರೇಷ್ಠನೆ! ವಿರಾಟ್ಪುರುಷನ ಮಕ್ಕಳಾದವರೇ ವೈರಾಜರೆಂದು ನಾವು ಕೇಳಿರುವೆವು. ಅವರಿಗೆ ಶಾಸ್ತ್ರೋಕ್ತವಿಧಿಗಳಿಂದ ದೇವತಾಗಣಗಳು ಪೂಜೆಯನ್ನು ಸಲ್ಲಿಸುತ್ತಿರುವರು.

೧೮. ಯೋಗಾಭ್ಯಾಸದಲ್ಲಿ ಕಾರಣಾಂತರಗಳಿಂದ ಭ್ರಷ್ಟರಾದವರು ಈ ಸನಾತನ ಲೋಕಗಳನ್ನು ಪಡೆದು ಒಂದು ಸಾವಿರ ಯುಗಗಳು ಕಳೆದನಂತರ ಬ್ರಹ್ಮವಾದಿಗಳಾಗಿ ಭೂಮಿಯಲ್ಲಿ ಜನಿಸುವರು.

ತೇ ಪ್ರಾಪ್ಯ ತಾಂ ಸ್ಮೃತಿಂ ಭೂಯಃ ಸಾಂಖ್ಯಯೋಗಮನುತ್ತಮಂ ।
ಯಾಂತಿ ಯೋಗಗತಿಂ ಸಿದ್ಧಾಃ ಪುನರಾವೃತ್ತಿದುರ್ಲಭಾಂ ॥ ೧೯ ॥
ಏತೇ ಸ್ಯುಃ ಪಿತರಸ್ತಾತ ಯೋಗಿನಾಂ ಯೋಗವರ್ಧನಾಃ ।
ಆಪ್ಯಾಯಯಂತಿ ಯೇ ಪೂರ್ವಂ ಸೋಮಂ ಯೋಗಬಲೇನ ವೈ ॥ ೨೦ ॥
ತಸ್ಮಾಚ್ಛ್ರಾದ್ಧಾನಿ ದೇಯಾನಿ ಯೋಗಿನಾಂ ದ್ವಿಜಸತ್ತಮ ।
ಏಷ ವೈ ಪ್ರಥಮಃ ಕಲ್ಪಃ ಸೋಮಪಾನಮನುತ್ತಮಃ ॥ ೨೧ ॥
ಏತೇಷಾಂ ಮಾನಸೀ ಕನ್ಯಾ ಮೇನಾ ನಾಮ ಮಹಾಗಿರೇಃ ।
ಪತ್ನೀ ಹಿಮವತಃ ಶ್ರೇಷ್ಠಾ ಯಸ್ಯಾಂ ಮೈನಾಕ ಉಚ್ಯತೇ ॥ ೨೨ ॥
ಮೈನಾಕಸ್ಯ ಸುತಃ ಶ್ರೀಮಾನ್ ಕ್ರೌಂಚೋ ನಾಮ ಮಹಾಗಿರಿಃ ।
ಅಗ್ನಿಷ್ವಾತ್ತಾಃ ಪಿತೃಗಣಾಸ್ತತ್ರ ತಿಷ್ಠಂತಿ ಭಾಸ್ವರಾಃ ॥ ೨೩ ॥
ಯಾಮ್ಯಾಂ ಬರ್ಹಿಷದಶ್ಚಾಸನ್ಯಮಾಶ್ಚ ಪಶ್ಚಿಮಾಂ ದಿಶಂ ।
ಸೋಮಪಾಶ್ಚೋತ್ತರಾಂ ಪ್ರಾಪ್ತಾ ದಿಶಂ ಧನದಪಾಲಿತಾಂ ॥ ೨೪ ॥

---

೧೯. ಆಗ ಅವರು ಪೂರ್ವಸ್ಮರಣವನ್ನು ಹೊಂದಿ ಉತ್ತಮೋತ್ತಮವಾದ ಸಾಂಖ್ಯಯೋಗಜ್ಞಾನವನ್ನು ಪಡೆದು ಕೃತಕೃತ್ಯರಾಗಿ ಪುನರಾವೃತ್ತಿ ವರ್ಜಿತವಾದ ಯೋಗಿಗಳ ಗತಿಯನ್ನು ಹೊಂದುವರು.

೨೦. ಈ ಪಿತೃಗಳೇ ಯೋಗಿಗಳಿಗೆ ಯೋಗಾಭ್ಯಾಸದ ಅಭಿವೃದ್ಧಿಯನ್ನು ಅನುಗ್ರಹಿಸುವರು. ಅವರು ಹಿಂದೆ ತಮ್ಮ ಯೋಗಬಲದಿಂದ ಸೋಮನನ್ನು ಸಂತೋಷಗೊಳಿಸುತ್ತಿದ್ದರು.

೨೧. ದ್ವಿಜೋತ್ತಮನೆ! ಆದುದರಿಂದ ಈ ಯೋಗಿಗಳಿಗೆ ಶ್ರಾದ್ಧಗಳನ್ನು ಮಾಡಬೇಕು. ಸೋಮಪೀಥಿಗಳಾದ ಇವರಿಗೆ ಶ್ರಾದ್ಧವನ್ನು ಮಾಡುವುದೇ ಸರ್ವೋತ್ತಮವಾದ ಪ್ರಥಮಕಲ್ಪವು.

೨೨. ಈ ಪಿತೃದೇವತೆಗಳ ಮಾನಸಪುತ್ರಿಯಾದ ಮೇನಾದೇವಿಯೇ ಪರ್ವತರಾಜನಾದ ಹಿಮವಂತನ ಪತ್ನಿಯಾದಳು. ಈಕೆಯ ಮಗನನ್ನೇ ಮೈನಾಕನೆಂದು ಕರೆಯುವರು.

೨೩. ಈ ಮೈನಾಕನಿಗೆ ಸರ್ವೈಶ್ವರ್ಯಾನ್ವಿತನಾದ ಕ್ರೌಂಚನೆಂಬ ಗಿರಿರಾಜನು ಮಗನಾದನು. ಈ ಕ್ರೌಂಚಗಿರಿಯಲ್ಲಿಯೇ ದೇದೀಪ್ಯಮಾನರಾದ ಅಗ್ನಿಷ್ವಾತ್ತರೆಂಬ ಪಿತೃಗಣಗಳು ವಾಸಿಸುತ್ತಿರುವರು.

೨೪. ಆ ಪರ್ವತದ ದಕ್ಷಿಣದಿಕ್ಕಿನಲ್ಲಿ ಬರ್ಹಿಷದರೂ, ಪಶ್ಚಿಮದಿಕ್ಕಿನಲ್ಲಿ ಯಮರೂ, ಕುಬೇರಾಧಿಷ್ಠಿತವಾದ ಉತ್ತರದಿಕ್ಕಿನಲ್ಲಿ ಸೋಮಪರೆಂಬ ಪಿತೃಗಳೂ ನೆಲಸಿರುವರು.

ಅಮೂರ್ತಿಮಂತಾವಾಕಾಶೇ ಕವ್ಯವಾಡನಲೌ ಕ್ಷಿತೌ ।
ಯಕ್ಷರಕ್ಷಃ ಪಿಶಾಚಾಶ್ಚ ಯಜಂತೇ ಭಾವಿತಾತ್ಮನಃ ॥ ೨೫ ॥
ಸಾಧ್ಯಾ ದೇವಾನ್ಯಜಂತಿಸ್ಮ ವಿಶ್ವೇದೇವಾ ಋಷೀಂಸ್ತಥಾ ।
ಮಾನವಾಃ ಶ್ರಾದ್ಧದೇವಂ ಚ ಋಷಯೋ ಬ್ರಹ್ಮ ಸನಾತನಂ ॥ ೨೬ ॥
ಏವಂ ಪರಂಪರಾಪ್ರಾಪ್ತಃ ಶ್ರಾದ್ಧಧರ್ಮಃ ಸನಾತನಃ ।
ದೇವಕಾರ್ಯಾತ್ಪರಂ ಕಾರ್ಯಂ ಪಿತೃಕಾರ್ಯಂ ವಿಶಿಷ್ಯತೇ ॥ ೨೭ ॥
ಭರದ್ವಾಜಾತ್ಮಜಾಃ ಸಪ್ತ ಶ್ರಾದ್ಧಧರ್ಮಪರಾಯಣಾಃ ।
ಜಾತಿಸ್ಮರತ್ವಮಾಪನ್ನಾ ನಿರ್ವಾಣಪದವೀಂ ಗತಾಃ ॥ ೨೮ ॥
ಗುರೋಶ್ಚ ದೋಗ್ಧ್ರೀಂ ಗಾಂ ಹತ್ವಾ ಸಪ್ತೈತೇ ವೈ ದ್ವಿಜಾಧಮಾಃ ।
ಪಿತೄನುದ್ದಿಶ್ಯ ತೇ ಸರ್ವೇ ಭಕ್ಷಯಂತಃ ಕ್ಷುಧಾರ್ದಿತಾಃ ॥ ೨೯ ॥
ತೇನ ಪುಣ್ಯಪ್ರಭಾವೇನ ಯೋಗಭ್ರಷ್ಟಾ ದಿವಂ ಗತಾಃ ।
ಸಪ್ತಜಾತಿಸ್ಮರಾಸ್ತೇ ವೈ ಯೋಗಯುಕ್ತಾ ಬಭೂವಿರೇ ॥ ೩೦ ॥

---

೨೫. ಆಕಾಶಾದಲ್ಲಿ ಅಮೂರ್ತಿವಂತರೂ, ಭೂಮಿಯಲ್ಲಿ ಕವ್ಯವಾಹ, ಅನಲರೆಂಬುವರೂ ಇರುವರು. ಇವರಿಗೆ ಆತ್ಮಾನುಭವಿಗಳಾದ ಯಕ್ಷರೂ, ರಾಕ್ಷಸರೂ, ಪಿಶಾಚರೂ ಪೂಜೆಯನ್ನು ಮಾಡುವರು.

೨೬. ಸಾಧ್ಯರು ದೇವತೆಗಳನ್ನು ಪೂಜಿಸುವರು. ವಿಶ್ವೇದೇವರು ಋಷಿಗಳನ್ನು ಪೂಜಿಸುವರು. ಮನುಷ್ಯನು ಶ್ರಾದ್ಧದೇವನಿಗೂ, ಋಷಿಗಳು ಸನಾತನವಾದ ಬ್ರಹ್ಮವಸ್ತುವಿಗೂ ಯಜ್ಞಮಾಡುವರು.

೨೭. ಇಂತು ಅನಾದಿನಿಧನವಾದ ಶ್ರಾದ್ಧಕ್ರಮವು ಪರಂಪರಾಪ್ರಾಪ್ತವಾಗಿ ಬಂದಿರುವುದು. ದೇವಪೂಜೆಯಾದ ಮೇಲೆ ಮಾಡಲ್ಪಡುವ ಶ್ರಾದ್ಧಕಾರ್ಯವು ಅದಕ್ಕಿಂತಲೂ ಹೆಚ್ಚಿನದಾಗಿರುವುದು.

೨೮. ಭರದ್ವಾಜ ಮಹರ್ಷಿಯ ಏಳು ಮಕ್ಕಳು ಶ್ರಾದ್ಧಕಾರ್ಯಗಳಲ್ಲಿಯೇ ನಿರತರಾಗಿದ್ದುಕೊಂಡು ತಮ್ಮ ಪೂರ್ವಜನ್ಮಗಳ ಸ್ಮರಣೆಯನ್ನು ಪಡೆದು ಮೋಕ್ಷಪದವಿಗೆ ಭಾಗಿಗಳಾದರು.

೨೯. ಈ ಏಳು ಜನರೂ ಹಸಿವುಗೊಂಡ ವೇಳೆಯಲ್ಲಿ ಗುರುವಿಗೆ ಸೇರಿದ ಕರೆಯುವ ಹಸುವೊಂದನ್ನು ಪಿತೃಶ್ರಾದ್ಧದ ನೆಪದಿಂದ ಕೊಂದು ಭಕ್ಷಣಮಾಡಿ ಬ್ರಾಹ್ಮಣಾಧಮರೆನಿಸಿಕೊಂಡರು.

೩೦. ಆದರೆ, ಪಿತೃಶ್ರಾದ್ಧವನ್ನು ಮಾಡಿ ಪುಣ್ಯಪ್ರಭಾವದಿಂದ ಅವರೆಲ್ಲರೂ ಯೋಗಭ್ರಷ್ಟರಾದರೂ ಸ್ವರ್ಗಲೋಕಕ್ಕೆ ಹೋದರು. ಬಳಿಕ ಪೂರ್ವಜನ್ಮಗಳ ಸ್ಮರಣೆಯುಳ್ಳವರಾಗಿ ಯೋಗಶಕ್ತಿಭರಿತರಾಗಿದ್ದರು.

ತಸ್ಮಾಚ್ಛ್ರಾದ್ಧಂ ಪರಂ ಪ್ರೋಕ್ತಂ ಸೂರಿಭಿಃ ಪರಮಾತ್ಮಭಿಃ ।
ಶ್ರಾದ್ಧೇ ಪ್ರತಿಷ್ಠಿತಾ ಲೋಕಾಃ ಶ್ರಾದ್ಧೇ ಯೋಗಃ ಪರಂತಪ ॥ ೩೧ ॥
ಏವಂ ತೇ ಪಿತರಃ ಪ್ರೋಕ್ತಾ ಶ್ರಾದ್ಧಸ್ಯ ಚ ವಿಧಿಂ ಶೃಣು ॥ ೩೨ ॥
ಬ್ರಹ್ಮಚರ್ಯರತೋ ದಾಂತೋ ನ ಕ್ರೋಧೀ ನ ಚ ಮತ್ಸರೀ ।
ಶೌಚಾಚಾರಪರೋ ಧೀರಃ ಶಾಸ್ತ್ರದೃಷ್ಟಿರ್ಜಿತೇಂದ್ರಿಯಃ ॥ ೩೩ ॥
ಏವಂ ಯಃ ಕುರುತೇ ಶ್ರಾದ್ಧಂ ತೀರ್ಥೇ ಚೈವ ವಿಶೇಷತಃ ।
ತತೋಽಧಿಕತರಾಃ ಪ್ರೋಕ್ತಾ ತೃಪ್ತಿರ್ವ್ಯಾಸ ಕ್ಷಯೇಽಹನಿ ॥ ೩೪ ॥
ವೃದ್ಧಿಶ್ರಾದ್ಧೇ ತಥಾ ಪ್ರೋಕ್ತಾ ಮಹಾಲಯೇ ಶತಾಽಧಿಕಾ ।
ತತೋ ದಶಗುಣಾ ಪ್ರೋಕ್ತಾ ಪ್ರಯಾಗೇ ದ್ವಿಜಸತ್ತಮ ॥ ೩೫ ॥
ಪ್ರಯಾಗಾದ್ದಶಗುಣಾ ತೃಪ್ತಿಃ ಕುರುಕ್ಷೇತ್ರೇ ಚ ಸತ್ತಮ ।
ಕುರುಕ್ಷೇತ್ರಾತ್ತತೋ ವ್ಯಾಸ ದಶಾಽಧಿಕಾ ಗಯಾ ಸ್ಮೃತಾ ॥ ೩೬ ॥

---

೩೧. ಆದುದರಿಂದ ಎಲೈ ಪರಂತಪನೆ! ಶುದ್ಧಮನಸ್ಕರಾದ ಸೂರಿಗಳು ಶ್ರಾದ್ಧವನ್ನೇ ಸರ್ವೋತ್ತಮಕಾರ್ಯವೆಂದು ಹೊಗಳುತ್ತಿರುವರು. ಶ್ರಾದ್ಧದಿಂದಲೇ ಸಕಲ ಲೋಕಗಳೂ ಪ್ರತಿಷ್ಠಿತಗಳಾಗಿರುವುವು. ಶ್ರಾದ್ಧದಲ್ಲಿಯೇ ಯೋಗವೂ ಅಂತರ್ಗತವಾಗಿರುವುದೆಂದೂ ತಿಳಿಯಬೇಕು.

೩೨. ಇಂತು ಪಿತೃದೇವತೆಗಳನ್ನು ನಿನಗೆ ಹೇಳಿರುವೆನು. ಇನ್ನು ಶ್ರಾದ್ಧವನ್ನು ಮಾಡಬೇಕಾದ ವಿಧಿಯನ್ನು ಕೇಳು.

೩೩. ಶ್ರಾದ್ಧವನ್ನು ಮಾಡುವ ಮನುಷ್ಯನು ಬ್ರಹ್ಮಚರ್ಯವುಳ್ಳವನೂ, ಇಂದ್ರಿಯಸಂಯಮಸಹಿತನೂ, ಕ್ರೋಧವಿಲ್ಲದವನೂ, ನಿರ್ಮತ್ಸರನೂ, ಶೌಚಾಚಾರಪರಾಯಣನೂ, ಧೀರನೂ, ಶಾಸ್ತ್ರದಲ್ಲಿ ವಿಶ್ವಾಸವುಳ್ಳವನೂ, ಜಿತೇಂದ್ರಿಯನೂ ಆಗಿರಬೇಕು.

೩೪. ಈ ರೀತಿಯಾಗಿ ಶ್ರಾದ್ಧವನ್ನು ಮಾಡಬೇಕು. ಇದನ್ನು ತೀರ್ಥಗಳಲ್ಲಿ ಮಾಡಿದರೆ ವಿಶೇಷಫಲವುಂಟು. ಎಲೈ ವ್ಯಾಸನೆ! ಅದಕ್ಕಿಂತಲೂ ಅಮಾವಾಸ್ಯೆಯಲ್ಲಿ ಮಾಡುವ ಶ್ರಾದ್ಧವು ಅಧಿಕಫಲಪ್ರದವೆಂದು ಹೇಳುವರು.

೩೫. ಪೌರ್ಣಮಿಯ ಶ್ರಾದ್ಧದಲ್ಲಿಯೂ ಅದೇ ಫಲವಿರುವುದು. ಇದಕ್ಕಿಂತಲೂ ಮಹಾಲಯಾ ಅಮಾವಾಸ್ಯೆಯ ಶ್ರಾದ್ಧಕ್ರಿಯೆಯು ನೂರು ಮಡಿಯಷ್ಟು ಫಲವನ್ನು ಕೊಡುವುದು. ಎಲೈ ದ್ವಿಜೋತ್ತಮನೆ! ಇದಕ್ಕಿಂತಲೂ ಹತ್ತುಗುಣವುಳ್ಳ ಪುಣ್ಯವು ಪ್ರಯಾಗಕ್ಷೇತ್ರದ ಶ್ರಾದ್ಧದಲ್ಲಿರುವುದು.

೩೬. ಪ್ರಯಾಗಕ್ಕಿಂತಲೂ ಕುರುಕ್ಷೇತ್ರದ ಶ್ರಾದ್ಧದಿಂದ ಪಿತೃಗಳಿಗೆ ಹತ್ತರಷ್ಟು ತೃಪ್ತಿಯಾಗುವುದು. ಕುರುಕ್ಷೇತ್ರಕ್ಕಿಂತಲೂ ಗಯಾಕ್ಷೇತ್ರದಲ್ಲಿ ಮಾಡುವ ಶ್ರಾದ್ಧವು ದಶಗುಣಿತವಾದ ಫಲವನ್ನು ಕೊಡತಕ್ಕುದು

ತತೋ ದಶಾಽಧಿಕಾ ವ್ಯಾಸ ಮಹಾಕಾಲವನೇ ಶುಭೇ ।
ಅವಂತ್ಯಾಃ ಸರ್ವತಃ ಪುಣ್ಯಂ ಗಯಾತೀರ್ಥೇ ಚ ಸರ್ವದಾ ॥ ೩೭ ॥
ಯೇಷಾಂ ನಿರಯಮಾಪನ್ನಾಃ ಪಿತರೋ ಜನ್ಮಜನ್ಮನಿ ।
ತೇಷಾಮುದ್ಧರಣಾರ್ಥಾಯ ತೀರ್ಥಮೇತತ್ಸುದುರ್ಲಭಂ ॥ ೩೮ ॥
ಸಕೃತ್ಸ್ಮರಣಮಾತ್ರೇಣ ಪಿತೄಣಾಂ ದತ್ತಮಕ್ಷಯಂ ।
ಯೇ ನರಾ ರಣಮಧ್ಯಸ್ಥಾಃ ಪಿತೃವಂಶವಿವರ್ಜಿತಾಃ ॥ ೩೯ ॥
ಗರ್ಭಪಾತೇ ಮೃತಾ ಯೇ ಚ ನಾಮಗೋತ್ರಚ್ಯುತಾಸ್ತಥಾ ।
ಸ್ವಗೋತ್ರೇ ಪರಗೋತ್ರೇ ವಾ ಆತ್ಮಘಾತಮೃತಾಃ ಪರೇ ॥ ೪೦ ॥
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತಾಂ ।
ಉದ್ಬಂಧನಮೃತಾ ಯೇ ಚ ವಿಷಶಸ್ತ್ರೈರ್ಮೃತಾಶ್ಚ ಯೇ ॥ ೪೧ ॥
ದಂಷ್ಟ್ರಿಭಿರ್ವ್ಯಾಂಗತೋ ವಾಽಪಿ ದೌರ್ಬ್ರಾಹ್ಮಣ್ಯೇ ಮೃತಾಶ್ಚ ಯೇ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೪೨ ॥
ಅಗ್ನಿದಗ್ಧಾಶ್ಚ ಯೇ ಜೀವಾ ನಾಽಗ್ನಿದಗ್ಧಾಸ್ತಥಾಽಪರೇ ॥ ೪೩ ॥

---

೩೭. ವ್ಯಾಸಮುನಿಯೆ! ಅದರ ಹತ್ತರಷ್ಟು ಫಲವು ಪವಿತ್ರವಾದ ಮಹಾಕಾಲವನದಲ್ಲಿ ಮಾಡಿದ ಶ್ರಾದ್ಧಕ್ಕಿರುವುದು. ಅವಂತಿಯೆಂಬ ಸಕಲ ಕ್ಷೇತ್ರದಲ್ಲಿಯೂ ಗಯಾತೀರ್ಥವೇ ಯಾವಾಗಲೂ ಪುಣ್ಯಪ್ರದವಾಗಿರುವುದು.

೩೮. ಯಾರಿಗೆ ಜನ್ಮಜನ್ಮಾಂತರಗಳಲ್ಲಿ ಪಿತೃಗಳಾಗಿದ್ದವರೆಲ್ಲರೂ ನರಕಗಳಲ್ಲಿ ವಾಸಿಸುತ್ತಿರುವರೊ, ಅವರು ತಮ್ಮ ಪಿತೃಗಳೆಲ್ಲರನ್ನೂ ಉದ್ಧರಿಸಲು ಈ ತೀರ್ಥವೇ ದುರ್ಲಭವಾದ ಸಾಧನವಾಗಿರುವುದು.

೩೯–೪೨. ಈ ತೀರ್ಥವನ್ನೊಮ್ಮೆ ಸ್ಮರಿಸುವುದರಿಂದಲೇ ಪಿತೃಗಳಿಗಿತ್ತ ಶ್ರಾದ್ಧವು ಅಕ್ಷಯಫಲದಾಯಕವಾಗುವುದು. ಯಾವ ಮಾನವರು ಪಿತೃವಂಶ ವಿಹೀನರಾಗಿ ಯುದ್ಧದಲ್ಲಿ ಮಡಿದಿರುವರೊ, ಯಾರು ಗರ್ಭಪಾತದಿಂದ ಮೃತರಾಗಿರುವರೊ, ಯಾರು ಕರ್ತೃವಿನ ನಾಮಗೋತ್ರಗಳನ್ನು ತೊರೆದಿರುವರೊ, ಯಾರಿಗೆ ತನ್ನ ಗೋತ್ರದಲ್ಲಿಯಾಗಲಿ, ಇತರ ಗೋತ್ರಗಳಲ್ಲಿಯಾಗಲಿ ಬಂಧುಗಳು ಆತ್ಮಹತ್ಯೆಯಿಂದ ಸತ್ತಿರುವರೊ, ಅವರೆಲ್ಲರನ್ನು ಉದ್ಧರಿಸುವುದಕ್ಕಾಗಿ ಇಲ್ಲಿ ಶ್ರಾದ್ಧವನ್ನು ಮಾಡಬೇಕೆಂದು ವಿಧಿಯು ಹೇಳುತ್ತಿರುವುದು. ನೇಣುಹಾಕಿಕೊಂಡವರೂ, ವಿಷಪಾನ ಶಸ್ತ್ರಘಾತಗಳಿಂದ ಮೃತರಾದವರೂ, ಕ್ರೂರಮೃಗಗಳಿಂದಲೂ ಹಾವು ಮೊದಲಾದುವುಗಳಿಂದಲೂ ಸತ್ತವರೂ, ದುರ್ಬ್ರಾಹ್ಮಣರಾಗಿ ದೇಹವನ್ನು ಬಿಟ್ಟವರೂ, ಅದವರಿಗಾಗಿ ಇಲ್ಲಿನ ಶ್ರಾದ್ಧವು ಉದ್ಧರಣೋಪಾಯವೆಂದು ಹೇಳಲ್ಪಟ್ಟಿರುವುದು.

೪೩–೪೪. ಯಾವ ಜೀವರು ಬೆಂಕಿಯಿಂದ ಸತ್ತಿರುವರೊ, ಯಾರಿಗೆ ವಿಧಿಪೂರ್ವಕವಾಗಿ ಅಗ್ನಿಸಂಸ್ಕಾರವಾಗಿಲ್ಲವೊ, ಯಾರು ಸಿಡಿಲಿನಿಂದ ಮೃತ

ವಿದ್ಯುದ್ಘಾತೇನ ಯೇ ಕೇಚಿನ್ಮುದ್ಗರಾಽಭಿಹತಾಃ ಪರೇ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೪೪ ॥
ರೌರವೇ ಚಾಽಂಧತಾಮಿಸ್ರೇ ಕಾಲಸೂತ್ರೇ ಚ ಯೇ ಗತಾಃ ।
ಅನೇಕಯಾತನಾಸಂಸ್ಥಾಃ ಪ್ರೇತಲೋಕೇ ಚ ಯೇ ಗತಾಃ ॥ ೪೫ ॥
ಅಸಿಪತ್ರವನೇ ಘೋರೇ ಕುಂಭೀಪಾಕೇ ಚ ಯೇ ಗತಾಃ ।
ಪಶುಯೋನಿಗತಾ ಯೇ ಚ ಪಕ್ಷಿಕೀಟಸರೀಸೃಪಾಃ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೪೬ ॥
ಉದಕೇಷು ಮೃತಾ ಯೇ ಚ ನಾರೀಸೂತೀಮೃತಾಸ್ತಥಾ ॥ ೪೭ ॥
ಅಶ್ವಸೂಕರಕೃಮಿದಂಷ್ಟ್ರಿಶ್ವಶೃಂಗಿಶಕಟಾಹತಾಃ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೪೮ ॥
ಭಗ್ನದಂಷ್ಟ್ರಾಶ್ಚ ಶಸ್ತ್ರಾಽಸ್ತ್ರೈರ್ವ್ಯಾಘ್ರಾಽಹಿಗಜಭೂಮಿಪೈಃ ।
ಶಲಭೈರ್ವೃಶ್ಚಿಕೈರ್ದಂಷ್ಟ್ರಿಚೋರೈರ್ಯೇ ಚಾಽಪಿ ಘಾತಿತಾಃ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೪೯ ॥

---

ರಾಗಿರುವರೊ, ಯಾರು ಮುದ್ಗರಾದಿ ಶಸ್ತ್ರಗಳಿಂದ ಪಂಚತ್ವವನ್ನು ಹೊಂದಿರುವರೊ, ಅವರ ಉದ್ಧಾರಕ್ಕೋಸ್ಕರವಾಗಿಯೂ ಇಲ್ಲಿ ಶ್ರಾದ್ಧವನ್ನು ಮಾಡತಕ್ಕದ್ದು.

೪೫–೪೬. ರೌರವ, ಅಂಧತಾಮಿಸ್ರ, ಕಾಲಸೂತ್ರಗಳೆಂಬ ನರಕಗಳಲ್ಲಿ ಅನೇಕ ಯಾತನೆಗಳನ್ನನುಭವಿಸುತ್ತಿರುವವರೂ, ಪ್ರೇತತ್ವವಿಮೋಚನೆಯಾಗದಿರುವವರೂ, ಘೋರನರಕಗಳಾದ ಅಸಿಪತ್ರವನ, ಕುಂಭೀಪಾಕಗಳಲ್ಲಿ ನರಳುತ್ತಿರುವವರೂ, ಪಶು, ಪಕ್ಷಿ, ಕೀಟ, ಸರೀಸೃಪಾದಿ ನೀಚಯೋನಿಗಳಲ್ಲಿ ಹುಟ್ಟಿರುವವರೂ ಯಾರಿರುವರೊ, ಅವರೆಲ್ಲರ ಉದ್ಧರಣಾರ್ಥವಾಗಿ ಇಲ್ಲಿ ಶ್ರಾದ್ಧವು ವಿಧಿಸಲ್ಪಟ್ಟಿರುವುದು.

೪೭–೪೮. ನೀರಿನಲ್ಲಿ ಮೃತರಾದವರೂ, ತಾಯಿಯ ಸೂತಿಕಾಸಮಯದಲ್ಲಿ ಸತ್ತಿರುವವರೂ, ಕುದುರೆ, ಹಂದಿ, ಕ್ರಿಮಿ, ದಂಷ್ಟ್ರಮೃಗಗಳು, ನಾಯಿ, ಕೊಂಬುಗಳುಳ್ಳ ಮೃಗಗಳು, ರಥಗಳೇ ಮುಂತಾದ ಬಂಡಿಗಳು—ಇವುಗಳಿಂದ ಸತ್ತವರೂ ಉದ್ಧೃತರಾಗಲು ಇಲ್ಲಿ ಶ್ರಾದ್ಧವು ವಿಧಾಯಕವಾಗಿರುವುದು.

೪೯. ಶಸ್ತ್ರಾಸ್ತ್ರಗಳಿಂದ ಹಲ್ಲುಗಳನ್ನು ಕಳೆದುಕೊಂಡವರೂ, ಹುಲಿ, ಹಾವು, ಆನೆ, ರಾಜದಂಡಗಳಿಂದಲೂ, ಮಿಡಿತೆ, ಚೇಳು, ದುಷ್ಟಮೃಗಗಳು, ಕಳ್ಳರು ಮುಂತಾದ ಕಾರಣಗಳಿಂದ ಪ್ರಾಣಗಳನ್ನು ಕಳೆದುಕೊಂಡಿರುವವರೂ ಆದವರನ್ನು ಉದ್ಧಾರಮಾಡುವುದಕ್ಕಾಗಿ ಈ ತೀರ್ಥದಲ್ಲಿ ಶ್ರಾದ್ಧವು ವಿಹಿತವಾಗಿರುವುದು.

ಅಷ್ಟಶಲ್ಯೈರ್ಮೃತಾ ಯೇ ಚ ಶೌಚಾಚಾರವಿವರ್ಜಿತಾಃ ।
ವಿಷೂಚಿಕಾಮೃತಾ ಯೇ ಚ ಯೇ ಚಾತಿಸಾರತೋ ಮೃತಾಃ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೫೦ ॥
ಶಾಕಿನ್ಯಾದಿಗ್ರಹಗ್ರಸ್ತಾ ಜಲಮಧ್ಯೇ ಚ ಯೇ ಮೃತಾಃ ।
ಅಸ್ಪೃಶ್ಯಸ್ಪರ್ಶಸಂಸ್ಪೃಷ್ಟಾಃ ಪಾಪಾ ಅಪತ್ಯವರ್ಜಿತಾಃ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೫೧ ॥
ಜನ್ಮಾಂತರಸಹಸ್ರಾಣಿ ಭ್ರಮಂತಿ ಸ್ವೇನ ಕರ್ಮಣಾ ।
ಮಾನುಷಂ ದುರ್ಲಭಂ ಯೇಷಾಂ ತೇಭ್ಯಃ ಶ್ರಾದ್ಧಂ ವಿಧೀಯತಾಂ॥ ೫೨ ॥
ಯೇಽನ್ಯಜನ್ಮನ್ಯಬಾಂಧವಾ ಯೇಽನ್ಯಜನ್ಮನಿ ಬಾಂಧವಾಃ ।
ಯೇಽನ್ಯಜನ್ಮನಿ ಸಂಬದ್ಧಾ ಮಿತ್ರಾಽಮಿತ್ರೇ ತಥಾ ಪರೇ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೫೩ ॥
ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ತಥೈವ ಚ ।
ಗುರುಶ್ವಶುರಬಂಧೂನಾಂ ಯೇ ಚಾಽನ್ಯೇ ಬಾಂಧವಾ ಮೃತಾಃ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೫೪ ॥
ಯೇ ಮೇ ಕುಲೇ ಲುಪ್ತಪಿಂಡಾಃ ಪುತ್ರದಾರಾದಿವರ್ಜಿತಾಃ ।
ಕ್ರಿಯಾಲೋಪಗತಾ ಯೇ ಚ ತೇಭ್ಯಃ ಶ್ರಾದ್ಧಂ ವಿಧೀಯತೇ ॥ ೫೫ ॥

---

೫೦. ಶಲ್ಯಾಷ್ಟಕಗಳಿಂದ ಮೃತರಾದವರೂ, ಶೌಚಾಚಾರಗಳನ್ನು ವರ್ಜಿಸಿದವರೂ, ವಿಷೂಚೀ, ಅತಿಸಾರ ಮುಂತಾದ ರೋಗಗಳಿಂದ ಮೃತರಾದವರೂ ಈ ತೀರ್ಥದಲ್ಲಿ ಮಾಡುವ ಶ್ರಾದ್ಧಗಳಿಂದ ಉದ್ಧೃತರಾಗುವರು.

೫೧. ಶಾಕಿನೀ, ಡಾಕಿನಿಯರೇ ಮುಂತಾದ ಗ್ರಹಗಳಿಂದ ಪೀಡಿತರಾಗಿರುವವರೂ, ಜಲಮಧ್ಯದಲ್ಲಿ ಮೃತರಾದವರೂ, ಅಸ್ಪೃಶ್ಯರ ಸ್ಪರ್ಶದಿಂದ ದುಷ್ಟರಾದ ಪಾಪಿಗಳೂ, ಸಂತಾನಹೀನರೂ ಆದವರನ್ನು ಉದ್ಧಾರಮಾಡುವುದಕ್ಕಾಗಿಯೇ ಈ ತೀರ್ಥದಲ್ಲಿ ಶ್ರಾದ್ಧವು ವಿಧಿಸಲ್ಪಟ್ಟಿರುವುದು.

೫೨. ಯಾರು ತಮ್ಮ ದುಷ್ಕರ್ಮಗಳ ಫಲವಾಗಿ ಸಾವಿರಾರು ಜನ್ಮಾಂತರಗಳವರೆಗೂ ಹುಟ್ಟಿಸಾಯುತ್ತ ಮನುಷ್ಯಜನ್ಮವನ್ನೇ ಪಡೆಯದಿರುವವರನ್ನು ಉದ್ಧಾರಮಾಡಲು ಈ ತೀರ್ಥಶ್ರಾದ್ಧವು ವಿಧಿಸಲ್ಪಟ್ಟಿರುವುದು.

೫೩. ಇತರ ಜನ್ಮಗಳಲ್ಲಿ ಬಾಂಧವರಲ್ಲದವರೂ, ಬಂಧುಗಳಾಗಿದ್ದವರೂ, ಕಾರಣಾಂತರಗಳಿಂದ ಸಂಬಂಧವನ್ನು ಬೆಳಸಿಕೊಂಡವರೂ, ಶತ್ರುಮಿತ್ರರಾಗಿದ್ದವರೂ ಉದ್ಧೃತರಾಗಲು ಇಲ್ಲಿ ಶ್ರಾದ್ಧವನ್ನು ಮಾಡಬೇಕು.

೫೪–೫೫. ತಂದೆ ತಾಯಿಯರ ಉಭಯವಂಶಗಳಲ್ಲಿಯೂ, ಗುರು, ಮಾವ, ಬಂಧುಗಳ ವಂಶಗಳಲ್ಲಿಯೂ ಯಾವ ಬಂಧುಗಳು ಮೃತರಾಗಿರುವರೊ, ಅವರನ್ನುದ್ಧರಿಸಲು ಇಲ್ಲಿ ಶ್ರಾದ್ಧವು ಮಾಡಲ್ಪಡಬೇಕು. ಕುಲದಲ್ಲಿ ಪಿಂಡೋದಕಗಳಿಲ್ಲ

ಪಂಗುಕುಬ್ಜಾ ವಿರೂಪಾಶ್ಚ ಆಮಗರ್ಭಾಶ್ಚ ಯೇ ಮೃತಾಃ ।
ಜ್ಞಾತಾಽಜ್ಞಾತಾಃ ಕುಲೇ ಯೇ ಚ ತೇಭ್ಯಃ ಶ್ರಾದ್ಧಂ ವಿಧೀಯತೇ॥ ೫೬ ॥
ಆಬ್ರಹ್ಮಭುವನಾದ್ಯೇ ಚ ಅನ್ಯೈರ್ದುರ್ಮರಣೈರ್ಮೃತಾಃ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೫೭ ॥
ತೃಷಾರ್ತಾಃ ಕ್ಷುಧಿತಾಶ್ಚೈವ ಹಾಪಿತಾಶ್ಚೈವ ಯೇ ಮೃತಾಃ ।
ಪ್ರೇತಯೋನಿಂ ಗತಾಶ್ಚೈವ ಮ್ಲೇಚ್ಛಯೋನಿಂ ಗತಾಶ್ಚ ಯೇ ।
ತೇಷಾಮುದ್ಧರಣಾರ್ಥಾಯ ಅತ್ರ ಶ್ರಾದ್ಧಂ ವಿಧೀಯತೇ ॥ ೫೮ ॥
ಏವಂ ಶ್ರಾದ್ಧವಿಧಿಂ ವ್ಯಾಸ ತಸ್ಮಿಂಸ್ತೀರ್ಥೇ ಸಮಾಚರೇತ್ ।
ಋಣತ್ರಯವಿನಿರ್ಮುಕ್ತೋ ವಾಂಛಿತಾರ್ಥಂ ಲಭೇತ ಸಃ ॥ ೫೯ ॥
ಗಯಾಯಾಂ ಚ ಸಮಾಸಾದ್ಯ ಸುರಾ ಇಂದ್ರಪುರೋಗಮಾಃ ।
ಚಕ್ರುಶ್ಚ ವಿಧಿವತ್ಸರ್ವೇ ಯದುಕ್ತಂ ದೇವಭಾಷಯಾ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಶ್ರಾದ್ಧವಿಧಿವರ್ಣನಂ" ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

ದವರೂ, ಹೆಂಡಿರುಮಕ್ಕಳಿಲ್ಲದವರೂ, ಸತ್ಕಾರ್ಯಗಳಿಲ್ಲದವರೂ ಆಗಿರುವವರಿಗಾಗಿ ಇಲ್ಲಿ ಶ್ರಾದ್ಧವು ವಿಹಿತವಾಗಿರುವುದು.

೫೬. ಕುಂಟರು, ಕುಬ್ಜರು, ವಿರೂಪಿಗಳು, ಅಜೀರ್ಣಾದಿಗಳಿಂದ ಮೃತರಾದವರು, ತಿಳಿದ ಅಥವಾ ತಿಳಿಯದ ಇತರ ಬಂಧು ಬಾಂಧವರು—ಇವರೆಲ್ಲರಿಗಾಗಿಯೂ ಇಲ್ಲಿ ಶ್ರಾದ್ಧವನ್ನು ಪ್ರತಿಯೊಬ್ಬನೂ ಮಾಡಬೇಕು.

೫೭. ಬ್ರಹ್ಮಲೋಕದವರೆಗೂ ಎಲ್ಲ ಲೋಕಗಳಲ್ಲಿ ದುರ್ಮರಣಗಳಿಗೆ ತುತ್ತಾದವರನ್ನು ಉದ್ಧಾರಮಾಡುವುದಕ್ಕಾಗಿ ಇಲ್ಲಿ ಶ್ರಾದ್ಧವು ವಿಧಿಸಲ್ಪಟ್ಟಿರುವುದು.

೫೮. ಹಸಿವು ಬಾಯಾರಿಕೆಗಳಿಂದಲೂ, ದೇಶಬಹಿಷ್ಕಾರದಿಂದಲೂ ಮೃತರಾದವರಿಗೂ, ಪ್ರೇತಯೋನಿಯಲ್ಲಿರುವವರಿಗೂ, ಮ್ಲೇಚ್ಛಯೋನಿಗಳಲ್ಲಿ ಹುಟ್ಟಿರುವವರಿಗೂ ಉದ್ಧಾರದ ಸಲುವಾಗಿ ಇಲ್ಲಿ ಶ್ರಾದ್ಧವನ್ನು ಮಾಡಬೇಕು.

೫೯. ಎಲೈ ವ್ಯಾಸನೆ! ಇಂತು ಈ ಗಯಾತೀರ್ಥದಲ್ಲಿ ಶ್ರಾದ್ಧವಿಧಿಯನ್ನು ನೆರವೇರಿಸಬೇಕು. ಅಂತಹ ಮಾನವನು ಋಣತ್ರಯಗಳಿಂದಲೂ ಮುಕ್ತನಾಗಿ ಅಭೀಷ್ಟವನ್ನು ಪಡೆಯುವನು.

೬೦. ಅಶರೀರವಾಣಿಯು ಅಪ್ಪಣೆಮಾಡಿದಂತೆ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಗಯಾತೀರ್ಥಕ್ಕೆ ಬಂದು ಅಲ್ಲಿ ವಿಧ್ಯುಕ್ತರೀತಿಯಿಂದ ಸಕಲ ಕಾರ್ಯಗಳನ್ನೂ ನೆರವೇರಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಶ್ರಾದ್ಧವಿಧಿವರ್ಣನ"ವೆಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಷಷ್ಠಿತಮೋಽಧ್ಯಾಯಃ

### ಗಯಾತೀರ್ಥಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

**ತತಃ ಸುರಗಣಾಃ ಸರ್ವೇ ಧೂತಪಾಪಾಃ ಸಮಾಹಿತಾಃ ।**
**ಪುನರ್ಯೋಗಬಲಂ ಪ್ರಾಪ್ಯ ಸ್ವಾಧಿಕಾರಂ ಯಯುಃ ಪುರಾ ॥ ೧ ॥**
**ಏವಂ ವ್ಯಾಸ ಗಯಾತೀರ್ಥಂ ಕುಮುದ್ವತ್ಯಾಂ ಸುನಿಶ್ಚಿತಂ ।**
**ಗಯಾಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ॥ ೨ ॥**
**ತತ್ತೀರ್ಥೇಷು ನರಃ ಸ್ನಾತ್ವಾ ತತ್ತತ್ತೀರ್ಥಫಲಂ ಭವೇತ್ ।**
**ತಥೈವ ಚ ಗಯಾಕ್ಷೇತ್ರಂ ಗಯಾಶ್ರಾದ್ಧಫಲಪ್ರದಂ ॥ ೩ ॥**
**ಫಲ್ಗುಶ್ಚ ಸರಿತಾಂ ಶ್ರೇಷ್ಠಾ ತಥೈವ ಫಲದಾಯಿನೀ ।**
**ಆದಿಗಯಾ ಬುದ್ಧಗಯಾ ತಥಾ ವಿಷ್ಣುಪದೀ ಸ್ಮೃತಾ ॥ ೪ ॥**
**ಗಯಾಕೋಷ್ಠಸ್ತಥಾ ಪ್ರೋಕ್ತೋ ಗದಾಧರಪದಾನಿ ಚ ।**
**ವೇದಿಕಾ ಷೋಡಶೀ ಪ್ರೋಕ್ತಾ ತಥೈವ ಚಾಕ್ಷಯೋ ವಟಃ ॥ ೫ ॥**

---

### ಕನ್ನಡದ ಅನುವಾದ

#### ಗಯಾತೀರ್ಥಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಬಳಿಕ ಸಕಲದೇವತಾಗಣಗಳೂ ತಮ್ಮ ಪಾತಕಗಳನ್ನು ಕಳೆದುಕೊಂಡು ಏಕಾಗ್ರಮನಸ್ಕರಾಗಿ ಮತ್ತೆ ಯೋಗ ಶಕ್ತಿಯನ್ನು ಪಡೆದು ತಮ್ಮ ತಮ್ಮ ಅಧಿಕಾರಗಳನ್ನು ಪುನಃ ನಡೆಸಲು ಶಕ್ತರಾದರು.

೨. ಎಲೈ ವ್ಯಾಸನೆ! ಇಂತು ಗಯಾತೀರ್ಥವು ಕುಮುದ್ವತಿಯಲ್ಲಿ ಪ್ರತಿಷ್ಠಿತವಾಯಿತು. ಗಯಾಕ್ಷೇತ್ರದಲ್ಲಿ ಅನೇಕ ತೀರ್ಥಗಳೂ ಪುಣ್ಯಪ್ರದ ಗಳಾದ ದೇವಮಂದಿರಗಳೂ ಇರುವುವು.

೩. ಆಯಾ ತೀರ್ಥಗಳಲ್ಲಿ ಸ್ನಾನಮಾಡುವ ಮನುಜನು ಆಯಾ ತೀರ್ಥ ಸ್ನಾನದ ಫಲವನ್ನು ಪಡೆಯುವನು. ಹಾಗೆಯೇ ಗಯಾಕ್ಷೇತ್ರವೆಂಬ ಈ ತೀರ್ಥವೂ ಗಯಾಶ್ರಾದ್ಧಫಲವನ್ನು ಕೊಡುವುದಾಗಿರುವುದು.

೪–೬. ನದಿಗಳಲ್ಲಿ ಉತ್ತಮವೆನಿಸಿದ ಫಲ್ಗುವೂ ಹಾಗೆಯೇ ಫಲದಾಯಕ ವಾಗಿರುವುದು. ಆದಿಗಯೆ, ಬುದ್ಧಗಯೆ, ವಿಷ್ಣುಪಾದ, ಗಯಾಕೋಷ್ಠ, ಗದಾಧರಪಾದ, ಷೋಡಶವೇದಿಕಾ, ಅಕ್ಷಯವಟ, ಪ್ರೇತಗಳಿಗೆ ಮೋಕ್ಷವನ್ನು

ಪ್ರೇತಮುಕ್ತಿಕರೀ ನಿತ್ಯಂ ಶಿಲಾ ಚೋಕ್ತಾ ತಥೈವ ಚ ।
ಅಚ್ಛೋದಾ ನಿಮ್ನಗಾ ಪ್ರೋಕ್ತಾ ಪಿತೄಣಾಂ ಚಾಶ್ರಮೋತ್ತಮಃ ॥ ೬ ॥
ದೇವಾನಾಂ ದಾನವಾನಾಂ ಚ ಯಕ್ಷಕಿನ್ನರರಕ್ಷಸಾಂ ।
ಪನ್ನಗಾನಾಂ ಚ ಸರ್ವೇಷಾಂ ತಥೈವಾಶ್ರಮ ಉತ್ತಮಃ ॥ ೭ ॥
ಏತತ್ಸ್ಥಾನೇಷು ಸರ್ವೇಷು ಸ್ನಾನದಾನಾದಿಕಾಃ ಕ್ರಿಯಾಃ ।
ಶ್ರಾದ್ಧಂ ಚ ವಿಧಿವದ್ದೇಯಂ ತತ್ತತ್ತೀರ್ಥಫಲಂ ಲಭೇತ್ ॥ ೮ ॥
ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।
ತಂ ಧ್ಯಾತ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥ ೯ ॥
ಏವಂ ವ್ಯಾಸ ಗಯಾತೀರ್ಥಂ ಪುರಾಽವಂತ್ಯಾಂ ಪ್ರತಿಷ್ಠಿತಂ ।
ಪಶ್ಚಾತ್ತು ಕೈಕಟೇ ಜಾತಂ ಯತ್ರ ಸನ್ನಿಹಿತೋಽಸುರಃ ॥ ೧೦ ॥
ತದಾರಭ್ಯ ದ್ವಿಜಶ್ರೇಷ್ಠ ಗಯಾ ತತ್ರ ಪ್ರತಿಷ್ಠಿತಾ ।
ಗದಾಧರಪದಾಘಾತೈರ್ಮಹಾಽಸುರೋ ನಿಪಾತಿತಃ ॥ ೧೧ ॥
ತತ್ಪದೇ ಚ ಮಹಿಮಾನಂ ಜನಾರ್ದನಸಮರ್ಪಿತಂ ।
ಪಂಚಕ್ರೋಶಂ ಗಯಾಕ್ಷೇತ್ರಂ ಕ್ರೋಶಮೇಕಂ ಗಯಾಶಿರಃ ॥ ೧೨ ॥

---

ಕೊಡುವ ಶಿಲೆ, ಅಚ್ಛೋದವೆಂಬ ನದಿ—ಇವುಗಳೆಲ್ಲವೂ ಪಿತೃಗಳಿಗೆ ಉತ್ತಮ ನಿವಾಸಗಳೆನಿಸಿರುವುವು.

೭. ಈ ಆಶ್ರಮವು ದೇವತೆಗಳಿಗೂ, ದಾನವರಿಗೂ, ಯಕ್ಷರಿಗೂ, ಕಿನ್ನರರಿಗೂ, ರಾಕ್ಷಸರಿಗೂ, ಸಕಲ ನಾಗರಿಗೂ ಉತ್ತಮವೆನಿಸಿರುವುದು.

೮. ಈ ಎಲ್ಲ ಸ್ಥಾನಗಳಲ್ಲಿಯೂ ಸ್ನಾನ, ದಾನಗಳೇ ಮುಂತಾದ ಸತ್ಕ್ರಿಯೆಗಳನ್ನೂ, ವಿಧಿವಿಹಿತವಾದ ಶ್ರಾದ್ಧಗಳನ್ನೂ ಮಾಡಲು ಮಾನವನು ಆಯಾ ತೀರ್ಥದ ಸೇವೆಯ ಫಲವನ್ನು ಪಡೆಯುವನು.

೯. ಗಯೆಯಲ್ಲಿ ಜನಾರ್ದನನು ತಾನೇ ಪಿತೃರೂಪದಿಂದ ಸನ್ನಿಹಿತನಾಗಿರುವನು. ಕಮಲನಯನನಾದ ಆತನನ್ನು ಧ್ಯಾನಮಾಡುವುದರಿಂದಲೇ ಮನುಷ್ಯನು ಮೂರು ಋಣಗಳಿಂದಲೂ ಮುಕ್ತನಾಗುವನು.

೧೦. ಎಲೈ ವ್ಯಾಸನೆ! ಇಂತಹ ಗಯಾತೀರ್ಥವು ಹಿಂದೆ ಅವಂತಿಯಲ್ಲಿ ನೆಲಸಿದ್ದಿತು. ಬಳಿಕ ಗಯಾಸುರನು ನೆಲಸಿದ ಪ್ರದೇಶವಾದ ಕೀಕಟದೇಶಕ್ಕೆ ಹೋಯಿತು.

೧೧. ಬ್ರಾಹ್ಮಣೋತ್ತಮನೆ! ಅಂದು ಮೊದಲಾಗಿ ಗಯಾಕ್ಷೇತ್ರವು ಅಲ್ಲಿ ನೆಲಸಿತು. ಗದಾಧರನ ಪಾದಘಾತದಿಂದ ಗಯಾಸುರನೆಂಬ ಮಹಾದೈತ್ಯನು ನಿಗ್ರಹಿಸಲ್ಪಟ್ಟನು.

೧೨–೧೩. ಆ ಕ್ಷೇತ್ರದಲ್ಲಿ ಮಹಾಮಹಿಮೆಯು ಜನಾರ್ದನನಿಂದಲೇ ನೆಲೆಗೊಳಿಸಲ್ಪಟ್ಟಿತು. ಗಯಾಕ್ಷೇತ್ರವು ಐದುಕ್ರೋಶಗಳ ವಿಸ್ತಾರವುಳ್ಳದ್ದಾಗಿ

ಯತ್ರ ತತ್ರ ಕರಿಷ್ಯಾಮಿ ಪಿತೄಣಾಂ ದತ್ತಮಕ್ಷಯಂ ।
ಸರ್ವದಾ ಸರ್ವಕಾಲೇಷು ಗಯಾಶ್ರಾದ್ಧಂ ವಿಧೀಯತೇ ॥ ೧೩ ॥
ಸಂವತ್ಸರೇ ಪರಂ ವ್ಯಾಸ ದಿನಮೇಕಂ ಪ್ರತಿಷ್ಠಿತಂ ।
ಕನ್ಯಾಸ್ಥೇ ಚ ದಿವಾನಾಥೇ ಹಸ್ತನಕ್ಷತ್ರಸಂಯುತೇ ।
ಮಹಾಲಯೇತಿ ತತ್ಪ್ರೋಕ್ತಂ ಪಿತೄಣಾಂ ದತ್ತಮಕ್ಷಯಂ ॥ ೧೪ ॥
ಸರ್ವದಾ ಸರ್ವಕಾಲೇಷು ಗಯಾಶ್ರಾದ್ಧಂ ವಿಧೀಯತೇ ॥ ೧೫ ॥
ಸಂವತ್ಸರೇ ಪರಂ ವ್ಯಾಸ ದಿನಮೇಕಂ ಪ್ರತಿಷ್ಠಿತಂ ।
ಅನ್ವಷ್ಟಕಾಯಾಂ ಕುರ್ವಂತಿ ಮಾತೄಣಾಂ ಶ್ರಾದ್ಧಮುತ್ತಮಂ ॥ ೧೬ ॥
ಅಕ್ಷಯ್ಯಾ ಜಾಯತೇ ತೃಪ್ತಿಃ ಪಿತೄಣಾಂ ಕಲ್ಪಸಂಖ್ಯಯಾ ।
ಏವಂ ವ್ಯಾಸ ಪುರೀ ರಮ್ಯಾ ಸ್ನಾನದಾನಾದಿಕರ್ಮಸು ॥ ೧೭ ॥
ಭೂಯಸ್ತು ಸಂಪ್ರವಕ್ಷ್ಯಾಮಿ ಮಾಹಾತ್ಮ್ಯಂ ಪರಮಾದ್ಭುತಂ ।
ತಚ್ಛೃಣುಷ್ವ ಮಯಾ ಖ್ಯಾತಂ ಪವಿತ್ರಂ ಪಾಪನಾಶನಂ ॥ ೧೮ ॥

---

ರುವುದು. ಅದರಲ್ಲಿ ಗಯಾಶಿರವೇ ಒಂದು ಕ್ರೋಶವಿರುವುದು. ಇಲ್ಲಿ ಯಾವ ಪ್ರದೇಶದಲ್ಲಿ ಶ್ರಾದ್ಧಗಳನ್ನು ಮಾಡಿದರೂ ಪಿತೃಗಳಿಗೆ ಅಕ್ಷಯತೃಪ್ತಿಯಾಗುವುದು. ಗಯಾಶ್ರಾದ್ಧಕ್ಕೆ ಮಾತ್ರ ಯಾವಾಗಲೂ ಯಾವ ಕಾಲವೂ ಪ್ರಶಸ್ತವಾಗಿರುವುದು.

೧೪. ವ್ಯಾಸನೆ! ಆದರೂ ಸಂವತ್ಸರದಲ್ಲಿ ಒಂದು ದಿನವು ಮಾತ್ರ ವಿಶೇಷವೆನಿಸಿರುವುದು. ಸೂರ್ಯನು ಕನ್ಯಾರಾಶಿಯಲ್ಲಿರಲು ಅಮಾವಾಸ್ಯೆಯು ಹಸ್ತಾನಕ್ಷತ್ರದಿಂದ ಕೂಡಿದಂದು ಮಹಾಲಯವೆನಿಸುವುದು. ಅಂದು ಪಿತೃಗಳಿಗೆ ಕೊಟ್ಟುದೆಲ್ಲ ಅಕ್ಷಯಫಲವನ್ನು ಕೊಡುವುದು.

೧೫. ಗಯಾಶ್ರಾದ್ಧಕ್ಕೆ ಮಾತ್ರ ಕಾಲದೇಶಗಳ ನಿಯಮವಿಲ್ಲ.

೧೬. ಆದರೂ ಸಂವತ್ಸರದಲ್ಲಿ ಒಂದು ದಿನವು ಮಾತ್ರ ವಿಶೇಷವೆಂದೆನಿಸಿರುವುದು. ವ್ಯಾಸನೆ! ಅನ್ವಷ್ಟಕವೆಂಬ ತಿಥಿಯಲ್ಲಿ ಮಾತೃಗಳಿಗೆ ಉತ್ತಮರೀತಿಯಿಂದ ಶ್ರಾದ್ಧವನ್ನು ಮಾಡಬೇಕು.

೧೭. ಇದರಿಂದ ಪಿತೃಗಳಿಗೆ ಅನೇಕ ಕಲ್ಪಗಳವರೆಗೂ ಅನಂತವಾದ ತೃಪ್ತಿಯುಂಟಾಗುವುದು. ಇಂತು ಸ್ನಾನದಾನಗಳೇ ಮುಂತಾದ ಕರ್ಮಗಳಿಗೆ ಈ ಪುರವೇ ಬಹಳ ಪ್ರಶಸ್ತವಾಗಿರುವುದು.

೧೮. ಇನ್ನೂ ಈ ಕ್ಷೇತ್ರದ ಪರಮಾಶ್ಚರ್ಯಕಾರಕವಾದ ಮಾಹಾತ್ಮ್ಯವನ್ನು ವಿಸ್ತರಿಸಿ ಹೇಳುವೆನು. ನಾನು ಹೇಳುವ ಪವಿತ್ರವೂ ಪಾಪನಾಶಕವೂ ಆದ ಈ ಚರಿತ್ರೆಯನ್ನು ಕೇಳು.

ಸಪ್ತರ್ಷೀಣಾಂ ಚ ಯಾ ಭಾರ್ಯಾ ಋಷಿಪತ್ನ್ಯಃ ಪತಿವ್ರತಾಃ ।
ಸ್ವಾಹಾದೋಷಪರಿಭ್ರಷ್ಟಾ ದೂಷಿತಾಃ ಪಾವಕೇನ ಚ ॥ ೧೯ ॥
ಋಷಿಭಿಶ್ಚ ಪರಿತ್ಯಕ್ತಾ ಬಭ್ರಮುಶ್ಚ ವನಾದ್ವನಂ ॥ ೨೦ ॥
ಏವಂ ಬಹುತಿಥೇ ಕಾಲೇ ನಾರದೋ ದೇವದರ್ಶನಃ ।
ತಾಸಾಂ ಚ ಪ್ರಿಯಮನ್ವಿಚ್ಛನ್ಸಮಾಯಾತೋ ವನಾಂತರೇ ॥ ೨೧ ॥
ತಾಭಿಶ್ಚ ಸತ್ಕೃತೋ ನಿತ್ಯಂ ಸಮಾಸೀನೋ ಧೃತವ್ರತಃ ।
ಉವಾಚ ಶ್ಲಕ್ಷ್ಣಯಾ ವಾಚಾ ದೇಶಕಾಲೋಚಿತಂ ವಚಃ ॥ ೨೨ ॥
ಕಿಮಿದಂ ವಿಕೃತಂ ಜಾತಂ ಭವತೀನಾಂ ಪರಾಭವಃ ।
ಕಸ್ಮಾಚ್ಚ ಋಷಿಭಿಸ್ತ್ಯಕ್ತಾ ಲೋಕಮಾತರಃ ಪತಿವ್ರತಾಃ ॥ ೨೩ ॥

ಋಷಿಪತ್ನ್ಯ ಊಚುಃ:—

ನ ಜಾನೀಮೋ ವಯಂ ತಾತ ಯೇನ ದೋಷೇಣ ತಾಪಸೈಃ ।
ವಿಮುಕ್ತಾಃ ಸಾಗ್ನಿಕೈಃ ಕ್ಷಿಪ್ರಂ ಕಾರ್ತಿಕೇಯಪ್ರಸಂಗತಃ ॥ ೨೪ ॥

---

೧೯. ಪತಿವ್ರತೆಯರಾದ ಸಪ್ತರ್ಷಿಗಳ ಪತ್ನಿಯರು ಸ್ವಾಹಾದೇವಿಯ ಕಾರಣದಿಂದ ತಮ್ಮ ಪಾತಿವ್ರತ್ಯವನ್ನು ಕಳೆದುಕೊಂಡು ಅಗ್ನಿಯಿಂದ ದೂಷಿತ ರಾದರು.

೨೦. ಪತಿಗಳಾದ ಮಹರ್ಷಿಗಳಿಂದ ಪರಿತ್ಯಕ್ತರಾಗಿ ವನದಿಂದ ವನಕ್ಕೆ ಅವರೆಲ್ಲರೂ ದಿಕ್ಕುಗಾಣದೆ ಸಂಚರಿಸುತ್ತಿದ್ದರು.

೨೧. ಇಂತು ಬಹಳಕಾಲವು ಕಳೆಯಲು ದೇವದೂತನಾದ ನಾರದನು ಅವರ ಅಭ್ಯುದಯವನ್ನು ಮನಸ್ಸಿಗೆ ತಂದುಕೊಂಡು ಅರಣ್ಯಮಧ್ಯದಲ್ಲಿ ಓಡಾಡು ತ್ತಿರುವವನಂತೆ ಅವರಿಗೆ ಕಾಣಿಸಿಕೊಂಡನು.

೨೨. ಅವರಿತ್ತ ಸತ್ಕಾರವನ್ನು ಪಡೆದು ನಿಯಮಸಹಿತನಾಗಿ ಆತನು ಅಲ್ಲಿಯೇ ಸುಖಾಸೀನನಾಗಿ ಮಧುರವಾದ ಧ್ವನಿಯಿಂದ ದೇಶಕಾಲಗಳಿಗೆ ಉಚಿತ ವಾದ ಮಾತುಗಳನ್ನಾಡಲುಪಕ್ರಮಿಸಿದನು.

೨೩. "ಎಲೈ ಋಷಿಪತ್ನಿಯರೇ! ಈ ನಿಮ್ಮ ವಿಕಾರವೇನು? ನಿಮಗೆ ಇಂತಹ ಪರಿಭವವುಂಟಾಗಲು ಕಾರಣವೇನು? ಪತಿಗಳಾದ ಮಹರ್ಷಿಗಳು ಲೋಕಮಾತೆಯರೂ ಪತಿವ್ರತೆಯರೂ ಆದ ನಿಮ್ಮನ್ನೇಕೆ ತ್ಯಜಿಸಿರುವರು?

೨೪. ಋಷಿಪತ್ನಿಯರು ಹೇಳುತ್ತಾರೆ:—ನಮ್ಮಲ್ಲಿ ಯಾವ ದೋಷವಿರುವು ದೆಂಬುದನ್ನು ನಾವರಿಯೆವು. ಎಲೈ ಮುನಿವರ್ಯನೇ! ಷಣ್ಮುಖಸ್ವಾಮಿಯ ಪ್ರಸಂಗದ ಕಾರಣದಿಂದ ಅಗ್ನಿಹೋತ್ರಿಗಳೂ, ನಮ್ಮ ಪತಿಗಳೂ ಆದ ಆ ತಪಸ್ವಿ ಗಳು ನಮ್ಮನ್ನು ದೂರಮಾಡಿರುವರು.

ಲೋಕಾಽಪವಾದಜಂ ಕಿಂಚಿಜ್ಜಾತಂ ದಿಷ್ಟವಶಾದಘಂ ।
ಕಿಂ ಕುರ್ಮೋ ವಾ ಕ್ವ ಗಚ್ಛಾಮಃ ಕಿಂ ತಪಃ ಕಾಚ ದೇವತಾ ॥ ೨೫ ॥
ಯಸ್ಯಾರಾಧನಪುಣ್ಯೇನ ಪತಿಸಾನ್ನಿಧ್ಯಮಾಪ್ನುಯುಃ ।
ಏತನ್ನಿಶ್ಚಿತ್ಯ ಭೋ ಬ್ರಹ್ಮನ್ಬ್ರೂಹಿ ತ್ವಂ ವೇದ ತತ್ತ್ವತಃ ॥ ೨೬ ॥
ಇತಿ ಪೃಷ್ಟಸ್ತದಾ ತಾಭಿರ್ಋಷಿಪತ್ನೀಭಿರ್ನಾರದಃ ।
ಉವಾಚ ಸುಚಿರಂ ಧ್ಯಾತ್ವಾ ತಾಸಾಂ ಚ ಶರ್ಮಹೇತವೇ ॥ ೨೭ ॥

ನಾರದ ಉವಾಚ :—

ಶ್ರೂಯತಾಂ ಭೋಸ್ತಪಃಶ್ರೇಷ್ಠಾ ಭವತೀನಾಂ ಚ ಕಾರಣಂ ।
ಮಹಾಕಾಲವನೇ ರಮ್ಯೇ ಗಯಾತೀರ್ಥಮನುತ್ತಮಂ ॥ ೨೮ ॥
ತತ್ರೈವ ಚಾಕ್ಷಯೋ ನಾಮ ನ್ಯಗ್ರೋಧಃ ಶಾಖಿನಾಂ ವರಃ ।
ತತ್ರಾಗಮನಮಾತ್ರೇಣ ಧೂತದೋಷಾ ಭವಿಷ್ಯಥ ॥ ೨೯ ॥
ಸರ್ವದೋಷಹರಂ ತೀರ್ಥಂ ಸರ್ವಕಾಮವರಪ್ರದಂ ।
ಸರ್ವಸೌಖ್ಯಕರಂ ಪುಣ್ಯಂ ತತ್ರ ಗಚ್ಛತ ಮಾ ಚಿರಂ ॥ ೩೦ ॥

---

೨೫. ದುರದೃಷ್ಟದಿಂದ ನಮ್ಮ ವಿಷಯದಲ್ಲಿ ಲೋಕಾಪವಾದವುಂಟಾಗಿ ಪಾಪಸಂಪರ್ಕವುದಯಿಸಿತು. ಈಗೇನು ಮಾಡೋಣ? ಎಲ್ಲಿಗೆ ಹೋಗೋಣ? ಯಾವ ತಪಸ್ಸನ್ನು ಮಾಡೋಣ? ಯಾವ ದೇವತೆಯನ್ನಾರಾಧಿಸೋಣ?

೨೬. ಎಲೈ ಬ್ರಾಹ್ಮಣೋತ್ತಮನೆ! ಯಾವ ಪೂಜೆಯ ಪುಣ್ಯದಿಂದ ಪುನಃ ನಾವು ಪತಿಗಳ ಸಾನ್ನಿಧ್ಯವನ್ನು ಪಡೆಯುವೆವೆಂಬುದನ್ನು ನೀನೇ ನಿಶ್ಚಯಿಸಿ ಹೇಳು. ನೀನೇ ಎಲ್ಲವನ್ನೂ ನಿಜವಾಗಿ ತಿಳಿದಿರುವೆ.

೨೭. ಇಂತೆಂದು ಋಷಿಪತ್ನಿಯರಿಂದ ಪ್ರಶ್ನಿಸಲ್ಪಟ್ಟ ನಾರದಮಹಾಮುನಿಯು ಅವರಿಗೆ ಸೌಖ್ಯವನ್ನುಂಟುಮಾಡಲೆಳಸಿ ಬಹಳಕಾಲದವರೆಗೂ ಚಿಂತಿಸುತ್ತಿದ್ದು ಬಳಿಕ ಇಂತೆಂದನು.

೨೮. ನಾರದನು ಹೇಳುತ್ತಾನೆ :—ತಪಸ್ವಿನಿಯರಲ್ಲಿ ಶ್ರೇಷ್ಠರಾದ ಋಷಿಪತ್ನಿಯರೆ! ನಿಮ್ಮೆಲ್ಲರಿಗೂ ಒಂದುಪಾಯವನ್ನು ಹೇಳುವೆನು, ಕೇಳಿರಿ. ರಮಣೀಯವಾದ ಮಹಾಕಾಲವನದಲ್ಲಿ ಸರ್ವಶ್ರೇಷ್ಠವಾದ ಗಯಾತೀರ್ಥವಿರುವುದು.

೨೯. ಅಲ್ಲಿಯೇ ವೃಕ್ಷೋತ್ತಮವಾದ ಅಕ್ಷಯವೆಂಬ ವಟವೃಕ್ಷವೂ ಇರುವುದು. ಅಲ್ಲಿಗೆ ಹೋಗುವ ಮಾತ್ರದಿಂದಲೇ ನೀವೆಲ್ಲರೂ ಪಾಪರಹಿತರಾಗುವಿರಿ.

೩೦. ಈ ತೀರ್ಥವು ಸಕಲದೋಷಗಳನ್ನೂ ಕಳೆಯುವುದು. ಸಕಲಾಭೀಷ್ಟಗಳನ್ನೂ ಕೊಡುವುದು. ಸಮಸ್ತ ಸೌಖ್ಯಗಳನ್ನೂ ಒದಗಿಸುವ ಪುಣ್ಯತೀರ್ಥವಾಗಿರುವುದು. ವಿಳಂಬವಿಲ್ಲದೆ ನೀವು ಅಲ್ಲಿಗೆ ಹೋಗಿರಿ.

ನಾರದಸ್ಯ ವಚಃ ಶ್ರುತ್ವಾ ಋಷಿಪತ್ನ್ಯಃ ಸುಚೋದಿತಾಃ ।
ಮಹಾಕಾಲವನೇ ವ್ಯಾಸ ಇಚ್ಛಂತ್ಯಃ ಪ್ರಿಯಮಾತ್ಮನಃ ॥ ೩೧ ॥
ಆಜಗ್ಮುಸ್ತದ್ವನಂ ತತ್ರ ಯತ್ರ ತೀರ್ಥಂ ಗಯಾಽಭಿಧಂ ।
ತತ್ರ ಗತ್ವಾ ಶುಚೀಭೂಯ ಸ್ನಾನದಾನಾದಿಕಾಃ ಕ್ರಿಯಾಃ ॥ ೩೨ ॥
ಕೃತಾಸ್ತಾಭಿಶ್ಚ ಪುಣ್ಯಾಭಿರ್ನಭಸ್ಯಸ್ಯಾಽಸಿತೇತರೇ ।
ಪಂಚಮ್ಯಾಮೃಷಿಸಂಜ್ಞಾಯಾಂ ತಾಭಿಃ ಸುಚರಿತಂ ವ್ರತಂ ॥ ೩೩ ॥
ಉಪೋಷ್ಯ ಚೈಕರಾತ್ರಂ ತು ಜಾಗರಂ ಚೈವ ಯೋಗತಃ ।
ಕೃತಮಾತ್ರೇ ವ್ರತೇ ವ್ಯಾಸ ಧೂತಪಾಪಾ ಬಭುಃ ಕ್ಷಣಾತ್ ॥ ೩೪ ॥
ಭರ್ತೃಕೋಪಪರಿಭ್ರಷ್ಟಾಃ ಸದ್ಯಃ ಪ್ರಾಪ್ತಾ ಗೃಹಾಶ್ರಮಂ ।
ಋಷಿಭಿಃ ಸಾಗ್ನಿಕಂ ದತ್ತಂ ಪೂರ್ವವದೃಷಿಸತ್ತಮ ॥ ೩೫ ॥
ತದಾ ಪ್ರಭೃತಿ ಲೋಕೇಽಸ್ಮಿನ್ಪಂಚಮೀ ಋಷಿಸಂಜ್ಞಿತಾ ।
ಯೇ ನರಾಶ್ಚಾಽಥ ನಾರ್ಯೋ ಯಾಸ್ತಾಂ ಕುರ್ವಂತಿ ತು ಭಕ್ತಿತಃ॥ ೩೬ ॥
ನೀವಾರಾಹಾರಕಂ ಕೃತ್ವಾ ಶುಚೀಭೂಯ ಸಮಾಹಿತಾಃ ॥ ೩೭ ॥

---

೩೧. ನಾರದನ ಮಾತುಗಳನ್ನು ಕೇಳಿ ಅವುಗಳಿಂದ ಪ್ರಚೋದಿತರಾದ ಋಷಿಪತ್ನಿಯರು ತಮ್ಮ ಹಿತವನ್ನೇ ಕೋರುವವರಾಗಿ ಮಹಾಕಾಲವನವನ್ನು ಸೇರಿದರು.

೩೨. ಗಯಾನಾಮಕವಾದ ಆ ಪವಿತ್ರತೀರ್ಥವಿದ್ದೆಡೆಗೆ ಬಂದು ಅವರೆಲ್ಲರೂ ಶುಚಿಭೂತರಾಗಿ ಸ್ನಾನದಾನಗಳೇ ಮುಂತಾದ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿದರು.

೩೩. ಪಾವನವಾದ ಈ ವ್ರತವನ್ನು ಋಷಿಗಳ ಪ್ರೀತಿಯನ್ನು ಪಡೆಯಲು ಪುಣ್ಯವಂತೆಯರಾದ ಅವರು ಭಾದ್ರಪದ ಮಾಸದ ಶುಕ್ಲಪಕ್ಷದ ಪಂಚಮಿಯ ದಿನದಲ್ಲಿ ಮಾಡಿದುದರಿಂದ ಆ ದಿನಕ್ಕೆ ಋಷಿಪಂಚಮಿಯೆಂದು ಹೆಸರಾಯಿತು.

೩೪. ವ್ಯಾಸನೆ! ಅಂದಿನ ರಾತ್ರಿ ಉಪವಾಸವನ್ನುಮಾಡಿ ಯೋಗಾಭ್ಯಾಸ ದಿಂದ ರಾತ್ರಿಯನ್ನು ಜಾಗರಣೆಯಲ್ಲಿ ಕಳೆಯಲು ಅವರೆಲ್ಲರೂ ನಿಮಿಷಮಾತ್ರದಲ್ಲಿ ನಿಷ್ಕಲ್ಮಷರಾದರು.

೩೫. ಗಂಡಂದಿರ ಕೋಪದಿಂದ ದೂರಗೊಳಿಸಲ್ಪಟ್ಟಿದ್ದ ಅವರೆಲ್ಲರೂ ಮತ್ತೆ ಗೃಹಸ್ಥರಾದರು. ಮಹರ್ಷಿಗಳೂ ಹಿಂದಿನಂತೆಯೇ ಅಗ್ನಿಗಳನ್ನು ಇಟ್ಟು ಕೊಂಡು ದಾನಾದಿಗಳನ್ನು ಮಾಡುತ್ತಿದ್ದರು.

೩೬–೩೭. ಅಂದಿನಿಂದ ಈ ತಿಥಿಗೆ ಋಷಿಪಂಚಮಿಯೆಂದೇ ಲೋಕದಲ್ಲಿ ಪ್ರಖ್ಯಾತಿಯಾಯಿತು. ಯಾವ ಗಂಡಸರು ಅಥವಾ ಹೆಂಗಸರು ನೀವಾರವನ್ನೇ ಆಹಾರವಾಗಿ ಸ್ವೀಕರಿಸಿ ಶುಚಿಭೂತರಾಗಿ ಸಮಾಧಾನವುಳ್ಳ ಮನಸ್ಸಿನಿಂದ

ನ ತೇಷಾಂ ಜಾಯತೇ ಕಿಂಚಿದಾಪದ್ದುಃಖಂ ಕದಾಚನ ।
ದುರ್ಭಗತ್ವಂ ಚ ನಾರೀಣಾಂ ನ ವಿಯೋಗಶ್ಚ ಮಾತೃಭಿಃ ॥ ೩೮ ॥
ಪುತ್ರತೋ ಧನತೋ ವಾಽಪಿ ಕದಾಚಿತ್ಸಂಭವಿಷ್ಯತಿ ।
ಏವಂ ವ್ಯಾಸ ಸಮಾಖ್ಯಾತಂ ಯತ್ತ್ವಯಾ ಪರಿಪೃಚ್ಛಿತಂ ॥ ೩೯ ॥
ಅವಂತ್ಯಾಮೀದೃಶಂ ತೀರ್ಥಂ ವರ್ತತೇ ಭುವಿ ಸತ್ತಮ ।
ತಾದೃಶಂ ಪುಣ್ಯದಂ ಕಿಂಚಿನ್ನಾಽಸ್ತಿ ಬ್ರಹ್ಮಾಂಡಗೋಲಕೇ ॥ ೪೦ ॥
ಅಸ್ಮಿಂಸ್ತೀರ್ಥೇ ನರಃ ಕಶ್ಚಿನ್ಮಹಾದಾನಾನಿ ಚೇಚ್ಚರೇತ್ ।
ಅಕ್ಷಯಾಣಿ ಭವಂತ್ಯಸ್ಯ ವಿಷ್ಣುಲೋಕೇ ಮಹೀಯತೇ ॥ ೪೧ ॥
ಯೋ ವೈ ನಿಯಮವಾನ್ಭೂತ್ವಾ ಕಥಾಮೇತಾಂ ಶೃಣೋತಿ ವಾ ।
ಪಠೇಚ್ಚ ಸತತಂ ವ್ಯಾಸ ಹಯಮೇಧಫಲಂ ಲಭೇತ್ ॥ ೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಗಯಾತೀರ್ಥಮಾಹಾತ್ಮ್ಯವರ್ಣನಂ" ನಾಮೈಕೋನಷಷ್ಠಿತಮೋಽಧ್ಯಾಯಃ

---

ಈ ವ್ರತವನ್ನು ಭಕ್ತಿಭರಿತರಾಗಿ ಮಾಡುವರೊ, ಅವರಿಗೆಂದಿಗೂ ಸ್ವಲ್ಪವಾದರೂ ದುಃಖವುಂಟಾಗುವುದಿಲ್ಲ. ಹೆಂಗಸರಿಗೆ ದೌರ್ಭಾಗ್ಯವಿಲ್ಲ. ಸಕಲರಿಗೂ ತಂದೆ ತಾಯಿಯರಿಂದಲೂ, ಮಕ್ಕಳಿಂದಲೂ, ಐಶ್ವರ್ಯದಿಂದಲೂ, ವಿಯೋಗವಿಲ್ಲ. ಎಲೈ ವ್ಯಾಸನೆ! ಇಂತು ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ನಿರೂಪಿಸಿರುತ್ತೇನೆ.

೪೦. ಭೂಲೋಕದಲ್ಲಿ ಅವಂತೀಕ್ಷೇತ್ರದಲ್ಲಿ ಮಾತ್ರ ಈ ವಿಧವಾದ ತೀರ್ಥವು ನೆಲಸಿರುವುದು. ಬ್ರಹ್ಮಾಂಡಗೋಲಕದಲ್ಲಿಯೇ ಮತ್ತೆಲ್ಲಿಯೂ ಇಂತಹ ಪುಣ್ಯಪ್ರದವಾದ ತೀರ್ಥವು ಮತ್ತೊಂದಿಲ್ಲ.

೪೧. ಈ ತೀರ್ಥೋತ್ತಮದಲ್ಲಿ ಯಾವ ಮಾನವನಾದರೂ ದಶದಾನಗಳನ್ನೊ ಷೋಡಶಮಹಾದಾನಗಳನ್ನೊ ಮಾಡುವವನಾದರೆ ಆ ದಾನವೇ ಅಕ್ಷಯ ಫಲದಾಯಕವಾಗಿ ಅವನು ವೈಕುಂಠದಲ್ಲಿ ಉತ್ತಮಪದವಿಯನ್ನು ಪಡೆಯುವನು.

೪೨. ಯಾವನು ನಿಯಮವಂತನಾಗಿ ಈ ಪುಣ್ಯಕಥೆಯನ್ನು ಕೇಳುವನೊ, ಯಾವನು ಪಠನಮಾಡುವನೊ, ಅವನು ಅಶ್ವಮೇಧಯಜ್ಞವನ್ನು ಮಾಡಿದ ಫಲಕ್ಕೆ ಭಾಗಿಯಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಗಯಾತೀರ್ಥಮಾಹಾತ್ಮ್ಯವರ್ಣನ"ವೆಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಟಿತಮೋಽಧ್ಯಾಯಃ

### ಪುರುಷೋತ್ತಮಮಾಹಾತ್ಮ್ಯೇ ದಾನಾದಿಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

ಪುರುಷೋತ್ತಮಮಂ ಪರಂ ತೀರ್ಥಂ ತ್ವಯಾ ಪ್ರೋಕ್ತಂ ಪುರಾಽನಘ ।
ಮಾಹಾತ್ಮ್ಯಂ ತಸ್ಯ ತೀರ್ಥಸ್ಯ ವಿಸ್ತರಾದ್ವದ ಮೇ ಪ್ರಭೋ ।
ಏತತ್ತು ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ॥ ೧ ॥

ಸನತ್ಕುಮಾರ ಉವಾಚ :—

ಶೃಣುಷ್ವ ಭೋ ದ್ವಿಜಶ್ರೇಷ್ಠ ಕಥಾಂ ಪಾಪಹರಾಂ ಪರಾಂ ।
ಯಸ್ಯಾಃ ಶ್ರವಣಮಾತ್ರೇಣ ಮಹಾಪಾಪಕ್ಷಯೋ ಭವೇತ್ ॥ ೨ ॥
ಪುರಾಕಲ್ಪೇಷು ವೈ ಬ್ರಹ್ಮನ್ವೈಕುಂಠೇ ವಿಮಲೇ ಶುಭೇ ॥ ೩ ॥
ಸಮಾಸೀನೋ ರಮಾನಾಥಃ ಪಾರ್ಷದೈಃ ಸನಕಾದಿಭಿಃ ।
ಮಹರ್ಷಿಭಿಃ ಸದಾಚಾರೈಃ ಪಿತಾಮಹಪುರೋಗಮೈಃ ॥ ೪ ॥
ಋದ್ಧಿಸಿದ್ಧಿಗುಣೋಪೇತೈಸ್ತತ್ವೈಸ್ತೈರ್ಮಹದಾದಿಭಿಃ ।
ಗಣಗಂಧರ್ವಸಂಘೈಶ್ಚ ಸೇವ್ಯಮಾನಃ ಸಮಂತತಃ ॥ ೫ ॥

---

## ಕನ್ನಡದ ಅನುವಾದ

### ಪುರುಷೋತ್ತಮಮಾಹಾತ್ಮ್ಯ—ದಾನಾದಿಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ನಿಷ್ಪಾಪನೂ ಬ್ರಹ್ಮಜ್ಞಾನಿಗಳಲ್ಲಿ ಉತ್ತಮನೆನಿಸಿದವನೂ ಆದ ಮುನಿಯೆ! ಹಿಂದೆ ನೀನು ಪುರುಷೋತ್ತಮತೀರ್ಥವನ್ನು ಪ್ರಶಂಸಿದೆಯಷ್ಟೆ. ಆ ತೀರ್ಥದ ಮಾಹಾತ್ಮ್ಯವನ್ನು ನನಗೆ ವಿಸ್ತಾರವಾಗಿ ತಿಳಿಸು. ಇದನ್ನು ನಿನ್ನಿಂದಲೇ ಕೇಳಲು ಕುತೂಹಲವುಳ್ಳವನಾಗಿರುವೆನು.

೨. ಸನತ್ಕುಮಾರನು ಹೇಳುತ್ತಾನೆ:—ಎಲೈ ದ್ವಿಜೋತ್ತಮನೆ! ಪಾಪಪರಿಹಾರಕವೂ ಸರ್ವೋತ್ತಮವೂ ಆದ ಈ ಕಥೆಯನ್ನು ಕೇಳು. ಇದನ್ನು ಕೇಳುವ ಮಾತ್ರದಿಂದಲೇ ಮಹಾಪಾಪಗಳೂ ತೊಲಗುವುವು.

೩–೫. ಹಿಂದೊಮ್ಮೆ ಕಲ್ಪಾಂತರದಲ್ಲಿ ನಿರ್ಮಲವೂ ಮಂಗಳಕರವೂ ಆದ ವೈಕುಂಠದಲ್ಲಿ ಸುಖಾಸೀನನಾದ ಮಹಾವಿಷ್ಣುವು ಪಾರ್ಷದಗಣಗಳಿಂದಲೂ, ಸನಕಾದಿಮಹರ್ಷಿಗಳಿಂದಲೂ, ಬ್ರಹ್ಮನೇ ಮೊದಲಾದ ಸದಾಚಾರನಿರತರಿಂದಲೂ, ಋದ್ಧಿಸಿದ್ಧಿಗಳಿಂದಲೂ, ಗುಣತ್ರಯೋಪೇತಗಳಾದ ಮಹದಾದಿತತ್ವಗಳಿಂದಲೂ, ಶಿವಗಣಗಳಿಂದಲೂ, ಗಂಧರ್ವಸಮೂಹಗಳಿಂದಲೂ, ಸುತ್ತಲೂ ಪರಿವೃತನಾಗಿ ಸೇವೆಯನ್ನು ಕೈಗೊಳ್ಳುತ್ತಿದ್ದನು.

ಕಿನ್ನರೋದ್ಗಾನಸನ್ಮಾನೈರ್ನೃತ್ಯದ್ಭಿರಪ್ಸರೋಗಣೈಃ ।
ಚಿಂತಾಮಣಿಗೃಹೋದ್ಗಾರಲಲಿತಾಂಗಣಭೂಮಿಷು ॥ ೬ ॥
ಕಲ್ಪದ್ರುಮಕೃತಚ್ಛಾಯ ಆಸೀನೋ ಹಿ ಮುರದ್ವಿಷಃ ।
ಧರ್ಮವಾದರತಾಃ ಸರ್ವೇ ಬ್ರಹ್ಮಮಾರ್ಗಸುನಿಶ್ಚಿತಾಃ ॥ ೭ ॥
ತೇಷಾಂ ಮಧ್ಯೇ ಪರಾ ಭಾಷಾ ಹ್ಯಪೃಚ್ಛತ್ಕಮಲಾಪತಿಂ ॥ ೮ ॥

ಲಕ್ಷ್ಮೀರುವಾಚ :—

ಪುಣ್ಯಕಾನಾಂ ವಿಧಿಂ ನಾಥ ಶ್ರೋತುಮಿಚ್ಛಾಮಿ ತತ್ವತಃ ।
ಸರ್ವಜ್ಞೋಽಸಿ ಮಹಾಪ್ರಾಜ್ಞ ವಾಚ್ಯತಾಂ ಯದಿ ರೋಚತೇ ॥ ೯ ॥

ಶ್ರೀ ಭಗವಾನುವಾಚ :—

ದಾನಂ ಸ್ನಾನಂ ತಪಃ ಶ್ರಾದ್ಧಂ ಸದಾ ಶಸ್ತಂ ಹಿ ಶೋಭತೇ ।
ತಥಾಽಪಿ ವಿಧಿನಾ ಪ್ರಾಪ್ತಂ ತತ್ಸರ್ವಂ ಚಾಕ್ಷಯಂ ಭವೇತ್ ॥ ೧೦ ॥
ದೇಶೇ ಕಾಲೇ ಪರ್ವಣಿ ಚ ತೀರ್ಥೇ ಚಾಯತನೇ ಪದೇ ।
ದಾನಂ ಸ್ನಾನಂ ತಪಃ ಶ್ರಾದ್ಧಂ ಮುನಿಭಿಃ ಪರಿಕೀರ್ತಿತಂ ॥ ೧೧ ॥

---

೬–೭. ಕಿನ್ನರರ ತಾರಸ್ವರದ ಸಂಗೀತಸನ್ಮಾನದಿಂದಲೂ, ನರ್ತನ ಮಾಡುತ್ತಿರುವ ಅಪ್ಸರೋಗಣಗಳಿಂದಲೂ ಪರಿವೃತನಾಗಿ, ಚಿಂತಾಮಣಿಗಳಿಂದ ನಿರ್ಮಿತಗಳಾದ ಗೃಹಗಳ ಲಲಿತಪ್ರಾಂಗಣಗಳ ಮಧ್ಯದಲ್ಲಿ ಕಲ್ಪವೃಕ್ಷದ ನೆರಳಿನಲ್ಲಿ ಮುರವೈರಿಯು ಸಿಂಹಾಸನಾಸೀನನಾಗಿದ್ದನು. ಸಭೆಯಲ್ಲಿ ನೆರೆದಿದ್ದವರೆಲ್ಲರೂ ಧರ್ಮವಾದನಿರತರೂ ಬ್ರಹ್ಮಮಾರ್ಗದಲ್ಲಿ ಬದ್ಧಾದರರೂ ಆಗಿದ್ದರು.

೮. ಅವರ ಮಧ್ಯದಲ್ಲಿ ಪರಾವಾಣೀರೂಪಳಾದ ಮಹಾಲಕ್ಷ್ಮಿಯು ತನ್ನ ಒಡೆಯನನ್ನು ಕುರಿತು ಇಂತೆಂದಳು.

೯. ಲಕ್ಷ್ಮಿಯು ಕೇಳುತ್ತಾಳೆ:—ನಾಥನೆ! ಸರ್ವಜ್ಞನೆ! ಪುಣ್ಯವನ್ನು ಸಂಪಾದಿಸಿಕೊಡುವ ಕರ್ಮಗಳ ವಿಧಿಯನ್ನು ನಿನ್ನಿಂದ ಕೇಳಲಿಚ್ಛಿಸುತ್ತಿರುವೆನು. ನಿನ್ನ ಮನಸ್ಸಿಗೆ ಬಂದರೆ ಅದನ್ನು ಯಥಾರ್ಥವಾಗಿ ಹೇಳು.

೧೦. ಭಗವಂತನು ಹೇಳುತ್ತಾನೆ:—ಎಲೌ ಮಂಗಳಾಂಗಿಯೆ! ದಾನ, ಸ್ನಾನ, ತಪಸ್ಸು, ಶ್ರಾದ್ಧಗಳೆಲ್ಲವೂ ಯಾವಾಗಲೂ ಪ್ರಶಸ್ತಕಾರ್ಯಗಳೇ. ಆದರೂ ವಿಧಿವಿಹಿತರೀತಿಯಿಂದ ಮಾಡಲು ಅವೆಲ್ಲವೂ ಅಕ್ಷಯಫಲವನ್ನು ಕೊಡುವುವು.

೧೧. ಉಚಿತ ದೇಶಕಾಲಗಳಲ್ಲಿಯೂ, ಪರ್ವ ದಿವಸಗಳಲ್ಲಿಯೂ, ತೀರ್ಥಗಳಲ್ಲಿಯೂ, ದೇವಾಲಯಗಳಲ್ಲಿಯೂ, ಉತ್ತಮ ಪದಗಳಲ್ಲಿಯೂ, ದಾನ, ಸ್ನಾನ, ತಪಸ್ಸು ಮತ್ತು ಶ್ರಾದ್ಧಗಳನ್ನು ಮಾಡಬೇಕೆಂದು ಮುನಿವರ್ಯರು ಪ್ರಶಂಸೆಮಾಡಿರುವರು.

ಪೂರ್ಣಮಾಸ್ಯಾಮಮಾವಾಸ್ಯಾಂ ಸಂಕ್ರಾಂತೌ ಗ್ರಹಣೇ ತಥಾ ।
ವೈಧೃತೌ ಚ ವ್ಯತೀಪಾತೇ ದಾನವೃದ್ಧಿಃ ಪರಾ ಸ್ಮೃತಾ ॥ ೧೨ ॥
ಗಂಗಾಯಾಂ ಭಾಸ್ಕರಕ್ಷೇತ್ರೇ ಕುರುಕ್ಷೇತ್ರೇ ಚ ಪುಷ್ಕರೇ ।
ಗೋದಾವರ್ಯಾಂ ಗಯಾಯಾಂ ಚ ತೀರ್ಥೇ ಚಾಮರಕಂಟಕೇ ॥ ೧೩ ॥
ಅವಂತ್ಯಾಂ ಚ ಹುತಂ ದತ್ತಂ ತತ್ಸರ್ವಂ ಚಾಽಕ್ಷಯಂ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ಪರ್ವೇ ತೀರ್ಥಂ ಸಮಾಚರೇತ್ ॥ ೧೪ ॥
ಕುಚೈಲೋ ದುರ್ಭಗೋ ಮೂರ್ಖೋ ಜಡೋ ರೋಗಸಮನ್ವಿತಃ ।
ತೀರ್ಥಪರ್ವಪರಿಭ್ರಷ್ಟೋ ನರೋ ಭವತಿ ನಿಶ್ಚಿತಂ ॥ ೧೫ ॥
ಕೇ ಯೋಗಾಃ ಸುಕೃತಾನಾಂ ಚ ಕರ್ತವ್ಯಾಶ್ಚ ವಿಶೇಷತಃ ॥ ೧೬ ॥
ಶ್ರೀ ಕೃಷ್ಣ ಉವಾಚ :—
ಸಾಧು ಪೃಷ್ಟಃ ಪ್ರಿಯೇ ಪ್ರಶ್ನಃ ಪುಣ್ಯಕಾನಾಂ ತ್ವಯಾಽನಘೇ ।
ಮಲಮಾಸೇ ಸಮಾಯಾತೇ ಯೇ ನರಾ ವ್ರತವರ್ಜಿತಾಃ ।
ಜನ್ಮಜನ್ಮನಿ ದಾರಿದ್ರ್ಯಂ ತೇಷಾಂ ಭವತಿ ಶೋಭನೇ ॥ ೧೭ ॥

---

೧೨. ಪೌರ್ಣಮಿ, ಅಮಾವಾಸ್ಯೆ, ಸಂಕ್ರಾಂತಿ, ಗ್ರಹಣ, ವೈಧೃತಿ, ವ್ಯತೀಪಾತಗಳ ದಿವಸಗಳಲ್ಲಿ ಮಾಡಿದ ದಾನಗಳ ಫಲವು ಅನಂತವೃದ್ಧಿಯನ್ನು ಪಡೆಯುವುದೆಂದು ಸ್ಮೃತಿಗಳಲ್ಲಿ ಹೇಳಿರುವುದು.

೧೩–೧೪. ಗಂಗಾತೀರ, ಭಾಸ್ಕರಕ್ಷೇತ್ರ, ಕುರುಕ್ಷೇತ್ರ, ಪುಷ್ಕರತೀರ್ಥ, ಗೋದಾವರೀ ತೀರ, ಗಯೆ, ಅಮರಕಂಟಕ ತೀರ್ಥ, ಅವಂತೀಕ್ಷೇತ್ರ—ಇವುಗಳಲ್ಲಿ ಮಾಡಿದ ಹೋಮದಾನಗಳೆಲ್ಲವೂ ಅಕ್ಷಯಫಲವನ್ನು ಕೊಡುವುವು. ಆದಕಾರಣ ಸರ್ವಪ್ರಯತ್ನಗಳಿಂದಲೂ ಪರ್ವದಿವಸಗಳಲ್ಲಿ ಯಾವ ತೀರ್ಥದ ಸೇವೆಯನ್ನಾದರೂ ಮಾಡಲೇಬೇಕು.

೧೫. ಪರ್ವಕಾಲಗಳಲ್ಲಿ ತೀರ್ಥಸೇವೆಯನ್ನು ಮಾಡದ ಮನುಜನು ಚಿಂದಿ ಬಟ್ಟೆಯವನೂ, ದರಿದ್ರನೂ, ಮೂರ್ಖನೂ, ಜಡನೂ, ರೋಗಿಯೂ ಆಗುವನು. ಇದು ನಿಶ್ಚಯವು.

೧೬. ಪುಣ್ಯವನ್ನು ಸಂಪಾದಿಸಲು ಯಾವ ಯೋಗಗಳು ಪ್ರಶಸ್ತಗಳು? ಆ ಯೋಗಗಳಲ್ಲಿ ವಿಶೇಷವಾಗಿ ಮಾಡಬೇಕಾದ ಕಾರ್ಯಗಳೇನು?

೧೭. ಕೃಷ್ಣನು ಹೇಳುತ್ತಾನೆ:—ನಿಷ್ಪಾಪಳಾದ ಎಲೌ ಪ್ರಿಯಳೆ! ಪುಣ್ಯಕರ್ಮಗಳ ವಿಷಯವಾಗಿ ನೀನು ಮಾಡಿದ ಪ್ರಶ್ನೆಯು ಬಹಳ ಸಾಧುವಾದುದು. ಮಲಮಾಸವು ಬರಲು ಯಾರು ವ್ರತೋಪವಾಸಾದಿಗಳನ್ನು ಮಾಡುವುದಿಲ್ಲವೊ, ಅವರು ಅನೇಕ ಜನ್ಮಗಳಲ್ಲಿ ದಾರಿದ್ರ್ಯವನ್ನನುಭವಿಸುವರು.

ಶ್ರೀ ರುಕ್ಮಿಣ್ಯುವಾಚ :—
ಕೀದೃಶೋ ಹಿ ಮಲೋ ಮಾಸಃ ಕೇನ ಯೋಗೇನ ಜಾಯತೇ ।
ಕದಾ ಕಾಲೇ ಸಮಾಯಾತಿ ಏತನ್ನೋ ವದ ವಿಸ್ತರಾತ್ ॥ ೧೮ ॥
ಶ್ರೀ ಕೃಷ್ಣ ಉವಾಚ :—
ಯುಕ್ತಮುಕ್ತಂ ತ್ವಯಾ ದೇವಿ ಪ್ರಶ್ನಃ ಕಾಲೇಽಯಮೀದೃಶಃ ।
ದೇವತಾಪಿತೃಕಾರ್ಯಾಣಿ ವಿಧಿನಾ ಹಿ ಮಲಿಮ್ಲುಚೇ ॥ ೧೯ ॥
ಕ್ಷೌರಂ ಮೌಂಜೀ ವಿವಾಹಶ್ಚ ವ್ರತೋಪವಾಸಕಂ ತಥಾ ।
ವಿಶೇಷೇಣ ಗೃಹಸ್ಥಾನಾಂ ವರ್ಜ್ಯಂ ಮುನಿವರೋತ್ತಮೈಃ ॥ ೨೦ ॥
ಸಂವತ್ಸರತ್ರಯಾಂತೇ ಚ ಮಾಸೋಽಯಮಧಿಗಚ್ಛತಿ ।
ಅಸಂಕ್ರಮೋ ರವೇರಸ್ಮಿಂಸ್ತಸ್ಮಾದಧಿಕಮಾಸಕಃ ॥ ೨೧ ॥
ಅಧಿಮಾಸಾಧಿಪತ್ಯೋಽಹಂ ಸದೈವ ಪುರುಷೋತ್ತಮಃ ।
ಮಮಾಽಭಿಧಾನಂ ತೀರ್ಥಂ ಚ ಮಹಾಕಾಲವನೇ ಶುಭಂ ॥ ೨೨ ॥
ಪುರುಷೋತ್ತಮಾಖ್ಯಂ ಯೇ ಧಾಮ ಸದೈವಾಽತ್ರ ಪ್ರತಿಷ್ಠತಿ ।
ತಸ್ಮಾತ್ಸರ್ವಪ್ರಯತ್ನೇನ ಗಂತವ್ಯಂ ಹಿ ತ್ವಯಾ ಸಹ ॥ ೨೩ ॥

---

೧೮. ರುಕ್ಮಿಣಿಯು ಹೇಳುತ್ತಾಳೆ.—ಈ ಮಲಮಾಸವೆಂಬುದು ಯಾವುದು ? ಯಾವ ಯೋಗದಿಂದ ಇದು ಉಂಟಾಗುವುದು? ಇದು ಯಾವ ಕಾಲದಲ್ಲಿ ಬರುವುದು? ಎಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸುವವನಾಗು.

೧೯. ಕೃಷ್ಣನು ಹೇಳುತ್ತಾನೆ:—ದೇವಿ! ನೀನು ಹೇಳಿದುದು ಸರಿ. ಕಾಲದ ವಿಷಯದಲ್ಲಿ ಇಂತಹ ಪ್ರಶ್ನೆಯೇ ಯುಕ್ತವು. ಈ ಮಲಮಾಸದಲ್ಲಿ ವಿಧಿಯನ್ನನುಸರಿಸಿ ದೇವಪಿತೃಕಾರ್ಯಗಳನ್ನು ಮಾಡಬೇಕು.

೨೦. ಈ ಮಾಸದಲ್ಲಿ ಕ್ಷೌರ, ಉಪನಯನ, ವಿವಾಹ, ವ್ರತೋಪವಾಸಗಳು—ಮುಂತಾದ ಶುಭಕಾರ್ಯಗಳನ್ನು ಗೃಹಸ್ಥರು ಸರ್ವಥಾ ಮಾಡಕೂಡದೆಂದು ಮುನಿವರೋತ್ತಮರು ಹೇಳುತ್ತಿರುವರು.

೨೧. ಮೂರು ಸಂವತ್ಸರಗಳ ಕೊನೆಯಲ್ಲಿ ಒಮ್ಮೆ ಈ ಮಾಸವು ಬರುವುದು. ಆಗ ಸೂರ್ಯನ ಸಂಕ್ರಮಣವಿರುವುದಿಲ್ಲವಾದುದರಿಂದ ಇವನ್ನು ಅಧಿಕಮಾಸವೆಂದೂ ಕರೆಯುವರು.

೨೨. ಪುರುಷೋತ್ತಮನಾದ ನಾನೇ ಯಾವಾಗಲೂ ಈ ಅಧಿಕಮಾಸಕ್ಕೆ ಅಧಿಪತಿಯಾಗಿರುವೆನು. ಈ ನನ್ನ ಹೆಸರಿನಿಂದಲೇ ಮಹಾಕಾಲವನದಲ್ಲಿ ಪವಿತ್ರವಾದ ತೀರ್ಥವೊಂದಿರುವುದು.

೨೩. ಪುರುಷೋತ್ತಮನಾಮಕವಾದ ನನ್ನ ವೈಕುಂಠನಿಲಯವೂ ಯಾವಾಗಲೂ ಅಲ್ಲಿಯೇ ನೆಲಸಿರುವುದು. ಆದುದರಿಂದ ಆಗ ನೀನೂ ನನ್ನೊಡನೆ ಸರ್ವಪ್ರಯತ್ನದಿಂದಲೂ ಅಲ್ಲಿಗೆ ಹೋಗಲೇಬೇಕು.

ಮಹಾಕಾಲವನೇ ತತ್ರ ಯತ್ರ ತೀರ್ಥಂ ಮಮಾಽಭಿಧಂ ।
ಪ್ರಾಣಿನೋ ಯೇ ಸಮಾಯಾಂತಿ ಮಜ್ಜನಾರ್ಥಂ ಪ್ರಿಯೇ ಧ್ರುವಂ॥ ೨೪ ॥
ತೇಷಾಮಿಹ ಮಮಾದೇಯಂ ನ ಕದಾಽಪಿ ಭವಿಷ್ಯತಿ ।
ಧನಧಾನ್ಯಕಲತ್ರಾದಿಪುತ್ರಸೌಖ್ಯಂ ಸದೈವ ಹಿ ॥ ೨೫ ॥
ಅಸಂಕ್ರಾಂತೇಽಪಿ ಸಂಪ್ರಾಪ್ತೇ ಮಾಮುದ್ದಿಶ್ಯ ವ್ರತಂ ಚರೇತ್ ।
ಅಧಿಮಾಸಾಧಿಪತ್ಯೋಽಹಂ ಸದಾ ವೈ ಪುರುಷೋತ್ತಮಃ ॥ ೨೬ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ದೇವತಾರ್ಚಾಂ ಚ ಮಧ್ಯಾಹ್ನೇ ಯೇ ಕುರ್ವಂತಿ ನರೋತ್ತಮಾಃ ।
ಅಕ್ಷಯಂ ಚ ಭವೇತ್ಸರ್ವಂ ತೇಷಾಂ ವೈ ಕಮಲೇ ಧ್ರುವಂ ॥ ೨೭ ॥
ಮಲಮಾಸೋ ಗತಃ ಶೂನ್ಯೋ ಯೇಷಾಂ ದೇವಿ ಪ್ರಮಾದತಃ ।
ದಾರಿದ್ರ್ಯಂ ಚ ಸದಾ ತೇಷಾಂ ಶೋಕರೋಗವಿವರ್ಧನಂ ॥ ೨೮ ॥
ಅಧಿಮಾಸೇ ಸಮಾಯಾತೇ ಅವಂತ್ಯಾಂ ವ್ರತಮಾಚರೇತ್ ।
ತೇಷಾಂ ದದಾಮ್ಯಹಂ ಪ್ರೀತ್ಯಾ ತ್ವಾಮೇವ ಚ ನ ಸಂಶಯಃ ॥ ೨೯ ॥

೨೪–೨೫. ಪ್ರಿಯೆ! ಮಹಾಕಾಲವನದಲ್ಲಿರುವ ನನ್ನ ಹೆಸರಿನ ಪವಿತ್ರ ತೀರ್ಥದಲ್ಲಿ ಯಾವ ಪ್ರಾಣಿಗಳು ಸ್ನಾನಮಾಡಲು ಬರುತ್ತವೆಯೊ, ಅವುಗಳಿಗೆ ಕೊಡಲಾರದುದೆಂಬುದು ನನ್ನಲ್ಲಿ ಯಾವುದೂ ಇರುವುದಿಲ್ಲ. ಅವರಿಗೆ ಯಾವಾಗಲೂ ಧನ, ಧಾನ್ಯ, ಪತ್ನೀಪುತ್ರರು—ಮುಂತಾದ ಸಕಲಭಾಗ್ಯಗಳೂ ಕೈಗೂಡಿರುವುವು.

೨೬. ಸಂಕ್ರಾಂತಿಯಿಲ್ಲದ ಮಾಸವು ಬಂದರೂ ನನ್ನನ್ನುದ್ದೇಶಿಸಿ ವ್ರತವನ್ನು ಮಾಡಬೇಕು. ಪುರುಷೋತ್ತಮನಾದ ನಾನೇ ಸಕಲ ಅಧಿಕಮಾಸಗಳಿಗೂ ಒಡೆಯನು.

೨೭. ಈ ಮಾಸದ ಮಧ್ಯಾಹ್ನಸಮಯಗಳಲ್ಲಿ ಯಾವ ಮನುಜಶ್ರೇಷ್ಠರು ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ಪಿತೃತರ್ಪಣ, ದೇವಾರ್ಚನ ಮುಂತಾದುವುಗಳನ್ನು ಮಾಡುವರೊ, ಅವರ ಕಾರ್ಯಗಳೆಲ್ಲವೂ ಅಕ್ಷಯ ಫಲವನ್ನು ಕೊಡುವುವು. ಇದು ನಿಜವು.

೨೮. ಯಾರು ಪ್ರಮಾದವಶದಿಂದಲಾದರೂ ಮಲಮಾಸವನ್ನು ಯಾವ ಸತ್ಕಾರ್ಯವೂ ಇಲ್ಲದೆ ವ್ಯರ್ಥವಾಗಿ ಕಳೆಯುವರೊ, ಅವರಿಗೆ ನಿತ್ಯದಾರಿದ್ರ್ಯವೂ ದುಃಖರೋಗಾದಿಗಳ ಅಭಿವೃದ್ಧಿಯೂ ಆಗುವುವು.

೨೯. ಅಧಿಕಮಾಸವು ಬರಲು ಅವಂತೀಕ್ಷೇತ್ರದಲ್ಲಿ ವ್ರತವನ್ನು ಆಚರಿಸಬೇಕು. ಅವರಲ್ಲಿ ಪ್ರೀತಿಗೊಂಡವನಾಗಿ ನಾನು ಐಶ್ವರ್ಯಕ್ಕೆ ಒಡತಿಯಾದ ನಿನ್ನನ್ನೇ ಕೊಟ್ಟುಬಿಡುವೆನು. ಇದರಲ್ಲಿ ಸಂದೇಹವಿಲ್ಲ.

ಸ್ವಲ್ಪಂ ದಾನಮಲಂ ಕಾರ್ಯಂ ಯತ್ಕಿಂಚಿದಿಹ ಯತ್ಕೃತಂ ।
ತತ್ಸರ್ವಂ ಮತ್ಪ್ರಸಾದೇನ ಹ್ಯನಂತಂ ಪ್ರಿಯದರ್ಶನೇ ॥ ೩೦ ॥
ಶ್ರೀರುವಾಚ :—
ಈದೃಶೋ ಹಿ ತ್ವಯಾ ಪ್ರೋಕ್ತೋ ಹ್ಯಧಿಮಾಸಸ್ಯ ಸುವ್ರತ ॥ ೩೧ ॥
ಮಹಿಮಾಹ್ಯಪಿ ಲೋಕಾನಾಂ ಸರ್ವಕಾಮವರಪ್ರದಃ ।
ಅಧಿಮಾಸವ್ರತಂ ಪುಣ್ಯಂ ಕಥಯಸ್ವ ಪ್ರಸಾದತಃ ॥ ೩೨ ॥
ಶ್ರೀ ಕೃಷ್ಣ ಉವಾಚ :—
ಅಸಂಕ್ರಾಂತೋ ಯದಾ ಮಾಸಃ ಪ್ರಾಪ್ಯತೇ ಮಾನವೈಃ ಪ್ರಿಯೇ ।
ಮಹೋತ್ಸವಸ್ತದಾ ಕಾರ್ಯ ಆತ್ಮನೋ ಹಿತಕಾಂಕ್ಷಿಭಿಃ ॥ ೩೩ ॥
ಕೃಷ್ಣಪಕ್ಷೇ ಚತುರ್ದಶ್ಯಾಂ ನವಮ್ಯಾಂ ವಾ ಸುರೇಶ್ವರಿ ।
ಅಷ್ಟಮ್ಯಾಂ ಚಾಽಥ ಕರ್ತವ್ಯಂ ವ್ರತಂ ಶೋಕವಿನಾಶನಂ ॥ ೩೪ ॥
ಯಥಾಲಾಭೋಪಹಾರೇಣ ಮಾಸೇ ಚಾಽಪಿ ಮಲಿಮ್ಲುಚೇ ।
ಪುಣ್ಯಾಽಹೇ ಪ್ರಾತರುತ್ಥಾಯ ಕೃತ್ವಾ ಪೌರ್ವಾಹ್ಣಿಕೀಂ ಕ್ರಿಯಾಂ ॥ ೩೫ ॥
ಗೃಹೀತ್ವಾ ನಿಯಮಂ ಪಶ್ಚಾದ್ವಾಸುದೇವಂ ಹೃದಿ ಸ್ಮರನ್ ।
ಉಪವಾಸಂ ಚ ನಕ್ತಂ ಚ ಏಕಭುಕ್ತಂ ಚ ಮಾನಿನಿ ॥ ೩೬ ॥

---

೩೦. ಈ ಕ್ಷೇತ್ರದಲ್ಲಿ ಸ್ವಲ್ಪವಾದ ದಾನವಾಗಲಿ, ಸೂಕ್ಷ್ಮವಾದ ಪುಣ್ಯ ಕಾರ್ಯವಾಗಲಿ ಏನೇ ಮಾಡಲ್ಪಟ್ಟರೂ ಅದೆಲ್ಲವೂ ನನ್ನ ಪ್ರಸಾದದಿಂದ ಅನಂತಗುಣಿತವಾದ ಫಲವನ್ನು ಕೊಡುವುದು.

೩೧–೩೨. ಲಕ್ಷ್ಮಿಯು ಹೇಳುತ್ತಾಳೆ:—ಸುವ್ರತನೆ! ಈ ರೀತಿಯಾದ ಅಧಿಕಮಾಸದ ಮಾಹಾತ್ಮ್ಯವನ್ನು ತಿಳಿಸಿದೆಯಷ್ಟೆ. ಇದು ಲೋಕನಿವಾಸಿಗಳಿಗೆ ಸಕಲಕಾಮಗಳನ್ನು ಕೊಡುವುದು. ಇನ್ನು ನನ್ನಲ್ಲಿ ಕೃಪೆಮಾಡಿ ಅಧಿಕಮಾಸದ ಪುಣ್ಯತಮವಾದ ವ್ರತವನ್ನು ತಿಳಿಸು.

೩೩. ಕೃಷ್ಣನು ಹೇಳುತ್ತಾನೆ:—ಪ್ರಿಯಳೆ! ಸಂಕ್ರಮಣವಿಲ್ಲದ ಮಾಸವು ಯಾವಾಗ ಪ್ರಾಪ್ತವಾಗುವುದೊ, ಆಗ ಆತ್ಮಶ್ರೇಯಸ್ಕಾಮಿಗಳಾದ ಮನುಜರೆಲ್ಲರೂ ಮಹೋತ್ಸವಗಳನ್ನು ನಡೆಸಬೇಕು.

೩೪. ಕೃಷ್ಣಪಕ್ಷದ ಅಷ್ಟಮಿ, ನವಮಿ ಮತ್ತು ಚತುರ್ದಶಿಯ ದಿವಸಗಳಲ್ಲಿ ಸಕಲಶೋಕಗಳನ್ನೂ ನಾಶಗೊಳಿಸುವ ವ್ರತವೊಂದನ್ನಾಚರಿಸಬೇಕು.

೩೫. ಈ ಮಲಮಾಸವು ಬರಲು ತನ್ನ ಅನುಕೂಲಕ್ಕೆ ತಕ್ಕಂತೆ ಪೂಜಾ ದ್ರವ್ಯಗಳನ್ನು ಶೇಖರಿಸಿಕೊಂಡು ಒಂದು ಶುಭದಿವಸ ಪ್ರಾತಃಕಾಲದಲ್ಲಿ ಎದ್ದು ಪೂರ್ವಾಹ್ಣದ ನಿತ್ಯಕರ್ಮಗಳನ್ನು ನೆರವೇರಿಸಿಕೊಳ್ಳಬೇಕು.

೩೬. ಬಳಿಕ ವ್ರತನಿಯಮವನ್ನು ಸ್ವೀಕರಿಸಿ ಶ್ರೀ ವಾಸುದೇವನನ್ನೇ

ಏಕಸ್ಯ ನಿಶ್ಚಯಂ ಕೃತ್ವಾ ತತೋ ವಿಪ್ರಾನ್ನಿಮಂತ್ರಯೇತ್ ।
ಸಪತ್ನೀಕಾನ್ ಸದಾಚಾರಾನ್ಕುಲೀನಾನ್ ಜ್ಞಾತಿಸಂಭವಾನ್ ॥ ೩೭ ॥
ತತೋ ಮಧ್ಯಾಹ್ನಸಮಯೇ ಲಕ್ಷ್ಮೀಯುಕ್ತಂ ಸನಾತನಂ ।
ಸ್ಥಾಪಯೇದವ್ರಣೇ ಕುಂಭೇ ವೇದಮಂತ್ರೈರ್ದ್ವಿಜಾತಿಭಿಃ ॥ ೩೮ ॥
ಪೂಜಯೇತ್ಪರಯಾ ಭಕ್ತ್ಯಾ ಗೋತ್ರಿಭಿಃ ಸಪಿತಾಮಹಂ ।
ಗಂಧತೋಯೇನ ಸಂಸ್ಥಾಪ್ಯ ಪಂಚಾಮೃತೈಸ್ತಥೈವ ಚ ॥ ೩೯ ॥
ಮಿಷ್ಟಾನ್ನೈರ್ನವಭಿಶ್ಚೈವ ನೈವೇದ್ಯೈರ್ಧೂಪದೀಪಕೈಃ ।
ಆಚ್ಛಾದನೈಶ್ಚ ವಸ್ತ್ರೈಶ್ಚ ಪೀತಕೌಶೇಯಕೈಸ್ತಥಾ ॥ ೪೦ ॥
ಘಂಟಾಮೃದಂಗನಿರ್ಹ್ರಾದೈರ್ಘೋಷಧ್ವನಿಸಮನ್ವಿತೈಃ ।
ಆರಾರ್ತಿಕಂ ವ್ರತೀ ಕುರ್ಯಾತ್ಕರ್ಪೂರಾಗರುಚಂದನೈಃ ॥ ೪೧ ॥
ಅಲಾಭೇ ತೂಲಮೂಕೈಶ್ಚಾಽಪಿ ಫಲಸ್ಯಾಽಸಂತಹೇತವೇ ।
ತಾಮ್ರಪಾತ್ರಸ್ಥಿತೇ ತೋಯೇ ಚಂದನಾಕ್ಷತಪುಷ್ಪಕೈಃ ॥ ೪೨ ॥

---

ಮನಸ್ಸಿನಲ್ಲಿ ಧ್ಯಾನಿಸುತ್ತ ಬೆಳಿಗ್ಗೆ ಏಕಭುಕ್ತವನ್ನೂ ರಾತ್ರಿಯಲ್ಲಿ ಉಪವಾಸವನ್ನೂ ಮಾಡಬೇಕು.

೩೭. ಒಂದು ತಿಥಿಯನ್ನು ನಿಶ್ಚಯಮಾಡಿಕೊಂಡು ಪತ್ನೀಸಹಿತರೂ, ಸದಾಚಾರನಿರತರೂ, ಕುಲೀನರೂ, ಜ್ಞಾತಿವರ್ಗದವರೂ ಆದ ಬ್ರಾಹ್ಮಣರಿಗೆ ಆಮಂತ್ರಣವನ್ನು ಕೊಟ್ಟು ಕರೆಯಬೇಕು.

೩೮. ಅಂದು ಮಧ್ಯಾಹ್ನಕಾಲಕ್ಕೆ ಬ್ರಾಹ್ಮಣರು ವೇದಘೋಷಗಳನ್ನು ಮಾಡುತ್ತಿರಲು ಅಚ್ಛಿದ್ರವಾದ ಕಳಶದಲ್ಲಿ ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನನ್ನು ಆವಾಹನೆ ಮಾಡಬೇಕು.

೩೯. ಆ ಕಳಶವನ್ನು ಗಂಗೋದಕದಿಂದಲೂ, ಪಂಚಾಮೃತಗಳಿಂದಲೂ ತುಂಬಿ ಅದರಲ್ಲಿ ಪರಿವಾರಸಮೇತನೂ, ಲೋಕಪಿತಾಮಹನೂ ಆದ ಮಹಾವಿಷ್ಣುವನ್ನು ಅತ್ಯಂತಭಕ್ತಿಯಿಂದ ಪೂಜಿಸಬೇಕು.

೪೦–೪೧. ಒಂಬತ್ತು ವಿಧಗಳಾದ ಮಿಷ್ಟಾನ್ನಗಳ ನೈವೇದ್ಯಗಳಿಂದಲೂ, ಧೂಪ ದೀಪಗಳಿಂದಲೂ, ಉತ್ತರೀಯ ಮತ್ತು ರೇಷ್ಮೆಯ ಪೀತಾಂಬರಗಳಿಂದಲೂ, ಘಂಟೆ ಮೃದಂಗಗಳ ಶಬ್ದಗಳಿಂದಲೂ, ವೇದಘೋಷಗಳ ಉಚ್ಚಧ್ವನಿಯಿಂದಲೂ, ವ್ರತಿಯಾದ ಯಜಮಾನನು ಕರ್ಪೂರ, ಅಗರು, ಚಂದನಗಳಿಂದ ಕೂಡಿದ ಮಂಗಳಾರತಿಯನ್ನೆತ್ತಬೇಕು.

೪೨–೪೩. ಅಷ್ಟು ಸೌಕರ್ಯವಿಲ್ಲದಿದ್ದರೆ ಉರಿಯುವ ಪಂಜಿನಿಂದಾದರೂ ಆರತಿಯನ್ನು ಮಾಡಬಹುದು. ಬಳಿಕ ಸಂತುಷ್ಟವಾದ ಮನಸ್ಸಿನಿಂದ ಕೂಡಿ ಪತ್ನೀಸಮೇತನಾಗಿ ಒಂದು ತಾಮ್ರದ ಪಾತ್ರೆಯಲ್ಲಿ ಚಂದನ, ಅಕ್ಷತೆ, ಪುಷ್ಪಗ

**ಅರ್ಘ್ಯಂ ದದ್ಯಾತ್ಸಪತ್ನೀಕಃ ಪ್ರಹೃಷ್ಟೇನಾಂತರಾತ್ಮನಾ ।**
**ಪಂಚರತ್ನೈಃ ಸಮಾಯುಕ್ತೈರ್ಜಾನುನೀ ಕೃತ್ಯ ಭೂತಲೇ ।**
**ಸಮಾದಾಯ ಚ ಪಾಣಿಭ್ಯಾಂ ಸರ್ವಭಕ್ತಿಸಮನ್ವಿತಃ ॥ ೪೩ ॥**

॥ ಅರ್ಘ್ಯಮಂತ್ರಃ ॥

**ಕೃಪಾವನ್ ಸರ್ವಭೂತೇಷು ಜಗದಾನಂದಕಾರಕ ।**
**ಗೃಹಾಣಾಽರ್ಘ್ಯಮಿಮಂ ದೇವ ಸಂಪೂರ್ಣಫಲದೋ ಭವ ॥ ೪೪ ॥**

॥ ಪ್ರಾರ್ಥನಾಮಂತ್ರಃ ॥

**ಸ್ವಯಂಭುವೇ ನಮಸ್ತುಭ್ಯಂ ಬ್ರಹ್ಮಣೇಽಮಿತತೇಜಸೇ ।**
**ನಮೋಽಸ್ತು ತೇ ಶ್ರಿಯಾನಂದ ಬ್ರಹ್ಮಾನಂದ ಕೃಪಾಕರ ॥ ೪೫ ॥**
**ಏವಂ ಸಂಪ್ರಾರ್ಥ್ಯ ಗೋವಿಂದಂ ಪೂಜಯೇದ್ಬ್ರಾಹ್ಮಣಾನ್ ಸ್ವಯಂ ।**
**ಸಪತ್ನೀಕಾನ್ ಶುಚೀನ್ಸ್ನಾತಾನ್ ಲಕ್ಷ್ಮೀನಾರಾಯಣೌ ಸ್ಮರನ್ ॥ ೪೬ ॥**
**ಪೂಜಯಿತ್ವಾ ವಿಧಾನೇನ ಭೋಜಯೇದ್ಘೃತಪಾಯಸೈಃ ॥ ೪೭ ॥**
**ಭೋಜಯಿತ್ವಾ ವಿಧಾನೇನ ಸಪತ್ನೀಕಂ ಯಥೋಚಿತಂ ।**
**ವಿದ್ಯಾವಿನಯಸಂಪನ್ನಂ ತಥಾ ಪತ್ನ್ಯಾ ಸಮನ್ವಿತಂ ॥ ೪೮ ॥**

---

ಕೂಡಗೂಡಿದ ನೀರನ್ನು ತುಂಬಿ ಪಂಚರತ್ನಗಳನ್ನು ಹಾಕಿ ಮೊಣಕಾಲುಗಳನ್ನು ನೆಲಕ್ಕೂರಿ ಕುಳಿತು ಆದನ್ನು ಕೈಗೆ ತೆಗೆದುಕೊಂಡು ಸರ್ವಭಾವದಿಂದಲೂ ಪರಮೇಶ್ವರನಿಗೆ ಅರ್ಘ್ಯವನ್ನರ್ಪಿಸಬೇಕು.

೪೪. (ಅರ್ಘ್ಯಮಂತ್ರ) ಸಕಲ ಭೂತಗಳಲ್ಲಿಯೂ ದಯೆಯುಳ್ಳವನೂ, ಲೋಕಗಳಿಗೆ ಆನಂದವನ್ನುಂಟುಮಾಡುವವನೂ ಆದ ಎಲೈ ದೇವೋತ್ತಮನೆ! ಈ ನನ್ನ ಅರ್ಘ್ಯವನ್ನು ಸ್ವೀಕರಿಸಿ ಸಂಪೂರ್ಣಫಲವನ್ನು ಕೊಡುವವನಾಗು.

೪೫. (ಪ್ರಾರ್ಥನಾಮಂತ್ರ) ಸ್ವಯಂಭುವೂ, ಸರ್ವವ್ಯಾಪಿಯೂ, ಅಪರಿಮಿತ ತೇಜೋಮಯನೂ ಆದ ನಿನಗೆ ನಮಸ್ಕಾರವು. ಲಕ್ಷ್ಮೀಸಹಿತನೂ, ಬ್ರಹ್ಮಾನಂದಮಯನೂ, ಕೃಪಾಸಮುದ್ರನೂ ಆದ ನಿನಗೆ ನಮಸ್ಕಾರವಿರಲಿ.

೪೬. ಇಂತೆಂದು ಶ್ರೀಮನ್ನಾರಾಯಣನಿಗೆ ಪ್ರಾರ್ಥನೆಯನ್ನು ಮಾಡಿಕೊಂಡು ಪತ್ನೀಸಮೇತರೂ, ಶುಚಿರ್ಭೂತರೂ, ಸುಸ್ನಾತರೂ ಆದ ಬ್ರಾಹ್ಮಣೋತ್ತಮರಲ್ಲಿ ಲಕ್ಷ್ಮೀನಾರಾಯಣರನ್ನಾವಾಹಿಸಿ ಅವರನ್ನು ಪೂಜಿಸಬೇಕು.

೪೭. ಪೂಜೆಯಾದ ಮೇಲೆ ಅವರನ್ನು ಘೃತಪಾಯಸಾದಿಗಳಿಂದ ಭೋಜನ ಮಾಡಿಸಬೇಕು.

೪೮. ವಿಧಿವಿಹಿತರೀತಿಯಿಂದ ತನ್ನ ಉಪಪತ್ತಿಗೆ ತಕ್ಕಂತೆ ಸಪತ್ನೀಕನೂ, ವಿದ್ಯಾವಿನಯಾದಿ ಸದ್ಗುಣಭರಿತನೂ ಆದ ಬ್ರಾಹ್ಮಣನನ್ನು ಪತ್ನಿಯೊಡನೆ ಭೋಜನಮಾಡಿಸಬೇಕು.

ಪೂಜಯಿತ್ವಾ ಯಥಾಶಕ್ತ್ಯಾ ವಸ್ತ್ರಾಽಲಂಕಾರಕುಂಕುಮೈಃ ।
ಗೋಸ್ತನ್ಯಾಮ್ರಕಪಿತ್ಥೈಶ್ಚ ಖರ್ಜೂರೈಃ ಕದಲೀಫಲೈಃ ॥ ೪೯ ॥
ಪನಸೈರ್ನಾರಿಕೇಲೈಶ್ಚ ನಾರಂಗೈರ್ದಾಡಿಮೈಸ್ತಥಾ ।
ಘೃತಪಕ್ವಾನ್ನಗೋಧೂಮೈಃ ಶುಭ್ರೈಃ ಸೋಮಾಲಿಕೈರ್ವಟೈಃ ॥ ೫೦ ॥
ಶರ್ಕರಾಘೃತಪೂರೈಶ್ಚ ಕರ್ಣಿಕೈಃ ಖಂಡಮಂಡಕೈಃ ।
ಉರ್ವಾರುಕರ್ಕಟೀಶಾಕೈಃ ಶೃಂಗಬೇರೈಃ ಸಮೂಲಕೈಃ ॥ ೫೧ ॥
ಅನ್ಯೈಶ್ಚ ವಿವಿಧೈಃ ಶಾಕೈರಾಮ್ರೈಃ ಪಕ್ವೈಃ ಪೃಥಕ್ಪೃಥಕ್ ।
ಭಕ್ಷ್ಯಭೋಜ್ಯಲೇಹ್ಯಪೇಯಕಂದಕಾನಿ ವಿಶೇಷತಃ ॥ ೫೨ ॥
ಸುವಾಸಿತಾನ್ ಗೋರಸಾಂಶ್ಚ ಪರಿವೇಷ್ಯ ಮೃದು ಬ್ರುವನ್ ।
ಇದಂ ಸ್ವಾದುರಸಂ ಭೋಜ್ಯಂ ಭವದರ್ಥೇ ಪ್ರಕಲ್ಪಿತಂ ॥ ೫೩ ॥
ಯಾಚ್ಯತಾಂ ರೋಚತೇ ಯಚ್ಚ ಯನ್ಮಯಾ ಪಾಚಿತಂ ಪ್ರಭೋ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಕೃತಂ ಸಾರ್ಥಂ ಚ ಮಂದಿರಂ ॥ ೫೪ ॥
ವಿಸರ್ಜಯೇತ್ತತೋ ವಿಪ್ರಾನ್ದತ್ವಾ ತಾಂಬೂಲದಕ್ಷಿಣಾಃ ।
ಚತುರ್ಭಿರ್ನಿರ್ಮಿತೈರ್ದೇವಿ ತಾಂಬೂಲಂ ಮಮ ವಲ್ಲಭಂ ॥ ೫೫ ॥

---

೪೯–೫೨. ಯಥಾಶಕ್ತಿಯಾಗಿ ವಸ್ತ್ರ, ಅಲಂಕಾರ, ಕುಂಕುಮಾದಿಗಳಿಂದ ಅರ್ಚಿಸಿ ದ್ರಾಕ್ಷೆ, ಮಾವು, ಬೇಲ, ಖರ್ಜೂರ, ಬಾಳೆ, ಹಲಸು, ತೆಂಗು, ಕಿತ್ತಳೆ, ದಾಳಿಂಬೆ, ಮುಂತಾದ ಹಣ್ಣುಗಳಿಂದಲೂ, ತುಪ್ಪದಲ್ಲಿ ಪಕ್ವವಾದ ಗೋಧಿಯನ್ನ, ಹೋಳಿಗೆಗಳು, ಒಡೆಗಳು, ಸಕ್ಕರೆ, ತುಪ್ಪಗಳಿಂದ ಮಾಡಿದ ಕಡುಬುಗಳು, ಮಂಡಿಗೆಗಳು, ಸೌತೆ, ಸೋರೆಕಾಯಿಗಳ ವ್ಯಂಜನಗಳು, ಬೇರಿನಿಂದೊಡಗೂಡಿದ ಶೊಂಠಿ, ಇತರ ಅನೇಕ ವಿಧಗಳಾದ ವ್ಯಂಜನಗಳು, ಪಕ್ವಗಳಾದ ಮಾವಿನ ಹಣ್ಣುಗಳು ಮುಂತಾದ ಭಕ್ಷ್ಯ, ಭೋಜ್ಯ, ಲೇಹ್ಯ, ಪಾನೀಯಗಳನ್ನೊಳಕೊಂಡ ಮೃಷ್ಟಾನ್ನ ಭೋಜನದಿಂದಲೂ ಅವರನ್ನು ತೃಪ್ತಿಗೊಳಿಸಬೇಕು.

೫೩–೫೪. ಸುವಾಸನೆಯುಳ್ಳ ಹಾಲು, ಮೊಸರು, ಬೆಣ್ಣೆ, ತುಪ್ಪಗಳಿಂದ ಅವರ ಭೋಜನವಾಗುವವರೆಗೂ ಸವಿಯಾಗಿ ಮೆಲ್ಲಗೆ ಮಾತನಾಡಿಸುತ್ತ, "ಈ ಬಹು ಸಿಹಿಯಾದ ಭೋಜ್ಯವು ನಿಮಗಾಗಿಯೇ ಮಾಡಲ್ಪಟ್ಟಿರುವುದು. ಸ್ವಾಮಿಯೆ! ನಾನು ಪಾಕಮಾಡಿರುವ ಪದಾರ್ಥಗಳಲ್ಲಿ ನಿಮಗೆ ಯಾವುದು ಇಷ್ಟವೊ, ಅದನ್ನು ಕೇಳಿರಿ; ಇಂದಿಗೆ ನಾನು ಧನ್ಯನಾದೆನು, ಅನುಗೃಹೀತನಾದೆನು; ನನ್ನ ಮನೆಯೇ ಸಾರ್ಥಕವಾಯಿತು" ಎಂದು ಉಪಚರಿಸಬೇಕು.

೫೫. ಬಳಿಕ ತಾಂಬೂಲವನ್ನೂ ದಕ್ಷಿಣೆಗಳನ್ನೂ ಕೊಟ್ಟು ಬ್ರಾಹ್ಮಣರಿಗೆ ಅಭಿವಾದನವನ್ನು ಮಾಡಿ ವಿಸರ್ಜಿಸಬೇಕು. ದೇವಿಯೆ! ನಾಲ್ಕು ಪದಾರ್ಥಗಳಿಂದೊಡಗೂಡಿದ ತಾಂಬೂಲವು ನನಗೆ ಅತ್ಯಂತ ಪ್ರಿಯವಾಗಿರುವುದು.

ಯೋ ದದಾತಿ ದ್ವಿಜಶ್ರೇಷ್ಠೇ ಸ ಭವೇತ್ಸುಭಗೋ ನರಃ ।
ಸುಭಗಾ ಚ ಸದಾಚಾರಾ ವಲ್ಲಭಾ ಸ್ವಜನೇ ಸದಾ ॥ ೫೬ ॥
ಪುತ್ರಸೌಭಾಗ್ಯಯುಕ್ತಾ ಚ ತಾಂಬೂಲೈರ್ಜಾಯತೇ ಪ್ರಿಯೇ ।
ಪತ್ರೈಸ್ತು ಕೇಶವಃ ಪ್ರೀತಃ ಪೂಗೈರೀಶಃ ಸಹೋಮಯಾ ॥ ೫೭ ॥
ಚೂರ್ಣಕೇನಾಽನಲಃ ಪ್ರೀತಃ ಖದಿರೇಣ ತು ಮನ್ಮಥಃ ।
ಚತುರ್ಭಿರ್ವಿಶ್ವರೂಪೋಽಸೌ ಯಃ ಪುಷ್ಣಾತಿ ಜಗತ್ತ್ರಯಂ ॥ ೫೮ ॥
ಪರಿತೋಷ್ಯ ಸಪತ್ನೀಕಾನ್ಹಸ್ತೇ ದತ್ವಾ ಚ ಮೋದಕಾನ್ ।
ಆಸೀಮಾಂತಮನುವ್ರಜ್ಯ ಭುಂಜೀತ ಸಹ ಬಂಧುಭಿಃ ॥ ೫೯ ॥
ಅಸಂಕ್ರಾಂತೇ ವ್ರತಂ ನಾರೀ ಯಾ ಕರೋತೀಹ ಸುಪ್ರಿಯೇ ।
ದಾರಿದ್ರ್ಯಂ ಪುತ್ರಶೋಕಂ ಚ ವೈಧವ್ಯಂ ನಾಪ್ನುಯಾತ್ ಕ್ವಚಿತ್ ॥ ೬೦ ॥
ನರೋ ವಾ ಯದಿ ವಾ ನಾರೀ ಯಃ ಕುರ್ಯಾಚ್ಚ ಮಲಿಮ್ಲುಚೇ ।
ಸ ಸರ್ವಸುಖಭೋಕ್ತಾ ಚ ಭವೇನ್ನಾಽಸ್ತ್ಯೇವ ಸಂಶಯಃ ॥ ೬೧ ॥

---

೫೬. ಇಂತಹ ತಾಂಬೂಲವನ್ನು ಯಾವನು ಬ್ರಾಹ್ಮಣೋತ್ತಮನಿಗೆ ನೀಡುವನೊ, ಆ ನರನು ಸೌಭಾಗ್ಯವಂತನಾಗುವನು. ಹಾಗೆ ಕೊಟ್ಟ ನಾರಿಯೂ ಸೌಭಾಗ್ಯವತಿಯೂ, ಸದಾಚಾರಯುತಳೂ, ಸ್ವಜನರಲ್ಲಿ ಯಜಮಾನಿಯೂ ಆಗುವಳು.

೫೭. ಪ್ರಿಯೆಯೆ ! ಈ ತಾಂಬೂಲದ ದಾನದಿಂದ ಆಕೆಯು ಪುತ್ರಪೌತ್ರರ ಸೌಭಾಗ್ಯವನ್ನೂ ಪಡೆಯುವಳು. ವೀಳೆಯದಲ್ಲಿ ಎಲೆಯಿಂದ ಶ್ರೀ ಹರಿಯು ಸುಪ್ರೀತನಾಗುವನು. ಅಡಿಕೆಯಿಂದ ಉಮಾಸಮೇತನಾದ ಮಹೇಶ್ವರನು ಸಂತೋಷಗೊಳ್ಳುವನು.

೫೮. ಚೂರ್ಣದ್ರವ್ಯಗಳಿಂದ ಅಗ್ನಿದೇವನು ಪ್ರೀತಿಗೊಳ್ಳುವನು. ಖದಿರ ದ್ರವ್ಯದಿಂದ (ಕಾಚಿನಿಂದ) ಮನ್ಮಥನು ತೃಪ್ತಿಗೊಳ್ಳುವನು. ಈ ನಾಲ್ಕು ಪದಾರ್ಥಗಳಿಂದ ಕೂಡಿದ ತಾಂಬೂಲದಿಂದ ಲೋಕಗಳನ್ನೆಲ್ಲ ಪೋಷಿಸುವ ವಿಶ್ವ ರೂಪಿಯಾದ ನಾರಾಯಣನು ಸಂತುಷ್ಟನಾಗುವನು.

೫೯. ಇಂತಹ ತಾಂಬೂಲದಿಂದ ಸಪತ್ನೀಕರಾದ ಬ್ರಾಹ್ಮಣರನ್ನು ಸಂತೋಷ ಗೊಳಿಸಿ ಅವರ ಕೈಗಳಿಗೆ ಮೋದಕಗಳ ಉಪಾಯನವನ್ನಿತ್ತು, ಮನೆಯ ಹೆಬ್ಬಾಗಿಲ ವರೆಗೂ ಅವರನ್ನು ಹಿಂಬಾಲಿಸಿ ಬಿಟ್ಟು ಬಂದು ಬಳಿಕ ಬಂಧುಗಳೊಡನೆ ತಾನೂ ಭೋಜನಮಾಡಬೇಕು.

೬೦. ಸಂಕ್ರಮಣವಿಲ್ಲದ (ಅಧಿಕ) ಮಾಸದಲ್ಲಿ ಯಾವ ನಾರೀಮಣಿಯು ಈ ವ್ರತವನ್ನಾಚರಿಸುವಳೊ, ಅವಳೆಂದಿಗೂ ದಾರಿದ್ರ್ಯವನ್ನಾಗಲಿ, ಪುತ್ರಶೋಕ ವನ್ನಾಗಲಿ, ವೈಧವ್ಯದುಃಖವನ್ನಾಗಲಿ ಅನುಭವಿಸುವುದಿಲ್ಲ.

೬೧. ಯಾವ ನರನೇ ಆಗಲಿ, ನಾರಿಯೇ ಆಗಲಿ, ಮಲಮಾಸದಲ್ಲಿ

ಮಲಿಮ್ಲುಚೇ ಪ್ರಾಪ್ಯ ನ ಪೂಜಿತೋ ಯೈ
ರ್ನಾರಾಯಣೋಽಹಂ ಪರಯೇಹ ಭಕ್ತ್ಯಾ ।
ಕಥಂ ಭವೇಯುಃ ಸುಖಪುತ್ರಸಂಪ
ತ್ಸುಹೃತ್ಸುಭಾರ್ಯಾಃ ಸುಗುಣೈರುಪೇತಾಃ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಪುರುಷೋತ್ತಮ ಮಾಹಾತ್ಮ್ಯೇ ದಾನಾದಿಮಾಹಾತ್ಮ್ಯವರ್ಣನಂ" ನಾಮ ಷಷ್ಟಿತಮೋಽಧ್ಯಾಯಃ

---

ಈ ಕಾರ್ಯವನ್ನು ಮಾಡುವರೊ, ಅವರು ಸಕಲ ಭೋಗಭಾಗ್ಯಗಳನ್ನನುಭವಿಸುವುದರಲ್ಲಿ ಯಾವ ಸಂದೇಹವೂ ಇಲ್ಲ.

೬೨. ಮಲಮಾಸವು ಪ್ರಾಪ್ತವಾಗಲು ಯಾರು ನಾರಾಯಣನಾದ ನನ್ನನ್ನು ಅತ್ಯಂತವಾದ ಭಕ್ತಿಯಿಂದ ಪೂಜಿಸುವುದಿಲ್ಲವೊ, ಅವರು ಉತ್ತಮ ಸೌಖ್ಯ, ಸಂತಾನ, ಐಶ್ವರ್ಯ, ಸ್ನೇಹ, ಪತ್ನೀ, ಸೌಶೀಲ್ಯಾದಿಗಳಿಂದ ಯುಕ್ತರಾಗುವುದೆಂತು?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಪುರುಷೋತ್ತಮಮಾಹಾತ್ಮ್ಯ—ದಾನಾದಿಮಾಹಾತ್ಮ್ಯವರ್ಣನ"ವೆಂಬ ಅರುವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

## ಅಥೈಕಷಷ್ಟಿತಮೋಽಧ್ಯಾಯಃ

### ಅಧಿಮಾಸಸ್ನಾನದಾನಾದಿಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

**ಅಧಿಮಾಸಂ ಸಮಾಸಾದ್ಯ ಯೋಽನ್ಯತ್ರ ಸ್ಥಿತಿಮಾತ್ಮನಃ ।**
**ಕರೋತಿ ಸ ನರೋ ಮೂರ್ಖೋ ಮಹಾಕಾಲವನಾದೃತೇ ॥ ೧ ॥**
**ಅಧಿಮಾಸೇ ನರೋ ವ್ಯಾಸ ತೀರ್ಥೇ ಪುರುಷೋತ್ತಮಾಽಭಿಧೇ ।**
**ಸ್ನಾತ್ವಾ ದತ್ವಾ ಚ ದಾನಾನಿ ತೇಷಾಂ ಲೋಕಾಃ ಸನಾತನಾಃ ॥ ೨ ॥**
**ಪುರುಷೋತ್ತಮಂ ಸಮಭ್ಯರ್ಚ್ಯ ರಮಾಲಾಲಿತಪಾದಕಂ ।**
**ತಥೈವ ಚ ಉಮಾಂ ದೇವೀಂ ಶಂಕರೇಣ ಚ ಪೂಜಯೇತ್ ॥ ೩ ॥**
**ವಾಂಛಿತಾರ್ಥಶತಂ ಪ್ರಾಪ್ಯ ವಿಷ್ಣುಲೋಕೇ ಮಹೀಯತೇ ।**
**ಭಾದ್ರಪದೇ ಸಿತೇ ಪಕ್ಷೇ ಏಕಾದಶ್ಯಾಂ ಸಮಾಹಿತಃ ।**
**ಉಪೋಷ್ಯ ವಿಧಿವದ್ವ್ಯಾಸ ರಾತ್ರೌ ಜಾಗರಣಂ ಚರೇತ್ ॥ ೪ ॥**

---

## ಕನ್ನಡದ ಅನುವಾದ

### ಅಧಿಮಾಸಸ್ನಾನದಾನಾದಿಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಅಧಿಮಾಸವನ್ನು ಹೊಂದಿದಾಗ ಯಾವನು ಮಹಾಕಾಲವನವನ್ನುಳಿದು ಇತರ ಕ್ಷೇತ್ರಗಳಲ್ಲಿ ಮನಸ್ಸನ್ನಿಡುವನೊ, ಅವನು ನಿಜವಾಗಿಯೂ ಮೂರ್ಖನೇ.

೨. ಎಲೈ ವ್ಯಾಸನೆ! ಅಧಿಕಮಾಸದಲ್ಲಿ ಪುರುಷೋತ್ತಮವೆಂಬ ತೀರ್ಥದಲ್ಲಿ ಸ್ನಾನವನ್ನು ಮಾಡಿ ದಾನಗಳನ್ನೀಯುವ ಮನುಷ್ಯನು ಶಾಶ್ವತವಾಗಿ ಸ್ವರ್ಗಾದಿ ಲೋಕಗಳನ್ನನುಭವಿಸುವನು.

೩. ಮೊದಲು ಲಕ್ಷ್ಮೀದೇವಿಯಿಂದ ಸೇವಿತವಾದ ಪಾದಯುಗಳವುಳ್ಳ ಪುರುಷೋತ್ತಮನನ್ನು ಪೂಜಿಸಿ ಬಳಿಕ ಮಹಾದೇವನ ಅರ್ಧಾಂಗಿಯಾದ ಉಮಾದೇವಿಯನ್ನು ಪೂಜಿಸಬೇಕು.

೪. ಹಾಗೆ ಮಾಡಿದ ಮಾನವನು ನೂರಾರು ಬಯಕೆಗಳನ್ನು ಪಡೆಯುವುದಲ್ಲದೆ ವಿಷ್ಣುಲೋಕದಲ್ಲಿ ವಾಸಮಾಡುವನು. ವ್ಯಾಸಮುನಿಯೆ! ಭಾದ್ರಪದ ಮಾಸದ ಶುಕ್ಲಪಕ್ಷದ ಏಕಾದಶೀ ದಿನದಲ್ಲಿ ಸಾವಧಾನಮನಸ್ಸಿನಿಂದ ಉಪವಾಸವನ್ನು ಹಗಲಿನಲ್ಲಿ ವಿಧಿಯಂತೆ ಮಾಡಿ ರಾತ್ರಿಯಲ್ಲಿ ಜಾಗರಣೆಯನ್ನಾಚರಿಸಬೇಕು.

ವಿಷ್ಣೋಃ ಪೂಜನಂ ಕಾರ್ಯಂ ಜಲಯಾತ್ರಾ ತಥೈವ ಚ ।
ಪುರುಷೋತ್ತಮಸರೇ ನಿತ್ಯಂ ತಸ್ಯ ಪುಣ್ಯಫಲಂ ಶೃಣು ॥ ೫ ॥
ಪುತ್ರದಾರಧನಂ ಸಮ್ಯಗಾಯುರಾರೋಗ್ಯಸಂಪದಃ ।
ನ ತೇಷಾಂ ದುರ್ಲಭಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥ ೬ ॥
ತಸ್ಯ ಪೂರ್ವತರೇ ಭಾಗೇ ಜಟೇಶ್ವರಮಹೇಶ್ವರಃ ।
ತಿಷ್ಠತಿ ತಾಪಸಸ್ತೀರೇ ಯತ್ರ ರಾಜಾ ಭಗೀರಥಃ ॥ ೭ ॥
ತಪಸ್ತಪ್ತ್ವಾ ಪರಂ ಲೇಭೇ ಪುಣ್ಯಂ ಪುಣ್ಯವತಾಂ ವರಃ ।
ಗಂಗಾಂ ಭೂತಲಮಾನೀಯ ಸರ್ವಲೋಕಸುಖಾಯ ವೈ ॥ ೮ ॥
ತಸ್ಯ ತೀರ್ಥೇ ನರಃ ಸ್ನಾತ್ವಾ ತಿಲಧೇನುಂ ಪ್ರದಾಪಯೇತ್ ।
ಸರ್ವಯಜ್ಞಫಲಂ ಪ್ರಾಪ್ಯ ಪುತ್ರವಾನ್ ಜಾಯತೇ ನರಃ ॥ ೯ ॥
ತಸ್ಯೇಶಾನತರೇ ಭಾಗೇ ರಾಮೋ ಭಾರ್ಗವಸತ್ತಮಃ ।
ತಪಸ್ತೇಪೇ ಸುಧರ್ಮಾತ್ಮಾ ಆತ್ಮಕಾಯವಿಶುದ್ಧಯೇ ॥ ೧೦ ॥

---

೫. ಮಹಾವಿಷ್ಣುವಿನ ಪೂಜೆಯನ್ನು ಮಾಡಬೇಕು. ನಿತ್ಯವೂ ಪುರುಷೋತ್ತಮಸರೋವರಕ್ಕೆ ಹೋಗಿ ಜಲಯಾತ್ರೆಯನ್ನೂ ನೆರವೇರಿಸಬೇಕು. ಈ ಆಚರಣೆಯ ಪುಣ್ಯಫಲವನ್ನು ಕೇಳು.

೬. ಇದನ್ನಾಚರಿಸಿದವರು ಇಹಲೋಕದಲ್ಲಿ ಹೆಂಡಿರು, ಮಕ್ಕಳು, ಧನ, ದೀರ್ಘಾಯುಷ್ಯ, ಆರೋಗ್ಯಗಳೇ ಮುಂತಾದ ಭಾಗ್ಯಗಳನ್ನು ಪಡೆಯುವರು. ಅವರಿಗೆ ಅಲಭ್ಯವಾದುದು ಮೂರು ಲೋಕಗಳಲ್ಲಿಯೇ ಯಾವುದೂ ಇಲ್ಲವು.

೭–೮. ಆ ತೀರ್ಥಕ್ಕೆ ಪೂರ್ವಭಾಗದಲ್ಲಿಯೇ ಜಟೇಶ್ವರನೆಂಬ ಮಹೇಶ್ವರನು ನೆಲಸಿರುವನು. ಅಲ್ಲಿಯೇ ಮಹಾರಾಜನಾದ ಭಗೀರಥನು ತಾಪಸವೇಷಧಾರಿಯಾಗಿ ಅತ್ಯುಗ್ರವಾದ ತಪಸ್ಸನ್ನಾಚರಿಸಿ ಪುಣ್ಯವಂತರಲ್ಲಿ ಅಗ್ರಗಣ್ಯನೆನಿಸಿ ತಾನೂ ಪುಣ್ಯವನ್ನು ಪಡೆದುದಲ್ಲದೆ ಸಕಲಲೋಕಗಳ ಜನರಿಗೂ ಹಿತವನ್ನುಂಟುಮಾಡಲು ದೇವಗಂಗೆಯನ್ನು ಭೂಲೋಕಕ್ಕೆ ತಂದನು.

೯. ಆ ಭಗೀರಥನ ತೀರ್ಥದಲ್ಲಿ ನರನು ಸ್ನಾನಮಾಡಿ ಎಳ್ಳಿನ ಆಕಳನ್ನು ದಾನಮಾಡಬೇಕು. ಅವನು ಸಕಲಯಜ್ಞಗಳನ್ನು ಮಾಡಿದ ಫಲವನ್ನು ಪಡೆದು ಪುತ್ರ ಪೌತ್ರ ಸಹಿತನಾಗುವನು.

೧೦–೧೧. ಆ ತೀರ್ಥದ ಈಶಾನ್ಯದಿಗ್ಭಾಗದಲ್ಲಿ ಧರ್ಮವಿಗ್ರಹನೆನಿಸಿದ ಪರುಶುರಾಮನು ತನ್ನ ಶರೀರಶುದ್ಧಿಗಾಗಿ ಮಹಾ ತಪಸ್ಸನ್ನಾಚರಿಸಿದನು. ಅಲ್ಲಿಯೇ ಸಕಲತೀರ್ಥಗಳ ಸೇವೆಯ ಫಲವನ್ನು ಕೊಡುವ ಕೌಶಿಕೀನದಿಯು

ಕೌಶಿಕೀ ಚ ಸರಿಚ್ಛ್ರೇಷ್ಠಾ ಸರ್ವತೀರ್ಥವರಪ್ರದಾ ।
ತತ್ರ ಸ್ನಾತ್ವಾ ನರೋ ಜಾತಿಹತ್ಯಾದೋಷವಿವರ್ಜಿತಃ ॥ ೧೧ ॥
ರಾಮೇಶ್ವರಂ ಸಮಾಲೋಕ್ಯ ಧೂತಪಾಪೋ ಭವೇನ್ನರಃ ॥ ೧೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ
" ಅಧಿಮಾಸಸ್ನಾನದಾನಾದಿಮಾಹಾತ್ಮ್ಯವರ್ಣನಂ "
ನಾಮೈಕಷಷ್ಠಿತಮೋಽಧ್ಯಾಯಃ

---

ಪ್ರವಹಿಸುತ್ತಿರುವುದು. ಆದರಲ್ಲಿ ಸ್ನಾನಮಾಡಿದ ನರನು ಬಂಧುಹತ್ಯಾದೋಷ ದಿಂದ ಮುಕ್ತನಾಗುವನು.

೧೨. ಅಲ್ಲಿರುವ ರಾಮೇಶ್ವರನ ದರ್ಶನವನ್ನು ತೆಗೆದುಕೊಂಡ ನರನು ಸಮಸ್ತಪಾಪಗಳನ್ನೂ ಕಳೆದುಕೊಳ್ಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ
ಮಹಾತ್ಮ್ಯದಲ್ಲಿ " ಅಧಿಮಾಸಸ್ನಾನದಾನಾದಿಮಾಹಾತ್ಮ್ಯವರ್ಣನ "ವೆಂಬ
ಅರುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಷಷ್ಟಿತಮೋಽಧ್ಯಾಯಃ

### ಗೋಮತೀತೀರ್ಥಕುಂಡಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

**ಗೋಮತೀಕುಂಡಂ ತ್ವಯಾ ಪ್ರೋಕ್ತಂ ಪುರಾ ಬ್ರಹ್ಮನ್ ಸನಾತನಂ ।**
**ಕಸ್ಮಿನ್ಕಾಲೇ ಕದಾ ಜಾತಂ ತನ್ನೋ ವದ ಸುವಿಸ್ತರಾತ್ ॥ ೧ ॥**

ಸನತ್ಕುಮಾರ ಉವಾಚ :—

**ಶೃಣುಷ್ವ ಭೋ ಮಹಾಪ್ರಾಜ್ಞ ಕಥಾಂ ಪಾಪಹರಾಂ ಪರಾಂ ।**
**ಗೋಮತೀಕುಂಡೋದ್ಭವಾಂ ಪುಣ್ಯಾಂ ಪುರಾ ರುದ್ರೇಣ ಭಾಷಿತಾಂ ॥ ೨ ॥**
**ನೈಮಿಷೇ ಚ ಸಮಾಸೀನಾ ಋಷಯಃ ಶೌನಕಾದಯಃ ।**
**ಕಥಯಂತಿ ಕಥಾಂ ಪುಣ್ಯಾಂ ಸರ್ವತೀರ್ಥೋದ್ಭವಾಂ ಶುಭಾಂ ॥ ೩ ॥**
**ತಸ್ಮಿನ್ನವಸರೇ ಪುಣ್ಯೇ ಕಾಶೀಮಾಹಾತ್ಮ್ಯಮುತ್ತಮಂ ।**
**ಕಥಿತಂ ನಾರದೇನೈವ ಪವಿತ್ರಂ ಪಾಪಹಾರಕಂ ॥ ೪ ॥**
**ಊಷರಃ ಪುಣ್ಯಪಾಪಾನಾಂ ಧನ್ಯಾ ವಾರಾಣಸೀ ಪುರೀ ।**
**ಧ್ರುವಂ ಲಭಂತೇ ಮೋಕ್ಷಂ ಚ ಸಮಂ ಚಂಡಾಲಪಂಡಿತಾಃ ॥ ೫ ॥**

---

## ಕನ್ನಡದ ಅನುವಾದ

### ಗೋಮತೀತೀರ್ಥಕುಂಡಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಅಯ್ಯಾ ಬ್ರಹ್ಮಜ್ಞನೆ! ನೀನು ಹಿಂದೆ ಸನಾತನವಾಗಿ ನೆಲಸಿರುವ ಗೋಮತೀತೀರ್ಥವನ್ನು ಪ್ರಶಂಸಿಸಿದೆಯಲ್ಲವೆ, ಅದು ಯಾವ ಕಾಲದಲ್ಲಿ ಹೇಗೆ ಉಂಟಾಯಿತೆಂಬುದನ್ನು ವಿಸ್ತಾರವಾಗಿ ನಮಗೆ ಹೇಳು.

೨. ಸನತ್ಕುಮಾರನು ಹೇಳುತ್ತಾನೆ:—ಗೋಮತೀತೀರ್ಥವು ಉದಯಿಸಿದ ಈ ಪುಣ್ಯಕಥೆಯನ್ನು ಹಿಂದೆ ರುದ್ರನೇ ಹೇಳಿರುವನು. ಮಹಾಪ್ರಾಜ್ಞನಾದ ನೀನು ಸರ್ವೋತ್ತಮವಾದ ಆ ಚರಿತ್ರೆಯನ್ನು ಕೇಳು.

೩. ನೈಮಿಷಾರಣ್ಯದಲ್ಲೊಮ್ಮೆ ಶೌನಕನೇ ಮೊದಲಾದ ಮಹರ್ಷಿಗಳು ನೆರೆದು ಲೋಕದ ಸಮಸ್ತತೀರ್ಥಗಳು ಉದ್ಭವಿಸಿದ ಪುಣ್ಯಕಥೆಗಳನ್ನು ತಮ್ಮ ತಮ್ಮಲ್ಲಿ ಹೇಳಿಕೊಳ್ಳುತ್ತಿದ್ದರು.

೪. ಆ ಸುಸಮಯದಲ್ಲಿಯೇ ಉತ್ತಮವೂ, ಪವಿತ್ರವೂ, ಪಾಪನಾಶಕವೂ ಆದ ಕಾಶೀಮಾಹಾತ್ಮ್ಯವನ್ನು ನಾರದಮುನಿಯು ವಿಸ್ತಾರವಾಗಿ ನಿರೂಪಿಸಿದನು.

೫. ಪುಣ್ಯಪಾಪಗಳ ಬೀಜಗಳಿಗೆ ಊಷರಕ್ಷೇತ್ರದಂತಿರುವ ವಾರಾಣಸೀ ಕ್ಷೇತ್ರವು ಪರಮ ಪುಣ್ಯಪ್ರದವಾದುದು. ಅಲ್ಲಿ ನಿಶ್ಚಯವಾಗಿಯೂ ಚಂಡಾಲನೂ ಪಂಡಿತನೂ ನಿರ್ವಿಶೇಷವಾದ ಮೋಕ್ಷವನ್ನು ಪಡೆಯುವರು.

ಅಸೀವರಣಯೋರ್ಮಧ್ಯೇ ಪಂಚಕ್ರೋಶೀ ಮಹಾಫಲಂ ।
ಅಮರಾ ಮರಣಮಿಚ್ಛಂತಿ ಕಾ ಕಥಾ ಇತರೇ ಜನಾಃ ॥ ೬ ॥
ಇತಿ ಸ್ಮೃತ್ವಾ ತದಾ ವ್ಯಾಸ ಸ್ವಯಂಭೂಃ ಪ್ರತ್ಯಭಾಷತ ।
ಶೃಣ್ವತಾಂ ಸರ್ವದೇವಾನಾಮೃಷೀಣಾಂ ಚ ಪರಂತಪ ॥ ೭ ॥
ನದೀ ನ ಗೋಮತೀತುಲ್ಯಾ ಕೃಷ್ಣತುಲ್ಯಾ ನ ದೇವತಾ ।
ಸರ್ವಪಾತಾಲಭೂಮಧ್ಯೇ ನ ದ್ವಾರಕಾಸಮಾ ಪುರೀ ॥ ೮ ॥
ಇತಿ ತೇ ನಿಶ್ಚಯಂ ಜ್ಞಾತ್ವಾ ಋಷಯಃ ಶೌನಕಾದಯಃ ।
ಯತ್ರ ತತ್ರ ಸ್ಥಿತಾಃ ಸರ್ವೇ ಪ್ರಾತಃಸಂಧ್ಯಾಮುಪಾಸಿತುಂ ॥ ೯ ॥
ತತ್ರೈವ ಗೋಮತೀತೀರೇ ಚಕ್ರುಸ್ತೇ ವೈ ಧೃತವ್ರತಾಃ ।
ಸಾಂದೀಪನೋಽಪಿ ತತ್ರೈವ ಪ್ರಾತಃಸಂಧ್ಯಾಂ ಸಮಾಚರತ್ ॥ ೧೦ ॥
ಏವಂ ಬಹುತಿಥೇ ಕಾಲೇ ಚರತಸ್ತಸ್ಯ ವೈ ವ್ರತಂ ।
ಸಾಂದೀಪನಸ್ಯ ವೈ ವ್ಯಾಸ ಹ್ಯವಂತೀಪುರವಾಸಿನಃ ॥ ೧೧ ॥
ತಸ್ಯೈವ ಕಾಮಪೂರ್ತ್ಯರ್ಥಂ ವಿದ್ಯಾರ್ಥಿನೌ ರಾಮಜನಾರ್ದನೌ ।
ಸಮಾಯಾತೌ ಸುಕುಮಾರಾಂಗೌ ಸತತಂ ಬ್ರಹ್ಮಚಾರಿಣೌ ॥ ೧೨ ॥

---

೬. ಅಸೀ ಮತ್ತು ವರಣಾದಿಗಳ ಮಧ್ಯದಲ್ಲಿರುವ ಐದುಕ್ರೋಶಗಳ ಪ್ರದೇಶವು ಮಹಾಫಲದಾಯಕವು, ದೇವತೆಗಳೂ ಅಲ್ಲಿ ಮರಣವನ್ನಿಚ್ಛಿಸುವ ರೆಂದಮೇಲೆ ಇತರ ಜನರ ಪಾಡೇನು ?

೭. ಪರಂತಪನಾದ ವ್ಯಾಸನೆ! ಇಂತೆಂದ ನಾರದನ ಮಾತುಗಳನ್ನು ಕೇಳಿ ಸಕಲದೇವತೆಗಳೂ ಮಹರ್ಷಿಗಳೂ ಕೇಳುತ್ತಿರಲು ಬ್ರಮ್ಹದೇವನು ಇಂತೆಂದು ಪ್ರತಿವಚನವನ್ನಾಡಿದನು.

೮. "ಗೋಮತಿಗೆ ಸಮಾನವಾದ ನದಿಯು ಬೇರೊಂದಿಲ್ಲ. ಶ್ರೀಕೃಷ್ಣನಿಗೆ ಸಮನಾದ ದೇವತೆಯು ಮತ್ತೊಬ್ಬನಿಲ್ಲ. ಸಕಲ ಪಾತಾಳ ಮತ್ತು ಭೂಲೋಕ ಗಳ ಮಧ್ಯದಲ್ಲಿ ದ್ವಾರಕೆಗೆ ತುಲ್ಯವಾದ ಪಟ್ಟಣವಿಲ್ಲ."

೯–೧೦. ಇಂತೆಂದ ಚತುರ್ಮುಖನ ನಿಶ್ಚಯವನ್ನು ಕೇಳಿ ಶೌನಕಾದಿ ಮಹರ್ಷಿಗಳೆಲ್ಲರೂ ತಾವು ಪ್ರಾತಸ್ಸಂಧ್ಯೋಪಾಸನೆಗಳಿಗಾಗಿ ಆಶ್ರಯಿಸಿದ್ದ ಸ್ಥಳ ಗಳನ್ನು ಬಿಟ್ಟು ಬಂದು ಆ ಗೋಮತೀನದಿಯ ತೀರದಲ್ಲಿಯೇ ದೃಢನಿಯಮದಿಂದ ನಿತ್ಯಕರ್ಮಗಳನ್ನು ಮಾಡುತ್ತಿದ್ದರು. ಸಾಂದೀಪನ್ಯಾಚಾರ್ಯನೂ ಸಹ ಅಲ್ಲಿಯೇ ಪ್ರಾತಃಕಾಲದ ಸಂಧ್ಯಾಕರ್ಮವನ್ನು ನೆರವೇರಿಸಿದನು.

೧೧. ಇಂತು ಅವಂತೀನಗರವಾಸಿಯಾದ ಆ ಸಾಂದೀಪನಿಯು ಬಹಳ ಕಾಲದವರೆಗೂ ನಿಯಮದಿಂದ ಅಲ್ಲಿಯೆ ಅನುಷ್ಠಾನಗಳನ್ನು ಮಾಡುತ್ತಿದ್ದನು.

೧೨. ಆತನ ಮನೋಭೀಷ್ಟಗಳನ್ನು ಪೂರ್ಣಗೊಳಿಸಲೊ ಎಂಬಂತೆ

ನಿವಾಸಂ ಚಕ್ರತುಸ್ತಸ್ಯ ಗುರೋರ್ಗೇಹೇ ಪರಂತಪ ।
ತಸ್ಯ ಪಾಠಯುತಃ ಸಮ್ಯಗ್ವಿದ್ಯಾಂ ಸರ್ವಶ್ರುತೀಃ ಪರಂ ॥ ೧೩ ॥
ಉಷಸ್ಯುಷಸಿ ತತ್ರೈವ ದೃಶ್ಯತೇ ನ ತದಾ ಗುರುಃ ।
ವಿದ್ಯೋಪದೇಶಕಾಲೋಽಯಂ ಕ್ವ ಗತೋ ನೌ ಗುರುರ್ವರಃ ॥ ೧೪ ॥
ಇತಿ ಪೃಷ್ಟೇ ತಯೋರೇವಂ ಗುರುಪತ್ನೀ ಹ್ಯುವಾಚ ಹ ।
ಸದೈವ ಕುರುತೇ ವತ್ಸ ಪ್ರಾತಃಸಂಧ್ಯಾದ್ಯುಪಾಸನಂ ॥ ೧೫ ॥
ತತ್ರೈವ ಯಾತಿ ವೈ ನಿತ್ಯಂ ಗುರುಸ್ತೇ ಸ್ನಾನಕಾರಣಾತ್ ।
ಗೋಮತೀ ವೈ ಸರಿಚ್ಛ್ರೇಷ್ಠಾ ದ್ವಾರಕಾಯಾಂ ಚ ಪಾವನೀ ॥ ೧೬ ॥
ಇತಿ ಶ್ರುತ್ವಾ ತದಾ ಕೃಷ್ಣೋ ರಾಮೇಣ ಸಹ ಸಂಯುತಃ ।
ಕಿಂ ಕರ್ತವ್ಯಮಿಹಾಽಸ್ಮಾಭಿರಾತ್ಮನೋ ಹಿತಮುತ್ತಮಂ ॥ ೧೭ ॥
ಗುರೋರಾಗಮನಂ ಕಾಂಕ್ಷೇ ಅತ್ರೈವ ಸ್ಥಿತಿಕಾಂಕ್ಷಯಾ ।
ಏತಸ್ಮಿನ್ನೇವ ಕಾಲೇ ತು ಸಾಂದೀಪನಿರಗಾದ್ಗೃಹಂ ॥ ೧೮ ॥

---

ಸುಂದರಶರೀರಾವಯವಗಳುಳ್ಳವರೂ, ನಿತ್ಯಬ್ರಹ್ಮಚಾರಿಗಳೂ ಆದ ಬಲರಾಮ ಶ್ರೀಕೃಷ್ಣರಿಬ್ಬರೂ ವಿದ್ಯಾಭ್ಯಾಸಕ್ಕಾಗಿ ಅವನಲ್ಲಿಗೆ ಬಂದರು.

೧೩. ವ್ಯಾಸನೆ! ಅವರಿಬ್ಬರೂ ಆತನ ಮನೆಯಲ್ಲಿಯೇ ವಾಸಮಾಡ ತೊಡಗಿದರು. ಆತನೂ ಆದರದಿಂದ ಅವರಿಗೆ ಸಕಲವಿದ್ಯೆಗಳನ್ನೂ ಸಮಸ್ತ ವೇದಗಳನ್ನೂ ಪಾಠಮಾಡಿಸಿದನು.

೧೪. ಪ್ರತಿದಿನದ ಪ್ರಾತಃಕಾಲದಲ್ಲಿಯೂ ಗುರುವು ಮನೆಯಲ್ಲಿ ಕಾಣದಿದ್ದು ದನ್ನು ಕಂಡು ಅವರಿಬ್ಬರೂ, "ಇದು ವಿದ್ಯೋಪದೇಶಕ್ಕೆ ಉಚಿತಕಾಲವಾದರೂ ನಮ್ಮ ಗುರುವರ್ಯನು ಎಲ್ಲಿಗೆ ಹೋಗಿರಬಹುದು?" ಎಂದು ಚಿಂತಿಸು ತ್ತಿದ್ದರು.

೧೫. ಒಮ್ಮೆ ಇದನ್ನು ಕೇಳಿದ ಅವರಿಗೆ ಗುರುಪತ್ನಿಯು ಇಂತೆಂದಳು. "ಮಕ್ಕಳಿರಾ! ನಿಮ್ಮ ಗುರುವು ನಿತ್ಯವೂ ಉಷಃಕಾಲದಲ್ಲಿ ಪ್ರಾತಸ್ಸಂಧ್ಯಾ ಕಾರ್ಯಕ್ಕಾಗಿ ಹೋಗುವನು.

೧೬. ದ್ವಾರಕೆಯಲ್ಲಿ ಪರಮಪವಿತ್ರವಾದ ಗೋಮತಿಯೆಂಬ ಶ್ರೇಷ್ಠ ನದಿಯಿರುವುದಷ್ಟೆ. ಆತನು ಅಲ್ಲಿಗೇ ನಿತ್ಯವೂ ಸ್ನಾನಮಾಡುವುದಕ್ಕಾಗಿ ಹೋಗಿ ಬರುವನು."

೧೭. ಈ ಮಾತುಗಳನ್ನು ಕೇಳಿ ಕೃಷ್ಣನು ಬಲರಾಮನೊಡನೆ, "ಆತನಿಗೆ ಹಿತವನ್ನುಂಟುಮಾಡಲು ನಾವು ಈಗ ಹೇಗೆ ನಡೆದುಕೊಳ್ಳೋಣ?

೧೮. ಇಲ್ಲಿಯೇ ಆತನು ನಿಂತಿರುವಂತೆ ಮಾಡಬೇಕು. ಹೇಗೂ ಗುರುವು ಬರುವವರೆಗೆ ಕಾದಿರೋಣ" ಎಂದು ಚಿಂತಿಸುತ್ತಿದ್ದನು. ಇಷ್ಟರಲ್ಲಿಯೇ ಸಾಂದೀಪನ್ಯಾಚಾರ್ಯನೂ ಮನೆಗೆ ಹಿಂದಿರುಗಿದನು.

**ತತ ಉತ್ಥಾಯ ತೌ ವೀರೌ ಗುರೋರಾವಂದನಂ ತತಃ ।**
**ಪ್ರಶ್ರಯಾಽವನತೌ ಕೃತ್ವಾ ಹ್ಯಬ್ರೂತಾಂ ವಚನಂ ಗುರುಂ ॥ ೧೯ ॥**
**ಶ್ರೂಯತಾಂ ಭೋ ಮಹಾಯೋಗಿನ್ನಸ್ಮಾಕಂ ವಾಸಕಾರಣಂ ।**
**ವಿದ್ಯಾರ್ಥಿನಾವಿಹ ಪ್ರಾಪ್ತೌ ಯುಷ್ಮಾಕಂ ಚ ಗೃಹೋತ್ತಮೇ ॥ ೨೦ ॥**
**ಪ್ರಾತಃಕಾಲೇ ಚ ತೇ ಬ್ರಹ್ಮನ್ಸಮಯೋ ನಾಽಸ್ತಿ ನೌ ಪ್ರಭೋ ।**
**ಏತಚ್ಛ್ರುತ್ವಾ ವಚಸ್ತಸ್ಯ ಕೃಷ್ಣಸ್ಯ ಚ ಬಲಸ್ಯ ಚ ॥ ೨೧ ॥**
**ಉವಾಚ ಭಗವಾನ್ ವ್ಯಾಸ ಆತ್ಮನೋ ವ್ರತಕಾರಣಂ ।**
**ಅಸ್ಮಾಕಂ ಪರಮಂ ವತ್ಸ ವ್ರತಂ ವೈ ಶಾಶ್ವತಂ ಮತಂ ॥ ೨೨ ॥**
**ಗೋಮತೀಸ್ನಾನಂ ಕರ್ತವ್ಯಂ ಪ್ರಾತಃಕಾಲೇ ಸದಾ ಬುಧೈಃ ।**
**ತತ್ರೈವೋಪಾಸನಂ ಪುಣ್ಯಂ ಸಂಧ್ಯಾಯಾ ಇತಿ ನಿಶ್ಚಿತಂ ॥ ೨೩ ॥**
**ಇತಿ ನಿಶ್ಚಿತ್ಯ ಯುಷ್ಮಾಭಿರ್ಯದ್ಯೋಗಂ ಕ್ರಿಯತಾಂ ತಥಾ ।**
**ತಚ್ಛ್ರುತ್ವಾ ಭಗವಾನ್ ವಿಷ್ಣುರ್ಮಾಯಾಮಾನುಷರೂಪವಾನ್ ॥ ೨೪ ॥**
**ಗೋಮತ್ಯಾರಾಧನಂ ಚಕ್ರೇ ಕುಶಸ್ಥಲ್ಯಾಂ ದ್ವಿಜೋತ್ತಮ ।**
**ಯತ್ರ ಶಿವೇಶ್ವರೋ ದೇವೋ ಯಜ್ಞಕುಂಡಮನುತ್ತಮಂ ॥ ೨೫ ॥**

---

೧೯. ಆಗ ಆ ವೀರರಿಬ್ಬರೂ ಸಂಭ್ರಮದಿಂದ ಎದ್ದು ನಿಂತು ಗುರುವಿಗೆ ವಂದನೆಗಳನ್ನು ಮಾಡಿ ವಿನೀತಭಾವವನ್ನು ತೋರಿಸುತ್ತ ಆತನಿಗೆ ಇಂತೆಂದು ನಿವೇದನೆಯನ್ನು ಮಾಡಿದರು.

೨೦. "ಎಲೈ ಮಹಾಯೋಗಿಯೆ! ಲಾಲಿಸುವವನಾಗು. ನಾವು ಇಲ್ಲಿ ವಾಸಮಾಡುತ್ತಿರಲು ಕಾರಣವನ್ನು ತಿಳಿಸುವೆವು. ನಿನ್ನ ಈ ಉತ್ತಮಗೃಹಕ್ಕೆ ನಾವು ವಿದ್ಯಾರ್ಜನೆಯನ್ನು ಮಾಡಲು ಬಂದಿರುವೆವು.

೨೧–೨೨. ಬ್ರಾಹ್ಮಣೋತ್ತಮನೆ! ನಮಗೆ ಅಭ್ಯಾಸಸಮಯವಾದ ಪ್ರಾತಃಕಾಲವು ತಮಗೆ ಅನುಕೂಲವಾದ ಸಮಯವಾಗಿಲ್ಲ." ಇಂತೆಂದ ಬಲರಾಮಕೃಷ್ಣರ ಮಾತುಗಳನ್ನು ಸಾಂದೀಪನಿಯು ಕೇಳಿ ತನ್ನ ನಿಯಮದ ಪ್ರಕಾರವನ್ನು ಅವರಿಗೆ ತಿಳಿಸಿದನು. "ಮಗುವೆ! ಸರ್ವೋತ್ತಮವಾದ ಈ ವ್ರತವು ನನಗೆ ಯಾವಜ್ಜೀವವೂ ಅನುಷ್ಠೇಯವಾಗಿರುವುದು.

೨೩–೨೪. ಪ್ರಾಜ್ಞರಾದವರು ಪ್ರಾತಃಕಾಲದಲ್ಲಿ ಗೋಮತಿಯಲ್ಲಿ ಸ್ನಾನವನ್ನು ಮಾಡಬೇಕು. ಅಲ್ಲಿಯೇ ಪ್ರಾತರಾಹ್ನಿಕಕೃತ್ಯವನ್ನೂ ಮಾಡಬೇಕೆಂಬುದೇ ಶಾಸ್ತ್ರನಿಶ್ಚಯವಾಗಿರುವುದು. ಇದನ್ನು ನೀವು ತಿಳಿದುಕೊಂಡು ನಿಮಗೆ ಯೋಗ್ಯವಾಗಿ ತೋರಿದಂತೆ ಮಾಡಿರಿ." ಈ ಮಾತನ್ನು ಮಾಯಾಮಾನುಷವಿಗ್ರಹನಾದ ಮಹಾವಿಷ್ಣುವು ಕೇಳಿದನು.

೨೫–೨೬. ಬ್ರಾಹ್ಮಣಶ್ರೇಷ್ಠನೆ! ಕುಶಸ್ಥಳೀಕ್ಷೇತ್ರಕ್ಕೆ ಬಂದು ಆತನು ಶಿವೇಶ್ವರಮಹಾಲಿಂಗವೂ ಸರ್ವೋತ್ತಮವಾದ ಯಜ್ಞಕುಂಡವೂ ಇರುವಲ್ಲಿ

ಕಂಥಡೇಶ್ವರಸ್ಯೋತ್ತರೇ ಭಾಗೇ ಗೋಮತೀ ಸಾ ಸಮಾಗತಾ ।
ಪಾತಾಲತಲಮಾಭೇದ್ಯ ಸರಸ್ವತ್ಯಾ ಸಹಾಗತಾ ॥ ೨೬ ॥
ಪ್ರಾತರುತ್ಥಾಯ ತೇ ಸರ್ವೇ ಗೋಮತೀಂ ಸರಿತಾಂ ವರಾಂ ।
ದದೃಶುಃ ಸುಚಿರಾಽಪಾಂಗೀಂ ವ್ಯಾಸ ಸ್ವಾಶ್ರಮಗಾಮಿನೀಂ ॥ ೨೭ ॥

ಶ್ರೀ ಕೃಷ್ಣ ಉವಾಚ:—

ಅತ್ರೈವ ಚಾಗತಾ ಬ್ರಹ್ಮನ್ಗೋಮತೀ ಸರಿತಾಂ ವರಾ ।
ಸ್ನಾನದಾನಾದಿಕಂ ಸರ್ವಮತ್ರೈವ ಸಮುಪಾಸಯ ॥ ೨೮ ॥
ಗೋಮತ್ಯತ್ರ ಸಮಾಲೀನಾ ಯಜ್ಞಕುಂಡೇ ಸರಸ್ವತೀ ।
ತದಾ ಪ್ರಭೃತಿ ಲೋಕೇಽಸ್ಮಿನ್ ಗೋಮತೀಕುಂಡಮುಚ್ಯತೇ ॥ ೨೯ ॥
ಸರ್ವೇಷಾಮಪಿ ಲೋಕಾನಾಂ ಮಾರ್ಗೋಽತ್ರೈವ ಚ ವಿದ್ಯತೇ ।
ತಸ್ಮಾದ್ವ್ಯಾಸ ಮಹಾಪುಣ್ಯಂ ಭುವಿ ತೀರ್ಥಮನುತ್ತಮಂ ॥ ೩೦ ॥
ಗೋಮತೀಕುಂಡಮಾಖ್ಯಾತಂ ಸರ್ವಪಾಪಪ್ರಣಾಶನಂ ।
ಭಾದ್ರೇ ಮಾಸ್ಯಸಿತಾಷ್ಟಮ್ಯಾಂ ಕೃಷ್ಣಜನ್ಮಸಮುದ್ಭವಂ ॥ ೩೧ ॥

---

ಗೋಮತೀ ನದ್ಯಭಿಮಾನಿದೇವತೆಯನ್ನು ಆರಾಧಿಸಿದನು. ಆ ಪೂಜೆಯ ಫಲವಾಗಿ ಗೋಮತೀನದಿಯೇ ಕಂಥಡೇಶ್ವರನಿಗೆ ಉತ್ತರಭಾಗದಲ್ಲಿ ಪಾತಾಳವನ್ನು ಭೇದಿಸಿಕೊಂಡು ಹೊರಚಿಮ್ಮಿ ಸರಸ್ವತಿಯೊಡನೆ ಕೂಡಿ ಹರಿಯಿತು.

೨೭. ಅಯ್ಯಾ ವ್ಯಾಸನೆ! ಮಾರನೆಯ ಪ್ರಾತಃಕಾಲದಲ್ಲಿ ಅವರೆಲ್ಲರೂ ಎದ್ದು ಪೂರ್ಣಪ್ರವಾಹದಿಂದ ಆಶ್ರಮದ ಸಮೀಪದಲ್ಲಿಯೇ ಹರಿಯುತ್ತಿರುವ ಉತ್ತಮ ನದಿಯಾದ ಗೋಮತಿಯನ್ನು ಕಂಡರು.

೨೮. ಶ್ರೀಕೃಷ್ಣನು ಹೇಳುತ್ತಾನೆ:—ಗುರುವರ್ಯನೆ! ನದಿಗಳಲ್ಲಿ ಶ್ರೇಷ್ಠವೆನಿಸಿದ ಗೋಮತಿಯು ಇಲ್ಲಿಗೇ ಬಂದಿರುವುದು. ಇಲ್ಲಿಯೇ ನಿಮ್ಮ ಸ್ನಾನದಾನಾದಿಗಳನ್ನೆಲ್ಲ ಇನ್ನು ಮೇಲೆ ತೀರಿಸಿಕೊಳ್ಳಿರಿ.

೨೯. ಗೋಮತಿಯು ಸರಸ್ವತಿಯೊಡನೆ ಸೇರುವ ಈ ತೀರ್ಥವೇ ಯಜ್ಞಕುಂಡವಾಯಿತು. ಅಂದಿನಿಂದ ಅದಕ್ಕೆ ಲೋಕದಲ್ಲಿ ಗೋಮತೀಕುಂಡವೆಂದೇ ಹೆಸರಾಯಿತು.

೩೦. ಸಕಲಲೋಕಗಳ ಜಂತುಗಳಿಗೂ ಮೋಕ್ಷಮಾರ್ಗವು ಇಲ್ಲಿಯೇ ಸುಲಭಸಾಧ್ಯವಾಗಿರುವುದು. ಎಲೈ ವ್ಯಾಸನೆ! ಆದುದರಿಂದ ಈ ತೀರ್ಥವು ಸಕಲ ಭೂಮಂಡಲದಲ್ಲಿಯೇ ಮಹಾಪುಣ್ಯಪ್ರದವೂ, ಸರ್ವೋತ್ತಮವೂ ಆಗಿರುವುದು.

೩೧. ಈ ಗೋಮತೀತೀರ್ಥವು ಸಕಲಪಾತಕಗಳನ್ನೂ ನಾಶಗೊಳಿಸುವುದೆಂಬುದಾಗಿ ಪ್ರಖ್ಯಾತಿಯನ್ನು ಪಡೆದಿರುವುದು. ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ ಅಷ್ಟಮಿಯ ದಿನ ಶ್ರೀಕೃಷ್ಣನ ಜನ್ಮೋತ್ಸವವಷ್ಟೆ.

ತತ್ರ ಸ್ನಾತ್ವಾ ನರೋ ನಿತ್ಯಂ ರಾತ್ರೌ ಜಾಗರಣಂ ಚರೇತ್ ।
ಉಪೋಷ್ಯ ವಿಧಿವದ್ವ್ಯಾಸ ಸಶಿಷ್ಯಂ ವ್ಯಾಸಮರ್ಚಯೇತ್ ॥ ೩೨ ॥
ವೈಷ್ಣವಾಂಶ್ಚ ನರಾಂಶ್ಚೈವ ಕೃಷ್ಣಜನ್ಮೋತ್ಸುಕಾನ್ವರಾನ್ ।
ನಾನಾಸುಗಂಧಪುಷ್ಪಾದ್ಯೈರ್ವಸ್ತ್ರಾಲಂಕಾರಸಂಯುತೈಃ ॥ ೩೩ ॥
ಗೋಬ್ರಾಹ್ಮಣಾನಾಂ ಪೂಜಾಶ್ಚ ಕ್ರಿಯಂತೇ ಯೈಃ ಸಮಾಹಿತೈಃ ।
ನ ತೇಷಾಂ ದುರ್ಲಭಂ ಕಿಂಚಿತ್ಸ್ವರ್ಗಲೋಕೇಷು ವಿದ್ಯತೇ ॥ ೩೪ ॥
ಗೋಮತೀಸ್ನಾನಜಾತ್ಪುಣ್ಯಾದ್ವಾಸುದೇವಸಮಾಗಮಾತ್ ।
ಮನೋರಥಫಲಪ್ರಾಪ್ತಿರ್ಜಾಯತೇ ನಾಽತ್ರ ಸಂಶಯಃ ॥ ೩೫ ॥
ತಥಾ ಚೈತ್ರಸಿತೇ ಪಕ್ಷೇ ಯಾವಚ್ಚೈಕಾದಶೀ ಭವೇತ್ ।
ತದ್ದಿನೇ ಚ ನರಃ ಸ್ನಾತ್ವಾ ಗೋಮತ್ಯಾಂ ಚ ವಿಶೇಷತಃ ॥ ೩೬ ॥
ರಾತ್ರೌ ಜಾಗರಣಂ ಕೃತ್ವಾ ವಿಷ್ಣುಪೂಜಾಂ ತಥೈವ ಚ ।
ಆಮಲಕೀಂ ತತೋ ಗತ್ವಾ ಪ್ರದಕ್ಷಿಣಾತ್ಪದೇಪದೇ ॥ ೩೭ ॥

---

೩೨. ಅಂದು ಅಲ್ಲಿ ಮಾನವನು ಸ್ನಾನವನ್ನು ಮಾಡಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ವ್ಯಾಸನೆ! ಅವನು ಉಪವಾಸವನ್ನೂ ಮಾಡಿದವನಾಗಿ ವಿಧಿವಿಹಿತರೀತಿಯಿಂದ ನಿನ್ನ ಪೂಜೆಯನ್ನೂ ನೆರವೇರಿಸಬೇಕು.

೩೩. ವಿಷ್ಣುಭಕ್ತರೂ, ಕೃಷ್ಣಜನ್ಮೋತ್ಸವದಲ್ಲಿ ಆಸಕ್ತರಾಗಿರುವವರೂ, ಉತ್ತಮಭಕ್ತರೂ ಆದ ಜನರನ್ನು ಬಹು ವಿಧಗಳಾದ ಗಂಧಪುಷ್ಪಾದಿಗಳಿಂದ ಪೂಜಿಸಬೇಕು.

೩೪. ಅಂದು ಯಾರು ಸಮಾಧಾನಸಹಿತವಾದ ಮನಸ್ಸಿನಿಂದ ಗೋವುಗಳನ್ನೂ ಬ್ರಾಹ್ಮಣರನ್ನೂ ಪೂಜಿಸುವರೊ, ಅವರಿಗೆ ಮೂರು ಲೋಕಗಳಲ್ಲಿಯೂ ದುರ್ಲಭವಾದುದು ಯಾವುದೂ ಇಲ್ಲವು.

೩೫. ಗೋಮತಿಯಲ್ಲಿ ಮಾಡಿದ ಸ್ನಾನದಿಂದ ಲಭಿಸುವ ಪುಣ್ಯದಿಂದಲೂ, ವಾಸುದೇವನ ದರ್ಶನದಿಂದಲೂ ಮನುಷ್ಯನಿಗೆ ಸಕಲಾಭೀಷ್ಟಸಿದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

೩೬. ಹಾಗೆಯೇ ಚೈತ್ರಮಾಸದ ಶುಕ್ಲಪಕ್ಷದಲ್ಲಿ ಏಕಾದಶಿಯು ಬಂದ ದಿವಸದಲ್ಲಿ ಮನುಷ್ಯನು ವಿಶೇಷಪ್ರಯತ್ನದಿಂದಲಾದರೂ ಗೋಮತೀನದಿಯಲ್ಲಿ ಸ್ನಾನವನ್ನು ಮಾಡಬೇಕು.

೩೭. ರಾತ್ರಿಯಲ್ಲಿ ಜಾಗರಣೆಯನ್ನೂ ವಿಷ್ಣುಪೂಜೆಯನ್ನೂ ನೆರವೇರಿಸಿಕೊಂಡು ಬಳಿಕ ಆಮಲಕಕ್ಷೇತ್ರಕ್ಕೆ ಬಂದು ಹೆಜ್ಜೆಹೆಜ್ಜೆಗೂ ಅದಕ್ಕೆ ಪ್ರದಕ್ಷಿಣೆಯನ್ನು ಮಾಡಬೇಕು.

**ಗೋಸಹಸ್ರಫಲಂ ತೇಷಾಂ ಪ್ರಾಪ್ಯತೇ ನಾಽತ್ರ ಸಂಶಯಃ ।**
**ಯೇ ಶೃಣ್ವಂತಿ ಕಥಾಂ ಪುಣ್ಯಾಂ ಪವಿತ್ರಾಂ ಪಾಪಹಾರಿಣೀಂ ॥ ೩೮ ॥**
**ಸರ್ವಪಾಪವಿನಿರ್ಮುಕ್ತಾ ವಿಷ್ಣುಲೋಕಂ ಪ್ರಯಾಂತಿ ತೇ ॥ ೩೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಗೋಮತೀತೀರ್ಥಕುಂಡಮಾಹಾತ್ಮ್ಯವರ್ಣನಂ"ನಾಮ ದ್ವಿಷಷ್ಟಿತಮೋಽಧ್ಯಾಯಃ**

---

೩೮–೩೯. ಇದನ್ನು ಅನುಷ್ಠಾನಮಾಡಿದ ಮಾನವನು ಒಂದು ಸಾವಿರ ಗೋದಾನಗಳನ್ನು ಮಾಡಿದ ಫಲವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ. ಪುಣ್ಯಪ್ರದವೂ, ಪವಿತ್ರವೂ, ಪಾಪನಾಶಕವೂ ಆದ ಈ ಚರಿತ್ರೆಯನ್ನು ಯಾರು ಕೇಳುವರೊ ಅವರು ಸಕಲಪಾತಕಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನು ಸೇರುವರು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಗೋಮತೀತೀರ್ಥಕುಂಡಮಾಹಾತ್ಮ್ಯವರ್ಣನ"ವೆಂಬ ಅರುವತ್ತೆರಡನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ತ್ರಿಷಷ್ಟಿತಮೋಽಧ್ಯಾಯಃ

## ವಿಷ್ಣುಸಹಸ್ರನಾಮಕಥನಂ

ಸನತ್ಕುಮಾರ ಉವಾಚ :—

**ಕಂಥಡೇಶ್ವರ ಇತಿ ಖ್ಯಾತಂ ತತ್ರ ತೀರ್ಥಮನುತ್ತಮಂ ।**
**ತತ್ರ ತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಮಹೇಶ್ವರಂ ।**
**ಮುಚ್ಯತೇ ಸರ್ವಪಾಪೇಭ್ಯಃ ಶುಚಿಃ ಪ್ರಯತಮಾನಸಃ** ॥ ೧ ॥
**ವಿಮಾನಶತಸಂಯುಕ್ತಃ ಶಿವಲೋಕೇ ಮಹೀಯತೇ**
**ಭುವಿ ಪುಣ್ಯತಮಂ ತೀರ್ಥಂ ಸರ್ವಪಾಪಹರಂ ಪರಂ ।** ॥ ೨ ॥
**ಖಗರ್ತಾಸಂಗಮೋ ಯತ್ರ ಗಂಗೇಶ್ವರಸಮೀಪತಃ**
**ಮಹಾಪಾಪಹರಂ ಪುಣ್ಯಂ ಮಹಾಪುಣ್ಯಫಲಪ್ರದಂ ।** ॥ ೩ ॥
**ಆಕಾಶಾತ್ಪತಿತಾ ಯತ್ರ ಗಂಗಾ ತ್ರೈಲೋಕ್ಯಪಾವನೀ**
**ವಿಧೃತಾ ಶಿರಸಿ ಸದ್ಯೋ ಮಹಾದೇವೇನ ಶಂಭುನಾ ।** ॥ ೪ ॥

---

## ಕನ್ನಡದ ಅನುವಾದ

### ವಿಷ್ಣುಸಹಸ್ರನಾಮಕಥನ

೧. ಸನತ್ಕುಮಾರನು ಹೇಳುತ್ತಾನೆ :—ಕಂಥಡೇಶ್ವರವೆಂದು ಪ್ರಖ್ಯಾತವಾದ ಮತ್ತೊಂದು ಸರ್ವೋತ್ತಮತೀರ್ಥವಿರುವುದು. ಆ ತೀರ್ಥದಲ್ಲಿ ಸ್ನಾನಮಾಡಿ ಮಹಾದೇವನ ದರ್ಶನವನ್ನು ಪಡೆದ ಮಾನವನು ಸಮಸ್ತಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧನೂ ನಿಷ್ಕಲ್ಮಷಮನಸ್ಕನೂ ಆಗುವನು.

೨. ಅಲ್ಲದೆ, ನೂರಾರು ವಿಮಾನಗಳಿಂದೊಡಗೂಡಿ ಶಿವಲೋಕದಲ್ಲಿ ಗಣ್ಯಸ್ಥಾನವನ್ನು ಪಡೆಯುವನು. ಈ ತೀರ್ಥವು ಭೂಲೋಕವಲ್ಲೆಲ್ಲ ಪುಣ್ಯತಮವೂ, ಸರ್ವಪಾತಕಹರವೂ ಅತ್ಯುತ್ತಮವೂ ಆಗಿರುವುದು.

೩. ಗಂಗೇಶ್ವರನ ಸಮೀಪದಲ್ಲಿ ಖಗರ್ತಾಸಂಗಮವೆಂಬ ತೀರ್ಥವು ಮಹಾಪಾತಕಗಳನ್ನು ಕಳೆಯುವ ಮಹಿಮೆಯುಳ್ಳದ್ದೂ, ಮಹಾಪುಣ್ಯಫಲಪ್ರದವೂ ಎನಿಸಿರುವುದು.

೪. ಮೂರು ಲೋಕಗಳನ್ನೂ ಪವಿತ್ರಗೊಳಿಸುವ ಗಂಗೆಯು ಅಲ್ಲಿಯೇ ಆಕಾಶದಿಂದ ಕೆಳಕ್ಕೆ ಇಳಿದುಬಂದಳು. ಅಲ್ಲಿಯೇ ಮಹಾದೇವನು ನಿಂತು ಆ ಪ್ರವಾಹವನ್ನು ತನ್ನ ತಲೆಯಲ್ಲಿ ಧರಿಸಿದನು.

ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಗಂಗೇಶಮವಲೋಕಯೇತ್ ।
ಗಂಗಾಸ್ನಾನಫಲಂ ಪ್ರಾಪ್ಯ ವಿಷ್ಣುಲೋಕೇ ಮಹೀಯತೇ ॥ ೫ ॥
ವೀರೇಶ್ವರಮನುಪ್ರಾಪ್ಯ ತಸ್ಮಿಂಸ್ತೀರ್ಥೇ ನರೋ ವಸೇತ್ ।
ಸರ್ವಪಾಪವಿಶುದ್ಧಾತ್ಮಾ ವೀರಲೋಕಮವಾಪ್ನುಯಾತ್ ॥ ೬ ॥
ತೀರ್ಥಮನ್ಯನ್ಮಹಾಪುಣ್ಯಂ ಭುವಿ ಖ್ಯಾತಂ ಮಹರ್ಷಿಭಿಃ ।
ವಾಮನಕುಂಡೇತಿ ವಿಖ್ಯಾತಂ ತ್ರಿಷು ಲೋಕೇಷು ವಿಶ್ರುತಂ ॥ ೭ ॥
ಯಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾಂ ವ್ಯಪೋಹತಿ ।
ಮನೋರಥಶತಂ ಪ್ರಾಪ್ಯ ಪಶ್ಚಾದ್ವಿಷ್ಣುಪುರಂ ವ್ರಜೇತ್ ॥ ೮ ॥

ವ್ಯಾಸ ಉವಾಚ :—

ಕದಾ ಕಾಲೇ ಸಮುತ್ಪನ್ನಂ ವಾಮನಾಖ್ಯಂ ಪುರಾಽನಘ ।
ತತ್ಸರ್ವಂ ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ॥ ೯ ॥

ಸನತ್ಕುಮಾರ ಉವಾಚ :—

ಶೃಣುಷ್ವ ಭೋ ದ್ವಿಜಶ್ರೇಷ್ಠ ಕಥಾಂ ಪಾಪಹರಾಂ ಪರಾಂ ।
ಯಸ್ಯ ಶ್ರವಣಮಾತ್ರೇಣ ಸರ್ವಪಾಪಾತ್ಪ್ರಮುಚ್ಯತೇ ॥ ೧೦ ॥

---

೫. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡ ನರನು ಗಂಗೇಶ್ವರನನ್ನು ಸಂದರ್ಶಿಸಲು ಗಂಗಾಸ್ನಾನದ ಪುಣ್ಯವನ್ನು ಪಡೆಯುವನಲ್ಲದೆ ವೈಕುಂಠಲೋಕದಲ್ಲಿಯೂ ಪೂಜ್ಯನಾಗುವನು.

೬. ವೀರೇಶ್ವರನನ್ನು ಸೇವಿಸಿ ಆತನ ಹೆಸರಿನ ಕುಂಡದಲ್ಲಿ ವಾಸಮಾಡುವ ಮಾನವನು ಸಕಲಪಾಪಗಳಿಂದ ಮುಕ್ತನಾಗಿ ವೀರರಿಗೆ ಉಚಿತಗಳಾದ ಲೋಕಗಳಲ್ಲಿ ವಾಸಮಾಡುವನು.

೭. ಅಲ್ಲದೆ ಭೂಲೋಕದಲ್ಲೆಲ್ಲ ಪ್ರಖ್ಯಾತವಾದ ಮತ್ತೊಂದು ತೀರ್ಥವು ಮಹರ್ಷಿಗಳಿಗೆ ತಿಳಿದಿರುವುದು. ವಾಮನಕುಂಡವೆಂಬ ಹೆಸರಿನ ಆ ತೀರ್ಥವು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು.

೮. ಅದನ್ನು ನೋಡುವ ಮಾತ್ರದಿಂದಲೇ ಮನುಜನು ಬ್ರಹ್ಮಹತ್ಯೆಯನ್ನೂ ಕಳೆದುಕೊಂಡು ನೂರಾರು ಮನೋರಥಗಳನ್ನೂ ಪಡೆಯುವನಲ್ಲದೆ ದೇಹವನ್ನು ಬಿಟ್ಟಮೇಲೆ ವೈಕುಂಠವನ್ನೂ ಸೇರುವನು.

೯. ವ್ಯಾಸನು ಹೇಳುತ್ತಾನೆ:—ಬ್ರಹ್ಮವಿದ್ವರಿಷ್ಠನಾದ ಎಲೈ ಮುನಿಯೆ! ಈ ವಾಮನತೀರ್ಥವು ಯಾವ ಕಾಲದಲ್ಲಿ ಉತ್ಪನ್ನವಾಯಿತು? ಇದರ ವಿಚಾರವೆಲ್ಲವನ್ನೂ ನಿನ್ನ ಮುಖದಿಂದ ತಿಳಿಯಲಪೇಕ್ಷಿಸುತ್ತೇನೆ.

೧೦. ಸನತ್ಕುಮಾರನು ಹೇಳುತ್ತಾನೆ:—ಎಲೈ ದ್ವಿಜಶ್ರೇಷ್ಠನೆ! ಪಾಪನಾಶಕವೆನಿಸಿದ ಈ ಉತ್ತಮಕಥೆಯನ್ನು ಕೇಳು. ಇದರ ಶ್ರವಣದ ಮಾತ್ರದಿಂದಲೇ ಕೇಳಿದವನು ಸಮಸ್ತಪಾತಕಗಳಿಂದ ಮುಕ್ತನಾಗುವನು.

ಮಧುವನೇ ಪ್ರಯಾಗೇ ಚ ದ್ವಾರಕಾಯಾಂ ಸಮಾಹಿತಃ ।
ಮಹಾಕಾಲವನೇ ಸಿದ್ಧೇ ನಿಯತಾಃ ಸರ್ವಕಾಮಿಕಾಃ ॥ ೨೨೧ ॥
ಯೇ ಪಠಂತಿ ಶತಾವರ್ತಂ ಭಕ್ತಿಮಂತೋ ಜಿತೇಂದ್ರಿಯಾಃ ।
ತೇ ಸಿದ್ಧಾಃ ಸಿದ್ಧಿದಾ ಲೋಕೇ ವಿಚರಂತಿ ಮಹೀತಲೇ ॥ ೨೨೨ ॥
ಅನ್ಯೋನ್ಯಭೇದಭೇದಾನಾಂ ಮೈತ್ರೀಕರಣಮುತ್ತಮಂ ।
ಮೋಹನಂ ಮೋಹನಾನಾಂ ಚ ಪವಿತ್ರಂ ಪಾಪನಾಶನಂ ॥ ೨೨೩ ॥
ಬಾಲಗ್ರಹವಿನಾಶಾಯ ಶಾಂತೀಕರಣಮುತ್ತಮಂ ।
ದುರ್ವೃತ್ತಾನಾಂ ಚ ಪಾಪಾನಾಂ ಬುದ್ಧಿನಾಶಕರಂ ಪರಂ ॥ ೨೨೪ ॥
ಪತದ್ಗರ್ಭಾ ಚ ವಂಧ್ಯಾ ಚ ಸ್ರಾವಿಣೀ ಕಾಕವಂಧ್ಯಕಾ ।
ಅನಾಯಾಸೇನ ಸತತಂ ಪುತ್ರಮೇವ ಪ್ರಸೂಯತೇ ॥ ೨೨೫ ॥
ಪಯಃಪುಷ್ಕಲದಾ ಗಾವೋ ಬಹುಧಾನ್ಯಫಲಾ ಕೃಷಿಃ ।
ಸ್ವಾಮಿಧರ್ಮಪರಾ ಭೃತ್ಯಾ ನಾರೀ ಪತಿವ್ರತಾ ಭವೇತ್ ॥ ೨೨೬ ॥

---

ಕಾಲವನದಲ್ಲಿ ಇದರ ಸಿದ್ಧಿಯನ್ನು ಪಡೆದರೆ ಮಾನವರು ಖಂಡಿತವಾಗಿಯೂ ಸಕಲಾಭೀಷ್ಟಫಲಗಳನ್ನೂ ಹೊಂದುವರು.

೨೨೨. ಯಾರು ಇದನ್ನು ಭಕ್ತಿಯಿಂದಲೂ, ಜಿತೇಂದ್ರಿಯರಾಗಿಯೂ ಒಂದು ನೂರು ಸಲ ಜಪಿಸುವರೊ, ಅವರು ಸಿದ್ಧಪದವಿಯನ್ನು ಪಡೆಯುವರಲ್ಲದೆ ಇತರರಿಗೂ ಕಾರ್ಯಸಿದ್ಧಿಗಳನ್ನೀಯುತ್ತ ಭೂಮಿಯಲ್ಲಿ ಸಂಚರಿಸುವರು.

೨೨೩. ಈ ಮಂತ್ರರಾಜವು ಪರಸ್ಪರ ವೈರವುಳ್ಳವರಿಗೆ ಉತ್ತಮವಾದ ಮೈತ್ರೀಕರಣೋಪಾಯವಾಗಿರುವುದು. ಮೋಹನಮಂತ್ರಗಳಲ್ಲಿ ಪರಮಮೋಹಕವೂ, ಪವಿತ್ರವೂ, ಪಾಪನಾಶಕವೂ ಆಗಿರುವುದು.

೨೨೪. ಮಕ್ಕಳ ಬಾಲಗ್ರಹ ದೋಷಗಳ ನಿವಾರಣೆಗೆ ಇದು ಅತ್ಯುತ್ತಮವಾದ ಶಾಂತಿಮಂತ್ರವು. ಪಾಪಿಗಳ ದುಷ್ಟಾಚಾರಗಳ ಬುದ್ಧಿಯನ್ನು ನಾಶಗೊಳಿಸುವ ಸುಲಭೋಪಾಯವು.

೨೨೫. ಗರ್ಭಪಾತಗಳಾಗುತ್ತಿರುವವಳೂ, ಹುಟ್ಟು ಬಂಜೆಯೂ, ಗರ್ಭಸ್ರಾವವುಳ್ಳವಳೂ, ಕಾಕವಂಧ್ಯೆಯೂ ಅನಾಯಾಸವಾಗಿಯೇ ಪುತ್ರರತ್ನಗಳನ್ನೇ ಪಡೆಯುವರು.

೨೨೬. ಇದರ ಜಪವನ್ನು ಮಾಡುವವರ ಮನೆಗಳಲ್ಲಿ ಹಸುಗಳು ಹೇರಳವಾಗಿ ಹಾಲನ್ನು ಕರೆಯುವುವು. ಕೃಷಿಯು ಯಥೇಚ್ಛವಾದ ಧಾನ್ಯವನ್ನೀಯುವುದು. ಸೇವಕರೆಲ್ಲರೂ ಸ್ವಾಮಿಯ ಕಾರ್ಯಸಾಧನೆಗಾಗಿಯೇ ದುಡಿಯುತ್ತಿರುವರು. ಪತ್ನಿಯರೂ ಪತಿವ್ರತೆಯರಾಗಿರುವರು.

**ಅಕಾಲಮೃತ್ಯುನಾಶಾಯ ತಥಾ ದುಃಸ್ವಪ್ನದರ್ಶನೇ ।**
**ಶಾಂತಿಕರ್ಮಣಿ ಸರ್ವತ್ರ ಸ್ಮರ್ತವ್ಯಂ ಚ ಸದಾ ನರೈಃ ॥ ೨೨೭ ॥**
**ಯಃ ಪಠತ್ಯನ್ವಹಂ ಮರ್ತ್ಯಃ ಶುಚಿಸ್ತ್ವನ್ವಿಷ್ಣುಸನ್ನಿಧೌ ।**
**ಏಕಾಕೀ ಚ ಜಿತಾಹಾರೋ ಜಿತಕ್ರೋಧೋ ಜಿತೇಂದ್ರಿಯಃ ॥ ೨೨೮ ॥**
**ಗರುಡಾರೋಹಸಂಪನ್ನಃ ಪೀತವಾಸಾಶ್ಚತುರ್ಭುಜಃ ।**
**ವಾಂಛಿತಂ ಪ್ರಾಪ್ಯ ಲೋಕೇಽಸ್ಮಿನ್ ವಿಷ್ಣುಲೋಕೇ ಸ ಗಚ್ಛತಿ ॥ ೨೨೯ ॥**
**ಏಕತಃ ಸಕಲಾ ವಿದ್ಯಾ ಏಕತಃ ಸಕಲಂ ತಪಃ ।**
**ಏಕತಃ ಸಕಲೋ ಧರ್ಮೋ ನಾಮ ವಿಷ್ಣೋಸ್ತ್ವಥೈಕತಃ ॥ ೨೩೦ ॥**
**ಯೋ ಹಿ ನಾಮ ಸಹಸ್ರೇಣ ಸ್ತೋತುಮಿಚ್ಛತಿ ವೈ ದ್ವಿಜಃ ।**
**ಸೋಽಯಮೇಕೇನ ಶ್ಲೋಕೇನ ಸ್ತುತ ಏವ ನ ಸಂಶಯಃ ॥ ೨೩೧ ॥**
**ಸಹಸ್ರಾಕ್ಷಃ ಸಹಸ್ರಪಾತ್ಸಹಸ್ರವದನೋಜ್ಜ್ವಲಃ ।**
**ಸಹಸ್ರನಾಮಾಽನಂತಾಕ್ಷಃ ಸಹಸ್ರಬಾಹುರ್ನಮೋಽಸ್ತುತೇ ॥ ೨೩೨ ॥**

---

೨೨೭. ಅಕಾಲಮರಣವನ್ನು ದೂರಮಾಡುವುದಕ್ಕೂ, ದುಸ್ಸ್ವಪ್ನಗಳನ್ನು ಕಂಡಾಗಲೂ, ಇತರ ಶಾಂತಿಕರ್ಮಗಳಲ್ಲಿಯೂ ನಿತ್ಯವೂ ಮನುಷ್ಯರು ಈ ಸಹಸ್ರ ನಾಮಾವಳಿಯನ್ನು ಸ್ಮರಿಸಬೇಕು.

೨೨೮–೨೨೯. ಯಾವನು ಶುಚಿರ್ಭೂತನಾಗಿ ನಿತ್ಯವೂ ವಿಷ್ಣುವಿನ ಸನ್ನಿಧಿಯಲ್ಲಿ ಇದನ್ನು ಪಠನಮಾಡುವನೊ, ಏಕಾಕಿಯೂ, ನಿಯತಾಹಾರನೂ, ಅರಿಷಡ್ವರ್ಗಗಳನ್ನು ಜಯಿಸಿದವನೂ, ಜಿತೇಂದ್ರಿಯನೂ ಆದ ಆತನು ಗರುಡ ವಾಹನವನ್ನೇರಿ ಪೀತಾಂಬರಧಾರಿಯೂ, ಚತುರ್ಭುಜಾಲಂಕೃತನೂ ಆಗುವನು. ಈ ಲೋಕದಲ್ಲಿ ಸಕಲೈಶ್ವರ್ಯಗಳನ್ನೂ ಅನುಭವಿಸಿದ ಬಳಿಕ ವಿಷ್ಣುಲೋಕವನ್ನು ಸೇರುವನು.

೨೩೦. ಸಕಲವಿದ್ಯೆಗಳೂ, ಸಮಸ್ತತಪಸ್ಸೂ, ಸಮಗ್ರವಾದ ಧರ್ಮಾಚರಣೆಯೂ ಒಂದು ತೂಕವಾದರೆ ಇವುಗಳನ್ನೆಲ್ಲ ಸರಿದೂಗುವ ವಿಷ್ಣುನಾಮವೊಂದೇ ಮತ್ತೊಂದು ತೂಕವಾಗಿರುವುದು.

೨೩೧. ಯಾವ ಬ್ರಾಹ್ಮಣನು ಮಹಾ ವಿಷ್ಣುವನ್ನು ಸಹಸ್ರನಾಮಗಳಿಂದ ಸ್ತೋತ್ರಮಾಡಲೆಳಸುವನೊ, ಆವನು ಮುಂದಿನ ಒಂದು ಶ್ಲೋಕವನ್ನು ಪಠಿಸಿದರೂ ಸಾಕು. ಸಮಗ್ರವಾದ ನಾಮಾವಳಿಯನ್ನೇ ಪಠಿಸಿದಂತಾಯಿತೆಂಬುದರಲ್ಲಿ ಸಂದೇಹವಿಲ್ಲ.

೨೩೨. ಅನಂತನೇತ್ರಗಳುಳ್ಳವನೂ, ಅನಂತಪಾದನೂ, ಅಸಂಖ್ಯಾತ ಮುಖಗಳಲ್ಲಿ ಬೆಳಗುವವನೂ, ಸಾವಿರಾರು ಹೆಸರುಗಳುಳ್ಳವನೂ, ಅನಂತೇಂದ್ರಿಯ ಗಳುಳ್ಳವನೂ, ಅನಂತಬಾಹುಸಹಿತನೂ ಆದ ನಿನಗೆ ನಮಸ್ಕಾರವು.

ವಿಷ್ಣೋರ್ನಾಮಸಹಸ್ರಂ ವೈ ಪುರಾಣಂ ವೇದಸಂಮತಮ್ ।
ಪಠಿತವ್ಯಂ ಸದಾ ಭಕ್ತೈಃ ಸರ್ವಮಂಗಲಮಂಗಲಮ್ ॥ ೨೩೩ ॥
ಇತಿ ಸ್ತವಾಽಭಿಯುಕ್ತಾನಾಂ ದೇವಾನಾಂ ತತ್ರ ವೈ ದ್ವಿಜ ।
ಪ್ರತ್ಯಕ್ಷಂ ಪ್ರಾಹ ಭಗವಾನ್ವರದೋ ವರದಾರ್ಚಿತಃ ॥ ೨೩೪ ॥

ಶ್ರೀ ಭಗವಾನುವಾಚ :—

ವ್ರಿಯತಾಂ ಭೋಃ ಸುರಾಃ ಸರ್ವೈರ್ವರೋಽಸ್ಮತ್ತೋಽಭಿವಾಂಛಿತಃ ।
ತತ್ಸರ್ವಂ ಸಂಪ್ರದಾಸ್ಯಾಮಿ ನಾಽತ್ರ ಕಾರ್ಯಾ ವಿಚಾರಣಾ ॥ ೨೩೫ ॥

ದೇವಾ ಊಚುಃ :—

ವರದೋಽಸಿ ಯದಾ ವಿಷ್ಣೋ ವರಮೇತಂ ದದಸ್ವ ನಃ ।
ಅದಿತೇರ್ಗರ್ಭಸಂಭೂತಃ ಶಕ್ರಸ್ಯಾಽಪ್ಯನುಜೋ ಭವ ॥ ೨೩೬ ॥
ಇತಿ ಸಂಪ್ರಾರ್ಥಿತೋ ದೇವೈರ್ಬ್ರಹ್ಮಶಕ್ರಪುರೋಗಮೈಃ ।
ತಥೇತ್ಯುಕ್ತ್ವಾ ಚ ಭಗವಾಂಸ್ತತ್ರೈವಾಽಂತರಧೀಯತ ॥ ೨೩೭ ॥
ತತಃ ಕತಿಪಯೇ ಕಾಲೇ ಭಗವಾನದಿತಿನಂದನಃ ।
ವಿಷ್ಣುರೂಪಧರೋಽನಂತೋ ವಾಮನತ್ವಾಚ್ಚ ವಾಮನಃ ॥ ೨೩೮ ॥

---

೨೩೩. ಪುರಾತನವೂ ವೇದಸಮ್ಮತವೂ ಪರಮಮಂಗಳಪ್ರದವೂ ಆದ ಈ ವಿಷ್ಣುಸಹಸ್ರನಾಮಾವಳಿಯನ್ನು ಭಕ್ತರಾದವರು ನಿತ್ಯದಲ್ಲಿಯೂ ಜಪಿಸುತ್ತಿರಬೇಕು.

೨೩೪. ವ್ಯಾಸಮುನಿಯೆ! ಇಂತು ದೇವತೆಗಳೆಲ್ಲರೂ ಆ ಕ್ಷೇತ್ರದಲ್ಲಿ ಸ್ತೋತ್ರಪಾಠಗಳಲ್ಲಿ ನಿರತರಾಗಿರಲು ವರದನೂ ಮುನಿಪೂಜಿತನೂ ಆದ ಶ್ರೀಮನ್ನಾರಾಯಣನು ಪ್ರತ್ಯಕ್ಷನಾಗಿ ಇಂತೆಂದನು.

೨೩೫. ಭಗವಂತನು ಹೇಳುತ್ತಾನೆ :—ದೇವತೆಗಳಿರಾ ! ನೀವೆಲ್ಲರೂ ನಿಮಗೆ ಅಭಿಲಷಿತಗಳಾದ ವರಗಳನ್ನು ನನ್ನಲ್ಲಿ ಕೇಳಿರಿ. ಅದನ್ನು ಸಮಗ್ರವಾಗಿ ನಡೆಸಿ ಕೊಡುವೆನು. ಈ ವಿಷಯದಲ್ಲಿ ಚಿಂತಿಸಬೇಡಿ.

೨೩೬. ದೇವತೆಗಳು ಹೇಳುತ್ತಾರೆ :—ಮಹಾವಿಷ್ಣುವೆ! ನೀನು ವರಪ್ರದನಾಗಿರುವೆಯಾದರೆ ನಮಗೆ ಈ ವರವೊಂದನ್ನು ಕೊಡು. ನೀನು ಅದಿತಿದೇವಿಯ ಗರ್ಭದಲ್ಲಿ ಜನಿಸಿ ಮಹೇಂದ್ರನಿಗೆ ತಮ್ಮನಾಗು.

೨೩೭. ಬ್ರಹ್ಮೇಂದ್ರಾದಿ ದೇವತೆಗಳಿಂದ ಇಂತು ಪ್ರಾರ್ಥಿತನಾದ ಮಹಾವಿಷ್ಣುವು ಹಾಗೆಯೇ ಆಗಲೆಂದು ಅವರ ಮಾತನ್ನು ಅಂಗೀಕರಿಸಿ ಅವರು ನೋಡುತ್ತಿದ್ದಂತೆಯೇ ಅಂತರ್ಧಾನವನ್ನೈದಿದನು.

೨೩೮. ಬಳಿಕ ಕೆಲಕಾಲ ಕಳೆಯಲು ಆ ಅನಂತನು ಅದಿತಿಯ ಗರ್ಭದಲ್ಲಿ ಜನಿಸಿ ವಿಷ್ಣುವಿನ ಚಿಹ್ನೆಗಳನ್ನೇ ತಾಳಿದನು. ಕುಬ್ಜನಾಗಿದ್ದುದರಿಂದ ಅವನು ವಾಮನನೆಂದು ಪ್ರಖ್ಯಾತನಾದನು.

ಬಲಿರ್ವೈರೋಚನೋ ವ್ಯಾಸ ವಾಜಿಮೇಧಶತೇನ ಚ ।
ಈಜೇ ದ್ವಿಜವರಶ್ರೇಷ್ಠ ಇಂದ್ರರಾಜ್ಯಜಿಹೀರ್ಷಯಾ ॥ ೨೩೯ ॥
ಋತ್ವಿಜಂ ಕಶ್ಯಪಂ ಕೃತ್ವಾ ಹೋತಾರಂ ಭೃಗುಸತ್ತಮಂ ।
ಬ್ರಹ್ಮಾ ತತ್ರಾಽಭವಚ್ಚೈವ ಸ್ವಯಮೇವ ಪಿತಾಮಹಃ ॥ ೨೪೦ ॥
ಅಧ್ವರ್ಯುರ್ಭಗವಾನತ್ರಿರ್ಬಭೂವ ಮುನಿಸತ್ತಮಃ ।
ಉದ್ಗಾತಾ ನಾರದಶ್ಚೈವ ವಸಿಷ್ಠಶ್ಚ ಸಭಾಸದಃ ॥ ೨೪೧ ॥
ಯೇ ಯತ್ರ ವಿಹಿತಾಃ ಸರ್ವೇ ತತ್ರ ತತ್ರ ಮುನೀಶ್ವರಾಃ ।
ಬಲಿಸ್ತತ್ರಾಽಭವದ್ವ್ಯಾಸ ದೀಕ್ಷಿತೋ ರಾಜಸತ್ತಮಃ ॥ ೨೪೨ ॥
ಏವಂ ಪ್ರವರ್ತಮಾನೇಷು ಯಜ್ಞೇಷು ಮುನಿಸತ್ತಮ ।
ಹೂಯತಾಂ ಭುಜ್ಯತಾಂ ಚೈವ ದೀಯತಾಂ ಧೀಯತಾಂ ತಥಾ ॥ ೨೪೩ ॥
ಇತಿ ವಾಚಃ ಶುಭಾಸ್ತತ್ರ ಶ್ರೂಯಂತೇ ಚ ದ್ವಿಜೋತ್ತಮ ।
ತಸ್ಮಿನ್ಕಾಲೇ ಸುಚಿತ್ರೇಷು ವಾಮನೋಽಗಾಚ್ಛುಚಿಸ್ಮಿತಃ ॥ ೨೪೪ ॥

---

೨೩೯. ಎಲೈ ದ್ವಿಜೋತ್ತಮನಾದ ವ್ಯಾಸನೆ! ವಿರೋಚನಸುತನಾದ ಬಲಿಚಕ್ರವರ್ತಿಯು ಆಗ ಮಹೇಂದ್ರನ ಅಧಿಕಾರವನ್ನು ಕಸಿದುಕೊಳ್ಳಲೆಳಸಿ ಒಂದು ನೂರು ಅಶ್ವಮೇಧಯಜ್ಞಗಳನ್ನುಪಕ್ರಮಿಸಿದನು.

೨೪೦. ಅವುಗಳಲ್ಲಿ ಕಶ್ಯಪಬ್ರಹ್ಮನೇ ಋತ್ವಿಜನು, ಭೃಗುಮಹರ್ಷಿಯೇ ಹೋತೃವಾದನು. ಚತುರ್ಮುಖನು ತಾನೇ ಬ್ರಹ್ಮಪೀಠವನ್ನಲಂಕರಿಸಿದನು.

೨೪೧. ಮುನಿಶ್ರೇಷ್ಠನಾದ ಅತ್ರಿಮಹರ್ಷಿಯೇ ಅಧ್ವರ್ಯುವಾದನು. ನಾರದಮುನಿಯು ಉದ್ಗಾತೃವೂ ವಸಿಷ್ಠನು ಸಭಾಸದನೂ ಆಗಿರಲು ಯಜ್ಞಗಳು ನಡೆಯುತ್ತಿದ್ದುವು.

೨೪೨. ಸಕಲಮುನೀಂದ್ರರೂ ಅವರವರ ಯೋಗ್ಯತೆಗನುಸಾರವಾಗಿ ಅಧಿಕಾರಗಳನ್ನು ವಹಿಸಿದ್ದರು. ಎಲೈ ವ್ಯಾಸನೆ! ರಾಜೋತ್ತಮನಾದ ಬಲಿಯೇ ಅವುಗಳಲ್ಲಿ ದೀಕ್ಷಿತನಾಗಿದ್ದನು.

೨೪೩–೨೪೪. ಮುನಿಸತ್ತಮನೆ! ಇಂತು ಯಜ್ಞಗಳು ಸಾಂಗವಾಗಿ ನೆರವೇರುತ್ತಿರಲು ಎಲ್ಲೆಲ್ಲಿಯೂ "ಹೋಮಮಾಡಿರಿ; ಭೋಜನಗಳಾಗಲಿ; ದಾನಗಳು ನಡೆಯಲಿ; ಪದಾರ್ಥಗಳನ್ನು ಶೇಖರಿಸಿರಿ" ಮುಂತಾದ ಶುಭವಾಕ್ಯಗಳೇ ಕೇಳಿಬರುತ್ತಿದ್ದುವು. ಇಂತು ಅನೇಕ ವಿವಿಧ ಕಾರ್ಯಗಳು ನಡೆಯುತ್ತಿರಲು ಮಂದಹಾಸಪೂರಿತವಾದ ಮುಖದಿಂದ ಕೂಡಿ ವಾಮನಮೂರ್ತಿಯು ಯಜ್ಞಮಂಟಪಕ್ಕೆ ಬಿಜಯಂಗೈದನು.

ಪಠಮಾನೋ ಮುಖಾಗ್ರೇಣ ಚಾತುರ್ವೇದಿಕಮಂತ್ರಕಾನ್ ।
ದ್ವಾರೇ ತಿಷ್ಠತಿ ರಾಜೇಂದ್ರ ವಾಮನೋ ದ್ವಿಜಸತ್ತಮಃ ॥ ೨೪೫ ॥
ಪ್ರತಿಹಾರೇಣ ವೈ ವ್ಯಾಸ ಸರ್ವಂ ರಾಜ್ಞೇ ನಿವೇದಿತಂ ।
ಉತ್ಥಾಯ ಚ ಮಹಾರಾಜೋ ಬಲಿರ್ವೈರೋಚನಿಸ್ತದಾ ॥ ೨೪೬ ॥
ಅರ್ಘ್ಯಮಾದಾಯ ತತ್ಸರ್ವಂ ಜಗಾಮ ಸ್ವೈಃ ಸಭಾಸದೈಃ ।
ಪೂಜಯಿತ್ವಾ ಯಥಾನ್ಯಾಯಂ ವಾಮನಂ ಲೋಕಭಾವನಂ ॥ ೨೪೭ ॥
ಆನಯಿತ್ವಾ ಸಭಾಮಧ್ಯೇ ದತ್ವಾಸನಪರಿಗ್ರಹಂ ।
ಕುತಸ್ತ್ವಾಗಮನಂ ಬ್ರಹ್ಮನ್ಕಿಂತೇಽಭೀಷ್ಟಂ ದದಾಮಿ ವೈ ॥ ೨೪೮ ॥

ವಾಮನ ಉವಾಚ :—

ರಾಜರಾಜಾಽಖಿಲಾ ಸೃಷ್ಟಿರ್ಬ್ರಹ್ಮಣಃ ಪರಮೇಷ್ಠಿನಃ ।
ತತೋಽಹಮಾಗತೋ ಭೂಮನ್ ಯಜ್ಞಂ ಚೈವ ದಿದೃಕ್ಷಯಾ ॥ ೨೪೯ ॥
ವರುಣಸ್ಯ ಚ ಯಜ್ಞೋ ವೈ ದೃಷ್ಟೋ ಮೇ ವೈ ಪುರಾಽನಘ ।
ಯಕ್ಷಾಽಧಿಪತೇರ್ನೂನಂ ಚ ಯಜ್ಞಂ ವೈ ದೃಷ್ಟವಾನಹಂ ॥ ೨೫೦ ॥

---

೨೪೫. “ರಾಜೇಂದ್ರನೆ! ಕುಬ್ಜರೂಪಿಯಾದ ಒಬ್ಬಾನೊಬ್ಬ ಬ್ರಾಹ್ಮಣೋತ್ತಮನು ಮುಖದಿಂದ ನಾಲ್ಕೂ ವೇದಗಳ ಮಂತ್ರಗಳನ್ನುಚ್ಚರಿಸುತ್ತ ಬಾಗಿಲಲ್ಲಿ ನಿಂತಿರುವನು.”

೨೪೬. ಇಂತೆಂದು ಪ್ರತಿಹಾರಿಯೊಬ್ಬನು ಸಮಾಚಾರವನ್ನು ರಾಜನಿಗೆ ವಿಜ್ಞಾಪಿಸಿಕೊಳ್ಳಲು ಮಹಾರಾಜನಾದ ಆ ಬಲಿಚಕ್ರವರ್ತಿಯು ತನ್ನ ಆಸನದಿಂದೆದ್ದು ಹೊರಟನು.

೨೪೭. ಅರ್ಘ್ಯಾದಿ ಸಕಲೋಪಚಾರಗಳೊಡನೆ ಹೊರಟ ಆತನು ಸಭಾಸದರೆಲ್ಲರೊಡನೆ ಲೋಕವಂದ್ಯನಾದ ಆ ವಾಮನಮೂರ್ತಿಯನ್ನು ಯಥಾವಿಧಿಯಾಗಿ ಪೂಜಿಸಿದನು.

೨೪೮. ಬಳಿಕ ಸಭಾಮಧ್ಯಕ್ಕೆ ಕರೆದುಕೊಂಡು ಬಂದು ಉಚಿತಾಸನವನ್ನಿತ್ತು ಕುಳ್ಳಿರಿಸಿ “ಅಯ್ಯಾ ಬ್ರಾಹ್ಮಣೋತ್ತಮನೆ! ಎಲ್ಲಿಂದ ಬರೋಣವಾಯಿತು? ನನ್ನಿಂದ ನಿನ್ನ ಯಾವ ಅಭೀಷ್ಟವು ನಡೆಯಬೇಕು?” ಎಂದನು.

೨೪೯. ವಾಮನನು ಹೇಳುತ್ತಾನೆ:—ಮಹಾರಾಜ! ಪರಮೇಷ್ಠಿಯಾದ ಬ್ರಹ್ಮದೇವನ ಸಕಲಸೃಷ್ಟಿಯಲ್ಲಿಯೂ ನಾನಿರುವೆನು. ನಿನ್ನ ಈ ಮಹಾಯಜ್ಞವನ್ನು ನೋಡಬೇಕೆಂಬ ಬಯಕೆಯಿಂದಲೇ ಇಲ್ಲಿಗೆ ಬಂದಿರುವೆನು.

೨೫೦. ನಿಷ್ಕಲ್ಮಷನೆ! ಹಿಂದೆ ನಾನು ವರುಣನು ಮಾಡಿದ ಯಜ್ಞವನ್ನು ನೋಡಿದೆನು. ಯಕ್ಷಾಧಿಪತಿಯಾದ ಕುಬೇರನು ನೆರವೇರಿಸಿದ ಮಹಾಯಜ್ಞವನ್ನೂ ನಾನು ನೋಡಿರುವೆನು.

**ಧರ್ಮಸ್ಯಾಪಿ ಚ ಯಜ್ಞೋ ಮೇ ಪ್ರಜಾಪತೇಶ್ಚ ಸತ್ತಮ ।**
**ವಾಯೋರ್ಯಜ್ಞೋ ಮಹಾರಾಜ ದೃಷ್ಟೋ ಮೇ ವಿಧಿಪೂರ್ವಕಃ ॥ ೨೫೧ ॥**
**ರಾಜರ್ಷೀಣಾಂ ಚ ಯೇ ಯಜ್ಞಾ ದೃಷ್ಟಾಸ್ತೇಽಪಿ ಮಹಾವ್ರತ ।**
**ಯಾದೃಶಂ ವೈ ಮಹಾರಾಜ ಯಜ್ಞಂ ತೇ ದೃಷ್ಟವಾನಹಂ ॥ ೨೫೨ ॥**
**ಈದೃಶೋ ರಾಜರಾಜೇಂದ್ರ ನ ಭೂತೋ ನ ಭವಿಷ್ಯತಿ ।**
**ತಸ್ಮಾದಿಹಾಗತೋ ರಾಜನ್ ಯಾಚನಾರ್ಥಂ ತವಾಽನಘ ॥ ೨೫೩ ॥**

**ಬಲಿರುವಾಚ :—**

**ಯಾಚಸ್ವ ತ್ವಂ ದ್ವಿಜಶ್ರೇಷ್ಠ ಕಿಂ ತೇಽಭೀಷ್ಟಂ ದದಾಮ್ಯಹಂ ॥ ೨೫೪ ॥**

**ವಾಮನ ಉವಾಚ :—**

**ದೇಹಿ ಮೇ ರಾಜರಾಜೇಂದ್ರ ಪದಾನಿ ತ್ರೀಣಿ ಮೇದಿನೀಂ ।**
**ವಾಸಾರ್ಥಂ ರೋಚತೇ ತೇಽದ್ಯ ಯದಿ ಪಾರ್ಥಿವಸತ್ತಮ ॥ ೨೫೫ ॥**

**ಬಲಿರುವಾಚ :—**

**ಕಿಮಿದಂ ಯಾಚಿತಂ ವಿಪ್ರ ಸ್ವಲ್ಪಂ ತೇ ನ ಹಿ ತೇ ಪರಂ ।**
**ಗಜವಾಜಿರಥಾಃ ಕ್ಷೋಣೀ ರತ್ನಾನಿ ವಿವಿಧಾನಿ ಚ ॥ ೨೫೬ ॥**

---

೨೫೧. ಹಾಗೆಯೇ ಯಮಧರ್ಮರಾಜನು ಮಾಡಿದ ಯಜ್ಞವನ್ನೂ, ಚತುರ್ಮುಖನೂ, ವಾಯುದೇವನೂ ಮಾಡಿರುವ ಯಜ್ಞಗಳನ್ನೂ ಸಾಂಗವಾಗಿ ನೋಡಿ ಬಂದಿರುವೆನು.

೨೫೨. ಮಹಾದೀಕ್ಷಿತನೆ! ಹಿಂದಿನ ರಾಜರ್ಷಿಗಳನೇಕರು ಮಾಡಿದ ಯಜ್ಞಗಳನ್ನೂ ನೋಡಿರುವೆನು. ಈಗ ನೀನು ಮಾಡುತ್ತಿರುವ ಅಶ್ವಮೇಧಯಜ್ಞವನ್ನೂ ನೋಡುತ್ತಿರುವೆನಲ್ಲವೆ.

೨೫೩. ಇಂತಹ ವೈಭವಯುಕ್ತವಾದ ಯಜ್ಞವು ಹಿಂದೆ ಯಾವಾಗಲೂ ನಡೆಯಲಿಲ್ಲ. ಮುಂದೆಯೂ ನಡೆಯಲಾರದು. ಆದುದರಿಂದಲೇ ಪರಿಶುದ್ಧನಾದ ನಿನ್ನಲ್ಲಿ ಸ್ವಲ್ಪವಾದ ಯಾಚನೆಯೊಂದನ್ನು ಮಾಡಲು ಬಂದಿರುವೆನು.

೨೫೪. ಬಲಿಯು ಹೇಳುತ್ತಾನೆ:—ದ್ವಿಜೋತ್ತಮನೆ! ಯಾಚನೆಯನ್ನು ಮಾಡು. ನಾನು ನಿನ್ನ ಯಾವ ಅಭೀಷ್ಟವನ್ನು ನೆರವೇರಿಸಿಕೊಡಲಿ?

೨೫೫. ವಾಮನನು ಹೇಳುತ್ತಾನೆ:—ಮಹಾರಾಜೇಂದ್ರನೆ! ನನಗೆ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಕೊಡು. ನಿನಗೆ ಸಮ್ಮತಿಯಿರುವುದಾದರೆ ನಿನ್ನ ದೇಶದಲ್ಲಿ ವಾಸಮಾಡಬೇಕೆಂಬಭಿಲಾಷೆಯಿರುವುದು.

೨೫೬. ಬಲಿಯು ಹೇಳುತ್ತಾನೆ:— ಬ್ರಾಹ್ಮಣನೆ! ಇದೇನು ಹೀಗೆ ಯಾಚಿಸುತ್ತಿರುವೆ? ಇದು ನಿನಗೆ ಸಾಕಾಗುವುದಿಲ್ಲ. ಆನೆಗಳು, ಕುದುರೆಗಳು, ರಥಗಳು, ಭೂಮಿ, ನವರತ್ನಗಳು ಮುಂತಾದುವುಗಳನ್ನು ಕೇಳು.

ದಾಸದಾಸೀರ್ವರಾರೋಹಾಃ ಸ್ತ್ರಿಯೋ ನಾನಾವಸೂನಿ ಚ ।
ದ್ರವ್ಯಾಣಿ ವಾಸಸೀ ಶುಭ್ರೇ ಯಾಚಸ್ವ ತ್ವಂ ದ್ವಿಜೋತ್ತಮ ॥ ೨೫೭ ॥
ಪಾತ್ರೋಽಸಿ ಕೃತಕೃತ್ಯೋಽಸಿ ವೇದವೇದಾಂಗಪಾರಗಃ ॥ ೨೫೮ ॥

ವಾಮನ ಉವಾಚ:—

ನ ಮೇ ಕಿಂಚಿತ್ಸ್ಪೃಹಾ ರಾಜನ್ವಿದ್ಯತೇ ಭುವಿ ಮಾನದ ।
ದೇಹಿ ತ್ವಂ ತ್ರಿಪದಾಂ ಭೂಮಿಂ ಯದಿ ಶ್ರದ್ಧಾಽಸ್ತಿ ತೇಽಧುನಾ ॥ ೨೫೯ ॥
ಇತ್ಯುಕ್ತೇ ವಾಮನೇನಾಽಥ ಬಲಿರ್ವಚನಮಬ್ರವೀತ್ ।
ಗೃಹಾಣ ತ್ರಿಪದಾಂ ಭೂಮಿಂ ವಾಸಸ್ಯಾರ್ಥಂ ಹಿ ಮಾನದ ॥ ೨೬೦ ॥
ಇತ್ಯುಕ್ತ್ವಾ ಸ ಚ ರಾಜರ್ಷಿರ್ದದೌ ಭೂಮಿಂ ದ್ವಿಜಾಯ ವೈ ।
ವಾರಿತೋಽಪಿ ತದಾ ವ್ಯಾಸ ಭೃಗುಣಾ ದೈವನೋದಿತಃ ॥ ೨೬೧ ॥
ದತ್ತಮಾತ್ರೇ ಜಲೇ ಸದ್ಯೋ ಬ್ರಹ್ಮಾಂಡಂ ಚಾಕ್ರಮದ್ಧರಿಃ ।
ಸಾರ್ಧಪಾದದ್ವಯಂ ಜಾತಾ ಸಶೈಲವನಕಾನನಾ ॥ ೨೬೨ ॥

---

೨೫೭. ಸೇವಕರು, ದಾಸಿಯರು, ಸರ್ವಾಂಗಸುಂದರಿಯರಾದ ಸ್ತ್ರೀಯರು, ಬಹುವಿಧಗಳಾದ ನವರತ್ನಾದಿಗಳು, ದ್ರವ್ಯಗಳು, ಶುಭ್ರವಸ್ತ್ರಗಳು ಮುಂತಾದುವುಗಳಲ್ಲಿ ಯಾವುದನ್ನಾದರೂ ಯಾಚಿಸು.

೨೫೮. ನೀನು ದಾನಕ್ಕೆ ಸತ್ಪಾತ್ರನಾಗಿರುವೆ. ಕೃತಕೃತ್ಯನಾಗಿರುವೆ. ಮತ್ತು ವೇದವೇದಾಂಗಗಳಲ್ಲಿ ಪಾರಂಗತನಾಗಿರುವೆ.

೨೫೯. ವಾಮನನು ಹೇಳುತ್ತಾನೆ:— ರಾಜೇಂದ್ರ! ಭೂಲೋಕದಲ್ಲಿ ನನಗೆ ಬೇರೆ ಯಾವೊಂದು ಆಶೆಯೂ ಇರುವುದಿಲ್ಲ. ಆದುದರಿಂದ ನಿನಗೆ ನನ್ನ ವಿಷಯದಲ್ಲಿ ಶ್ರದ್ಧೆಯಿರುವುದಾದರೆ ನಾನು ಕೇಳಿದ ಮೂರು ಹೆಜ್ಜೆಯ ಭೂಮಿಯನ್ನು ಕೊಡು.

೨೬೦. ಇಂತೆಂದು ವಾಮನನು ಪ್ರಾರ್ಥಿಸಲು ಬಲಿಚಕ್ರವರ್ತಿಯು "ನಿನ್ನ ನಿವಾಸಕ್ಕಾಗಿ ಮೂರು ಹೆಜ್ಜೆಯಳತೆಯ ಭೂಮಿಯನ್ನು ಕೊಟ್ಟಿರುವೆನು; ತೆಗೆದುಕೊ" ಎಂದು ಹೇಳಿದನು.

೨೬೧. ಬಳಿಕ ಆ ರಾಜರ್ಷಿಯು ಭೂಮಿಯನ್ನು ಆ ಬ್ರಾಹ್ಮಣೋತ್ತಮನಿಗೆ ಧಾರೆಯೆರೆದುಕೊಟ್ಟನು. ವ್ಯಾಸನೆ! ಭೃಗುಮುನಿಯು ಬೇಡವೆನ್ನುತ್ತಿದ್ದರೂ ಆ ಮಹಾರಾಜನು ದೈವಪ್ರೇರಿತನಾಗಿ ಆ ದಾನವನ್ನು ಮಾಡಿದನು.

೨೬೨. ದಾನೋದಕವು ತನ್ನ ಕೈಯಲ್ಲಿ ಬಿದ್ದ ಮಾತ್ರದಿಂದಲೇ ಮಹಾವಿಷ್ಣುವು ಕ್ಷಣಮಾತ್ರದಲ್ಲಿ ಬ್ರಹ್ಮಾಂಡವನ್ನೆಲ್ಲ ಆಕ್ರಮಿಸಿದನು. ಪರ್ವತಗಳು, ಉದ್ಯಾನವನಗಳು, ಅರಣ್ಯಗಳಿಂದೊಡಗೂಡಿದ ಭೂಮಿಯೆಲ್ಲವೂ ಎರಡು ಪಾದಗಳ ಮಾತ್ರದಷ್ಟಾಯಿತು.

ವಸುಧೇಯಂ ತದಾ ವ್ಯಾಸ ಬಲಿನಾಚಾಽರ್ಪಿತಂ ವಸು ।
ಜಿತ್ವಾಽಸುರಗಣಾನ್ ಸರ್ವಾನ್ ರಾಜ್ಯಂ ದತ್ವಾ ಶತಕ್ರತೋಃ ॥ ೨೬೩ ॥
ಪಶ್ಚಾತ್ಕುಮುದ್ವತೀಂ ಪ್ರಾಪ್ತೋ ವಿಷ್ಣುರ್ವಾಮನರೂಪಧೃಕ್ ॥ ೨೬೪ ॥
ಋದ್ಧಿಸಿದ್ಧ್ಯಾಶ್ರಮೇ ಪುಣ್ಯೇ ತೀರ್ಥಂ ಕೃತ್ವಾಽಽತ್ಮಸಂಭವಂ ।
ನಿವಾಸಮಕರೋದ್ವ್ಯಾಸ ತತ್ರೈವ ಸ ಸುರೋತ್ತಮಃ ॥ ೨೬೫ ॥
ವಾಮನೇನ ಕೃತಂ ತೀರ್ಥಂ ವಾಮನಂ ಕುಂಡಮುಚ್ಯತೇ ।
ಭಾದ್ರೇ ಮಾಸಿ ಸಿತೇ ಪಕ್ಷೇ ದ್ವಾದಶೀ ಶ್ರವಣಾನ್ವಿತಾ ॥ ೨೬೬ ॥
ವಾಮನದ್ವಾದಶೀ ಪ್ರೋಕ್ತಾ ಹತ್ಯಾಕೋಟಿವಿನಾಶಿನೀ ।
ಅಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಹ್ಯುಪೋಷ್ಯೈಕಾದಶೀಂ ಯದಾ ॥ ೨೬೭ ॥
ರಾತ್ರೌ ಜಾಗರಣಂ ಕುರ್ಯಾದ್ಬ್ರಹ್ಮಭೂಯಾಯ ಕಲ್ಪತೇ ।
ದ್ವಾದಶ್ಯಾಂ ವೈ ವಿಶೇಷೇಣ ಮಹಾದಾನಾನಿ ಕುರ್ವತೇ ॥ ೨೬೮ ॥

---

೨೬೩. ಅಯ್ಯಾ ವ್ಯಾಸನೆ! ಇಂತು ಭೂಮಿಯೆಲ್ಲವೂ ಬಲಿಚಕ್ರವರ್ತಿಯಿಂದ ದಾನವಾಗಿ ಕೊಡಲ್ಪಟ್ಟಿತು. ಆಗ ಶ್ರೀಹರಿಯು ಸಕಲರಾಕ್ಷಸಸಮೂಹಗಳನ್ನೂ ಗೆದ್ದು ಮಹೇಂದ್ರನಿಗೆ ಪುನಃ ರಾಜ್ಯವನ್ನು ಕೊಟ್ಟನು.

೨೬೪. ವಾಮನರೂಪವನ್ನು ಧರಿಸಿಯೇ ಆತನು ಕುಮುದ್ವತೀಕ್ಷೇತ್ರಕ್ಕೆ ಬಂದು ನೆಲಸಿದನು.

೨೬೫. ಭೋಗಸಿದ್ಧಿಗಳನ್ನು ಕೊಡುವ ಆ ಪುಣ್ಯಾಶ್ರಮದಲ್ಲಿ ತನ್ನ ಶಕ್ತಿಯಿಂದಲೇ ಒಂದು ತೀರ್ಥವನ್ನು ನಿರ್ಮಿಸಿ ಅಲ್ಲಿಯೇ ಆ ದೇವೋತ್ತಮನು ವಾಸ ಮಾಡುತ್ತಿದ್ದನು

೨೬೬–೨೬೭. ವಾಮನಮೂರ್ತಿಯಿಂದ ನಿರ್ಮಿತವಾದ ಈ ತೀರ್ಥವೇ ವಾಮನಕುಂಡವೆಂದು ಕರೆಯಲ್ಪಡುವುದು. ಭಾದ್ರಪದಮಾಸದ ಶುಕ್ಲಪಕ್ಷದ ದ್ವಾದಶೀತಿಥಿಯು ಶ್ರವಣನಕ್ಷತ್ರದಿಂದ ಕೂಡಿರಲು ಆ ಸಂಯೋಗವನ್ನು ವಾಮನದ್ವಾದಶಿಯೆಂದು ಕರೆಯುವರು. ಈ ಶುಭ ತಿಥಿಯು ಒಂದು ಕೋಟಿ ಪ್ರಾಣಿಹತ್ಯೆಗಳ ಪಾತಕವನ್ನಾದರೂ ನಾಶಗೊಳಿಸುವುದು. ಆ ದಿವಸದ ಹಿಂದಿನ ಏಕಾದಶಿಯಲ್ಲಿ ಈ ತೀರ್ಥದಲ್ಲಿ ಮಾನವನು ಸ್ನಾನಮಾಡಿ ಉಪವಾಸವನ್ನಾಚರಿಸಬೇಕು.

೨೬೮. ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದವನು ಬ್ರಹ್ಮಲೋಕಕ್ಕೆ ಅರ್ಹನಾಗುವನು. ದ್ವಾದಶಿಯಲ್ಲಿ ವಿಶೇಷವಾಗಿ ಮಹಾದಾನಗಳನ್ನು ಕೊಡಬೇಕು.

ನ ತೇಷಾಂ ದುರ್ಲಭಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ।
ಏವಂ ವೈ ವಾಮನಂ ತೀರ್ಥಂ ಪುರಾ ಪ್ರೋಕ್ತಂ ಮಹರ್ಷಿಣಾ ॥ ೨೬೯ ॥
ಸರ್ವಪಾಪಹರಂ ಪುಣ್ಯಂ ಸರ್ವಕಾಮವರಪ್ರದಂ ।
ಪ್ರಾಪ್ಯತೇ ತೇನ ಸರ್ವಂ ಹಿ ನಾಽತ್ರ ಕಾರ್ಯಾ ವಿಚಾರಣಾ ॥ ೨೭೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ವಾಮನಕುಂಡ ಮಹಿಮಾ—ವಿಷ್ಣುಸಹಸ್ರನಾಮಕಥನಂ" ನಾಮ ತ್ರಿಷಷ್ಟಿತಮೋಽಧ್ಯಾಯಃ

---

೨೬೯. ಈ ವ್ರತವನ್ನಾಚರಿಸಿದವರಿಗೆ ಮೂರು ಲೋಕಗಳಲ್ಲಿಯೂ ದುರ್ಲಭವಾದುದು ಯಾವುದೂ ಇಲ್ಲ." ಇಂತೆಂದು ಮಹರ್ಷಿಯು ವಾಮನತೀರ್ಥದ ಮಾಹಾತ್ಮ್ಯೆಯನ್ನು ನಿರೂಪಿಸಿರುವನು.

೨೭೦. ಈ ತೀರ್ಥವು ಸಕಲಪಾಪಗಳನ್ನು ಕಳೆಯುವುದೂ, ಪುಣ್ಯಪ್ರದವೂ, ಸರ್ವಕಾಮ್ಯಾರ್ಥಗಳನ್ನು ಕೈಗೂಡಿಸುವುದೂ ಆಗಿರುವುದು. ಇದರ ಸೇವೆಯಿಂದ ಮನುಷ್ಯನು ಎಲ್ಲವನ್ನೂ ಪಡೆಯುವನೆಂಬುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ವಾಮನಕುಂಡಮಾಹಾತ್ಮ್ಯ—ವಿಷ್ಣುಸಹಸ್ರನಾಮಕಥನ"ವೆಂಬ ಅರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಃಷಷ್ಠಿತಮೋಽಧ್ಯಾಯಃ

## ಕಾಲಭೈರವತೀರ್ಥಯಾತ್ರಾವರ್ಣನಂ

**ಸನತ್ಕುಮಾರ ಉವಾಚ :—**

**ಅತಃ ಪರಂ ಪ್ರವಕ್ಷ್ಯಾಮಿ ವೀರೇಶ್ವರಮುಥೋ ಶೃಣು ।**
**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ವೀರಲೋಕಮವಾಪ್ನುಯಾತ್ ॥ ೧ ॥**
**ನಾಗಾನಾಂ ಪ್ರವರಂ ತೀರ್ಥಂ ಸರ್ವಕಾಮವರಪ್ರದಂ ।**
**ಕಾಲಭೈರವಮಿತ್ಯಾಖ್ಯಂ ತಚ್ಚ ತೀರ್ಥಂ ಪರಂ ಸ್ಮೃತಂ ॥ ೨ ॥**
**ಯಸ್ಯ ದರ್ಶನಮಾತ್ರೇಣ ಸರ್ವದುಃಖಾಽತಿಗೋ ಭವೇತ್ ॥ ೩ ॥**

**ವ್ಯಾಸ ಉವಾಚ :—**

**ಕಸ್ಮಿನ್ಕಾಲೇ ಹಿ ವಿಖ್ಯಾತಂ ಕಾಲಭೈರವಸಂಜ್ಞಿತಂ ।**
**ತೀರ್ಥಂ ಮುನಿವರಶ್ರೇಷ್ಠ ಏತದ್ವಿಸ್ತರತೋ ವದ ॥ ೪ ॥**

**ಸನತ್ಕುಮಾರ ಉವಾಚ :—**

**ಪುರಾಽಯಂ ಭೈರವೋ ಯೋಗೀ ಯೋಗಿನೀತ್ರಾಸಕಾರಕಃ ।**
**ಕಾಲಚಕ್ರಕೃತಾಃ ಕೃತ್ಯಾಃ ಯೋಗಿನೀನಾಂ ಗಣಾಸ್ತದಾ ॥ ೫ ॥**

---

## ಕನ್ನಡದ ಅನುವಾದ

### ಕಾಲಭೈರವತೀರ್ಥಯಾತ್ರಾವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಇನ್ನು ವೀರೇಶ್ವರತೀರ್ಥದ ಮಹಿಮೆಯನ್ನು ಹೇಳುವೆನು, ಕೇಳು. ಈ ತೀರ್ಥದಲ್ಲಿ ಸ್ನಾನಮಾಡಿಕೊಂಡು ಮಾನವನು ವೀರರಿಗುಚಿತವಾದ ಸ್ವರ್ಗಲೋಕವನ್ನು ಪಡೆಯುವನು.

೨–೩. ನಾಗರಿಗೆ ಸರ್ವೋತ್ತಮವೆನಿಸಿದ ಸರ್ವಾಭೀಷ್ಟದಾಯಕವಾದ ಮತ್ತೊಂದು ತೀರ್ಥವಿರುವುದು. ಕಾಲಭೈರವವೆಂಬ ಹೆಸರಿನ ಈ ತೀರ್ಥವು ಉತ್ತಮೋತ್ತಮವೆಂದು ಸ್ಮೃತವಾಗಿರುವುದು. ಇದನ್ನು ನೋಡಿದ ಮಾತ್ರದಿಂದಲೇ ಮನುಷ್ಯನು ಸಮಸ್ತಕ್ಲೇಶಗಳನ್ನೂ ದಾಟದವನಾಗುವನು.

೪. ವ್ಯಾಸನು ಹೇಳುತ್ತಾನೆ:—ಮಹರ್ಷಿಶ್ರೇಷ್ಠನೇ! ಕಾಲಭೈರವವೆಂಬ ಈ ತೀರ್ಥವು ಯಾವಕಾಲದಲ್ಲಿ ಪ್ರಖ್ಯಾತಿಯನ್ನು ಪಡೆಯಿತು? ಇದನ್ನು ನನಗೆ ವಿಸ್ತಾರವಾಗಿ ತಿಳಿಸುವವನಾಗು.

೫. ಸನತ್ಕುಮಾರನು ಹೇಳುತ್ತಾನೆ:— ಹಿಂದೆ ಇಲ್ಲಿ ಭೈರವನು ಯೋಗಾಭ್ಯಾಸನಿರತನಾಗಿ ಯೋಗಿನಿಯರಿಗೂ ಭಯವನ್ನುಂಟುಮಾಡಿದನು. ಆಗ ಯೋಗಿನೀಗಣಗಳೆಲ್ಲರೂ ಕಾಲಚಕ್ರದಿಂದ ಹೊರಟುಬಂದು ಇಲ್ಲಿ ಶಕ್ತಿಗಳಾಗಿದ್ದರು.

**ತಾಸಾಂ ಕಾಲೀತಿ ವಿಖ್ಯಾತಾ ಯೋಗಿನೀ ಪರಮೋತ್ತಮಾ ।**
**ತಯಾಽಯಂ ಪಾಲಿತೋ ನಿತ್ಯಂ ಪುತ್ರವದ್ಭೈರವೋಽಮಲಃ ॥ ೬ ॥**
**ತೇನೈತೇ ಚ ವಿನಿರ್ಧೂತಾ ದೋಷೋತ್ಪಾತಾಶ್ಚ ಸತ್ತಮ ।**
**ತ್ರಿವಿಧಾ ಭುವಿ ವಿಖ್ಯಾತಾಃ ಸರ್ವವಿಘ್ನಕರಾಃ ಪರಾಃ ॥ ೭ ॥**
**ಕಾಲಕೃತ್ಯಾಸ್ತದಾ ತೇನ ಭ್ರಂಶಿತಾಃ ಪರಮಾತ್ಮನಾ ।**
**ಮಹಾಮಾರೀ ಪೂತನಾ ಕೃತ್ಯಾ ಶಕುನೀ ರೇವತೀ ಖಲಾ ॥ ೮ ॥**
**ಕೋಟರೀ ತಾಮಸೀ ಮಾಯಾ ನವೈತಾ ಮಾತೃಕಾಃ ಸ್ಮೃತಾಃ ।**
**ದುಷ್ಟದೋಷವಹಾ ದುಷ್ಟಾಃ ಸರ್ವಪ್ರಾಣಿಭಯಂಕರಾಃ ॥ ೯ ॥**
**ವಶೀಚಕ್ರೇ ಸ ಧರ್ಮಾತ್ಮಾ ಸರ್ವಕಾಮವರಪ್ರದಾಃ ।**
**ಶಿಪ್ರಾತೀರೇ ಸ್ಥಿತೋ ನಿತ್ಯಂ ಕೂಲೇ ಚೋತ್ತರತಃ ಶುಭೇ ॥ ೧೦ ॥**
**ಊಷರಸ್ಯ ಪರೇ ಪೂರ್ವೇ ಸೋಽಪಿ ತಿಷ್ಠತಿ ಸರ್ವದಾ ।**
**ಆಷಾಢಸ್ಯ ಸಿತೇ ಪಕ್ಷೇ ರವಿವಾರೇ ಸಮಾಹಿತಃ ॥ ೧೧ ॥**

---

೬. ಅವರೆಲ್ಲರಲ್ಲಿಯೂ ಸರ್ವೋತ್ತಮೆಯಾದ ಯೋಗಿನಿಯು ಕಾಳಿಯೆಂದು ಪ್ರಖ್ಯಾತಳಾಗಿರುವಳು. ಅವಳಿಂದಲೇ ಪವಿತ್ರನಾದ ಈ ಭೈರವನು ನಿತ್ಯಪೂರಕ್ಷಿತನಾಗಿರುವನು.

೭. ಬ್ರಾಹ್ಮಣೋತ್ತಮನೆ! ಆದುದರಿಂದಲೇ ಇವರೆಲ್ಲರ ದೋಷಪ್ರಾಬಲ್ಯಗಳೂ ಆತನಿಂದ ದೂರೀಕೃತಗಳಾದುವು. ನಾನಾ ವಿಘ್ನಗಳನ್ನು ಮಾಡುವ ಮಹಾಬಲಿಷ್ಠರಾದ ಈ ಯೋಗಿನಿಯರು ಮೂರು ವಿಧವಾಗಿರುವರೆಂದು ಪ್ರಪಂಚದಲ್ಲಿ ವಿಖ್ಯಾತರಾಗಿರುವರು.

೮–೯. ಸರ್ವಾಂತರ್ಯಾಮಿಯಾದ ಆತನು ಕಾಲರೂಪಿಗಳಾದ ಈ ಶಕ್ತಿಗಳೆಲ್ಲರನ್ನೂ ಸ್ವಾಧೀನಗೊಳಿಸಿಕೊಂಡಿದ್ದನು. ಮಹಾಮಾರಿ, ಪೂತನೆ, ಕೃತ್ಯೆ, ಶಕುನಿ, ರೇವತಿ, ಜಲೆ, ಕೋಟರಿ, ತಾಮಸಿ ಮತ್ತು ಮಾಯೆಯೆಂಬ ಈ ಒಂಬತ್ತು ಜನರೇ ನವಮಾತೃಕೆಯರೆಂದು ಕರೆಯಲ್ಪಡುವರು. ಇವರು ನೀಚದೋಷಗಳನ್ನುಂಟುಮಾಡುವವರೂ, ದುಷ್ಟರೂ, ಸಕಲಜೀವರಿಗೂ ಭಯವನ್ನುಂಟುಮಾಡುವವರೂ ಆಗಿರುವರು.

೧೦. ಸರ್ವಾಭೀಷ್ಟವರಪ್ರದೆಯರಾದ ಇವರನ್ನು ಧರ್ಮೈಕತತ್ಪರನಾದ ಆ ಭೈರವನು ವಶಮಾಡಿಕೊಂಡು ಶಿಪ್ರಾನದಿಯ ಪವಿತ್ರವಾದ ಉತ್ತರತೀರದಲ್ಲಿ ಯಾವಾಗಲೂ ವಾಸಮಾಡುತ್ತಿರುವನು.

೧೧–೧೨. ಇಂದಿಗೂ ಆ ಕಾಲಭೈರವನು ಊಷರಪ್ರದೇಶಕ್ಕೆ ಪೂರ್ವದಿಕ್ಕಿನಲ್ಲಿ ನೆಲಸಿರುವನು. ಆಷಾಢಮಾಸದ ಶುಕ್ಲಪಕ್ಷದಲ್ಲಿ ಅಷ್ಟಮೀ, ನವಮೀ

ನವಮೀಂ ಚಾಽಷ್ಟಮೀಂ ಪ್ರಾಪ್ಯ ಚತುರ್ದಶ್ಯಾಂ ವಿಶೇಷತಃ ।
ಪೂಜಾಂ ಕುರ್ವಂತಿ ಯೇ ಕೇಚಿನ್ನರಾ ನಿಶ್ಚಲಮಾನಸಾಃ ॥ ೧೨ ॥
ವಿವಾಹೇ ಪುತ್ರಜನನೇ ಮಾಂಗಲ್ಯೇ ಚ ಶುಭೇ ಪರಂ ।
ಪತ್ರಪುಷ್ಪಾಽರ್ಘಗಂಧೈಶ್ಚ ನೈವೇದ್ಯೈರ್ವಿವಿಧೈಸ್ತಥಾ ॥ ೧೩ ॥
ತಾಂಬೂಲವಾಸಗಂಧಾದ್ಯೈಃ ಪೂಜಯೇದ್ವರದರೂಪಿಣಂ ।
ವಿಪ್ರಾಣಾಂ ಭೋಜನೈರ್ಹೋಮೈಸ್ತರ್ಪಯೇತ್ಸತತಂ ವಿಭುಂ ॥ ೧೪ ॥
ಏತತ್ಪರಮಕಲ್ಯಾಣಮೇತತ್ಪರಮಮಂಗಲಂ ।
ನತ್ವಾ ಸ್ತುತ್ವಾ ಚ ತಂ ದೇವಂ ಸರ್ವಕಾಮಾರ್ಥಸಿದ್ಧಯೇ ॥ ೧೫ ॥
ಸಕಲಕಲುಷಹಾರೀ ಧೂರ್ತದುಷ್ಟಾಂತಕಾರೀ
ಸುಚಿರಚರಿತಚಾರೀ ಮುಂಡಮೌಂಜೀಪ್ರಚಾರೀ ।
ಕರಕಲಿತಕಪಾಲೀ ಕುಂಡಲೀ ದಂಡಪಾಣಿಃ
ಸ ಭವತು ಸುಖಕಾರೀ ಭೈರವೋ ಭಾವಹಾರೀ ॥ ೧೬ ॥

---

ತಿಥಿಗಳೂ, ವಿಶೇಷವಾಗಿ ಚತುರ್ದಶಿಯೂ ಭಾನುವಾರದ ದಿನದಲ್ಲಿ ಕೂಡಿ ಬರಲು ಮಾನವರು ನಿಶ್ಚಲವಾದ ಮನಸ್ಸಿನಿಂದ ಆ ಸ್ವಾಮಿಯ ಪೂಜೆಯನ್ನು ಮಾಡಬೇಕು.

೧೩–೧೪. ವಿವಾಹ, ಪುತ್ರೋತ್ಸವ, ಇತರ ಶುಭಕಾರ್ಯಗಳೆಲ್ಲವುಗಳಲ್ಲಿಯೂ ಇದು ಉತ್ತಮಕಾರ್ಯವು. ಪತ್ರಗಳು, ಪುಷ್ಪಗಳು, ಉತ್ತಮ ಅರ್ಘ್ಯೋದಕ, ಗಂಧಾದಿಲೇಪನಗಳು, ವಿಧವಿಧಗಳಾದ ನೈವೇದ್ಯಗಳು, ತಾಂಬೂಲ, ಸುವಾಸನೆಯ ದ್ರವ್ಯಗಳು, ಮುಂತಾದುವುಗಳಿಂದ ವರಪ್ರದನಾದ ಆ ಮೂರ್ತಿಯನ್ನು ಪೂಜಿಸಬೇಕು. ಬ್ರಾಹ್ಮಣಭೋಜನಗಳಿಂದಲೂ, ಹೋಮಗಳಿಂದಲೂ ಲೋಕೇಶ್ವರನಾದ ಆತನನ್ನು ಸಂತೋಷಗೊಳಿಸಬೇಕು.

೧೫. ಇದೇ ಪರಮಕಲ್ಯಾಣವು. ಇದೇ ಸರ್ವಮಂಗಳಪ್ರದವು. ಸಕಲಾಭೀಷ್ಟಗಳನ್ನು ಪಡೆಯಬಯಸುವವನು ಆತನನ್ನು ನಮಸ್ಕರಿಸಿ ಮುಂದೆ ಹೇಳುವ ಶ್ಲೋಕಗಳಿಂದ ಸ್ತೋತ್ರ ಮಾಡಬೇಕು.

೧೬. "ಸಕಲ ದುರಿತಗಳನ್ನು ಕಳೆಯುವವನೂ, ಧೂರ್ತರಾದ ದುಷ್ಟರನ್ನು ಕೊನೆಗಾಣಿಸುವವನೂ, ಬಹುಕಾಲದಿಂದ ಚಾರಿತ್ರಪ್ರಸಿದ್ಧನಾದವನೂ, ಮುಂಡನ ಮಾಡಲ್ಪಟ್ಟ ತಲೆಯಿಂದಲೂ ಉಡೆನೂಲಿನಿಂದ ಶೋಭಿಸುತ್ತಿರುವವನೂ, ಕೈಯಲ್ಲಿ ಕಪಾಲವನ್ನು ಹಿಡಿದಿರುವವನೂ, ಕುಂಡಲಧಾರಿಯೂ, ದಂಡಪಾಣಿಯೂ, ಸಂಸಾರನಾಶಕನೂ ಆದ ಭೈರವನು ನನಗೆ ಸುಖವನ್ನುಂಟುಮಾಡುವವನಾಗಲಿ.

ವಿವಿಧರಾಸವಿಲಾಸವಿಲಾಸಿತಂ
ನವವಧೂರವಧೂತಪರಾಕ್ರಮಂ ।
ಮದವಿಘೂರ್ಣಿತಗೋಷ್ಪದಗೋಷ್ಪದಂ
ಭವಪದಂ ಸತತಂ ಸತತಂ ಸ್ಮರೇ ॥ ೧೭ ॥
ಅಮಲಕಮಲನೇತ್ರಂ ಚಾರುಚಂದ್ರಾವತಂಸಂ
ಸಕಲಗುಣಗರಿಷ್ಠಂ ಕಾಮಿನೀಕಾಮರೂಪಂ ।
ಪರಿಹೃತಪರಿತಾಪಂ ಡಾಕಿನೀನಾಶಹೇತುಂ
ಭಜ ಜನ ಶಿವರೂಪಂ ಭೈರವಂ ಭೂತನಾಥಂ ॥ ೧೮ ॥
ಸಬಲಬಲವಿಘಾತಂ ಕ್ಷೇತ್ರಪಾಲೈಕಪಾಲಂ
ವಿಕಟಕಟಕರಾಲಂ ಹ್ಯಟ್ಟಹಾಸಂ ವಿಶಾಲಂ ।
ಕರಗತಕರವಾಲಂ ನಾಗಯಜ್ಞೋಪವೀತಂ
ಭಜ ಜನ ಶಿವರೂಪಂ ಭೈರವಂ ಭೂತನಾಥಂ ॥ ೧೯ ॥
ಭವಭಯಪರಿಹಾರಂ ಯೋಗಿನೀತ್ರಾಸಕಾರಂ
ಸಕಲಸುರಗಣೇಶಂ ಚಾರುಚಂದ್ರಾರ್ಕನೇತ್ರಂ ।
ಮುಕುಟರುಚಿರಭಾಲಂ ಮುಕ್ತಮಾಲಂ ವಿಶಾಲಂ
ಭಜ ಜನ ಶಿವರೂಪಂ ಭೈರವಂ ಭೂತನಾಥಂ ॥ ೨೦ ॥

---

೧೭. ವಿವಿಧರಾಸಕೇಳೀ ವಿನೋದಗಳಲ್ಲಿ ಪ್ರೀತಿಯುಳ್ಳವನೂ, ನವಯುವತಿಯರನ್ನೂ ನಾಚಿಕೆಗೊಳಿಸುವ ಪರಾಕ್ರಮಿಯೂ, ಮದದಿಂದ ಸಂಸಾರವನ್ನೇ ಹುಲ್ಲುಗಾವಲಿನಲ್ಲಿರುವ ಗೋಷ್ಪಾದೋದಕದಂತೆ ಅನಾಯಾಸವಾಗಿ ದಾಟಿಸುವವನೂ ಆದ ಕಾಲಭೈರವನನ್ನು ನಿತ್ಯವೂ ಸ್ಮರಿಸುತ್ತಿರುವೆನು.

೧೮. ಶುದ್ಧವಾದ ಕಮಲದಳದಂತೆ ನೇತ್ರಗಳುಳ್ಳವನೂ, ಮನೋಹರನಾದ ಅಷ್ಟಮಿಚಂದ್ರನನ್ನು ಜಟಾಜೂಟದಲ್ಲಿ ಧರಿಸಿರುವವನೂ, ಸಮಸ್ತ ಸದ್ಗುಣಭರಿತನೂ, ಸ್ತ್ರೀಯರಿಗೆ ಮನ್ಮಥಾಕಾರನೂ, ಸಕಲತಾಪತ್ರಯಗಳನ್ನು ದೂರಮಾಡಿದವನೂ, ಡಾಕಿನ್ಯಾದಿ ದುಷ್ಟಗ್ರಹಗಳನ್ನು ನಾಶಮಾಡುವವನೂ, ಪರಮೇಶ್ವರನ ಸ್ವರೂಪನೂ, ಭೂತಗಣಗಳಿಗೊಡೆಯನೂ ಆದ ಭೈರವಸ್ವಾಮಿಯನ್ನು ಜನರು ಭಜಿಸಲಿ.

೧೯. ಬಲಿಷ್ಠರೆನಿಸಿದವರ ಬಲವನ್ನು ಮುರಿಯುವವನೂ, ಕ್ಷೇತ್ರಪಾಲಕರಿಗೆ ಏಕನಾಯಕನೂ, ವಕ್ರವಾದ ನಡುವಿನಿಂದ ಭಯಂಕರನೂ, ಬಹುವಾಗಿ ಅಟ್ಟಹಾಸವನ್ನು ಮಾಡುವವನೂ, ಕೈಯಲ್ಲಿ ಖಡ್ಗವನ್ನು ಹಿಡಿದಿರುವವನೂ, ಸರ್ಪವನ್ನು ಯಜ್ಞೋಪವೀತವನ್ನಾಗಿ ಧರಿಸಿದವನೂ, ಭೂತನಾಥನೂ ಶಿವಸ್ವರೂಪನೂ ಆದ ಭೈರವನನ್ನು ಭಜಿಸಿರಿ.

೨೦. ಜನರಿರಾ! ಸಂಸಾರದ ಭಯವನ್ನು ಪರಿಹರಿಸುವವನೂ, ಯೋಗಿನಿ

ಚತುರ್ಭುಜಂ ಶಂಖಗದಾಧರಾಽಯುಧಂ
ಪೀತಾಂಬರಂ ಸಾಂದ್ರಪಯೋದಸೌಭಗಂ ।
ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಂ
ಶೀಲಪ್ರದಂ ಶಂಕರರಕ್ಷಣಂ ಭಜೇ ॥ ೨೧ ॥

ಲೋಕಾಽಭಿರಾಮಂ ಭುವನಾಭಿರಾಮಂ
ಪ್ರಿಯಾಭಿರಾಮಂ ಯಶಸಾಽಭಿರಾಮಂ ।
ಕೀರ್ತ್ಯಾಽಭಿರಾಮಂ ತಪಸಾಽಭಿರಾಮಂ
ತಂ ಭೂತನಾಥಂ ಶರಣಂ ಪ್ರಪದ್ಯೇ ॥ ೨೨ ॥

ಆದ್ಯಂ ಬ್ರಹ್ಮ ಸನಾತನಂ ಶುಚಿಪರಂ ಸಿದ್ಧಿಪ್ರದಂ ಕಾಮದಂ
ಸೇವ್ಯಂ ಭಕ್ತಿಸಮನ್ವಿತಂ ಹರಿಹರೈಃ ಸೃಷ್ಟ್ಯಾಽಸಹಂ ಸಾಧುಭಿಃ ।
ಯೋಗ್ಯಂ ಯೋಗವಿಚಾರಿತಂ ಯುಗಧರಂ ಯೋಗ್ಯಾನನಂ ಯೋಗಿನಂ
ವಂದೇಽಹಂ ಸಕಲಂ ಕಲಂಕರಹಿತಂ ಸತ್ಸೇವಿತಂ ಭೈರವಂ ॥ ೨೩ ॥

---

ಯರಿಗೆ ಭಯವನ್ನುಂಟುಮಾಡುವವನೂ, ಸಕಲ ದೇವತಾಸಮೂಹಗಳಿಗೊಡೆಯನೂ, ಸೂರ್ಯಚಂದ್ರಾಗ್ನಿಗಳೇ ತ್ರಿನೇತ್ರಗಳಾಗಿರುವವನೂ, ಕಿರೀಟದಿಂದ ಶೋಭಿಸುತ್ತಿರುವ ಹಣೆಯುಳ್ಳವನೂ, ಉದಾರಗಳಾದ ಮುಕ್ತಾಮಾಲೆಗಳಿಂದ ಅಲಂಕೃತನೂ, ಶಿವರೂಪನೂ, ಭೂತಾಧಿಪತಿಯೂ ಆದ ಕಾಲಭೈರವನನ್ನು ನಿರಂತರವೂ ಭಜಿಸಿರಿ.

೨೧. ನಾಲ್ಕು ಭುಜಗಳಿಂದ ಶೋಭಿಸುವವನೂ, ಶಂಖ, ಚಕ್ರ, ಗದೆಗಳನ್ನು ಆಯುಧಗಳಾಗಿ ಹಿಡಿದಿರುವವನೂ, ಪೀತಾಂಬರವನ್ನುಟ್ಟವನೂ, ನೀರಿನಿಂದ ತುಂಬಿದ ಮೇಘದಂತೆ ನೀಲದೇಹಕಾಂತಿಯುಳ್ಳವನೂ, ಶ್ರೀ ವತ್ಸವೆಂಬ ಚಿಹ್ನೆಯನ್ನು ವಕ್ಷಸ್ಥಳದಲ್ಲಿ ಧರಿಸಿರುವವನೂ, ಕಂಠದಲ್ಲಿ ಶೋಭಿಸುವ ಕೌಸ್ತುಭ ಮಣಿಯುಳ್ಳವನೂ, ಸದ್ಬುದ್ಧಿಪ್ರದನೂ, ಮಹೇಶ್ವರನ ರಕ್ಷಕನೂ ಆದ ಭೈರವನನ್ನು ಭಜಿಸುವೆನು.

೨೨. ಭೂಮಂಡಲದ ಎಲ್ಲರಿಗೂ ಬೇಕಾದವನೂ, ತ್ರಿಲೋಕನಿವಾಸಿಗಳಿಗೆ ಅಭಿರಾಮನೂ, ತನ್ನ ಭಕ್ತರಿಗೆ ಮನಸ್ಸಂತೋಷವನ್ನುಂಟುಮಾಡುವವನೂ, ಯಶಸ್ಸಿನಿಂದ ಪ್ರಖ್ಯಾತನೂ, ಕೀರ್ತಿಯಿಂದ ಆದರಣೀಯನೂ, ತಪಶ್ಶಕ್ತಿಯಿಂದ ಮಾನ್ಯನೂ, ಭೂತನಾಥನೂ ಆದ ಕಾಲಭೈರವನನ್ನು ಶರಣುಹೋಗುವೆನು.

೨೩. ಪ್ರಪಂಚದ ಆದಿಯಲ್ಲಿದ್ದ ಸನಾತನಬ್ರಹ್ಮವಸ್ತುವೂ, ನಿರ್ಮಲನೂ, ಅಷ್ಟಸಿದ್ಧಿಗಳನ್ನು ಭಜಕರಿಗೆ ಕೊಡುವವನೂ, ಅಭೀಷ್ಟದಾಯಕನೂ, ಸಕಲ ಸಂಸೇವ್ಯನೂ, ಹರಿಹರರ ಭಕ್ತಿಯನ್ನೂ ಕೈಗೊಳ್ಳುವವನೂ, ಸೃಷ್ಟಿಯ ದಿನದಿಂದ ಸಾಧುಗಳೊಡನೆ ವಿಹರಿಸುವವನೂ, ಪೂಜಾರ್ಹನೂ, ಯೋಗಾಭ್ಯಾಸಮಾರ್ಗದಿಂದ ಮೃಗ್ಯನಾದವನೂ, ಯುಗಪ್ರವರ್ತಕನೂ, ಸುಂದರ

ಭೈರವಾಷ್ಟಕಮಿದಂ ಪುಣ್ಯಂ ಪ್ರಾತಃಕಾಲೇ ಪಠೇನ್ನರಃ ।
ದುಃಸ್ವಪ್ನನಾಶನಂ ತಸ್ಯ ವಾಂಛಿತಾರ್ಥಫಲಂ ಭವೇತ್ ॥ ೨೪ ॥
ರಾಜದ್ವಾರೇ ವಿವಾದೇ ಚ ಸಂಗ್ರಾಮೇ ಸಂಕಟೇ ತಥಾ ।
ರಾಜ್ಞಾ ಕ್ರುದ್ಧೇನ ಚಾಜ್ಞಪ್ತೇ ಶತ್ರುಬಂಧಗತೇ ತಥಾ ॥ ೨೫ ॥
ದಾರಿದ್ರ್ಯದುಃಖನಾಶಾಯ ಪಠಿತವ್ಯಂ ಸಮಾಹಿತೈಃ ।
ನ ತೇಷಾಂ ಜಾಯತೇ ಕಿಂಚಿದ್ದುರ್ಲಭಂ ಭುವಿ ವಾಂಛಿತಂ ॥ ೨೬ ॥

॥ ಇತಿ ಭೈರವಾಷ್ಟಕಂ ॥

ಅಸ್ಮಿಂಸ್ತೀರ್ಥೇ ಪ್ರಕರ್ತವ್ಯಂ ಸ್ನಾನದಾನಾದಿಕಂ ನರೈಃ ।
ಸಂಸಾರಭಯಭೀತೈಶ್ಚ ಪೂಜಿತೋ ಭೈರವೋ ವರಃ ।
ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯಂ ತೀರ್ಥಮುತ್ತಮಂ ॥ ೨೭ ॥

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕಾಲಭೈರವತೀರ್ಥಯಾತ್ರಾನುವರ್ಣನಂ" ನಾಮ ಚತುಃಷಷ್ಟಿತಮೋಽಧ್ಯಾಯಃ**

---

ಮುಖನೂ, ಯೋಗಿರಾಜನೂ, ಪರಿಪೂರ್ಣನೂ, ಸಕಲದೋಷವರ್ಜಿತನೂ, ಸಜ್ಜನಸೇವಿತನೂ ಆದ ಕಾಲಭೈರವನನ್ನು ನಮಸ್ಕರಿಸುವೆನು."

೨೪. ಪುಣ್ಯಪ್ರದವಾದ ಈ ಭೈರವಾಷ್ಟಕವನ್ನು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಮಾನವನು ಪಠನಮಾಡಲು ದುಸ್ಸ್ವಪ್ನದ ದೋಷವು ನಾಶವಾಗುವುದಲ್ಲದೆ ಸಕಲ ವಾಂಛಿತಾರ್ಥಗಳೂ ಲಭಿಸುವುವು.

೨೫–೨೬. ರಾಜಸಂದರ್ಶನದ ವೇಳೆಯಲ್ಲಾಗಲಿ, ವಾದಭೂಮಿಯಲ್ಲಾಗಲಿ, ಯುದ್ಧರಂಗದಲ್ಲಾಗಲಿ, ಸಂಕಟವೊದಗಿದಾಗಲಾಗಲಿ, ರಾಜನು ಕುಪಿತನಾಗಿ ಬಂಧನಾದಿಗಳನ್ನು ಆಜ್ಞೆಮಾಡಿದ ಸಮಯದಲ್ಲಾಗಲಿ, ಶತ್ರುಗಳಿಗೆ ಸೆರೆಸಿಕ್ಕ ಸಮಯಗಳಲ್ಲಾಗಲಿ, ದಾರಿದ್ರ್ಯದ ದುಃಖವು ಪ್ರಾಪ್ತವಾದಲ್ಲಿಯಾಗಲಿ ಈ ಅಷ್ಟಕವನ್ನು ಶಾಂತಮನಸ್ಸಿನಿಂದ ಪಠಿಸಬೇಕು. ಅವರಿಗೆ ಭೂಲೋಕದಲ್ಲಿಯೇ ದುರ್ಲಭವಾದ ವಾಂಛಿತವಾವುದೂ ಇರುವುದಿಲ್ಲ.

೨೭. ಕಾಲಭೈರವ ತೀರ್ಥದಲ್ಲಿ ನರನು ಸ್ನಾನದಾನಾದಿ ಸತ್ಕಾರ್ಯಗಳನ್ನು ಮಾಡಬೇಕು. ಸಂಸಾರಭಯಗ್ರಸ್ತರಾದವರು ಉತ್ತಮ ದೈವವಾದ ಈ ಭೈರವನನ್ನು ಪೂಜಿಸಬೇಕು. ಆದುದರಿಂದ ಸರ್ವಪ್ರಕಾರದಿಂದಲೂ ಈ ತೀರ್ಥದ ಸೇವನೆಯನ್ನು ಮಾಡಬೇಕು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕಾಲಭೈರವತೀರ್ಥಯಾತ್ರಾನುವರ್ಣನ"ವೆಂಬ ಅರುವತ್ತನಾಲ್ಕನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಪಂಚಷಷ್ಟಿತಮೋಽಧ್ಯಾಯಃ

## ನಾಗತೀರ್ಥಮಹಿಮಾನುವರ್ಣನಂ

ವ್ಯಾಸ ಉವಾಚ :—

ನಾಗತೀರ್ಥಂ ತ್ವಯಾ ಬ್ರಹ್ಮನ್ಪುರಾ ಪ್ರೋಕ್ತಂ ಯಶಸ್ವಿನಾ ।
ತಸ್ಯ ತೀರ್ಥವರಸ್ಯಾಽಪಿ ಮಹಿಮಾನಂ ಚ ಸತ್ತಮ ॥ ೧ ॥
ಭೂಯಸ್ತು ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ।
ಕಿಯತ್ಕಾಲೇ ಸಮಾಖ್ಯಾತಮೇತದ್ವಿಸ್ತರತೋ ವದ ॥ ೨ ॥

ಸನತ್ಕುಮಾರ ಉವಾಚ :—

ಶೃಣು ಬ್ರಹ್ಮನ್ಪ್ರವಕ್ಷ್ಯಾಮಿ ತವಾಽಗ್ರೇ ನಾಗತೀರ್ಥಜಾಂ ।
ಕಥಾಂ ಪುಣ್ಯತಮಾಂ ತುಭ್ಯಂ ಭುವಿ ಪಾಪಹರಾಂ ಪರಾಂ ॥ ೩ ॥
ಯಸ್ಯಾಃ ಶ್ರವಣಮಾತ್ರೇಣ ಶಾಪಮುಕ್ತೋ ಭವೇನ್ನರಃ ।
ಪುರಾ ನಾಗಾಃ ಪರಿಭ್ರಷ್ಟಾ ಮಾತುಃ ಶಾಪಾತ್ಪರಂತಪ ॥ ೪ ॥
ಜನಮೇಜಯೇನ ದಗ್ಧಾಸ್ತೇ ಮೋಕ್ಷಿತಾ ಹ್ಯಾಸ್ತಿಕೇನ ಚ ।
ಪಪ್ರಚ್ಛುಸ್ತೇ ದ್ವಿಜಶ್ರೇಷ್ಠ ಜರತ್ಕಾರ್ವಾತ್ಮಜಂ ತದಾ ॥ ೫ ॥

---

## ಕನ್ನಡದ ಅನುವಾದ

### ನಾಗತೀರ್ಥಮಹಿಮಾನುವರ್ಣನ

೧-೨. ವ್ಯಾಸನು ಹೇಳುತ್ತಾನೆ:—ಯಶಸ್ಸಂಪನ್ನನಾದ ಬ್ರಾಹ್ಮಣೋತ್ತಮನೇ! ಹಿಂದೆ ನಾಗತೀರ್ಥವೆಂಬುದನ್ನು ಕುರಿತು ಹೇಳಿದೆಯಲ್ಲವೆ. ಆ ತೀರ್ಥೋತ್ತಮದ ಮಹಿಮೆಯನ್ನು ಪುನಃ ಬ್ರಹ್ಮಜ್ಞರಾದ ತಮ್ಮ ಮುಖದಿಂದ ಕೇಳಲಾಶೆಯುಳ್ಳವನಾಗಿರುವೆನು. ಈ ತೀರ್ಥವು ಯಾವ ಕಾಲದಲ್ಲಿ ಈ ಹೆಸರನ್ನು ಪಡೆಯಿತೆಂಬುದನ್ನು ವಿಸ್ತರಿಸಿ ಹೇಳು.

೩. ಸನತ್ಕುಮಾರನು ಹೇಳುತ್ತಾನೆ:—ದ್ವಿಜಾಗ್ರೇಸರನೆ! ನಿನಗೆ ಪುಣ್ಯತಮವೂ, ಭೂಲೋಕದಲ್ಲಿ ಸಕಲಪಾತಕನಾಶಕವೂ, ಸರ್ವೋತ್ತಮವೂ ಆದ ಈ ನಾಗತೀರ್ಥದ ಕಥೆಯನ್ನು ಹೇಳುವೆನು, ಕೇಳು.

೪. ಇದನ್ನು ಕೇಳುವ ಮಾತ್ರದಿಂದ ಯಾವ ಮನುಜನಾದರೂ ಶಾಪಮುಕ್ತನಾಗುವನು. ಹಿಂದೆ ತಾಯಿಯ ಶಾಪದಿಂದ ನಾಗರೆಲ್ಲರೂ ತಮ್ಮ ಸ್ಥಾನವನ್ನು ಕಳೆದುಕೊಂಡರು.

೫. ಜನಮೇಜಯನ ಯಜ್ಞದಲ್ಲಿ ಸುಡಲನುವಾಗಿದ್ದ ಅವರೆಲ್ಲರನ್ನೂ ಆಸ್ತೀಕನು ಸಂರಕ್ಷಿಸಿದನು. ಆಗ ಜರತ್ಕಾರುವಿನ ಮಗನಾದ ಆತನನ್ನು ನಾಗರೆಲ್ಲರೂ ಇಂತೆಂದು ಪ್ರಶ್ನೆಮಾಡಿದರು.

ನಾಗಾ ಊಚುಃ:—

ಬ್ರಹ್ಮಂಸ್ತವ ಪ್ರಸಾದೇನ ಮೋಕ್ಷಿತಾ ಹವ್ಯವಾಹನಾತ್ ।
ಜನಮೇಜಯಸ್ಯ ಯಜ್ಞೇಽಸ್ಮಿನ್ ದೇವರಾಜಸ್ಯ ಸನ್ನಿಧೌ ॥ ೬ ॥
ಅಸ್ಮಾಕಂ ಭೂತಿಮನ್ವಿಚ್ಛನ್ವಾಸಸ್ಥಾರ್ಥಂ ಪರಂತಪ ।
ಯಸ್ಮಿನ್ ಸ್ಥಾನೇ ಸದಾ ಬ್ರಹ್ಮನ್ನಿವಾಸೋ ಜಾಯತೇಽಭಯಃ ॥ ೭ ॥

ಆಸ್ತೀಕ ಉವಾಚ:—

ಶ್ರೂಯತಾಂ ಮಾತುಲಶ್ರೇಷ್ಠಾ ಯುಷ್ಮಾಕಂ ಹಿತಮುತ್ತಮಂ ।
ಮಹಾಕಾಲವನೇ ರಮ್ಯೇ ಯಾ ವೈ ಕುಶಸ್ಥಲೀ ಸ್ಮೃತಾ ॥ ೮ ॥
ತಸ್ಯಾ ಹಿ ದಕ್ಷಿಣೇ ಭಾಗೇ ಪೂರ್ವತೀರ್ಥಂ ಸನಾತನಂ ।
ನಾಗಾಲಯಂ ಪುರಾ ಪ್ರೋಕ್ತಂ ಯತ್ರ ಸನ್ನಿಹಿತೋ ಹರಿಃ ॥ ೯ ॥
ಯೋಗನಿದ್ರಾಂ ಸಮಾಸಾದ್ಯ ಶೇತೇ ಬ್ರಹ್ಮ ಸನಾತನಂ ।
ಶೇಷಶಾಯೀತಿ ವಿಖ್ಯಾತಃ ಸರ್ವಲೋಕೇಷು ಗೀಯತೇ ॥ ೧೦ ॥
ಕಲ್ಪದೋಷೋ ನ ತತ್ರೈವ ಬಾಧತೇ ಸರ್ವದೇಹಿನಾಂ ।
ಬಕದಾಲ್ಭ್ಯಋಷಿಸ್ತತ್ರ ತಪಸ್ತೇಪೇ ಧೃತವ್ರತಃ ॥ ೧೧ ॥

---

೬. ನಾಗರು ಕೇಳುತ್ತಾರೆ:—ಬ್ರಾಹ್ಮಣಶ್ರೇಷ್ಠನೆ! ಜನಮೇಜಯನು ಇಂದ್ರನ ಸನ್ನಿಧಿಯಲ್ಲಿ ಮಾಡಿದ ಈ ಯಜ್ಞದ ಮಹಾಗ್ನಿಯಿಂದ ನಾವೆಲ್ಲರೂ ಬಿಡುಗಡೆಯನ್ನು ಹೊಂದಿರುವೆವು.

೭. ಓ ಶತ್ರುನಾಶಕನೆ! ನೀನು ಹೀಗೆಯೇ ನಮ್ಮ ಹಿತವನ್ನೇ ಕೋರುತ್ತ ವಾಸಮಾಡುವುದಕ್ಕಾಗಿ ಭಯವನ್ನೇ ಅರಿಯದಿರುವಂತಹ ಒಂದು ಉತ್ತಮ ಸ್ಥಾನವನ್ನು ತೋರಿಸಿಕೊಡು.

೮. ಆಸ್ತೀಕನು ಹೇಳುತ್ತಾನೆ:—ಎಲೈ ಸೋದರಮಾವಂದಿರಾ! ಎಲ್ಲರೂ ಕೇಳಿರಿ. ನಿಮಗೆ ಸಕಲವಿಧದಲ್ಲಿಯೂ ಹಿತವಾಗುವುದನ್ನೇ ಹೇಳುವೆನು. ರಮ್ಯವಾದ ಮಹಾಕಾಲವನದಲ್ಲಿ ಕುಶಸ್ಥಳಿಯೆಂಬ ಪ್ರದೇಶವಿರುವುದು.

೯. ಅದರ ದಕ್ಷಿಣಭಾಗದಲ್ಲಿ ಅನಾದಿಯಾಗಿ ನೆಲಸಿರುವ ಹಳೆಯ ತೀರ್ಥವೊಂದಿರುವುದು. ಹಿಂದೆ ಅದಕ್ಕೆ ನಾಗಾಲಯವೆಂಬ ಹೆಸರಿದ್ದಿತು. ಅಲ್ಲಿ ಶ್ರೀ ಮಹಾವಿಷ್ಣುವೇ ಸನ್ನಿಹಿತನಾಗಿರುವನು.

೧೦. ಅಲ್ಲಿ ಸನಾತನವಾದ ಬ್ರಹ್ಮವಸ್ತುವೇ ಯೋಗನಿದ್ರೆಯನ್ನಾಶ್ರಯಿಸಿ ಮಲಗಿರುವುದು. ಈ ಮೂರ್ತಿಯನ್ನೇ ಶೇಷಶಾಯಿಯೆಂದು ಮೂರು ಲೋಕಗಳ ನಿವಾಸಿಗಳೂ ಕರೆದು ಸ್ತುತಿಸುತ್ತಿರುವರು.

೧೧. ಅಲ್ಲಿ ಯಾವ ದೇಹಧಾರಿಗಳಿಗೂ ಕಲ್ಪಗಳ ಸಂಬಂಧವಾದ ದೋಷಗಳು ಅಂಟುವುದಿಲ್ಲ. ಬಕದಾಲ್ಭ್ಯನೆಂಬ ಮಹರ್ಷಿಯು ಉಗ್ರವಾದ ವ್ರತವನ್ನು ಕೈಕೊಂಡು ಅಲ್ಲಿ ತಪಸ್ಸನ್ನಾಚರಿಸಿದನು.

ಲೋಮಶಶ್ಚ ಮಹಾತೇಜಾಸ್ತತ್ರೈವ ಪ್ರತಿತಿಷ್ಠತಿ ।
ದೀರ್ಘಾಯುಷ್ಯಂ ಸಮಾಪನ್ನೋ ಮಾರ್ಕಂಡೇಯೋ ಮಹಾಮುನಿಃ ॥
ನ ವರ್ತತೇ ಕಾಲಚಕ್ರಂ ಮಹಾಕಾಲಪ್ರತಾಪತಃ ।
ಕಪಿಲಃ ಸಿದ್ಧಿಮಾಪನ್ನೋ ಯತ್ರ ತೀರ್ಥವರೋತ್ತಮೇ ॥ ೧೩ ॥
ಹರಿಶ್ಚಂದ್ರೋ ವಿಮುಕ್ತೋಽಭೂದ್ಗರ್ಹ್ಯಚಂಡಾಲಯೋನಿತಃ ।
ಸಪ್ತರ್ಷಿಪ್ರವರಾ ಯೇ ತೇ ನಿರ್ವಾಣಪದವೀಂ ಗತಾಃ ॥ ೧೪ ॥
ಏತಸ್ಮಾತ್ಕಾರಣಾತ್ಸರ್ವೈಸ್ತತ್ರ ವಿಶ್ರಮ್ಯತಾಂ ಸದಾ ।
ಮಾತುಃ ಶಾಪೋದ್ಭವೋ ದೋಷೋ ಯುಷ್ಮಾಕಂ ನೈವ ಬಾಧತೇ ॥೧೫॥
ಏತತ್ತೇ ವಚನಂ ಶ್ರುತ್ವಾ ಮಹರ್ಷೇರಾಸ್ತಿಕಸ್ಯ ಚ ।
ಆಗಚ್ಛಂಸ್ತತ್ರ ತೇ ಶೀಘ್ರಂ ವಾಸಾರ್ಥಂ ಪನ್ನಗೋತ್ತಮಾಃ ॥ ೧೬ ॥
ಏಲಾಪತ್ರಃ ಕಂಬಲಶ್ಚ ಕರ್ಕೋಟಕಧನಂಜಯೌ ।
ವಾಸುಕಿಃ ಪನ್ನಗಶ್ರೇಷ್ಠಸ್ತಕ್ಷಕೋ ನೀಲ ಏವ ಚ ॥ ೧೭ ॥
ಪದ್ಮಕಶ್ಚಾಽರ್ಬುದಶ್ಚೈವ ನಾಗಾಸ್ತೇ ಸರ್ವ ಏವ ಹಿ ।
ಅತ್ರಾಗತ್ಯ ಸ್ವಸ್ವಸ್ಥಾನಾನಿ ಚಕ್ರುಸ್ತೇ ಸುಚಿರವ್ರತಾಃ ॥ ೧೮ ॥

---

೧೨. ಮಹಾತೇಜೋವಂತನಾದ ಲೋಮಶಮಹರ್ಷಿಯೂ ಅಲ್ಲಿಯೇ ವಾಸಮಾಡುತ್ತಿರುವನು. ಇಲ್ಲಿಯೇ ಮಹಾಮುನಿಯಾದ ಮಾರ್ಕಂಡೇಯನು ದೀರ್ಘಾಯುಷ್ಯವನ್ನು ಸಂಪಾದಿಸಿದನು.

೧೩. ಇಲ್ಲಿ ಮಹಾಕಾಲೇಶ್ವರನ ಮಹಿಮೆಯಿಂದ ಕಾಲಗತಿಯು ವ್ಯತ್ಯಾಸಗಳನ್ನುಂಟುಮಾಡುವುದಿಲ್ಲ. ಈ ಸರ್ವೋತ್ತಮತೀರ್ಥದ ಬಳಿಯಲ್ಲಿಯೇ ಕಪಿಲಮಹರ್ಷಿಯು ತಪಸ್ಸಿದ್ಧಿಯನ್ನು ಪಡೆದನು.

೧೪. ಹರಿಶ್ಚಂದ್ರನು ನೀಚವಾದ ಚಂಡಾಲರೂಪದಿಂದ ಬಿಡುಗಡೆಯನ್ನು ಹೊಂದಿದನು. ಇಲ್ಲಿಯೇ ಸಪ್ತರ್ಷಿಗಳೂ ಮೋಕ್ಷಪದವಿಗೆ ಹೋಗುವವರಾದರು.

೧೫. ಈ ಕಾರಣದಿಂದ ನೀವೆಲ್ಲರೂ ಅಲ್ಲಿಗೆ ಹೋಗಿ ಯಾವಾಗಲೂ ವಾಸಮಾಡಿರಿ. ನಿಮ್ಮ ತಾಯಿಯ ಶಾಪದಿಂದುಂಟಾದ ದೋಷವು ಅಲ್ಲಿ ನಿಮಗೆ ಅಂಟುವುದಿಲ್ಲ.

೧೬. ಇಂತೆಂದ ಆಸ್ತೀಕನ ಮಾತುಗಳನ್ನು ಕೇಳಿ ನಾಗಶ್ರೇಷ್ಠರೆಲ್ಲರೂ ಅಲ್ಲಿಯೇ ವಾಸಮಾಡಲು ಬೇಗ ಆ ಮಹಾಕಾಲಕ್ಷೇತ್ರವನ್ನು ಬಂದು ಸೇರಿದರು.

೧೭–೧೮. ಏಲಾಪುತ್ರನು, ಕಂಬಳ, ಕರ್ಕೋಟಕ, ಧನಂಜಯ, ವಾಸುಕಿ, ತಕ್ಷಕ, ನೀಲ, ಪದ್ಮಕ, ಅರ್ಬುದ, ಮುಂತಾದ ಪನ್ನಗಶ್ರೇಷ್ಠರೆಲ್ಲರೂ ಇಲ್ಲಿಗೆ ಬಂದು ತಮ್ಮ ತಮ್ಮ ನೆಲೆಗಳನ್ನು ಮಾಡಿಕೊಂಡು ಬಹುಕಾಲ ತಪಸ್ಸುಗಳನ್ನು ಮಾಡುತ್ತಿದ್ದರು.

ತತ್ರ ರಮ್ಯಾಣಿ ತೀರ್ಥಾನಿ ಜಾತಾನಿ ಪರಮಾಣಿ ಚ ।
ನವಾನಿ ಚಕ್ರುಃ ಕುಂಡಾನಿ ತೀರ್ಥಭೂತಾನಿ ಸತ್ತಮ ॥ ೧೯ ॥
ಮಹಾಪುಣ್ಯಪ್ರದಾನ್ಯಾಹುರ್ಮಹಾಪಾಪಹರಾಣಿ ಚ ।
ಯತ್ರ ಸಿದ್ಧಾಶ್ಚ ಗಂಧರ್ವಾ ಋಷಯಃ ಸಂಶಿತವ್ರತಾಃ ॥ ೨೦ ॥
ಅಪ್ಸರೋಗಣಸಂಘೈಶ್ಚ ಸೇವ್ಯಂತೇ ಚ ಸದಾ ವರೈಃ ।
ಯತ್ರ ಶೇಷೋ ಮಹಾನಾಗಃ ಪುರಾ ಪ್ರೋಕ್ತೋ ಮಹರ್ಷಿಣಾ ॥ ೨೧ ॥
ಶೇಷಶಾಯೀ ಹ್ಯಲಂ ವಿಷ್ಣುರ್ಭಗವಾನ್ಕಮಲೇಕ್ಷಣಃ ।
ತತ್ರ ಸರ್ವಾಣಿ ತೀರ್ಥಾನಿ ತಿಷ್ಠಂತಿ ಭುವಿ ಸರ್ವದಾ ॥ ೨೨ ॥
ಶ್ವೇತದ್ವೀಪೇಽತಿವಿಖ್ಯಾತಾ ಮಣಿವಿಕ್ರಾಂತಭೂಮಿಕಾ ।
ಯತ್ರ ಪುಣ್ಯಾಶ್ಚ ವೈ ವೃಕ್ಷಾಃ ಪುಷ್ಪಿತಾಶ್ಚೈವ ಸರ್ವಶಃ ॥ ೨೩ ॥
ಹಂಸಕಾರಂಡಕಾಕಾದಿಪಿಕಕೋಕಿಲಸಾರಸಾಃ ।
ಪದ್ಮಖಂಡಗಣಾಸ್ತತ್ರ ನೃತ್ಯಂತಿ ಚ ಶಿಖಂಡಿನಃ ॥ ೨೪ ॥

---

೧೯. ಅಲ್ಲಿ ಮನೋಹರಗಳೂ ಮಹಿಮೋಪೇತಗಳೂ ಆದ ಅನೇಕ ತೀರ್ಥಗಳುಂಟಾದುವು. ಆ ನಾಗರೂ ತೀರ್ಥಗಳೆನಿಸಿದ ಅನೇಕ ನೂತನ ಕುಂಡಗಳನ್ನು ರಚಿಸಿದರು.

೨೦. ಅವುಗಳು ಮಹಾಪುಣ್ಯಪ್ರದಗಳೂ ಮಹಾಪಾತಕನಾಶಕಗಳೂ ಆದುವೆಂದು ಹೇಳುವರು. ಅಲ್ಲಿ ಸಿದ್ಧರೂ, ಗಂಧರ್ವರೂ, ಮಹರ್ಷಿಗಳೂ ವ್ರತಗಳನ್ನು ಆಚರಿಸುತ್ತಿರುವರು.

೨೧. ಆ ತೀರ್ಥಗಳನ್ನು ಉತ್ತಮರಾದ ಅಪ್ಸರೋಗಣಗಳು ನಿತ್ಯವೂ ಸೇವಿಸುತ್ತಿರುವರು. ಹಿಂದೆ ಮಹರ್ಷಿಯಿಂದ ಆದಿಷ್ಟನಾದ ಆದಿಶೇಷನೂ ಅಲ್ಲಿ ವಾಸಮಾಡುತ್ತಿದ್ದನು.

೨೨. ಸರ್ವೈಶ್ವರ್ಯಭರಿತನೂ, ಕಮಲನೇತ್ರನೂ ಆದ ಮಹಾವಿಷ್ಣುವು ಇಲ್ಲಿಯೇ ಶೇಷಶಾಯಿಯಾಗಿ ಮಲಗಿರುವನು. ಭೂಲೋಕದಲ್ಲಿರುವ ಸಕಲ ತೀರ್ಥಗಳೂ, ಸರ್ವಕಾಲಗಳಲ್ಲಿಯೂ ಅಲ್ಲಿ ನೆಲಸಿರುವುವು.

೨೩. ಈ ಪ್ರದೇಶವೇ ಶ್ವೇತದ್ವೀಪವೆಂದು ಪ್ರಖ್ಯಾತವಾಗಿರುವುದು. ಇದರ ಭೂಮಿಯು ಮಣಿಮಯವಾಗಿರುವುದು. ಇಲ್ಲಿನ ವೃಕ್ಷಗಳು ಪುಣ್ಯತಮಗಳೆನಿಸಿ ನಿತ್ಯವೂ ಪುಷ್ಪಫಲಭರಿತಗಳಾಗಿರುವುವು.

೨೪. ಹಂಸ, ನೀರುಕೋಳಿ, ಕಾಗೆ, ಗಿಳಿ, ಕೋಗಿಲೆ, ಸಾರಸ— ಮುಂತಾದ ಪಕ್ಷಿಗಳಿಂದಲೂ, ಪದ್ಮಗಳ ಸಮೂಹಗಳಿಂದಲೂ ಆ ತೀರ್ಥಗಳು ಶೋಭಿಸುತ್ತಿರುವುವು. ನವಿಲುಗಳು ಅಲ್ಲಿ ಕುಣಿಯುತ್ತಿರುವುವು.

ನಿಧಿರೇಷ ಮಹಾಪದ್ಮೋ ನೀಲೋತ್ಪಲಸುಗಂಧಿನಾ ।
ವಾಸಿತೋ ವಾಯುನಾ ಶುಭ್ರಃ ಕಿನ್ನರೋದ್ಗಾರನಾದಿತಃ ॥ ೨೫ ॥
ಯತ್ರ ಸುಸಂಸ್ಕೃತಾ ನಾರ್ಯೋ ವಿಹರಂತಿ ಸುರಾಂಗನಾಃ ।
ನಾಗಕನ್ಯಾಭೀರಮ್ಯಾಭಿರ್ಮಂಡಿತಂ ಪರಮಾದ್ಭುತಂ ॥ ೨೬ ॥
ಯತ್ರ ಸ್ನಾತ್ವಾ ನರೋ ಯಾತಿ ವೈಕುಂಠಂ ಧಾಮ ಶೋಭನಂ ।
ಶೇಷಶಾಯೀ ಹರಿರ್ಯತ್ರ ಶೇತೇ ಹಿ ಚ ರಮಾಪತಿಃ ॥ ೨೭ ॥
ತತ್ರ ರಮಾಸರೋ ನಾಮ ತೀರ್ಥಂ ಪರಮಶೋಭನಂ ।
ಯತ್ರ ಸ್ನಾತ್ವಾ ನರೋ ನಿತ್ಯಂ ಶ್ರೀಮಾನ್ ಭವತಿ ನಾಽನ್ಯಥಾ ॥ ೨೮ ॥
ಏವಂ ವ್ಯಾಸ ಪರಂ ಸ್ಥಾನಂ ಸರ್ವಪಾಪಹರಂ ಪರಂ ।
ಅತ್ರೈವ ಚ ಪರಂ ತೀರ್ಥಂ ಬಲೇರಾಶ್ರಮಮುದ್ಭುತಂ ॥ ೨೯ ॥
ಅತ್ರ ಸ್ನಾನಾದಿಕಂ ಕಾರ್ಯಂ ಯತ್ರ ಸನ್ನಿಹಿತೋ ಹರಿಃ ।
ಸರ್ವಪಾಪವಿಶುದ್ಧಾತ್ಮಾ ನರೋ ಭವತಿ ತತ್ಕ್ಷಣಾತ್ ॥ ೩೦ ॥

---

೨೫. ಇದೇ ಮಹಾಪದ್ಮವೆಂಬ ನಿಧಿಯು. ಇದು ನೀಲೋತ್ಪಲಗಳ ಮೇಲೆ ಬೀಸುವ ಮಂದಮಾರುತನಿಂದ ಸುಗಂಧಮಯವಾಗಿ, ಪರಿಶುದ್ಧವೂ, ಕಿನ್ನರರ ಗಾನಧ್ವನಿಯನ್ನು ಪ್ರಕಟಿಸುವುದೂ ಆಗಿರುವುದು.

೨೬. ಅಲ್ಲಿ ಉತ್ತಮ ಸಂಸ್ಕಾರವಿಶಿಷ್ಟರಾದ ಸ್ತ್ರೀಯರೂ, ದೇವತೆಗಳ ಪತ್ನಿಯರೂ ವಿಹರಿಸುತ್ತಿರುವರು. ಮಹಾದ್ಭುತವೆನಿಸುವಂತೆ ಈ ಪ್ರದೇಶವು ನಾಗಕನ್ಯೆಯರಿಂದಲೂ ತುಂಬಿರುವುದು.

೨೭. ಇಲ್ಲಿ ಸ್ನಾನವನ್ನು ಮಾಡಿದ ನರನು ಪುಣ್ಯಲೋಕವಾದ ವೈಕುಂಠವನ್ನೇ ಸೇರುವನು. ಲಕ್ಷ್ಮೀರಮಣನಾದ ಶ್ರೀಹರಿಯು ಇಲ್ಲಿಯೇ ಶೇಷಶಾಯಿಯಾಗಿ ಮಲಗಿರುವನು.

೨೮. ಇಲ್ಲಿರುವ ರಮಾಸರೋವರವೆಂಬ ಹೆಸರಿನ ತೀರ್ಥವು ಪರಮಪವಿತ್ರವಾದುದು. ಇದರಲ್ಲಿ ಮಿಂದ ಮಾನವನು ಯಾವಜ್ಜೀವವೂ ಐಶ್ವರ್ಯವಂತನಾಗಿರುವನು. ದರಿದ್ರನಾಗುವುದಿಲ್ಲ.

೨೯. ಎಲೈ ವ್ಯಾಸನೆ! ಇಂತು ಈ ಸ್ಥಾನವು ಸರ್ವಪಾಪಹರವೂ ಪರಮೋತ್ಕೃಷ್ಟವೂ ಆಗಿರುವುದು. ಇಲ್ಲಿಯೇ ಉತ್ತಮವಾದ ತೀರ್ಥವೂ ಬಲಿಚಕ್ರವರ್ತಿಯ ಅದ್ಭುತವಾದ ಆಶ್ರಮವೂ ಇರುವುವು.

೩೦. ಇಲ್ಲಿಯೇ ಶ್ರೀಹರಿಯ ಸಾನ್ನಿಧ್ಯದಲ್ಲಿ ಸ್ನಾನಾದಿ ಸತ್ಕ್ರಿಯೆಗಳನ್ನು ಮಾಡಬೇಕು. ನರನು ಕ್ಷಣಮಾತ್ರದಲ್ಲಿಯೇ ಸಕಲಪಾತಕಗಳನ್ನೂ ಕಳೆದುಕೊಂಡು ಪರಿಶುದ್ಧನಾಗುವನು.

ಕಿಯತ್ಪ್ರಮಾಣಂ ಮಾತ್ರಾಂ ಯೋ ದದತೀಹ ವಸುಂಧರಾಂ ।
ತನೂರುಹಾಣಿ ಯಾವಂತಿ ತಾವತ್ಕಾಲಸುಸಂಖ್ಯಯಾ ॥ ೩೧ ॥
ಅಕ್ಷಯ್ಯಾ ಲಭ್ಯತೇ ವೃದ್ಧಿಸ್ತೇಷಾಂ ಲೋಕಾಃ ಸನಾತನಾಃ ।
ಶ್ರಾವಣೇ ಮಾಸಿ ದರ್ಶೇ ಚ ಪಂಚಮ್ಯಾಂ ಸೋಮವಾಸರೇ ॥ ೩೨ ॥
ನಾಗಾನಾಂ ಪೂಜನಂ ಕಾರ್ಯಂ ಶ್ರಾದ್ಧಂ ದರ್ಶೇ ವಿಧೀಯತೇ ।
ಅಕ್ಷಯಂ ಜಾಯತೇ ಶ್ರಾದ್ಧಂ ವಾಂಛಿತಾರ್ಥಂ ಭವೇತ್ತತಃ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ನಾಗತೀರ್ಥಮಹಿಮಾನುವರ್ಣನಂ" ನಾಮ ಪಂಚಷಷ್ಟಿತಮೋಽಧ್ಯಾಯಃ

---

೩೧–೩೩. ಇಲ್ಲಿ ಎಷ್ಟೇ ಅಲ್ಪಪ್ರಮಾಣದ ಭೂಮಿಯನ್ನು ದಾನಮಾಡಿದರೂ, ದೇಹದಲ್ಲಿ ಎಷ್ಟು ರೋಮಗಳಿರುವುವೊ, ಆ ಸಂಖ್ಯೆಗನುಗುಣವಾಗಿ ಬಹುಕಾಲದವರೆಗೂ ಮಾನವರು ಸನಾತನಗಳಾದ ಊರ್ಧ್ವಲೋಕಗಳಲ್ಲಿ ಸೌಖ್ಯ ವೃದ್ಧಿಯನ್ನು ಪಡೆಯುತ್ತಿರುವರು. ಶ್ರಾವಣಮಾಸದಲ್ಲಿ ಪಂಚಮಿ ಮತ್ತು ಪೌರ್ಣಮಿಗಳು ಸೋಮವಾರದ ದಿನದೊಡನೆ ಸೇರಲು ಇಲ್ಲಿ ನಾಗಪೂಜೆಯನ್ನು ಮಾಡಬೇಕು. ಅಂದು ಮಾಡಿದ ಶ್ರಾದ್ಧವು ಅಕ್ಷಯಫಲದಾಯಕವಾಗುವುದಲ್ಲದೆ, ಮಾಡಿದವನ ವಾಂಛಿತಗಳೂ ಸಿದ್ಧಿಸುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರಮಾಹಾತ್ಮ್ಯದಲ್ಲಿ "ನಾಗತೀರ್ಥಮಹಿಮಾನುವರ್ಣನ" ವೆಂಬ ಅರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಷಷ್ಟಿತಮೋಽಧ್ಯಾಯಃ

## ನೃಸಿಂಹತೀರ್ಥಮಹಿಮಾನುವರ್ಣನಂ

ಸನತ್ಕುಮಾರ ಉವಾಚ :—

**ಭೂಯಃ ಶೃಣು ಪರಂ ವ್ಯಾಸ ತೀರ್ಥಾನಾಮುತ್ತಮಂ ವರಂ ।**
**ತತ್ತೀರ್ಥಂ ಸರ್ವಪಾಪಘ್ನಂ ನೃಸಿಂಹಸ್ಯ ಮಹಾತ್ಮನಃ ॥ ೧ ॥**
**ಯಸ್ಯ ದರ್ಶನಮಾತ್ರೇಣ ಸರ್ವಪಾಪಂ ಸಮುತ್ತರೇತ್ ।**
**ದೈತ್ಯರಾಜಃ ಸಮಾಖ್ಯಾತೋ ಹಿರಣ್ಯಕಶಿಪುಃ ಪುರಾ ॥ ೨ ॥**
**ತೇನೇಯಂ ವಸುಧಾ ಸರ್ವಾ ಸಂಪ್ರಾಪ್ತಾ ಚ ದುರಾತ್ಮನಾ ।**
**ದುಷ್ಟದೈತ್ಯಬಲೈರ್ವ್ಯಾಪ್ತಾ ಭಾರಾಕ್ರಾಂತಾ ಶುಚಾರ್ದಿತಾ ॥ ೩ ॥**
**ಗೌರ್ಭೂತ್ವಾಽಶ್ರುಮುಖೀ ದೇವೈರ್ಬ್ರಹ್ಮಾಣಂ ಶರಣಂ ಯಯೌ ।**
**ಭಾರಾಕ್ರಾಂತಾಂ ಧರಾಂ ದೃಷ್ಟ್ವಾ ಬ್ರಹ್ಮಾ ಲೋಕಪಿತಾಮಹಃ ॥ ೪ ॥**
**ಉವಾಚ ಶ್ಲಕ್ಷ್ಣಯಾ ವಾಚಾ ತಸ್ಯಾಃ ಶ್ರಮಂ ವ್ಯಪೋಹಿತುಂ ।**
**ಶ್ರೂಯತಾಂ ಭೋಽವನೇ ಪುಣ್ಯೇ ಭವತ್ಯಾ ಉಪಕಾರಕಂ ॥ ೫ ॥**

---

## ಕನ್ನಡದ ಅನುವಾದ

### ನೃಸಿಂಹತೀರ್ಥಮಹಿಮಾನುವರ್ಣನ

೧. ಸನತ್ಕುಮಾರನು ಹೇಳುತ್ತಾನೆ: ವ್ಯಾಸಮಹರ್ಷಿಯೆ! ಮತ್ತೊಂದು ಸರ್ವೋತ್ತಮವಾದ ತೀರ್ಥದ ಚರಿತ್ರೆಯನ್ನು ಕೇಳು. ಮಹಾತ್ಮನಾದ ನೃಸಿಂಹ ಸ್ವಾಮಿಯ ಹೆಸರಿನ ಆ ತೀರ್ಥವು ಸಕಲಪಾತಕಗಳನ್ನೂ ಕಳೆಯುವುದು.

೨. ಇದನ್ನು ನೋಡುವ ಮಾತ್ರದಿಂದಲೇ ಮಾನವನು ಸಕಲ ಪಾತಕ ಗಳನ್ನೂ ಕಳೆದುಕೊಳ್ಳುವನು. ಹಿಂದೆ ಹಿರಣ್ಯಕಶಿಪುವೆಂಬ ರಾಕ್ಷಸಚಕ್ರವರ್ತಿ ಯೊಬ್ಬನಿದ್ದನು.

೩. ದುರಾತ್ಮನಾದ ಆತನು ಈ ಸಮಸ್ತಭೂಮಂಡಲವನ್ನೂ ಸ್ವಾಧೀನ ಗೊಳಿಸಿಕೊಂಡಿದ್ದನು. ಆಗ ಭೂಮಿಯು ದುಷ್ಟರಾದ ರಾಕ್ಷಸರ ಸೈನ್ಯದಿಂದ ಆವೃತವೂ, ಭಾರವನ್ನು ಸಹಿಸಲಾರದುದೂ, ಶೋಕಗೊಂಡುದೂ ಆಗಿದ್ದಿತು.

೪. ಅದು ಆಕಳಿನ ರೂಪವನ್ನು ತಾಳಿ ಕಣ್ಣೀರನ್ನು ಸುರಿಸುತ್ತ ದೇವತಾ ಗಣಗಳೊಡನೆ ಚತುರ್ಮುಖನಲ್ಲಿ ಶರಣುಹೋಯಿತು. ಲೋಕಪಿತಾಮಹನಾದ ಬ್ರಹ್ಮನು ಭಾರಾಸಹಿಷ್ಣುವಾದ ಆ ಭೂಮಿಯನ್ನು ಕಂಡನು.

೫. ಆಕೆಯ ಕಷ್ಟವನ್ನು ಕಳೆಯುವ ಅಭಿಪ್ರಾಯದಿಂದ ಮೃದುವಾದ ಮಾತುಗಳಲ್ಲಿ ಇಂತೆಂದನು. "ಎಲೌ ಭೂದೇವಿಯೆ! ನಿನಗೆ ಮನಸ್ಸಮಾಧಾನ ವಾಗುವಂತಹ ಮಾತುಗಳನ್ನು ಹೇಳುವೆನು, ಕೇಳು.

ವಚೋ ವದಾಮಿ ತೇ ತಥ್ಯಂ ದೇಶಕಾಲೋಚಿತಂ ತಥಾ ।
ಪುರಾಽನೇನ ತಪಶ್ಚೀರ್ಣಂ ದುಷ್ಕರಂ ಸರ್ವದೇಹಿನಾಂ ॥ ೬ ॥
ಗಾಯತ್ರ್ಯುಪಾಸನಾ ತೇನ ಕೃತಾ ಸುನಿಯತಾತ್ಮನಾ ।
ಮಯಾಚಾಽಸ್ಯ ವರೋ ದತ್ತಃ ಪ್ರೀತಿಯುಕ್ತೇನ ಚೇತಸಾ ॥ ೭ ॥
ನ ದಿವಾ ನ ತಥಾ ರಾತ್ರೌ ನಾಂತರಿಕ್ಷೇ ನ ಭೂತಲೇ ।
ನಾಽತಿಶುಷ್ಕೇಣ ಚಾರ್ದ್ರೇಣ ನ ಚಾಽಸ್ತ್ರಶಸ್ತ್ರಘಾತನೈಃ ॥ ೮ ॥
ನ ದೇವಾಽಸುರಗಂಧರ್ವೈರ್ನ ಯಕ್ಷೋರಗಕಿನ್ನರೈಃ ।
ಪಿಶಾಚೈರ್ಗುಹ್ಯಕಾದ್ಯೈಶ್ಚ ರಾಕ್ಷಸೈರ್ನ ಕದಾಚನ ।
ಮಾನವೈಃ ಪಕ್ಷಿಜಾತ್ಯೈಶ್ಚ ನ ಮೇ ಮೃತ್ಯುರ್ಭವೇದಿತಿ ॥ ೯ ॥
ಏಕಕರತಲಾಘಾತೈಃ ಸಕುಲಬಲವಾಹನಂ ।
ಮಾರಯಿಷ್ಯತಿ ಮಾಂ ವೀರಃ ಸ ಮೇ ಮೃತ್ಯುರ್ಭವಿಷ್ಯತಿ ॥ ೧೦ ॥
ತಥೇತ್ಯುಕ್ತ್ವಾಽತಿಹೃಷ್ಟಾತ್ಮಾ ತಮಹಂ ಚ ತದಾ ವನೇ ।
ಆಗಮಂ ಚೈವ ಲೋಕಂ ಸ್ವಂ ಸ ದೈತ್ಯೋ ಘೋರಶಾಸನಃ ॥ ೧೧ ॥

---

೬. ಸತ್ಯವೂ, ದೇಶಕಾಲೋಚಿತವೂ ಆದ ಮಾತನ್ನು ಹೇಳುತ್ತೇನೆ. ಹಿಂದೆ ಈತನು ಸಾಧಾರಣಮಾನವರಿಗೆ ದುಸ್ಸಾಧ್ಯವಾದ ಮಹಾತಪಸ್ಸನ್ನು ಆಚರಿಸಿದನು.

೭. ಅತ್ಯಂತವಾದ ಆತ್ಮಸಂಯಮದಿಂದ ಕೂಡಿದವನಾಗಿ ಗಾಯತ್ರೀ ದೇವಿಯ ಮತ್ತು ಗಾಯತ್ರೀಮಂತ್ರದ ಉಪಾಸನೆಯನ್ನು ಮಾಡಿದನು. ಆತನ ತಪಸ್ಸಿನಿಂದ ನನ್ನ ಮನಸ್ಸು ಸಂತೋಷಗೊಳ್ಳಲು ಆತನಿಗೆ ನಾನು ವರವನ್ನು ಕೊಟ್ಟೆನು.

೮–೯. 'ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ, ಆಕಾಶದಲ್ಲಾಗಲಿ, ಭೂಮಿಯಲ್ಲಾಗಲಿ, ಒಣಗಿದ ಪದಾರ್ಥದಿಂದಾಗಲಿ, ಹಸಿಯ ಪದಾರ್ಥದಿಂದಾಗಲಿ, ಅಸ್ತ್ರಶಸ್ತ್ರಗಳ ಮೂಲಕವಾಗಿಯಾಗಲಿ, ದೇವತೆಗಳು, ರಾಕ್ಷಸರು, ಗಂಧರ್ವರು, ಯಕ್ಷರು, ನಾಗರು, ಕಿನ್ನರರು, ಪಿಶಾಚರು, ಗುಹ್ಯಕರು, ಅಸುರರು, ಮನುಷ್ಯರು, ಪಕ್ಷಿಗಳು—ಇವುಗಳಲ್ಲಿ ಯಾರಿಂದಲೇ ಆಗಲಿ ನನಗೆ ಮರಣವುಂಟಾಗಬಾರದೆ'ಂದು ಆತನು ಕೇಳಿಕೊಂಡನು.

೧೦. ಒಂದೇ ಕೈ ಹೊಡೆತದಿಂದ ಬಂಧುಸೈನ್ಯವಾಹನಸಮೇತನಾದ ನನ್ನನ್ನು ಯಾವನು ನಿಗ್ರಹಿಸುವನೊ, ಅವನೇ ನನಗೆ ಮೃತ್ಯುವಾಗಬೇಕೆಂದೂ ವರವನ್ನು ಯಾಚಿಸಿದನು.

೧೧. ಎಲೌ ಭೂದೇವಿಯೆ! ಹಾಗೆಯೇ ಆಗಲೆಂದು ಅವನಿಗೆ ವರವನ್ನಿತ್ತು

ಬಭೂವ ಸರ್ವಲೋಕಾನಾಂ ಶಾಸ್ತಾ ಚಾಽತುಲವಿಕ್ರಮಃ ।
ತಸ್ಯೈವಾಽಧಿಕೃತಾ ಲೋಕೇ ಬಭೂವುರ್ವಿಗತಜ್ವರಾಃ ॥ ೧೨ ॥
ತ್ರೈಲೋಕ್ಯಂ ಬುಭುಜೇ ನಿತ್ಯಂ ಸರ್ವದೈತ್ಯಜನೇಶ್ವರಃ ।
ತಸ್ಮಾದ್ಯೂಯಂ ವನಂ ಯಾತ ಮಹಾಕಾಲಂ ಮಹೇಶಿತುಃ ॥ ೧೩ ॥
ತತ್ರ ತೀರ್ಥಂ ಮಹಚ್ಚಾಽಽಸೀತ್ಸರ್ವತೀರ್ಥವರೋತ್ತಮಂ ।
ಸಂಗಮೇಶ್ವರಸ್ಯ ದಕ್ಷಿಣೇ ಕರ್ಕರಾಜೋತ್ತರೇ ತಥಾ ॥ ೧೪ ॥
ಶಿಪ್ರಾತೀರೇ ಶುಭೇ ದೇಶೇ ಪೂರ್ವಂ ವೈಕುಂಠಸನ್ನಿಭಂ ।
ನೃಸಿಂಹಾಖ್ಯಂ ಪರಂ ಧಾಮ ತಸ್ಯ ತೀರ್ಥಂ ಪ್ರತಿಷ್ಠಿತಂ ॥ ೧೫ ॥
ತತ್ರ ಗತ್ವಾ ಸುರಶ್ರೇಷ್ಠಾಃ ಸ್ನಾನದಾನಾದಿಕಾಃ ಕ್ರಿಯಾಃ ।
ಕುರುತ ಸತ್ವರಂ ಸರ್ವೇ ಪುನರ್ಲೋಕಾನವಾಪ್ಸ್ಯಥ ॥ ೧೬ ॥
ತೇ ತಸ್ಯ ವಚನಂ ಶ್ರುತ್ವಾ ದೇವಾ ಇಂದ್ರಪುರೋಗಮಾಃ ।
ಮಹಾಕಾಲವನಂ ಪ್ರಾಪ್ತಾ ಯತ್ರ ಶಿಪ್ರಾ ಪಯಸ್ವಿನೀ ॥ ೧೭ ॥

---

ಸಂತುಷ್ಟನಾಗಿ ನಾನು ನನ್ನ ಲೋಕಕ್ಕೆ ಹಿಂದಿರುಗಲು ಆ ದೈತ್ಯೇಶ್ವರನು ಮೂರು ಲೋಕಗಳಲ್ಲಿಯೂ ತನ್ನ ಭಯಂಕರಶಾಸನವನ್ನು ನಡೆಸಿದನು.

೧೨. ಅಮಿತಪರಾಕ್ರಮಿಯಾದ ಆ ಹಿರಣ್ಯಕಶಿಪುವು ಸಮಸ್ತಲೋಕಗಳನ್ನೂ ತನ್ನ ಆಳ್ವಿಕೆಗೊಳಪಡಿಸಿಕೊಂಡನು. ಆತನಿಂದ ಅಧಿಕಾರವನ್ನು ಹೊಂದಿದವರು ಮಾತ್ರವೇ ನಿರ್ಭಯವಾಗಿ ಲೋಕದಲ್ಲಿ ಸಂಚರಿಸುತ್ತಿದ್ದರು.

೧೩. ಸಕಲರಾಕ್ಷಸರಿಗೂ ಏಕಾಧಿಪತಿಯಾಗಿ ಆತನು ಮೂರು ಲೋಕಗಳ ಐಶ್ವರ್ಯವನ್ನೂ ಅನುಭವಿಸುತ್ತಿರುವನು. ಆದುದರಿಂದ ನೀವೆಲ್ಲರೂ ಮಹೇಶ್ವರನ ಸ್ಥಾನವೆನಿಸಿದ ಮಹಾಕಾಲವನಕ್ಕೆ ಹೋಗಿರಿ.

೧೪. ಸಂಗಮೇಶ್ವರನಿಗೆ ದಕ್ಷಿಣದಲ್ಲಿಯೂ, ಕರ್ಕರಾಜನಿಗೆ ಉತ್ತರದಲ್ಲಿಯೂ ಸಕಲತೀರ್ಥಗಳಿಗೂ ಮಿಗಿಲೆನಿಸಿದ ಉತ್ತಮೋತ್ತಮವಾದ ತೀರ್ಥವೊಂದಿರುವುದು.

೧೫. ಶಿಪ್ರಾನದಿಯ ತೀರದಲ್ಲಿರುವ ಈ ಶುಭಪ್ರದೇಶವು ಹಿಂದೆ ವೈಕುಂಠಕ್ಕೆ ಸಮಾನವೆನಿಸಿದ್ದಿತು. ಅಲ್ಲಿ ಉತ್ತಮವಾದ ನೃಸಿಂಹತೀರ್ಥವು ಪ್ರತಿಷ್ಠಿತವಾಗಿರುವುದು.

೧೬. ದೇವೋತ್ತಮರಿರಾ! ನೀವೆಲ್ಲರೂ ಅಲ್ಲಿಗೆ ಶೀಘ್ರವಾಗಿ ಹೋಗಿ ಸ್ನಾನದಾನಗಳೇ ಮೊದಲಾದ ಸತ್ಕಾರ್ಯಗಳನ್ನು ಮಾಡಿದರೆ ಪುನಃ ನಿಮ್ಮ ನಿಮ್ಮ ಲೋಕಗಳನ್ನು ಪಡೆಯುವಿರಿ.

೧೭. ಇಂದ್ರನೇ ಮುಂತಾದ ದೇವತೆಗಳೆಲ್ಲರೂ ಬ್ರಹ್ಮದೇವನ ಈ ಮಾತು

ನೃಸಿಂಹತೀರ್ಥೋಪಕೂಲೇ ಉಷಿತ್ವಾ ಶಾಶ್ವತೀಃ ಸಮಾಃ ।
ಸ್ನಾನದಾನಾದಿಕಂ ಕೃತ್ವಾ ನೃಸಿಂಹಸ್ಯಾರ್ಚನಂ ತಥಾ ॥ ೧೮ ॥
ಏವಂ ಕೃತ್ವಾ ವಿಧಾನೇನ ಪರಾಂ ಸಿದ್ಧಿಮಿತೋ ಗತಾಃ ॥ ೧೯ ॥
ನೃಸಿಂಹಸ್ಯ ಸ್ವರೂಪೇಣ ಹತೋ ದಾನವಪುಂಗವಃ ।
ಸಭಾಮಧ್ಯೇ ತದಾ ವ್ಯಾಸ ಹರಿಣಾಽಮಿತ್ರಘಾತಿನಾ ॥ ೨೦ ॥
ಕರೇಣೈಕಪ್ರಹಾರೇಣ ಹಿರಣ್ಯಕಶಿಪುರ್ಹತಃ ।
ತತಃ ಸುರಗಣಾಃ ಸರ್ವೇ ಸ್ವಾಽಧಿಕಾರಾನ್ ಯಯುಸ್ತದಾ ॥ ೨೧ ॥
ತದಾರಭ್ಯ ಸುರಾಃ ಸರ್ವೇ ಮಧ್ಯಾಹ್ನೋಪಾಸನಂ ಸದಾ ।
ಪ್ರಕುರ್ವಂತಿ ಚ ತತ್ರೈವ ಯತ್ರ ತೀರ್ಥೇ ಹರಿಃ ಪರಂ ॥ ೨೨ ॥
ಏವಂ ತೀರ್ಥಂ ಪರಂ ವ್ಯಾಸ ಅವಂತ್ಯಾಂ ವಿದ್ಯತೇ ಭುವಿ ।
ಅಸ್ಮಿಂಸ್ತೀರ್ಥೇ ದ್ವಿಜಶ್ರೇಷ್ಠ ಸ್ನಾನದಾನಾದಿಕಾಃ ಕ್ರಿಯಾಃ ॥ ೨೩ ॥

---

ಗಳನ್ನು ಕೇಳಿ ಪವಿತ್ರವಾದ ಆ ಶಿಪ್ರಾನದಿಯು ಪ್ರವಹಿಸುತ್ತಿರುವ ಮಹಾಕಾಲವನ ಕ್ಷೇತ್ರಕ್ಕೆ ಬಂದು ಸೇರಿದರು.

೧೮. ಬಹಳ ವರ್ಷಗಳವರೆಗೂ ನೃಸಿಂಹತೀರ್ಥದ ತೀರದಲ್ಲಿಯೇ ವಾಸ ಮಾಡಿಕೊಂಡು ಸ್ನಾನದಾನಾದಿಗಳನ್ನು ಮಾಡುತ್ತ ನೃಸಿಂಹದೇವನ ಪೂಜೆಯನ್ನು ನೆರವೇರಿಸುತ್ತಿದ್ದರು.

೧೯. ಇಂತು ವಿಧ್ಯುಕ್ತರೀತಿಯಿಂದ ಸಾಧನೆಯನ್ನು ಮಾಡಿಕೊಳ್ಳುತ್ತಿದ್ದು ಕಾಲಕ್ರಮದಲ್ಲಿ ಕಾರ್ಯಸಿದ್ಧಿಯನ್ನು ಪಡೆದರು.

೨೦. ಎಲೈ ವ್ಯಾಸನೆ! ಶತ್ರುಘಾತಕನಾದ ಶ್ರೀಮನ್ನಾರಾಯಣನು ಸಭಾಮಂಟಪದಲ್ಲಿ ನರಸಿಂಹರೂಪವನ್ನು ತಾಳಿ ಆ ರಾಕ್ಷಸಶ್ರೇಷ್ಠನನ್ನು ನಿಗ್ರಹಿಸಿದನು.

೨೧. ಆತನ ಕೈಯ ಒಂದು ಪ್ರಹಾರದಿಂದಲೇ ಹಿರಣ್ಯಕಶಿಪುವು ಸಂಹೃತನಾದನು. ಆಗ ದೇವತಾಗಣಗಳೆಲ್ಲರೂ ತಮ್ಮ ಅಧಿಕಾರಗಳನ್ನು ಪುನಃ ಪಡೆದರು.

೨೨. ಅಂದು ಮೊದಲುಗೊಂಡು ಸಮಸ್ತ ದೇವತೆಗಳೂ ಶ್ರೀಹರಿಯು ಸನ್ನಿಹಿತನಾಗಿರುವ ಆ ತೀರ್ಥದ ಬಳಿಯಲ್ಲಿಯೇ ನಿತ್ಯವೂ ತಮ್ಮ ಮಾಧ್ಯಾಹ್ನಿಕ ಕಾರ್ಯಗಳನ್ನು ಮಾಡುತ್ತಿರುವರು.

೨೩-೨೪. ವ್ಯಾಸಮಹರ್ಷಿಯೆ! ಇಂತು ಭೂಲೋಕದಲ್ಲಿ ಅವಂತೀಕ್ಷೇತ್ರದಲ್ಲಿ ಉತ್ತಮೋತ್ತಮವಾದ ತೀರ್ಥವುಂಟಾಗಿರುವುದು. ಎಲೈ ದ್ವಿಜೋತ್ತಮನೆ! ಈ ತೀರ್ಥದಲ್ಲಿ ಸ್ನಾನದಾನಗಳೇ ಮೊದಲಾದ ಸತ್ಕರ್ಮಗಳನ್ನು ಯಾವ ಮಾನವರು ಮಾಡುವರೊ, ಅವರು ಪುಣ್ಯವಂತರಾಗಿ ಉತ್ತಮಗತಿಯನ್ನು

ಯೇ ಕುರ್ವಂತಿ ನರಾಃ ಪುಣ್ಯಾಸ್ತೇ ಯಾಂತಿ ಪರಮಾಂ ಗತಿಂ ।
ಸರ್ವದಾ ಸರ್ವಕಾಲೇಷು ಪುಣ್ಯದಂ ತೀರ್ಥಮುತ್ತಮಂ ॥ ೨೪ ॥
ಕದಾಚಿನ್ನೃಸಿಂಹತಿಥಿಂ ಪ್ರಾಪ್ಯ ಚೈವ ಚತುರ್ದಶೀಂ ।
ಸ್ನಾನಂ ಕೃತ್ವಾಽರ್ಚನಂ ತಸ್ಯ ನೃಸಿಂಹಸ್ಯ ಚ ಧೀಮತಃ ॥ ೨೫ ॥
ನೃಸಿಂಹೇಶ್ವರದೇವೇಶಂ ಪೂಜಯೇದ್ಯಃ ಸಮಾಹಿತಃ ।
ತಸ್ಯ ಹಸ್ತಗತಾ ಲಕ್ಷ್ಮೀರ್ಭವಿಷ್ಯತಿ ನ ಸಂಶಯಃ ॥ ೨೬ ॥
ತತೋಽಗಸ್ತ್ಯೇಶ್ವರಂ ದೇವಂ ಯಃ ಪಶ್ಯೇತ್ಸುಸಮಾಹಿತಃ ।
ತಸ್ಯ ವ್ಯಾಸ ಕ್ಷಿತೌ ಕಿಂಚಿದ್ದುರ್ಲಭಂ ನೈವ ದೃಶ್ಯತೇ ॥ ೨೭ ॥
ಯತ್ರ ಸಿದ್ಧಿಂ ಪರಾಂ ಪ್ರಾಪ್ತೋ ಹನುಮಾನ್ಪವನಾತ್ಮಜಃ ।
ಬ್ರಹ್ಮಚಾರೀ ಸದಾಚಾರೋ ಯತಿಃ ಸರ್ವಾರ್ಥಸಾಧಕಃ ॥ ೨೮ ॥
ತಿಷ್ಠತಿ ಪರದೈವಜ್ಞಃ ಸರ್ವಕಾಮಾರ್ಥಸಿದ್ಧಯೇ ।
ಯಸ್ಮಿನ್ವಟೇ ಪುರಾ ತಪ್ತಂ ತಪಃ ಪರಮದುಶ್ಚರಂ ॥ ೨೯ ॥

---

ಪಡೆಯುವರು. ಈ ಉತ್ತಮತೀರ್ಥವು ಸಮಸ್ತಕಾಲಗಳಲ್ಲಿಯೂ ಪುಣ್ಯಪ್ರದವಾದುದು.

೨೫–೨೬. ಯಾವಾಗಲಾದರೊಮ್ಮೆ ನೃಸಿಂಹಜಯಂತಿಯ ಚತುರ್ದಶಿಯ ದಿನದಲ್ಲಿ ಸ್ನಾನವನ್ನು ಮಾಡಿ ಸರ್ವಜ್ಞನಾದ ಆ ನೃಸಿಂಹಸ್ವಾಮಿಯನ್ನು ಪೂಜಿಸಿ ಬಳಿಕ ಸಮೀಪದಲ್ಲಿರುವ ನೃಸಿಂಹೇಶ್ವರಮಹಾಲಿಂಗದ ಅರ್ಚನೆಯನ್ನು ಚಿತ್ತೈಕಾಗ್ರತೆಯಿಂದ ಮಾಡಿದ ಮನುಷ್ಯನಿಗೆ ಲಕ್ಷ್ಮಿಯು ಕರಗತಳಾಗುವುದರಲ್ಲಿ ಸಂದೇಹವಿಲ್ಲ.

೨೭. ಬಳಿಕ ದೇವದೇವನಾದ ಅಗಸ್ತ್ಯೇಶ್ವರನನ್ನು ಯಾವನು ಸಮಾಹಿತಚಿತ್ತನಾಗಿ ನೋಡುವನೊ, ಅವನಿಗೆ ಭೂಲೋಕದಲ್ಲಿ ಯಾವ ಪದಾರ್ಥವೂ ಅಲಭ್ಯವಾಗಿರುವುದಿಲ್ಲ.

೨೮. ಇಲ್ಲಿಯೇ ವಾಯುಪುತ್ರನಾದ ಹನುಮಂತನು ಮಹಾಸಿದ್ಧಿಯನ್ನು ಪಡೆದನು. ಆತನು ಬ್ರಹ್ಮಚಾರಿಯೂ, ಸದಾಚಾರನಿರತನೂ, ಸನ್ಯಾಸಿಯೂ, ಸಕಲಕಾರ್ಯಗಳನ್ನೂ ನಿರ್ವಹಿಸಲು ಶಕ್ತನಾದನು.

೨೯–೩೦. ಉಪಾಸಕರ ಸಕಲಾಭೀಷ್ಟಗಳನ್ನೂ ಕೈಗೂಡಿಸಿಕೊಡುತ್ತ ಭಗವಂತನ ಅಂತರಂಗವನ್ನು ತಿಳಿದ ಆತನು ಅಲ್ಲಿಯೇ ನೆಲಸಿರುವನು. ಅಲ್ಲಿರುವ ವಟವೃಕ್ಷದ ಸಮೀಪದಲ್ಲಿಯೇ ಮಿತ್ರಾವರುಣರ ಪುತ್ರನಾದ ವಸಿಷ್ಠ ಮಹರ್ಷಿಯು ಸಿದ್ಧಿಯನ್ನು ಪಡೆಯಲು ಹಿಂದೆ ಅತ್ಯಂತ ದುಸ್ಸಾಧ್ಯವಾದ ತಪಸ್ಸನ್ನಾಚರಿಸಿದನು. ಅಲ್ಲಿ ಆತನಿಗೆ ಜ್ಞಾನಪ್ರಾಪ್ತಿಯಾದುದರಿಂದ ಆ ವೃಕ್ಷ

ಮಿತ್ರಾವರುಣಪುತ್ರೇಣ ಸಿದ್ಧಿಹೇತೋಸ್ತಪಸ್ವಿನಾ ।
ಬೋಧೀನ್ಯಗ್ರೋಧ ಇತ್ಯಾಖ್ಯೋ ಹ್ಯಗಸ್ತಿವಟ ಏವ ಚ ॥ ೩೦ ॥
ನರೋ ನಾರೀಸಮಾಯುಕ್ತಃ ಸಾವಿತ್ರೀವ್ರತಮಾಚರೇತ್ ।
ಸೌಭಾಗ್ಯಂ ಲಭತೇ ನಿತ್ಯಂ ಸಾವಿತ್ರ್ಯಾಶ್ಚ ಪರಂತಪ ॥ ೩೧ ॥
ಯಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ದತ್ವಾ ದಾನಂ ಚ ಸೌಭಗಂ ।
ಅಷ್ಟಸೌಭಾಗ್ಯಸಂಪೂರ್ಣಂ ವಂಶಪಾತ್ರಂ ಸವಾಸಕಂ ॥ ೩೨ ॥
ಸಪ್ತಧಾನ್ಯಸಮೋಪೇತಂ ಪಂಚರತ್ನಪರಿಷ್ಕೃತಂ ।
ಸೌಗಂಧ್ಯಾದೀನಿ ಮಾಲ್ಯಾನಿ ಮೌಲಿಸೂತ್ರಸಮಾಯುತಂ ॥ ೩೩ ॥
ಸಾವಿತ್ರೀಂ ಹಾಟಕೀಂ ಕೃತ್ವಾ ಯಥಾಶಕ್ತಿ ಪರಂತಪ ।
ಯೋ ವೈ ದದಾತಿ ವಿಪ್ರಾಯ ವೇದವೇದಾಂಗಧೀಮತೇ ॥ ೩೪ ॥
ಲಭತೇ ವಿಪುಲಾಂ ಲಕ್ಷ್ಮೀಂ ಬಹುಭೋಗಕರೀಂ ಶುಭಾಂ ।
ಭುಕ್ತ್ವಾ ವೈ ವಿವಿಧಾನ್ ಭೋಗಾನ್ಪುನಃ ಸ್ವರ್ಗಮವಾಪ್ನುಯಾತ್॥ ೩೫॥

---

ವನ್ನು ಬೋಧಿನ್ಯಗ್ರೋಧವೆಂದೂ ಅಗಸ್ತ್ಯವಟವೆಂದೂ ಜನರು ಕರೆಯು ತ್ತಿರುವರು.

೩೧. ಇಲ್ಲಿ ಪ್ರತಿಯೊಬ್ಬನೂ ಪತ್ನೀಸಮೇತನಾಗಿ ಸಾವಿತ್ರೀವ್ರತವನ್ನಾ ಚರಿಸಲು ಯಾವಜ್ಜೀವವೂ ಸಾವಿತ್ರಿಯ ಪ್ರಸಾದದಿಂದ ಸೌಭಾಗ್ಯಾದಿ ಸಕಲ ಭಾಗ್ಯಗಳನ್ನೂ ಪಡೆಯುವನು.

೩೨–೩೩. ಈ ಅಗಸ್ತ್ಯತೀರ್ಥದಲ್ಲಿ ಸ್ನಾನಮಾಡಿ ನರನು ಯಥಾಶಕ್ತಿಯಾಗಿ ವಿಪ್ರನಿಗೆ ಸರ್ವೋಪಸ್ಕರಸಹಿತವಾದ ದಾನವನ್ನು ಮಾಡಬೇಕು. ಸಕಲ ಸೌಭಾಗ್ಯಗಳಿಂದ ಕೂಡಿದ ಬಿದಿರಿನ ಪಾತ್ರೆಯೊಂದಕ್ಕೆ ವಸ್ತ್ರವನ್ನುಡಿಸಿ ಅದರಲ್ಲಿ ಏಳು ಧಾನ್ಯಗಳನ್ನೂ ಪಂಚರತ್ನಗಳನ್ನೂ ತುಂಬಿ ಸುಗಂಧಾದಿ ಲೇಪನಗಳಿಂದಲೂ ಹೂವಿನ ಮಾಲೆಗಳಿಂದಲೂ ಅಲಂಕರಿಸಿ ಶಿರೋಭಾಗದಲ್ಲಿ ಮಂಗಳಸೂತ್ರವನ್ನು ಕಟ್ಟಬೇಕು.

೩೪. ಯಥಾಶಕ್ತಿಯಾಗಿ ಚಿನ್ನದಿಂದ ಸಾವಿತ್ರೀದೇವಿಯ ಪ್ರತಿಮೆಯನ್ನು ಮಾಡಿಸಿ ಪೂಜಿಸಿ ವೇದವೇದಾಂಗಪಾರಂಗತನೂ, ಮಹಾಪ್ರಾಜ್ಞನೂ ಆದ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

೩೫. ಹೀಗೆ ಮಾಡಿದ ಮನುಷ್ಯನು ಅನೇಕ ಭೋಗಗಳಿಗೆ ಸಾಧನ ವಾದುದೂ, ಪವಿತ್ರವಾದುದೂ ಆದ ಅಪಾರವಾದ ಐಶ್ವರ್ಯವನ್ನು ಪಡೆಯುವನು. ಈ ಲೋಕದಲ್ಲಿ ಅನೇಕ ಭೋಗಗಳನ್ನನುಭವಿಸಿ ಕಡೆಯಲ್ಲಿ ಸ್ವರ್ಗವನ್ನು ಸೇರು ವುದರಲ್ಲಿ ಸಂದೇಹವಿಲ್ಲ.

**ಸಾವಿತ್ರೀವ್ರತಕೃನ್ನಾರೀ ಜಾಯತೇ ಪತಿವಲ್ಲಭಾ ।**
**ಪತಿವ್ರತಾ ಮಹಾಭಾಗಾ ವಿಧವಾ ನ ಕದಾಚನ ॥ ೩೭ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ನೃಸಿಂಹತೀರ್ಥ ಮಹಿಮಾನುವರ್ಣನಂ" ನಾಮ ಷಟ್‌ಷಷ್ಟಿತಮೋಽಧ್ಯಾಯಃ**

---

೩೭. ಈ ಸಾವಿತ್ರೀವ್ರತವನ್ನಾಚರಿಸಿದ ಸ್ತ್ರೀಯು ಗಂಡನಿಗೆ ಪ್ರಿಯಳೂ, ಪತಿವ್ರತೆಯೂ, ಮಹಾಭಾಗ್ಯವಂತಳೂ ಆಗಿ ಬಾಳುವಳು. ಅವಳು ಎಂದಿಗೂ ವಿಧವೆಯಾಗುವುದಿಲ್ಲ.

**ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ನೃಸಿಂಹತೀರ್ಥಮಹಿಮಾನುವರ್ಣನ" ವೆಂಬ ಅರುವತ್ತಾರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಸಪ್ತಷಷ್ಠಿತಮೋಽಧ್ಯಾಯಃ

## ಕುಟುಂಬೇಶ್ವರಮಾಹಾತ್ಮ್ಯವರ್ಣನಂ

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಪರಂ ತೀರ್ಥಂ ಭುವಿ ವಿಖ್ಯಾತಮುತ್ತಮಂ ।
ಕುಟುಂಬೇಶ್ವರೇತಿ ವಿಖ್ಯಾತೋ ನಾಮ್ನಾ ಚೈವ ಮಹೇಶ್ವರಃ ॥ ೧ ॥
ತಸ್ಯ ತೀರ್ಥವರಂ ತೀರ್ಥಂ ಸರ್ವತೀರ್ಥಫಲಪ್ರದಂ ।
ಯಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಕುಟುಂಬೀ ಜಾಯತೇ ಧ್ರುವಂ ॥ ೨ ॥
ಕುಟುಂಬಾರ್ಥಂ ತಪಸ್ತೇಪೇ ಪುರಾ ದಕ್ಷಃ ಪ್ರಜಾಪತಿಃ ।
ನಾರದೇನ ಪುರಾ ವ್ಯಾಸ ಪುತ್ರಷಷ್ಟಿರ್ವಿನಾಶಿತಾ ॥ ೩ ॥
ಪ್ರಜಾಕಾಮಃ ಸ ಧರ್ಮಾತ್ಮಾ ಸುಚಿರಂ ವ್ರತಮಾಚರತ್ ।
ಸಪತ್ನೀಕೋ ಮಹಾತೇಜಾ ನಿರಾಹಾರೋ ಜಿತೇಂದ್ರಿಯಃ ॥ ೪ ॥
ಅಸ್ಮಿಂಸ್ತೀರ್ಥೇ ಶುಚಿಃ ಸ್ನಾತೋ ಜಪನ್ಬ್ರಹ್ಮ ಸನಾತನಂ ।
ವರ್ಷಾಣಾಮಯುತಂ ವ್ಯಾಸ ತಪಸ್ತೇಪೇ ಸುದಾರುಣಂ ॥ ೫ ॥

---

## ಕನ್ನಡದ ಅನುವಾದ

### ಕುಟುಂಬೇಶ್ವರಮಾಹಾತ್ಮ್ಯವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಭೂಲೋಕದಲ್ಲಿ ಪ್ರಖ್ಯಾತಿಯನ್ನು ಪಡೆದಿರುವ ಉತ್ತಮವಾದ ಮತ್ತೊಂದು ತೀರ್ಥವನ್ನು ಕುರಿತು ಹೇಳುವೆನು, ಕೇಳು. ಈ ತೀರ್ಥದ ಬಳಿಯಲ್ಲಿರುವ ಮಹೇಶ್ವರನು ಕುಟುಂಬೇಶ್ವರನೆಂದು ಪ್ರಸಿದ್ಧನಾಗಿರುವನು.

೨. ಆತನ ಬಳಿಯ ತೀರ್ಥವು ಸರ್ವಶ್ರೇಷ್ಠವೂ, ಸಕಲತೀರ್ಥಸೇವೆಯ ಫಲವನ್ನು ಕೊಡುವುದೂ ಆಗಿರುವುದು. ಅದರಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಕುಟುಂಬಭಾಗ್ಯವನ್ನು ಪಡೆಯುವುದು ನಿಜವು.

೩. ಇಲ್ಲಿಯೇ ಹಿಂದೆ ದಕ್ಷಪ್ರಜಾಪತಿಯು ಸಂತಾನಾಭಿವೃದ್ಧಿಗಾಗಿ ತಪಸ್ಸನ್ನಾಚರಿಸಿದನು. ಎಲೈ ವ್ಯಾಸನೆ! ನಾರದಮುನಿಯೂ ಹಿಂದೆ ಅರುವತ್ತು ಮಂದಿ ಪುತ್ರರನ್ನು ಇಲ್ಲಿ ಪಡೆದನು.

೪. ಸಂತಾನಕಾಮನೂ, ಧರ್ಮಾತ್ಮನೂ ಆದ ದಕ್ಷಬ್ರಹ್ಮನು ಬಹುಕಾಲದ ವರೆಗೂ ವ್ರತವನ್ನಾಚರಿಸುತ್ತ, ಪತ್ನೀಸಹಿತನೂ ಮಹಾತೇಜಸ್ವಿಯೂ ಆಗಿ ಅನ್ನೋದಕಗಳನ್ನುಳಿದು ಇಂದ್ರಿಯನಿಗ್ರಹವಂತನಾಗಿದ್ದನು.

೫. ಈ ತೀರ್ಥದಲ್ಲಿ ಸ್ನಾನದಿಂದ ಶುಚಿರ್ಭೂತನಾಗಿ ಅನಾದಿಸಿದ್ಧಗಳಾದ

ತೇನ ತೀರ್ಥಪ್ರಸಾದೇನ ಲಭೇತ್ಸ ಬಹುಲಾಂ ಪ್ರಜಾಂ ।
ಪ್ರಜಾಪತಿರಿತಿಖ್ಯಾತೋ ಜಾತೋ ದಕ್ಷಃ ಪ್ರತಾಪವಾನ್ ॥ ೬ ॥
ಬ್ರಹ್ಮಾಽಪಿ ತವ ವೈ ಪಶ್ಚಾತ್ತಪಃಕೃತ್ವಾ ಸುದುಷ್ಕರಂ ।
ನಿಷ್ಕಲಂ ಕಮಲಂ ರೂಪಂ ಪ್ರಾಪ್ತವಾಂಸ್ತತ್ಕ್ಷಣಾದ್ವಿಧಿಃ ॥ ೭ ॥
ಮಹಾದೇವೋಽಪಿ ತತ್ರೈವ ಪ್ರಾಪ್ತವಾನ್ಬ್ರಹ್ಮಣಃ ಪದಂ ।
ಚತುರ್ಮುಖಧರಂ ಲಿಂಗಂ ದೃಶ್ಯತೇಽದ್ಯಾಽಪಿ ಸತ್ತಮ ॥ ೮ ॥
ಭದ್ರಪೀಠಧರಾ ದೇವೀ ಭದ್ರಕಾಲೀತಿ ವಿಶ್ರುತಾ ।
ತತ್ರೈವ ಚ ಸದಾ ವ್ಯಾಸ ಕ್ರೀಡತಿಸ್ಮ ಧೃತವ್ರತಾ ॥ ೯ ॥
ದ್ವಾರೇ ತಿಷ್ಠತಿ ತತ್ರೈವ ಭೈರವಃ ಕ್ಷೇತ್ರಪಾಲಕಃ ।
ಪಾದೇನ ಖಂಜತಾಂ ಯಾತಃ ಪುರಾ ದೈತ್ಯವರಾರ್ದಿತಃ ॥ ೧೦ ॥
ಪುತ್ರವತ್ಪಾಲಿತೋ ದೇವ್ಯಾ ಸದಾ ತಿಷ್ಠತಿ ತತ್ಸ್ಥಲೇ ।
ಯೇ ತೇ ದೇವಗಣಾಃ ಸರ್ವೇ ತಸ್ಮಿಂಸ್ತೀರ್ಥೇ ಪ್ರತಿಷ್ಠಿತಾಃ ॥ ೧೧ ॥

---

ವೇದಮಂತ್ರಗಳನ್ನು ಜಪಿಸುತ್ತ ಹನ್ನೆರಡು ಸಾವಿರ ವರ್ಷಗಳಕಾಲ ಅತಿದುಸ್ತರವಾದ ತಪಸ್ಸನ್ನು ಮಾಡಿದನು.

೬. ಈ ತೀರ್ಥದ ಪ್ರಭಾವದಿಂದ ಆತನು ಅಸಂಖ್ಯಾತವಾದ ಸಂತಾನವನ್ನು ಪಡೆದನು. ಅದರಿಂದಲೇ ಪ್ರತಾಪಶಾಲಿಯಾದ ದಕ್ಷನು ಪ್ರಜಾಪತಿಯೆಂದು ಖ್ಯಾತಿಯನ್ನು ಪಡೆದನು.

೭. ಚತುರ್ಮುಖನೂ ಸಹ ಇಲ್ಲಿಯೇ ದುಷ್ಕರವಾದ ತಪಸ್ಸನ್ನಾಚರಿಸಿ ಸ್ವಲ್ಪಕಾಲದಲ್ಲಿಯೇ ನಿಷ್ಕಳಂಕವೂ, ಸತ್ತ್ವಭೂಯಿಷ್ಠವೂ ಆದ ದೇಹವನ್ನು ತಾಳಿದನು.

೮. ಮಹಾದೇವನೂ ಇಲ್ಲಿಯೇ ಬ್ರಹ್ಮಪದವನ್ನು ಪಡೆದನು. ಅಯ್ಯಾ ಋಷಿವರ್ಯನೆ! ಇಲ್ಲಿ ಚತುರ್ಮುಖಸಹಿತವಾದ ಶಿವಲಿಂಗವು ಇಂದಿಗೂ ಕಂಗೊಳಿಸುತ್ತಿರುವುದು.

೯. ವ್ಯಾಸನೆ! ಭದ್ರಾಸನಾಸೀನಳಾಗಿ ಭದ್ರಕಾಳಿಯೆಂದು ಹೆಸರಾದ ಮಹಾದೇವಿಯು ಇಲ್ಲಿಯೇ ವ್ರತನಿಯಮಗಳಲ್ಲಿ ನಿರತಳಾಗಿ ಕ್ರೀಡಿಸುತ್ತಿರುವಳು.

೧೦. ದ್ವಾರದಲ್ಲಿ ಕ್ಷೇತ್ರಪಾಲಕನಾದ ಭೈರವನು ನೆಲಸಿರುವನು. ಹಿಂದೆ ರಾಕ್ಷಸರೊಡನೆ ನಡೆದ ಯುದ್ಧದ ಫಲವಾಗಿ ಆತನಿಗೆ ಒಂದು ಕಾಲು ಕುಂಟಾಗಿರುವುದು.

೧೧. ದೇವಿಯು ಈತನನ್ನು ಮಗನಂತೆ ಪಾಲಿಸುತ್ತಿರುವಳು. ಇಂತು ಕಾಲಭೈರವನೂ ಇತರ ಯಾವ ದೇವತಾಗಣಗಳಿರುವರೊ, ಅವರೆಲ್ಲರೂ ಈ ತೀರ್ಥದಲ್ಲಿ ಸನ್ನಿಹಿತರಾಗಿರುವರು.

ಋಷಯೋಽಪಿ ಮಹಾಭಾಗಾಃ ಸದಾ ಪರ್ವಣಿ ಪರ್ವಣಿ ।
ಆಯಾಂತಿ ಚೈವ ಸಂಧ್ಯಾರ್ಥಂ ಬಹುಪುತ್ರಪ್ರದೇ ಸರೇ ॥ ೧೨ ॥
ಅಸ್ಮಿಂಸ್ತೀರ್ಥೇ ಸದಾಚಾರಾಃ ಸ್ನಾನಂ ಕುರ್ವಂತಿ ಯೇ ನರಾಃ ।
ನ ತೇಷಾಂ ದುರ್ಲಭಂ ಕಿಂಚಿಜ್ಜಾಯತೇ ಜನ್ಮಜನ್ಮನಿ ॥ ೧೩ ॥
ಮಹಾಬಾಧಾಸು ಘೋರಾಸು ಮಹಾಮಾರೀಷು ತತ್ಪರೈಃ ।
ಹವನಂ ಕ್ರಿಯತೇ ನಿತ್ಯಂ ಸರ್ಷಪೈರಾಜಿಕೈರ್ಯವೈಃ ॥ ೧೪ ॥
ಪಾಯಸೈರ್ವಿವಿಧೈರ್ಭೋಗೈಸ್ತೇಷಾಂ ದೋಷೋ ನ ಜಾಯತೇ ।
ದುರ್ಭಿಕ್ಷೇ ರಾಜ್ಯಭ್ರಂಶೇ ಚ ಸಂಗ್ರಾಮೇ ಭೃಶದಾರುಣೇ ॥ ೧೫ ॥
ಪೂಜಯೇತ್ಕ್ಷೇತ್ರಪಾಲಂ ಚ ಸರ್ವಾಽಽಪದಿ ಸಮಾಹಿತಃ ।
ಸರ್ವದುಃಖವಿನಿರ್ಮುಕ್ತೋ ಜಾಯತೇ ನಾಽತ್ರ ಸಂಶಯಃ ॥ ೧೬ ॥
ಸ್ನಾತ್ವಾ ಕುಟುಂಬಕೇ ತೀರ್ಥೇ ಪೂಜಯಿತ್ವಾ ಮಹೇಶ್ವರಂ ।
ದಾನಂ ಕೂಷ್ಮಾಂಡಕಂ ದದ್ಯಾದ್ಬ್ರಾಹ್ಮಣಾಯ ತಪಸ್ವಿನೇ ॥ ೧೭ ॥

---

೧೨. ಪ್ರತಿಯೊಂದು ಪರ್ವಕಾಲದಲ್ಲಿಯೂ ಮಹಾಭಾಗ್ಯಶಾಲಿಗಳಾದ ಮಹರ್ಷಿವರ್ಯರು ಬಹು ಸಂತಾನಪ್ರದವಾದ ಈ ತೀರ್ಥದಲ್ಲಿ ತಮ್ಮ ಆಹ್ನಿಕಗಳಿಗಾಗಿ ಯಾವಾಗಲೂ ಬರುತ್ತಿರುವನು.

೧೩. ಈ ತೀರ್ಥದಲ್ಲಿ ಸದಾಚಾರನಿಷ್ಠನಾದ ಯಾವ ನರನು ಸ್ನಾನವನ್ನು ಮಾಡುವನೊ, ಅವನಿಗೆ ಯಾವ ಜನ್ಮಗಳಲ್ಲಿಯೂ ದುರ್ಲಭವಾದ ವಸ್ತುವೆಂಬುದೇ ಇರುವುದಿಲ್ಲ.

೧೪. ದೇಶಕ್ಕೆ ಮಹಾವಿಪತ್ತುಗಳು ಬಂದಾಗಲೂ, ಮಹಾಮಾರ್ಯಾದಿ ಉಪದ್ರವಗಳುಂಟಾದಾಗಲೂ, ಯಾಜ್ಞಿಕರು ಇಲ್ಲಿ ನಿತ್ಯವೂ ಬಿಳಿಯ ಸಾಸುವೆ, ಕರಿಯ ಸಾಸುವೆ ಮತ್ತು ಯವಧಾನ್ಯಗಳಿಂದ ಹೋಮವನ್ನು ಮಾಡಬೇಕು.

೧೫–೧೬. ಬಗೆಬಗೆಯಾದ ಪಾಯಸಗಳಿಂದ ಹವನವನ್ನು ಮಾಡಬೇಕು. ಅದರಿಂದ ಆ ದೋಷಗಳು ದೂರವಾಗುವುವು. ದುರ್ಭಿಕ್ಷಕಾಲದಲ್ಲಿಯೂ, ರಾಜ್ಯನಾಶವಾದಾಗಲೂ, ಅತಿದಾರುಣವಾದ ಯುದ್ಧವೊದಗಿದಾಗಲೂ, ಸಕಲವಿಧಗಳಾದ ಆಪತ್ತುಗಳಲ್ಲಿಯೂ ಮಾನವನು ಈ ಕ್ಷೇತ್ರಪಾಲಕನ ಪೂಜೆಯನ್ನು ಮಾಡಬೇಕು. ಆ ಮನುಷ್ಯನು ಸಕಲ ದುಃಖಗಳಿಂದಲೂ ಕಡೆಹಾಯುವನೆಂಬುದರಲ್ಲಿ ಸಂದೇಹವಿಲ್ಲ.

೧೭. ಕುಟುಂಬತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು, ಕುಟುಂಬೇಶ್ವರಲಿಂಗವನ್ನು ಪೂಜಿಸಿ ತಪಸ್ಸಂಪನ್ನನಾದ ಬ್ರಾಹ್ಮಣೋತ್ತಮನಿಗೆ ಕೂಷ್ಮಾಂಡದಾನವನ್ನು ಮಾಡಬೇಕು.

ಸೌವರ್ಣಮಣಿಮುಕ್ತಾಭಿರ್ವಾಸೋಽಲಂಕಾರಸಂಯುತಂ ।
ಧನಧಾನ್ಯಸಮಾಯುಕ್ತಃ ಕುಟುಂಬೀ ಜಾಯತೇ ನರಃ ॥ ೧೮ ॥
ಫಾಲ್ಗುನೇ ಚ ಸಿತೇ ಪಕ್ಷೇ ಯಾ ವೈ ಚತುರ್ದಶೀ ಭವೇತ್ ।
ತ್ರಯೋದಶೀಯುತಾ ವ್ಯಾಸ ಶಿವರಾತ್ರಿಸ್ತಥೋಚ್ಯತೇ ॥ ೧೯ ॥
ತದ್ದಿನೇ ಚ ನರಃ ಸ್ನಾತ್ವಾ ರಾತ್ರೌ ಜಾಗರಣಂ ಚರೇತ್ ।
ಬಿಲ್ವೋದಕೇನ ಗಂಧೇನ ಬಹುಪುಷ್ಪಫಲೈಸ್ತಥಾ ॥ ೨೦ ॥
ಧೂಪೈರ್ದೀಪೈಶ್ಚ ನೈವೇದ್ಯೈರ್ವಾಸೋಽಲಂಕಾರಕಾದಿಭಿಃ ।
ಪೂಜಯೇದ್ಯೋ ನರೋ ಭಕ್ತ್ಯಾ ಗಿರೀಶಂ ಸಗಣಂ ಪರಂ ॥ ೨೧ ॥
ತಸ್ಯ ಪಾಪಂ ಕ್ಷಯಂ ಯಾತಿ ಶಿವಲೋಕೇ ಮಹೀಯತೇ ।
ದ್ವಾದಶೈಕಾದಶೀ ಪುಣ್ಯಂ ಲಭತೇ ಭುವಿ ಮಾನವಃ ॥ ೨೨ ॥
ಅಶ್ವಮೇಧಫಲಂ ತಸ್ಯ ಜಾಗರೇ ಚ ಕ್ಷಣೇ ಕ್ಷಣೇ ।
ತತಸ್ತು ಪ್ರಾತರುತ್ಥಾಯ ಸ್ನಾನದಾನಾದಿಕಾಃ ಕ್ರಿಯಾಃ ॥ ೨೩ ॥

---

೧೮. ಅದನ್ನು ಚಿನ್ನ, ರತ್ನಗಳು, ಮುತ್ತುಗಳು, ವಸ್ತ್ರಗಳು, ಅಲಂಕಾರ ಮುಂತಾದುವುಗಳಿಂದ ದಾನಮಾಡಲು ನರನು ಧನಧಾನ್ಯಸಮೃದ್ಧಿಯುಳ್ಳವನೂ, ಸಂತಾನವಂತನೂ ಆಗುವನು.

೧೯. ವ್ಯಾಸನೆ! ಫಾಲ್ಗುನಮಾಸದ ಶುಕ್ಲಪಕ್ಷದಲ್ಲಿ ತ್ರಯೋದಶಿಯೊಡನೆ ಕೂಡಿದ ಚತುರ್ದಶಿಯುಳ್ಳ ದಿವಸಕ್ಕೆ ಶಿವರಾತ್ರಿಯೆಂದು ಹೆಸರಾಗಿರುವುದು.

೨೦–೨೧. ಆ ದಿನದಲ್ಲಿ ತೀರ್ಥಸ್ನಾನವನ್ನು ಮಾಡಿ ಮನುಷ್ಯನು ರಾತ್ರಿಯಲ್ಲಿ ಜಾಗರಣೆಯನ್ನಾಚರಿಸಬೇಕು. ಬಿಲ್ವೋದಕ, ಶ್ರೀಗಂಧ, ವಿಧವಿಧಗಳಾದ ಪುಷ್ಪಗಳು, ಫಲಗಳು, ಧೂಪಗಳು, ದೀಪಗಳು, ನೈವೇದ್ಯಗಳು, ವಸ್ತ್ರಗಳು, ಅಲಂಕಾರಗಳು, ಮುಂತಾದುವುಗಳಿಂದ ಮಾನವನು ಭಕ್ತಿಯುಕ್ತನಾಗಿ ಪಾರ್ಷದಗಣಗಳಿಂದ ಪರಿವೇಷ್ಟಿತನಾದ ಮಹಾದೇವನನ್ನು ಉತ್ತಮರೀತಿಯಿಂದ ಪೂಜಿಸಬೇಕು.

೨೨. ಕೂಡಲೆ ಅವನ ಪಾತಕಗಳೆಲ್ಲವೂ ನಾಶವಾಗಿ ಅವನು ಶಿವಲೋಕದಲ್ಲಿ ಗಣ್ಯನಾಗುವನು. ಅಲ್ಲದೆ ಹನ್ನೆರಡು ಏಕಾದಶೀ ವ್ರತಗಳನ್ನು ನಿಯಮದಿಂದಾಚರಿಸಿದ ಪುಣ್ಯವನ್ನೂ ಪಡೆಯುವನು.

೨೩–೨೪. ಆ ರಾತ್ರಿಯ ಜಾಗರಣದ ಒಂದೊಂದು ಕ್ಷಣಕ್ಕೂ ಒಂದು ಅಶ್ವಮೇಧ ಯಜ್ಞವನ್ನು ಮಾಡಿದ ಫಲಕ್ಕೆ ಭಾಗಿಯಾಗುವನು. ಮಾರನೆಯ ಪ್ರಾತಃಕಾಲದಲ್ಲೆದ್ದು ಸ್ನಾನದಾನಾದಿ ಕಾರ್ಯಗಳನ್ನು ವಿಧ್ಯುಕ್ತರೀತಿಯಿಂದ ತೀರಿಸಿಕೊಂಡು ಶಿವಾರ್ಚನೆಯನ್ನು ಮಾಡಿದ ಬಳಿಕ ಏಳುಜನ ಬ್ರಾಹ್ಮಣರಿಗೆ

ಕೃತ್ವಾ ತು ವಿಧಿವದ್ವ್ಯಾಸ ಶಿವಪೂಜಾರ್ಚನಂ ತಥಾ ।
ವಿಪ್ರಾಂಶ್ಚ ಭೋಜಯೇತ್ಸಪ್ತ ತಸ್ಯ ಪುಣ್ಯಫಲಂ ಶೃಣು ॥ ೨೪ ॥
ಕಪಿಲಾನಾಂ ಸವತ್ಸಾನಾಂ ಸಹಸ್ರಾಣಿ ಚತುರ್ದಶ ।
ವಾಜಪೇಯಸಹಸ್ರಸ್ಯ ಫಲಂ ಪ್ರಾಪ್ನೋತಿ ನಾಽನ್ಯಥಾ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕುಟುಂಬೇಶ್ವರ ಮಾಹಾತ್ಮ್ಯವರ್ಣನಂ" ನಾಮ ಸಪ್ತಷಷ್ಟಿತಮೋಽಧ್ಯಾಯಃ

---

ಭೋಜನವನ್ನು ಮಾಡಿಸಬೇಕು. ಈ ಕಾರ್ಯಕ್ಕೆ ಲಭಿಸುವ ಪುಣ್ಯಫಲವನ್ನು ಕೇಳು.

೨೫. ಹೀಗೆಮಾಡಿದ ಮಾನವೋತ್ತಮನು ಕರುಗಳಿಂದಕೂಡಿದ ಹದಿನಾಲ್ಕು ಸಾವಿರ ಕಪಿಲೆ ಗೋವುಗಳ ದಾನವನ್ನೂ, ಒಂದು ಸಾವಿರ ವಾಜಪೇಯ ಯಜ್ಞಗಳನ್ನೂ ಮಾಡಿದ ಪುಣ್ಯವನ್ನು ಪಡೆಯುವನು. ಇದು ಸತ್ಯವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕುಟುಂಬೇಶ್ವರಮಾಹಾತ್ಮ್ಯವರ್ಣನ"ವೆಂಬ ಅರುವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಷಷ್ಠಿತಮೋಽಧ್ಯಾಯಃ

## ಅಖಂಡೇಶ್ವರಮಹಿಮಾನುವರ್ಣನಂ

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಮಹಾಪುಣ್ಯಂ ತೀರ್ಥಂ ಪರಮಶೋಭನಂ ।
ದೇವಪ್ರಯಾಗಮಾಖ್ಯಾತಂ ಸರ್ವಪಾಪಪ್ರಣಾಶನಂ ॥ ೧ ॥
ದೇವಾನಾಂ ಚ ಪರಂ ಸ್ಥಾನಂ ಯತ್ರ ತೀರ್ಥಂ ಪರಂತಪ ।
ಸೋಮತೀರ್ಥೋತ್ತರೇ ಭಾಗೇ ಪ್ರಯಾಗಸ್ಯ ಚ ದಕ್ಷಿಣೇ ॥ ೨ ॥
ಶಿಪ್ರಾಯಾಃ ಪೂರ್ವಭಾಗೇ ಚ ತತ್ರ ತೀರ್ಥಂ ಪ್ರತಿಷ್ಠಿತಂ ।
ತತ್ರ ತೀರ್ಥೇ ನರಃ ಸ್ನಾತ್ವಾ ಪಶ್ಯೇಚ್ಚೈವ ಸುರೋತ್ತಮಂ ॥ ೩ ॥
ದೇವಂ ಮಾಧವಮಿತ್ಯಾಖ್ಯಂ ಭುವಿ ಸರ್ವಫಲಪ್ರದಂ ।
ದದಾತಿ ತಸ್ಯ ದೇವೇಂದ್ರೋ ವಾಂಛಿತಾರ್ಥಂ ಜಗತ್ಪತಿಃ ॥ ೪ ॥

---

## ಕನ್ನಡದ ಅನುವಾದ

### ಅಖಂಡೇಶ್ವರಮಹಿಮಾನುವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ವ್ಯಾಸಮಹರ್ಷಿಯೆ ! ಮಹಾಪುಣ್ಯಪ್ರದವೂ, ಪರಮಪವಿತ್ರವೂ ಆದ ಮತ್ತೊಂದು ತೀರ್ಥವಿರುವುದು, ಕೇಳು. ದೇವಪ್ರಯಾಗವೆಂಬ ಹಸರಿನ ಈ ತೀರ್ಥವು ತನ್ನಲ್ಲಿ ಮಿಂದವರ ಸಕಲ ಪಾಪಗಳನ್ನೂ ನಾಶಗೊಳಿಸುವುದು.

೨. ಎಲೈ ಪರಂತಪನೆ! ಈ ತೀರ್ಥವು ದೇವತೆಗಳಿಗೆ ಪರಮಪ್ರಿಯವಾದ ಸ್ಥಾನವಾಗಿರುವುದು. ಇದು ಸೋಮತೀರ್ಥಕ್ಕೆ ಉತ್ತರದಲ್ಲಿಯೂ, ಪ್ರಯಾಗ ತೀರ್ಥಕ್ಕೆ ದಕ್ಷಿಣದಲ್ಲಿಯೂ ಇರುವುದು.

೩. ಶಿಪ್ರಾನದಿಯ ಪೂರ್ವತೀರದಲ್ಲಿ ಪ್ರತಿಷ್ಠಿತವಾಗಿರುವ ಈ ಉತ್ತಮ ತೀರ್ಥದಲ್ಲಿ ಮಾನವನು ಸ್ನಾನವನ್ನು ಮಾಡಿಕೊಂಡು ಅಲ್ಲಿಯೇ ನೆಲಸಿರುವ ಮಹೇಶ್ವರನನ್ನು ನೋಡಬೇಕು.

೪. ಬಳಿಕ ಇಹಲೋಕದಲ್ಲಿ ಸಕಲಾಭೀಷ್ಟಗಳನ್ನೂ ಕೊಡುವ ಮಾಧವ ಸ್ವಾಮಿಯನ್ನು ಭಕ್ತಿಯಿಂದ ಸಂದರ್ಶಿಸಲು ತ್ರಿಲೋಕೇಶ್ವರನಾದ ದೇವೇಂದ್ರನು ಆ ಮನುಷ್ಯನಿಗೆ ಸಕಲವಾಂಛಿತಗಳನ್ನು ಈಡೇರಿಸಿಕೊಡುವನು.

ಆನಂದಭೈರವಸ್ತತ್ರ ಸರ್ವದೇವನಮಸ್ಕೃತಃ ।
ಯಸ್ಯ ದರ್ಶನಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೫ ॥
ನ ತಸ್ಯ ಜಾಯತೇ ವ್ಯಾಸ ಯಾತನಾ ಭೈರವೋ ಕದಾ ।
ಸ್ವರ್ಗದ್ವಾರೇ ಸದಾ ವ್ಯಾಸ ಜಾಯತೇ ನಿರ್ಭಯಃ ಪುಮಾನ್ ॥ ೬ ॥
ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮ್ಯಾಂ ಬುಧಹಸ್ತಯೋಃ ।
ಗರಾನಂದೇ ವ್ಯತೀಪಾತೇ ಕನ್ಯಾಚಂದ್ರೇ ವೃಷೇ ರವೌ ।
ದಶಾಲಾ ಜಾಯತೇ ವತ್ಸ ಗಂಗಾಜನ್ಮ ಪರಂ ಶುಚಿ ॥ ೭ ॥
ತದ್ದಿನೇ ಚ ನರಃ ಸ್ನಾತ್ವಾ ಸರ್ವತೀರ್ಥಫಲಂ ಲಭೇತ್ ।
ಅಖಂಡಂ ಚ ಪರಂ ತೀರ್ಥಂ ಶೃಣು ವ್ಯಾಸ ಹ್ಯತಃ ಪರಂ ॥ ೮ ॥
ಯಸ್ಯ ಶ್ರವಣಮಾತ್ರೇಣ ವ್ರತಭಂಗೋ ನ ಜಾಯತೇ ।
ಏಕ ಏವ ಪುರಾ ಬ್ರಹ್ಮನ್ಬ್ರಾಹ್ಮಣೋ ಬ್ರಹ್ಮವಿತ್ತಮಃ ॥ ೯ ॥

---

೫. ಅಲ್ಲಿಯೇ ಸಕಲದೇವನಮಸ್ಕೃತನಾದ ಆನಂದಭೈರವಮೂರ್ತಿಯು ನೆಲಸಿರುವನು. ಆತನ ದರ್ಶನವನ್ನು ತೆಗೆದುಕೊಳ್ಳುವುದರಿಂದಲೇ ಸಕಲಪಾತಕಗಳೂ ಕ್ಷಯಿಸುವುವು.

೬. ವ್ಯಾಸನೆ! ಆ ಮನುಜನಿಗೆಂದಿಗೂ ಭೈರವಗಣಗಳಿಂದ ಯಾತನೆಯುಂಟಾಗುವುದಿಲ್ಲ. ಅವನು ಭಯರಹಿತನಾಗಿ ಯಾವಾಗಲೂ ಸ್ವರ್ಗದ್ವಾರದಲ್ಲಿಯೇ ನಿಂತಿರುವನು.

೭. ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ, ದಶಮಿಯು ಬುಧವಾರದ ದಿವಸ ಹಸ್ತಾ ನಕ್ಷತ್ರದಿಂದ ಕೂಡಿರಬೇಕು. ಅಂದೇ ಗರಕರಣವೂ ಆನಂದ ಅಥವಾ ವ್ಯತೀಪಾತ ಯೋಗವೂ ಬಂದಿರಬೇಕು. ಚಂದ್ರನು ಕನ್ಯಾರಾಶಿಯಲ್ಲಿಯೂ, ಸೂರ್ಯನು ವೃಷಭರಾಶಿಯಲ್ಲಿಯೂ ಇರುವ ಆ ದಿವಸಕ್ಕೆ ದಶಾಲಾತಿಥಿಯೆಂದು ಹೆಸರು. ಅಂದಿನ ದಿನವೇ ದೇವಪ್ರಯಾಗತೀರ್ಥವಲ್ಲಿ ಗಂಗೋತ್ಪತ್ತಿಯಾಗುವುದು. ಇದು ಬಹಳ ಪವಿತ್ರವಾದ ದಿನವು.

೮. ಮೇಲೆ ಹೇಳಿದ ದಿನದಲ್ಲಿ ಈ ತೀರ್ಥದ ಸ್ನಾನವನ್ನು ಮಾಡಲು ಸಕಲತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದ ಫಲವು ದೊರಕುವುದು. ಎಲೈ ವ್ಯಾಸನೆ! ಇನ್ನು ಅಖಂಡನಾಮಕವಾದ ಮತ್ತೊಂದು ತೀರ್ಥದ ವಿಷಯವನ್ನು ಕೇಳು.

೯. ಅದನ್ನು ಕೇಳುವ ಮಾತ್ರದಿಂದಲೇ ಯಾವ ವ್ರತದಲ್ಲಿಯೂ ಲೋಪದೋಷಗಳುಂಟಾಗುವುದಿಲ್ಲ. ಹಿಂದೆ ಬ್ರಾಹ್ಮಣನೂ, ಬ್ರಹ್ಮವಿದ್ವರಿಷ್ಠನೂ ಆದ ಮಹಾ ಪುರುಷನೊಬ್ಬನಿದ್ದನು.

ಧರ್ಮಶರ್ಮೇತಿ ವಿಖ್ಯಾತಃ ಸದಾಚಾರರತಃ ಶುಚಿಃ ।
ಬಹುವ್ರತಧರೋ ದಾಂತೋ ವೇದವೇದಾಂಗಪಾರಗಃ ॥ ೧೦ ॥
ಕಿಂಚಿದ್ದೋಷಪ್ರಸಂಗೇನ ವ್ರತಪೂರ್ತಿರ್ನಚಾಽಭವತ್ ।
ಏವಂ ಬಹುತಿಥೇ ಕಾಲೇ ನಾರದೋ ದೇವದರ್ಶನಃ ॥ ೧೧ ॥
ತಸ್ಯ ಗೇಹಾಗತೋ ಬ್ರಹ್ಮನ್ನಾತಿಥ್ಯಾರ್ಥಂ ಮಹಾತಪಾಃ ।
ತದೋತ್ಥಾಯ ದ್ವಿಜೋ ನಿತ್ಯಂ ಬಹುಮಾನಪುರಃಸರಂ ॥ ೧೨ ॥
ಸತ್ಕೃತ್ಯ ನಾರದಂ ಭೂಮನ್ವಿಧಿದೃಷ್ಟೇನ ಕರ್ಮಣಾ ।
ಪೂಜಯಿತ್ವಾ ದ್ವಿಜಶ್ರೇಷ್ಠಃ ಪಪ್ರಚ್ಛ ಮುನಿಸತ್ತಮ ॥ ೧೩ ॥
ಭಗವನ್ಭವತಾ ಸರ್ವಂ ವಿದಿತಂ ಜ್ಞಾನಚಕ್ಷುಷಾ ।
ಅಸ್ಮಾಕಂ ಚ ಪರಂ ದೋಷಃ ಕಿಂಚಿಜ್ಜಾತಃ ಪುರಾಽನಘ ॥ ೧೪ ॥
ಯೇನ ಪಾಪಪ್ರಸಂಗೇನ ವ್ರತಭಂಗೋಽಭವದ್ಧ್ರುವಂ ।
ಕಾರಣಂ ಬ್ರೂಹಿ ಮೇ ನಾಥ ಕಿಂ ದೋಷೋಽತ್ರ ತು ಗಣ್ಯತೇ ॥ ೧೫ ॥

ನಾರದ ಉವಾಚ :—

ಶ್ರೂಯತಾಂ ಭೋ ದ್ವಿಜಶ್ರೇಷ್ಠ ಭವದ್ಭಿಶ್ಚ ಪುರಾಕೃತಂ ।
ಮಹಾರಾಷ್ಟ್ರೇ ಸುವಿಖ್ಯಾತೋ ಬ್ರಾಹ್ಮಣೋ ಧನಸಂಚಕಃ ॥ ೧೬ ॥

---

೧೦. ಧರ್ಮಶರ್ಮನೆಂಬ ಹೆಸರಿನಿಂದ ವಿಖ್ಯಾತನಾದ ಆತನು ಸದಾಚಾರ ನಿರತನೂ, ಪರಿಶುದ್ಧನೂ, ಅನೇಕ ವ್ರತಗಳನ್ನಾಚರಿಸಿದವನೂ, ಇಂದ್ರಿಯ ನಿಗ್ರಹ ಸಹಿತನೂ, ವೇದ ವೇದಾಂಗಪಾರಂಗತನೂ ಆಗಿದ್ದನು.

೧೧–೧೩. ಅತ್ಯಲ್ಪವಾದ ಒಂದು ದೋಷದ ಕಾರಣದಿಂದ ಆತನ ವ್ರತವು ಸಾಂಗವಾಗಿರಲಿಲ್ಲ. ಹೀಗೆಯೇ ಬಹಳ ವರ್ಷಗಳು ಕಳೆದುಹೋಗಲು ದೇವತೆ ಗಳನ್ನು ಸಾಕ್ಷಾತ್ತಾಗಿ ನೋಡಬಲ್ಲ ನಾರದಮುನಿಯು ಒಮ್ಮೆ ಆತನ ಆತಿಥ್ಯ ವನ್ನು ಸ್ವೀಕರಿಸುವ ನೆಪದಿಂದ ಆತನ ಮನೆಗೆ ಬಂದನು. ಆಗ ಆ ಬ್ರಾಹ್ಮಣನು ಸಂಭ್ರಮದಿಂದೆದ್ದು ಬಹಳ ಮರ್ಯಾದೆಯಿಂದ ಅವನನ್ನು ಬರಮಾಡಿಕೊಂಡು ವಿಧಿಯಲ್ಲಿ ಹೇಳಿರುವಂತೆ ಸತ್ಕಾರವನ್ನು ಮಾಡಿದನು. ಅತಿಥಿ ಪೂಜೆಯಾದಮೇಲೆ ಆ ಬ್ರಾಹ್ಮಣೋತ್ತಮನು ಆ ಮುನಿಶ್ರೇಷ್ಠನನ್ನಿಂತೆಂದು ಪ್ರಶ್ನೆಮಾಡಿದನು.

೧೪. "ಎಲೈ ಭಗವಂತನೆ! ನಿರ್ಮಲನಾದ ನಿನ್ನ ಜ್ಞಾನದೃಷ್ಟಿಯ ಬಲದಿಂದ ನಿನಗೆ ಭೂತಭವಿಷ್ಯದ್ವರ್ತಮಾನಗಳೆಲ್ಲವೂ ತಿಳಿದಿರುವವಷ್ಟೆ. ನನ್ನ ವ್ರತಾಚರಣೆಯಲ್ಲಿ ಹಿಂದೆ ಯಾವುದೊ ಸ್ವಲ್ಪ ದೋಷವುಂಟಾಗಿರುವುದು.

೧೫. ಆ ಪಾಪದ ಫಲವಾಗಿಯೇ ನನ್ನ ವ್ರತಭಂಗವಾಗಿರುವುದು ನಿಶ್ಚ ಯವು. ಅಯ್ಯಾ! ಇದಕ್ಕೆ ಕಾರಣವನ್ನು ಹೇಳು. ನನ್ನ ಕರ್ಮಾಚರಣೆಯಲ್ಲಿ ಯಾವ ದೋಷವನ್ನೆಣಿಸಬಹುದು.

೧೬. ನಾರದನು ಹೇಳುತ್ತಾನೆ:—ಎಲೈ ಬ್ರಾಹ್ಮಣನೆ! ನೀವು ಹಿಂದೆ

ಬ್ರಹ್ಮದತ್ತೇತ್ಯಸೌ ವಿಪ್ರೋ ವೇದಬ್ರಾಹ್ಮಣನಿಂದಕಃ ।
ಧನಲೋಭೀ ಪರಾಕ್ರಾಂತಃ ಸರ್ವಧರ್ಮಬಹಿರ್ಮುಖಃ ॥ ೧೭ ॥
ನಾಸ್ತಿಕೋ ದೇವತೀರ್ಥೇಷು ಪರದ್ರವ್ಯಾಪಹಾರಕಃ ।
ಪರಸ್ತ್ರೀಷು ರತೋ ನಿತ್ಯಂ ದ್ಯೂತವಾದೀ ಚ ತಸ್ಕರಃ ॥ ೧೮ ॥
ವಿಪನ್ನಾಯುಃ ಪರಿಕ್ಷೀಣೋ ಧನಹೀನೋಽಭವತ್ತದಾ ।
ಇತಸ್ತತೋಽಭ್ರಮದ್ಭ್ರಷ್ಟೋ ನದೀತೀರೇ ಸುವಿಹ್ವಲಃ ॥ ೧೯ ॥
ಗತಸ್ತೈರ್ಯಪ್ರಸಂಗೇನ ಯಾತ್ರಿಕೈಃ ಸಹ ಸಂಗತಃ ।
ಕಿಂಚಿತ್ಕಾಲೇಷು ಪಾಪಶೀಲೋ ಮೃತಿಂ ಪ್ರಾಪ್ತೋ ರುಜಾರ್ದಿತಃ ॥ ೨೦ ॥
ನೀತಃ ಸಂಯಮಿನೀಂ ವಿಪ್ರಸ್ತತ್ಕಾಲಂ ಯಮಕಿಂಕರೈಃ ।
ಯಮರಾಜಪುರಂ ಪ್ರಾಪ್ತೋ ಬಹುಪಾಪಕರೋ ದ್ವಿಜಃ ॥ ೨೧ ॥
ದೃಷ್ಟ್ವಾಽಸೌ ಧರ್ಮರಾಜೇನ ತದಾ ಪಾಪಪರಾಯಣಃ ।
ನಿರೀಕ್ಷ್ಯ ಸಹಸೋವಾಚ ಧರ್ಮಪೂರ್ವಮಿದಂ ವಚಃ ॥ ೨೨ ॥

---

ಮಾಡಿದ ವ್ಯಾಪಾರವನ್ನು ಹೇಳುವೆನು, ಕೇಳು. ಪೂರ್ವದಲ್ಲಿ ಮಹಾರಾಷ್ಟ್ರದೇಶದಲ್ಲಿ ಮಹಾ ನಿಧಿಸಂಚಯವನ್ನು ಮಾಡಿದ್ದ ಪ್ರಖ್ಯಾತನಾದ ಬ್ರಾಹ್ಮಣನೊಬ್ಬನಿದ್ದನು.

೧೭. ಬ್ರಹ್ಮದತ್ತನೆಂಬ ಹೆಸರುಳ್ಳ ಆತನು ಬ್ರಾಹ್ಮಣಜನ್ಮವನ್ನೆತ್ತಿದ್ದರೂ ವೇದಗಳನ್ನೂ ಬ್ರಾಹ್ಮಣರನ್ನೂ ನಿಂದಿಸುತ್ತ ಧನಲೋಭದಿಂದ ಪರರ ಸೇವೆಯಲ್ಲಿ ತೊಡಗಿ ಸಕಲ ಸದ್ಧರ್ಮಗಳನ್ನೂ ದೂರಮಾಡಿದ್ದನು.

೧೮. ಪರಲೋಕಾದಿಗಳನ್ನು ನಂಬುತ್ತಿರಲಿಲ್ಲ. ದೇವಾಲಯಗಳಲ್ಲಿಯೂ, ತೀರ್ಥಗಳಲ್ಲಿಯೂ ಪರದ್ರವ್ಯವನ್ನಪಹರಿಸುತ್ತಿದ್ದನು. ಯಾವಾಗಲೂ ಪರಸ್ತ್ರೀಯ ರಲ್ಲಿ ಲೋಲುಪನೂ, ದ್ಯೂತನಿರತನೂ, ಕಳ್ಳನೂ ಆಗಿದ್ದನು.

೧೯. ಇಂತು ತನ್ನ ಆಯುಷ್ಯವನ್ನು ಕಳೆಯುತ್ತ ಕಡೆಗಾಲಕ್ಕೆ ಧನವನ್ನು ಕಳೆದುಕೊಂಡು ದರಿದ್ರನಾದನು. ಬಳಿಕ ಮನಬಂದೆಡೆಯಲ್ಲಿ ಓಡಾಡುತ್ತ ಅತ್ಯಂತ ವ್ಯಾಕುಲತೆಯಿಂದ ಒಂದು ನದಿಯ ದಡವನ್ನು ಸೇರಿದನು.

೨೦. ಅಲ್ಲಿ ಕೆಲವು ಯಾತ್ರಿಕರು ನೆರೆದಿರಲು ಅವರ ಧನವನ್ನಪಹರಿಸಲು ಅವರೊಡನೆಯೇ ಬರುತ್ತಿದ್ದನು. ಕೆಲವು ದಿನಗಳಲ್ಲಿಯೇ ಆ ಪಾಪಿಯು ರೋಗ ಪೀಡಿತನಾಗಿ ಮರಣವನ್ನೂ ಹೊಂದಿದನು.

೨೧. ಆ ಕ್ಷಣದಲ್ಲಿಯೇ ಯಮದೂತರು ಬಂದು ಆ ಬ್ರಾಹ್ಮಣನನ್ನು ಸಂಯಮನೀಪುರಿಗೆ ಕರೆದೊಯ್ದರು. ಇಂತು ಅನೇಕ ಪಾತಕಗಳನ್ನು ಮಾಡಿದ್ದ ಆ ದ್ವಿಜಬ್ರುವನು ಯಮರಾಜನ ರಾಜಧಾನಿಯನ್ನು ಸೇರಿದನು.

೨೨. ಪಾಪನಿರತನಾಗಿದ್ದ ಅವನನ್ನು ಧರ್ಮರಾಜನೂ ಚೆನ್ನಾಗಿ ದೃಷ್ಟಿಸಿ ನೋಡಿ ಸಂಭ್ರಮದಿಂದ ತನ್ನ ಕಿಂಕರರನ್ನು ಕುರಿತು ಧರ್ಮಾರ್ಥಸಹಿತವಾದ ಮಾತುಗಳನ್ನಾಡಲುಪಕ್ರಮಿಸಿದನು.

ಶೃಣುಧ್ವಂ ಕಿಂಕರಾಃ ಸರ್ವೇ ಯಮೋಯಮೇಕಾಗ್ರಮಾನಸಾಃ ।
ಅನೇನಾಽಽಚರಿತಂ ಸರ್ವಂ ದುಷ್ಕರ್ಮ ಸರ್ವಕಿಲ್ಬಿಷಂ ॥ ೨೩ ॥
ಗೋದಾತೀರೇ ಮೃತಃ ಪಾಪೀ ತತ್ರ ನಃ ಕಾರಣಾಂ ನ ಹಿ ।
ತಿಸ್ರಃ ಕೋಟ್ಯೋಽರ್ಧಕೋಟಿಶ್ಚ ಯಾನಿ ತೀರ್ಥಾನ್ಯಹರ್ನಿಶಂ ॥ ೨೪ ॥
ಆಯಾಂತಿ ಗೌತಮೀತೀರೇ ಸಿಂಹಸ್ಥೇಽಪಿ ಬೃಹಸ್ಪತೌ ।
ತೇಷಾಂ ತು ವಾಯುಸಂಸ್ಪರ್ಶೋ ಜಾತೋಽಸ್ಯಾಂತೇ ಕಲೇಬರೇ॥ ೨೫ ॥
ತೇನ ಪುಣ್ಯಪ್ರಭಾವೇನ ನೋಽಸ್ಮಾಕಂ ಕಾರಣಂ ಕ್ವಚಿತ್ ।
ಗ್ರಾಹ್ಯೋ ಭವದ್ಭಿರ್ನೈವಾಽಯಂ ಮುಚ್ಯತಾಂ ಭೋಃ ಪುರಃಸರಾಃ ॥೨೬॥
ಏವಂ ತೈರ್ಮೋಽಚಿತೋ ವಿಪ್ರಃ ಪುನರ್ಬ್ರಹ್ಮಗತಿಂ ಗತಃ ।
ತೇನ ಪಾಪಪ್ರಸಂಗೇನ ವ್ರತಭಂಗೀ ಗತೋ ಭುವಿ ॥ ೨೭ ॥

ಬ್ರಾಹ್ಮಣ ಉವಾಚ :—

ಬ್ರಹ್ಮನ್ಕೇನ ಪ್ರಕಾರೇಣ ಸರ್ವಪಾಪಕ್ಷಯೋ ಭವೇತ್ ।
ಕಿಂ ತಪಃ ಕಿಂಚ ದಾನಂ ಚ ಕಿಂ ತೀರ್ಥವ್ರತಸೇವನಂ ॥ ೨೮ ॥

---

೨೩. "ಎಲೈ ಕಿಂಕರರಿರಾ! ನೀವೆಲ್ಲರೂ ಏಕಾಗ್ರಮನಸ್ಸಿನಿಂದ ಈ ಮಾತುಗಳನ್ನಾಲಿಸಿರಿ. ಈ ಮನುಷ್ಯನು ಸಕಲ ದುಷ್ಕರ್ಮಗಳನ್ನೂ ಸಮಸ್ತ ಪಾಪಗಳನ್ನೂ ಮಾಡಿರುವುದು ನಿಜವು.

೨೪–೨೫. ಆದರೂ ಈ ಪಾಪಿಯು ಗೋದಾನದಿಯ ತೀರದಲ್ಲಿ ಸತ್ತಿರುವುದರಿಂದ ನಾವು ಇವನನ್ನು ಮುಟ್ಟಲು ಕಾರಣವಿಲ್ಲ. ಬೃಹಸ್ಪತಿಯು ಸಿಂಹಲಗ್ನವನ್ನು ಪ್ರವೇಶಿಸಲು ಪ್ರಪಂಚದಲ್ಲಿರುವ ಮೂರೂವರೆ ಕೋಟಿ ತೀರ್ಥಗಳೂ ಈ ಗೌತಮೀನದಿಯ ತೀರಗಳಲ್ಲಿ ಸನ್ನಿಹಿತಗಳಾಗಿರುವುವು. ಇವನು ದೇಹವನ್ನು ಬಿಡುವ ಕಾಲದಲ್ಲಿ ಅವುಗಳ ಮೇಲಿನ ಗಾಳಿಯು ಇವನ ದೇಹವನ್ನು ಸ್ಪರ್ಶ ಮಾಡುತ್ತಿದ್ದಿತು.

೨೬. ಆ ಪುಣ್ಯವನ್ನು ಪಡೆದ ಪ್ರಭಾವಶಾಲಿಯಾದುದರಿಂದ ನಮಗೆ ಇವನನ್ನು ಹಿಡಿದು ತರುವ ಕಾರಣವಿಲ್ಲ. ನೀವೂ ಈತನನ್ನು ಹಿಡಿಯಬಾರದಾಗಿತ್ತು. ಎಲೈ ಕಿಂಕರರಿರಾ! ಈತನನ್ನು ಬಿಟ್ಟುಬಿಡಿರಿ."

೨೭. ಇಂತು ಯಮನಿಂದ ಬಿಡುಗಡೆಯನ್ನು ಹೊಂದಿದ ಆ ಬ್ರಾಹ್ಮಣನು ಮತ್ತೆ ಭೂಲೋಕದಲ್ಲಿ ಬ್ರಾಹ್ಮಣನಾಗಿಯೇ ಹುಟ್ಟಿದನು. ಅವನೇ ನೀನು. ಹಿಂದಿನ ಆ ಪಾಪಗಳ ಫಲವಾಗಿಯೇ ನಿನಗೆ ಈಗ ವ್ರತಭಂಗವಾಗಿರುವುದು.

೨೮–೨೯. ಬ್ರಾಹ್ಮಣನು ಹೇಳುತ್ತಾನೆ:—ಮಹರ್ಷಿಯೆ! ನನ್ನ ಸಮಸ್ತ ಪಾತಕಗಳೂ ನಾಶವನ್ನು ಹೊಂದಲು ಯಾವ ಉಪಾಯವಿರುವುದು? ಯಾವ ತಪಸ್ಸನ್ನಾಗಲಿ, ಯಾವ ದಾನವನ್ನಾಗಲಿ, ಯಾವ ತೀರ್ಥಸೇವೆಯನ್ನಾಗಲಿ,

ಯೇನ ಪುಣ್ಯಪ್ರಭಾವೇನ ವ್ರತಭಂಗೋ ನ ಜಾಯತೇ ॥ ೨೯ ॥
ನಾರದ ಉವಾಚಃ—
ಶೃಣು ದ್ವಿಜವರಶ್ರೇಷ್ಠ ಮಹಾಕಾಲವನಂ ಸ್ಮೃತಂ ।
ಯತ್ರ ರುದ್ರಸರಃ ಪ್ರೋಕ್ತಮೃಷಿಣಾ ತತ್ತ್ವದರ್ಶಿನಾ ॥ ೩೦ ॥
ಕೋಟಿಕೋಟಿ ಸುತೀರ್ಥಾನಿ ವರ್ತಂತೇ ದ್ವಿಜಸತ್ತಮ ।
ಕೋಟಿತೀರ್ಥೇತಿ ವಿಖ್ಯಾತಂ ತಸ್ಮಾದ್ದ್ವಿಜ ಸನಾತನಂ ॥ ೩೧ ॥
ತತ್ತೀರ್ಥಸ್ಯೋತ್ತರೇ ಭಾಗೇ ಸುತೀರ್ಥಂ ಸರ್ವಕಾಮದಂ ।
ನಾಮ್ನಾಽಖಂಡಸರಃ ಖ್ಯಾತಮಖಂಡೇಶ್ವರಸನ್ನಿಧೌ ॥ ೩೨ ॥
ಯಸ್ಯ ದರ್ಶನಮಾತ್ರೇಣ ಸರ್ವಯಜ್ಞಫಲಂ ಲಭೇತ್ ।
ತಸ್ಮಾದ್ಧಿ ಸರ್ವಥಾ ವತ್ಸ ಗಚ್ಛ ತ್ವಂ ತತ್ರ ಮಾ ಚಿರಂ ॥ ೩೩ ॥
ಇತಿ ತಸ್ಯ ವಚಃ ಶ್ರುತ್ವಾ ಸ ದ್ವಿಜೋಽಗಾತ್ಕುಮುದ್ವತೀಂ ।
ಸ್ನಾತ್ವಾಽಖಂಡಸರೇ ವ್ಯಾಸ ದೃಷ್ಟ್ವಾ ದೇವಂ ಮಹೇಶ್ವರಂ ॥ ೩೪ ॥

---

ಯಾವ ವ್ರತಾಚರಣೆಯನ್ನಾಗಲಿ ಮಾಡಿದರೆ ಅದರ ಪುಣ್ಯಪ್ರಭಾವದಿಂದ ಈ ವ್ರತ ಭಂಗವಾಗದಿರುವುದು ?

೩೦. ನಾರದನು ಹೇಳುತ್ತಾನೆ:—ಎಲೈ ಬ್ರಾಹ್ಮಣಶ್ರೇಷ್ಠನೆ! ಕೇಳು. ಮಹಾಕಾಲವನವೆಂಬ ಒಂದು ಉತ್ತಮ ಕ್ಷೇತ್ರವಿರುವುದು. ಅಲ್ಲಿಯೇ ತತ್ತ್ವದರ್ಶಿಯಾದ ಮಹರ್ಷಿಯೊಬ್ಬನು ನಿರ್ದೇಶಿಸಿದ ರುದ್ರಸರಸ್ಸೆಂಬ ತೀರ್ಥ ವಿರುವುದು.

೩೧. ಓ ದ್ವಿಜೊತ್ತಮನೆ! ಅದರಲ್ಲಿ ಕೋಟಿಕೋಟಿತೀರ್ಥಗಳು ನೆಲಸಿರು ವುವು. ಆದುದರಿಂದಲೇ ಅನಾದಿಯಾಗಿ ನೆಲಸಿರುವ ಆ ತೀರ್ಥವು ಕೋಟಿ ತೀರ್ಥವೆಂದೂ ಪ್ರಖ್ಯಾತವಾಗಿರುವುದು.

೩೨. ಆ ತೀರ್ಥಕ್ಕೆ ಉತ್ತರದಿಕ್ಕಿನಲ್ಲಿ ಸರ್ವಾಭೀಷ್ಟದಾಯಕವಾದ ಅಖಂಡ ಸರವೆಂಬ ಉತ್ತಮತೀರ್ಥವಿರುವುದು. ಅಖಂಡೇಶ್ವರನ ಸನ್ನಿಧಿಯಲ್ಲಿರುವ ಈ ತೀರ್ಥಕ್ಕೆ ಅಖಂಡಸರವೆಂದೇ ಹೆಸರಾಗಿರುವುದು.

೩೩. ಅದನ್ನು ನೋಡುವ ಮಾತ್ರದಿಂದಲೇ ಸಮಸ್ತ ಯಜ್ಞಗಳನ್ನೂ ಮಾಡಿದ ಫಲವು ಲಭಿಸುವುದು. ಅಯ್ಯಾ! ಆದುದರಿಂದ ನೀನು ಕಾಲವಿಳಂಬ ವನ್ನು ಮಾಡಬೇಡ. ಸರ್ವಪ್ರಯತ್ನದಿಂದಲೂ ಅಲ್ಲಿಗೆ ಹೋಗು.''

೩೪–೩೫. ಇಂತೆಂದ ನಾರದಮುನಿಯ ಮಾತನ್ನು ಕೇಳಿ ಆ ಬ್ರಾಹ್ಮಣನು ಕುಮುದ್ವತೀನಗರಕ್ಕೆ ಪ್ರಯಾಣಮಾಡಿದನು. ಅಖಂಡೇಶ್ವರತೀರ್ಥದಲ್ಲಿ ಸ್ನಾನ ವನ್ನು ಮಾಡಿ ಆ ಮಹೇಶ್ವರನ ದರ್ಶನವನ್ನು ಪಡೆದುಕೊಂಡು ಆ ಬ್ರಾಹ್ಮ ಣೋತ್ತಮನು ನಿಮಿಷಮಾತ್ರದಲ್ಲಿ ಪುಣ್ಯವಂತರಿಗೆ ಲಭಿಸುವ ಉತ್ತಮ ಲೋಕ

**ಸದ್ಯಃ ಪುಣ್ಯವತಾಂ ಲೋಕಾನ್ಪ್ರಾಪ್ನೋದ್ವೈ ದ್ವಿಜಸತ್ತಮಃ ।**
**ಏವಂ ವ್ಯಾಸ ಮಹಾತೀರ್ಥಮಖಂಡೇಶ್ವರಮುತ್ತಮಂ ॥ ೩೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಅಖಂಡೇಶ್ವರ ಮಹಿಮಾನುವರ್ಣನಂ" ನಾಮಾಷ್ಟಷಷ್ಟಿತಮೋಽಧ್ಯಾಯಃ**

---

ಗಳಿಗೆ ಹೋದನು. ಎಲೈ ವ್ಯಾಸಮುನಿಯೆ! ಉತ್ತಮವಾದ ಅಖಂಡೇಶ್ವರ ಮಹಾತೀರ್ಥವು ಇಂತಹ ಮಹಾಮಹಿಮೆಯುಳ್ಳದ್ದಾಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಹಾತ್ಮ್ಯದಲ್ಲಿ "ಅಖಂಡೇಶ್ವರಮಹಿಮಾನುವರ್ಣನ"ವೆಂಬ ಅರುವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕೋನಸಪ್ತತಿತಮೋಽಧ್ಯಾಯಃ

## ಕರ್ಕರಾಜತೀರ್ಥಮಹಿಮಾನುವರ್ಣನಂ

ಸನತ್ಕುಮಾರ ಉವಾಚ :—

ಭೂಯಃ ಶೃಣು ಪರಂ ತೀರ್ಥಂ ಸರ್ವತೀರ್ಥಫಲಪ್ರದಂ ।
ಕೀರ್ತಿತಂ ಬ್ರಹ್ಮಣಾ ಪೂರ್ವಂ ಮಾರ್ಕಂಡೇಯಸ್ಯ ಪೃಚ್ಛತಃ ॥ ೧ ॥
ಶೃಣು ವತ್ಸ ಮಹೀಪೃಷ್ಠೇ ಶಿಪ್ರಾ ದಿವ್ಯತರಾ ನದೀ ।
ತಸ್ಯಾಸ್ತೀರೇ ವರಂ ತೀರ್ಥಂ ಕರ್ಕರಾಜೇತಿ ವಿಶ್ರುತಂ ॥ ೨ ॥
ಯಸ್ಯ ದರ್ಶನಮಾತ್ರೇಣ ಮಹಾಪಾಪಕ್ಷಯೋ ಭವೇತ್ ।
ವಿಕಾರಾ ಮಾನಸಾಃ ಸರ್ವೇ ಚಂದ್ರೋ ಮಾನಸಸಂಭವಃ ॥ ೩ ॥
ತಸ್ಯ ಸ್ಥಾನೇ ಗತೋ ಭಾನುರ್ಯಾಮ್ಯಾಯನಕರಃ ಪರಃ ।
ಋತುತ್ರಯಂ ಸಮಾಖ್ಯಾತಂ ವಿಧೂಮ್ರಾರ್ಚಿಸ್ತದುಚ್ಯತೇ ॥ ೪ ॥
ಮೃತಾಸ್ತತ್ರ ಪ್ರವರ್ತಂತೇ ಯೋಗಿನೋಽಪಿ ಪರಂತಪ ।
ಚಾತುರ್ಮಾಸ್ಯೇ ಹರೌ ಸುಪ್ತೇ ಯೇ ನರಾ ವ್ರತವರ್ಜಿತಾಃ ॥ ೫ ॥

---

## ಕನ್ನಡದ ಅನುವಾದ

### ಕರ್ಕರಾಜತೀರ್ಥಮಹಿಮಾನುವರ್ಣನ

೧. ಸನತ್ಕುಮಾರನು ಹೇಳುತ್ತಾನೆ:—ಸಕಲತೀರ್ಥಗಳ ಫಲವನ್ನೊದಗಿಸುವ ಮತ್ತೊಂದು ತೀರ್ಥವನ್ನು ವಿವರಿಸುವೆನು, ಕೇಳು. ಪೂರ್ವದಲ್ಲಿ ಈ ವಿಷಯದಲ್ಲಿ ಪ್ರಶ್ನೆಮಾಡಿದ ಈ ಮಾರ್ಕಂಡೇಯ ಮುನಿಗೆ ಚತುರ್ಮುಖನು ಈ ತೀರ್ಥದ ವಿಷಯವನ್ನು ಹೇಳಿರುವನು.

೨. "ಚಿರಂಜೀವಿಯೆ! ಭೂಲೋಕದಲ್ಲಿ ಶಿಪ್ರಾನಾಮಕವಾದ ದಿವ್ಯನದಿಯೊಂದಿರುವುದು. ಅದರ ತೀರದಲ್ಲಿ ಕರ್ಕರಾಜವೆಂದು ಪ್ರಖ್ಯಾತವಾದ ತೀರ್ಥೋತ್ತಮವೊಂದಿರುವುದು.

೩. ಅದರ ದರ್ಶನಮಾತ್ರದಿಂದಲೇ ಸಕಲಪಾತಕಗಳೂ ನಾಶವಾಗುವುದೆಂದು ಹೇಳುವರು. ಸಕಲವಸ್ತುಗಳೂ ಮನಸ್ಸಿನ ವಿಕಾರಗಳೇ ಆಗಿರುವುವಷ್ಟೆ. ಚಂದ್ರನೂ ವಿರಾಟ್ಪುರುಷನ ಮನಸ್ಸಿನಿಂದಲೇ ಹುಟ್ಟಿರುವನು.

೪. ಅವನ ಸ್ಥಾನಕ್ಕೆ ಬಂದ ಸೂರ್ಯನು ದಕ್ಷಿಣಾಯನವನ್ನುಂಟುಮಾಡುವನು. ಈ ಆರುತಿಂಗಳ (ಮೂರು ಋತುಗಳ) ಕಾಲವನ್ನು ವಿಧೂಮಾರ್ಚಿಯೆಂದು ಕರೆಯುತ್ತಿರುವರು.

೫–೭. ಆ ಕಾಲದಲ್ಲಿ ಮೃತರಾದ ಯೋಗಿಗಳೂ ಪುನಃ ಭೂಲೋಕದಲ್ಲಿ ಹುಟ್ಟುವರು. ವತ್ಸ! ಈ ಚಾತುರ್ಮಾಸ್ಯಕಾಲದಲ್ಲಿ ಶ್ರೀಮನ್ನಾರಾಯಣನು ನಿದ್ದೆಮಾಡುತ್ತಿರುವನು. ಆ ಕಾಲದಲ್ಲಿ ಯಾರು ವ್ರತೋಪವಾಸಗಳನ್ನು

ನ ತೇಷಾಂ ಸದ್ಗತಿರ್ವತ್ಸ ಸತ್ಯಮೇವ ಬ್ರವೀಮಿ ತೇ ।
ಚಾತುರ್ಮಾಸ್ಯೇ ಮೃತಾ ಯೇ ಚ ಯೇ ಮೃತಾ ದಕ್ಷಿಣಾಯನೇ ॥ ೬ ॥
ತೇಷಾಮುದ್ಧರಣಾರ್ಥಾಯ ತೀರ್ಥಮೇತದ್ವಿನಿರ್ಮಿತಂ ।
ಕರ್ಕರಾಜ ಇತಿ ಖ್ಯಾತಂ ಸರ್ವಲೋಕೇಷು ಗೀಯತೇ ॥ ೭ ॥

ಮಾರ್ಕಂಡೇಯ ಉವಾಚ :—

ಭಗವನ್ಭವತಾ ಸರ್ವಂ ನಿರ್ಮಿತಂ ವಿಶ್ವಮೂರ್ತಿನಾ ।
ಚರಾಽಚರಮಿದಂ ವಿಶ್ವಂ ಜಗತ್ಸರ್ವಂ ಜಗತ್ಪತೇ ॥ ೮ ॥
ಚಾತುರ್ಮಾಸ್ಯೇ ಹರೌ ಸುಪ್ತೇ ಧರ್ಮಾಚಾರವಿಧಿಃ ಸ್ಮೃತಃ ।
ತದಹಂ ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ॥ ೯ ॥

ಬ್ರಹ್ಮೋವಾಚ :—

ಶೃಣು ವತ್ಸ ಪರಂ ಪುಣ್ಯಂ ಚಾತುರ್ಮಾಸ್ಯಫಲಂ ಶುಭಂ ।
ಯಚ್ಛ್ರುತ್ವಾ ಭಾರತೇ ಖಂಡೇ ನೃಣಾಂ ಮುಕ್ತಿರ್ನ ದುರ್ಲಭಾ ॥ ೧೦ ॥
ಮುಕ್ತಿಪ್ರದೋಽಯಂ ಭಗವಾನ್ ಸಂಸಾರೋತ್ತಾರಕಾರಣಃ ।
ಯಸ್ಯ ಸ್ಮರಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೧೧ ॥

---

ಮಾಡದಿರುವರೊ, ಅವರಿಗೆ ಸದ್ಗತಿಯುಂಟಾಗುವುದಿಲ್ಲ. ಇದು ಖಂಡಿತವು. ಈ ಚಾತುರ್ಮಾಸ್ಯಕಾಲದಲ್ಲಿಯೂ, ದಕ್ಷಿಣಾಯನಕಾಲದಲ್ಲಿಯೂ ಮರಣವನ್ನು ಹೊಂದುವ ಮನುಜರ ಉದ್ಧಾರಕ್ಕಾಗಿಯೇ ಈ ತೀರ್ಥವು ನಿರ್ಮಾಣವಾಗಿರುವುದು. ಕರ್ಕರಾಜವೆಂದು ಪ್ರಖ್ಯಾತವಾದ ಇದರ ಮಹಿಮೆಯು ಮೂರುಲೋಕಗಳಲ್ಲಿಯೂ ಹೊಗಳಲ್ಪಡುತ್ತಿರುವುದು.

೮. ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಸ್ವಾಮಿಯೆ! ವಿಶ್ವಮೂರ್ತಿಯೂ ಲೋಕಪಿತಾಮಹನೂ ಆದ ನಿನ್ನಿಂದ ಚರಾಚರಾತ್ಮಕವಾದ ಈ ಸಮಸ್ತಬ್ರಹ್ಮಾಂಡವೂ ಉಂಟಾಗಿರುವುದಲ್ಲವೆ.

೯. ಚಾತುರ್ಮಾಸ್ಯದಲ್ಲಿ ಪರಮಾತ್ಮನು ಮಲಗಿರಲು ಅನೇಕಧರ್ಮಗಳನ್ನಾಚರಿಸಬೇಕೆಂಬ ವಿಧಿಯು ಸ್ಮೃತಿಗಳಲ್ಲಿರುವುದು. ಸರ್ವಜ್ಞನಾದ ನಿನ್ನಿಂದ ಅದರ ವಿವರವನ್ನು ಕೇಳಲಿಚ್ಛಿಸುತ್ತಿರುವೆನು.

೧೦. ಬ್ರಹ್ಮನು ಹೇಳುತ್ತಾನೆ:—ವತ್ಸ! ಉತ್ತಮವೂ, ಪುಣ್ಯಪ್ರದವೂ, ಪವಿತ್ರವೂ ಆದ ಚಾತುರ್ಮಾಸ್ಯಫಲವನ್ನು ಕೇಳು, ಇದನ್ನು ಕೇಳಿ ಆಚರಿಸಿದವರಿಗೆ ಈ ಭರತಖಂಡದಲ್ಲಿ ಮೋಕ್ಷವೂ ದುರ್ಲಭವಲ್ಲ.

೧೧. ಷಡ್ಗುಣೈಶ್ವರ್ಯಾನ್ವಿತನಾದ ಶ್ರೀಮನ್ನಾರಾಯಣನು ಮಾನವರಿಗೆ ಮೋಕ್ಷಪ್ರದನಾಗಿರುವನು. ಆತನೇ ಸಂಸಾರದಿಂದ ಕಡೆಹಾಯಿಸುವ ಉಪಾಯವಾಗಿರುವನು. ಆತನನ್ನು ಸ್ಮರಿಸುವುದರಿಂದಲೇ ಸಮಸ್ತಪಾಪಗಳೂ ನಾಶವಾಗುವುವು.

ಮಾನುಷ್ಯಂ ದುರ್ಲಭಂ ಲೋಕೇ ತತ್ರಾಽಪಿ ಚ ಕುಲೀನತಾ ।
ತತ್ರಾಽಪಿ ಸಂಯಮಿತ್ವಂ ಚ ತತ್ರ ಸತ್ಸಂಗಮಃ ಶುಭಃ ॥ ೧೨ ॥
ಸತ್ಸಂಗಮೋ ನ ಯತ್ರಾಽಸ್ತಿ ವಿಷ್ಣುಭಕ್ತಿರ್ವ್ರತಾನಿ ಚ ।
ಚಾತುರ್ಮಾಸ್ಯೇ ವಿಶೇಷೇಣ ವಿಷ್ಣುವ್ರತಕರಃ ಶುಭಃ ॥ ೧೩ ॥
ಚಾತುರ್ಮಾಸ್ಯೇಽವ್ರತೀ ಯಸ್ತು ತಸ್ಯ ಪುಣ್ಯಂ ನಿರರ್ಥಕಂ ।
ಸರ್ವತೀರ್ಥಾನಿ ದಾನಾನಿ ಪುಣ್ಯಾನ್ಯಾಯತನಾನಿ ಚ ॥ ೧೪ ॥
ವಿಷ್ಣುಮಾಶ್ರಿತ್ಯ ತಿಷ್ಠಂತಿ ಚಾತುರ್ಮಾಸ್ಯೇ ಸಮಾಗತೇ ।
ಸ ವಿಷ್ಣುರಾಶ್ರಿತೋ ನಿತ್ಯಂ ಕರ್ಕರಾಜಂ ಸುತೀರ್ಥಕಂ ॥ ೧೫ ॥
ಸುಪುಷ್ಟೇನ ಚ ದೇಹೇನ ಜೀವಿತಂ ತಸ್ಯ ಶೋಭನಂ ।
ಚಾತುರ್ಮಾಸ್ಯೇ ಸಮಾಯಾತೇ ಹರಿರ್ಯೇನಾರ್ಚಿತಸ್ತದಾ ।
ಕೃತಾರ್ಥಾಸ್ತಸ್ಯ ವಿಬುಧಾ ಯಾವಜ್ಜೀವಂ ವರಪ್ರದಾಃ ॥ ೧೬ ॥
ಸಂಪ್ರಾಪ್ಯ ಮಾನುಷಂ ದೇಹಂ ಚಾತುರ್ಮಾಸ್ಯೇ ಪರಾಙ್ಮುಖಃ ।
ತಸ್ಯ ಪಾಪಶತಾನ್ಯಾಹುರ್ದೇಹಸ್ಥಾನಿ ನ ಸಂಶಯಃ ॥ ೧೭ ॥

---

೧೨. ಲೋಕದಲ್ಲಿ ಮನುಷ್ಯಜನ್ಮವೇ ಅತ್ಯಂತದುರ್ಲಭವು. ಅದರಲ್ಲಿಯೂ ಉತ್ತಮಕುಲದಲ್ಲಿ ಹುಟ್ಟುವುದೂ, ಇಂದ್ರಿಯಸಂಯಮವಿರುವುದೂ, ಸಾಧುಸಮಾಗಮವಾಗುವುದೂ ಬಹಳ ಪುಣ್ಯಕರಗಳು.

೧೩. ಸಜ್ಜನಸಂಗತಿಯೆಲ್ಲಿರುವುದಿಲ್ಲವೊ, ಅಲ್ಲಿ ವಿಷ್ಣುಭಕ್ತಿಯಾಗಲಿ, ವ್ರತಾಚರಣೆಗಳಾಗಲಿ ನಿಷ್ಫಲಗಳೇ ಸರಿ. ಚಾತುರ್ಮಾಸ್ಯದಲ್ಲಿ ಇತರ ವ್ರತಗಳಿಗಿಂತಲೂ ಪವಿತ್ರವಾದ ವೈಷ್ಣವವ್ರತವನ್ನು ಕೈಗೊಳ್ಳಬೇಕು.

೧೪–೧೫. ಚಾತುರ್ಮಾಸ್ಯದಲ್ಲಿ ಯಾವನು ವ್ರತವನ್ನಾಚರಿಸದಿರುವನೊ, ಅವನ ಇತರ ಪುಣ್ಯಕಾರ್ಯಗಳೆಲ್ಲವೂ ನಿರರ್ಥಕಗಳಾಗುವುವು. ಚಾತುರ್ಮಾಸ್ಯದ ಸಮಯವೊದಗಲು ಸಕಲತೀರ್ಥಗಳೂ, ದಾನಗಳೂ, ಪುಣ್ಯಕ್ಷೇತ್ರಗಳೂ ಮಹಾವಿಷ್ಣುವನ್ನಾಶ್ರಯಿಸಿರುವುವು. ಆ ಮಹಾವಿಷ್ಣುವು ನಿತ್ಯವೂ ಕರ್ಕರಾಜವೆಂಬ ತೀರ್ಥೋತ್ತಮವನ್ನು ಆಶ್ರಯಿಸಿರುವನು.

೧೬. ಚಾತುರ್ಮಾಸ್ಯವು ಬರಲು ಶ್ರೀಹರಿಯನ್ನು ಪೂಜಿಸಿದವನ ಜೀವನವು ಉತ್ತಮವಾದ ದೇಹಾರೋಗ್ಯದಿಂದ ಕೂಡಿ ಪರಮಮಂಗಳಕರವಾಗಿರುವುದು. ಅವನಲ್ಲಿ ದೇವತೆಗಳೆಲ್ಲರೂ ಸಂತೃಪ್ತರಾಗಿ ಯಾವಜ್ಜೀವವೂ ವರಗಳನ್ನೀಯುತ್ತಿರುವರು.

೧೭. ಮನುಷ್ಯಶರೀರವನ್ನು ಪಡೆದು ಯಾವನು ಚಾತುರ್ಮಾಸ್ಯದ ಆಚರಣೆಯಲ್ಲಿ ವಿಮುಖನಾಗಿರುವನೊ, ಅವನ ದೇಹದಲ್ಲಿ ನೂರಾರು ಪಾತಕಗಳು ಒಳಹೊಗುವುವೆಂಬುದರಲ್ಲಿ ಸಂದೇಹವಿಲ್ಲ.

**ಮಾನುಷ್ಯಂ ದುರ್ಲಭಂ ಲೋಕೇ ಹರಿಭಕ್ತಿಶ್ಚ ದುರ್ಲಭಾ ।**
**ಚಾತುರ್ಮಾಸ್ಯೇ ವಿಶೇಷೇಣ ಸುಪ್ತೇ ದೇವೇ ಜನಾರ್ದನೇ ॥ ೧೮ ॥**
**ಚಾತುರ್ಮಾಸ್ಯೇ ನರಃ ಸ್ನಾತ್ವಾ ಕರ್ಕರಾಜೇ ದ್ವಿಜೋತ್ತಮ ।**
**ಸರ್ವಕ್ರತುಫಲಂ ಪ್ರಾಪ್ಯ ದೇವವದ್ದಿವಿ ಮೋದತೇ ॥ ೧೯ ॥**
**ವಿಶೇಷೇಣ ತು ತತ್ ಸ್ನಾನಂ ಕರ್ಕಸ್ಥೇಽಪಿ ದಿವಾಕರೇ ।**
**ದುರ್ಲಭಂ ಸರ್ವಜಂತೂನಾಂ ಸಸುರಾಽಸುರಮಾನುಷಂ ॥ ೨೦ ॥**
**ದೇಹಶುದ್ಧಿಂ ವಿಧಾಯಾಽಽದೌ ಮುಕ್ತಿಮಾರ್ಗಮವಾಪ್ನುಯಾತ್ ।**
**ತತ್ರಾಽಪಿ ನಿರ್ಝರೇ ಕೂಪೇ ತಡಾಗೇ ವಾ ಸರಸ್ಯಪಿ ॥ ೨೧ ॥**
**ತಸ್ಮಾತ್ತದಧಿಕಂ ಪುಣ್ಯಂ ಸಮಾಖ್ಯಾತಂ ಸುರಾಸುರೈಃ ।**
**ತೇಷು ಯಃ ಸ್ನಾತಿ ವೈ ನಿತ್ಯಂ ತಸ್ಯ ಪಾಪಕ್ಷಯೋ ಭವೇತ್ ।**
**ತಸ್ಮಾನ್ನದ್ಯಧಿಕಾ ಪುಣ್ಯಾ ಸಮಾಖ್ಯಾತಾ ಸುರಾಽಸುರೈಃ ॥ ೨೨ ॥**
**ಪುಷ್ಕರೇ ಚ ಪ್ರಯಾಗೇ ಚ ಯತ್ರ ಕ್ವಾಽಪಿ ಮಹಾಜಲೇ ।**
**ಚಾತುರ್ಮಾಸ್ಯೇ ತು ಯಃ ಸ್ನಾತಿ ಪುಣ್ಯಸಂಖ್ಯಾ ತತೋಽಧಿಕಾ ॥ ೨೩ ॥**

---

೧೮. ಲೋಕದಲ್ಲಿ ಮನುಷ್ಯಜನ್ಮವೇ ದುರ್ಲಭವು. ಅದರಲ್ಲಿಯೂ ಚಾತುರ್ಮಾಸ್ಯಸಮಯದಲ್ಲಿ ಶ್ರೀಹರಿಯು ಮಲಗಿರುವಾಗ ಆತನನ್ನು ಪೂಜಿಸುವುದೂ ದುರ್ಲಭಭಾಗ್ಯವೇ ಆಗಿರುವುದು.

೧೯. ಅಯ್ಯಾ ದ್ವಿಜೋತ್ತಮನೆ! ಚಾತುರ್ಮಾಸ್ಯದಲ್ಲಿ ಕರ್ಕರಾಜ ತೀರ್ಥದಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ಸಕಲಯಜ್ಞಾಚರಣೆಯ ಫಲವನ್ನು ಪಡೆದು ದೇವತೆಗಳಂತೆಯೇ ಸ್ವರ್ಗದಲ್ಲಿ ಆನಂದಿಸುವನು.

೨೦. ವಿಶೇಷವಾಗಿ ಸೂರ್ಯನು ಕರ್ಕಾಟಕರಾಶಿಯಲ್ಲಿರುವಾಗ ಈ ತೀರ್ಥದ ಸ್ನಾನವು ದೇವತೆಗಳು, ರಾಕ್ಷಸರು, ಮನುಷ್ಯರು ಮುಂತಾದ ಸಕಲ ಪ್ರಾಣಿಗಳಿಗೂ ಅತ್ಯಂತ ದುರ್ಲಭವೆಂದೇ ಹೇಳಬೇಕು.

೨೧. ಆ ಮಾಸದಲ್ಲಿ ಯಾವ ನದಿಯಲ್ಲಾಗಲಿ, ಬಾವಿಯಲ್ಲಾಗಲಿ, ಕೊಳದಲ್ಲಾಗಲಿ, ಸರೋವರದಲ್ಲಾಗಲಿ ಸ್ನಾನವನ್ನು ಮಾಡಿದರೂ ಮೊದಲು ದೇಹಶುದ್ಧಿಯನ್ನುಂಟುಮಾಡಿ ಬಳಿಕ ಮೋಕ್ಷಮಾರ್ಗವು ಸಿಕ್ಕುವಂತೆಸಗುವುದು.

೨೨. ಆದುದರಿಂದ ಈ ಶಿಪ್ರಾತೀರ್ಥಸ್ನಾನವು ಮಹಾಪುಣ್ಯತಮವೆಂದು ದೇವದಾನವರೆಲ್ಲರೂ ಹೇಳುತ್ತಿರುವರು. ಈ ತೀರ್ಥಾದಿಗಳಲ್ಲಿಯೂ ಯಾವನು ನಿತ್ಯವೂ ಸ್ನಾನಮಾಡುತ್ತಿರುವನೊ, ಅವನ ಸಕಲಪಾಪಗಳೂ ಕ್ಷೀಣವಾಗುವುವು. ಆದಕಾರಣವೇ ಸುರಾಸುರರೂ ಈ ಶಿಪ್ರಾನದಿಯು ಅಧಿಕ ಪುಣ್ಯಪ್ರದವೆಂದು ಹೇಳುತ್ತಿರುವರು.

೨೩. ಚಾತುರ್ಮಾಸ್ಯದಲ್ಲಿ ಯಾವನು ಪುಷ್ಕರಕ್ಷೇತ್ರದಲ್ಲಾಗಲಿ, ಪ್ರಯಾಗ

ರೇವಾಯಾಂ ಭಾಸ್ಕರೇ ಕ್ಷೇತ್ರೇ ಪ್ರಾಚ್ಯಾಂ ಸಾಗರಸಂಗಮೇ ।
ಏಕಾಽಹಮಪಿ ಯಃ ಸ್ನಾತಿ ಚಾತುರ್ಮಾಸ್ಯೇ ನ ದುಃಖಭಾಕ್ ॥ ೨೪ ॥
ದಿನತ್ರಯಂ ಚ ಯಃ ಸ್ನಾತಿ ನರ್ಮದಾಯಾಂ ಸಮಾಹಿತಃ ।
ಸುಪ್ತೇ ದೇವೇ ಜಗನ್ನಾಥೇ ಪಾಪಂ ಯಾತಿ ಸಹಸ್ರಧಾ ॥ ೨೫ ॥
ಪಕ್ಷಮೇಕಂ ತು ಯಃ ಸ್ನಾತಿ ಗೋದಾವರ್ಯಾಂ ದಿನೋದಯೇ ।
ಸ ಭಿತ್ವಾ ಕರ್ಮಜಂ ದೇಹಂ ಯಾತಿ ವಿಷ್ಣೋಃ ಸಲೋಕತಾಂ ॥ ೨೬ ॥
ಅವಂತ್ಯಾಂ ಕರ್ಕರಾಜೇ ತು ಸಾಕ್ಷಾದ್ವಿಷ್ಣುರ್ಭವೇನ್ನರಃ ।
ಕ್ಷಣಮೇಕಂ ಕ್ಷಣಾರ್ಧಂ ವಾ ಚಾತುರ್ಮಾಸ್ಯೇಽತಿಲಂಘಯೇತ್ ॥ ೨೭ ॥

ತಿಲೋದಕೇನಾಮಲಸಂಯುತೇನ
ಬಿಲ್ವೋದಕೇನಾಽಪಿ ಚ ಮಜ್ಜಯೇದ್ಯಃ ।
ನ ತಸ್ಯ ಜಾನಾಮಿ ಫಲಾಧಿಕಂ ವೈ
ಕಿಂ ತಸ್ಯ ಕೀದೃಙ್ಮುನಿಭಿಃ ಪ್ರಣೀತಂ ॥ ೨೮ ॥

---

ದಲ್ಲಾಗಲಿ, ಮತ್ತಾವ ಮಹಾತೀರ್ಥದಲ್ಲಾಗಲಿ ಸ್ನಾನವನ್ನು ಮಾಡುವನೋ, ಅವನ ಪುಣ್ಯದ ಪರಿಮಾಣವು ಅತ್ಯಧಿಕವಾದುದು.

೨೪. ಈ ಸಮಯದಲ್ಲಿ ರೇವಾನದಿಯಲ್ಲಿಯೂ, ಭಾಸ್ಕರ ಕ್ಷೇತ್ರದಲ್ಲಿಯೂ, ಪೂರ್ವದಿಕ್ಕಿನಲ್ಲಿರುವ ಗಂಗಾಸಾಗರಸಂಗಮದಲ್ಲಿಯೂ ಒಂದು ದಿನವಾದರೂ ಸ್ನಾನಮಾಡಿದವನು ದುಃಖಭಾಜನನಾಗುವುದಿಲ್ಲ.

೨೫. ಜಗನ್ನಾಥನ ನಿದ್ರಾಕಾಲದಲ್ಲಿ ಯಾವನು ಮೂರು ದಿವಸಗಳು ನರ್ಮದಾನದಿಯಲ್ಲಿ ಶಾಂತಮನಸ್ಕನಾಗಿ ಸ್ನಾನಮಾಡುವನೋ, ಅವನ ಪಾಪ ರಾಶಿಯು ಸಾವಿರಪಾಲಾಗಿ ಚೆದರಿಹೋಗುವುದು.

೨೬. ಈ ಮಾಸದಲ್ಲಿ ಪ್ರತಿಪ್ರಾತಃಕಾಲದಲ್ಲಿ ಒಂದು ಪಕ್ಷದವರೆಗೂ ಗೋದಾವರಿಯಲ್ಲಿ ಸ್ನಾನಮಾಡಿದವನು, ಕರ್ಮಲಬ್ಧವಾದ ಈ ಪಾಂಚಭೌತಿಕ ದೇಹವನ್ನು ತ್ಯಜಿಸಿ ವಿಷ್ಣುವಿನ ಸಾಲೋಕ್ಯವನ್ನು ಪಡೆಯುವನು.

೨೭. ಚಾತುರ್ಮಾಸ್ಯದಲ್ಲಿ ಅವಂತೀಕ್ಷೇತ್ರದಲ್ಲಿರುವ ಕರ್ಕರಾಜತೀರ್ಥದಲ್ಲಿ ಒಂದು ಕ್ಷಣಮಾತ್ರವೊ, ಕ್ಷಣಾರ್ಧವೊ, ಸ್ನಾನಮಾಡಿದ ನರನು ಮಹಾ ವಿಷ್ಣುವಿನ ಸಾಕ್ಷಾತ್ಸಾರೂಪ್ಯವನ್ನೇ ಪಡೆಯುವನು.

೨೮. ತಿಲೋದಕದಿಂದಲೂ, ಆಮಲಕೋದಕದಿಂದಲೂ, ಬಿಲ್ವೋದಕದಿಂದಲೂ ಯಾವನು ಸ್ನಾನವನ್ನು ಮಾಡುವನೋ, ಅವನ ಪುಣ್ಯವು ಎಷ್ಟರ ಮಟ್ಟಿನದೆಂದು ಹೇಳಲು ನಾವು ತಿಳಿಯೆವೆಂದು ಮಹರ್ಷಿವರ್ಯರೂ ಹೇಳುತ್ತಿರುವರು.

ಗಂಗಾಂ ಸ್ಮರತಿ ಯೋ ನಿತ್ಯಮುದಪಾನ ಸಮೀಪತಃ ।
ತದ್ಗಾಂಗೇಯಜಲಂ ಜಾತಂ ತೇನ ಸ್ನಾನಂ ಸಮಾಚರೇತ್ ॥ ೨೯ ॥
ಗಂಗಾಽಪಿ ದೇವದೇವಸ್ಯ ಚರಣಾಂಗುಷ್ಠವಾಹಿನೀ ।
ಪಾಪಹಾ ಸಾ ಸದಾ ಪ್ರೋಕ್ತಾ ಚಾತುರ್ಮಾಸ್ಯೇ ವಿಶೇಷತಃ ॥ ೩೦ ॥
ಚಾತುರ್ಮಾಸ್ಯೇ ಜಲಗತೋ ದೇವೋ ನಾರಾಯಣೋ ಭವೇತ್ ।
ಸರ್ವತೀರ್ಥಾಽಧಿಕಂ ಸ್ನಾನಂ ವಿಷ್ಣುತೇಜೋಂಶಸಂಗತಂ ॥ ೩೧ ॥
ಸ್ನಾನಂ ದಶವಿಧಂ ಕಾರ್ಯಂ ವಿಷ್ಣುನಾಮ್ನಾ ಮಹಾಫಲಂ ।
ಸುಪ್ತೇ ದೇವೇ ವಿಶೇಷೇಣ ನರೋ ದೇವತ್ವಮಾಪ್ನುಯಾತ್ ॥ ೩೨ ॥
ವಿನಾ ಸ್ನಾನಂ ತು ಯತ್ಕರ್ಮ ಪುಣ್ಯಕಾರ್ಯಮಯಂ ಶುಭಂ ।
ಕ್ರಿಯತೇ ವಿಫಲಂ ಬ್ರಹ್ಮಂಸ್ತದ್ಗೃಹ್ಣಂತಿ ಹಿ ರಾಕ್ಷಸಾಃ ॥ ೩೩ ॥
ಸ್ನಾನೇನ ಸತ್ಯಮಾಪ್ನೋತಿ ಸತ್ಯೇ ಧರ್ಮಃ ಸನಾತನಃ ।
ಧರ್ಮಾನ್ಮೋಕ್ಷಪಥಂ ಪ್ರಾಪ್ಯ ಪುನರ್ನೈವಾಽವಸೀದತಿ ॥ ೩೪ ॥

---

೨೯. ಯಾವ ಮಾನವನಾದರೂ ಯಾವ ಜಲಾಶಯದ ಬಳಿಯಲ್ಲಿ ನಿಂತು ಗಂಗೆಯನ್ನು ಸ್ಮರಿಸಿದರೂ ಅದರ ಉದಕವು ಗಂಗಾತೀರ್ಥಕ್ಕೆ ಸಮಾನವಾಗುವುದು. ಅದರಲ್ಲಿಯೇ ಸ್ನಾನವನ್ನಾಚರಿಸಬೇಕು.

೩೦. ಗಂಗೆಯೂ ದೇವೇಶ್ವರನಾದ ನಾರಾಯಣನ ಅಂಗುಷ್ಠದಿಂದ ಹೊರಟು ಬಂದವಳೇ ಆದುದರಿಂದ ಆಕೆಯು ಸರ್ವಕಾಲಗಳಲ್ಲಿಯೂ, ವಿಶೇಷವಾಗಿ ಚಾತುರ್ಮಾಸ್ಯದಲ್ಲಿಯೂ ಪಾಪಘ್ನಿಯಾಗಿರುವಳು.

೩೧. ಚಾತುರ್ಮಾಸ್ಯದಲ್ಲಿ ಮಹಾವಿಷ್ಣುವು ತೀರ್ಥಗಳಲ್ಲಿ ಸನ್ನಿಹಿತನಾಗಿರುವನು. ಆ ಕಾಲದಲ್ಲಿ ಮಾಡಿದ ಸ್ನಾನವು ಅಧಿಕಫಲವನ್ನು ಕೊಡುವುದೂ, ವಿಷ್ಣುತೇಜೋಭಿವೃದ್ಧಿದಾಯಕವೂ ಆಗಿರುವುದು.

೩೨. ವಿಷ್ಣುವಿನ ಇಪ್ಪತ್ತುನಾಲ್ಕು ಹೆಸರುಗಳ ಸ್ಮರಣೆಯಿಂದ ಮಾಡಿದ ಹತ್ತುಬಗೆಯ ಸ್ನಾನಗಳೂ ಮಹಾಫಲದಾಯಕಗಳು. ವಿಶೇಷವಾಗಿ ಶ್ರೀಹರಿಯ ನಿದ್ರಾಕಾಲದಲ್ಲಿ ಮಾಡಿದ ಸ್ನಾನದಿಂದ ನರನು ದೇವತ್ವವನ್ನು ಪಡೆಯುವನು.

೩೩. ಅಯ್ಯಾ ಬ್ರಾಹ್ಮಣನೆ! ಸ್ನಾನವನ್ನು ಮಾಡದೆ ಯಾವ ಪುಣ್ಯಕಾರ್ಯವನ್ನಾಗಲಿ ಶುಭವನ್ನಾಗಲಿ ಮಾಡಿದರೂ, ಅದು ನಿಷ್ಫಲವೇ ಸರಿ. ಅದರ ಫಲವು ರಾಕ್ಷಸರಿಗೆ ಸೇರುವುದು.

೩೪. ಸ್ನಾನದಿಂದ ಸತ್ಯಸ್ಥಿತಿಯು ಲಭಿಸುವುದು, ಸತ್ಯದಿಂದ ಸನಾತನ ಧರ್ಮದ ಲಾಭವಾಗುವುದು, ಧರ್ಮದಿಂದ ಮೋಕ್ಷದಹಾದಿಯನ್ನು ಹಿಡಿದ ಮನುಷ್ಯನು ಪುನಃ ದುಃಖಕ್ಕೀಡಾಗುವುದಿಲ್ಲ.

ಯೇ ಚಾಧ್ಯಾತ್ಮವಿದಃ ಪುಣ್ಯಾ ಯೇ ಚ ವೇದಾಂತಪಾರಗಾಃ ।
ಸರ್ವದಾನಪ್ರದಾನೇ ಚ ತೇಷಾಂ ಸ್ನಾನೇನ ಶುಧ್ಯತಿ ॥ ೩೫ ॥
ಕೃತಸ್ನಾನಸ್ಯ ಹಿ ಹರಿರ್ದೇಹಮಾಶ್ರಿತ್ಯ ತಿಷ್ಠತಿ ।
ಸರ್ವಕ್ರಿಯಾಫಲಂ ಯೇಷು ಸಂಪೂರ್ಣಫಲದಂ ಭವೇತ್ ॥ ೩೬ ॥
ಸರ್ವಪಾಪವಿನಾಶಾಯ ದೇವತಾತೋಷಣಾಯ ಚ ।
ಚಾತುರ್ಮಾಸ್ಯೇ ಜಲಸ್ನಾನಂ ಸರ್ವಪಾಪಕ್ಷಯಾವಹಂ ॥ ೩೭ ॥
ನಿಶಾಯಾಂ ಚೈವ ನ ಸ್ನಾಯಾತ್ಸಂಧ್ಯಾಯಾಂ ಗ್ರಹಣಂ ವಿನಾ ।
ಉಷ್ಣೋದಕೇನ ನ ಸ್ನಾಯಾದ್ರಾತ್ರೌ ಶುದ್ಧಿರ್ನ ಜಾಯತೇ ॥ ೩೮ ॥
ಭಾನುಸಂದರ್ಶನಾಚ್ಛುದ್ಧಿರ್ವಿಹಿತಾ ಸರ್ವಕರ್ಮಸು ।
ಚಾತುರ್ಮಾಸ್ಯೇ ವಿಶೇಷೇಣ ಜಲಶುದ್ಧಿಸ್ತು ಭಾವಿನೀ ॥ ೩೯ ॥
ಅಶಕ್ತ್ಯಾಂ ತು ಶರೀರಸ್ಯ ಭಸ್ಮಸ್ನಾನೇನ ಶುದ್ಧ್ಯತಿ ।
ಮಂತ್ರಸ್ನಾನೇನ ವಿಪ್ರೇಂದ್ರ ವಿಷ್ಣುಪಾದೋದಕೇನ ವಾ ॥ ೪೦ ॥

---

೩೫. ಆಧ್ಯಾತ್ಮಜ್ಞಾನಿಗಳೂ, ಪುಣ್ಯವಂತರೂ, ವೇದವೇದಾಂತಗಳಲ್ಲಿ ನಿಷ್ಣಾತರಾದವರೂ ಸಕಲದಾನಗಳನ್ನು ಮಾಡುವಾಗಲೂ ಸ್ನಾನದಿಂದಲೇ ಪರಿಶುದ್ಧರಾಗುವರು.

೩೬. ಶ್ರೀಹರಿಯು ಸ್ನಾನಮಾಡಿದವನ ದೇಹದಲ್ಲಿ ನೆಲಸಿರುವನು. ಅಂತಹವರಲ್ಲಿ ನಿವೇದಿಸಿದ ಸಕಲ ಸತ್ಕಾರ್ಯಫಲಗಳೂ ದಾತೃವಿಗೆ ಸಂಪೂರ್ಣಫಲದಾಯಕಗಳಾಗುವುವು.

೩೭. ಸಮಸ್ತಪಾತಕಗಳೂ ನಾಶವಾಗುವುದಕ್ಕಾಗಿಯೂ, ದೇವತೆಗಳನ್ನು ಸಂತೋಷಪಡಿಸುವುದಕ್ಕಾಗಿಯೂ ಚಾತುರ್ಮಾಸ್ಯದಲ್ಲಿ ಮಲವಿಮೋಚಕವಾದ ಜಲಸ್ನಾನವನ್ನು ಮಾಡಬೇಕು.

೩೮. ಗ್ರಹಣಕಾಲವನ್ನುಳಿದು ರಾತ್ರಿಯಲ್ಲಾಗಲಿ ಸಂಧ್ಯಾಕಾಲದಲ್ಲಾಗಲಿ ಸ್ನಾನವನ್ನು ಮಾಡಬಾರದು. ರಾತ್ರಿಯಲ್ಲಿಯೂ, ಉಷ್ಣೋದಕದಲ್ಲಿಯೂ ಮಾಡಿದ ಸ್ನಾನದಿಂದ ದೇಹ ಶುದ್ಧಿಯಾಗುವುದಿಲ್ಲ.

೩೯. ಸಕಲಕರ್ಮಗಳಲ್ಲಿಯೂ ಸೂರ್ಯಾವಲೋಕನದಿಂದ ಶುದ್ಧಿಯೆಂದು ಹೇಳಲ್ಪಟ್ಟಿರುವುದು. ಚಾತುರ್ಮಾಸ್ಯದಲ್ಲಾದರೊ, ವಿಶೇಷವಾಗಿ ತೀರ್ಥ ಸ್ನಾನದಿಂದಲೇ ಪರಿಶುದ್ಧಿಯುಂಟಾಗುವುದು.

೪೦. ಹೀಗೆ ಮಾಡಲು ಅಶಕ್ತನಾದವನು ಭಸ್ಮಸ್ನಾನದಿಂದ ಶುದ್ಧನಾಗುವನು. ಎಲೈ ವಿಪ್ರೇಂದ್ರನೆ! ಅಥವಾ ಮಂತ್ರಸ್ನಾನದಿಂದಾಗಲಿ, ವಿಷ್ಣು ತೀರ್ಥದ ಪ್ರೋಕ್ಷಣೆಯಿಂದಾಗಲಿ ಮಾನವನು ಶುದ್ಧನಾಗುವನು.

ನಾರಾಯಣಾಗ್ರತಃ ಸ್ನಾನಂ ಕ್ಷೇತ್ರೇ ತೀರ್ಥೇ ನದೀಷು ಚ ।
ವಿಶೇಷತೋಽಪಿ ಶಿಪ್ರಾಯಾಂ ತೀರ್ಥೇ ಕರ್ಕಾಽಭಿಧೇ ವರೇ ॥ ೪೧ ॥
ಯಶ್ಚ ಸ್ನಾತಿ ನರೋ ನಿತ್ಯಂ ಸ ಯಾತಿ ವೈಷ್ಣವಂ ಪದಂ ।
ತಸ್ಮಾತ್ತ್ವಂ ಭಾರ್ಗವಶ್ರೇಷ್ಠ ತತ್ರ ಗಚ್ಛಸ್ವ ಮಾ ಚಿರಂ ॥ ೪೨ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯುತನಾನಿ ಚ ।
ತಾನಿ ಸರ್ವಾಣಿ ತಿಷ್ಠಂತಿ ಕರ್ಕರಾಜಜಲೇ ಸದಾ ॥ ೪೩ ॥
ಕರ್ಕಸ್ಥೇ ಚ ದಿವಾನಾಥೇ ಸ್ನಾನಂ ಕುರ್ವಂತಿ ಯೇ ನರಾಃ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೪೪ ॥
ಚಾತುರ್ಮಾಸ್ಯಂ ಸಮಾಸಾದ್ಯ ತತ್ರೈವ ನಿವಸಾಮ್ಯಹಂ ।
ನಾಽಸ್ತಿ ರೇವಾಸಮಾ ಪುಣ್ಯಾ ನದೀ ಬ್ರಹ್ಮಾಂಡಭೂತಲೇ ॥ ೪೫ ॥
ಮಹೇಶಾನ್ನಾಽಪರೋ ದೇವೋ ಮುಕ್ತಿದೋ ನ ಜನಾರ್ದನಾತ್ ।
ಉಜ್ಜಯಿನೀಸಮಾ ನಾಽಸ್ತಿ ಪುರೀ ಕಾಮವರಪ್ರದಾ ॥ ೪೬ ॥

---

೪೧. ನಾರಾಯಣನಸನ್ನಿಧಾನದಲ್ಲಿಯೂ, ಕ್ಷೇತ್ರಗಳಲ್ಲಿಯೂ, ತೀರ್ಥಗಳಲ್ಲಿಯೂ, ನದಿಗಳಲ್ಲಿಯೂ, ವಿಶೇಷವಾಗಿ ಶಿಪ್ರಾನದಿಯಲ್ಲಿಯೂ, ಅದರಲ್ಲಿಯೂ ಕರ್ಕರಾಜವೆಂಬ ಉತ್ತಮತೀರ್ಥದಲ್ಲಿಯೂ ಸ್ನಾನಮಾಡಬೇಕು.

೪೨. ಯಾವನು ಈ ರೀತಿ ನಿತ್ಯವೂ ಸ್ನಾನಮಾಡುವನೊ, ಅವನು ವೈಕುಂಠಪದವಿಯನ್ನು ಪಡೆಯುವನು. ಮಹರ್ಷಿಯೆ! ಆದುದರಿಂದ ನೀನು ತಡಮಾಡದೆ ಅಲ್ಲಿಗೆ ಹೋಗು.

೪೩. ಸಕಲಭೂಮಂಡಲದಲ್ಲಿಯೂ ಎಷ್ಟು ತೀರ್ಥಗಳೂ, ಪುಣ್ಯಕ್ಷೇತ್ರಗಳೂ ಇರುವುವೊ, ಅವುಗಳೆಲ್ಲವೂ ನಿತ್ಯವೂ ಕರ್ಕರಾಜತೀರ್ಥದ ನೀರಿನಲ್ಲಿ ನೆಲಸಿರುವುವು.

೪೪. ಸೂರ್ಯನು ಕರ್ಕಾಟಕರಾಶಿಯಲ್ಲಿರುವಾಗ ಯಾವ ಮಾನವರು ಈ ತೀರ್ಥೋತ್ತಮದಲ್ಲಿ ಸ್ನಾನಮಾಡುವರೊ, ಅವರು ನೂರುಕೋಟಿ ಕಲ್ಪಗಳು ಕಳೆದರೂ ಪುನಃ ಭೂಮಿಯಲ್ಲಿ ಹುಟ್ಟುವುದಿಲ್ಲ.

೪೫. ಚಾತುರ್ಮಾಸ್ಯವು ಬಂದಾಗ ನಾನೂ ಅಲ್ಲಿಯೇ ವಾಸಮಾಡುತ್ತಿರುವೆನು. ಬ್ರಹ್ಮಾಂಡದ ಸಕಲ ಲೋಕಗಳಲ್ಲಿಯೂ ರೇವಾನದಿಗೆ ಸಮಾನವಾದ ಪುಣ್ಯನದಿಯಿಲ್ಲ.

೪೬. ಮಹೇಶ್ವರನಿಗಿಂತ ಉತ್ತಮ ದೈವವಿಲ್ಲ. ಶ್ರೀಮನ್ನಾರಾಯಣನಿಗಿಂತ ಮೋಕ್ಷಪ್ರದನಿಲ್ಲ. ಉಜ್ಜಯಿನಿಗೆ ಸಮವೆನಿಸಿದ ಪಟ್ಟಣವಿಲ್ಲ. ಇದು ಸಕಲಾಭೀಷ್ಟಪ್ರದವೆನಿಸಿರುವುದು.

ಕರ್ಕರಾಜಸಮಂ ತೀರ್ಥಂ ನಾಽಸ್ತಿ ವತ್ಸ ಮಹೀತಲೇ ।
ಯಸ್ಯ ದರ್ಶನಮಾತ್ರೇಣ ಮುಕ್ತಿಭಾಗೀ ಭವೇನ್ನರಃ ॥ ೪೭ ॥
ಏವಂ ವ್ಯಾಸ ಸಮಾಖ್ಯಾತಂ ಬ್ರಹ್ಮಣಾ ಭಾರ್ಗವಾಯ ಚ ।
ತಸ್ಮಾತ್ಸರ್ವಪ್ರಯತ್ನೇನ ಮಹಾಕಾಲವನಂ ವ್ರಜ ॥ ೪೮ ॥
ಅಸ್ಮಾಕಂ ಚಾಽಪಿ ತತ್ರೈವ ಸ್ಥಾನಂ ಪರಮಶೋಭನಂ ।
ಚಾತುರ್ಮಾಸ್ಯೇ ಹರೌ ಸುಪ್ತೇ ಯಾವದ್ಯಾಯಾತ್ಪ್ರಬೋಧಿನೀ ॥ ೪೯ ॥
ತಾವತ್ಕಾಲಂ ಹಿ ತತ್ರೈವ ಮುಕ್ತಿರೇವ ನ ಸಂಶಯಃ ।
ಚಾತುರ್ಮಾಸ್ಯೇ ಹರೌ ಸುಪ್ತೇ ಜಹಾತಿ ಚೇತ್ಕಲೇವರಂ ॥ ೫೦ ॥
ಯಮಲೋಕೇ ಚಿರಂ ವಾಸೋ ಜಾಯತೇ ನಾಽತ್ರ ಸಂಶಯಃ ।
ತಸ್ಮಾತ್ತುಲಸಿಕಾಭಾಗೇ ಶಾಲಿಗ್ರಾಮೇ ಸುರಾಲಯೇ ॥ ೫೧ ॥
ಆತ್ಮಾನಂ ಹಿ ಪಣೀಕೃತ್ಯ ತತ್ರ ಸಮ್ಯಙ್ನಿಯೋಜಯೇತ್ ।
ಯಾವತ್ಪ್ರಬೋಧಿನೀ ಚೈತಿ ದ್ವಾದಶೀ ದ್ವಿಜಸತ್ತಮ ॥ ೫೨ ॥
ಪಶ್ಚಾದ್ಘೃತಸುವರ್ಣೇನ ಮೋಚಯಿತ್ವಾ ಸ್ವಕಂ ನಯೇತ್ ।
ಚಾತುರ್ಮಾಸ್ಯೋದ್ಭವಂ ದೋಷಂ ಬಾಧತೇ ನ ಚ ಮಾನವಂ ॥ ೫೩ ॥

---

೪೭. ಎಲೈ ವತ್ಸನೆ! ಕರ್ಕರಾಜಕ್ಕೆ ಸಮಾನವಾದ ತೀರ್ಥವು ಭೂಮಂಡಲ ದಲ್ಲಿಯ ಇರುವುದಿಲ್ಲ. ಅದನ್ನು ನೋಡುವ ಮಾತ್ರದಿಂದಲೇ ಮನುಷ್ಯನು ಮೋಕ್ಷಕ್ಕೆ ಅಧಿಕಾರಿಯಾಗುವನು.''

೪೮. ಅಯ್ಯಾ ವ್ಯಾಸನೆ! ಇಂತು ಬ್ರಹ್ಮದೇವನು ಭೃಗುಕುಲೋತ್ಪನ್ನನಾದ ಮಾರ್ಕಂಡೇಯನಿಗೆ ತೀರ್ಥಮಹಿಮೆಯನ್ನು ಹೇಳಿರುವನು. ಆದುದರಿಂದ ನೀನು ಸರ್ವಪ್ರಯತ್ನದಿಂದ ಮಹಾಕಾಲವನಕ್ಕೆ ಹೋಗು.

೪೯–೫೨. ಅಲ್ಲಿಯೇ ನಮಗೂ ಪರಮಪವಿತ್ರವಾದ ಸ್ಥಾನವೊಂದಿರುವುದು. ಚಾತುರ್ಮಾಸ್ಯದಲ್ಲಿ ಶ್ರೀಹರಿಯು ಶಯನದಲ್ಲಿರಲು ಆತನು ಪ್ರಬೋಧಿತನಾಗುವ ವರೆಗೂ ಮಹಾಕಾಲವನದಲ್ಲಿ ಸರ್ವಕಾಲದಲ್ಲಿಯೂ ಮೋಕ್ಷವು ಲಭಿಸುವುದರಲ್ಲಿ ಸಂದೇಹವಿಲ್ಲ. ಈ ಚಾತುರ್ಮಾಸ್ಯಕಾಲದಲ್ಲಿ ಮಾನವನು ದೇಹವನ್ನು ಬಿಟ್ಟರೆ ಯಮಲೋಕದಲ್ಲಿ ಅವನಿಗೆ ಕೊನೆಯಿಲ್ಲದ ವಾಸವುಂಟಾಗುವುದರಲ್ಲಿ ಸಂದೇಹ ವಿಲ್ಲ. ಆದುದರಿಂದ ತುಳಸೀದಳದಲ್ಲಾಗಲಿ, ಸಾಲಿಗ್ರಾಮದಲ್ಲಾಗಲಿ, ದೇವತಾ ವಿಗ್ರಹದಲ್ಲಾಗಲಿ ಪ್ರತಿಯೊಬ್ಬ ಮಾನವನೂ ತನ್ನ ಆತ್ಮವನ್ನು ಪಣವನ್ನಾಗಿಟ್ಟು ಆ ಕ್ಷೇತ್ರಕ್ಕೆ ಕಳುಹಿಸಬೇಕು. ದ್ವಿಜೋತ್ತಮನೆ! ಹೀಗೆ ಉತ್ಥಾನದ್ವಾದಶಿಯು ಬರುವವರೆಗೂ ನಡೆಯಬೇಕು.

೫೩. ಬಳಿಕ ತುಪ್ಪ ಅಥವ ಚಿನ್ನದಿಂದ ತನ್ನ ಆತ್ಮವನ್ನು ಬಿಡಿಸಿಕೊಂಡು ಹಿಂದಕ್ಕೆ ಕರೆತರಬೇಕು. ಇಂತಹ ಮಾನವನಿಗೆ ಚಾತುರ್ಮಾಸ್ಯ ಮರಣ ದಿಂದುಂಟಾದ ದೋಷವು ಬಾಧಿಸುವುದಿಲ್ಲ.

ಯಸ್ಯ ಶಿಪ್ರೋದಕೇ ಸ್ನಾನಂ ಕರ್ಕರಾಜೇಽನುಜಾಯತೇ ।
ಏವಂ ವ್ಯಾಸ ವರಂ ತೀರ್ಥಂ ಸರ್ವತೀರ್ಥಫಲಪ್ರದಂ ॥ ೫೪ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಸರಿತಃ ಸಾಗರಾಶ್ಚ ಯೇ ।
ತೇ ಸರ್ವೇ ಚ ಸಮಾಯಾಂತಿ ಚಾತುರ್ಮಾಸ್ಯೇ ದ್ವಿಜೋತ್ತಮ ॥ ೫೫ ॥
ತಸ್ಮಾಚ್ಚ ತದ್ವರಂ ತೀರ್ಥಂ ಕರ್ಕರಾಜ ಇತಿ ಸ್ಮೃತಂ ॥ ೫೬ ॥
ಯ ಏತಾಂ ವೈ ಕಥಾಂ ಪುಣ್ಯಾಂ ಶೃಣ್ವಂತಿ ಶ್ರಾವಯಂತಿ ಚ ।
ನ ತೇಷಾಂ ಜಾಯತೇ ದೋಷಶ್ಚಾತುರ್ಮಾಸ್ಯೋದ್ಭವಃ ಸದಾ ॥ ೫೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕರ್ಕರಾಜತೀರ್ಥಮಹಿಮಾನುವರ್ಣನಂ" ನಾಮೈಕೋನಸಪ್ತತಿತಮೋಽಧ್ಯಾಯಃ

---

೫೪. ಒಮ್ಮೆಯಾದರೂ ಶಿಪ್ರೋದಕದಲ್ಲಾಗಲಿ, ವಿಶೇಷವಾಗಿ ಕರ್ಕರಾಜ ತೀರ್ಥದಲ್ಲಾಗಲಿ ಯಾವನು ಸ್ನಾನಮಾಡಿರುವನೊ, ಅವನಿಗೂ ಈ ದೋಷವಿಲ್ಲ.

೫೫–೫೬. ವ್ಯಾಸನೆ! ಇಂತು ಈ ಉತ್ತಮತೀರ್ಥವು ಸಕಲ ತೀರ್ಥ ಸ್ನಾನಗಳ ಫಲವನ್ನು ಕೊಡುವುದು. ಭೂಮಿಯಲ್ಲಿ ಎಷ್ಟು ತೀರ್ಥಗಳೂ, ನದಿಗಳೂ, ಸಮುದ್ರಗಳೂ ಇರುವುವೊ, ಅವುಗಳೆಲ್ಲವೂ ಚಾತುರ್ಮಾಸ್ಯದಲ್ಲಿ ಈ ತೀರ್ಥಕ್ಕೆ ಬರುವುವು. ಆದುದರಿಂದ ಕರ್ಕರಾಜನಾಮಕವಾದ ಈ ತೀರ್ಥವು ಸರ್ವೋತ್ತಮವೆಂದು ಪ್ರಖ್ಯಾತವಾಗಿರುವುದು.

೫೭. ಈ ಪುಣ್ಯಕಥೆಯನ್ನು ಯಾರು ಕೇಳುವರೊ, ಯಾರು ಇತರರಿಗೆ ಕೇಳಿಸುವರೊ, ಅವರಿಗೆ ಚಾತುರ್ಮಾಸ್ಯ ನಿಯಮಗಳನ್ನುಲ್ಲಂಘಿಸಿದ ದೋಷಗಳಾವುವೂ ಅಂಟುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕರ್ಕರಾಜತೀರ್ಥಮಹಿಮಾನುವರ್ಣನ"ವೆಂಬ ಅರುವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತಿತಮೋಽಧ್ಯಾಯಃ

### ದೇವಯಾತ್ರಾಕಥಾನುಕಥನಂ

ಸನತ್ಕುಮಾರ ಉವಾಚ :—

**ಮೇರೋಶ್ಚ ದಕ್ಷಿಣೇ ಭಾಗೇ ದುಗ್ಧಕುಂಡೋತ್ತರೇ ತಥಾ ।**
**ಋಷಭಃ ಪರ್ವತಶ್ರೇಷ್ಠೋ ದೇವಗಂಧರ್ವಸೇವಿತಃ ॥ ೧ ॥**
**ಯತ್ರ ದೇವಾಂಗನಾ ರಮ್ಯಾಃ ಕ್ರೀಡಂತಿ ಸತತಂ ದ್ವಿಜ ।**
**ತತ್ರ ರಮ್ಯಸರೋ ನಾಮ ತಿಷ್ಠತೇ ಸರ್ವಕಾಮದಂ ॥ ೨ ॥**
**ತತ್ರ ತೀರ್ಥೇ ನರಃ ಸ್ನಾತ್ವಾ ಸುಭಗೋ ಜಾಯತೇ ಧ್ರುವಂ ।**
**ದೇವೈಶ್ಚ ಕ್ರೀಡತೇ ನಿತ್ಯಂ ಭುವಿ ವಿಖ್ಯಾತಕಃ ಪರಂ ॥ ೩ ॥**
**ಭಾದ್ರಪದಸಿತಾಷ್ಟಮೀ ಮೈತ್ರರ್ಕ್ಷೇಣ ಸಮನ್ವಿತಾ ।**
**ತದ್ದಿನೇಽತ್ರ ಸಮಾಗಮ್ಯ ಸ್ನಾನದಾನಾದಿಕಾಃ ಕ್ರಿಯಾಃ ॥ ೪ ॥**
**ಕರೋತಿ ಸತತಂ ವ್ಯಾಸ ತೇಷಾಂ ಲೋಕಾಃ ಸನಾತನಾಃ ।**
**ಮೇರೋಶ್ಚೇಶಾನಕೇ ತೀರ್ಥಂ ದಿವ್ಯಂ ಪರಮಶೋಭನಂ ॥ ೫ ॥**

---

### ಕನ್ನಡದ ಅನುವಾದ

#### ದೇವಯಾತ್ರಾಕಥಾನುಕಥನ

೧. ಸನತ್ಕುಮಾರನು ಹೇಳುತ್ತಾನೆ:—ಮೇರುವಿಗೆ ದಕ್ಷಿಣಭಾಗದಲ್ಲಿಯೂ, ದುಗ್ಧಕುಂಡದ ಉತ್ತರದಲ್ಲಿಯೂ ಋಷಭವೆಂಬ ಉತ್ತಮಪರ್ವತವೊಂದಿರುವುದು. ಅದನ್ನು ದೇವತೆಗಳೂ, ಗಂಧರ್ವರೂ ಆಶ್ರಯಿಸುತ್ತಿರುವರು.

೨. ದ್ವಿಜಶ್ರೇಷ್ಠನೆ! ಅಲ್ಲಿ ದೇವತಾಸ್ತ್ರೀಯರು ಮನೋಹರವಾಗಿ ಕ್ರೀಡಿಸುತ್ತಿರುವರು. ಆ ಪರ್ವತದಲ್ಲಿ ಸರ್ವಕಾಮಫಲಪ್ರದವಾದ ರಮ್ಯಸರವೆಂಬ ತೀರ್ಥವು ರಾಜಿಸುತ್ತಿರುವುದು.

೩. ಆ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಖಂಡಿತವಾಗಿಯೂ ಸೌಭಾಗ್ಯವಂತನಾಗುವನು. ದೇವತೆಗಳೂ ಸಹ ಭೂಲೋಕದಲ್ಲಿ ವಿಖ್ಯಾತವಾಗಿರುವ ಈ ತೀರ್ಥದಲ್ಲಿ ಬಹಳವಾಗಿ ನಿತ್ಯವೂ ಕ್ರೀಡಿಸುತ್ತಿರುವರು.

೪. ಭಾದ್ರಪದಮಾಸದಲ್ಲಿ ಶುಕ್ಲಾಷ್ಟಮಿಯು ಅನುರಾಧಾನಕ್ಷತ್ರದಿಂದೊಡಗೂಡಿದ ದಿನವು ಪ್ರಾಪ್ತವಾಗಲು, ಅಂದು ಆ ತೀರ್ಥದಲ್ಲಿ ಸ್ನಾನ, ದಾನಗಳೇ ಮುಂತಾದ ಸತ್ಕ್ರಿಯೆಗಳನ್ನು ಮಾಡಬೇಕು.

೫–೬. ಯಾವನು ಇಂತು ಅನುಷ್ಠಾನಮಾಡುವನೊ, ಅವನಿಗೆ ಶಾಶ್ವತ ಲೋಕಗಳ ವಾಸವು ಲಭಿಸುವುದು. ಮೇರುವಿನ ಈಶಾನ್ಯಮೂಲೆಯಲ್ಲಿ ದಿವ್ಯವೂ,

ಬಿಂದುಸರೇತಿ ವಿಖ್ಯಾತಂ ಸರ್ವಕಾಮಪರಪ್ರದಂ ।
ಗಂಗಾ ಸರಸ್ವತೀ ಪುಣ್ಯಾ ಸರಯೂಶ್ಚ ಪಯಸ್ವಿನೀ ।
ಏತಾಃ ಸರಿದ್ವರಾ ಯಾತಾಸ್ತತ್ರ ಸತ್ಯವತೀಸುತ ॥ ೬ ॥
ಯೇ ಸಿದ್ಧಾ ಯೇ ಚ ಸಾಧ್ಯಾಶ್ಚ ತಪಸ್ವಿನೋ ಧೃತವ್ರತಾಃ ।
ಉಪಾಸಾಂಚಕ್ರಿರೇ ತತ್ರ ತಸ್ಯ ತೀರ್ಥಸ್ಯ ಸರ್ವದಾ ॥ ೭ ॥
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಸರ್ವಾರ್ಥಾನ್ಪ್ರಾಪ್ನುತೇ ಧ್ರುವಂ ।
ಭಾದ್ರಪದೇ ಚ ಶುಕ್ಲಾ ವೈ ಚತುರ್ಥೀ ಯಾ ಪ್ರಕೀರ್ತಿತಾ ॥ ೮ ॥
ಸಿದ್ಧಾ ಸಾ ಸರ್ವದಾ ಪ್ರೋಕ್ತಾ ಯತ್ರ ಜಾತೋ ಗಣಾಧಿಪಃ ।
ಮನಃ ಕಾಮೇಶ್ವರಃ ಖ್ಯಾತಃ ಸರ್ವಕಾಮವರಪ್ರದಃ ॥ ೯ ॥
ತಸ್ಯ ತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ದೇವಂ ಗಣೇಶ್ವರಂ ।
ಮನೋರಥಶತಂ ಪ್ರಾಪ್ಯ ಕಾಮಚಾರೀ ಭವೇನ್ನರಃ ॥ ೧೦ ॥

ವ್ಯಾಸ ಉವಾಚ :—

ಅಸ್ಮಿನ್‌ಕ್ಷೇತ್ರೇ ಶುಭೇ ಬ್ರಹ್ಮನ್ಮಹಾಕಾಲವನೋತ್ತಮೇ ॥ ೧೧ ॥

---

ಪರಮಪುಣ್ಯಪ್ರದವೂ, ಸಕಲಾಭೀಷ್ಟಗಳನ್ನು ಕೊಡುವುದೂ ಆದ ಬಿಂದುಸರವೆಂಬ ಪ್ರಖ್ಯಾತವಾದ ಒಂದು ತೀರ್ಥವಿರುವುದು. ಎಲೈ ಸತ್ಯವತೀಕುಮಾರನೆ! ಗಂಗೆ, ಪುಣ್ಯತಮೆಯಾದ ಸರಸ್ವತಿಯು, ಸರಯೂ—ಈ ನದಿಗಳೆಲ್ಲವೂ ಅಲ್ಲಿಗೆ ಬಂದು ಸೇರುವುವು.

೭. ಸಿದ್ಧರೂ, ಸಾಧ್ಯರೂ, ವ್ರತೋಪವಾಸನಿರತರೂ, ತಪಸ್ಸಂಪನ್ನರೂ ಆ ತೀರ್ಥವನ್ನು ನಿತ್ಯವೂ ಉಪಾಸನೆಮಾಡುತ್ತಿರುವರು.

೮. ಆ ತೀರ್ಥದಲ್ಲಿ ಸ್ನಾನವನ್ನು ಮಾಡಲು ನರನು ಸಕಲಾಭಿಲಾಷೆಗಳನ್ನೂ ಪಡೆಯುವುದು ನಿಶ್ಚಯವು.

೯. ಭಾದ್ರಪದ ಶುಕ್ಲ ಚತುರ್ಥಿಯನ್ನು ಸರ್ವದಾ ತಿಥಿಯೆಂದು ಕರೆಯುವರು. ಅಂದೇ ಗಣಪತಿಯು ಜನಿಸಿದುದು. ಆತನೇ ಮನೋಭಿಲಾಷೆಗಳನ್ನು ಕೊಡುವವನೂ, ಮನಸ್ಸು ಮತ್ತು ಸಂಕಲ್ಪಗಳಿಗೆ ಒಡೆಯನೂ ಆದವನೆಂದು ಪ್ರಖ್ಯಾತಿಯನ್ನು ಪಡೆದಿರುವನು.

೧೦. ಆ ದಿನ ಬಿಂದುಸರೋವರದಲ್ಲಿ ಸ್ನಾನಮಾಡಿ ಸಮೀಪದಲ್ಲಿರುವ ಮಹಾಗಣಪತಿಯ ದರ್ಶನವನ್ನು ತೆಗೆದುಕೊಳ್ಳಲು ಮನುಜನು ನೂರಾರು ಮನೋರಥಗಳನ್ನು ಪಡೆಯುವನಲ್ಲದೆ ಸಮಸ್ತಲೋಕಗಳಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುವವನಾಗುವನು.

೧೧–೧೩. ವ್ಯಾಸನು ಹೇಳುತ್ತಾನೆ:—ಬ್ರಾಹ್ಮಣಶ್ರೇಷ್ಠನೆ! ಈ ಪವಿತ್ರ ಕ್ಷೇತ್ರದಲ್ಲಿರುವ ತೀರ್ಥಗಳ ಸಂಖ್ಯೆಯೆಷ್ಟು? ದೇವಾಲಯಗಳೆಷ್ಟಿರುವುವು?

ತೀರ್ಥಾನಿ ಕತಿ ಸಂಖ್ಯಾನಿ ದೇವತಾಯುತನಾನಿ ಚ ।
ಯಾನಿ ಕಾನಿ ಚ ಖ್ಯಾತಾನಿ ತಾನಿ ನೋ ವದ ವಿಸ್ತರಾತ್ ॥ ೧೨ ॥

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಋಷಿಶ್ರೇಷ್ಠ ಕಥಾಂ ಪಾಪಹರಾಂ ಪರಾಂ ।
ಅವಂತ್ಯಾಂ ಯಾನಿ ತೀರ್ಥಾನಿ ಲಿಂಗಾನಿ ಚ ಮಹಾಮುನೇ ॥ ೧೩ ॥
ತಾನಿ ವರ್ಣಯಿತುಂ ಶಕ್ತಃ ಸ್ವಯಂಭೂಶ್ಚತುರಾನನಃ ।
ವರ್ಷಾಣಾಮಯುತೈಃ ಷಡ್ಭಿರ್ನ ಚ ವಕ್ತುಂ ಕಥಂಚನ ॥ ೧೪ ॥
ಯಾವಂತೋ ಮೇಘಮಾಲಾನಾಂ ಬಿಂದವೋಹಿ ಸ್ರವಂತಿ ಚ ।
ಧರಿತ್ರ್ಯಾಂ ತೃಣಸಂಖ್ಯಾ ವೈ ಪೃಥಿವ್ಯಾಂ ಸಿಕತಾಸ್ತಥಾ ॥ ೧೫ ॥
ನಭಸೋ ಜ್ಯೋತಿಷಾಂ ಸಂಖ್ಯಾಂ ವಕ್ತುಂ ಕೋಽಪಿ ನ ಶಕ್ನುತೇ ।
ನಹಿ ತೀರ್ಥಲಿಂಗಸಂಖ್ಯಾಃ ಸಂತ್ಯವಂತ್ಯಾಂ ತಪೋಧನ ॥ ೧೬ ॥
ಅಂತರಿಕ್ಷೇ ಚ ಮೇದಿನ್ಯಾಂ ತೀರ್ಥಭೂತಾ ಪುರೀ ತ್ವಿಯಂ ।
ವಾಪೀ ಕೂಪ ತಡಾಗಾದಿ ಪ್ರಸ್ರವೋದ್ಗರಣಾನಿ ಚ ॥ ೧೭ ॥
ನದ್ಯಃ ಸರಾಂಸಿ ಖ್ಯಾತಾಶ್ಚ ತೀರ್ಥಭೂತಂ ಹಿ ಸರ್ವಶಃ ।
ತಥಾಽಪಿ ದೇವಯಾತ್ರಾಯಾಂ ಪ್ರಸಂಗೇನ ನಿಬೋಧ ಮೇ ॥ ೧೮ ॥

---

ಅವುಗಳಲ್ಲಿ ಬಹಳ ಪ್ರಖ್ಯಾತಗಳಾಗಿರುವುವು ಯಾವುವು? ಇವನ್ನೆಲ್ಲ ನನಗೆ ವಿಸ್ತಾರವಾಗಿ ತಿಳಿಸು.

೧೩–೧೪. ಸನತ್ಕುಮಾರನು ಹೇಳುತ್ತಾನೆ :—ಎಲೈ ವ್ಯಾಸಮುನಿವರ್ಯನೆ! ಪಾಪಪರಿಹಾರಕವಾದ ಈ ಪುಣ್ಯಚರಿತ್ರೆಯನ್ನು ಕೇಳು. ಮಹಾಮುನಿಯೆ! ಅವಂತೀಕ್ಷೇತ್ರದಲ್ಲಿ ಎಷ್ಟು ತೀರ್ಥಗಳೂ, ಲಿಂಗಗಳೂ ಇರುವುವೆಂಬುದನ್ನು ವರ್ಣಿಸಿ ಹೇಳಲು ಚತುರ್ಮುಖಬ್ರಹ್ಮನಿಗೂ ಅರುವತ್ತು ಸಾವಿರ ವರ್ಷಗಳಾದರೂ ಸಾಧ್ಯವೆಂದು ಹೇಳಲಾಗುವುದಿಲ್ಲ.

೧೫–೧೬. ಮೇಘಮಾಲೆಗಳಿಂದ ಎಷ್ಟು ನೀರಿನ ಹನಿಗಳು ಬೀಳುವುವೆಂಬುದನ್ನೂ, ಭೂಮಿಯಲ್ಲಿ ಬೆಳೆಯುವ ಗರಿಕೆಹುಲ್ಲಿನ ಸಂಖ್ಯೆಯನ್ನೂ, ಮರಳು ಕಣಗಳನ್ನೂ, ಆಕಾಶದಲ್ಲಿ ಬೆಳಗುತ್ತಿರುವ ನಕ್ಷತ್ರಗಳನ್ನೂ ಗುಣಿಸಿ ಹೇಳಲು ಯಾರಿಗೂ ಸಾಧ್ಯವಿಲ್ಲವಷ್ಟೆ. ಎಲೈ ತಪೋಧನನೆ! ಹಾಗೆಯೇ ಈ ಅವಂತೀಕ್ಷೇತ್ರದಲ್ಲಿರುವ ತೀರ್ಥಗಳ ಮತ್ತು ಲಿಂಗಗಳ ಸಂಖ್ಯೆಯನ್ನೂ ಹೇಳಲಾಗುವುದಿಲ್ಲ.

೧೭–೧೮. ಈ ಪುರವು ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಅಂತರವಿಲ್ಲದೆ ತೀರ್ಥಭೂತವಾಗಿರುವುದು. ಇಲ್ಲಿರುವ ಬಾವಿಗಳು, ಕೊಳಗಳು, ಕೆರೆಗಳು, ನದಿಗಳು, ಚಿಲುಮೆಗಳು, ಸರೋವರಗಳು, ಕಾಲುವೆಗಳು ಮುಂತಾದುವುಗಳೆಲ್ಲವೂ ಆದ್ಯಂತವೂ ತೀರ್ಥಗಳೇ ಆಗಿರುವುವು. ಆದರೂ

ಯಾನಿ ಕಾನಿ ಚ ಮುಖ್ಯಾನಿ ತಾನಿ ತುಭ್ಯಂ ವದಾಮ್ಯಹಂ ।
ಯಜ್ಜ್ಞಾತ್ವಾ ಮೋಕ್ಷ್ಯಸೇ ನಿತ್ಯಂ ಪೂರ್ವಾರ್ಜಿತೈರ್ಶುಭಾಶುಭೈಃ ॥
ಪ್ರಾತರುತ್ಥಾಯ ಯೋ ನಿತ್ಯಂ ಶುಚಿಃ ಪ್ರಯತಮಾನಸಃ ।
ವಿಷ್ಣುಸ್ಮರಣಸಂಪನ್ನಃ ಸರ್ವಕಾಮಕ್ರಿಯಾದಿಕಂ ॥ ೨೦ ॥
ಕೃತ್ವಾ ವೈ ಸರ್ವಗಂಧಾದಿ ತಿಲಾಕ್ಷತಸಮನ್ವಿತಃ ।
ಸ್ನಾತ್ವಾ ರುದ್ರಸರೇ ತಾತ ತಥೈವ ಚ ವ್ರತಂ ಚರೇತ್ ॥ ೨೧ ॥
ಊರ್ಜಮಾಧವಯೋಶ್ಚೈವ ವೈಶಾಖಾಷಾಢಯೋಸ್ತಥಾ ।
ಶಿವರಾತ್ರ್ಯಾಂ ವಿಶೇಷೇಣ ದೇವಯಾತ್ರಾ ಪ್ರಶಸ್ಯತೇ ॥ ೨೨ ॥
ಯಸ್ಯ ದೇವಸ್ಯ ಯತ್ತೀರ್ಥಂ ಯಸ್ಯ ದೇವಸ್ಯ ಸನ್ನಿಧೌ ।
ತತ್ರಾಭಿಷೇಕಃ ಕಾರ್ಯೋ ವೈ ದೇವತಾಯಾಶ್ಚ ಪೂಜನಂ ॥ ೨೩ ॥
ವಿಧಿವಚ್ಚಾಚರೇದ್ಯಸ್ತು ಸ ಸರ್ವಂ ಫಲಮಶ್ನುತೇ ।
ತಸ್ಮಾತ್ಸರ್ವಪ್ರಯತ್ನೇನ ದೇವಯಾತ್ರಾಂ ಸಮಾಚರೇತ್ ॥ ೨೪ ॥

---

ದೇವಯಾತ್ರೆಯ ಪ್ರಸಂಗವಿಷಯಕ್ಕೆ ಸಂಬಂಧಿಸಿದ ತೀರ್ಥಗಳನ್ನು ಮಾತ್ರ ಹೇಳುವೆನು, ಕೇಳು.

೧೯. ಇವುಗಳಲ್ಲಿ ಬಹಳ ಮುಖ್ಯಗಳಾಗಿರುವುವನ್ನು ಮಾತ್ರ ನಿನಗೆ ತಿಳಿಸುತ್ತೇನೆ. ಇದನ್ನು ತಿಳಿಯುವುದರಿಂದ ನೀನು ಪೂರ್ವದಲ್ಲಿ ಆರ್ಜಿಸಿದ ಪುಣ್ಯಾಪುಣ್ಯ ಕರ್ಮಫಲಗಳಿಂದ ಬಿಡುಗಡೆಯನ್ನು ಹೊಂದುವೆ.

೨೦–೨೧. ನಿತ್ಯವೂ ಪ್ರಾತಃಕಾಲದಲ್ಲಿ ಏಳುತ್ತಲೆ ಶೌಚವಾದಮೇಲೆ ಏಕಾಗ್ರಚಿತ್ತದಿಂದ ಮಹಾವಿಷ್ಣುವಿನ ಧ್ಯಾನವನ್ನೇ ಮಾಡುತ್ತ, ತನ್ನ ನಿತ್ಯಕರ್ಮಗಳನ್ನೂ ಕಾಮ್ಯಕರ್ಮಗಳನ್ನೂ ನೆರವೇರಿಸಿಕೊಂಡು, ವಿಧವಿಧಗಳಾದ ಗಂಧಗಳು, ತಿಲಾಕ್ಷತೆಗಳು ಮುಂತಾದುವುಗಳಿಂದ ಕೂಡಿದವನಾಗಿ ಹೋಗಿ ಮೊದಲು ರುದ್ರಸರೋವರದಲ್ಲಿ ಸ್ನಾನಮಾಡಿ ಬಳಿಕ ಈ ವ್ರತವನ್ನು ನಡೆಸಬೇಕು.

೨೨. ಈ ದೇವಯಾತ್ರೆಯನ್ನು ಕಾರ್ತಿಕ, ವೈಶಾಖಗಳಲ್ಲಾಗಲಿ, ವೈಶಾಖ, ಆಷಾಢಗಳಲ್ಲಾಗಲಿ, ಶಿವರಾತ್ರಿಯ ದಿನದಲ್ಲಾಗಲಿ ಮಾಡಲು ಅತ್ಯಂತ ಫಲದಾಯಕವಾಗಿರುವುದು.

೨೩. ಯಾವ ದೇವರ ಹೆಸರಿನ ಯಾವ ತೀರ್ಥವಿರುವುದೊ, ಯಾವ ತೀರ್ಥದಲ್ಲಿ ಯಾವ ದೈವವಿರುವುದೊ, ಆಯಾ ತೀರ್ಥದಲ್ಲಿ ಸ್ನಾನವನ್ನು ಮಾಡಿ ಬಳಿಕ ಆಯಾ ದೈವವನ್ನು ಪೂಜಿಸಬೇಕು.

೨೪. ಇಂತು ವಿಧಿಯನ್ನನುಸರಿಸಿ ಯಾವನು ಆಚರಿಸುವನೊ, ಅವನು ಸರ್ವಾಭೀಷ್ಟಗಳನ್ನೂ ಪಡೆಯುವನು. ಆದುದರಿಂದ ಸರ್ವಪ್ರಯತ್ನದಿಂದಲೂ ದೇವಯಾತ್ರೆಯನ್ನಾಚರಿಸಲೇ ಬೇಕು.

ವ್ಯಾಸ ಉವಾಚ :—

ಬ್ರಹ್ಮನ್ಕೇನ ಪ್ರಕಾರೇಣ ದೇವಯಾತ್ರಾಂ ಚರೇನ್ನರಃ ।
ತತ್ಸರ್ವಂ ಶ್ರೋತುಮಿಚ್ಛಾಮಿ ವಿಸ್ತರೇಣ ತಪೋಧನ ॥ ೨೫ ॥

ಸನತ್ಕುಮಾರ ಉವಾಚ :—

ಶೃಣು ವ್ಯಾಸ ಪರಂ ಗುಹ್ಯಂ ಪ್ರವಕ್ಷ್ಯಾಮಿ ಯಥಾಶ್ರುತಂ ।
ಉಮಾಮಹೇಶ್ವರಸಂವಾದಂ ದೇವಯಾತ್ರಾದಿ ಕರ್ಮಸು ॥ ೨೬ ॥

ಉಮೋವಾಚ :—

ಪ್ರಭಾವಃ ಕಥ್ಯತಾಂ ದೇವ ಕ್ಷೇತ್ರಸ್ಯಾಽಸ್ಯ ಮಹೇಶ್ವರ ।
ಯಾನಿ ತೀರ್ಥಾನಿ ವಿದ್ಯಂತೇ ಯಾನಿ ಲಿಂಗಾನಿ ಸಂತಿ ವೈ ।
ತಾನ್ಯಾದಿತೋ ಮೇ ಭೂಮಂಸ್ತ್ವಂ ವದಸ್ವ ವದತಾಂ ವರ ॥ ೨೭ ॥

ಈಶ್ವರ ಉವಾಚ :—

ಶೃಣು ದೇವಿ ಪ್ರಯತ್ನೇನ ಪ್ರಭಾವಂ ಪಾಪನಾಶನಂ ॥ ೨೮ ॥
ಕ್ಷೇತ್ರಮಾದ್ಯಂ ಮಹಾದೇವಿ ಮಮಾಽತೀವ ಪ್ರಿಯಂ ಸದಾ ।
ಯತ್ರ ಶಿಪ್ರಾ ಮಹಾಪುಣ್ಯಾ ದಿವ್ಯಾ ನವನದೀ ಪ್ರಿಯಾ ॥ ೨೯ ॥

---

೨೫. ವ್ಯಾಸನು ಹೇಳುತ್ತಾನೆ:—ತಪೋನಿಧಿಯಾದ ಬ್ರಹ್ಮರ್ಷಿಯೆ! ಈ ದೇವಯಾತ್ರೆಯನ್ನು ಯಾವ ಪ್ರಕಾರದಿಂದ ಮಾಡಬೇಕೆಂಬುದನ್ನು ಆಮೂಲಾಗ್ರವಾಗಿ ನಿನ್ನಿಂದ ಕೇಳಲಪೇಕ್ಷಿಸುತ್ತೇನೆ.

೨೬. ಸನತ್ಕುಮಾರನು ಹೇಳುತ್ತಾನೆ:—ಎಲೈ ವ್ಯಾಸನೆ! ಈ ದೇವಯಾತ್ರಾದಿ ಕರ್ಮಗಳ ವಿಷಯದಲ್ಲಿ ಪಾರ್ವತೀಪರಮೇಶ್ವರರ ಒಂದು ಸಂವಾದವನ್ನು ನಾನು ಕೇಳಿರುವಂತೆಯೇ ನಿನಗೆ ನಿರೂಪಿಸುವೆನು. ಇದು ಬಹಳ ಗೋಪ್ಯವಾದ ವಿಷಯವು. ಕೇಳು :

೨೭. ಉಮೆಯು ಹೇಳುತ್ತಾಳೆ:—ದೇವದೇವನಾದ ಮಹೇಶ್ವರನೆ! ಈ ಮಹಾಕಾಲವನ ಕ್ಷೇತ್ರದ ಪ್ರಭಾವವನ್ನು ನನಗೆ ತಿಳಿಸು. ಸರ್ವವ್ಯಾಪಿಯೆ! ಇಲ್ಲಿ ಯಾವ ತೀರ್ಥಗಳಿರುವೆಂಬುದನ್ನೂ ಯಾವ ಲಿಂಗಗಳು ಪ್ರತಿಷ್ಠಿತಗಳಾಗಿರುವುವೆಂಬುದನ್ನೂ ಮೊದಲಿನಿಂದ ನನಗೆ ತಿಳಿಯಹೇಳು.

೨೮. ಈಶ್ವರನು ಹೇಳುತ್ತಾನೆ:—ಎಲೌ ದೇವಿಯೆ! ಸರ್ವಪಾಪಕ್ಷಯಕರವಾದ ಈ ಕ್ಷೇತ್ರ ಮಹಿಮೆಯನ್ನು ಏಕಾಗ್ರಚಿತ್ತಳಾಗಿ ಕೇಳು.

೨೯–೩೦. ದೇವಿಯೆ! ಇದೇ ನನಗೆ ಬಹಳ ಪ್ರಮುಖ ಕ್ಷೇತ್ರವು. ಇದು ಸರ್ವಕಾಲದಲ್ಲಿಯೂ ನನಗೆ ಅತ್ಯಂತ ಪ್ರಿಯವಾದುದು. ಇಲ್ಲಿ ಮಹಾಪುಣ್ಯಪ್ರದೆಯಾದ ಶಿಪ್ರಾನದಿಯೂ, ದಿವ್ಯವಾದ ನವನದಿಯೂ, ನೀಲಗಂಗಾಸಂಗಮವೂ,

**ನೀಲಗಂಗಾಸಂಗಮಂ ಚ ತಥಾ ಗಂಧವತೀ ನದೀ ।**
**ಚತಸ್ರೋ ಮೇ ಪ್ರಿಯಾ ನದ್ಯಃ ಕುಮುದ್ವತ್ಯಾಂ ಹಿ ಸುವ್ರತೇ ॥ ೩೦ ॥**
**ಈಶ್ವರಾಶ್ಚತುರಾಶೀತಿಸ್ತಥಾಽಷ್ಟೌ ಸಂತಿ ಭೈರವಾಃ ।**
**ಏಕಾದಶ ತಥಾ ರುದ್ರಾ ಆದಿತ್ಯಾ ದ್ವಾದಶ ಸ್ಮೃತಾಃ ॥ ೩೧ ॥**
**ಷಡ್ವೈ ವಿನಾಯಕಾಶ್ಚಾಽತ್ರ ದೇವ್ಯಶ್ಚ ಚತುರ್ವಿಂಶತಿಃ ।**
**ಯತೋಽಹಮಾಗತೋ ಭದ್ರೇ ಮಹಾಕಾಲ ವನೋತ್ತಮೇ ॥ ೩೨ ॥**
**ವಿಷ್ಣುಬ್ರಹ್ಮಾದಯಃ ಸರ್ವೇ ಹ್ಯತ್ರೈವ ನಿಹಿತಾಃ ಶುಭೇ ।**
**ದೇವೈರ್ವ್ಯಾಪ್ತಮಿದಂ ಕ್ಷೇತ್ರಂ ದೇವಿ ಯೋಜನಮಾಯತಂ ॥ ೩೩ ॥**
**ದಶ ವಿಷ್ಣುಃ ಸಮಾಖ್ಯಾತಾಸ್ತೇಷಾಂ ನಾಮಾನಿ ಮೇ ಶೃಣು ।**
**ವಾಸುದೇವೋಽಹ್ಯನಂತಶ್ಚ ಬಲರಾಮೋ ಜನಾರ್ದನಃ ॥ ೩೪ ॥**
**ನಾರಾಯಣೋ ಹೃಷೀಕೇಶೋ ವಾರಾಹೋ ಧರಣೀಧರಃ ।**
**ವಿಷ್ಣುರ್ವಾಮನರೂಪೇಣ ಶೇಷಶಾಯೀ ಶ್ರಿಯಾಲಯಃ ॥ ೩೫ ॥**
**ದಶೈತೇ ವೈಷ್ಣವಾಃ ಪ್ರೋಕ್ತಾಃ ಸರ್ವಪಾಪಹರಾಃ ಪರಾಃ ॥ ೩೬ ॥**

---

ಮತ್ತು ಗಂಧವತೀ ನದಿಯೂ ಹರಿಯುತ್ತಿರುವುವು. ಎಲೌ ಸುವ್ರತೆಯೆ! ಈ ನಾಲ್ಕು ಮಹಾನದಿಗಳೂ ಈ ಕ್ಷೇತ್ರದಲ್ಲಿ ನನಗೆ ಪರಮಪ್ರಿಯವಾದುವುಗಳು.

೩೧. ಇಲ್ಲಿ ಎಂಬತ್ತನಾಲ್ಕು ಮಾಹೇಶ್ವರ ಲಿಂಗಗಳೂ, ಎಂಟು ಭೈರವ ಮೂರ್ತಿಗಳೂ, ಹನ್ನೊಂದು ರುದ್ರರೂ ಮತ್ತು ಹನ್ನೆರಡು ಆದಿತ್ಯರೂ ಪ್ರತಿಷ್ಠಿತ ರಾಗಿರುವರೆಂದು ಹೇಳುವರು.

೩೨. ಅಲ್ಲದೆ ಆರುಮಂದಿ ವಿನಾಯಕರೂ, ಇಪ್ಪತ್ತನಾಲ್ಕು ದೇವಿಯರೂ, ಇರುವರು. ದೇವಿಯೆ! ಆದುದರಿಂದಲೇ ನಾನು ಉತ್ತಮವಾದ ಈ ಮಹಾ ಕಾಲವನಕ್ಕೆ ಬಂದಿರುವೆನು.

೩೩. ವಿಷ್ಣು ಬ್ರಹ್ಮಾದಿ ದೇವತೆಗಳೆಲ್ಲರೂ ಈ ಶುಭಕ್ಷೇತ್ರದಲ್ಲಿಯೇ ಸನ್ನಿ ಹಿತರಾಗಿರುವರು. ಒಂದು ಯೋಜನದ ವಿಸ್ತಾರವುಳ್ಳ ಈ ಕ್ಷೇತ್ರವೆಲ್ಲವೂ ದೇವತೆಗಳಿಂದ ನಿಬಿಡವಾಗಿರುವುದು.

೩೪–೩೫. ಇಲ್ಲಿ ಹತ್ತು ವಿಷ್ಣುಮೂರ್ತಿಗಳಿರುವುವೆಂದು ಹೇಳುವರು. ಅವರ ಹೆಸರುಗಳನ್ನು ಕೇಳು. ವಾಸುದೇವ, ಅನಂತ, ಬಲರಾಮ, ಜನಾರ್ದನ, ನಾರಾಯಣ, ಹೃಷೀಕೇಶ, ವಾರಾಹ, ಧರಣೀಧರ, ವಾಮನ ಮತ್ತು ಶೇಷ ಶಾಯಿಗಳೇ ಲಕ್ಷ್ಮೀರಮಣನ ಆ ದಶಮೂರ್ತಿಗಳು.

೩೬. ಈ ಹತ್ತು ವಿಷ್ಣುಮೂರ್ತಿಗಳೂ ನೋಡಿದವರ ಸಕಲ ಪಾತಕ ಗಳನ್ನೂ ಕಳೆದು ಪುಣ್ಯವನ್ನು ಕೊಡುವುವು.

ಉಮೋವಾಚ :—

ಭಗವಂಛ್ರೋತುಮಿಚ್ಛಾಮಿ ದೇವಾನಾಮನುಪೂರ್ವಶಃ ।
ಮಹಾಕಾಲವನೇ ರಮ್ಯೇ ಯೇ ವಸಂತಿ ಸುರೇಶ್ವರಾಃ ॥ ೩೭ ॥
ವಿನಾಯಕಾ ಭೈರವಾ ದೇವ್ಯೋ ಯೇ ಸಂತಿ ಪವನಾತ್ಮಜಾಃ ।
ರುದ್ರಾದಿತ್ಯಾಸ್ತಥಾಚಾಽನ್ಯೇ ತೇಷಾಂ ನಾಮಾನಿ ಮೇ ವದ ॥ ೩೮ ॥

ಈಶ್ವರ ಉವಾಚ :—

ಋದ್ಧಿದಃ ಸಿದ್ಧಿದೋ ನಿತ್ಯಂ ಕಾಮದೋ ವೈ ಗಣಾಽಧಿಪಃ ।
ವಿಘ್ನಹಾ ಚ ಪ್ರಮೋದೀ ಚ ಚತುರ್ಥೀ ವ್ರತಕಪ್ರಿಯಃ ॥ ೩೯ ॥
ಷಡೇತೇ ವೈ ಸಮಾಖ್ಯಾತಾ ವಿಘ್ನನಾಶಕರಾಃ ಪರಾಃ ।
ಉಮಾ ಚಂಡೀಶ್ವರೀ ಗೌರೀ ಋದ್ಧಿಸಿದ್ಧಿಪ್ರದಾ ನೃಣಾಂ ॥ ೪೦ ॥
ವಟಯಕ್ಷಿಣೀ ವೀರಭದ್ರಾ ಇತ್ಯೇತಾಶ್ಚಾಽಷ್ಟಮಾತರಃ ॥ ೪೧ ॥
ಮಹಾಮಾಯಾ ಸತೀ ಖ್ಯಾತಾ ಕಪಾಲಮಾತೃಕಾ ತಥಾ ।
ಅಂಬಿಕಾ ಶೀತಲಾ ಚೈವ ಏಕಾನಂಶಾ ಚ ಸಿದ್ಧಿದಾ ॥ ೪೨ ॥
ಬ್ರಹ್ಮಾಣೀ ಪಾರ್ವತೀ ಚೈವ ಯೋಗಿನೀ ಯೋಗಶಾಲಿನೀ ।
ಕೌಮಾರೀ ಭಗವತೀ ಚೈವ ಷಟ್ಕೃತ್ತಿಕಾಸ್ತಥೈವ ಚ ॥ ೪೩ ॥
ಚರ್ಪಟಾಮಾತೃಕಾಃ ಖ್ಯಾತಾ ವಟಮಾತರ ಏವ ಚ ।
ಸರಸ್ವತೀ ತಥಾ ಖ್ಯಾತಾ ಮಹಾಲಕ್ಷ್ಮೀಶ್ಚ ವೈ ಸ್ಮೃತಾ ॥ ೪೪ ॥

---

೩೭. ಉಮೆಯು ಕೇಳುತ್ತಾಳೆ:—ಸ್ವಾಮಿಯೆ! ರಮ್ಯವಾದ ಈ ಮಹಾಕಾಲವನದಲ್ಲಿ ಯಾವ ಯಾವ ದೇವತೆಗಳು ವಾಸಮಾಡುತ್ತಿರುವರೆಂಬುದನ್ನು ಕ್ರಮವಾಗಿ ತಿಳಿಸು.

೩೮. ಮತ್ತು ವಿನಾಯಕರು, ಭೈರವರು, ದೇವಿಯರು, ಆಂಜನೇಯರು, ರುದ್ರರು, ಆದಿತ್ಯರು ಮುಂತಾದ ಇತರ ದೇವತೆಗಳು ಯಾರಿರುವರೊ, ಅವರೆಲ್ಲರ ಹೆಸರುಗಳನ್ನೂ ನನಗೆ ತಿಳಿಸುವವನಾಗು.

೩೯–೪೧. ಈಶ್ವರನು ಹೇಳುತ್ತಾನೆ:—ಋದ್ಧಿದ, ಸಿದ್ಧಿದ, ಕಾಮದ, ವಿಘ್ನಹ, ಪ್ರಮೋದಿ ಮತ್ತು ಚತುರ್ಥೀವ್ರತಪ್ರಿಯರೆಂಬುವರೇ ಆರುಮಂದಿ ಗಣಪತಿಗಳು. ಇವರೆಲ್ಲರೂ ಭಜಕರ ವಿಘ್ನಗಳನ್ನು ನಾಶಮಾಡುವವರೂ ಸರ್ವೋತ್ತಮರೂ ಆಗಿರುವರು. ಉಮಾ, ಚಂಡಿ, ಈಶ್ವರಿ, ಗೌರಿ, ಋದ್ಧಿದಾ, ಸಿದ್ಧಿದಾ, ವಟಯಕ್ಷಿಣಿ, ವೀರಭದ್ರಾ ಎಂಬುವರೇ ಎಂಟುಮಂದಿ ಮಾತೃಕೆಯರು.

೪೨–೪೬. ಮಹಾಮಾಯಾ, ಕಪಾಲಮಾತೃಕಾ, ಅಂಬಿಕಾ, ಶೀತಲಾ, ಏಕಾನಂಶಾ, ಬ್ರಹ್ಮಾಣೀ, ಪಾರ್ವತಿ, ಯೋಗಿನಿ, ಕೌಮಾರಿ, ಷಟ್ಕೃತ್ತಿಕಾ, ಚರ್ಪಟಾಮಾತೃಕಾ, ವಟಮಾತೃಕಾ, ಸರಸ್ವತಿ, ಮಹಾಲಕ್ಷ್ಮಿ, ಯೋಗಿನೀ

ಯೋಗಿನೀ ಮಾತೃಕಾಃ ಖ್ಯಾತಾಶ್ಚತುಃಷಷ್ಟಿಸ್ತತಃ ಸ್ಮೃತಾಃ ।
ಕಾಲಿಕಾ ಚ ಮಹಾಕಾಲೀ ಚಾಮುಂಡಾ ಬ್ರಹ್ಮಚಾರಿಣೀ ॥ ೪೫ ॥
ವೈಷ್ಣವೀ ಚ ಸಮಾಖ್ಯಾತಾ ವಾರಾಹೀ ವಿಂಧ್ಯವಾಸಿನೀ ।
ಅಂಬಾ ಅಂಬಾಲಿಕಾ ಚೈವ ಚತುರ್ವಿಂಶತಿಕಾಃ ಪರಾಃ ॥ ೪೬ ॥
ಹನೂಮಾನ್ ಬ್ರಹ್ಮಚಾರೀ ಚ ಕುಮಾರಶ್ಚ ಮಹಾಬಲೀ ।
ಚತ್ವಾರೋ ವೈ ಸಮಾಖ್ಯಾತಾ ಮಯಾ ತೇ ಪವನಾತ್ಮಜಾಃ ॥ ೪೭ ॥
ದಂಡಪಾಣಿಶ್ಚ ವಿಕ್ರಾಂತೋ ಮಹಾಭೈರವ ಸಿತಾಽಸಿತಾಃ ।
ಬಟುಕೋ ಬಾಲಕೋ ನಂದೀ ಷಟ್ಪಂಚಾಶತಿಕೋಽಪರಃ ॥ ೪೮ ॥
ಕಾಲಭೈರವಶ್ಚ ವಿಖ್ಯಾತಃ ಕ್ಷೇತ್ರಪಾಲಸ್ತಥಾಽಷ್ಟಮಃ ।
ಅಷ್ಟೈವ ಭೈರವಾಃ ಖ್ಯಾತಾ ಮಹಾಪಾಪಹರಾಃ ಪರಾಃ ।
ಕಪರ್ದೀ ಚ ಕಪಾಲೀ ಚ ಕಲಾನಾಥೋ ವೃಷಾಸನಃ ॥ ೪೯ ॥
ತ್ರ್ಯಂಬಕಃ ಶೂಲಪಾಣಿಶ್ಚ ಚೀರವಾಸಾ ದಿಗಂಬರಃ ।
ಗಿರೀಶಃ ಕಾಮಚಾರೀ ಚ ಸರ್ವಃ ಸರ್ವಾಂಗಭೂಷಣಃ ॥ ೫೦ ॥
ರುದ್ರಾಶ್ಚೈಕಾದಶ ಪ್ರೋಕ್ತಾಃ ಶತ್ರುಪಕ್ಷವಿನಾಶನಾಃ ।
ಅರುಣಃ ಸೂರ್ಯ ವೇದಾಂಗೋ ಭಾನುರಿಂದ್ರೋ ರವಿರಂಶುಮಾನ್ ॥
ಸುವರ್ಣರೇತಾಽಹಃಕರ್ತಾ ಮಿತ್ರೋ ವಿಷ್ಣುಃ ಸನಾತನಃ ।
ಇತ್ಯೇತೇ ದ್ವಾದಶಾಽಽದಿತ್ಯಾಃ ಸರ್ವರೋಗಹರಾಃ ಪರಾಃ ॥ ೫೧ ॥

---

ಮಾತೃಕಾ (ಇವರು ಅರುವತ್ತುನಾಲ್ಕು ಮಂದಿಯೆಂದು ಹೇಳುವರು), ಕಾಳಿಕಾ, ಮಹಾಕಾಳಿ, ಚಾಮುಂಡಾ, ಬ್ರಹ್ಮಚಾರಿಣಿ, ವೈಷ್ಣವಿ, ವಾರಾಹಿ, ವಿಂಧ್ಯವಾಸಿನಿ, ಅಂಬಾ ಮತ್ತು ಅಂಬಾಲಿಕಾ—ಇವರೇ ಮೇಲೆ ಹೇಳಿದ ಇಪ್ಪತ್ತನಾಲ್ಕು ಮಂದಿ ದೇವಿಯರು.

೪೭. ಹನುಮಂತ, ಬ್ರಹ್ಮಚಾರಿ, ಕುಮಾರ ಮತ್ತು ಮಹಾಬಲಿಗಳೆಂಬವರೇ ಮೇಲೆ ನಾನು ಹೇಳಿದ ಆಂಜನೇಯಮೂರ್ತಿಗಳು.

೪೮-೫೧. ದಂಡಪಾಣಿ, ಮಹಾಭೈರವ, ಸಿತಾಸಿತ, ಬಟುಕ, ಬಾಲಕ ಐವತ್ತಾರು ಸ್ವರೂಪಗಳುಳ್ಳ ನಂದಿ, ಪ್ರಖ್ಯಾತನಾದ ಕಾಲಭೈರವ, ಮತ್ತು ಕ್ಷೇತ್ರಪಾಲಕ ಇವರೇ ಮಹಾಪಾತಕಗಳನ್ನು ನಿರ್ಮೂಲಗೊಳಿಸುವ ಎಂಟು ಮಂದಿ ಭೈರವಮೂರ್ತಿಗಳೆಂದು ತಿಳಿ. ಕಪರ್ದಿ, ಕಪಾಲಿ, ಕಲಾನಾಥ, ವೃಷಾಸನ, ತ್ರ್ಯಂಬಕ, ಶೂಲಪಾಣಿ, ಚೀರವಾಸ, ದಿಗಂಬರ, ಗಿರೀಶ, ಕಾಮಚಾರಿ ಸರ್ವಾಂಗಭೂಷಣರೆಂಬವರೇ ಏಕಾದಶರುದ್ರರು. ಇವರೆಲ್ಲರೂ ಶತ್ರುಪಕ್ಷ ನಾಶಕರಾಗಿರುವರು. ಅರುಣ, ಸೂರ್ಯ, ವೇದಾಂಗ, ಭಾನು, ಇಂದ್ರ ರವಿ, ಅಂಶುಮಂತ, ಸುವರ್ಣರೇತ, ಅಹಃಕರ್ತ, ಮಿತ್ರ, ವಿಷ್ಣು, ಸನಾತನ

ಅಗಸ್ತ್ಯೇಶ್ವರಮುಖ್ಯಾನಾಂ ಲಿಂಗಾನಾಂ ಚತುರಾಶಿನಾಂ ।
ಹಿಮಾಚಲಸುತೇ ನಿತ್ಯಂ ನಾಮಾನಿ ಗದತಃ ಶೃಣು ॥ ೫೩ ॥
ಅಗಸ್ತ್ಯೇಶ್ವರ ಆಖ್ಯಾತೋ ಗುಹೇಶ್ವರಸ್ತತಃ ಪರಂ ।
ಢುಂಢೇಶ್ವರಸ್ತತಃ ಪ್ರೋಕ್ತೋ ಡಮರುಕೇಶ್ವರಶ್ಚ ಭಾಮಿನಿ ॥ ೫೪ ॥
ಅನಾದಿಕಲ್ಪೇಶ್ವರಃ ಶಂಭುಃ ಸ್ವರ್ಣಜಾಲೇಶ್ವರಃ ಪರಃ ।
ತ್ರಿವಿಷ್ಟಪೇಶ್ವರೋ ದೇವಃ ಕಪಾಲೇಶ್ವರಸಂಜ್ಞಕಃ ॥ ೫೫ ॥
ಕರ್ಕೋಟಕೇಶ್ವರಃ ಶಂಭುಃ ಸಿದ್ಧೇಶ್ವರಸ್ತತಃ ಪರಂ ।
ಸ್ವರ್ಗದ್ವಾರೇಶ್ವರೋ ರುದ್ರೋ ಲೋಕಪಾಲೇಶ್ವರೋಽಪರಃ ॥ ೫೬ ॥
ಕಾಮೇಶ್ವರ ಇತಿ ಖ್ಯಾತಃ ಕುಟುಂಬೇಶ್ವರಸ್ತತಃ ಪರಂ ।
ಇಂದ್ರದ್ಯುಮ್ನೇಶ್ವರಃ ಖ್ಯಾತ ಈಶಾನೇಶಸ್ತತಃ ಪರಂ ॥ ೫೭ ॥
ಅಪ್ಸರೇಶ್ವರ ಇತಿ ಖ್ಯಾತಃ ಕಲ್ಕಲೇಶ್ವರ ಏವ ಚ ।
ನಾಗಚಂಡೇಶ್ವರೋ ದೇವೋ ದಿವಾಪಾಪಹರೋಽಪರಃ ॥ ೫೮ ॥
ಪ್ರತಿಹಾರೇಶ್ವರಶ್ಚೈವ ಕುಕ್ಕುಟೇಶಸ್ತತಃ ಪರಂ ।
ಮೇಘನಾದೇಶ್ವರಃ ಪುಣ್ಯೋ ಮಹಾಕಾಲೇಶ್ವರಃ ಪರಃ ॥ ೫೯ ॥
ಮುಕ್ತೇಶ್ವರಃ ಸಮಾಖ್ಯಾತಃ ಸೋಮೇಶ್ವರಸ್ತತಃ ಪರಂ ।
ಅನರಕೇಶ್ವರೋ ದೇವೋ ಜಟೇಶ್ವರಸ್ತತಃ ಪರಂ ॥ ೬೦ ॥
ರಾಮೇಶ್ವರೋ ಮಹಾದೇವಶ್ಚ್ಯವನೇಶಸ್ತತಃ ಪರಂ ।
ಅಖಂಡೇಶಃ ಸಮಾಖ್ಯಾತಃ ಪತ್ತನೇಶಸ್ತತಃ ಸ್ಮೃತಃ ॥ ೬೧ ॥
ಆನಂದೇಶಸ್ತತಃ ಪ್ರೋಕ್ತಃ ಕಂಥಡೇಶಸ್ತತಃ ಪರಂ ।
ಇಂದ್ರೇಶ್ವರ ಇತಿ ಖ್ಯಾತೋ ಮಾರ್ಕಂಡೇಶಸ್ತತಃ ಪರಃ ॥ ೬೨ ॥

---

ರೆಂಬುವರೇ ದ್ವಾದಶಾದಿತ್ಯರು, ಇವರು ಭಜಿಸುವವರ ಸಕಲ ರೋಗಗಳನ್ನೂ ಪರಿಹರಿಸುವರು.

೫೩. ಎಲೌ ಹಿಮಗಿರಿರಾಜಸುತೆಯೆ! ಇನ್ನು ಅಗಸ್ತ್ಯೇಶ್ವರನೇ ಮುಂತಾದ ಮಹಾಲಿಂಗಗಳಿರುವುವೆಂದು ಹೇಳಿದೆನಷ್ಟೆ. ಅವುಗಳ ಹೆಸರುಗಳನ್ನು ಹೇಳುವೆನು, ಶ್ರದ್ಧೆಯಿಂದ ಕೇಳುವವಳಾಗು.

೫೪–೬೩. ಅಗಸ್ತ್ಯೇಶ್ವರ, ಗುಹೇಶ್ವರ, ಢುಂಢೇಶ್ವರ, ಡಮರುಕೇಶ್ವರ, ಅನಾದಿಕಲ್ಪೇಶ್ವರ, ಸ್ವರ್ಣಜಾಲೇಶ್ವರ, ತ್ರಿವಿಷ್ಟಪೇಶ್ವರ, ಕಪಾಲೇಶ್ವರ, ಕರ್ಕೋಟಕೇಶ್ವರ, ಸಿದ್ಧೇಶ್ವರ, ಸ್ವರ್ಗದ್ವಾರೇಶ್ವರ, ಲೋಕಪಾಲೇಶ್ವರ, ಕಾಮೇಶ್ವರ, ಕುಟುಂಬೇಶ್ವರ, ಇಂದ್ರದ್ಯುಮ್ನೇಶ್ವರ, ಈಶಾನೇಶ್ವರ, ಅಪ್ಸರೇಶ್ವರ, ಕಲ್ಕಲೇಶ್ವರ, ನಾಗಚಂಡೇಶ್ವರ, ದಿವಾಪಾಪಹರೇಶ್ವರ, ಪ್ರತಿಹಾರೇಶ್ವರ ಕುಕ್ಕುಟೇಶ್ವರ, ಮೇಘನಾದೇಶ್ವರ, ಮಹಾಕಾಲೇಶ್ವರ, ಮುಕ್ತೇಶ್ವರ, ಸೋಮೆ

ಶಿವೇಶ್ವರ ಇತಿ ಪ್ರೋಕ್ತಃ ಕುಸುಮೇಶಸ್ತತಃ ಪರಂ ।
ಅಕ್ರೂರೇಶ ಇತಿ ಖ್ಯಾತಃ ಕುಂಡೇಶ್ವರಸ್ತತಃ ಪರಂ ॥ ೬೩ ॥
ಲುಂಪೇಶ್ವರಃ ಸಮಾಖ್ಯಾತೋ ಗಂಗೇಶ್ವರಸ್ತತಃ ಪರಂ ।
ಶೂಲೇಶ್ವರೇತಿ ವಿಖ್ಯಾತ ಓಂಕಾರೇಶಸ್ತತಃ ಸ್ಮೃತಃ ॥ ೬೪ ॥
ಕಂಟಕೇಶೋ ಮಹಾರುದ್ರಃ ಸಿಂಹೇಶ್ವರಸ್ತತಃ ಪರಂ ।
ರೇವಂತೇಶ್ವರಃ ಪರೋ ದೇವೋ ಘಂಟೇಶ್ವರಪುರಸ್ಸರಃ ॥ ೬೫ ॥
ಪ್ರಯಾಗೇಶ್ವರೋ ಮಹಾದೇವಃ ಸಿದ್ಧೇಶ್ವರಸ್ತತಃ ಪರಂ ।
ಮಾತಂಗೇಶ್ವರಃ ಪರೋ ದೇವಃ ಸೌಭಾಗ್ಯೇಶಸ್ತತೋ ವರಃ ॥ ೬೬ ॥
ರೂಪೇಶ್ವರೇತಿ ವಿಖ್ಯಾತೋ ಬ್ರಹ್ಮೇಶ್ವರಸ್ತತಃ ಪರಂ ।
ಜಲ್ಪೇಶ್ವರಸ್ತತೋ ದೇವಃ ಕೇದಾರೇಶ್ವರ ಏವ ಚ ॥ ೬೭ ॥
ಪಿಶಾಚೇಶ್ವರ ಶಂಭುಶ್ಚ ಸಂಗಮೇಶಸ್ತತಃ ಪರಃ ।
ದುರ್ಧರ್ಷೇಶಶ್ಚ ವಿಖ್ಯಾತಶ್ಚಂಡಾದಿತ್ಯೇಶ್ವರಸ್ತತಃ ॥ ೬೮ ॥
ಕರಭೇಶ್ವರಃ ಪರಃ ಪ್ರೋಕ್ತೋ ರಾಜಸ್ಥಲೇಶ್ವರಃ ಶಿವಃ ।
ವಡಲೇಶ್ವರಸ್ತತಃ ಪ್ರೋಕ್ತೋ ಹ್ಯರುಣೇಶಸ್ತತಃ ಸ್ಮೃತಃ ॥ ೬೯ ॥
ಪುಷ್ಪದಂತೇಶ್ವರೋ ದೇವೋ ಹ್ಯವಿಮುಕ್ತೇಶ್ವರಸ್ತತಃ ।
ಹನುಮಂತೇಶ್ವರೋ ದೇವೋ ವಿಶ್ವೇಶ್ವರಸ್ತತಃಪರಂ ॥ ೭೦ ॥
ಸ್ವಪ್ನೇಶ್ವರ ಇತಿ ಖ್ಯಾತಃ ಸಿದ್ಧೇಶ್ವರಸ್ತತಃ ಪರಃ ।
ನೀಲಕಂಠೇಶ್ವರೋ ದೇವಃ ಸ್ಥಾವರೇಶಸ್ತತಃಪರಂ ॥ ೭೧ ॥
ಕಾಮೇಶ್ವರ ಇತಿ ಪ್ರೋಕ್ತಃ ಪ್ರತಿಹಾರೇಶ್ವರಸ್ತತಃ ।
ಪಶುಪತೀಶ್ವರಃ ಪ್ರೋಕ್ತೋ ವಿಶ್ವೇಶ್ವರಸ್ತತಃ ಪರಃ ।
ಸ್ವರ್ಣಜಾಲೇಶ್ವರಃ ಪ್ರೋಕ್ತೋ ಮನಃಕಾಮೇಶ್ವರಸ್ತತಃ ॥ ೭೨ ॥

---

ಶ್ವರ, ಅನರಕೇಶ್ವರ, ಜಟೇಶ್ವರ, ರಾಮೇಶ್ವರ, ವ್ಯಚನೇಶ್ವರ, ಅಖಂಡೇಶ್ವರ, ಪತ್ತನೇಶ್ವರ, ಆನಂದೇಶ್ವರ, ಕಂಥಡೇಶ್ವರ, ಇಂದ್ರೇಶ್ವರ, ಮಾರ್ಕಂಡೇಯೇಶ್ವರ, ಶಿವೇಶ್ವರ, ಕುಸುಮೇಶ್ವರ, ಅಕ್ರೂರೇಶ್ವರ, ಕುಂಡೇಶ್ವರ, ಲುಂಪೇಶ್ವರ, ಗಂಗೇಶ್ವರ, ಶೂಲೇಶ್ವರ, ಓಂಕಾರೇಶ್ವರ, ಕಂಟಕೇಶ್ವರ, ಸಿಂಹೇಶ್ವರ, ರೇವಂತೇಶ್ವರ, ಘಂಟೇಶ್ವರ, ಪ್ರಯಾಗೇಶ್ವರ, ಮಾತಂಗೇಶ್ವರ, ಸೌಭಾಗ್ಯೇಶ್ವರ, ರೂಪೇಶ್ವರ, ಬ್ರಹ್ಮೇಶ್ವರ, ಜಲ್ಪೇಶ್ವರ, ಕೇದಾರೇಶ್ವರ, ಪಿಶಾಚೇಶ್ವರ, ಸಂಗಮೇಶ್ವರ, ದುರ್ಧರ್ಷೇಶ್ವರ, ಚಂಡಾದಿತ್ಯೇಶ್ವರ, ಕರಭೇಶ್ವರ, ರಾಜಸ್ಥಳೇಶ್ವರ, ವಡಲೇಶ್ವರ, ಅರುಣೇಶ್ವರ, ಪುಷ್ಪದಂತೇಶ್ವರ, ಅವಿಮುಕ್ತೇಶ್ವರ, ಹನುಮಂತೇಶ್ವರ, ವಿಶ್ವೇಶ್ವರ, ಸ್ವಪ್ನೇಶ್ವರ, ನೀಲಕಂಠೇಶ್ವರ, ಸ್ಥಾವರೇಶ್ವರ, ಪಶುಪತೀಶ್ವರ, ಮನಃಕಾಮೇಶ್ವರ, ದುರ್ವಾಸೇಶ್ವರ, ಖರ್ಪರೇಶ್ವರ, ಪಾತಾಳೇಶ್ವರ,

ದುರ್ವಾಸೇಶ್ವರ ನಾಮಾಽಸೌ ನಾಗಚಂಡೇಶ್ವರಸ್ತತಃ ।
ಖರ್ಪರೇಶಶ್ಚ ವಿಖ್ಯಾತೋ ಬ್ರಹ್ಮೇಶ್ವರಸ್ತತಃಪರಂ ॥ ೭೩ ॥
ಪಾತಾಲೇಶ್ವರ ಆಖ್ಯಾತೋ ಗುಪ್ತೇಶ್ವರಸ್ತತಃ ಪರಃ ।
ಕಪಿಲೇಶ್ವರ ಇತ್ಯಾಖ್ಯೋ ಯೋಗಯೋಗೇಶ್ವರಃ ಪರಃ ॥ ೭೪ ॥
ಭೀಮೇಶ್ವರೇತಿ ವಿಖ್ಯಾತೋ ಧನುಃ ಸಹಸ್ರಾಭಿಧಃ ಪರಃ ।
ಅಗ್ನೀಶ್ವರಃ ಪರಃ ಪ್ರೋಕ್ತೋ ದೇವೇಶ್ವರಸ್ತತಃ ಪರಃ ॥ ೭೫ ॥
ದ್ವಾದಶಾರ್ಕಃ ಸಮಾಖ್ಯಾತೋ ದಶಾಶ್ವಮೇಧಿಕೇಶ್ವರಃ ।
ಗದಾಧರೇಶ್ವರಃ ಖ್ಯಾತೋ ವೈಜನಾಥೇತಿ ಶಂಭುರಾಟ್ ॥ ೭೬ ॥
ಸೋಮನಾಥೇಶ್ವರಃ ಖ್ಯಾತೋ ಘುಷ್ಮೇಶ್ವರಸ್ತತಃ ಪರಃ ।
ಭೀಮಶಂಕರ ಇತ್ಯಾಖ್ಯೋ ಘಂಟೇಶ್ವರಸ್ತತಃ ಪರಃ ॥ ೭೭ ॥
ಊಷರೇಶ್ವರ ಸಂಜ್ಞಶ್ಚ ಚಂದ್ರಾದಿತ್ಯೇಶ್ವರಃ ಪರಃ ।
ಕೇಶವಾರ್ಕಃ ಸಮಾಖ್ಯಾತಃ ಶಕ್ತಿಭೇದೇಶ್ವರಃ ಪರಃ ॥ ೭೮ ॥
ರಾಮೇಶ್ವರಃ ಪರೋ ದೇವೋ ವಾಲ್ಮೀಕೇಶ್ವರ ಶಂಕರಃ ।
ಜ್ವಾಲೇಶ್ವರಃ ಶಿವಃ ಪ್ರೋಕ್ತೋ ಹ್ಯಭಯೇಶಸ್ತತಃ ಪರಃ ॥ ೭೯ ॥
ವಿಘ್ನಹಸ್ತೇಶ್ವರಃ ಪ್ರೋಕ್ತಶ್ಚಂಚಲೇಶಸ್ತತಃ ಪರಃ ।
ಪುರುಷೋತ್ತಮೇತಿ ವಿಖ್ಯಾತೋ ವೀರೇಶ್ವರಸ್ತತಃ ಪರಃ ॥ ೮೦ ॥
ಕರ್ಣೇಶ್ವರಶ್ಚ ವಿಖ್ಯಾತಃ ಪೃಥುಕೇಶಸ್ತತಃ ಪರಂ ।
ಆನಂದೇಶಶ್ಚ ವಿಖ್ಯಾತಃ ಕೋಟೀಶ್ವರಸ್ತತಃ ಪರಃ ॥ ೮೧ ॥
ಅವಿಮುಕ್ತೇಶ್ವರಃ ಪ್ರೋಕ್ತೋ ಹನುಮತ್ಕೇಶ್ವರಃ ಪರಃ ।
ವಿಮಲೇಶ್ವರೇತಿ ವಿಖ್ಯಾತಶ್ಚಂದ್ರೇಶ್ವರಸ್ತತಃ ಪರಃ ॥ ೮೨ ॥
ಬಿಂದುಕೇಶಶ್ಚ ವಿಖ್ಯಾತೋ ವಾಲುಕೇಶ್ವರಸಂಜ್ಞಕಃ ।
ಬೃಹಸ್ಪತೀಶ್ವರೋ ದೇವೋ ಹ್ಯಸಂಖ್ಯಾತೇಶ್ವರಸ್ತತಃ ॥ ೮೩ ॥

---

ಗುಪ್ತೇಶ್ವರ, ಕಪಿಲೇಶ್ವರ, ಯೋಗಯೋಗೇಶ್ವರ, ಭೀಮೇಶ್ವರ, ಧನುಸ್ಸಹಸ್ರೇಶ್ವರ, ಅಗ್ನೀಶ್ವರ, ದೇವೇಶ್ವರ, ದ್ವಾದಶಾರ್ಕೇಶ್ವರ, ದಶಾಶ್ವಮೇಧೇಶ್ವರ, ಗದಾಧರೇಶ್ವರ, ವೈಜನಾಥೇಶ್ವರ, ಸೋಮನಾಥೇಶ್ವರ, ಘುಷ್ಮೇಶ್ವರ, ಭೀಮಶಂಕರ, ಘಂಟೇಶ್ವರ, ಊಷರೇಶ್ವರ, ಚಂದ್ರಾದಿತ್ಯೇಶ್ವರ, ಕೇಶವಾರ್ಕೇಶ್ವರ, ಶಕ್ತಿಭೇದೇಶ್ವರ, ವಾಲ್ಮೀಕೇಶ್ವರ, ಜ್ವಾಲೇಶ್ವರ, ಅಭಯೇಶ್ವರ, ವಿಘ್ನಹಸ್ತೇಶ್ವರ, ಚಂಚಲೇಶ್ವರ, ಪುರುಷೋತ್ತಮೇಶ್ವರ, ವಿರೇಶ್ವರ, ಕರ್ಣೇಶ್ವರ, ಪೃಥುಕೇಶ್ವರ, ಕೋಟೀಶ್ವರ, ಹನುಮತ್ಕೇಶ್ವರ, ವಿಮಲೇಶ್ವರ, ಚಂದ್ರೇಶ್ವರ, ಬಿಂದುಕೇಶ್ವರ, ವಾಲುಕೇಶ್ವರ, ಬೃಹಸ್ಪತೀಶ್ವರ, ಅಸಂಖ್ಯಾತೇಶ್ವರ—ಮುಂತಾದ ಅನೇಕ ಲಿಂಗಗಳು ಇಲ್ಲಿ ಪ್ರತಿಷ್ಠಿತಗಳಾಗಿರುವುವು.

ಯಾನಿ ಕಾನಿ ಚ ತೀರ್ಥಾನಿ ತಾನಿ ಲಿಂಗಾನಿ ಸತ್ತಮ ।
ತಿಷ್ಠಂತಿ ತತ್ರ ಪೂಜ್ಯಾನಿ ತಾನಿ ವಂದ್ಯಾನಿ ಸರ್ವಶಃ ॥ ೮೪ ॥
ಚತ್ವಾರೋ ವಿದಿತಾಃ ಸರ್ವೇ ದ್ವಾರಪಾಲಾ ಮಹಾತ್ಮಭಿಃ ।
ಪಿಂಗಲೇಶ್ವರೇತಿ ಚ ಖ್ಯಾತಃ ಪೂರ್ವದ್ವಾರೇ ದ್ವಿಜೋತ್ತಮ ॥ ೮೫ ॥
ದಕ್ಷಿಣೇ ಚ ತಥಾ ದ್ವಾರೇ ಕಾಯಾಽವರೋಹಣೇಶ್ವರಃ ।
ಬಿಲ್ವಕೇಶ್ವರೇತಿ ವಿಖ್ಯಾತಃ ಪಶ್ಚಿಮದ್ವಾರಮಾಶ್ರಿತಃ ॥ ೮೬ ॥
ದರ್ದುರೇಶ್ವರಸ್ತತಃ ಪ್ರೋಕ್ತೋ ದ್ವಾರೇ ಚೋತ್ತರಸಂಜ್ಞಿಕೇ ।
ಏತೇ ಚಾಽನ್ಯೇ ಚ ಬಹವೋ ಲಿಂಗಾಽಖ್ಯಾಸ್ತ್ರಿಭುವನೇಶ್ವರಾಃ ॥ ೮೭ ॥
ಮಹಾಕಾಲವನೇ ರಮ್ಯೇ ಸಮಾಽಖ್ಯಾತಾ ಹಿ ಪಾವನಾಃ ।
ಷಷ್ಟಿಕೋಟಿ ಸಹಸ್ರಾಣಿ ಷಷ್ಟಿಕೋಟಿ ಶತಾನಿ ಚ ॥ ೮೮ ॥
ಮಹಾಕಾಲವನೇ ವ್ಯಾಸ ಲಿಂಗಸಂಖ್ಯಾ ನ ವಿದ್ಯತೇ ।
ತಥಾಽಪಿ ಚ ಪ್ರಾಧಾನ್ಯೇನ ಮಯಾಽತ್ರ ಪರಿಕೀರ್ತಿತಾಃ ॥ ೮೯ ॥

---

೮೪. ಬ್ರಾಹ್ಮಣಸತ್ತಮನೆ! ಅವಂತೀಕ್ಷೇತ್ರದಲ್ಲಿ ಯಾವ ಯಾವ ತೀರ್ಥಗಳಿರುವುವೊ, ಅವುಗಳಲ್ಲಿ ಒಂದೊಂದರ ಬಳಿಯಲ್ಲಿಯೂ ಒಂದೊಂದು ಲಿಂಗವಿರುವುದು. ಆ ಲಿಂಗಗಳನ್ನೆಲ್ಲ ಪೂಜಿಸಿ ವಂದಿಸಬೇಕು.

೮೫. ಮತ್ತು ಈ ಕ್ಷೇತ್ರಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ದ್ವಾರಪಾಲಕರಿರುವರೆಂದು ಮಹಾತ್ಮರು ತಿಳಿದಿರುವರು. ದ್ವಿಜಶ್ರೇಷ್ಠನೆ! ಪೂರ್ವದ ಬಾಗಿಲಿನಲ್ಲಿರುವವನಿಗೆ ಪಿಂಗಳೇಶ್ವರನೆಂದು ಹೆಸರು.

೮೬. ಹಾಗೆಯೇ ದಕ್ಷಿಣದ್ವಾರದಲ್ಲಿ ಕಾಯಾವರೋಹಣೇಶ್ವರನಿರುವನು. ಪಶ್ಚಿಮದ್ವಾರವನ್ನಾಶ್ರಯಿಸಿರುವ ದ್ವಾರಪಾಲಕನಿಗೆ ಬಿಲ್ವಕೇಶ್ವರನೆಂಬ ಹೆಸರು ಪ್ರಸಿದ್ಧವಾಗಿರುವುದು.

೮೭. ಉತ್ತರದಿಕ್ಕಿನಲ್ಲಿರುವವನನ್ನು ದರ್ದುರೇಶ್ವರನೆಂದು ಕರೆಯುವರು. ಇವುಗಳಲ್ಲದೆ ಮೂರು ಲೋಕಗಳಲ್ಲಿಯೂ ಪ್ರಖ್ಯಾತಗಳಾದ ಇತರಲಿಂಗಗಳೂ ಅಸಂಖ್ಯಾತಗಳಾಗಿರುವುವು.

೮೮. ಮನೋಹರವಾದ ಮಹಾಕಾಲವನದಲ್ಲಿರುವ ಲಿಂಗಗಳೆಲ್ಲವೂ ಪರಮ ಪವಿತ್ರವಾದವುಗಳು. ಇಂತಹ ಅರುವತ್ತಾರು ಸಾವಿರ ಕೋಟಿ ಮಹಾಲಿಂಗಗಳಿರುವುವೆಂದು ಬಲ್ಲವರು ಹೇಳುವರು.

೮೯. ವ್ಯಾಸನೆ! ಮಹಾಕಾಲವನದಲ್ಲಿರುವ ಲಿಂಗಗಳ ಸಂಖ್ಯೆಯನ್ನೇ ತಿಳಿಯಲು ಸಾಧ್ಯವಿಲ್ಲ. ಆದರೂ ಬಹಳ ಮುಖ್ಯವಾದ ಕೆಲವನ್ನು ಮಾತ್ರ ನಾನು ನಿನಗೆ ಕೀರ್ತನಮಾಡಿರುವೆನು.

ಯಸ್ಯ ದೇವಸ್ಯ ಯತ್ತೀರ್ಥಂ ತನ್ನಾಮ್ನಾ ಪರಿಕೀರ್ತಿತಂ ।
ಸ್ನಾತ್ವಾ ದತ್ವಾ ಚ ತದ್ದಾನಂ ತತ್ತೀರ್ಥಸ್ಯ ಫಲಂ ಲಭೇತ್ ॥ ೯೦ ॥
ತಥಾ ನವಗ್ರಹಾಃ ಪುಣ್ಯಾಃ ಸಮಾಖ್ಯಾತಾಃ ಪುರಾಽನಘ ।
ತೇಷಾಂ ನಾಮಾನಿ ಪುಣ್ಯಾನಿ ತೀರ್ಥಾನಿ ಚ ತಥಾ ಶೃಣು ॥ ೯೧ ॥
ನರಾದಿತ್ಯ ಇತಿ ಖ್ಯಾತಃ ಸೋಮೇಶ್ವರಸ್ತತಃ ಪರಃ ।
ಮಂಗಲೇಶ್ವರಃ ಸಮಾಖ್ಯಾತೋ ಬುಧೇಶ್ವರಸ್ತತಃ ಪರಂ ॥ ೯೨ ॥
ಬೃಹಸ್ಪತೀಶ್ವರಃ ಪ್ರೋಕ್ತಸ್ತಥಾ ಶುಕ್ರೇಶ್ವರಃ ಶಿವಃ ।
ಸ್ಥಾವರೇಶ್ವರೋ ಮಹಾದೇವಃ ಸಮಾಖ್ಯಾತೋ ಮುನೀಶ್ವರೈಃ ॥ ೯೩ ॥
ರಾಹುಕೇತೂ ಸಮಾಖ್ಯಾತೌ ತೇಷಾಂ ತೀರ್ಥಾನಿ ಸತ್ತಮ ।
ತತ್ತೀರ್ಥೇಷು ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೯೪ ॥
ಗ್ರಹಾ ರಾಜ್ಯಂ ಪ್ರಯಚ್ಛಂತಿ ಗ್ರಹಾ ರಾಜ್ಯಂ ಹರಂತಿ ಚ ।
ಗ್ರಹೈಸ್ತು ವ್ಯಾಪಿತಂ ಸರ್ವಂ ತ್ರೈಲೋಕ್ಯಂ ಸ ಚರಾಚರಂ ॥ ೯೫ ॥
ಗ್ರಹತೀರ್ಥೇ ನರಃ ಸ್ನಾತ್ವಾ ಗ್ರಹಾಣಾಮರ್ಚನಂ ಚರೇತ್ ।
ನ ತಸ್ಯ ಗ್ರಹಪೀಡಾ ವೈ ಬಾಧತೇ ಹಿ ಕದಾಚನ ॥ ೯೬ ॥

---

೯೦. ಯಾವ ದೇವರಿಗೆ ಯಾವ ತೀರ್ಥವು ಪ್ರಿಯವೋ, ಆ ತೀರ್ಥಕ್ಕೆ ಅವರ ಹೆಸರನ್ನೇ ಕೊಟ್ಟಿದೆ. ಆದರಲ್ಲಿ ಸ್ನಾನವನ್ನೂ ದಾನವನ್ನೂ ಮಾಡಲು ಆ ತೀರ್ಥಸೇವೆಯ ಫಲವು ಲಭಿಸುವುದು.

೯೧. ಹಾಗೆಯೇ ನವಗ್ರಹಗಳ ಹೆಸರುಗಳಲ್ಲಿಯೂ ಹಿಂದೆ ಪುಣ್ಯತೀರ್ಥಗಳು ಸ್ಥಾಪಿತಗಳಾಗಿರುವುವು. ಎಲೈ ನಿಷ್ಪಾಪನೆ! ಆ ದೇವತೆಗಳ ಹೆಸರುಗಳನ್ನೂ ಪುಣ್ಯತೀರ್ಥಗಳನ್ನೂ ಕೇಳು.

೯೨–೯೩. ನರಾದಿತ್ಯ, ಸೋಮೇಶ್ವರ, ಮಂಗಳೇಶ್ವರ, ಬುಧೇಶ್ವರ, ಬೃಹಸ್ಪತೀಶ್ವರ, ಶುಕ್ರೇಶ್ವರ ಮತ್ತು ಸ್ಥಾವರೇಶ್ವರಗಳೆಂಬ ಆ ಲಿಂಗಗಳನ್ನು ಮುನಿವರ್ಯರು ನಿರೂಪಿಸಿರುವರು.

೯೪. ಹಾಗೆಯೇ ರಾಹುಕೇತುಗಳ ಹೆಸರಿನಲ್ಲಿಯೂ ತೀರ್ಥಗಳಿರುವುವು. ಈ ತೀರ್ಥಗಳಲ್ಲಿ ಸ್ನಾನಮಾಡಿದ ನರನು ಸಕಲಪಾಪಗಳನ್ನೂ ಕಳೆದುಕೊಳ್ಳುವನು.

೯೫. ಗ್ರಹಗಳೇ ಅಧಿಕಾರಗಳನ್ನು ಕೊಡುವುವು. ಅವುಗಳೇ ಹಿಂತೆಗೆದುಕೊಳ್ಳುವುವು. ಚರಾಚರಪ್ರಾಣಿಗಳಿಂದ ಕೂಡಿದ ಮೂರು ಲೋಕಗಳೂ ಈ ನವಗ್ರಹಗಳ ಆಳ್ವಿಕೆಗೊಳಪಟ್ಟಿರುವುವು.

೯೬. ಗ್ರಹತೀರ್ಥದಲ್ಲಿ ಸ್ನಾನವನ್ನು ಮಾಡಿ ಮಾನವನು ಗ್ರಹಗಳ ಪೂಜೆಯನ್ನು ಮಾಡಬೇಕು. ಅವನಿಗೆಂದಿಗೂ ಗ್ರಹಗಳ ದುಷ್ಟಫಲಗಳ ಬಾಧೆಯುಂಟಾಗುವುದಿಲ್ಲ.

ಏವಂ ವ್ಯಾಸ ಸಮಾಖ್ಯಾತಾ ಮಯಾ ದೇವಾಶ್ಚ ತೀರ್ಥಕಾಃ ।
ಯಾತ್ರಾ ಪುಣ್ಯತರಾ ಶ್ರೇಷ್ಠಾ ಪವಿತ್ರಾ ಪಾಪನಾಶಿನೀ ॥ ೯೭ ॥
ಗ್ರಹಪೀಡಾಸು ಚೋಗ್ರಾಸು ದಾರಿದ್ರ್ಯೇ ಘೋರಸಂಕಟೇ ।
ತೇಷಾಮುದ್ಧರಣಾರ್ಥಾಯ ದೇವಯಾತ್ರಾ ಪ್ರಕೀರ್ತಿತಾ ॥ ೯೮ ॥
ಕ್ಷೇತ್ರಸ್ಯಾಂತರ್ಗೃಹೀಂ ನಿತ್ಯಂ ಯೇ ಕುರ್ವಂತಿ ನರೋತ್ತಮಾಃ ।
ನ ತೇಷಾಂ ದುರ್ಲಭಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥ ೯೯ ॥
ಅಪುತ್ರೋ ಲಭತೇ ಪುತ್ರಂ ನಿರ್ಧನೋ ಧನಮಾಪ್ನುಯಾತ್ ।
ವಿದ್ಯಾವಾಂಜಾಯತೇ ವಿಪ್ರಃ ಕ್ಷತ್ರಿಯೋ ವಿಜಯೀ ಭವೇತ್ ॥ ೧೦೦ ॥
ಅಕ್ಷಯಾ ಸಂತತಿಸ್ತಸ್ಯ ಶಿವಲೋಕೇ ಮಹೀಯತೇ ॥ ೧೦೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ಆವಂತೀಕ್ಷೇತ್ರಮಾಹಾತ್ಮ್ಯೇ
"ದೇವಯಾತ್ರಾಕಥಾನುಕಥನಂ" ನಾಮ ಸಪ್ತತಿತಮೋಽಧ್ಯಾಯಃ

---

೯೭. ಎಲೈ ವ್ಯಾಸನೆ! ಇಂತು ನಿನಗೆ ಇಲ್ಲಿನ ದೇವತೆಗಳನ್ನೂ ತೀರ್ಥಗಳನ್ನೂ ನಿರೂಪಿಸಿರುವೆನು. ಈ ದೇವಯಾತ್ರೆಯು ಶ್ರೇಷ್ಠವೂ, ಪವಿತ್ರವೂ, ಪಾಪನಾಶಕವೂ ಆಗಿರುವುದು.

೯೮. ಕ್ರೂರಗ್ರಹಗಳು ಪೀಡಿಸುತ್ತಿರುವಾಗಲೂ, ದರಿದ್ರನಾದಾಗಲೂ, ಭಯಂಕರ ಸಂಕಟವೊದಗಿದಾಗಲೂ, ಅವುಗಳ ನಿವಾರಣೆಗಾಗಿ ಈ ದೇವಯಾತ್ರೆಯು ವಿಹಿತವಾಗಿರುವುದು.

೯೯. ಯಾವ ಮನುಷ್ಯೋತ್ತಮರು ಕ್ಷೇತ್ರದ ಅಂತರ್ಗೃಹಯಾತ್ರೆಯನ್ನು ಮಾಡುವರೊ, ಅವರಿಗೆ ದುರ್ಲಭವಾದುದು ಮೂರು ಲೋಕದಲ್ಲಿ ಯಾವುದೂ ಇಲ್ಲ.

೧೦೦–೧೦೧. ಪುತ್ರಹೀನನು ಸತ್ಪುತ್ರನನ್ನೂ, ದರಿದ್ರನು ಧನಸಂಪತ್ತಿಯನ್ನೂ, ಬ್ರಾಹ್ಮಣನು ವಿದ್ಯಾವೈಶದ್ಯವನ್ನೂ, ಕ್ಷತ್ರಿಯನು ಯುದ್ಧಜಯವನ್ನೂ ಪಡೆಯುವರು. ಆ ಯಾತ್ರಿಕನ ಸಂತತಿಯೂ ಈ ಲೋಕದಲ್ಲಿ ಚಿರಕಾಲವಿರುವುದಲ್ಲದೆ ಶಿವಲೋಕದಲ್ಲಿಯೂ ಪೂಜೆಗೊಳ್ಳುತ್ತಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಆವಂತೀಕ್ಷೇತ್ರ
ಮಾಹಾತ್ಮ್ಯದಲ್ಲಿ "ದೇವಯಾತ್ರಾದಿಕಥಾನುಕಥನ"ವೆಂಬ
ಎಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಸಪ್ತತಿತಮೋಽಧ್ಯಾಯಃ

## ಕ್ಷೇತ್ರಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

ಭಗವನ್ಭವತಾ ಸರ್ವಂ ಕಥಿತಂ ದೇವಮೂರ್ತಿನಾ ।
ಅವಂತೀತೀರ್ಥಮಾಹಾತ್ಮ್ಯಂ ಪವಿತ್ರಂ ವೇದಸಂಮಿತಂ ॥ ೧ ॥
ಭೂಯಸ್ತು ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ।
ಮಹಾಕಾಲವನೇ ರಮ್ಯೇ ಅವಂತ್ಯಾಂ ಭುವಿ ಸತ್ತಮ ।
ತೀರ್ಥಾನಿ ಕತಿಸಂಖ್ಯಾನಿ ವಿದ್ಯಂತೇ ಹ್ಯತ್ರ ಸುವ್ರತ ॥ ೨ ॥

ಸನತ್ಕುಮಾರ ಉವಾಚ :—

ಶ್ರೂಯತಾಂ ಭೋ ದ್ವಿಜಶ್ರೇಷ್ಠ ಕಥಾಂ ಪಾಪಹರಾಂ ಪರಾಂ ॥ ೩ ॥
ಉಮಾಮಹೇಶ್ವರಸಂವಾದಂ ನಾರದಸ್ಯ ಚ ಧೀಮತಃ ।
ನಾರದೇನ ಪುರಾ ಪೃಷ್ಟಂ ಪ್ರಶ್ನಮೇತದ್ದ್ವಿಜೋತ್ತಮ ॥ ೪ ॥

ನಾರದ ಉವಾಚ :—

ಭಗವಂಛ್ರೋತುಮಿಚ್ಛಾಮಿ ಮಹಾಕಾಲವನೇ ಶುಭೇ ।
ತೀರ್ಥಾನಿ ಯಾನಿ ವರ್ತಂತೇ ತಾನಿ ಮೇ ವದ ವಿಸ್ತರಾತ್ ॥ ೫ ॥

---

## ಕನ್ನಡದ ಅನುವಾದ

### ಕ್ಷೇತ್ರಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಸ್ವಾಮಿಯೆ! ದೇವಸ್ವರೂಪಿಯಾದ ನೀನು ಪವಿತ್ರವೂ, ವೇದಸಮ್ಮತವೂ ಆದ ಅವಂತೀಕ್ಷೇತ್ರಮಾಹಾತ್ಮ್ಯವನ್ನೆಲ್ಲ ಹೇಳಿರುವೆ.

೨. ಆದರೆ ಅವಂತೀಕ್ಷೇತ್ರದ ಮಹಾಕಾಲವನದಲ್ಲಿರುವ ತೀರ್ಥಗಳ ಸಂಖ್ಯೆ ಯೇನೆಂಬುದನ್ನು ಬ್ರಹ್ಮಜ್ಞನಾದ ನಿನ್ನಿಂದ ಮತ್ತೆ ತಿಳಿಯಲಾಶಿಸುತ್ತಿರುವೆನು.

೩-೪. ಸನತ್ಕುಮಾರನು ಹೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮನೆ! ಪಾಪಪರಿಹಾರಕವಾದ ಈ ಕಥೆಯನ್ನು ಕೇಳು. ಪ್ರಾಜ್ಞನಾದ ನಾರದನಿಗೂ, ಉಮಾಮಹೇಶ್ವರರಿಗೂ ನಡೆದ ಸಂವಾದವನ್ನು ತಿಳಿಸುವೆನು. ಹಿಂದೆ ನಾರದನು ಈಶ್ವರನಿಗೆ ಇದೇ ಪ್ರಶ್ನೆಯನ್ನೇ ಹಾಕಿದನು.

೫. ನಾರದನು ಕೇಳುತ್ತಾನೆ:—ಸ್ವಾಮಿಯೆ! ಪವಿತ್ರವಾದ ಮಹಾಕಾಲವನ ಕ್ಷೇತ್ರದಲ್ಲಿ ಎಷ್ಟು ತೀರ್ಥಗಳಿರುವುವೆಂಬುದನ್ನು ವಿಸ್ತರಿಸಿ ಹೇಳು, ಕೇಳಲಿಚ್ಛಿಸುವೆನು.

ಇತಿ ಪೃಷ್ಟಸ್ತದಾ ವಿಪ್ರ ನಾರದೇನ ಪುರಾಽನಘ ।
ಉವಾಚ ಶ್ಲಕ್ಷ್ಣಯಾ ವಾಚಾ ಉಮಯಾ ಸಹಿತೋ ಹರಃ ॥ ೬ ॥

ಶ್ರೀ ಮಹಾದೇವ ಉವಾಚ :—

ಶೃಣುಷ್ವ ಭೋ ಋಷಿಶ್ರೇಷ್ಠ ಮಹಾಕಾಲವನೇ ಶುಭೇ ।
ತೀರ್ಥಾನಿ ಯಾನಿ ತಿಷ್ಠಂತಿ ತಾನಿ ವಕ್ಷ್ಯಾಮಿ ಸುವ್ರತ ॥ ೭ ॥
ಪುಷ್ಕರಾದ್ಯಾನಿ ತೀರ್ಥಾನಿ ಯಾನಿ ಕಾನಿ ಮಹೀತಲೇ ।
ತಾನಿ ಸರ್ವಾಣಿ ವರ್ತಂತೇ ಮಹಾಕಾಲವನೋತ್ತಮೇ ॥ ೮ ॥
ಅಸಂಖ್ಯಾತಸಹಸ್ರಾಣಿ ಕೋಟಿಕೋಟೀನಿ ಸತ್ತಮ ।
ರುದ್ರಸರೇ ನಿಮಜ್ಜಂತೇ ಕೋಟಿತೀರ್ಥಂ ತಥೋಚ್ಯತೇ ॥ ೯ ॥
ನೀಹಾರಕಣಿಕಾವೃಷ್ಟಿಂ ಗಿರೌ ವರ್ಷಂತಿ ಕಿನ್ನರಾಃ ।
ಹೇಮಂತೇ ಚೈವ ದೃಶ್ಯಂತೇ ತೀರ್ಥೇ ಪೈಶಾಚಮೋಚನೇ ॥ ೧೦ ॥
ನಹಿ ಸಂಖ್ಯಾಂ ವಿಜಾನಾಮಿ ತೀರ್ಥಾನಾಂ ಭುವಿ ಸತ್ತಮ ।
ಕಿಯಂತಿ ಸಂತಿ ತೀರ್ಥಾನಿ ಲಿಂಗಾನಿ ಚ ತಥೈವ ಚ ॥ ೧೧ ॥
ತಥಾಽಪಿ ಚ ಪ್ರಾಧಾನ್ಯೇನ ಕಥಯಿಷ್ಯಾಮಿ ಸತ್ತಮ ॥ ೧೨ ॥

---

೬. ದ್ವಿಜನೆ! ಇಂತು ನಾರದನು ಪ್ರಶ್ನೆಮಾಡಲು ಉಮಾ ಸಮೇತನಾದ ಮಹಾದೇವನು ಮಧುರವಾಣಿಯಿಂದ ಹೇಳತೊಡಗಿದನು.

೭. ಮಹಾದೇವನು ಹೇಳುತ್ತಾನೆ:—ಮಹರ್ಷಿಶ್ರೇಷ್ಠನೆ! ಮಹಾಕಾಲವನದಲ್ಲಿ ಎಷ್ಟು ತೀರ್ಥಗಳಿರುವುವೆಂಬುದನ್ನು ನಿನಗೆ ಹೇಳುವೆನು, ಕೇಳು.

೮. ಪ್ರಪಂಚದಲ್ಲೆಲ್ಲ ಪುಷ್ಕರವೇ ಮುಂತಾದ ಎಷ್ಟು ತೀರ್ಥಗಳಿರುವುವೊ, ಅವುಗಳೆಲ್ಲವೂ ಉತ್ತಮವಾದ ಮಹಾಕಾಲವನದಲ್ಲಿ ಸನ್ನಿಹಿತಗಳಾಗಿರುವುವು.

೯. ಲೆಕ್ಕವಿಲ್ಲದಷ್ಟು ಸಾವಿರಗಟ್ಟಲೆ, ಕೋಟಿಗಟ್ಟಲೆ, ತೀರ್ಥಗಳು ರುದ್ರಸರೋವರದಲ್ಲಿ ಅಡಗಿರುವುವು. ಆದುದರಿಂದಲೇ ಅದಕ್ಕೆ ಕೋಟಿತೀರ್ಥವೆಂಬ ಹೆಸರುಂಟಾಗಿರುವುದು.

೧೦. ಹೇಮಂತಋತುವು ಬರಲು ಕಿನ್ನರರು ಪರ್ವತಪ್ರದೇಶದಲ್ಲಿ ಮಂಜಿನ ಕಣಗಳ ಮಳೆಯನ್ನು ಸುರಿಸುವರು. ಈ ದೃಶ್ಯವು ಪಿಶಾಚಮೋಚನ ತೀರ್ಥದಲ್ಲಿ ಚೆನ್ನಾಗಿ ಕಾಣುತ್ತಿರುವುದು.

೧೧. ಋಷಿವರ್ಯನೆ! ಇಲ್ಲಿ ಎಷ್ಟು ತೀರ್ಥಗಳೂ, ಲಿಂಗಗಳೂ ಇರುವುವೆಂದು ಕೇಳಿದೆಯಲ್ಲವೆ. ಇಲ್ಲಿರುವ ತೀರ್ಥಗಳ ಸಂಖ್ಯೆಯನ್ನು ನಿಜವಾಗಿ ನಾನೇ ತಿಳಿಯಲಾರದವನಾಗಿದ್ದೇನೆ.

೧೨. ತಿಳಿದರೂ ಒಂದು ಮುಖ್ಯ ವಿಷಯವನ್ನು ನಿನಗೆ ತಿಳಿಸುತ್ತೇನೆ.

ಸಂವತ್ಸರಸ್ಯ ಯಾವಂತಿ ಅಹಾನಿ ಚ ದ್ವಿಜೋತ್ತಮ ।
ತಾವಂತಿ ಪ್ರಾಪಣೀಯಾನಿ ಪ್ರಸಿದ್ಧಾನಿ ಪರಂತಪ ॥ ೧೩ ॥
ವತ್ಸರೇ ಪರಿಪೂರ್ಣೇ ಚ ಜಾಯತೇಽವಂತಿಯಾತ್ರಿಕಾ ।
ವಿಧಿವತ್ಕುರುತೇ ಯಸ್ತು ಸಾಕ್ಷಾಚ್ಛಂಭುರ್ಭವೇಚ್ಚ ಸಃ ॥ ೧೪ ॥
ಮನ್ವಂತರಸಹಸ್ರೇಷು ಕಾಶೀವಾಸೇ ಚ ಯತ್ಫಲಂ ।
ತತ್ಫಲಂ ಜಾಯತೇಽವಂತ್ಯಾಂ ವೈಶಾಖೇ ಪಂಚಭಿರ್ದಿನೈಃ ॥ ೧೫ ॥
ಅವಂತೀಯಾತ್ರಾ ಕರ್ತವ್ಯಾ ಪ್ರಯತ್ನೇನ ಮುಮುಕ್ಷುಣಾ ।
ಮಾಧವೇಽಪಿ ವಿಶೇಷೇಣ ಹ್ಯವಂತೀ ಸ್ನಾನಮಾಚರೇತ್ ।
ಯೋ ಹಿ ವೈಶಾಖಮಾಸಾದ್ಯ ಅವಂತ್ಯಾಂ ವ್ಯಾಸ ಮಾನವಃ ॥ ೧೬ ॥
ಸಂವತ್ಸರವ್ರತೀ ಸ್ನಾತಸ್ತೀರ್ಥೇ ತೀರ್ಥೇ ಯಥಾವಿಧಿ ।
ದತ್ವಾ ದಾನಾನಿ ಸರ್ವಾಣಿ ಸಮೂಲಂ ಫಲಮಶ್ನುತೇ ॥ ೧೭ ॥
ಭುಕ್ತ್ವಾ ಭೋಗಾನ್ಸುವಿಪುಲಾನ್ಶಿವಲೋಕೇ ಮಹೀಯತೇ ॥ ೧೮ ॥

---

೧೩. ದ್ವಿಜೋತ್ತಮನೆ! ಒಂದು ವರ್ಷದಲ್ಲಿ ಎಷ್ಟು ದಿನಗಳಿರುವುವೊ, ಅಷ್ಟು ಪ್ರಸಿದ್ಧ ತೀರ್ಥಗಳನ್ನು ಹೊಂದಿ ಸೇವಿಸಬೇಕು.

೧೪. ಹೀಗೆ ಒಂದು ಸಂಪೂರ್ಣ ಸಂವತ್ಸರದವರೆಗೂ ನಡೆಸಲು ಈ ಅವಂತೀಯಾತ್ರೆಯು ಪರಿಪೂರ್ಣವಾಗುವುದು. ಈ ಯಾತ್ರೆಯನ್ನು ವಿಧ್ಯುಕ್ತರೀತಿಯಿಂದ ನೆರವೇರಿಸಿದ ಮಾನವನು ಸಾಕ್ಷಾನ್ಮಹಾದೇವನೇ ಆಗುವನು.

೧೫. ಸಾವಿರಾರು ಮನ್ವಂತರಗಳ ಕಾಲ ಕಾಶೀಕ್ಷೇತ್ರದಲ್ಲಿ ವಾಸಮಾಡುವುದರಿಂದ ಯಾವ ಫಲವು ಲಭಿಸುವುದೊ, ಅದನ್ನೇ ವೈಶಾಖಮಾಸದಲ್ಲಿ ಐದು ದಿನಗಳ ತೀರ್ಥಸ್ನಾನದಿಂದ ಅವಂತೀಕ್ಷೇತ್ರದಲ್ಲಿ ಪಡೆಯುಬಹುದು.

೧೬. ಮೋಕ್ಷಾಪೇಕ್ಷೆಯುಳ್ಳವರು ಅವಂತೀಕ್ಷೇತ್ರಯಾತ್ರೆಯನ್ನು ಮಾಡಬೇಕು. ವಿಶೇಷವಾಗಿ ವೈಶಾಖಮಾಸದಲ್ಲಿ ಅವಂತೀತೀರ್ಥಗಳಲ್ಲಿ ಸ್ನಾನವನ್ನು ಮಾಡಬೇಕು.

೧೭-೧೮. ಅಯ್ಯಾ ವ್ಯಾಸಮುನಿಯೆ! ಯಾವ ಮಾನವನೇ ಆಗಲಿ ವೈಶಾಖಮಾಸವು ಬರಲು ಯಥಾವಿಧಿಯಾಗಿ ನಿತ್ಯವೂ ಒಂದೊಂದು ತೀರ್ಥದಲ್ಲಿ ಸ್ನಾನಮಾಡುತ್ತ ಆ ಸಂವತ್ಸರ ವ್ರತವನ್ನು ಪೂರೈಸಬೇಕು. ಮತ್ತು ಯಥಾಶಕ್ತಿಯಾಗಿ ಸಕಲ ದಾನಗಳನ್ನೂ ಮಾಡಲು ಅಪರಿಮಿತವಾದ ಫಲವನ್ನು ಪಡೆಯುವನು. ಇಹಲೋಕದಲ್ಲಿ ಅಪಾರ ರಾಜಭೋಗಗಳನ್ನನುಭವಿಸಿ ಕಡೆಯಲ್ಲಿ ಶಿವಲೋಕದಲ್ಲಿ ಸಂಪೂಜ್ಯನಾಗುವನು.

ಮಾಹಾತ್ಮ್ಯಮೇತಚ್ಛಿವಭಕ್ತಿವರ್ಧನಂ
ಯಶಸ್ಕರಂ ಪುಣ್ಯವಿವರ್ಧನಂ ಚ ।
ಯಃ ಶ್ರಾವಯೇದ್ವಾ ಶೃಣುಯಾಚ್ಚ ಭಕ್ತ್ಯಾ
ಕುಲಂ ಸಮುದ್ಧೃತ್ಯ ಹರೇಃ ಪದಂ ವ್ರಜೇತ್ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯೇ "ಕ್ಷೇತ್ರಮಾಹಾತ್ಮ್ಯವರ್ಣನಂ" ನಾಮೈಕಸಪ್ತತಿತಮೋಽಧ್ಯಾಯಃ

॥ ಆವಂತ್ಯಖಂಡೇ ಅವಂತೀಕ್ಷೇತ್ರಮಾಹಾತ್ಮ್ಯಂ ಪ್ರಥಮಂ ಸಂಪೂರ್ಣಂ ॥

---

೧೯. ಶಿವಭಕ್ತಿಯನ್ನು ಹೆಚ್ಚಿಸುವುದೂ, ಯಶಸ್ಸನ್ನು ಸಂಪಾದಿಸಿ ಕೊಡುವುದೂ, ಪುಣ್ಯವರ್ಧಕವೂ ಆದ ಈ ಅವಂತೀಕ್ಷೇತ್ರ ಮಾಹಾತ್ಮ್ಯವನ್ನು ಯಾರು ಇತರರಿಗೆ ಕೇಳಿಸುವರೊ, ಯಾರು ಭಕ್ತಿಯುಕ್ತರಾಗಿ ಕೇಳುವರೊ, ಅವರು ತಮ್ಮ ಕುಲವನ್ನುದ್ಧರಿಸಿ ತಾವೂ ವೈಕುಂಠಕ್ಕೆ ತೆರಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಅವಂತೀಕ್ಷೇತ್ರ ಮಾಹಾತ್ಮ್ಯದಲ್ಲಿ "ಕ್ಷೇತ್ರಮಹಾತ್ಮ್ಯವರ್ಣನ"ವೆಂಬ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

ಆವಂತ್ಯಖಂಡದಲ್ಲಿ ಮೊದಲನೆಯ ಅವಂತೀಕ್ಷೇತ್ರಮಾಹಾತ್ಮ್ಯವು ಸಂಪೂರ್ಣವಾದುದು

---

829_48. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು